# ಸತ್ಯಾನ್ವೇಷಿ ಕಥೆ





ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (87) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು



www.thraithashakam.org










# ಸತ್ಯಾನ್ವೇಷಿ ಕಥೆ


ಗ್ರಂಥಕರ್ತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (87) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಫೆಬ್ರವರಿ–2017

ಪ್ರತಿಗಳು : 1000 **ಬೆಲೆ. 380/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಿ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ-ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾ ಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧಿ ಬೋಧನೆ.
34. ಸುಪ್ರಸಿದ್ಧಿಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲು ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು–ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ
93. ಪ್ರಾಥಮಿಕ ಜ್ಞಾನ
94. ರಾಜಕೀಯ ರಾಜಕೀಯ
95. ಉಗ್ರವಾದ ಸತ್ಯಕ್ಕೋಸ್ಕರವೇ
96. ಒಬ್ಬ ವ್ಯಕ್ತಿಯಲ್ಲಿ ಎರಡು ಕೋಣಗಳು
97. ಮಾನವತ್ವ
98. ದ್ಯಾನ – ಪ್ರಾರ್ಥನೆ – ನಮಾಜ್



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ– ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ– ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ– ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು– ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ – ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.

## ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : ಲಕ್ಷ್ಮಿನಾರಾಯಣಾಚಾರಿ–09440556968. ವೆಂಕಟೇಶ್–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಹಳ್ಳಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

# ದೇವಾಲಯ ರಹಸ್ಯಗಳು

ಪ್ರಪಂಚ ಪಟದಲ್ಲಿ ಭಾರತದೇಶ ಆಧ್ಯಾತ್ಮಿಕಕ್ಕೆ ಹುಟ್ಟಿದ ಮನೆಯಂತೆ ಹೇಳಿದ್ದರೂ ದಕ್ಷಿಣ ಭಾರತದೇಶ ಸ್ವಚ್ಛವಾದ ದೈವ ಜ್ಞಾನಕ್ಕೆ ಬೆನ್ನೆಲುಬಿನಂತಹದು. ದಕ್ಷಿಣ ಭಾರತದೇಶದಲ್ಲಿ ನಿರ್ಮಿಸಲಾಗಿರುವ ದೇವಾಲಯಗಳು, ಸೃಷ್ಠಿ ಆದಿಯಲ್ಲಿ ದೇವರ ಜ್ಞಾನಕ್ಕೆ ಸಂಕೇತಗಳಾಗಿ ಮತ್ತು ಸಂದೇಶಗಳಾಗಿ ಪ್ರಕಾಶಿಸುತ್ತಿವೆ. ದೇವಾಲಯಗಳಲ್ಲಿನ ವಿಧಿವಿಧಾನಗಳಿಗೆ ಸರಿಯಾದ ಅರ್ಥ ತಿಳಿಯದ ದುರದೃಷ್ಟಕರ ಪರಿಸ್ಥಿತಿಯಲ್ಲಿ ಈದಿನ ನಾವಿದ್ದೇವೆ. ನಮ್ಮ ನಂತರ ಪೀಳಿಗೆಯವರು ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳಲಾರದ ಸ್ಥಿತಿಯಲ್ಲಿ ದೇವಾಲಯಗಳ ನಿರ್ಮಾಣವನ್ನು ಕೈಯ್ಯಾರಾ ನಾವೇ ಪ್ರಶ್ನಾರ್ಥಕ ಮಾಡಿಕೊಳ್ಳುತ್ತಿದ್ದೇವೆ. ಆಧ್ಯಾತ್ಮಿಕ ರಹಸ್ಯಗಳನ್ನು ದೇವಾಲಯಗಳಲ್ಲಿ ಹೆಜ್ಜೆ ಹೆಜ್ಜೆಗೂ ಆದಿನದ ಜ್ಞಾನಿಗಳು ನಿಕ್ಷಿಪ್ತ ಮಾಡಿರುವಾಗ, ಅವುಗಳನ್ನು ಅನ್ವೇಷಿಸುವವರಿಗೆ ಆ ರಹಸ್ಯಗಳು ತಿಳಿಯದಂತಾಗಿರುವ ಸಮಯದಲ್ಲಿ ಮರುಭೂಮಿಯಲ್ಲಿ ಒಯಾಸಿಸ್ಸಿನ ಹಾಗೆ ಲಭಿಸುವ ಅಪರೂಪವಾದ ಆಧ್ಯಾತ್ಮಿಕ ಗ್ರಂಥವೇ **"ದೇವಾಲಯ ರಹಸ್ಯಗಳು."**

ಈ ಗ್ರಂಥದಲ್ಲಿ ದೇವಾಲಯ ಗೋಪುರದಿಂದ ಹಿಡಿದು ಗರ್ಭಗುಡಿಯಲ್ಲಿ ಸಾಕಾರ ಪ್ರತಿಮೆವರೆಗೂ, ಮತ್ತೂ ಆ ಪ್ರತಿಮೆಗೆ ಮಾಡುವ ಪೂಜಾ ವಿಧಾನದಲ್ಲಿನ ಪ್ರತಿಯೊಂದು ಕಾರ್ಯಕ್ಕೂ ಸುಲಭ ಶೈಲಿಯಲ್ಲಿ, ಶಾಸ್ತ್ರಬದ್ಧವಾದ ವಿವರ ಕೊಡಲಾಗಿದೆ. ಇಲ್ಲಿಯವರೆಗೂ ಯಾರೂ ಬಿಚ್ಚಿ ಹೇಳಲಾರದ ಆಧ್ಯಾತ್ಮಿಕ ರಹಸ್ಯಗಳ ಗುಟ್ಟನ್ನು ಮೊಟ್ಟಮೊದಲ ಬಾರಿ ಪ್ರಬೋಧಾನಂದ ಯೋಗೀಶ್ವರರು ಪ್ರಪಂಚಕ್ಕೆ ತಿಳಿಯುವಂತೆ ಮಾಡಿದ್ದಾರೆ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ನಾನು ಹೇಳುವ ಮೊದಲನೆಯ ಮಾತು



ಮನುಷ್ಯರಿಗೆ ತಿಳಿಯದ ಎಷ್ಟೋ ಹೊಸ ವಿಷಯಗಳು ತಿಳಿಯಬೇಕೆನ್ನುವ ಉದ್ದೇಶದಿಂದ ಈ ಕಥೆಯನ್ನು ಬರೆದಿರುವುದು ನಡೆದಿದೆ. ಈ ಕಥೆಯ ಹೆಸರು ಸತ್ಯಾನ್ವೇಷಿ, ಆದ್ದರಿಂದ ಈ ಕಥೆಯಲ್ಲಿ ತಿಳಿಯುವವೆಲ್ಲವೂ ಸತ್ಯಗಳೇ ಎಂದು ತಿಳಿಸುತ್ತಿದ್ದೇವೆ. ಈ ಕಥೆಯಲ್ಲಿ ನಡೆಯುವ ಸನ್ನಿವೇಶಗಳನ್ನು ಕಲ್ಪಿಸಿ ಬರೆದರೂ, ಅದರಲ್ಲಿನ ಸಾರಾಂಶ ಮಾತ್ರ ಸತ್ಯ. ಒಂದು ಸಂದರ್ಭದಲ್ಲಿ ಮಂತ್ರಗಳನ್ನು ಕುರಿತು ಹೇಳುವುದು ನಡೆದಿದೆ. ಆದರೇ ಆ ವಿಷಯಗಳು ಮಾಂತ್ರಿಕರಿಗೂ ಸಹ ತಿಳಿಯದವುಗಳಾಗಿ ಇರುತ್ತವೆ. ಹಾಗೆಯೇ ಮಹಿಮೆಗಳನ್ನು ಕುರಿತು ಸಹ ಹೇಳುವುದು ನಡೆದಿದೆ. ಆದರೆ ಮಹಿಮೆಗಳನ್ನು ಮಾಡುವವರಿಗೂ ಸಹ ಆ ಮಹಿಮೆಗಳು ಹೇಗೆ ನಡೆಯುತ್ತಿವೆಯೋ ತಿಳಿದಿಲ್ಲ. ಮಹಿಮೆಗಳ ವಿಷಯದಲ್ಲಿ ಇತ್ತ ಆಸ್ತಿಕರಿಗಾಗಲೀ, ಅತ್ತ ನಾಸ್ತಿಕರಿಗಾಗಲಿ ತಿಳಿಯದ ಸತ್ಯವನ್ನು ಪೂರ್ತಿಯಾಗಿ ಹೇಳುವುದು ನಡೆದಿದೆ. ಒಬ್ಬ ಮನುಷ್ಯ (ಬಾಬಾ) ಕೆಲವು ಮಹಿಮೆಗಳನ್ನು ಸ್ವತಃವಾಗಿ ಮಾಡಬೇಕೆಂದು ಮಾಡಬಲ್ಲನು. ಆದರೆ ಕೆಲವು ಮಹಿಮೆಗಳು ಆತನಿಂದ, ಆತನಿಗೆ ತಿಳಿಯದೇ ನಡೆಯುತ್ತವೆ. ಈ ವಿಷಯ ಇಲ್ಲಿಯವರೆಗೂ ಯಾರಿಗೂ ತಿಳಿಯದ ರಹಸ್ಯವೇ ಎಂದು ಹೇಳಬಹುದು. ಇಂತಹ ಮಹಿಮೆಗಳ ವಿಷಯದಲ್ಲಿ ಆಸ್ತಿಕರು, ನಾಸ್ತಿಕರು, ಹೇತುವಾದಿಗಳು ಪೂರ್ತಿ ತಪ್ಪಾಗಿ ತಿಳಿದು ಅವುಗಳನ್ನು ಒಬ್ಬ ಮನುಷ್ಯ ಮಾಡುತ್ತಿದ್ದಾನೆಂದು ತಿಳಿದುಕೊಳ್ಳುತ್ತಿದ್ದಾರೆ. ಉಳಿದ ಪ್ರಜೆಗಳು ಸಹ ಹಾಗೆಯೇ ತಿಳಿದುಕೊಳ್ಳುವುದು ನಡೆಯುತ್ತದೆ. ಹಾಗೆ ತಿಳಿದುಕೊಳ್ಳುವುದರಿಂದ ಕೆಲವರು ಆ ವ್ಯಕ್ತಿಯನ್ನು ದೊಡ್ಡದಾಗಿ ಭಾವಿಸಿಕೊಳ್ಳುವುದು ನಡೆಯುತ್ತದೆ. ಕೆಲವರು ಹೇತುವಾದಿಗಳು ಆ ವ್ಯಕ್ತಿಯನ್ನು ವಿಮರ್ಶಿಸುವುದು ಸಹ ನಡೆಯುತ್ತದೆ. ವಾಸ್ತವವಾಗಿ ಆ ವ್ಯಕ್ತಿಗೆ ಎಂತಹ ಸಂಬಂಧವಿಲ್ಲದ ಕೆಲವು ಮಹಿಮೆಗಳು, ಮನುಷ್ಯನ ಮೇಧಸ್ಸಿಗೆ ಎಟುಕದ ರಹಸ್ಯವೇ ಎಂದು ಹೇಳಬಹುದು. ಅಂತಹ ದೊಡ್ಡ ರಹಸ್ಯವನ್ನು ಈ ಕಥೆಯಲ್ಲಿ ಪ್ರತ್ಯಕ್ಷ ಪ್ರಮಾಣಗಳನ್ನು ತೋರಿಸುತ್ತಾ, ವಿವರವಾಗಿ ಹೇಳಿರುವುದು ನಡೆದಿದೆ. ಇಂತಹ ತಿಳಿಯದ ರಹಸ್ಯಗಳನ್ನು ತಿಳಿಸುವುದರಿಂದ, ಈ ರಹಸ್ಯಗಳಲ್ಲಿನ ಅಸಲಾದ ಯಥಾರ್ಥಗಳನ್ನು ತಿಳಿಸುವುದರಿಂದಲೂ, ಈ ಕಥೆಯ ಹೆಸರು ಸತ್ಯಾನ್ವೇಷಿ ಎಂದು ಆಗಿದೆ.

ಈ ಕಥೆಯಲ್ಲಿ ಎಷ್ಟೋ ಸಂಘಟನೆಗಳಿದ್ದರೂ, ಅವು ಎಷ್ಟೋ ಪ್ರಪಂಚ ಕೆಲಸಗಳಿಗೆ ಸಂಬಂಧಿಸಿರುವವಾದರೂ, ಅವುಗಳಲ್ಲಿ ಕೊನೆಗೆ ಸಂದರ್ಭಾನುಸಾರ ದೈವ ಜ್ಞಾನವನ್ನೇ ಹೇಳುವುದು ನಡೆದಿದೆ. ಕಥೆ ಎಷ್ಟೋ ತಿರುವು ಕಂಡರೂ ಪ್ರತಿ ತಿರುವಿನಲ್ಲಿ ದೈವಜ್ಞಾನವನ್ನು ಜೋಡಿಸುವುದು ನಡೆದಿದೆ. ಆದ್ದರಿಂದ ಈ ಕಥೆಯನ್ನು ಓದುವುದರಿಂದ ಎಲ್ಲಾದಕ್ಕಿಂತ ಜ್ಞಾನವೇ ದೊಡ್ಡದೆನ್ನುವ ಭಾವನೆ ತಪ್ಪದೇ ಮನದಟ್ಟಾಗುತ್ತದೆ. ಸತ್ಯ ದೈವಜ್ಞಾನದಿಂದಲೇ ಮುಡಿಪಟ್ಟಿರುತ್ತದೆ. ಜ್ಞಾನವಿಲ್ಲದ ಕಡೆ ಅಸತ್ಯವನ್ನು ಸತ್ಯ ಎಂದುಕೊಳ್ಳುವ ಅವಕಾಶವಿದೆ. ಆದರೆ ಈ ಕಥೆಯಲ್ಲಿ ಪ್ರತಿಯೊಂದು ಕಡೆ ಜ್ಞಾನವೇ ಇದೆ, ಆದ್ದರಿಂದ ಎಲ್ಲಿಯೂ ಅಸತ್ಯಕ್ಕೆ ಆಸ್ಪದವಿಲ್ಲ. ವೈದ್ಯ ವಿಧಾನದಲ್ಲಿ ಅತ್ಯಂತ ಪ್ರಾಮುಖ್ಯವಾದದ್ದು, ಮನುಷ್ಯನಿಗೆ ಅತ್ಯಂತ ಪ್ರಮಾದಕರವಾದದ್ದು, ಆದ ಹಾವಿನ ಕಡಿತದಿಂದ ಹೊರಬೀಳುವ ವಿಧಾನವನ್ನು ಈ ಕಥೆಯಲ್ಲಿ ಜೋಡಿಸಿ ಹೇಳುವುದು ನಡೆದಿದೆ. ಈ ಕಥೆಯನ್ನು ಓದಿದವರು ಯಾರಾದರೂ ಹಾವಿನ ಕಡಿತದಿಂದ ಸ್ವತಃ ಹೊರಬೀಳುವುದೇ ಅಲ್ಲದೇ, ಯಾರನ್ನಾದರೂ ಹಾವಿನ ವಿಷದಿಂದ ರಕ್ಷಿಸಬಹುದು. ಪ್ರತಿಯೊಂದು ಎಲೆ ಔಷಧವೇ ಎಂದು, ಪ್ರತಿ ಗಿಡದಲ್ಲೂ ಒಂದು ವಿಧವಾದ ಶಕ್ತಿ ಇದೆಯೆಂದು, ಪ್ರತಿ ಗಿಡದಲ್ಲೂ ಪ್ರತ್ಯೇಕ ಕೊಂಬೆಯಂತೆ ಹುಟ್ಟಿದ ಬದನಿಕೆಗೆ ಒಂದು ಪ್ರತ್ಯೇಕ ಶಕ್ತಿ ಇರುತ್ತದೆಂದು, ಅಂತಹ ಬದನಿಕೆಗಳಿಂದ ಕೆಲವು ಅಸಾಧಾರಣವಾದ ಕೆಲಸಗಳು ನಡೆಯುತ್ತವೆಂದು ಸಹ ಹೇಳುವುದು ನಡೆದಿದೆ. ಅಂತಹ ಬದನಿಕೆಗಳಲ್ಲಿ **ಮುತ್ತಕದ ಮರದ** ಬದನಿಕೆ ಹೇಗೆ ಉಪಯೋಗಪಡುತ್ತದೋ ಈ ಕಥೆಯಲ್ಲಿ ಹೇಳುವುದು ನಡೆದಿದೆ.

ಮುಖ್ಯವಾಗಿ ಸಂಪೂರ್ಣ ಜ್ಞಾನವಿರುವ ಯೋಗಿಗೂ, ಮಂತ್ರಗಳ ಮತ್ತು ಮಾಯೆ ಮಹಿಮೆಗಳಿರುವ ಒಬ್ಬ ಬಾಬಾಗೂ ಮಧ್ಯದಲ್ಲಿ ನಡೆಯುವ ಹೋರಾಟವನ್ನೂ, ದರೋಡೆ ಕಳ್ಳರು ದೇವಾಲಯದಲ್ಲಿನ ವಜ್ರಗಳಿಗೋಸ್ಕರ ಪ್ರಯತ್ನಿಸಿದ ಪ್ರಯಾಸವನ್ನು ಕಣ್ಣಿಗೆ ಕಟ್ಟುವ ಹಾಗೆ ತೋರಿಸಿ ಹೇಳುವುದು ನಡೆದಿದೆ. ಮಂತ್ರ ವಿಧಾನದಲ್ಲಿ ಇಬ್ಬರು ಮಾಂತ್ರಿಕರ ನಡುವೆ ನಡೆದ ಸಂಘರ್ಷಣೆಯನ್ನು **"ಮೋಡಿ"** ಎನ್ನುವ ಹೆಸರಿನಿಂದ ತೋರಿಸಿದ ವಿಧಾನ, ಇಲ್ಲಿಯವರೆಗು ಯಾರಿಗೂ ತಿಳಿಯದ ಒಂದು ಪ್ರತ್ಯೇಕ ಆಟದಂತೆ ತೋರಿಸುವುದು ನಡೆದಿದೆ. ಇಂದಿನ

ಸಮಾಜದಲ್ಲಿ ಮನುಷ್ಯರಿಗೆ ಪೂರ್ವದಲ್ಲಿ ಮೋಡಿ ಹೇಗೆ ಮಾಡುತ್ತಿದ್ದರೋ, ಮೋಡಿ ಎಂದರೆ ಏನೋ ಅದರಿಂದ ತಿಳಿದುಹೋಗುತ್ತದೆ. ಅಷ್ಟೇ ಅಲ್ಲದೆ ಇದರಲ್ಲಿ ಜ್ಯೋತಿಷ್ಯ ಶಾಸ್ತ್ರ ಸಂಬಂಧವಾದ ಕೆಲವು ವಿಧಾನಗಳನ್ನು ತಿಳಿಸುತ್ತಾ, ಅಷ್ಟಗ್ರಹಕೂಟಮಿ ಎಂದರೆ ಏನು? ಅದರಲ್ಲಿ ಎಷ್ಟು ಪ್ರಭಾವವಿರುವುದು, ಸಾಧಾರಣ ಮನುಷ್ಯನಿಗೂ ಸಹ ಅರ್ಥವಾಗುವಹಾಗೆ ಬರೆಯುವುದು ನಡೆದಿದೆ. ಇದರಿಂದ ಇಂದಿನ ನವಯುವ ಸಮಾಜದಲ್ಲಿ ಗ್ರಹಗಳು, ಅವುಗಳ ಪ್ರಾಧಾನ್ಯತೆ ಸ್ವಲ್ಪ ಮಟ್ಟಿಗೆ ತಿಳಿದುಹೋಗಬಲ್ಲದು. ಅಷ್ಟೇ ಅಲ್ಲದೇ ಗ್ರಹಗಳ ಸೇರುವಿಕೆಯಲ್ಲಿ ಎಷ್ಟೋ ಪ್ರಭಾವವಿದೆಯೆಂದು, ಆ ಪ್ರಭಾವವು ಮನುಷ್ಯರ ಜೀವನಗಳ ಮೇಲೆ ಬೀಳುತ್ತಿದೆಯೆಂದು ತಿಳಿಯುತ್ತದೆ.

ಈ ವಿಧವಾಗಿ ಹೇಳಿಕೊಳ್ಳುತ್ತಾ ಹೋದರೆ ಮನುಷ್ಯನಿಗೆ ತಿಳಿಯದ ಎಷ್ಟೋ ಸತ್ಯಗಳು ಈ ಗ್ರಂಥದಲ್ಲಿ ತಿಳಿಯುವುದೇ ಅಲ್ಲದೇ, ಮನುಷ್ಯ ಮುಖ್ಯವಾಗಿ ತಿಳಿದುಕೊಳ್ಳಬೇಕಾದ ವಿಷಯವೂ ಸಹ ತಿಳಿಯಲಾಗಿದೆ. ಮನುಷ್ಯನಿಗೆ ಅಷ್ಟು ಮುಖ್ಯವಾದ ವಿಷಯವೇನೆಂದರೆ! ಮನುಷ್ಯನ ಜೀವನಕ್ಕೆ ಅತ್ಯಂತ ಪ್ರಾಧಾನ್ಯವಾದದ್ದು ಒಂದೇ ಒಂದು ದೈವ ಜ್ಞಾನ. ಮನುಷ್ಯ ಹುಟ್ಟಿದ ನಂತರ ದೇವರ ಸಮಾಚಾರವನ್ನು ಕುರಿತು ತಿಳಿಯದೇ ಹೋದರೇ ಆ ಜೀವನ ಪಶು ಪಕ್ಷಿಗಳ ಹಾಗೆ, ಕ್ರಿಮಿ ಕೀಟಕಗಳ ಹಾಗೆ ವೃಥಾ ಆಗುತ್ತದೆ. ಆದ್ದರಿಂದ ವೇಮನಯೋಗಿಯೂ ಸಹ ಒಂದು ಸಂದರ್ಭದಲ್ಲಿ "ಹುತ್ತದಲ್ಲಿನ ಗೆದ್ದಲು ಹುಟ್ಟುವುದಿಲ್ಲವಾ ಸಾಯುವುದಿಲ್ಲವಾ" ಎಂದಿದ್ದಾನೆ. ಹಾಗೆ ಮನುಷ್ಯ ಪಶುಪಕ್ಷಿಗಳ ಹಾಗೆ ಜೀವಿಸದೇ ತನ್ನ ಜೀವನಕ್ಕೆ ಸಾರ್ಥಕತೆ ಏರ್ಪಡಿಸಿಕೊಳ್ಳಬೇಕೆಂದರೆ, ಮೊದಲು ಮುಖ್ಯವಾದ ಎರಡು ಪ್ರಶ್ನೆಗಳಿಗೆ ಉತ್ತರಗಳನ್ನು ತಿಳಿದಿರಬೇಕು. ಒಂದು ತಾನು ಯಾರು? ಎರಡನೆಯದು ದೇವರು ಯಾರು? ಈ ಎರಡು ಪ್ರಶ್ನೆಗಳೊಂದಿಗೆ ಆಗಲಿ, ಇವುಗಳ ಉತ್ತರಗಳೊಂದಿಗೆ ಆಗಲಿ ಯಾವ ಮಾತ್ರವೂ ಸಂಬಂಧವಿಲ್ಲದೇ ಮನುಷ್ಯ ಬದುಕಬಹುದು. ಈ ಎರಡು ಪ್ರಶ್ನೆಗಳಿಗೆ ಉತ್ತರ ತಿಳಿಯದಿದ್ದರೂ, ಮನುಷ್ಯನ ಜೀವನದಲ್ಲಿ ಯಾವ ಲೋಪವೂ ಕಾಣಿಸುವುದಿಲ್ಲ. ಅಷ್ಟೇ ಅಲ್ಲದೇ ಈ ಪ್ರಶ್ನೆ ಉತ್ತರಗಳೊಂದಿಗೆ ಸಂಬಂಧವು ಇಲ್ಲದೇ ಮನುಷ್ಯ ನೆಮ್ಮದಿಯಾಗಿ ಬದುಕಬಹುದು. ಆದ್ದರಿಂದ

ಇಂದಿನ ಪ್ರಪಂಚದಲ್ಲಿ ಎಷ್ಟೋ ಮೇಧಾವಿಗಳು ಕೂಡ, ತನ್ನ ಜೀವನದಲ್ಲಿ ಎಷ್ಟೋ ಪ್ರಶ್ನೆಗಳಿಗೆ ಉತ್ತರಗಳನ್ನು ತಿಳಿದಿದ್ದರೂ, ಯಾವ ಸಮಸ್ಯೆಗಾದರೂ ಇದು ಪರಿಷ್ಕಾರವೆಂದು ಹೇಳಲ್ಪಟ್ಟಿದ್ದರೂ, ಪ್ರಜೆಗಳ ದೃಷ್ಟಿಯಲ್ಲಿ ಎಷ್ಟೋ ದೊಡ್ಡ ಹೆಸರು ಪ್ರಖ್ಯಾತಿ ಹೊಂದಿದ್ದರೂ ಕೊನೆಗೆ ಅವರ ಜೀವನವೂ, ಅವರ ಹುಟ್ಟುವಿಕೆ ವೃಥಾ ಎಂದು ಹೇಳಬಹುದು. ಹಾಗೆ ಎಂತಹವರಿಗಾದರೂ ಅವರ ಜೀವನ ವೃಥಾ ಆಗದೇ ಇರಬೇಕೆಂದರೆ ಮೇಲೆ ಹೇಳಿಕೊಂಡಿರುವ ಎರಡು ಪ್ರಶ್ನೆಗಳಿಗೆ ಉತ್ತರಗಳನ್ನು ತಿಳಿದುಕೊಳ್ಳಲೇ ಬೇಕು.

ಈ ಎರಡು ಪ್ರಶ್ನೆಗಳು ಕೆಲವರ ಲೆಕ್ಕದಲ್ಲಿ ದೊಡ್ಡದಾಗಿ ಕಾಣಿಸದೇ ಹೋದರೂ, ಇವುಗಳ ಎರಡು ಉತ್ತರಗಳಲ್ಲಿ ಒಂದು ಮಾತ್ರ ಮನುಷ್ಯ ತನ್ನ ಜೀವನದಲ್ಲಿ ತಿಳಿದುಕೊಂಡರೂ, ಎರಡನೆ ಉತ್ತರ ಮಾತ್ರ ಜೀವನದ ಅಂತ್ಯದವರೆಗೂ ಯಾರಿಗೂ ತಿಳಿಯದು. ಅಷ್ಟೇ ಅಲ್ಲದೇ ಎರಡನೆ ಉತ್ತರಕ್ಕೋಸ್ಕರ ಮನುಷ್ಯನೊಂದರ ಒಂದು ಜನ್ಮ ಸರಿಹೋಗುತ್ತದೆಂದು ಹೇಳಲಾರೆವು. ಎರಡನೆ ಉತ್ತರಕ್ಕೋಸ್ಕರ ಕೆಲವು ಜನ್ಮಗಳ ಸಮಯ ಹಿಡಿಯಬಹುದು. ಕೆಲವು ಜನ್ಮಗಳವರೆಗೂ ಉತ್ತರಗಳು ತಿಳಿಯದ ಪ್ರಶ್ನೆಗಳೆಂದರೆ ಅವು ಎಷ್ಟು ದೊಡ್ಡವೋ ಅರ್ಥವಾಗಬಲ್ಲವು. ಅಷ್ಟು ದೊಡ್ಡ ಪ್ರಶ್ನೆಗಳು ಮನುಷ್ಯನ ಮೆದುಳಿನಲ್ಲಿ ಉತ್ಪನ್ನವಾಗಬೇಕೆಂದರೆ ಆತನು ವ್ಯಕ್ತಿತ್ವದಲ್ಲಿ ದೊಡ್ಡವನಾಗಿರಬೇಕು. ಪ್ರತಿ ವಿಷಯವನ್ನೂ ಸೂಕ್ಷ್ಮವಾಗಿ ಯೋಚಿಸುವ ಸ್ವಭಾವದವನಾಗಿರಬೇಕು. ಸತ್ಯಾನ್ವೇಷಣೆ ದೃಷ್ಠಿಯನ್ನೊಳಗೊಂಡವನಾಗಿರಬೇಕು. ಕುರುಡನಂತೆ ಯಾವುದನ್ನೂ ನಂಬದವನಾಗಿರಬೇಕು. ಹೇತುದೃಕ್ಪಥವು ಇರುವವನಾಗಿ (ಕಾರಣವನ್ನು ಹುಡುಕುವವನಾಗಿ) ಇರಬೇಕು. ಆದರೇ ಈಗ ಅಂಥವರು ಕಣ್ಮರೆಯಾಗಿದ್ದಾರೆ. ತನ್ನನ್ನು ಕುರಿತು ಪ್ರಶ್ನೆ ಯಾರಿಗೂ ಬರುತ್ತಿಲ್ಲ. ಕೆಲವು ಲಕ್ಷ ಜನರಲ್ಲಿ ಯಾರಿಗಾದರೂ ಬಂದರೂ, ಅವನು ಸರಿಯಾದ ಉತ್ತರಕ್ಕೋಸ್ಕರ ಹುಡುಕುತ್ತಿಲ್ಲ.

ಜಗತ್ತಿನಲ್ಲಿ 90% ರಷ್ಟು ಜನ ದೇವರ ಮೇಲೆ ಭಕ್ತಿ ಇರುವ ಆಸ್ತಿಕರಾಗಿ ಇದ್ದಾರೆ. ಆದರೆ ಅವರು ವಿಶ್ವಾಸಿಸುವುದು ಸರಿಯಾದ ಮಾರ್ಗವೋ ಅಲ್ಲವೋ,

ತಾವು ಆರಾಧಿಸುತ್ತಿರುವ ದೇವರು ನಿಜವಾದ ದೇವರೋ ಅಲ್ಲವೋ ತಿಳಿಯದೇ ಇದ್ದಾರೆ. ಇವರಲ್ಲಿ ಕೆಲವರು ಒಬ್ಬ ಗುರುವನ್ನು ಆಯ್ಕೆ ಮಾಡಿಕೊಂಡು, ಆ ಗುರುವಿನಿಂದ ದೈವಮಾರ್ಗವನ್ನು ತಿಳಿಯಬೇಕೆಂದುಕೊಳ್ಳುತ್ತಿದ್ದಾರೆ. ಆದರೆ ಗುರುವು ಎಂದರೆ ಯಾರೋ ತಿಳಿಯದೆ, ಯಾರಂದರೆ ಅವರನ್ನು ಗುರುವಾಗಿ ಆಯ್ಕೆ ಮಾಡಿಕೊಳ್ಳುತ್ತಿದ್ದಾರೆ. ಮನುಷ್ಯನ ಜೀವನಕ್ಕೆ ಎಷ್ಟೋ ಮುಖ್ಯವಾದ ದೈವಜ್ಞಾನವನ್ನು ಮತ್ತು ಜೀವ ಜ್ಞಾನವನ್ನು ತಿಳಿದುಕೊಳ್ಳುವ ಪ್ರಶ್ನೆ ಬಂದರೂ, ಅವುಗಳಿಗೆ ಉತ್ತರಗಳನ್ನು ತಿಳಿಸುವ ಸಕ್ರಮವಾದ ಗುರುವು ಯಾರೋ, ಸಕ್ರಮವಾದ ವಿಧಾನ ಯಾವುದೋ, ಈ ಗ್ರಂಥದಲ್ಲಿ ಮುಖ್ಯವಾಗಿ ತಿಳಿಸಲಾಗಿದೆ. ಎಷ್ಟೋ ದೊಡ್ಡ ವಿಷಯವಾದ ಎರಡು ಪ್ರಶ್ನೆಗಳನ್ನೂ, ಅವುಗಳ ಉತ್ತರಗಳನ್ನೂ ತಿಳಿದುಕೊಳ್ಳುವ ವಿಧಾನದಲ್ಲಿ ಸ್ವಲ್ಪ ಸ್ವಚ್ಛತೆಗೋಸ್ಕರ ಈ ಸತ್ಯಾನ್ವೇಷಿ ಕಥೆಯಲ್ಲಿ ಒಬ್ಬ ಬಾಬಾ ಪಾತ್ರವನ್ನು, ಒಬ್ಬ ಯೋಗಿಯ ಪಾತ್ರವನ್ನು ಬರೆಯಬೇಕಾಯಿತು. ಈ ಗ್ರಂಥದಲ್ಲಿನ ಎರಡು ಪಾತ್ರಗಳನ್ನು ನೋಡಿದ ನಂತರ ಮನುಷ್ಯ ಸರಿಯಾದ ದೈವಜ್ಞಾನ ಮಾರ್ಗದಲ್ಲಿ ಪ್ರಯಾಣಿಸ ಬಲ್ಲನೆಂದು ನಾವು ಅಂದುಕೊಳ್ಳುತ್ತಿದ್ದೇವೆ. ಎರಡು ಪಾತ್ರಗಳಲ್ಲಿ ಒಂದು ಮಾಯೆ ಮಹಿಮೆಗಳಿಂದ ಕೂಡಿಕೊಂಡ ಬಾಬಾರವರು, ಎರಡು ದೈವಜ್ಞಾನದಿಂದ ಕೂಡಿಕೊಂಡ ಯೋಗೀಶ್ವರರವರು ಇದ್ದಾರೆ. ಈ ಎರಡು ಪಾತ್ರಗಳನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಉದಾಹರಣೆಯಾಗಿ ಪ್ರಸ್ತುತ ಕಾಲದಲ್ಲಿ ನಡೆಯುತ್ತಿರುವ, ನಡೆದುಹೋಗಿರುವ ಒಂದು ವಿಷಯವನ್ನು ಹೇಳಿ, ಅದರಲ್ಲಿ ಮನುಷ್ಯರು ಯಾವ ವಿಧವಾಗಿ ತಪ್ಪಾಗಿ ತಿಳಿದಿದ್ದಾರೋ ಅದರ ಬಗ್ಗೆ ಸ್ವಲ್ಪ ವಿವರಿಸುತ್ತೇವೆ. ಈ ವಿವರಣೆಯೊಂದಿಗೆ ಈ ಗ್ರಂಥದಲ್ಲಿನ ಎರಡು ಪಾತ್ರಗಳನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ಆದ್ದರಿಂದ ಈಗ ಹೇಳುತ್ತಿರುವ ಉದಾಹರಣೆ ವಿಷಯವನ್ನು ವಿಚಕ್ಷಣಾ ದೃಷ್ಟಿಯಿಂದ ನೋಡಿ ಓದಿರಿ.

ಪ್ರಸ್ತುತ ಕಾಲದಲ್ಲಿ ಒಬ್ಬ ವ್ಯಕ್ತಿ ಕೆಲವು ಟಕ್ಕುಟಮಾರಾ (ಜಾದು), ಇಂದ್ರಜಾಲ ಮಹೇಂದ್ರಜಾಲ ವಿದ್ಯೆಗಳನ್ನು ಕಲಿತು, ಅವುಗಳಿಂದ ಮಹಿಮೆಗಳನ್ನು ತೋರಿಸುವ ಸಾಮರ್ಥ್ಯ ಹೊಂದಿದ್ದರೇ, ಆತನು ಬಾಬಾ ಸ್ಥಾನಕ್ಕೆ ಬೆಳೆದು ಯಾವುದೋ ಒಬ್ಬ ಬಾಬಾನಂತೆ ಬದಲಾಗುವನು. **"ಬಾಬಾ"** ಎನ್ನುವ ಪದಕ್ಕೆ ಕನ್ನಡ ಭಾಷೆಯಲ್ಲಿ

ಆದರೆ **"ಬಾ"** ಎನ್ನುವ ಅರ್ಥವಿದೆ. ಒಂದು ವಿಧವಾಗಿ ಬಾಬಾ ಎನ್ನುವ ಅರ್ಥದಿಂದ ಪ್ರಜೆಗಳನ್ನು ಬಾ ಎಂದು ಕರೆದಂತೆ, ಮಹಿಮೆಗಳನ್ನು ತೋರಿಸುವ ಅವರ ಹತ್ತಿರಕ್ಕೆ ಪ್ರಜೆಗಳು ಹೋಗುತ್ತಿರುವರು. ಮನುಷ್ಯರಲ್ಲಿ ಮಾಯೆ ಎನ್ನುವುದು ಗುಣಗಳ ರೂಪದಲ್ಲಿ ಇದೆ. ಆ ಗುಣಗಳಲ್ಲಿ ಅತ್ಯಂತ ಬಲವಾದದ್ದು, ಎಲ್ಲದಕ್ಕಿಂತ ದೊಡ್ಡದು **"ಆಸೆ"** ಎನ್ನುವ ಗುಣ. ಪಶುಗಳಿಗೆ ಹಸೆಹುಲ್ಲನ್ನು ತೋರಿಸಿ ಬಾ ಎಂದು ಕರೆದಂತೆ ಹೇಗಾದರೆ ದನಗಳು ಹುಲ್ಲನ್ನು ತೋರಿಸಿದವನ ಹತ್ತಿರಕ್ಕೆ ಹೋಗುತ್ತವೋ, ಹಾಗೇ ಮನುಷ್ಯರಿಗೆ ಮಹಿಮೆಗಳನ್ನು ತೋರಿಸಿದರೆ ಬಾ ಎಂದು ಕರೆದಹಾಗೆ ಮನುಷ್ಯರು ಮಹಿಮೆಗಳನ್ನು ತೋರಿಸಿದವನ ಹತ್ತಿರಕ್ಕೆ ಹೋಗುವರು. ಹಾಗೆ ಪಶುಗಳು ಹೋಗುವುದಕ್ಕಾಗಲೀ, ಎಷ್ಟೋ ತಿಳುವಳಿಕೆ ಇರುವ ಮನುಷ್ಯರು ಹೋಗುವುದಕ್ಕಾಗಲೀ ಕಾರಣ **ಆಸೆ** ಎನ್ನುವ ಗುಣವೇ ಎಂದು ತಿಳಿಯುತ್ತದೆ. ಇದರಿಂದ **ಮನುಷ್ಯನಲ್ಲಿನ ಮಾಯೆಯನ್ನು ಪ್ರೇರೇಪಿಸುವುದಕ್ಕೆ ಬಾಬಾಗಳು ಇದ್ದಾರೆಂದು ತಿಳಿಯುತ್ತದೆ**. ಇನ್ನು ದೈವಜ್ಞಾನವನ್ನು ತಿಳಿದು ಅದರ ಪ್ರಕಾರ ಆಚರಿಸುವವನನ್ನು **"ಯೋಗಿ"** ಎಂದು ಹೇಳಬಹುದು. ಯೋಗಿ ಆದವನು ತನ್ನಲ್ಲಿ ಮಾಯೆ ರೂಪದಲ್ಲಿರುವ ಗುಣಗಳನ್ನು ಅಡಗಿಸಿ, ಅದೇ ಪದ್ಧತಿಯನ್ನು ಇತರರಿಗೂ ಸಹ ಹೇಳುತ್ತಿರುವನು. ಮಾಯೆಯನ್ನು ಬಿಟ್ಟು ಮನುಷ್ಯ ಬದುಕುವುದಕ್ಕೆ ಸ್ವಲ್ಪವೂ ಇಷ್ಟಪಡುವುದಿಲ್ಲ. ಆದ್ದರಿಂದ ಯೋಗಿ ಮಾತನ್ನು ಕೇಳುವವರು ಬಹಳ ಕಡಿಮೆ ಇದ್ದಾರೆ. ಅಂತಹ ಗುಣ ರಹಿತ ಯೋಗವನ್ನು ಬೋಧಿಸುವ ಯೋಗಿ ಹತ್ತಿರಕ್ಕೆ ಯಾರೂ ಹೋಗುವುದಕ್ಕೆ ಇಷ್ಟಪಡುವುದಿಲ್ಲ. ಆದ್ದರಿಂದ ಮಾಯೆಗೆ ವಿರುದ್ಧವಾದ ಯೋಗಿಯ ಹತ್ತಿರ ಮನುಷ್ಯರು ಸೇರುವುದಿಲ್ಲ. ಮಾಯೆಗೆ ಅನುಕೂಲವಾದ ಬಾಬಾಗಳ ಹತ್ತಿರಕ್ಕೆ ಮನುಷ್ಯರು ಬಹಳಷ್ಟು ಸಂಖ್ಯೆಯಲ್ಲಿ ಸೇರುತ್ತಾರೆ. ಈ ಸೂತ್ರದ ಪ್ರಕಾರ ನನಗೆ ತಿಳಿದ ಒಬ್ಬ ಬಾಬಾ ಹತ್ತಿರಕ್ಕೆ ವಿಪರೀತವಾಗಿ ಪ್ರಜೆಗಳು ಹೋಗುತ್ತಿದ್ದರು. ಹಾಗೆಯೇ ನನಗೆ ತಿಳಿದ ಯೋಗಿ ಹತ್ತಿರಕ್ಕೆ ಯಾರೂ ಹೋಗುತ್ತಿರಲಿಲ್ಲ. ಒಂದು ವೇಳೆ ಯಾರಾದರೂ ಹೋದರೂ ಅವರ ಸಂಖ್ಯೆ ಬಹಳ ಕಡಿಮೆಯಾಗಿ ಇರುತ್ತಿತ್ತು. ಬಾಬಾರವರ ಹತ್ತಿರಕ್ಕೆ ಲಕ್ಷ ಜನರು ಹೋದರೆ, ಯೋಗಿ ಹತ್ತಿರಕ್ಕೆ ಒಬ್ಬರು ಹೋಗುತ್ತಿದ್ದರು. ಆ ಲೆಕ್ಕದ ಪ್ರಕಾರ ಬಾಬಾ ಹತ್ತಿರಕ್ಕೆ

ಹೋಗುವವರು ಕೋಟಿ ಜನ ಇದ್ದರೆ, ಯೋಗಿ ಹತ್ತಿರಕ್ಕೆ ಹೋಗುವವರು ಕೇವಲ ನೂರು ಜನ ಮಾತ್ರವೇ ಎಂದು ಹೇಳಬಹುದು.

ಯೋಗಿ ಆದವನು ತನ್ನಲ್ಲಿನ ಗುಣಗಳನ್ನು (ಮಾಯೆಯನ್ನು) ಜಯಿಸಿದವನಾಗಿ, ಅದೇ ಮಾರ್ಗವನ್ನು ಇತರರಿಗೂ ಸಹ ತೋರಿಸುತ್ತಿರುವನೆಂದು, ಬಾಬಾ ಆದವನು ತನ್ನಲ್ಲಿನ ಗುಣಗಳನ್ನು ಜಯಿಸದೆ ಅದರಲ್ಲಿಯೇ (ಮಾಯೆಯಲ್ಲೇ) ಸಿಲುಕಿಕೊಂಡಂತಹವನಾಗಿ, ಇತರರನ್ನೂ ಸಹ ಮಾಯೆಯಲ್ಲೇ ಇರುವಂತೆ ಮಾಡುತ್ತಿರುವನು. ಮಾಯೆ ಎನ್ನುವುದು ದೇವರಿಗೆ ವಿರುದ್ಧವಾಗಿ ಕೆಲಸ ಮಾಡುವುದು. ಅದನ್ನು ಇಸ್ಲಾಮ್ ಮತದಲ್ಲಿ **ಸೈತಾನ್** ಎಂದರೆ, ಕ್ರೈಸ್ತ ಮತದಲ್ಲಿ **ಸಾತಾನ್** ಎಂದು ಹೇಳುವರು. ಮಾಯೆ ಎಲ್ಲಾ ಮತಗಳಲ್ಲಿಯೂ ದೇವರ ಕಡೆ ಯಾರನ್ನೂ ಹೋಗದಂತೆ ಮಾಡುತ್ತಿರುವುದು. ಬಾಬಾ ಎನ್ನುವ ವ್ಯಕ್ತಿಯೂ ಕೂಡ ಮಾಯೆ ವಶದಲ್ಲಿ ಇರುವುದರಿಂದ ಆತನಿಗೂ ಕೂಡ ಆಸೆ ಎನ್ನುವ ಗುಣ ಬಲವಾಗಿ ಇರುತ್ತದೆ. ಆಸೆ ಎನ್ನುವ ಗುಣದಿಂದ ತಾನು ಧನಿಕನಾಗಬೇಕೆನ್ನುವ ಉದ್ದೇಶ ಆತನಲ್ಲಿ ಇತ್ತು. ಅದಕ್ಕೆ ತಕ್ಕಹಾಗೆ ಮಾಯೆ ಆತನ ಮಹಿಮೆಗಳನ್ನು ಹೊರಗೆ ತೋರಿಸುವುದರಿಂದ ಪ್ರಜೆಗಳೆಲ್ಲರೂ ಬಾಬಾ ಹತ್ತಿರಕ್ಕೆ ಸೇರುವುದು ತಮಗೆ ಯಾವುದೋ ಒಳ್ಳೆಯದು ನಡೆದಿದೆಯೆಂದು ಆತನಿಗೆ ಕಾಣಿಕೆಗಳನ್ನು ಕೊಡುವುದು ನಡೆದಿದೆ. ಅಷ್ಟೇ ಅಲ್ಲದೇ ಎಷ್ಟೋ ಧನಿಕರು ತಮ್ಮ ಹತ್ತಿರವಿರುವ ಕಪ್ಪು ಹಣವನ್ನು ಬಾಬಾಗೆ ಕೊಟ್ಟರೆ ತಮಗೆ ಬಾಬಾನಿಂದ ಒಳ್ಳೆಯದು ನಡೆಯುತ್ತದೆಂದು ತಿಳಿದು ಕೆಲವು ಕೋಟಿ ಹಣವನ್ನು ಆತನಿಗೆ ಕೊಡುತ್ತಿದ್ದರು. ಹೀಗೆ ಬಾಬಾಗಳಾದವರು ಅಲ್ಪಾವಧಿಯಲ್ಲೇ ಸಾವಿರ ಕೋಟಿಗಳಿಗೆ, ಲಕ್ಷ ಕೋಟಿಗಳಿಗೆ ಅಧಿಪತಿಗಳಾಗುತ್ತಿದ್ದಾರೆ. ಈ ವಿಧವಾಗಿ ಸೇರುವ ಹಣ ಬಾಬಾ ಆದ ವ್ಯಕ್ತಿಯ ಜೇಬುಗಳು, ಚೀಲಗಳು, ಮೂಟೆಗಳು ತುಂಬಿಹೋಗಿ ಕೊನೆಗೆ ವಜ್ರಗಳ ರೂಪದಲ್ಲಿಯೂ, ಬಂಗಾರದ ರೂಪದಲ್ಲಿಯೂ ಹಣ ಉಳಿದುಹೋಗುತ್ತಿದೆ. ಹಾಗೇ ಇರುತ್ತಾ ಮಿತಿಮೀರಿ ಹೆಚ್ಚಾದ ಹಣದೊಂದಿಗೆ ಬಾಬಾ ತನ್ನ ಉದಾರತ್ವವನ್ನು ಸಾರುವುದಕ್ಕಾಗಿ, ಪ್ರಜೆಗಳಲ್ಲಿ ಹೆಸರು ಪ್ರಖ್ಯಾತಿ ಸಂಪಾದಿಸಿಕೊಳ್ಳುವುದಕ್ಕೆ ಪ್ರಜೆಗಳಿಗೋಸ್ಕರ ವಿನಿಯೋಗಿಸುತ್ತಾನೆ. ಹಾಗೆ ತನ್ನ ಉದಾರತ್ವವನ್ನು ಹೊರಗೆ

ತೋರಿಸುವುದಕ್ಕೆ ಉಚಿತ ವಿದ್ಯೆ, ಉಚಿತ ಭೋಜನ, ಉಚಿತ ನೀರು ಬಡವರಿಗೆ ಒದಗಿಸಿ ತಾನು ಪ್ರಜೆಗಳ ಸೇವೆ ಮಾಡುವನೆಂದು ತೋರಿಸುವನು.

ಈ ವಿಧವಾಗಿ ಪ್ರಪಂಚದಲ್ಲಿ ಮನುಷ್ಯನಿಗೆ ಅವಶ್ಯವಾದವುಗಳನ್ನು ಕೆಲವರಿಗೆ ಬಾಬಾ ಒದಗಿಸುವುದರಿಂದ ಬಾಬಾ ತನ್ನ ಭಕ್ತರಲ್ಲೇ ಅಲ್ಲದೆ, ಸಮಾಜದಲ್ಲಿ ಒಳ್ಳೆಯ ಹೆಸರು ಪ್ರಖ್ಯಾತಿಯನ್ನು ಸಂಪಾದಿಸಿಕೊಳ್ಳುತ್ತಾನೆ. ಬಾಬಾರವರು ಸರ್ಕಾರ ಮಾಡಲಾರದ ಕೆಲಸವನ್ನೂ ಸಹ ಮಾಡುತ್ತಿದ್ದಾನೆಂದು, ಎಷ್ಟೋ ಜನಕ್ಕೆ ಎಷ್ಟೋ ವಿಧಗಳಲ್ಲಿ ಉಪಯೋಗಪಡುತ್ತಿದ್ದಾನೆಂದು, ವಿದ್ಯೆ, ವೈದ್ಯಕೀಯ ಸೌಲಭ್ಯವನ್ನು ಒದಗಿಸುತ್ತಿದ್ದಾನೆಂದು, ಕುಡಿಯುವ ನೀರು ಇಲ್ಲದ ಕಡೆ ನೀರನ್ನೂ, ಬರ ಇರುವ ಕಡೆ ಪ್ರಜೆಗಳಿಗೆ ಉಚಿತ ಊಟವನ್ನೂ ಒದಗಿಸುತ್ತಿದ್ದಾನೆಂದು ಎಷ್ಟೋ ಜನ ಆತನನ್ನು ಪ್ರಶಂಸಿಸುತ್ತಿದ್ದರು. ಬಾಬಾ ನಿಸ್ವಾರ್ಥವಾಗಿ ಪ್ರಜೆಗಳಿಗೆ ಸೇವೆ ಮಾಡುತ್ತಿದ್ದಾನೆನ್ನುವ ವಾರ್ತೆ ವಿದೇಶಗಳಲ್ಲಿ ಸಹ ಹಬ್ಬಿಕೊಳ್ಳುವುದು. ಆಗ ಅಲ್ಲಿರುವ ಧನಿಕರು ಬಾಬಾರವರು ಮಾಡುತ್ತಿರುವ ಸೇವೆಯಲ್ಲಿ ತಾವೂ ಸಹ ಭಾಗಿಗಳಾಗಬೇಕೆಂದು, ಅವರು ಸಹ ಕೋಟ್ಯಾಂತರ ರೂಪಾಯಿಗಳನ್ನು ಬಾಬಾರವರಿಗೆ ಕೊಡುವುದು ನಡೆಯುತ್ತಿದೆ. ಈ ವಿಧವಾಗಿ ಬಾಬಾ ಧನಿಕನಾಗಿ, ಅದರಲ್ಲಿ ಸ್ವಲ್ಪ ಪ್ರಜೆಗಳಿಗೆ ಉಪಯೋಗಿಸುವುದರಿಂದ ಪ್ರಜೆಗಳ ದೃಷ್ಟಿಯಲ್ಲಿ ಬಾಬಾರವರು ಪ್ರತ್ಯಕ್ಷ ದೈವವಾಗಿ, ಮನುಷ್ಯನ ರೂಪದಲ್ಲಿರುವ ದೇವರಾಗಿ ಚಲಾವಣೆ ಆಗುತ್ತಿರುತ್ತಾನೆ. ಆ ವಿಧವಾಗಿ ಬಾಬಾ ಎನ್ನುವ ವ್ಯಕ್ತಿ ಇರುವಾಗ, ಯೋಗಿ ಎನ್ನುವ ವ್ಯಕ್ತಿ ತಾನು ಪ್ರಜೆಗಳಿಗೆ ಯಾವ ವಿಧವಾದ ಪ್ರಾಪಂಚಿಕ ಸಹಾಯವನ್ನು ಮಾಡದೆ ಬಡವರಿಗೆ ಎಂತಹ ಸೇವೆ ಮಾಡದೆ ತನ್ನ ಜ್ಞಾನವನ್ನು ಮಾತ್ರ ಪ್ರಚಾರ ಮಾಡುತ್ತಾ, ಮನುಷ್ಯನಿಗೆ ಎಲ್ಲದಕ್ಕಿಂತ ಮುಖ್ಯ ದೈವಜ್ಞಾನವೆಂದು ಹೇಳುತ್ತಿದ್ದನು. ಒಂದು ದಿನ ಒಬ್ಬ ಪತ್ರಿಕಾ ವರದಿಗಾರ ಯೋಗಿ ಹತ್ತಿರಕ್ಕೆ ಹೋಗಿ ಕೆಲವೊಂದು ಪ್ರಶ್ನೆಗಳನ್ನು ಕೇಳಿದನು, ಅವುಗಳು ಹೀಗೆ ಇವೆ.

**ವರದಿಗಾರ (ಪತ್ರಕರ್ತ) :–** ಬಾಬಾರವರು ಪ್ರಜೆಗಳಿಗೆ ಎಷ್ಟೋ ಕೋಟಿ ಹಣವನ್ನು ಖರ್ಚುಮಾಡಿ ಸೇವೆ ಮಾಡುತ್ತಿದ್ದಾರೆ. ಎಷ್ಟೋ ಜನರಿಗೆ ವಿದ್ಯೆ, ವೈದ್ಯಕೀಯ

ಸದುಪಾಯಗಳನ್ನು ಕಲ್ಪಿಸಿದ್ದಾನೆ. ಒಂದು ಜಿಲ್ಲೆಗೆ ನಾಲ್ಕು ನೂರು ಕೋಟಿ ರೂಪಾಯಿಗಳನ್ನು ಖರ್ಚುಮಾಡಿ ಬಡವರಿಗೆ ಸಹಾಯ ಮಾಡಿದ್ದಾನೆ. ಅಂತಹವುಗಳಲ್ಲಿ ನೀವು ಒಂದಾದರೂ ಜನರಿಗೆ ಮಾಡಿದ್ದೀರಾ? ನೀವು ಜನರಿಗೆ ಏನು ಮಾಡುತ್ತಿದ್ದೀರ?

**ಯೋಗಿ :–** ಬಾಬಾರವರು ಮಾಡುತ್ತಿರುವ ಪ್ರಜಾ ಸೇವೆಯಲ್ಲಿ ನಾನು ಒಂದು ಸೇವೆಯನ್ನು ಸಹ ಮಾಡಲಿಲ್ಲ. ನಾನು ಹಾಗೆ ಮಾಡಬೇಕೆಂದುಕೊಂಡಿಲ್ಲ. ನಾನು ಹಾಗೆ ಮಾಡಬೇಕೆಂದರೂ ನನ್ನ ಹತ್ತಿರ ಅಷ್ಟು ಹಣವಿಲ್ಲ. ನನಗೆ ಯಾರೂ ಪ್ರಜಾ ಸೇವೆಗೆಂದಾಗಲೀ, ನನಗೆಂದಾಗಲೀ ಎಂತಹ ಹಣವನ್ನು ಕೊಟ್ಟಿಲ್ಲ. ಆದ್ದರಿಂದ ನಾನು ಬಾಬಾರವರು ಮಾಡುತ್ತಿರುವ ಯಾವ ಸೇವೆ ಮಾಡಲಿಲ್ಲ. ಇನ್ನೂ ವಿವರವಾಗಿ ಹೇಳಬೇಕೆಂದರೆ ನಾನು ಯೋಗಿ, ಆತನು ಬಾಬಾ. ಬಾಬಾ ಎನ್ನುವ ವ್ಯಕ್ತಿಗೂ, ಯೋಗಿ ಎನ್ನುವ ವ್ಯಕ್ತಿಗೂ ಯಾವ ವಿಷಯದಲ್ಲೂ ಹೋಲಿಕೆಗಳಿರುವುದಿಲ್ಲ, ಇರಬಾರದು. ಒಬ್ಬ ಡಾಕ್ಟರಿಗೂ, ಯಾಕ್ಟರಿಗೂ ಹೇಗೆ ವ್ಯತ್ಯಾಸವಿರುತ್ತದೋ ಹಾಗೆ ಒಬ್ಬ ಯೋಗಿಗೂ, ಬಾಬಾಗೂ ಎಲ್ಲದರಲ್ಲೂ ವ್ಯತ್ಯಾಸವಿರುತ್ತದೆ. ಡಾಕ್ಟರ್ ಮಾಡಿದ ವೈದ್ಯಕೀಯ ಉಪಚಾರವನ್ನು ಯಾಕ್ಟರ್ ಮಾಡಲಾರನು. ಹಾಗೆಯೇ ಯಾಕ್ಟರ್ ಮಾಡಿದ ನಟನೆಯನ್ನು ಡಾಕ್ಟರ್ ಮಾಡಲಾರನು. ಅದೇ ವಿಧವಾಗಿ ಯೋಗಿವೊಂದರ ಮನಸ್ಥತ್ವಕ್ಕೂ, ಬಾಬಾವೊಂದರ ಮನಸ್ಥತ್ವಕ್ಕೂ ಎಷ್ಟೋ ವ್ಯತ್ಯಾಸವಿದೆ. ಬಾಬಾ ಯಾವಾಗಲೂ ಪ್ರಪಂಚ ಸಂಬಂಧವಾಗಿ ಯೋಚಿಸುತ್ತಾನೆ, ಪ್ರಪಂಚ ಸಂಬಂಧವಾಗಿ ಮಾಡಬೇಕೆಂದುಕೊಳ್ಳುತ್ತಾನೆ. ಆದರೆ ಯೋಗಿ ಆದವನು ಎಂದಿಗೂ ಪ್ರಪಂಚಕ್ಕೆ ಸಂಬಂಧವಾಗಿ ಯೋಚಿಸುವುದಿಲ್ಲ, ಪ್ರಪಂಚ ಸಂಬಂಧವಾದ ಕೆಲಸಗಳನ್ನು ಮಾಡುವುದಿಲ್ಲ. ಯೋಗಿ ಯಾವಾಗಲೂ ದೈವ ಸಂಬಂಧವಾಗಿ ಯೋಚಿಸುವನು. ಹಾಗೇ ದೈವಸಂಬಂಧವಾದ ಕೆಲಸಗಳನ್ನೇ ಮಾಡುತ್ತಾನೆ. ಅಶಾಶ್ವತವಾದ ಪ್ರಪಂಚ ಕೆಲಸಗಳನ್ನು ತಾನು ಮಾಡುವುದಿಲ್ಲ, ಇತರರನ್ನು ಸಹ ಮಾಡಲು ಬಿಡುವುದಿಲ್ಲ. ಆದ್ದರಿಂದ ನನಗೂ ಬಾಬಾಗೂ ಎಂತಹ ಹೋಲಿಕೆಗಳು ಇರುವುದಿಲ್ಲ. ಬಾಬಾ ಮನುಷ್ಯರಿಗೆ ಅಶಾಶ್ವತವಾದವುಗಳನ್ನು ಕೊಡುತ್ತಿದ್ದಾನೆ. ಶಾಶ್ವತವಾದದ್ದನ್ನು ಕೊಡುತ್ತಿಲ್ಲ. ಪ್ರಜೆಗಳಿಗೆ ದೈವಜ್ಞಾನವನ್ನು ತಿಳಿಸುವುದು ಎಲ್ಲದಕ್ಕಿಂತ ಮಿಗಿಲಾದ ಸೇವೆಯಾಗುತ್ತದೆ.

ನಾನು ಪ್ರಜೆಗಳಿಗೆ ದೈವಜ್ಞಾನವನ್ನು ಕೊಟ್ಟು ಶಾಶ್ವತವಾದ ಒಳಿತನ್ನು ಮಾಡುತ್ತಿದ್ದೇನೆ. ಆತನು (ಬಾಬಾ) ವಿದ್ಯೆ, ವೈದ್ಯಗಳನ್ನು ಕೊಟ್ಟು ಅಶಾಶ್ವತವಾದ ಸೇವೆ ಮಾಡುತ್ತಿದ್ದಾನೆ, ಪ್ರಪಂಚಕ್ಕೆ ಸಂಬಂಧವಾದವು ಯಾವವು ಸಹ ಶಾಶ್ವತವಾದವುಗಳಲ್ಲ. ಆದ್ದರಿಂದ ಆತನು ಶಾಶ್ವತವಾದ ಒಳ್ಳೆಯ ಕೆಲಸವನ್ನು ಜನರಿಗೆ ಮಾಡುತ್ತಿಲ್ಲವೆಂದು ಹೇಳುತ್ತಿದ್ದೇನೆ.

**ವರದಿಗಾರ :–** ಒಬ್ಬ ಮನುಷ್ಯನ ಅವಶ್ಯಕತೆಗೆ ಕೆಲಸಕ್ಕೆ ಬರುವುದನ್ನು ಬಾಬಾರವರು ಮಾಡುತ್ತಿದ್ದಾರೆ. ನೀವು ಅವಶ್ಯಕತೆಗೆ ಕೆಲಸಕ್ಕೆ ಬಾರದ್ದನ್ನು ಮಾಡುತ್ತೇವೆನ್ನುತ್ತಿದ್ದೀರ. ಅವಶ್ಯಕತೆಗೆ ಕೆಲಸಕ್ಕೆ ಬಾರದ್ದು ಮುಖ್ಯವಲ್ಲ ಅಲ್ಲವೆ! ಅದರಿಂದ ಪ್ರಜೆಗಳ ಅವಶ್ಯ ನಿಮಿತ್ತ ತಿಳಿಸುವ ಸೇವೆಯೇ ಮುಖ್ಯವಾದದ್ದಾಗಲೀ, ನೀವು ಮಾಡುವುದು ಮುಖ್ಯವಲ್ಲ.

**ಯೋಗಿ :–** ನೀನು ಒಬ್ಬ ವರದಿಗಾರ. ಆದರೂ ನಿನ್ನ ಹೆಸರಿನಲ್ಲಿರುವ ಅಂತರಾರ್ಥ ನಿನಗೆ ತಿಳಿದಿಲ್ಲ. ನೀನು ಕೇವಲ ವಾರ್ತೆಗಳನ್ನು ಬರೆಯುವವನೇ ಎಂದುಕೊಳ್ಳುತ್ತಿದ್ದೀಯ. ಹಾಗೇ ಪ್ರಜೆಗಳು ಎನ್ನುವ ಹೆಸರಲ್ಲಿ ಇರುವ ಅಂತರಾರ್ಥ ಪ್ರಜೆಗಳಿಗೆ ತಿಳಿದಿಲ್ಲ. ಅವಶ್ಯಕ್ಕಾಗಿ ಬದುಕುವವರೆಂದು ಅಂದುಕೊಳ್ಳುತ್ತಿದ್ದಾರೆ. ಆದರೆ ವರದಿಗಾರ ಎನ್ನುವುದರಲ್ಲಿ ಯಾವ ಅರ್ಥ ಅಡಗಿದೆಯೆಂದು ನೋಡಿದರೆ **ಲೇಖನ** ಎಂದರೆ **ಪತ್ರ** ಎಂದೂ, ಉತ್ತರ ಎಂದೂ ಇರುವ ಸಮಾಚಾರವನ್ನು ಲಿಖಿತವಾಗಿ ನೋಡುವುದೆಂದು ತಿಳಿಯುತ್ತದೆ. ಲೇಖಕ ಎಂದರೆ ಸಮಾಚಾರವನ್ನು ಬರೆಯುವ ವನು ಅಥವಾ ತಿಳಿಸುವವನು ಎಂದು ಹೇಳಬಹುದು. ವರದಿಗಾರ ಎಂದರೆ ವಿಶೇಷವಾದ ಸಮಾಚಾರವನ್ನು ತಿಳಿಸುವವನೆಂದು ಅರ್ಥ. ಇದು ಬಹಳ ಜನ ವರದಿಗಾರರಿಗೂ ತಿಳಿದಿಲ್ಲ. ಅದೇ ರೀತಿ "ಜ" ಎಂದರೆ ಹುಟ್ಟುವುದೆಂದೂ "ಪ್ರ" ಎಂದರೆ ಮುಖ್ಯವಾದ ಅಥವಾ ಪ್ರಧಾನವಾದ ಎನ್ನುವ ಅರ್ಥವಿದೆ. ಪ್ರಜ ಎಂದರೆ ವಿಶೇಷವಾದ ಹುಟ್ಟುವಿಕೆ ಇರುವವನೆಂದು ಅಥವಾ ಪ್ರಾಧಾನ್ಯವಾದ ಜನ್ಮ ಹೊಂದಿದವನೆಂದು, ಅಥವಾ ಮುಖ್ಯವಾದ ಜನ್ಮ ಎಂದು ಅರ್ಥ ಬರಬಲ್ಲದು. ಆದರೆ ಯಾವ ಮನುಷ್ಯನಿಗೂ ಪ್ರಜ ಎನ್ನುವ ಶಬ್ದಕ್ಕೆ ಅರ್ಥ ತಿಳಿದಿಲ್ಲ. ತನ್ನದು ಎಲ್ಲ ಜನ್ಮಗಳಿಗಿಂತ ಬುದ್ಧಿಯಲ್ಲಿ ಪ್ರಾಧಾನ್ಯತೆ ಇರುವ ಜನ್ಮವೆಂದು, ಅದಕ್ಕೆ ತಕ್ಕ

ಹಾಗೆ ಪ್ರವರ್ತಿಸಬೇಕೆಂದು ಯಾರೂ ಅಂದುಕೊಳ್ಳುತ್ತಿಲ್ಲ. ಮನುಷ್ಯ ಜನಿಸಿದ ನಂತರ ತನ್ನ ಜೀವನದಲ್ಲಿ ಯಾವುದು ಮುಖ್ಯವಾದುದೊ, ತಾನು ಯಾವುದರಲ್ಲಿ ಪ್ರಾಧಾನ್ಯತೆ ಇರುವವನಾಗಿ ಬದುಕಬೇಕೊ ತಿಳಿಯದೆ ಅಪ್ರಜೆಯಾಗಿ, ಅಪ್ರಾಧಾನ್ಯವಾಗಿ ಬದುಕುತ್ತಿದ್ದಾನೆ. ಅಂತಹವರೆ ಪ್ರಾಧಾನ್ಯತೆ ಇಲ್ಲದ ಪ್ರಪಂಚ ಸುಖಗಳಿಗೋಸ್ಕರ ಪರದಾಡುತ್ತಿರುವರು. ಅಶಾಶ್ವತವಾದ ಪ್ರಪಂಚ ಕೋರಿಕೆಗಳಿ ಗೋಸ್ಕರವೇ ತಮ್ಮ ಬುದ್ಧಿಯನ್ನು ಉಪಯೋಗಿಸುತ್ತಿದ್ದಾರೆ. ತನ್ನ ವಿಷಯ ತನಗೇ ತಿಳಿಯದ ಮನುಷ್ಯ ತನಗೆ ಯಾವುದು ಅವಶ್ಯವೊ, ಯಾವುದು ಅನವಶ್ಯವೊ ತಿಳಿಯದೆ ಅನವಶ್ಯಕವಾದದ್ದನ್ನು ಅವಶ್ಯಕವೆಂದು, ಅವಶ್ಯಕವಾದದ್ದನ್ನು ಅನವಶ್ಯಕ ವೆಂದು ತಿಳಿದುಕೊಳ್ಳುತ್ತಿದ್ದಾನೆ. ಆದ್ದರಿಂದ ಮನುಷ್ಯನಿಗೆ ಅವಶ್ಯವಾದ ಊಟ, ಬಟ್ಟೆ, ವಿದ್ಯೆ, ವೈದ್ಯಕೀಯಗಳನ್ನು ಕೊಡಬೇಕೆಂದು ಅಂದುಕೊಳ್ಳುತ್ತಿದ್ದಾನೆ. ಆದರೆ ಅವು ಬೇಕಿಲ್ಲದ ವಿಷಯಗಳೆಂದು ಮೊದಲೇ ಕರ್ಮದಿಂದ ನಿರ್ಣ ಯಿಸಲ್ಪಟ್ಟಿವ 'ಯೆಂದು, ಯಾವ ಸಮಯಕ್ಕೆ ಯಾವುದು ಲಭಿಸಬೇಕೊ ಅದೇ ಲಭಿಸುತ್ತದೆಂದು ತಿಳಿಯದೆ ತಾನೇ ಸಂಪಾದಿಸಿಕೊಳ್ಳುತ್ತಿದ್ದೇನೆಂದು ಒಬ್ಬನೆಂದು ಕೊಂಡರೆ, ನಾನು ಕೊಡುತ್ತಿದ್ದೇನೆಂದು ಮತ್ತೊಬ್ಬನು ಅಂದುಕೊಳ್ಳುತ್ತಿದ್ದಾನೆ. ವಾಸ್ತವಕ್ಕೆ ಪ್ರಪಂಚದ ವಿಷಯಗಳು ಕರ್ಮಾಧೀನವೆಂದು ಅದೇ ನಮ್ಮನ್ನು ಪ್ರೇರೇಪಿಸಿ ಒಬ್ಬೊಬ್ಬರಿಂದ ಒಂದೊಂದು ಕೆಲಸ ಮಾಡಿಸುತ್ತಿದೆಯೆಂದು ತಿಳಿಯದಂತಿದ್ದಾರೆ. ನಮಗೆ ಕರ್ಮ ವಿಷಯ ತಿಳಿದಿದೆ, ಆದ್ದರಿಂದ ನಾವು ಪ್ರಾಪಂಚಿಕ ವಿಷಯಗಳಲ್ಲಿ ಯಾರಿಗೂ ಏನು ಮಾಡುತ್ತಿಲ್ಲ. ನಾವು ಏನು ಮಾಡಿದರೂ ದೈವಜ್ಞಾನ ವಿಷಯದಲ್ಲೇ ಸೇವೆ ಮಾಡುತ್ತಿದ್ದೇವೆ. ಮನುಷ್ಯನಿಗೆ ಅವಶ್ಯವಾದದ್ದು ದೈವಜ್ಞಾನ. ಅನವಶ್ಯವಾದದ್ದು ಪ್ರಾಪಂಚಿಕ ವಿಷಯ. ಮನುಷ್ಯನಿಗೆ ಅವಶ್ಯವಾದ ಜ್ಞಾನವನ್ನು ನಾವು ಪ್ರಜೆಗಳಿಗೆ ತಿಳಿಸುತ್ತಿದ್ದೇವೆ. ಹಾಗೆ ಮಾಡುವುದನ್ನು ನಾವು ಮನುಷ್ಯರಿಗೆ ಸೇವೆ ಮಾಡಿದಹಾಗೆ ಭಾವಿಸುತ್ತಿಲ್ಲ. ಮನುಷ್ಯರಿಗೆ ಜ್ಞಾನವನ್ನು ತಿಳಿಸಿದರೂ, ಅದನ್ನು ನಾವು ದೇವರ ಸೇವೆಯಾಗಿ ಭಾವಿಸುತ್ತಿದ್ದೇವೆ.

ಬಾಬಾ ಎನ್ನುವವರು ಯಾರಾದರೂ ದೇವರಿಗೆ ಸೇವೆ ಮಾಡದೆ ಮನುಷ್ಯರಿಗೆ ಸೇವೆ ಮಾಡುತ್ತಾ, ಅದನ್ನು ಮಾನವಸೇವೆಯೇ ಮಾಧವಸೇವೆಯಾಗಿ

ಹೇಳಿಕೊಳ್ಳುತ್ತಿದ್ದಾರೆ. ಮಾನವ ಸೇವೆ ಕೂಡ ಅವರು ಎಷ್ಟರ ಮಟ್ಟಿಗೆ ಮಾಡುತ್ತಿದ್ದಾರೊ ಸ್ವಲ್ಪ ಆಲೋಚಿಸಿದರೆ ಅರ್ಥವಾಗಿ ಹೋಗುತ್ತದೆ. ಅವರ ಜೇಬುಗಳು ತುಂಬಿ ಕೊನೆಗೆ ತುಳುಕುತ್ತಿರುವುದನ್ನು ಪ್ರಜೆಗಳಿಗೆ ಖರ್ಚು ಮಾಡುತ್ತಿದ್ದಾರೆ. ಕೆಲವು ಲಕ್ಷ ಕೋಟಿಗಳಲ್ಲಿ ನಾಲ್ಕು ಅಥವಾ ಐದು ನೂರು ಕೋಟಿ ಖರ್ಚು ಮಾಡಿದರೆ, ಅದು ಹೊರಗೆ ದೊಡ್ಡ ಮೊತ್ತವಾಗಿ ಕಾಣಿಸಿದರೂ, ದೈವದ ಲೆಕ್ಕದಲ್ಲಿ ಅದು ದೊಡ್ಡ ದಾನವಾಗಿ ಲೆಕ್ಕಿಸಲ್ಪಡುವುದಿಲ್ಲ. **ಇರುವುದರಲ್ಲಿ ಎಷ್ಟು ಕೊಡುತ್ತಿದ್ದೀಯೆಂದು ದೇವರು ನೋಡುತ್ತಿದ್ದಾನಾಗಲೀ, ಇಷ್ಟು ಕೊಟ್ಟಿದ್ದೀಯೆಂದು ಮಾತ್ರ ನೋಡಲಿಲ್ಲ.** ಹತ್ತು ಜನ ಸಾವಿರ ರೂಪಾಯಿಗಳನ್ನು ದಾನ ಮಾಡಿದಾಗ, ಹನ್ನೊಂದನೆಯವನು ಹತ್ತು ರೂಪಾಯಿಗಳು ಮಾತ್ರವೇ ದಾನ ಮಾಡಿದ್ದಾನಂತೆ. ಕೊನೆಗೆ ಯಾರು ಹೆಚ್ಚು ದಾನ ಮಾಡಿದ್ದಾರೆಂದು ಪ್ರಶ್ನಿಸಿದಾಗ, ಹತ್ತು ರೂಪಾಯಿಗಳು ದಾನ ಮಾಡಿದವನೇ ಹೆಚ್ಚು ದಾನ ಮಾಡಿದಂತೆ ತಿಳಿದುಹೋಯಿತು. ಏಕೆಂದರೆ ಉಳಿದವರು ತನಗಿರುವುದರಲ್ಲಿ ಸ್ವಲ್ಪ ಮಾತ್ರವೇ ಕೊಟ್ಟಿದ್ದಾರೆ, ಆದರೆ ಹತ್ತು ರೂಪಾಯಿಗಳು ಕೊಟ್ಟಿರುವವನು ತನ್ನ ಹತ್ತಿರ ಇರುವುದೆಲ್ಲಾ ಕೊಟ್ಟಿದ್ದಾನಂತೆ. ಇರುವುದೆಲ್ಲಾ ಕೊಟ್ಟಿರುವವನು ದೊಡ್ಡದಾಗಿ ಕೊಟ್ಟಿರುವವನೆಂದು, ಇರುವುದರಲ್ಲಿ ರವೆಯಷ್ಟು ಮಾತ್ರ ಕೊಟ್ಟಿರುವವನು ದೊಡ್ಡದಾಗಿ ಕೊಟ್ಟಿರುವವನಲ್ಲವೆಂದು ತಿಳಿದುಹೋಯಿತು. ಆದ್ದರಿಂದ ಬಾಬಾ ನೂರು ಕೋಟಿ ಹಣವನ್ನು ದಾನವಾಗಿ ಕೊಟ್ಟರೂ, ಅದು ದೊಡ್ಡ ದಾನ ಅಲ್ಲ. ತನಗೆ ಇರುವುದರಲ್ಲಿ ಸ್ವಲ್ಪವೇ ಕೊಟ್ಟಿರುವವ ನಾಗಿ ಲೆಕ್ಕಿಸಲ್ಪಡುತ್ತಿದ್ದಾನೆ.

ದಾನದಲ್ಲಿ ಸೂತ್ರವನ್ನು ತಿಳಿಯದ ಪ್ರಜೆಗಳು ಸ್ವಲ್ಪ ಕೊಟ್ಟಿರುವ ಬಾಬಾನನ್ನು ದೊಡ್ಡದಾಗಿ ಕೊಟ್ಟಿರುವವನ ಕೆಳಗೆ ಜಮ ಕಟ್ಟಿಕೊಳ್ಳುತ್ತಿದ್ದಾರೆ. ಇಂತಹ ಬಾಬಾಗಳನ್ನು ದೊಡ್ಡದಾಗಿ ಹೇಳಿಕೊಳ್ಳುತ್ತಾ, ದಾನಗಳಲ್ಲಿ ಎಲ್ಲದಕ್ಕಿಂತ ಮಿಗಿಲಾದ ದಾನ ಜ್ಞಾನದಾನವೆಂದು ತಿಳಿಯದವರು ಜ್ಞಾನದಾನ ಮಾಡುವ ಯೋಗಿಗಳನ್ನು ಕಡಿಮೆಯಾಗಿ ಲೆಕ್ಕಿಸಿಕೊಳ್ಳುತ್ತಿದ್ದಾರೆ. ಅಂತಹ ಹೆಸರು ಪ್ರಖ್ಯಾತಿಯನ್ನು ಗಳಿಸಿದ ತಪಸ್ವಿಬಾಬಾ ಎನ್ನುವ ವ್ಯಕ್ತಿಯೂ ಮತ್ತು ಯೋಗಿಗಳಲ್ಲಿ ಹೆಸರುವಾಸಿಯಾದ ರಾಜಯೋಗಾನಂದ ಎನ್ನುವ ವ್ಯಕ್ತಿಯೂ ಈ ಸತ್ಯಾನ್ವೇಷಿ ಕಥೆಯಲ್ಲಿ ಇದ್ದಾರೆ.

ಈ ಕಥೆ ಹೆಚ್ಚಾಗಿ ಬಾಬಾನ ಸುತ್ತಲೂ ಮತ್ತು ಯೋಗಿಯ ಸುತ್ತಲೂ ತಿರುಗುತ್ತಾ, ಅವರ ನಿಜ ಸ್ವಭಾವವನ್ನು ಹೊರಗೆ ಇಟ್ಟಿದೆ. ಕೊನೆಗೆ ಬಾಬಾಗಳು ಸಹ ಮರಣಿಸುತ್ತಾರೆಂದು, ಮರಣಿಸಿದಾಗ ಸಂಪಾದಿಸಿಕೊಂಡ ಆಸ್ತಿ, ಹೆಸರು, ಪ್ರಖ್ಯಾತಿಗಳು ಎಲ್ಲವೂ ಇಲ್ಲೇ ನಿಂತುಹೋಗುವವೆಂದು, ಯಾವ ಒಂದೂ ಸಹ ಬಾಬಾ ಹಿಂದೆ ಹೋಗುವುದಿಲ್ಲವೆಂದು ತಿಳಿಸಿದೆ. ಯೋಗಿ ಮರಣ ಹೊಂದಿದರೆ ಆತನ ಹಿಂದೆ ಹೋಗುವುದು ಆತನ ಯೋಗಶಕ್ತಿಯೆಂದು, ಅದು ಶರೀರದ ಹಿಂದೆ ಜಗತ್ತಿನಲ್ಲಿ ಉಳಿಯದೆ ಯೋಗಿ ಹಿಂದೆ ಹೋಗುವುದೆಂದು ಸತ್ಯಾನ್ವೇಷಿ ಕಥೆಯಲ್ಲಿ ತಿಳಿಸಲಾಗಿದೆ. ಆದ್ದರಿಂದ ಈ ಗ್ರಂಥವನ್ನು ಎಲ್ಲರೂ ಓದಿ ಜ್ಞಾನವೊಂದರ ಬೆಲೆಯನ್ನು ತಿಳಿದುಕೊಳ್ಳಬಲ್ಲರೆಂದು ವಿಶ್ವಾಸಿಸುತ್ತಿದ್ದೇವೆ.

ಇಂತಿ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



## ನಿಜವಾದ ರಚನಕಾರರು ಯಾರೋ ಗೊತ್ತಾ?

## ಸಂಚಲನಾತ್ಮಕ ರಚನಕಾರ

| | | |
|---|---|---|
| ಸಂ | = | ಒಳ್ಳೆ |
| ಚಲನೆ | = | ಚೈತನ್ಯ ಹೊಂದಿದ |
| ಆತ್ಮಕ | = | ಎರಡನೆ ಆತ್ಮ |
| ರಚನಕಾರ | = | ಬರೆಸಿದವನು |

# ಸತ್ಯಾನ್ವೇಷಿ ಕಥೆ

1) ಜ್ಞಾನ, ಅಜ್ಞಾನಗಳ ಮಧ್ಯೆ ನಡೆಯುವ ಹೋರಾಟವೇ ಸತ್ಯಾನ್ವೇಷಿ.

2) ಬಾಬಾಗಳ ಮಹಿಮೆಗಳ ಮರ್ಮಗಳನ್ನು ತಿಳಿಸುವ ಸಂಚಲನ ಕಥೆಯೇ ಸತ್ಯಾನ್ವೇಷಿ.

3) ಮಾಂತ್ರಿಕರಿಗೂ, ಯೋಗಿಗಳಿಗೂ ನಡುವೆ ನಡೆಯುವ ಘರ್ಷಣೆಯೇ ಸತ್ಯಾನ್ವೇಷಿ.

4) ಮಂತ್ರಶಕ್ತಿಗೂ, ಮೂಲಿಕಾಶಕ್ತಿಗೂ ನಡುವೆ ಇರುವ ವ್ಯತ್ಯಾಸ ತಿಳಿಸುವುದೇ ಸತ್ಯಾನ್ವೇಷಿ.

5) ಗುರು ಶಿಷ್ಯರ ಮಧ್ಯೆ ಸಂಬಂಧವನ್ನು ತಿಳಿಸುವುದೇ ಸತ್ಯಾನ್ವೇಷಿ.

6) ಮನುಷ್ಯನಿಗೆ ತಿಳಿಯದ ಎಷ್ಟೋ ರಹಸ್ಯಗಳನ್ನು ತಿಳಿಸುವುದೇ ಸತ್ಯಾನ್ವೇಷಿ.

7) ಬ್ರಹ್ಮವಿದ್ಯೆಯಲ್ಲಿ ಸಂಚಲನೆ ಸೂತ್ರಗಳನ್ನು ತಿಳಿಸಿರುವುದೇ ಸತ್ಯಾನ್ವೇಷಿ.

8) ಪ್ರಾಪಂಚಿಕ ಧನಕ್ಕೂ, ಜ್ಞಾನ ಧನಕ್ಕೂ ನಡುವೆ ಇರುವ ಅಗಾಧವನ್ನು ತಿಳಿಸಿದೆ ಸತ್ಯಾನ್ವೇಷಿ.

9) ವಿಷಕ್ಕೆ ಮದ್ದು ಔಷಧ, ಮಾಯೆಗೆ ಮದ್ದು ಯೋಗ ಎಂದು ತಿಳಿಸಿದೆ ಸತ್ಯಾನ್ವೇಷಿ.

10) ಮಂತ್ರಗಳ ಗಾರುಡಿ ಶಕ್ತಿ, ಯಂತ್ರಗಳ ಶಕ್ತಿ, ಅಂಜನಗಳ ಕೆಲಸವನ್ನು ಕುರಿತು ತಿಳಿಸಿದೆ ಸತ್ಯಾನ್ವೇಷಿ.

11) ಷಟ್ (ಆರು) ಶಾಸ್ತ್ರಗಳಲ್ಲಿ ಬ್ರಹ್ಮವಿದ್ಯಾಶಾಸ್ತ್ರವೇ ದೊಡ್ಡದೆಂದು ತಿಳಿಸಿದೆ ಸತ್ಯಾನ್ವೇಷಿ.

12) ಯೋಗಿಗಳ ಔನ್ನತ್ಯವು, ಭೋಗಿಗಳ ಕುಟಿಲತ್ವವನ್ನು ಕುರಿತು ತಿಳಿಸಿದೆ ಸತ್ಯಾನ್ವೇಷಿ.

13) ಆಧ್ಯಾತ್ಮಿಕ ವಿದ್ಯೆಯಲ್ಲಿ ಮೂಢನಂಬಿಕೆಗಳನ್ನು ಖಂಡಿಸುವುದು ಸತ್ಯಾನ್ವೇಷಿ.

14) ಇತರರನ್ನು ಚಿಕ್ಕ ದೃಷ್ಟಿಯಿಂದ ನೋಡುವ, ಅಧಿಕಾರ ಮದವನ್ನು ಖಂಡಿಸುವುದು ಸತ್ಯಾನ್ವೇಷಿ.

(ಇದರಲ್ಲಿನ ಪಾತ್ರಗಳೂ, ಸಂಘಟನೆಗಳು ಕೇವಲ ಕಲ್ಪಿತ. ಯಾರನ್ನೂ ಉದ್ದೇಶಿಸಿ ಬರೆದಿರುವವಲ್ಲ. ಆದರೆ ಇದರಲ್ಲಿನ ಜ್ಞಾನವೂ, ಚಿಕಿತ್ಸೆ, ಮಂತ್ರಗಳೂ, ಮಹಿಮೆಗಳೂ ಎಲ್ಲವೂ ವಾಸ್ತವವೇ.)

ಮನುಷ್ಯನ ಭೌತಿಕ ಜೀವನ ಮುಖ್ಯವಾಗಿ ಮೂರು ಬಲಗಳ ಮೇಲೆ ಆಧಾರಪಟ್ಟಿದೆ. ಒಂದು ಶರೀರ ಬಲ, ಎರಡು ಬುದ್ಧಿ ಬಲ, ಮೂರು ಧನ ಬಲ. ಹುಟ್ಟುವಿಕೆಯಿಂದ ಬರುವುದು ಶರೀರಬಲ, ಆದ್ದರಿಂದ ಇದನ್ನು ಒಂದನೆಯದಾಗಿ ಹೇಳಿಕೊಂಡಿದ್ದೇವೆ. ಹುಟ್ಟಿದ ನಂತರ ಐದಾರು ಸಂವತ್ಸರಗಳಿಂದ ಬರುವುದು ಬುದ್ಧಿಬಲ. ಆದ್ದರಿಂದ ಎರಡನೆಯದಾಗಿ ಹೇಳಿಕೊಂಡಿದ್ದೇವೆ. ಯುಕ್ತವಯಸ್ಸು ನಂತರ ಬರುವುದು ಧನಬಲ. ಆದ್ದರಿಂದ ಕೊನೆಯ ಮೂರನೆಯದಾಗಿ ಹೇಳಿಕೊಂಡಿದ್ದೇವೆ. ಈ ಮೂರು ಬಲಗಳು ಒಬ್ಬ ಮನುಷ್ಯನಿಗೆ ತಪ್ಪುವುದಿಲ್ಲ, ಆದರೂ ಅವು ಎಲ್ಲರಿಗೂ ಒಂದೇ ವಿಧವಾಗಿ ಇರುವುದಿಲ್ಲ. ಹೊರಗೆ ಈ ಮೂರು ಬಲಗಳು ಎಲ್ಲರಿಗೂ ತಿಳಿದಿರುವವೇ, ಆದರೂ ಅವು ಎಲ್ಲರಿಗೂ ಒಂದೇ ವಿಧವಾಗಿ ಇರುವುದಿಲ್ಲ. ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿ ಇರುತ್ತವೆ. ಮೂರು ಬಲಗಳಲ್ಲಿ ಎರಡು ಇದ್ದು, ಒಂದು ಇಲ್ಲದೆ ಹೋಗಬಹುದು, ಒಂದು ಇದ್ದು ಎರಡು ಇಲ್ಲದೆ ಹೋಗಬಹುದು, ಮೂರು ಇದ್ದರೂ ಒಂದು ಬಲ ಶೇ.10 ರಷ್ಟು, ಒಂದು ಬಲ ಶೇ.40 ರಷ್ಟು, ಮತ್ತೊಂದು ಬಲ ಶೇ.50 ರಷ್ಟು ಇರಬಹುದು. ಈ ಬಲಗಳು ಅವರವರ ಕರ್ಮದ ಮೇಲೆ ಆಧಾರಪಟ್ಟಿರುತ್ತವೆ, ಆದ್ದರಿಂದ ಒಬ್ಬೊಬ್ಬರಿಗೆ ಒಂದೊಂದು ಲೆಕ್ಕ ಪ್ರಕಾರದಲ್ಲಿರುತ್ತದೆ. ಜಗತ್ತಿನಲ್ಲಿ ಒಬ್ಬರಿಗಿದ್ದಂತೆ ಮತ್ತೊಬ್ಬರಿಗೆ ಇರುವುದಿಲ್ಲ, ಸ್ವಲ್ಪ ವ್ಯತ್ಯಾಸದಿಂದಾದರೂ ಬಲಗಳು ಇರುವುದು ತಿಳಿಯುತ್ತಿದೆ.

ಹುಟ್ಟುವಿಕೆಯಲ್ಲಿ ಮೂರನೆಯದು ಆದ ಧನಬಲ ಜಗತ್ತಿನಲ್ಲಿ ಮೊದಲ ಸ್ಥಾನ ಆಕ್ರಮಿಸಿದೆ. ಎರಡನೆ ಸ್ಥಾನವನ್ನು ಬುದ್ಧಿ ಬಲ ಆಕ್ರಮಿಸಿದಾಗ, ಶರೀರ ಬಲ ಮೂರನೆಯ ಸ್ಥಾನವನ್ನು ಆಕ್ರಮಿಸಿದೆ. ಧನ ಬಲ ಒಂದು ಇದ್ದರೇ ಜೀವನದಲ್ಲಿ ಎಲ್ಲಾ ಇದ್ದಹಾಗಾಗುತ್ತಿದೆ. ಹೆಚ್ಚಾಗಿ ಅವಶ್ಯಕತೆಗಳೆಲ್ಲವು ಧನದಿಂದಲೇ ಬಗೆಹರಿಯುತ್ತಿವೆ. ಒಂದು ಹಣ ಬಲದಿಂದ ಜಗತ್ತಿನಲ್ಲಿ ಹೆಚ್ಚಿನ ಕೆಲಸಗಳು ನಡೆದುಹೋಗುವುದರಿಂದ ಕೆಲವರು **"ಧನಮೂಲ ಮಿದಮ್ ಜಗತ್"** ಎಂದು ಕರೆದಿದ್ದಾರೆ. ವಾಸ್ತವಕ್ಕೆ **"ಕರ್ಮಮೂಲ ಮಿದಮ್ ಜಗತ್"** ಆದಾಗ, ಧನ ಬಲಕ್ಕು ಸಹ ಕರ್ಮವೇ ಕಾರಣವಾದಾಗ, ಜ್ಞಾನ ತಿಳಿಯದ ಪ್ರಜೆಗಳು ಕಾಣಿಸದೆ ಹಿಂದೆ ಇದ್ದು ಆಡಿಸುವ ಕರ್ಮವನ್ನು ತಿಳಿಯದೆ, ಕಾಣಿಸುವ ಧನವನ್ನೇ ಎಲ್ಲದಕ್ಕೂ

ಮೂಲವೆಂದುಕೊಳ್ಳುತ್ತಿದ್ದಾರೆ. ಧನ ಬಲ ಇರುವಷ್ಟು ಮಾತ್ರಕ್ಕೆ ಅದರಿಂದ ವಿದ್ಯಾವಂತನನ್ನು ಕೊಂಡುಕೊಳ್ಳುತ್ತಿದ್ದಾನೆ. ಶರೀರ ಬಲವಿರುವ ವ್ಯಕ್ತಿಯನ್ನು ಕೊಳ್ಳುತ್ತಿದ್ದಾನೆ. ಆದ್ದರಿಂದ ಶರೀರ ಬಲ ಇಲ್ಲದವನಾಗಲೀ, ಓದು ಬಾರದ ವಿದ್ಯಾಬಲ ಇಲ್ಲದವನಾಗಲೀ, ಒಂದು ಧನ ಬಲದಿಂದ ಸುಲಭವಾಗಿ ಬದುಕುತ್ತಿದ್ದಾನೆ. ಜಗತ್ತಿನಲ್ಲಿ ಎಲ್ಲಾದರೂ ಹಣವಿರುವವನಿಗೆ ಇರುವ ಮರ್ಯಾದೆ, ವಿದ್ಯೆ ಇರುವವನಿಗಾಗಲೀ, ಶರೀರ ಧೃಢತ್ವವಿರುವವನಿಗಾಗಲೀ ಇರುವುದಿಲ್ಲ. ಆದ್ದರಿಂದ ಶರೀರ ಬಲವಿರುವ ಪಹಿಲ್ವಾನ್ ಆಗಲೀ, ವಿದ್ಯಾಬಲವಿರುವ ಪಂಡಿತನಾಗಲೀ ಧನವಿರುವವನ ಕೆಳಗೆ ಕೆಲಸ ಮಾಡುತ್ತಿದ್ದಾನೆ. ಕೊನೆಗೆ ದೇವಾಲಯಗಳಲ್ಲಿರುವ ದೇವರುಗಳ ಹತ್ತಿರ ಸಹ ಧನವಿರುವವನಿಗೇ ಬೆಲೆ ಇದೆ. ಎಲ್ಲ ರಂಗಗಳಲ್ಲಿ ಸಹ ಧನವಿರುವವನಿಗೇ ಬೆಲೆ ಇರುವುದರಿಂದ, ಎಲ್ಲರ ಉದ್ದೇಶದಲ್ಲಿ ಧನವನ್ನು(ಧನ ಬಲವನ್ನು) ಹೊಂದಬೇಕೆಂಬುದೇ ಹೊರತು ಬೇರೆ ಆಲೋಚನೆಯೇ ಇರುವುದಿಲ್ಲ. ಈದಿನ ಕಷ್ಟಪಟ್ಟು ಓದಿ ಉನ್ನತ ವಿದ್ಯೆ ಓದುವವರೆಲ್ಲಾ, ಆ ಓದುಗಳಿಂದ ಉದ್ಯೋಗವನ್ನು ಪಡೆದು, ಹಣವನ್ನು ಸಂಪಾದಿಸುವ ಉದ್ದೇಶ ಹೊರತು ಮತ್ತೊಂದು ಉದ್ದೇಶ ಇಲ್ಲ. ಒಂದು ಹಣದಿಂದಲೇ ಪ್ರಾಪಂಚಿಕ ಅವಶ್ಯಕತೆಗಳು ಈಡೇರುವುದರಿಂದ, ಕೊನೆಗೆ ಜೀವನದ ಭಾಗಸ್ವಾಮಿಯಾಗಿ ಬರುವ ಸ್ತ್ರೀ ಸಹ ಹಣವಿರುವವನನ್ನೇ ಮಾಡಿಕೊಳ್ಳಬೇಕೆಂದುಕೊಳ್ಳುತ್ತಿದ್ದಾಳೆ. ಇಷ್ಟು ತೀವ್ರ ಮಟ್ಟದಲ್ಲಿ ಹಣಬಲವಿರುವುದರಿಂದ ಅದರ ಮುಂದೆ ಯಾವ ಬಲವೂ ನಿಲ್ಲುವುದಿಲ್ಲ. ಧನಬಲಕ್ಕಿಂತ ಮೀರಿದ ಮರ್ಯಾದೆ ಯಾವ ಬಲಕ್ಕೂ ಇಲ್ಲ. ಈಗ ನಾವು ಓದುವ ಕಥೆಯೂ ಸಹ ಶರೀರ ಬಲವೂ, ವಿದ್ಯಾ ಬಲವೂ ಇದ್ದು ಒಂದು ಹಣ ಬಲವಿಲ್ಲದ ವ್ಯಕ್ತಿಯದ್ದು, ಆತನೇ ಸತ್ಯಾನ್ವೇಷಿ, ಆತನ ಹೆಸರು ರಾಘವ.

ಈ ಲೋಕದಲ್ಲಿ ಹಣ ಇಲ್ಲದೆ ಯಾವ ಕಾರ್ಯವೂ ನಡೆಯುವುದಿಲ್ಲ. ಆದ್ದರಿಂದ ಎಲ್ಲರ ದೃಷ್ಟಿ ಅದರ ಮೇಲೆಯೇ ಕೇಂದ್ರೀಕೃತವಾಗಿರುತ್ತದೆ. ಎಲ್ಲರ ಗಮನ ಹಣದ ಮೇಲೆಯೇ ಇದ್ದರೂ ಎಷ್ಟು ಜನರಿಗೆ ಹಣ ಕೈಗೂಡುತ್ತದಾ ಎಂದು ಯೋಚಿಸಿದರೆ ಉತ್ತರಗಳು ಅನೇಕ ವಿಧಗಳಾಗಿ ಇರುತ್ತವೆ. ಕರ್ಮವನ್ನನುಸರಿಸಿ ಹಣ ಇರುವುದರಿಂದ ಯಾರು ಎಷ್ಟು ಪ್ರಯತ್ನಗಳು

ಮಾಡಿದರೂ ಅವನ ಕರ್ಮ ಪ್ರಕಾರವೇ ಹಣ ಕೈಗೂಡುವುದು ನಡೆಯುತ್ತಿದೆ. ಕರ್ಮ ವಿಧಾನ ತಿಳಿಯದ ಮನುಷ್ಯರು ತಮ್ಮ ಪ್ರಯತ್ನದಿಂದಲೇ ಹಣ ಲಭಿಸುವುದೆಂದು ಪ್ರಯತ್ನ ಮಾಡುತ್ತಿದ್ದಾರೆ. ಆ ಕೆಲಸದಲ್ಲಿ ನಿತ್ಯವೂ ಗೆಲುವು ಸೋಲುಗಳು ಹೊಂದುತ್ತಲೇ ಇದ್ದಾನೆ. ಶರೀರ ಬಲವೂ, ಬುದ್ಧಿ ಬಲವೂ ಎರಡೂ ಶರೀರದಲ್ಲಿ ತಯಾರಾದಾಗ ಒಂದು ಹಣ ಬಲ ಹೊರಗೆ ಏರ್ಪಡುತ್ತಿದೆ. ಹಣವನ್ನು ಮನುಷ್ಯನೇ ಸೃಷ್ಠಿಸಿಕೊಳ್ಳುತ್ತಿದ್ದಾನೆ. ಹೊರಗೆ ಕಾಣಿಸುವ ಶರೀರವನ್ನೂ, ಅದರಲ್ಲಿ ಕಾಣಿಸದ ಬುದ್ಧಿಯನ್ನು ಪ್ರಕೃತಿ ತಯಾರುಮಾಡಿರುವಾಗ ಹಣವನ್ನು ಮಾತ್ರ ಯಂತ್ರಗಳಿಂದ ಮನುಷ್ಯನೇ ತಯಾರು ಮಾಡುತ್ತಿದ್ದಾನೆ. ಮನುಷ್ಯ ತಯಾರು ಮಾಡಿದ ಹಣಕ್ಕೆ ಮನುಷ್ಯನೇ ದಾಸನಾಗಿ ಹೋಗಿದ್ದಾನೆ. ಜಗತ್ತಿನಲ್ಲಿ ಮಾಯೆ ಎನ್ನುವುದು ಶರೀರದಲ್ಲಿ ಗುಣರೂಪದಲ್ಲಿ ಇದ್ದರೂ, ಶರೀರದ ಹೊರಗೆ ಹಣವನ್ನು ತೋರಿಸುತ್ತಾ ಗುಣಗಳಲ್ಲಿ ಮುಳುಗಿಸುತ್ತಿದೆ. ಹೊರಗೆ ದೊಡ್ಡ ಮಾಯೆಯಾಗಿ ಕಾಣಿಸುವ ಹಣಕ್ಕೆ ಮನುಷ್ಯ ಒಳಗಾಗಿ ತನ್ನ ಜೀವನವನ್ನಾಗಲಿ, ಜೀವನವನ್ನು ಕೊಟ್ಟಿರುವ ದೇವರನ್ನಾಗಲಿ, ದೈವಜ್ಞಾನವನ್ನಾಗಲಿ ವಿಸ್ಮರಿಸಿ ಬದುಕುತ್ತಿದ್ದಾನೆ. ಹಣಕ್ಕೋಸ್ಕರವೇ ಮನುಷ್ಯ ಎಲ್ಲ ಚಿಂತೆಗಳೂ ಮಾಡುತ್ತಾ, ಕೊನೆಗೆ ತನ್ನ ಆತ್ಮವನ್ನು ಕುರಿತಾಗಲೀ, ತನ್ನನ್ನು ಕುರಿತಾಗಲೀ ಮರೆತುಹೋಗಿ ಪ್ರಪಂಚದಲ್ಲಿ ಬದುಕುತ್ತಿದ್ದಾನೆ.

ಹೀಗೆ ನಡೆಯುತ್ತಿರುವ ಕಾಲದಲ್ಲಿ ಯುಕ್ತ ವಯಸ್ಸಿಗೆ ಬಂದಿರುವ ರಾಘವ ತನ್ನ ಜೀವನದಲ್ಲಿ ಹೆಜ್ಜೆ ಇಟ್ಟಿದ್ದಾನೆ. ರಾಘವನಿಗೆ ತನ್ನ ತಾಯಿ ತಂದೆಯರು ಚಿಕ್ಕ ವಯಸ್ಸಿನಲ್ಲಿಯೇ ಮರಣಿಸಿರುವುದರಿಂದ ಆತನು ಜೀವನದಲ್ಲಿ ಒಬ್ಬಂಟಿಗನಾಗಿದ್ದಾನೆ. ರಾಘವನಿಗೆ ಶರೀರ ಬಲ ಇದೆ, ಹಾಗೇ ಬುದ್ಧಿ ಬಲವೂ ಇದೆ. ಒಂದು ಧನ(ಹಣದ) ಬಲ ಮಾತ್ರ ಇಲ್ಲ. ಭೂಮಿ ಮೇಲೆ ಎಲ್ಲರ ದೃಷ್ಟಿ ಹಣ ಬಲದ ಮೇಲೆಯೇ ಇರುವುದರಿಂದ, ರಾಘವ ಸುಂದರವಾದ ಶರೀರವುಳ್ಳವನಾದರೂ, ಎಲ್ಲರಿಗಿಂತ ಎಷ್ಟೋ ಹೆಚ್ಚಿನ ಬುದ್ಧಿ ಇರುವವನಾದರೂ, ಆತನನ್ನು ಉಳಿದವರು ಸ್ವಲ್ಪವಾದರೂ ಲೆಕ್ಕಿಸದೆ, ಯಾವುದಕ್ಕೂ ಬೆಲೆ ಕೊಡದೆ ಹೋಗುವುದಲ್ಲದೆ ಆತನನ್ನು ಗೌರವದಿಂದ ಸಹ ಮಾತನಾಡಿಸುವವರಲ್ಲ. ರಾಘವನಿಗೆ ಆಸ್ತಿ ಇಲ್ಲವೆಂದು ಆತನನ್ನು ಕಡಿಮೆ ಭಾವನೆಯಿಂದ ನೋಡುವುದಲ್ಲದೆ, ಆತನಿಗೆ ಹುಡುಗಿಯನ್ನು ಕೊಟ್ಟು ಮದುವೆ

ಮಾಡುವುದಕ್ಕೂ ಸಹ ಹಿಂಜರಿಯುತ್ತಿದ್ದರು. ತನಗೆ ಹೊರಗಿನ ಸಮಾಜದಲ್ಲಿ ಯಾವುದಕ್ಕೂ ಬೆಲೆ ಇಲ್ಲವೆಂದು ಗ್ರಹಿಸಿದ ರಾಘವ, ಅಂತಹ ಮನುಷ್ಯರೊಂದಿಗೆ ತನಗೆ ಯಾವುದೇ ಕೆಲಸವಿಲ್ಲ ಎಂದುಕೊಂಡಿದ್ದಾನೆ. ಇನ್ನು ಇಂತಹ ಸಮಾಜದಲ್ಲಿ ಇರಲಾರೆನೆಂದುಕೊಂಡಿದ್ದಾನೆ. ಈ ಸಮಾಜವನ್ನು ಬಿಟ್ಟು ದೂರವಾಗಿ ಹೋಗಬೇಕೆಂದುಕೊಂಡಿದ್ದಾನೆ. ಆಗಲೇ ಆತನ ತಲೆಯಲ್ಲಿ ಎಷ್ಟೋ ಯೋಚನೆಗಳು ಪ್ರಶ್ನೆಗಳ ರೂಪದಲ್ಲಿ ಬಂದಿವೆ. “ಈ ಮಾನವ ಜಾತಿ ಏಕೆ ಸೃಷ್ಟಿಸಲ್ಪಟ್ಟಿದೆ? ಈ ಮಾನವ ಜಾತಿಯಲ್ಲೇ ಇಷ್ಟು ವಿಧಗಳ ದುಷ್ಕೃತ್ಯಗಳು, ಕುತಂತ್ರಗಳು ಏಕೆ ಇವೆ? ಸಹಪಾಟಿಯನ್ನು ವ್ಯಕ್ತಿಯಾಗಿ ಗುರುತಿಸದೆ ಹಣವನ್ನು ಅನುಸರಿಸಿ ಮರ್ಯಾದೆ ಕೊಡುವುದು ಏಕೆ? ದೇವರು ಏಕೆ ಇಂತಹ ಮನುಷ್ಯರನ್ನು ಸೃಷ್ಟಿಸಿದ್ದಾನೆ? ದೇವರು ಎಲ್ಲರಿಗೂ ಸಮಾನವಾದವನಾದರೆ ಎಲ್ಲರನ್ನೂ ಸಮಾನವಾಗಿ ಸೃಷ್ಟಿಸದೆ ಕೆಲವರನ್ನು ಧನಿಕರಾಗಿ, ಕೆಲವರನ್ನು ಹಣ ಇಲ್ಲದವರಾಗಿ ಏಕೆ ಸೃಷ್ಟಿಸಬೇಕು? ವಾಸ್ತವಕ್ಕೆ ಮನುಷ್ಯರಿಗೆ ದೇವರು ಸಮಾನನಾ? ಅಥವಾ ದೇವರಿಗೆ ಮನುಷ್ಯರು ಸಮಾನರಾ? ಪ್ರಪಂಚದಲ್ಲಿ ನಡೆಯುತ್ತಿರುವುದನ್ನನುಸರಿಸಿ ನೋಡಿದರೆ ಹಣವಿರುವ ದೇವರಿಗೇ ಮನುಷ್ಯನ ಹತ್ತಿರ ಮರ್ಯಾದೆ ಇದೆ. ಹಣವಿಲ್ಲದ ದೇವರಿಗೂ ಸಹ ಮರ್ಯಾದೆ ಇಲ್ಲ. ಹಾಗೇ ಹಣವಿರುವ ಧನಿಕನಿಗೇ ದೇವರ ಹತ್ತಿರ ಮರ್ಯಾದೆ ಇದೆ, ಹಣ ಇಲ್ಲದವನಿಗೆ ದೇವರ ಹತ್ತಿರ ದರ್ಶನ ಸಹ ಸಿಗುವುದಿಲ್ಲ. ಈ ವಿಷಯ ಎಷ್ಟೋ ದೇವಾಲಯಗಳಲ್ಲಿ ಕಾಣಿಸುತ್ತಲೆ ಇದೆ. ಇದನ್ನನುಸರಿಸಿ ಇತ್ತ ಪ್ರಪಂಚ ವಿಷಯಗಳೇ ಅಲ್ಲದೆ, ಅತ್ತ ದೇವರ ಭಕ್ತಿ ಸಹ ಹಣದಿಂದಲೇ ಮುಡಿಪಟ್ಟಿದೆಯೆಂದು ತಿಳಿಯುತ್ತಿದೆ. ಹಣವಿಲ್ಲದವನ ಬುದ್ಧಿ ಕೆಲಸಕ್ಕೆ ಬರುವುದಿಲ್ಲ. ಹಾಗೇ ಹಣವಿಲ್ಲದವನ ಬಲ ಕೆಲಸಕ್ಕೆ ಬರುವುದಿಲ್ಲ. ಕೇವಲ ಒಂದು ಹಣದಿಂದಲೇ ಬುದ್ಧಿ, ಬಲ ಎರಡೂ ಇಲ್ಲದಿದ್ದರೂ ಎಲ್ಲ ಕೆಲಸಗಳೂ ನೆರವೇರಬಲ್ಲವು. ಇಂತಹ ಹಣ ಮಹಿಮೆ ಇರುವ ಈ ಸಮಾಜದಲ್ಲಿ ಹಣವಿಲ್ಲದ ನಾನು ಇವರೊಂದಿಗೆ ಬದುಕಲಾರೆನು. ಆದ್ದರಿಂದ ನಾನು ಈ ಸಮಾಜವನ್ನು ಬಿಟ್ಟು ಹಣದ ಬೆಲೆ ತಿಳಿಯದ, ಹಣಕ್ಕೆ ಬೆಲೆ ಇಲ್ಲದ ಪ್ರಾಣಿ ಪ್ರಪಂಚವಿರುವ ಅಡವಿಯೊಳಗೆ ಹೋಗಿ ಪ್ರಾಣಿಗಳ ಮಧ್ಯದಲ್ಲಿ ಬದುಕುವುದು ಒಳ್ಳೆಯದು” ಎಂದು ಅಂದುಕೊಂಡನು.

ಈ ಸಮಾಜವನ್ನು ಬಿಟ್ಟುಹೋಗಬೇಕೆಂದುಕೊಂಡ ಕೂಡಲೇ, ರಾಘವ ಅರಣ್ಯ ಮಾರ್ಗವನ್ನು ಹಿಡಿದು ಹೋಗಿದ್ದಾನೆ. ಎಷ್ಟೋ ಬುದ್ಧಿ, ಬಲ ಇರುವ ರಾಘವ ಅರಣ್ಯವನ್ನು ಸೇರಿ ಅಲ್ಲಿ ಲಭಿಸುವ ಫಲಗಳಿಂದ ಹೊಟ್ಟೆ ತುಂಬಿಸಿಕೊಳ್ಳುತ್ತಾ ಪ್ರಕೃತಿ ಸೌಂದರ್ಯಗಳನ್ನು ನೋಡಿ ಆನಂದಪಡುತ್ತಾ, ಮಾನವ ಸಮಾಜದಲ್ಲಿ ಇಲ್ಲದ ಸುಖವನ್ನು ಅಲ್ಲಿ ಅನುಭವಿಸುತ್ತಾ ಪ್ರಶಾಂತವಾಗಿ ಜೀವನವನ್ನು ಕಳೆಯುತ್ತಿದ್ದನು. ರಾಘವ ವಾಸಿಸುತ್ತಿರುವುದು ಭಯಂಕರವಾದ ಅಡವಿ. ಆ ಅಡವಿಯಲ್ಲಿ ಎಷ್ಟೋ ಮೃಗಗಳು ಮನುಷ್ಯನೊಂದರ ಭಯವಿಲ್ಲದೆ ನಿರ್ಭಯವಾಗಿ ಸಂಚರಿಸುತ್ತಿದ್ದವು. ಆ ಅಡವಿಯಲ್ಲಿ ಕೆಲವರು ಚೆಂಚು ಜಾತಿ ಪ್ರಜೆಗಳು ಅಲ್ಲಲ್ಲಿ ಕೆಲವು ಗುಡ್ಡದ ನಿವಾಸಿಗಳು ಸಹ ವಾಸಿಸುತ್ತಿದ್ದಾರೆ. ಅವರು ಸಹ ಹೆಚ್ಚಾಗಿ ಅಡವಿಯಲ್ಲಿ ಸಿಗುವ ಗಡ್ಡೆಗೆಣಸು, ಜೇನುತುಪ್ಪ, ಹಲವು ವಿವಿದ ಹಣ್ಣುಗಳು, ಹಲವು ವಿಧವಾದ ಎಲೆಗಳನ್ನು ತಿನ್ನುತ್ತಾ, ಕೆಲವು ಅಡವಿ ಪ್ರಾಣಿಗಳ ಚರ್ಮಗಳನ್ನು ಬಟ್ಟೆಗಳಾಗಿ ಧರಿಸುತ್ತಾ, ಅಲ್ಲಲ್ಲಿ ಹರಿಯುವ ನೀರನ್ನು ಕುಡಿಯುತ್ತಾ ಹಾಯಾಗಿ ಜೀವಿಸುತ್ತಿದ್ದರು. ಅವರಿಗೆ ಹಣದೊಂದಿಗೆ ಕೆಲಸವೇ ಇಲ್ಲ. ಆದ್ದರಿಂದ ಪ್ರಪಂಚದಲ್ಲಿನ ಮನುಷ್ಯರಂತೆ ಹಣ ಮಾಯೆಯಲ್ಲಿ ಬೀಳದೆ, ಅವಿನೀತಿ, ಅನ್ಯಾಯ ಇಲ್ಲದ ಬದುಕು ಬದುಕುತ್ತಾ ಮನಃಶಾಂತಿಯಾಗಿ ಕಾಲವನ್ನು ಕಳೆಯುತ್ತಿದ್ದರು. ಅಡವಿಯಲ್ಲಿ ಕ್ರೂರಮೃಗಗಳಿದ್ದರೂ ಅವುಗಳ ತಂಟೆಗೆ ಅರಣ್ಯವಾಸಿಗಳು ಹೋಗುತ್ತಿರಲಿಲ್ಲ. ಹಾಗೇ ಅರಣ್ಯವಾಸಿಗಳು ಇರುವ ಕಡೆ ಕ್ರೂರಮೃಗಗಳು ಬರುತ್ತಿರಲಿಲ್ಲ.

ಅಂತಹ ಅಡವಿಯಲ್ಲಿ ರಾಘವ ಒಂಟಿಯಾಗಿ ಅತ್ತ ಕ್ರೂರಮೃಗಗಳಾಗಲೀ, ಇತ್ತ ಚೆಂಚು ಜಾತಿಯವರಾಗಲೀ ಇಲ್ಲದ ಒಂದು ಪ್ರಾಂತದಲ್ಲಿ ಸುಮಾರು ಒಂದು ತಿಂಗಳು ಕಾಲ ಇರುತ್ತಾ ಬಂದಿದ್ದಾನೆ. ಒಂದು ದಿನ ರಾಘವ ವಾಸವಿರುವ ಸ್ಥಳಕ್ಕೆ ದೂರವಾಗಿ ಹುಲಿಘರ್ಜನೆ ಕೇಳಿಸತೊಡಗಿತು. ಆ ಘರ್ಜನಾ ಶಬ್ಧ ಕ್ರಮಕ್ರಮವಾಗಿ ಹತ್ತಿರ ಬರತೊಡಗಿತು. ಆಗ ರಾಘವನಿಗೆ ತನ್ನ ಸಮೀಪ ಪ್ರಾಂತದಲ್ಲಿರುವ ಮೊಲ, ಜಿಂಕೆಗಳು ಬೆದರಿ ಅತ್ತ ಇತ್ತ ಓಡುವುದಕ್ಕೆ ಪ್ರಾರಂಭಿಸಿದವು. ಅಷ್ಟರಲ್ಲಿ ಆರು ಜನ ಇರುವ ಅಡವಿ ನಿವಾಸಿಗಳ (ಗಿರಿಜನರ) ಒಂದು ಗುಂಪು ರಾಘವನಿರುವ ಕಡೆ ಓಡುತ್ತಾ ಬಂದಿದ್ದಾರೆ. ರಾಘವಗೆ ಸಮೀಪವಾಗಿ

ಓಡಿಹೋಗುತ್ತಾ ಅವರು ರಾಘವನನ್ನು ನೋಡಿದ್ದಾರೆ. ಓಡುತ್ತಿರುವ ಆರು ಜನ ಒಂದೇ ಸಲ ನಿಂತು ರಾಘವನನ್ನು ನೋಡಿ ಆಶ್ಚರ್ಯಪಟ್ಟು "ನೀನು ಯಾರು? ಇಲ್ಲಿ ಏಕೆ ಇರುವೆ? ತಕ್ಷಣ ಓಡಿಹೋಗು, ನಾವು ಒಂದು ಹುಲಿಯನ್ನು ಬಾಣದಿಂದ ಹೊಡೆದಿದ್ದೇವೆ, ನಮ್ಮ ಗುರಿ ತಪ್ಪಿ ಹೋಯಿತು. ಹುಲಿ ಕೋಪದಿಂದ ಈಕಡೆನೇ ಬರುತ್ತಿದೆ. ಅದರ ಕಣ್ಣಿಗೆ ಬಿದ್ದರೆ ಸಾಯಿಸುತ್ತದೆ. ಕಾಣಿಸದಂತೆ ಓಡಿಹೋಗು" ಎಂದು ಹೇಳಿ ಅಲ್ಲಿಂದ ವೇಗವಾಗಿ ಓಡಿಹೋಗಿದ್ದಾರೆ. ಅವರ ಮಾತುಗಳು ಕೇಳಿದ ರಾಘವ ವಿಧಿಯಿಲ್ಲದೆ ಅವರ ಹಿಂದೆನೆ ಓಡಿದನು. ಹಾಗೆ ಸ್ವಲ್ಪ ದೂರ ಹೋದ ನಂತರ ರಾಘವ ದಾರಿ ತಪ್ಪಿಹೋದನು. ಗಿರಿಜನರು ಒಂದು ಕಡೆ ಹೋದರೆ, ರಾಘವ ಅವರ ಜಾಡು ತಿಳಿಯದೆ ಮತ್ತೊಂದು ಕಡೆ ಹೋಗಿದ್ದಾನೆ. ಹಾಗೆ ದಾರಿ ತಪ್ಪಿಹೋದ ರಾಘವ ಸುಸ್ತಾಗಿ ನಿದಾನವಾಗಿ ನಡೆಯುತ್ತಾ ಹೋಗುತ್ತಿದ್ದನು. ಹಾಗೆ ನಿದಾನವಾಗಿ ನಡೆಯುತ್ತಾ, ಇನ್ನು ನನಗೆ ತಾಳ್ಮೆ ಇಲ್ಲ ಒಂದು ಕಡೆ ಕುಳಿತುಕೊಳ್ಳಬೇಕೆಂದುಕೊಂಡ ಸಮಯದಲ್ಲಿ, ಅಲ್ಲಿಯವರೆಗು ಅಟ್ಟಿಸಿಕೊಂಡು ಬರುತ್ತಿದ್ದ ಹುಲಿ ರಾಘವನಿಗೇ ಎದುರಾಯಿತು.

ಆ ಸಮಯದಲ್ಲಿ ಹುಲಿಯನ್ನು ನೋಡಿದ ರಾಘವ ವಿಧಿಯಿಲ್ಲದೆ ಇರುವಕಡೆಯೇ ಕದಲದಂತೆ ನಿಂತುಹೋಗಿದ್ದಾನೆ. ರಾಘವನನ್ನು ನೋಡಿದ ಹುಲಿ ಕೋಪದಿಂದ ಭಯಂಕರವಾಗಿ ಘರ್ಜಿಸಿ ರಾಘವನ ಮೇಲೆ ಬರತೊಡಗಿತು. ಎರಡು ಹೆಜ್ಜೆ ಮುಂದಕ್ಕೆ ಹಾಕಿದ ಹುಲಿಗೆ ಕರೆಂಟ್‌ಷಾಕ್ ಹೊಡೆದಂತಾಗಿ ನಾಲ್ಕು ಅಡಿ ಹಿಂದಕ್ಕೆ ಎಗರಿಬಿತ್ತು. ಹಾಗೆ ಎಗರಿಬಿದ್ದ ಹುಲಿ ಎರಡನೆ ಸಲ ಇನ್ನು ಜೋರಾಗಿ ಘರ್ಜಿಸುತ್ತಾ ರಾಘವ ಮೇಲೆ ಬರತೊಡಗಿತು. ಎರಡನೆಬಾರಿ ಕೂಡಾ ಹುಲಿಗೆ ಅದೇ ಅನುಭವ ಎದುರಾಯಿತು. ಈ ಸಲ ಹುಲಿ ಭಯಪಟ್ಟು ಹಿಂತಿರುಗಿ ಓಡಿ ಹೋಯಿತು. ನಡೆದ ಸಂಘಟನೆ ರಾಘವನಿಗೆ ಹೊಸ ಅನುಭವವನ್ನು ಕೊಟ್ಟಿತು. ಆಗ ನಡೆದ ವಿಚಿತ್ರ ಸಂಘಟನೆಯನ್ನು ಆಲೋಚಿಸುತ್ತಾ ರಾಘವ ತಾನು ನಿಂತಿರುವ ಸ್ಥಳ, ಮರದ ನೆರಳಿನಲ್ಲಿ ತಣ್ಣಗೆ ಇರುವುದರಿಂದ ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಳ್ಳುವ ಸಲುವಾಗಿ ಆ ಮರದ ಮುಂಭಾಗದಲ್ಲಿ ಕುಳಿತುಕೊಂಡಿದ್ದಾನೆ. ಹುಲಿ ತನ್ನ ಮೇಲೆ ಎರಗಿದ್ದು, ಏನೋ ಪೆಟ್ಟಾದಂತೆ ಏಕೆ

ಹಿಂತಿರುಗಿ ಹೋಯಿತೋ ಅರ್ಥವಾಗದೆ, ಆಲೋಚಿಸುತ್ತಾ ನಿಧಾನವಾಗಿ ನಿದ್ರೆಯೊಳಗೆ ಜಾರಿಕೊಂಡಿದ್ದಾನೆ. ಆತನು ಮಧ್ಯಾಹ್ನ ಎರಡು ಗಂಟೆಗಳಿಗೆ ಮಲಗಿಕೊಂಡು ಪುನಃ ಸಾಯಂಕಾಲ ಆರು ಗಂಟೆಗೆ ನಿದ್ರೆಯಿಂದ ಎಚ್ಚರವಾಗಿದ್ದಾನೆ. ಪೂರ್ತಿ ಸಾಯಂಕಾಲ ಕತ್ತಲಾಗುವ ಸಮಯವಾದ್ದರಿಂದ ಆ ರಾತ್ರಿಗೆ ಅಲ್ಲೇ ಇರುವುದು ಒಳ್ಳೆಯದೆಂದುಕೊಂಡಿದ್ದಾನೆ.

***********************************

ಓಡುತ್ತಿರುವ ಗಿರಿಜನರು ತಪ್ಪಿಹೋದ ರಾಘವನನ್ನು ಕುರಿತು ಚಿಂತಿಸಿ ಹುಲಿಗೆ ಸಿಕ್ಕಿದ್ದಾನೇನೋ ಎಂದು ತಿಳಿದುಕೊಳ್ಳುತ್ತಾ ತಮ್ಮ ನಿವಾಸಕ್ಕೆ ಸೇರಿದರು. ಅಡವಿಯಲ್ಲಿ ಹೊಸ ಮನುಷ್ಯ ಕಾಣಿಸಿದಹಾಗೆ ತಮ್ಮ ಪ್ರಾಂತ್ಯದ ನಾಯಕನಿಗೆ ತಿಳಿಸಿದ್ದಾರೆ. ಹುಲಿ ಹಿಂಬಾಲಿಸುತ್ತಿರುವ ಸಮಯದಲ್ಲಿ ಆತನನ್ನು ತಮ್ಮ ಹಿಂದೆ ಕರೆದುಕೊಂಡು ಬರಬೇಕೆಂದುಕೊಂಡರು ಆಗಲಿಲ್ಲವೆಂದು, ಆತನು ಅಡವಿಯಲ್ಲಿ ತಪ್ಪಿಸಿಕೊಂಡಿದ್ದಾನೆಂದು ಹೇಳಿದಾಗ, ಅವರ ನಾಯಕನು ಆ ಮಾತುಗಳಿಗೆ ಸ್ಪಂದಿಸಿ "ಆತನು ಯಾರೋ, ಏಕೆ ಅಡವಿಯೊಳಗೆ ಬಂದಿದ್ದಾನೋ ತಿಳಿಯದೆನ್ನುತ್ತಿದ್ದೀರ. ಈ ಅಡವಿಯಲ್ಲಿ ಒಂಟಿಯಾಗಿ ಬದುಕುವುದು ಕಷ್ಟ. ಯಾವ ಮೃಗ ಯಾವಾಗಾದರೂ ದಾಳಿಮಾಡಿ ಸಾಯಿಸಬಲ್ಲದು. ನಮಗೆ ತಿಳಿದು ಸುಮ್ಮನಿರುವುದು ಚೆನ್ನಾಗಿರುವುದಿಲ್ಲ. ನೀವು ಹೋಗಿ ಆತನು ಕಾಣಿಸಿದರೇ ಇಲ್ಲಿಗೆ ಕರೆದುಕೊಂಡು ಬನ್ನಿ" ಎಂದು ಹೇಳಿದ್ದಾನೆ. ಆ ಮಾತು ಕೇಳಿದ ಅಡವಿ ಸಂಚರು ತಮ್ಮ ನಾಯಕನ ಮಾತಿನ ಪ್ರಕಾರ ಎರಡನೆ ದಿನ ಪ್ರಾತಃ ಕಾಲದಲ್ಲೇ ಹೊರಟು ರಾಘವನನ್ನು ಹುಡುಕುತ್ತಾ ಅಡವಿಯೊಳಗೆ ಹೋಗಿದ್ದಾರೆ. ಹಾಗೆ ಹುಡುಕುತ್ತಾ ಹೋದಾಗ ಕೊನೆಗೆ ರಾಘವ ಇರುವ ಸ್ಥಳಕ್ಕೆ ಸೇರಿ ರಾಘವನೊಂದಿಗೆ ತಮ್ಮ ನಾಯಕನ ಮಾತನ್ನು ತಿಳಿಸಿದ್ದಾರೆ. ಅವರ ಮಾತುಗಳು ಕೇಳಿದ ರಾಘವನಿಗೆ ಪ್ರಸ್ತುತಕ್ಕೆ ಅವರ ಹಿಂದೆ ಹೋಗುವುದೇ ಒಳ್ಳೆಯದೆನಿಸಿತು.

ಆಗ ಹುಲಿ ವಿಷಯವನ್ನು ಕುರಿತು ರಾಘವನನ್ನು ಕೇಳಿದಾಗ! ಹುಲಿ ತನ್ನ ಮೇಲೆ ದಾಳಿಮಾಡಿದ ವಿಷಯವೂ, ಅದು ಓಡಿಹೋದ ವಿಷಯವೂ,

ಎಲ್ಲವನ್ನೂ ಮಣಿಪೋಣಿಸಿದ ಹಾಗೆ ರಾಘವ ಅವರಿಗೆ ತಿಳಿಸಿದ್ದಾನೆ. ಆ ವಿಷಯವನ್ನು ಕೇಳಿದ ಗಿರಿಜನರು ರಾಘವನಿಗೆ ನೆರಳನ್ನು ಕೊಟ್ಟಿರುವ ವೃಕ್ಷವೇ ಹುಲಿಯಿಂದ ಕಾಪಾಡಿದೆಯೆಂದು ಹೇಳಿದ್ದಾರೆ. ಅದಕ್ಕೆ ರಾಘವ ಆಶ್ಚರ್ಯಪಟ್ಟು "ಈ ವೃಕ್ಷದಲ್ಲಿ ಅಷ್ಟು ಮಹತ್ವವಿದೆಯಾ? ನನ್ನನ್ನು ಹೇಗೆ ಕಾಪಾಡಿದೆ" ಎಂದು ಕೇಳಿದ್ದಾನೆ. ರಾಘವ ಮಾತುಗಳನ್ನು ಕೇಳಿದ ಅಡವಿ ಮನುಷ್ಯರಲ್ಲಿ ಒಬ್ಬನು "ಈ ಮರದ ನೆರಳು ಹುಲಿಗೆ ಶತ್ರುವಿನಂತದ್ದು. ಈ ವೃಕ್ಷದ ಹೆಸರು ವ್ಯಾಘ್ರಶತ್ರುವು. ಇದರ ನೆರಳಲ್ಲಿ ಹುಲಿ ಬರುವುದಿಲ್ಲ. ಒಂದು ವೇಳೆ ಬಂದಂತಾದರೆ ಅದಕ್ಕೆ ದೊಡ್ಡ ಏಟು ತಾಕಿದಂತಾಗುತ್ತದೆ. ಯಾರೋ ಹೊಡೆದಷ್ಟು ಬಾಧೆಯಿಂದ ಹಿಂತಿರುಗಿ ಓಡಿಹೋಗುತ್ತದೆ ಹೊರತು ಮುಂದಕ್ಕೆ ಬರುವುದಿಲ್ಲ. ಈ ವೃಕ್ಷದ ವಿಷಯ ನಮ್ಮ ಪ್ರಾಂತ್ಯದೊಳಗಿನವರೆಲ್ಲರಿಗೂ ಗೊತ್ತು. ನಾವು ಅಡವಿಯಲ್ಲಿ ಸಂಚರಿಸುವಾಗ ಹುಲಿ ಪಂಜಾ ನಮ್ಮ ಮೇಲೆ ಬೀಳದಂತೆ, ಅದು ನಮ್ಮನ್ನು ಸಮೀಪಿಸದಂತೆ ಇರುವುದಕ್ಕೆ, ಈ ವೃಕ್ಷದ ಬೇರನ್ನು ತಾಯತಗಳಲ್ಲಿ ಇಟ್ಟುಕೊಂಡು ನಮ್ಮ ಕೈಯಿಗೆ ಕಟ್ಟಿಕೊಂಡಿರುತ್ತೇವೆ. ಯಾವಾಗಾದರೂ ಬಹಳ ಪ್ರಮಾದ ಸಮಯದಲ್ಲಿ ತಾಯತವನ್ನು ತೆಗೆದು ಕೈಯಲ್ಲಿಟ್ಟುಕೊಂಡರೆ ಹುಲಿ ನಮ್ಮ ಹತ್ತಿರಕ್ಕೆ ಬರಲಾರದು. ಈ ವೃಕ್ಷದ ಎಲೆಗಳ ರಸವನ್ನು ನಮ್ಮ ಬಾಣಗಳಿಗೆ ಹಚ್ಚಿ, ಹುಲಿಗಳನ್ನು ನಮ್ಮ ಪ್ರಾಂತ್ಯದ ಹತ್ತಿರಕ್ಕೆ ಬರದಂತೆ ಹೊಡೆದು ಓಡಿಸುತ್ತೇವೆ. ನಮ್ಮ ಬಾಣದಿಂದ ತಾಕಿದ ಚಿಕ್ಕ ಗಾಯವಾದರೂ ಈ ಗಿಡದ ಔಷಧದ ಪ್ರಭಾವದಿಂದ ಹುಲಿಯನ್ನು ಹೆಚ್ಚಾಗಿ ಬಾಧಿಸುತ್ತದೆ. ಈ ವೃಕ್ಷವನ್ನು ನಾವು ಹುಲಿಗಳಿಂದ ಕಾಪಾಡುವ ಅಡವಿ ದೇವತೆಯಾಗಿ ಭಾವಿಸಿ ಪೂಜಿಸುತ್ತೇವೆ. ನಮ್ಮ ಆರಾಧ್ಯ ದೇವತೆಯಾದ 'ಭೈರಿಕಾತಾಯಿ' ಈ ಗಿಡದ ಮೇಲೆ ನಿವಾಸಿಸುತ್ತಿರುತ್ತಾಳೆಂದು ನಮ್ಮ ಹಿರಿಯರು ಹೇಳುತ್ತಿರುತ್ತಾರೆ. ನಿನ್ನನ್ನು ಆ ಭೈರಿಕಾ ದೇವಿಯೇ ಕಾಪಾಡಿದ್ದಾಳೆ" ಎಂದನು. ಆತನ ಮಾತು ಕೇಳಿದ ರಾಘವ ಆಶ್ಚರ್ಯಪಟ್ಟು ಹೀಗೆ ಹೇಳಿದ್ದಾನೆ.

**ರಾಘವ :–** ಈ ಮರದಲ್ಲಿ ಅಷ್ಟು ಪ್ರಭಾವವಿರುವ ಮಾತು ನಿಜ. ನಿನ್ನೆ ಹುಲಿ ಓಡಿಹೋದ ಸಂಘಟನೆಯನ್ನು ನೋಡಿದರೆ, ಈ ಮರದಲ್ಲಿ ಪ್ರಭಾವವಿದೆಯೆಂದು ಯಾರಾದರೂ ಹೇಳಬಲ್ಲರು.

**ಗಿರಿಜನರು :–** ನೀನು ಯಾರು? ಏಕೆ ಈ ಅಡವಿಯಲ್ಲಿ ಇದ್ದೀಯ?

**ರಾಘವ :–** ನಾನು ಜನಾರಣ್ಯದಲ್ಲಿಂದ ವನಾರಣ್ಯದೊಳಗೆ ಬೇಕೆಂದೇ ಬಂದಿದ್ದೇನೆ. ನನಗೆ ಮನುಷ್ಯರ ಮನೋ ಭಾವನೆಗಳು ಸರಿಹೋಗದೆ ಇಲ್ಲಿಗೆ ಬಂದಿದ್ದೇನೆ. ನಾನು ಬಂದು ಕೇವಲ ಒಂದು ತಿಂಗಳ ದಿನಗಳಾಗಿವೆ. ಅಷ್ಟರಲ್ಲೇ ಈ ಸಂಘಟನೆ ನಡೆದಿದೆ.

**ಗಿರಿಜನರು :–** ನೀನು ಅರಣ್ಯದಲ್ಲಿ ಇರಬೇಕೆಂದರೆ ಒಂಟಿಯಾಗಿ ಇರುವುದಕ್ಕೆ ಆಗುವುದಿಲ್ಲ. ಯಾವ ಪ್ರಾಣಿಯಿಂದಾದರೂ ಪ್ರಮಾದ ನಡೆಯಬಹುದು. ಆದ್ದರಿಂದ ನೀನು ನಮ್ಮ ನಿವಾಸದೊಳಗೆ ಬಂದು ಇರುವುದು ಒಳ್ಳೆಯದಾಗುತ್ತದೆ.

**ರಾಘವ :–** ಸರಿ! ನಿಮ್ಮ ಹಿಂದೆ ನೀವಿರುವ ನಿವಾಸಕ್ಕೆ ಬರುತ್ತೇನೆ.

(ಎಲ್ಲರೂ ಸೇರಿ ಅವರ ನಿವಾಸಕ್ಕೆ ಹೋದರು. ಆ ಪ್ರಾಂತ್ಯಕ್ಕೆ ಕುಲ ಹಿರಿಯನಾದ ಮಲ್ಲು ದೊರೆಗೆ ರಾಘವನನ್ನು ಅಲ್ಲಿರುವವರು ಪರಿಚಯ ಮಾಡಿದ್ದಾರೆ. ರಾಘವ ಬುದ್ಧಿವಂತನಾದ್ದರಿಂದ, ಅಲ್ಲಿರುವವರಿಂದ ಅಡವಿಗೆ ಸಂಬಂಧಿಸಿದ ಕೆಲವು ವೃಕ್ಷಗಳನ್ನು, ವೃಕ್ಷಗಳ ಶಕ್ತಿಗಳನ್ನು ಕುರಿತು ತಿಳಿದುಕೊಳ್ಳಬೇಕೆಂದುಕೊಂಡಿದ್ದಾನೆ. ನಾಲ್ಕು ದಿನಗಳ ನಂತರ ಆ ಪ್ರಾಂತಕ್ಕೆ ಹಿರಿಯನಾದ ಮಲ್ಲುದೊರೆ ಯೊಂದಿಗೆ ಚೆನ್ನಾಗಿ ಪರಿಚಯ ಮಾಡಿಕೊಂಡಿದ್ದಾನೆ. ರಾಘವನ ಮೇಲೆ ಮಲ್ಲುದೊರೆಗೆ ಒಳ್ಳೆ ಅಭಿಮಾನ ಬೆಳೆಯಿತು. ಹಾಗೆ ಇರುವ ಸಮಯದಲ್ಲಿ ಮಲ್ಲುದೊರೆಯನ್ನು ರಾಘವ ಕೇಳುವುದಕ್ಕೆ ಆರಂಭಿಸಿದನು.)

**ರಾಘವ :–** ಅಯ್ಯಾ! ಈ ಅಡವಿಯಲ್ಲಿ ವ್ಯಾಘ್ರಶತ್ರು ವೃಕ್ಷದಂತೆ ಮತ್ತೆ ಯಾವಾದರೂ ಮಹತ್ವವಿರುವ ಮರಗಳಿವೆಯಾ?

**ಮಲ್ಲುದೊರೆ :–** ಎಷ್ಟೋ ಇವೆ. ಕೆಲವು ಮರಗಳಿವೆ, ಮತ್ತೆ ಕೆಲವು ಬಳ್ಳಿಗಳು ಇವೆ. ಅಂತಹ ಮರಗಳನ್ನು ನಾವು ಗೌರವಿಸಿ ಪೂಜಿಸುತ್ತೇವೆ. ಅಂತಹ ಮರದ ಎಲೆಗಳನ್ನು ಕೀಳಬೇಕೆಂದರೂ, ಇಲ್ಲವೆ ಬಳ್ಳಿಗಳನ್ನು ತಂದುಕೊಳ್ಳಬೇಕೆಂದರೂ ಮೊದಲು ಅವುಗಳಿಗೆ ಪೂಜೆಮಾಡಿ ನಂತರ ಆ ಮರಗಳನ್ನು ಮುಟ್ಟಿಕೊಳ್ಳುತ್ತೇವೆ. ಅವು ನಮಗೆ ದೇವತೆಗಳೊಂದಿಗೆ ಸಮಾನ. ಅವುಗಳಿಂದಲೇ ನಾವು ರೋಗಗಳ ಬಲೆಯಲ್ಲಿ ಬೀಳದೆ ಆರೋಗ್ಯವಾಗಿ ಇದ್ದೇವೆ.

**ರಾಘವ :–** ಬಾಯಿ ಇಲ್ಲದ ಮರಗಳು, ನಡೆಯಲಾರದ ಬಳ್ಳಿಗಳು, ಬಾಯಿರುವ ಮನುಷ್ಯರಿಗೆ ಇಷ್ಟು ಒಳ್ಳೆಯದು ಮಾಡುತ್ತಿವೆಯಾ?

**ಮಲ್ಲುದೊರೆ :–** ಎಲ್ಲಾ ಇರುವ ಮನುಷ್ಯ ಮತ್ತೊಬ್ಬ ಮನುಷ್ಯನನ್ನು ಕಾಪಾಡದೆ ಹೋದರೂ, ಸಹಾಯ ಮಾಡದೆ ಹೋದರೂ, ಬಾಯಿಲ್ಲದ ಮರಗಳೆ ಮನುಷ್ಯನನ್ನು ಎಷ್ಟೋ ವಿಧಗಳಲ್ಲಿ ಕಾಪಾಡುತ್ತಿವೆ.

**ರಾಘವ :–** ಅಯ್ಯಾ! ನನಗೆ ನೀವು ಹೇಳುವ ವಿಷಯಗಳು ಎಷ್ಟೋ ಆಶ್ಚರ್ಯವಾಗಿ ಇವೆ. ಎಷ್ಟೋ ಶ್ರೇಷ್ಠವಾದ ಈ ಮರಗಳನ್ನು ಕುರಿತು ತಿಳಿದುಕೊಳ್ಳಬೇಕೆನಿಸುತ್ತಿದೆ. ದಯಮಾಡಿ ನನಗೆ ಮುಖ್ಯವಾದ ಮರಗಳನ್ನು ಕುರಿತು, ಅವುಗಳ ಕೆಲಸದ ಫಲಿತಾಂಶಗಳನ್ನು ಕುರಿತು ತಿಳಿಸುವಿರೆಂದು ಕೋರುತ್ತಿದ್ದೇನೆ.

**ಮಲ್ಲುದೊರೆ :–** ಒಂದೊಂದು ಮರ ಒಂದೊಂದು ಮೂಲಿಕಾಶಕ್ತಿ ಹೊಂದಿರುವುದು ಸಹಜ. ಔಷಧವಲ್ಲದ ಎಲೆ ಯಾವುದೂ ಭೂಮಿಮೇಲೆ ಇಲ್ಲ.

ಪ್ರತಿ ಮರದ ಎಲೆ ಒಂದು ರೋಗಕ್ಕೆ ಔಷಧವಾಗಿ ಕೆಲಸ ಮಾಡುತ್ತದೆ. ಅವುಗಳನ್ನು ಕುರಿತು ನಿಧಾನವಾಗಿ ನೀನು ಇಲ್ಲೇ ಇದ್ದು ತಿಳಿದುಕೊಳ್ಳುತ್ತೀಯ. ಆದರೆ ನಮಗೂ ಸಹ ಅಂತ್ಯಸಿಗದ ಒಂದು ಮರ ಇದೆ. ಆ ಜಾತಿ ಮರಗಳು ಎಷ್ಟೋ ಅಡವಿಯಲ್ಲಿ ಇವೆ. ಆದರೆ ಅವುಗಳಲ್ಲಿ ಯಾವುದಕ್ಕೂ ಇಲ್ಲದ ಒಂದು ಪ್ರತ್ಯೇಕ ಶಕ್ತಿ ಆ ಒಂದು ಮರಕ್ಕೆ ಮಾತ್ರ ಇದೆ.

**ರಾಘವ :–** ಯಾವುದು ಆ ಮರ? ಎಲ್ಲಿದೆ? ಅದಕ್ಕೆ ಇರುವ ಪ್ರತ್ಯೇಕತೆ ಏನು? ವಿವರವಾಗಿ ಹೇಳಿ.

**ಮಲ್ಲುದೊರೆ :–** ಅದು ನೋಡುವುದಕ್ಕೆ ಸಾಧಾರಣ ಆಲದ ಮರ. ಈ ಅಡವಿಯಲ್ಲಿ ಎಷ್ಟೋ ಆಲದ ಮರಗಳಿದ್ದರೂ ಅವುಗಳಿಗಿಂತ ಅದು ಒಂದೇ ವಿಭಿನ್ನವಾಗಿ ಇದೆ. ಆ ಮರದಲ್ಲಿ ಯಾವ ಪ್ರಭಾವವಿದೆಯೋ ಆಗಲೀ, ಆ ಮರದ ಹತ್ತಿರಕ್ಕೆ ಹೋದವರಿಗೆ ರೋಗಗಳು ಹೋಗುತ್ತಿವೆ. ದೆವ್ವಗಳು ಹಿಡಿದವರು ಅಲ್ಲಿಗೆ ಹೋದರೆ ದೆವ್ವಗಳು ಹೋಗಿ ಆರೋಗ್ಯವಂತರಾಗುತ್ತಿದ್ದಾರೆ. ಆ ಮರದ ಎಲೆಗಳನ್ನು ತಂದು ತಲೆಮೇಲೆ ಇಟ್ಟುಕೊಂಡು ನಿದ್ರೆ ಮಾಡಿದರೆ ತಲೆಗೆ ಸಂಬಂಧಿಸಿದ ರೋಗಗಳೆಲ್ಲವೂ ಹೋಗಿವೆ. ಹೀಗೆ ಆ ಮರಕ್ಕೆ ಎಷ್ಟೋ ಮಹಿಮೆಗಳು ಇವೆ.

**ರಾಘವ :–** ನೀವು ಹೇಳುತ್ತಿದ್ದಂತೆ ನನ್ನ ಮನಸ್ಸಿನಲ್ಲಿ ಆ ಮರವನ್ನು ನೋಡಬೇಕೆನಿಸುತ್ತಿದೆ. ದಯಮಾಡಿ ಆ ಮರವನ್ನು ತೋರಿಸುತ್ತೀರಾ?

**ಮಲ್ಲುದೊರೆ :–** ನೀನು ನೋಡುತ್ತೇನೆಂದರೆ ನಾವು ಏಕೆ ತೋರಿಸುವುದಿಲ್ಲ? ಈಗಲೆ ಹೊರಟು ಹೋಗೋಣ ನಡೆ.

(ಆ ವಿಧವಾಗಿ ಇಬ್ಬರೂ ಹೊರಟು ಆ ಹಟ್ಟಿಗೆ ಸ್ವಲ್ಪ ದೂರದಲ್ಲೇ ಇರುವ ಆಲದ ಮರ ಹತ್ತಿರಕ್ಕೆ ಸೇರಿಕೊಂಡಿದ್ದಾರೆ. ಅಲ್ಲಿಗೆ ಸೇರಿದ ರಾಘವ ಆಶ್ಚರ್ಯವಾಗಿ ಆ ಮರವನ್ನು ನೋಡುತ್ತಿದ್ದಾನೆ. ನೋಡುವುದಕ್ಕೆ ಸರ್ವ ಸಾಧಾರಣವಾಗಿರುವ ಆಲದ ಮರ ಅನೇಕ ಶಾಖೋಪಶಾಖೆಗಳಾಗಿ ಕೆಲವು ಬೇರುಗಳು ಕೊಂಬೆಗಳು ಸಹ ಕೆಳಗೆ ಇಳಿದಿವೆ. ಅಷ್ಟೇ ಅಲ್ಲದೆ ಆ ಮರಕ್ಕೆ ಪೂರ್ವ ದಿಕ್ಕಿನಲ್ಲಿ ಮೊದಲ ಮರದ ಹತ್ತಿರವೆ ಹೂತಿಟ್ಟಿರುವ ಶೂಲ, ಪಾದುಕೆಗಳು ರಾಘವನಿಗೆ ಕಾಣಿಸಿವೆ. ಪಾದುಕೆಗಳನ್ನು ಶೂಲವನ್ನು ನೋಡಿದ ರಾಘವ ಅವುಗಳ ವಿಷಯವನ್ನು ತಿಳಿದುಕೊಳ್ಳುವುದಕ್ಕೆ ಈ ವಿಧವಾಗಿ ಪ್ರಶ್ನಿಸಿದ್ದಾನೆ.)

**ರಾಘವ :–** ಅಯ್ಯಾ! ಇಲ್ಲಿರುವ ಪಾದುಕೆಗಳು ಯಾರವು? ಈ ಶೂಲ ಯಾರದು?

**ಮಲ್ಲುದೊರೆ :–** ಈ ಪಾದುಕೆಗಳು, ಶೂಲ ಎರಡೂ ಒಬ್ಬ ಮುನೀಶ್ವರನವು. ಇವು ಬಹಳ ಕಾಲದಿಂದ ಇಲ್ಲೇ ಇವೆ. ಇವುಗಳನ್ನು ನಾವು ಪೂಜಿಸುತ್ತಿರುತ್ತೇವೆ. ಇವುಗಳನ್ನು ಉಪಯೋಗಿಸಿದ ಮುನಿ ಇಲ್ಲೇ ಯೋಗ ಮಾಡುತ್ತಿದ್ದಾನೆಂದು ನಮ್ಮ ಹಿರಿಯರು ಹೇಳಿದ್ದಾರೆ. ನಾವು ಯಾವಾಗಲೂ ಆತನನ್ನು ನೋಡಲಿಲ್ಲ. ಆತನ ವಿಷಯವನ್ನು ನಮ್ಮ ಹಿರಿಯರು ಹೇಳಿದಾಗ ಕೇಳಿದ್ದೇವೆ.

**ರಾಘವ :–** ಈ ಮುನೀಶ್ವರನ ವಿಷಯ ನಿಮ್ಮ ಹಿರಿಯರಿಗೆ ಹೇಗೆ ತಿಳಿದಿದೆ?

**ಮಲ್ಲುದೊರೆ :–** ಮೊದಲು ನಮ್ಮ ಹಿರಿಯರೆ ಇಲ್ಲಿ ಭೂಮಿಯನ್ನು ಅಗೆದು ಒಳಗೆ ಯೋಗ ಮಂದಿರವನ್ನು ನಿರ್ಮಿಸಿ ಕೊಟ್ಟಿದ್ದಾರೆ. ಅಂದಿನಿಂದ ಆ ಮುನೀಶ್ವರನು ಒಳಗೆ ಕುಳಿತುಕೊಂಡು ಯೋಗದಲ್ಲಿ ಮಗ್ನವಾಗಿ ಹೋಗಿದ್ದಾನಂತೆ. ಆಗ ಒಳಗೆ ಹೋಗಿರುವ ಆ ಯೋಗಿ ಇಲ್ಲಿಯವರೆಗು ಹೊರಗೆ ಬರಲಿಲ್ಲ. ಆಗ ಮುಚ್ಚಿದ ಕುಣಿಯನ್ನು ಇಲ್ಲಿಯವರೆಗು ಯಾರೂ ತೆಗೆಯಲಿಲ್ಲ.

**ರಾಘವ :–** ಆತನು ಎಂದಿಗೂ ಹೊರಗೆ ಬರುವುದಿಲ್ಲವೆಂದು ಹೇಳಿದ್ದಾನಾ? ಇಲ್ಲವೆ ಎಂದಿಗಾದರೂ ಬರುತ್ತೇನೆಂದು ಹೇಳಿದ್ದಾನಾ? ಹೋಗುವಾಗ ಏನೂ ಹೇಳದಂತೆ ಹೋಗಿದ್ದಾನಾ?

**ಮಲ್ಲುದೊರೆ:–** ಆತನು ಒಳಗೆ ಹೋಗುವಾಗ ಹೇಳಿ ಹೋಗಿದ್ದಾನೆಂದು ನಮ್ಮ ಹಿರಿಯರು ಹೇಳುತ್ತಿದ್ದರು. ಮುಂಬರುವ ಕಾಲದಲ್ಲಿ ಅಷ್ಟಗ್ರಹಕೂಟಮಿ ನಡೆಯುತ್ತದಂತೆ. ಆ ಸಮಯಕ್ಕೆ ಆತನು ಹೊರಗೆ ಬರುತ್ತೇನೆಂದು ಹೇಳಿದ್ದಾನಂತೆ. ಆ ಸಮಯದಲ್ಲಿ ದುಷ್ಟಶಕ್ತಿಗಳು ಕೆಲವು ತಾಂಡವವಾಡುತ್ತವಂತೆ. ಆಗ ಆತನು ಒಬ್ಬ ಮನುಷ್ಯನಿಂದ ಅವುಗಳನ್ನು ನಿವಾರಿಸುತ್ತಾನಂತೆ. ಅಲ್ಲಿಯವರೆಗು ಹೊರಗೆ ಬರುವುದಿಲ್ಲವೆಂದು ಹೇಳಿ ಹೋಗಿದ್ದಾನೆ. ಇದು ರಹಸ್ಯವಾದ ವಿಷಯ ಯಾರಿಗೂ ಹೇಳುವುದಲ್ಲ. ಆದರೂ ನಿನಗೆ ಹೇಳಬೇಕೆಂದೆನಿಸಿತು ಹೇಳಿದ್ದೇನೆ. ಆದರೆ ನಾವು ಈ ವಿಷಯವನ್ನು ಗೋಪ್ಯವಾಗಿ ಇಟ್ಟಿದ್ದೇವೆ. ಇಲ್ಲಿಯವರೆಗು ಯಾರಿಗೂ ಹೇಳಲಿಲ್ಲ. ಈ ವಿಷಯವನ್ನು ನೀನೂ ಸಹ ಯಾರಿಗೂ ಹೇಳಬೇಡ.

**ರಾಘವ :–** ಆ ಮುನೀಶ್ವರನು ಯಾರಾಗಿರುವುದು ನಿಮಗೆ ತಿಳಿದಿದೆಯಾ? ಗತದಲ್ಲಿ ಆತನು ಎಲ್ಲಿ ಇರುತ್ತಿದ್ದನು?

**ಮಲ್ಲುದೊರೆ :–** ಆತನು ಯಾರೋ, ಯಾವ ಪ್ರಾಂತದವನೋ ನಮಗೆ ಯಾವ ಮಾತ್ರ ತಿಳಿದಿಲ್ಲ. ನಮ್ಮ ಪ್ರಾಂತದಲ್ಲಿ ಒಬ್ಬ ಮನುಷ್ಯ ಸತ್ತುಹೋಗಿದ್ದಾನೆ. ಆ ಮನುಷ್ಯನಿಗೆ ಅಂತ್ಯಕ್ರಿಯೆಗಳು ಮಾಡಿ ಹೂತಿಡಬೇಕೆಂದುಕೊಂಡ ಸಮಯದಲ್ಲಿ ಆ ಮುನೀಶ್ವರನು ಇದ್ದಕ್ಕಿದ್ದಂತೆ ಅಲ್ಲಿಗೆ ಬಂದಿದ್ದಾನೆ. ಸತ್ತುಹೋದ ಮನುಷ್ಯನನ್ನು ಕುಣಿಯಲ್ಲಿ ಇಡುವ ಸಮಯದಲ್ಲಿ ಅಲ್ಲಿಗೆ ಬಂದ ಆತನು, ಕುಣಿಯಲ್ಲಿ ಇಟ್ಟಿರುವವನನ್ನು ನೋಡಿ ಈತನು ಸತ್ತುಹೋಗಲಿಲ್ಲ, ನಿದ್ರೆ ಮಾಡುತ್ತಿದ್ದಾನೆ, ಏಕೆ ಹೂತಿಡುತ್ತಿದ್ದೀರ ಎಂದು ಕೇಳಿದ್ದಾನೆ. ಆಗ ಅಲ್ಲಿರುವವರೆಲ್ಲರೂ ಈತನು ಬೆಳಗ್ಗೆ ಐದು ಗಂಟೆಗಳ ಸಮಯದಲ್ಲೇ ಸತ್ತುಹೋಗಿದ್ದಾನೆಂದು ಹೇಳಿದ್ದಾರೆ. ಆ ಮಾತಿಗೆ ಆ ಮುನೀಶ್ವರನು ನಕ್ಕು ನೀವು ತಪ್ಪಾಗಿ ತಿಳಿದಿದ್ದೀರ ಆತನು ಸತ್ತುಹೋಗಲಿಲ್ಲ ನಿದ್ರೆ ಮಾಡುತ್ತಿದ್ದಾನೆಂದು ತಟ್ಟಿ ಎಬ್ಬಿಸಿದ್ದಾನಂತೆ. ಆಗ ಸತ್ತುಹೋದ ಮನುಷ್ಯ ಎದ್ದು ಕುಳಿತುಕೊಂಡಿದ್ದಾನಂತೆ. ಆಗ ಆ ಮುನೀಶ್ವರನನ್ನು ಎಲ್ಲರೂ ದೊಡ್ಡ

ವ್ಯಕ್ತಿಯಾಗಿ ತಿಳಿದು ಗೌರವಿಸಿದ್ದಾರೆ. ಹಾಗೆ ಪರಿಚಯವಾದ ಆ ಪ್ರಾಂತದ ಮನುಷ್ಯರೊಂದಿಗೆ ಹೇಳಿ, ಈ ಆಲದ ಮರದ ಕೆಳಗೆ ಭೂಮಿಯಲ್ಲಿ ಕೋಣೆಯನ್ನು ಅಗೆಸಿಕೊಂಡು ಒಳಕ್ಕೆ ಹೋಗಿದ್ದಾನಂತೆ. ಅಂದಿನಿಂದ ಈ ಪ್ರಾಂತವನ್ನು, ಈ ಮರವನ್ನು ನಾವು ಪವಿತ್ರವಾಗಿ ನೋಡುತ್ತೇವೆ. ಅಷ್ಟೇ ಅಲ್ಲದೆ ಇಲ್ಲಿರುವ ಈ ಮರದಿಂದ ನಮಗೆ ಎಷ್ಟೋ ಒಳ್ಳೆಯದು ನಡೆಯುತ್ತಿದೆ. ಈ ಮರದ ಸುತ್ತಲೂ ತಿರುಗಿದರೆ ರೋಗಗಳು ಹೋಗುತ್ತಿವೆ.

**ರಾಘವ :–** ಆದರೆ ನೀವು ಹೇಳಿದಂತೆ ಇದು ಶಕ್ತಿಯಿಂದ ಕೂಡಿಕೊಂಡ ವೃಕ್ಷ. ಇಲ್ಲಿದ್ದರೆ ಒಳ್ಳೆಯದೆ ನಡೆಯುತ್ತದೆ. ಆದ್ದರಿಂದ 24 ಗಂಟೆಗಳು ನಾನು ಇಲ್ಲೇ ಇರುತ್ತೇನೆ. ಈ ರಾತ್ರಿಗೆ ಇಲ್ಲೇ ಮಲಗುತ್ತೇನೆ.

**ಮಲ್ಲುದೊರೆ :–** ರಾತ್ರಿಹೊತ್ತು ನೀನು ಒಬ್ಬನೇ ಇಲ್ಲಿರುವುದು ಒಳ್ಳೆಯದಲ್ಲ. ನೀನು ಇರಬೇಕೆಂದುಕೊಂಡರೆ ಇನ್ನು ಕೆಲವು ಜನರನ್ನು ಹಟ್ಟಿಯಿಂದ ಹಿಂದೆ ಕರೆದುಕೊಂಡು ಇರು.

**ರಾಘವ :–** ಸರಿ ನೀವು ಹೇಳಿದಂತೆ ಮಾಡುತ್ತೇನೆ.

(ಆ ರಾತ್ರಿಗೆ ಮಲ್ಲುದೊರೆಯ ಅದೇಶಾನುಸಾರ ಎಂಟು ಜನ ಚೆಂಚುದವರು (ಗಿರಿಜನರು) ರಾಘವನ ಹಿಂದೆ ಬಂದು ಆಲದ ಮರದ ಕೆಳಗೆ ಮಲಗಿದ್ದಾರೆ. ರಾಘವ ಬಹಳ ಹೊತ್ತಿನವರೆಗು ಅವರೊಂದಿಗೆ ಮಾತನಾಡುತ್ತಾ ಅಲ್ಲಿನ ವಿವರಗಳು ತಿಳಿದುಕೊಳ್ಳುತ್ತಿದ್ದನು. ಸುಮಾರು ಮದ್ಯರಾತ್ರಿ ಕಳೆಯಿತು. ಅಷ್ಟರಲ್ಲಿ ಆಕಾಶ ಮೇಘಾವೃತವಾಯಿತು. ಗುಡುಗು, ಮಿಂಚು ಶುರುವಾಗಿ ಚಿಕ್ಕದಾಗಿ ಮಳೆ ಹನಿಗಳು ಉದುರಿದವು. ಅದು ನೋಡಿದ ಗಿರಿಜನರು ಇಲ್ಲಿದ್ದರೆ ಪೂರ್ತಿ ನೆನೆಯುತ್ತೇವೆ, ಕೂಡಲೇ ಹಟ್ಟಿಗೆ ಹೋಗೋಣ ಎಂದು ರಾಘವನಿಗೆ ಹೇಳಿದರೆ ರಾಘವ ನೀವು ಹೋಗಿ ನಾನು ಬರುವುದಿಲ್ಲವೆಂದು ಹೇಳಿದನು. ತಾನು ನೆಂದರೂ ಪರವಾಗಿಲ್ಲ 24 ಗಂಟೆಗಳು ಇಲ್ಲೇ ಇರುತ್ತೇನೆಂದು ಅವರೊಂದಿಗೆ ಹೇಳಿದ್ದಾನೆ. ಅದಕ್ಕೆ ಅವರು ಏನು ಮಾಡುವುದಿಲ್ಲದೆ ರಾಘವನನ್ನು ಅಲ್ಲೇ ಬಿಟ್ಟು ತಾವು ಮಾತ್ರ ಹಟ್ಟಿಗೆ ಹೋಗಿದ್ದಾರೆ. ರಾಘವ ಧೈರ್ಯವಾಗಿ ಆಲದ ಮರದ ಕೆಳಗೆ ಆಲೋಚಿಸುತ್ತಾ ಇದ್ದನು. ಹಾಗೆ ಒಂದು ಗಂಟೆ ಕಳೆದುಹೋಯಿತು. ಅಲ್ಲಿಯವರೆಗು ಬರುತ್ತಿರುವ

ಮಳೆ ಸಹ ನಿಂತುಹೋಯಿತು. ಆಕಾಶದಲ್ಲಿ ಮೇಘಗಳಿರುವುದರಿಂದ ಎಲ್ಲಿ ನೋಡಿದರೂ ಕತ್ತಲೇ ಕಾಣಿಸುತ್ತಿದೆ. ಆಗಾಗ ಯಾವೋ ಪ್ರಾಣಿಗಳ ಧ್ವನಿ ಹೊರತು ಉಳಿದ ಸಮಯವೆಲ್ಲಾ ನಿಶ್ಶಬ್ದವಾಗಿ ಇದೆ. ಹಾಗೆ ನಿಶ್ಶಬ್ದವಾಗಿ ಇರುವ ಸಮಯದಲ್ಲಿ "ನೀನು ನನ್ನ ಹತ್ತಿರಕ್ಕೆ ಬಾ" ಎನ್ನುವ ಕಂಠಸ್ವರ ರಾಘವನಿಗೆ ಕೇಳಿಸಿತು. ಆ ಮಾತನ್ನು ಕೇಳಿದ ರಾಘವ ಬೆಚ್ಚಿ ಬಿದ್ದು ಗಾಬರಿಯಿಂದ ಎದ್ದು ನಿಂತು, ತನ್ನನ್ನು ಯಾರೋ ಕರೆದಿದ್ದಾರೆಂದು ಎಲ್ಲಾ ಕಡೆ ನೋಡಿದ್ದಾನೆ. ಆದರೆ ಯಾರೂ ಕಾಣಿಸಲಿಲ್ಲ. ರಾಘವನಿಗೆ ಒಂದು ಕಡೆ ಭಯವಾದರೆ, ಒಂದು ಕಡೆ ಆಶ್ಚರ್ಯ ಉಂಟಾಗಿದೆ. ತನ್ನನ್ನು ಈ ನಿರ್ಜನ ಪ್ರದೇಶದಲ್ಲಿ ಯಾರು ಕರೆದಿದ್ದಾರೆಂದು ಯೋಚಿಸುತ್ತಿರುವಾಗಲೇ ಮತ್ತೊಂದು ಸಲ ಅದೇ ಕಂಠದಿಂದ ಅದೇ ಮಾತು ಕೇಳಿಸಿತು. ಆಗ ರಾಘವ "ಯಾರು ನೀನು? ನಾನು ಎಲ್ಲಿಗೆ ಬರಬೇಕು" ಎಂದು ಕೇಳಿದನು. ರಾಘವ ಕೇಳಿದ ಮಾತಿಗೆ ಉತ್ತರವಾಗಿ ಮತ್ತೊಂದು ಸಲ ಈ ವಿಧವಾಗಿ ಕೇಳಿಸಿತು. "ನಾನು ನಿನ್ನ ಶ್ರೇಯೋಭಿಲಾಷಿ. ನೀನು ಭಯಪಡಬೇಡ. ನೀನಿರುವ ಸ್ಥಳದಿಂದ ಮುಂದಕ್ಕೆ ಆರು ಅಡಿಗಳು ಬಂದು, ಅಲ್ಲಿ ಸ್ವಲ್ಪ ಮಣ್ಣು ತೊಲಗಿಸು. ನಿನಗೆ ದಾರಿ ಕಾಣಿಸುತ್ತದೆ. ಆ ದಾರಿಯಲ್ಲಿ ಬಂದರೆ ನೀನು ನನ್ನ ಹತ್ತಿರಕ್ಕೆ ಬರುತ್ತೀಯ."

ಆಗ ರಾಘವನಿಗೆ ಆ ಮಾತುಗಳು ಕೇಳಿದ ಕೂಡಲೇ, ನಿನ್ನೆಯ ದಿನ ಹಟ್ಟಿಯ ಹಿರಿಯರು ಹೇಳಿದ ಯೋಗಿ ವಿಷಯ ಜ್ಞಾಪಕಕ್ಕೆ ಬಂದಿತು. ಕೂಡಲೇ ಮನಸ್ಸಿನಲ್ಲಿ ಎಷ್ಟೋ ಧೈರ್ಯ, ಉತ್ಸಾಹ ಬಂದಿತು. ತನ್ನನ್ನು ಭೂಗರ್ಭದಲ್ಲಿರುವ ಯೋಗಿಯೇ ಕರೆಯುತ್ತಿದ್ದಾನೆಂದು ತಿಳಿದ ರಾಘವ, ಸಂತೋಷದಿಂದ ಆರು ಹೆಜ್ಜೆಗಳು ಮುಂದಕ್ಕೆ ಹಾಕಿದ್ದಾನೆ. ಅಲ್ಲೇ ಇರುವ ಕಟ್ಟಿಗೆಯಿಂದ ತನ್ನ ಕಾಲಿನ ಕೆಳಗಿರುವ ಭೂಮಿಯನ್ನು ಅಗೆಯವುದಕ್ಕೆ ಪ್ರಾರಂಭಿಸಿದನು. ಕತ್ತಲಾಗಿದ್ದರೂ, ನೂತನ ಉತ್ಸಾಹದಿಂದ ಅಗೆಯತೊಡಗಿದನು. ಹಾಗೆ ಎರಡು ಅಡಿಗಳ ಆಳದ ಮಣ್ಣನ್ನು ಅಗೆದ ಕೂಡಲೇ ಮಣ್ಣು ಇಲ್ಲದಂತೆ ಹೋಗಿ ಇಟ್ಟಿಗೆಗಳು ಕಾಣಿಸಿದವು. ಅಷ್ಟರಲ್ಲಿ ಆಕಾಶದಲ್ಲಿ ಕತ್ತಲು ಹೋಗಿ ಸ್ವಲ್ಪ ಬೆಳದಿಂಗಳು ಬಂದಿತು. ಅದರಿಂದ ರಾಘವನಿಗೆ ಸ್ವಲ್ಪ ಕಾಣಿಸತೊಡಗಿತು. ಆ ಸ್ವಲ್ಪ ಬೆಳದಿಂಗಳ ಬೆಳಕಿನಲ್ಲಿ ಇಟ್ಟಿಗೆಗಳನ್ನು ತೆಗೆದನು. ಹಾಗೆ ಮೂರು ಸಾಲಿನ ಇಟ್ಟಿಗೆಗಳನ್ನು ತೆಗೆದಾಗ ಕೆಳಕ್ಕೆ ಮೆಟ್ಟಿಲಿರುವ

ಸುರಂಗ ಕಾಣಿಸಿತು. ಆ ಸುರಂಗದೊಳಗೆ ರಾಘವ ಧೈರ್ಯವಾಗಿ ಇಳಿದು ಮುಂದಕ್ಕೆ ಹೋದಾಗ, ಸುರಂಗದ ಬಲಗಡೆಗೆ ದಾರಿ ಕಾಣಿಸಿತು. ಅತ್ತ ಬಲಗಡೆಗೆ ತಿರುಗುತ್ತಲೇ ಒಂದು ದಿವ್ಯವಾದ ಬೆಳದಿಂಗಳಂತಹ ಪ್ರಕಾಶ ಕಾಣಿಸಿತು. ರಾತ್ರಿಹೊತ್ತು, ಅದರಲ್ಲಿ ಒಂದು ಗುಹೆಯಲ್ಲಿ ಇಂತಹ ಪ್ರಕಾಶವೇನೆಂದು ನೋಡಿದರೆ! ಅಲ್ಲಿ ಚಂದ್ರಬಿಂಬ ಛಾಯೆ ಇರುವ ಒಂದು ಮಣಿ ಪ್ರಕಾಶಿಸುತ್ತಾ ಕಾಣಿಸಿತು. ಆ ಮಣಿ ಪಕ್ಕದಲ್ಲೇ ಒಂದು ನಾಗರಹಾವು ಎಡೆ ಬಿಚ್ಚಿ ನೋಡುತ್ತಿದೆ. ವಿಚಿತ್ರವಾಗಿರುವ ಆ ದೃಶ್ಯದಿಂದ ರಾಘವ ದೃಷ್ಠಿಯನ್ನು ಪಕ್ಕಕ್ಕೆ ತಿರುಗಿಸಿ ನೋಡಿದ್ದಾನೆ. ಆಗ ಆತನಿಗೆ ನಗು ಮುಖದಿಂದ ಕುಳಿತುಕೊಂಡ ವ್ಯಕ್ತಿಯೊಬ್ಬ ಕಾಣಿಸಿದ್ದಾನೆ. ಆತನ ಮುಖದ ವರ್ಚಸ್ಸಿನಲ್ಲಿ, ಕಣ್ಣುಗಳಲ್ಲಿ ಪ್ರತ್ಯೇಕವಾದ ಲಕ್ಷಣ ಹೊಳೆಯುವಂತೆ ಕಾಣಿಸಿತು. ಆತನನ್ನು ನೋಡಿದಕೂಡಲೆ ರಾಘವನಿಗೆ ದೊಡ್ಡ ವ್ಯಕ್ತಿಯನ್ನು ನೋಡಿದಂತಹ ಅನುಭೂತಿ ಉಂಟಾಗಿ ತಿಳಿಯದಂತೆ ಕೈಗಳು ನಮಸ್ಕಾರ ಮಾಡಿವೆ. ಆಗ ವಿನಯದಿಂದ ರಾಘವ ಹೀಗೆಂದನು.)

**ರಾಘವ :–** ನನ್ನನ್ನು ಕರೆದಿದ್ದು ನೀವೇನಾ? ನೀವು ಯಾರೋ ನನಗೆ ತಿಳಿಯದು. ದಯಮಾಡಿ ನಿಮ್ಮ ನಾಮಧೇಯವನ್ನು ತಿಳಿಸಿರಿ.

**ಮಹರ್ಷಿ :–** ನಿನ್ನನ್ನು ಕರೆದಿದ್ದು ನಾನೇ. ನಾನು ಇಂತಹವನು ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ ನನ್ನ ಹೆಸರನ್ನು ನಾನೇ ಮರೆತುಹೋಗಿದ್ದೇನೆ. ನಾನು 90 ಸಂವತ್ಸರಗಳಿಂದ ಯೋಗದೀಕ್ಷೆಯಲ್ಲಿ ಮಗ್ನನಾಗಿದ್ದೇನೆ. ಕಣ್ಣು ತೆರೆಯುವ ಸಮಯ ಸಮೀಪಿಸಿತು. ಆದ್ದರಿಂದ ಯೋಗದಿಂದ ಎಚ್ಚರವಾಗಿದ್ದೇನೆ. ನೀನು ನನ್ನ ಹತ್ತಿರಕ್ಕೆ ಬರಬೇಕಾಗಿದೆ, ಆದ್ದರಿಂದ ಬಂದಿದ್ದೀಯ. ನಿನ್ನ ಬರುವಿಕೆಯನ್ನು ಗಮನಿಸಿದ ನಾನು ನಿನ್ನನ್ನು ಕರೆದಿದ್ದೇನೆ.

**ರಾಘವ :–** ನನ್ನನ್ನು ಏಕೆ ಕರೆದಿದ್ದೀರ.

**ಮಹರ್ಷಿ :–** ನೀನು ಸತ್ಯಾನ್ವೇಷಿ ಆದ್ದರಿಂದ ಕರೆದಿದ್ದೇನೆ.

**ರಾಘವ :–** ನಾನು ಸತ್ಯಾನ್ವೇಷಿನಾ! ನಾನು ಯಾವ ಸತ್ಯಕ್ಕೋಸ್ಕರ, ಯಾವ ಅನ್ವೇಷಣೆ ಮಾಡಲಿಲ್ಲವೇ!

**ಮಹರ್ಷಿ :–** ನೀನು ಜನ್ಮ ರಹಸ್ಯವೇನೋ ತಿಳಿದುಕೊಳ್ಳಬೇಕೆಂದುಕೊಂಡಿಲ್ಲವೆ? ನಾನೇಕೆ ಹುಟ್ಟಿದ್ದೇನೆಂದು ಅಂದುಕೊಂಡಿಲ್ಲವೆ? ಈ ಸಮಾಜದಲ್ಲಿ ಬೇಸರಗೊಂಡು ಅಡವಿಯನ್ನು ಸೇರಲಿಲ್ಲವೆ? ವಿಚಿತ್ರ ಮರವನ್ನು ನೋಡಿದ ನೀನು ಇನ್ನೂ ವಿಚಿತ್ರವಾದ ಮರಗಳನ್ನು ಕುರಿತು ತಿಳಿದುಕೊಳ್ಳಬೇಕೆಂದುಕೊಂಡಿಲ್ಲವೆ? ಗಿರಿಜನರು ತಿಳಿಸಿದ ವಿಷಯದಲ್ಲಿ ಸತ್ಯವೆಷ್ಟಿದೆಯೋ ನೋಡುವುದಕ್ಕೆ, ನೀನು ಇಲ್ಲಿಗೆ ಬಂದು ಮಲಗಲಿಲ್ಲವೇ? ಮಳೆಗೆ ನಿಲ್ಲದೆ ಹಟ್ಟಿಗೆ ಹೋಗೋಣವೆಂದು ಹಟ್ಟಿಯವರು ಕರೆದಾಗ ಅವರ ಮಾತು ಕೇಳದೆ ನೀನು ಛಲದಿಂದ ಇಲ್ಲೇ ಇರಲಿಲ್ಲವೆ? ಹೇಳು ರಾಘವಾ? ನಾನು ಹೇಳುವ ಮಾತುಗಳು ಸತ್ಯವಲ್ಲವೆ!

**ರಾಘವ :–** ಮಹಾತ್ಮ! ನೀವು ಯಾರೋ ಆಗಲಿ, ಒಟ್ಟಿನಲ್ಲಿ ನನ್ನ ಚರಿತ್ರೆ ಎಲ್ಲವೂ ತಿಳಿದವರಾಗಿದ್ದೀರಿ. ನನ್ನ ಹೆಸರು ನಿಮಗೆ ಹೇಗೆ ತಿಳಿದಿದೆಯೋ? ನನ್ನ ಭಾವನೆಗಳೆಲ್ಲವೂ ಹೇಗೆ ಹೇಳುತ್ತಿದ್ದೀರೋ ಆಶ್ಚರ್ಯವಾಗಿ ಇದೆ.

**ಮಹರ್ಷಿ :–** ನಿನ್ನ ಚರಿತ್ರೆಯೇ ಅಲ್ಲ, ನಿನ್ನ ಹುಟ್ಟಿನಲ್ಲಿನ ರಹಸ್ಯವನ್ನು ಸಹ ತಿಳಿದವನು. ನಿನ್ನ ಹುಟ್ಟುವಿಕೆಯೇ ಅಲ್ಲ, ನಿನ್ನ ಹಿಂದಿನ ಜನ್ಮವನ್ನು ಸಹ ತಿಳಿದವನು. ಅಸಲಿಗೆ ನೀನ್ಯಾರೋ ಸಹ ತಿಳಿದವನು.

**ರಾಘವ :–** ಸ್ವಾಮೀ! ನೀವು ಹೇಳುವುದು ನನಗೆ ಅಗಮ್ಯಗೋಚರವಾಗಿ ಇದೆ. ಅರ್ಥ ಆಗುತ್ತಿಲ್ಲ. ಅಸಲಿಗೆ ನೀವ್ಯಾರು?

**ಮಹರ್ಷಿ :–** ನಾನು ನಾನೇ, ಮೊದಲೇ ಹೇಳಿದ್ದೇನಲ್ಲವೆ ನನ್ನ ಹೆಸರನ್ನು ಮರೆತುಹೋಗಿದ್ದೇನೆಂದು, ಆದ್ದರಿಂದ ನನಗೆ ಹೆಸರೇ ಇಲ್ಲ ಎಂದುಕೋ.

**ರಾಘವ :–** ನನ್ನ ರಹಸ್ಯವೆಲ್ಲವೂ ಹೇಳುತ್ತಿರುವ ನೀವು, ನಿಮ್ಮ ಹೆಸರನ್ನು ಮರೆತು ಹೋಗುವುದಾ! ನಾನು ನಂಬದಂತಿದ್ದೇನೆ.

**ಮಹರ್ಷಿ :–** ನೀನು ನಂಬಲಾರದ ನಿಜ, ನನಗೆ ಹೆಸರು ಇಲ್ಲ. ಯಾವ ಹೆಸರು ಇಟ್ಟುಕೊಂಡರೂ ಮನುಷ್ಯ ಮನುಷ್ಯನೇ. ಯಾವನಿಗೆ ಯಾವ ಹೆಸರಿದ್ದರೂ ಹೆಸರಿನಿಂದ ಅವನು ಸಾಧಿಸುವುದು ಏನೂ ಇಲ್ಲ. ಒಬ್ಬನಿಗೆ ರಾಮನೆಂದು ಹೆಸರು ಇಟ್ಟಷ್ಟು ಮಾತ್ರಕ್ಕೆ ಅವನು ದಶರಥ ಪುತ್ರನಾದ ರಾಮನಾಗಲು ಸಾಧ್ಯವಿಲ್ಲ. ಮಾನವತ್ವವನ್ನು ಅನುಸರಿಸಿ ಮನುಷ್ಯನೇ ಹೊರತು ಹೆಸರನ್ನು ಅನುಸರಿಸಿಯಲ್ಲ.

**ರಾಘವ :–** ಮಹಾತ್ಮಾ! ರೂಪವಿದ್ದರೇ ಹೆಸರು ಇರುತ್ತದೆನ್ನುತ್ತಾರೆ, ಹಾಗೇ ಹೆಸರಿದ್ದರೆ ರೂಪವಿರುತ್ತದೆನ್ನುತ್ತಾರೆ. ರೂಪ, ನಾಮಗಳು ಒಂದಕ್ಕೊಂದು ಅವಿನಾಭಾವ ಸಂಬಂಧವೆನ್ನುತ್ತಾರೆ. ನಿಮಗೆ ರೂಪವಿದೆ ಆದ್ದರಿಂದ ಹೆಸರಿದ್ದೇ ಇರಬೇಕಲ್ಲವೆ!

**ಮಹರ್ಷಿ :–** ಯಾವ ಮಾತು ಮಾತನಾಡಿದರೂ ಯೋಚಿಸಿ ಮಾತನಾಡಬೇಕು. ನೀನು ಹೇಳುವ ರೂಪ, ನಾಮ ಅವಿನಾಭಾವ ಶಾಸ್ತ್ರಬದ್ಧವಾದ ಮಾತಲ್ಲ. ಆದ್ದರಿಂದ ಅದು ಖಂಡಿಸಲ್ಪಡುತ್ತದೆ.

**ರಾಘವ :–** ಶಾಸ್ತ್ರಬದ್ಧವಾಗಿರುವುದೆಂದರೆ ಯಾವ ವಿಧವಾಗಿ ಇರುತ್ತದೆ?

**ಮಹರ್ಷಿ :–** ಖಂಡಿಸಲ್ಪಡದಿರುವುದು, ನಿರೂಪಣೆಗೆ ಬರುವುದು ಶಾಸ್ತ್ರವೆನ್ನುತ್ತೇವೆ. ಈ ಸೂತ್ರಕ್ಕೆ ಒಳಪಟ್ಟಿರುವುದನ್ನು ಶಾಸ್ತ್ರಬದ್ಧವಾಗಿರುವುದೆನ್ನುತ್ತೇವೆ.

**ರಾಘವ :–** ತಿಳಿಯದೆ ಕೇಳುತ್ತಿದ್ದೇನೆ. ರೂಪವಿರುವ ಪ್ರತಿ ಒಂದಕ್ಕೂ ಹೆಸರಿದೆ, ಹೆಸರಿರುವ ಪ್ರತಿ ಒಂದಕ್ಕೂ ರೂಪವಿದೆ. ಇದು ಎಲ್ಲಾ ಕಡೆ ಎಲ್ಲರಿಗೂ ತಿಳಿದ ವಿಷಯವೇ ಅಲ್ಲವೆ! ಇದನ್ನು ಶಾಸ್ತ್ರ ಬದ್ದತೆ ಇಲ್ಲದ ವಿಷಯವೆನ್ನುತ್ತೇವಾ? ನೀವು ಮಹಾತ್ಮರು. ನನಗೆ ತಿಳಿಯದ ವಿಷಯವನ್ನು ತಿಳಿಸುತ್ತೀರೆಂದು ಕೋರುತ್ತಿದ್ದೇನೆ.

**ಮಹರ್ಷಿ :–** ಶಭಾಷ್ ರಾಘವಾ! ನಿನ್ನ ಪ್ರಶ್ನೆಯಲ್ಲಿ ಹೇತುಬದ್ದತೆ ಇದೆ. ಅಷ್ಟೇ ಅಲ್ಲದೆ ನೀನು ಸವಿನಯವಾಗಿ ಕೇಳುತ್ತಿದ್ದೀಯ. ಆದ್ದರಿಂದ ಈ ವಿಷಯದಲ್ಲಿನ ಅಶಾಸ್ತ್ರೀಯತೆಯನ್ನು ತಿಳಿಸುತ್ತಿದ್ದೇನೆ ಕೇಳು. ಕಾಲವೆನ್ನುವುದು ಸಹ ಹೆಸರೇ ಅಲ್ಲವೆ! ಹೆಸರಿರುವ ಕಾಲಕ್ಕೆ ರೂಪವಿಲ್ಲ ಅಲ್ಲವೆ! ಆದ್ದರಿಂದ ರೂಪ ನಾಮಗಳು ಅಶಾಸ್ತ್ರೀಯವೆಂದು ಹೇಳುತ್ತಿದ್ದೇನೆ.

**ರಾಘವ :–** ಮಹಾತ್ಮಾ! ನೀವು ಬಹಳ ಮೇಧಾವಿಗಳು. ಹೆಸರಿರುವಷ್ಟು ಮಾತ್ರಕ್ಕೆ ರೂಪವಿರುವುದಿಲ್ಲವೆಂದು ಒಂದು ಮಾತಲ್ಲಿ ತಿಳಿಸಿ ಹೇಳಿದ್ದೀರ. ಅಷ್ಟೇ ಅಲ್ಲದೆ ಅನಾಥನಾಗಿ, ಅಗೌರವವಾಗಿ ಬದುಕುತ್ತಿರುವ ನನ್ನನ್ನು ಆದರಿಸಿ ಮಾತನಾಡುತ್ತಾ ನನಗೆ ಎಷ್ಟೋ ಸಂತೋಷವನ್ನುಂಟುಮಾಡಿಸಿದ್ದೀರ. ಸಮಾಜದಲ್ಲಿ ಎಲ್ಲರೂ ನನ್ನನ್ನು ಕೇವಲವಾಗಿ ನೋಡಿದರೂ, ಹಿರಿಯರಾದ ನೀವು ನನಗೆ ಬೆಲೆಕೊಟ್ಟು ಮಾತನಾಡಿಸಿರುವುದು, ನನ್ನ ಅದೃಷ್ಟವಾಗಿ ಭಾವಿಸುತ್ತಿದ್ದೇನೆ. ನಿಮಗೆ ನನ್ನನ್ನು

ಕುರಿತು, ನನ್ನ ಜನ್ಮ ರಹಸ್ಯವನ್ನು ಕುರಿತು ತಿಳಿದಿದೆ ಎಂದಿದ್ದೀರ. ದಯಮಾಡಿ ನನ್ನ ಜನ್ಮ ರಹಸ್ಯವೇನೋ ತಿಳಿಸಿರೆಂದು ನಿಮ್ಮನ್ನು ಕೋರುತ್ತಿದ್ದೇನೆ.

**ಮಹರ್ಷಿ :–** ರಾಘವಾ! ನೀನು ಬಹಳ ಅದೃಷ್ಟವಂತ. ಹೊರಗಿನ ಸಮಾಜ ನಿನ್ನನ್ನು ಕೇವಲವಾಗಿ, ಅಸಮರ್ಥನಾಗಿ ನೋಡಿದಕ್ಕೇ ಅಲ್ಲವೆ! ನೀನು ಇಲ್ಲಿಗೆ ಸೇರಿರುವುದು? ಅವರು ಹಾಗೆ ನೋಡದೆ ಹೋದರೆ ನೀನು ಸಹ ಆ ಸಮಾಜದಲ್ಲೇ ಇದ್ದು ಎಲ್ಲರಂತೆ ಜೀವಿಸುತ್ತಿದ್ದೆ. ನಿನ್ನ ಜಾಪಥಕದ ಪ್ರಕಾರ ನೀನು ತುಲಾ ಲಗ್ನದಲ್ಲಿ ಜನ್ಮಿಸಿದವನು. ದೊಡ್ಡ ಪಥಕ ಇರುವವನು. ನಿನಗೆ ಆ ವಿಷಯ ತಿಳಿದಿಲ್ಲ.

**ರಾಘವ :–** ಮಹಾತ್ಮಾ! ನೀವು ಹೇಳುವ ಮಾತುಗಳಲ್ಲಿ ಪಥಕ ಯಾವುದು? ಜಾಪಥಕ ಯಾವುದು? ನನಗೆ ಅರ್ಥವಾಗಲಿಲ್ಲ.

**ಮಹರ್ಷಿ :–** ಮೊದಲೇ ನಿರ್ಣಯಿಸಿದ ಪದ್ಧತಿಯನ್ನು "ಪಥಕ" ಎನ್ನುತ್ತೇವೆ. ಜಾ ಪಥಕ ಎಂದರೆ ಹುಟ್ಟಿದಾಗಲೇ ಜೀವನದಲ್ಲಿ ಮುಂಬರುವ ವಿಷಯಗಳನ್ನು ಕ್ರಮ ಪದ್ಧತಿಯಾಗಿ ನಿರ್ಣಯಿಸಲ್ಪಟ್ಟಿರುವುದೆಂದು ಅರ್ಥ. ನೀನು ಯಾವಾಗ ಯಾವ ಕಾರ್ಯಗಳನ್ನು ಮಾಡಬೇಕೋ, ಯಾವಾಗ ಏನು ಅನುಭವಿಸಬೇಕೋ, ಯಾವಾಗ ಏನು ನಡೆಯಬೇಕೋ ಮೊದಲೇ ನಿರ್ಣಯಿಸಿರುವ ಪದ್ಧತಿಯನ್ನು "ಜಾಪಥಕ" ಎನ್ನುತ್ತೇವೆ. ಪೂರ್ವದಲ್ಲಿ ಜಾಪಥಕ ಎನ್ನುವ ಮಾತು ಕಾಲಕ್ರಮೇಣ ಬದಲಾವಣೆ ಹೊಂದಿ ಜಾಪಥಕದಲ್ಲಿ "ಪ" ಎನ್ನುವ ಅಕ್ಷರ ಇಲ್ಲದಂತೆ ಹೋಗಿ, ಕೊನೆಗೆ ಜಾಥಕ ಎನ್ನುವ ಶಬ್ಧವಾಗಿ ಉಳಿದುಹೋಗಿದೆ. ಪ್ರಸ್ತುತ ಕಾಲದಲ್ಲಿನ ಹೆಸರಿನ ಪ್ರಕಾರ ಹೇಳಿದರೇ ನಿನ್ನ ಜಾತಕ ಚೆನ್ನಾಗಿದೆ ಎಂದು ಹೇಳಬಹುದು.

**ರಾಘವ :–** ಇಂದಿನ ಕಾಲದಲ್ಲಿ 'ಜಾತಕ'ವಾಗಿ ಕರೆಯಲಾಗುವ ಮಾತು, ಪೂರ್ವದಲ್ಲಿ ಜಾ ಪಥಕ ಎನ್ನುವ ಸ್ವಚ್ಛವಾದ ಅರ್ಥದಿಂದ ಕೂಡಿಕೊಂಡು ಇರುತ್ತಿತ್ತು. ನನ್ನ ಜಾತಕದ ಪ್ರಕಾರ ನಾನು ತುಲಾ ಲಗ್ನದಲ್ಲಿ ಜನ್ಮಿಸಿದ್ದೇನೆಂದಿದ್ದೀರ. ತುಲಾ ಲಗ್ನದಲ್ಲಿ ಜನ್ಮಿಸಿದವರು ಅದೃಷ್ಟವಂತರೆನ್ನುವುದು ನನಗೆ ತಿಳಿಯದು.

**ಮಹರ್ಷಿ :–** ಹೌದು ರಾಘವಾ! ನಿನ್ನ ಪೂರ್ವ ಜನ್ಮ ಸುಕೃತಕರ್ಮ ಆ ಲಗ್ನದಲ್ಲಿ ಹುಟ್ಟುವಂತೆ ಮಾಡಿದೆ. ಎಷ್ಟೋ ದೊಡ್ಡ ಜಾಥಕ ಇರುವವರೆಲ್ಲರೂ ತುಲಾ

ಲಗ್ನದಲ್ಲೇ ಜನ್ಮಿಸಿದ್ದಾರೆ. ಇಗೋ ನನ್ನ ಪಕ್ಕದಲ್ಲಿರುವ ಈ ಹಾವು ಸಹ ತುಲಾ ಲಗ್ನದಲ್ಲಿ ಜನ್ಮಿಸಿರುವುದೇ.

**ರಾಘವ :–** ಜನ್ಮ ಫಲ, ಜಾಥಕದ ಪ್ರಾಬಲ್ಯ ಇತರ ಜೀವರಾಶಿಗಳಿಗೆ ಸಹ ಇರುತ್ತದೆನ್ನುವುದು ನನಗೆ ಆಶ್ಚರ್ಯವಾಗಿ ಇದೆ. ಹಾಗಾದರೆ ಈ ಹಾವಿಗೂ ಸಹ ಜಾಪಥಕ ಇದ್ದಂತೆ.

**ಮಹರ್ಷಿ :–** ಹೌದು ಷಟ್ ಶಾಸ್ತ್ರಗಳು ಪ್ರತಿ ಜೀವರಾಶಿಗೂ ಅನ್ವಯಿಸುತ್ತವೆ. ಆರು ಶಾಸ್ತ್ರಗಳಲ್ಲಿನ ಜ್ಯೋತಿಷ್ಯಶಾಸ್ತ್ರ ಎಲ್ಲ ಜೀವರಾಶಿಗಳಿಗೂ ಅನ್ವಯಿಸುತ್ತದೆ. ಕರ್ಮ ಎನ್ನುವ ಪಾಪಪುಣ್ಯಗಳು ಪ್ರತಿ ಜೀವರಾಶಿಗಳಿಗೂ ಇವೆ. ಕರ್ಮದಿಂದಲೆ ಪ್ರತಿ ಜೀವಿ ಹುಟ್ಟುತ್ತಿದೆ. ಈ ಹಾವೂ ಕೂಡ ನಿನ್ನ ಹಾಗೆ ಮಾನವಜನ್ಮದಲ್ಲಿದ್ದು, ಆ ಜನ್ಮದಿಂದ ಈ ಜನ್ಮಕ್ಕೆ ಬಂದಿದೆ. ಅದರ ಕರ್ಮ ಪ್ರಕಾರ ಕೊನೆಗೆ ನನ್ನ ಹತ್ತಿರಕ್ಕೆ ಸೇರಿದೆ.

**ರಾಘವ :–** ಈ ವಿಷಯ ಆಸಕ್ತಿಯಾಗಿದೆ. ಅಭ್ಯಂತರವಿಲ್ಲದಿದ್ದರೆ ಈ ಹಾವಿನೊಂದರ ಪೂರ್ವಜನ್ಮ ವಿಷಯ ತಿಳಿಸುತ್ತೀರೆಂದು  ಕೋರುತ್ತಿದ್ದೇನೆ.

**ಮಹರ್ಷಿ :–** ತಪ್ಪದೆ ತಿಳಿಸುತ್ತೇನೆ ಕೇಳು. ಈ ಜೀವಿ ಗತ ಜನ್ಮದಲ್ಲಿ ದೊಡ್ಡ ಧನಿಕನಾಗಿ ಇದ್ದನು. ಈತನಿಗೆ ಎಷ್ಟೋ ಆಸ್ತಿಗಳು, ಗೃಹಗಳು ಇರುವುದೇ ಅಲ್ಲದೆ ವಿಪರೀತವಾದ ಹಣವೂ ಸಹ ಇತ್ತು. ಈ ಜೀವಿಗೆ ಎಷ್ಟು ಇದ್ದರೂ ಇನ್ನೂ ಸಂಪಾದಿಸಬೇಕೆನ್ನುವ ಆಸೆ ಹೆಚ್ಚಾಗಿರುತ್ತಿತ್ತು. ಕಷ್ಟಪಡದೆ ಎಲ್ಲರಿಗಿಂತ ಸುಲಭವಾಗಿ ಸಂಪಾದಿಸುವುದಕ್ಕೆ ಬಡ್ಡಿ ವ್ಯಾಪಾರವನ್ನು ಆರಿಸಿಕೊಂಡಿದ್ದನು. ಹಣವನ್ನು ಬಡ್ಡಿಗೆ ಕೊಟ್ಟು ಚಕ್ರಬಡ್ಡಿ ರೂಪದಲ್ಲಿ ಇತರರ ಶ್ರಮವನ್ನು ದೋಚಿಕೊಳ್ಳುತ್ತಿದ್ದನು. ಈತನ ಹತ್ತಿರ ಹಣ ತೆಗೆದುಕೊಂಡ ಎಷ್ಟೋ ಜನರು ವಿಪರೀತವಾಗಿ ಬೆಳೆದ ಬಡ್ಡಿಯಿಂದ ಪುನಃ ಹಣ ತೀರಿಸದ ಸ್ಥಿತಿಯಲ್ಲಿ ಅವರ ಆಸ್ತಿಗಳನ್ನು ಸಹಿತ ಈತನಿಗೇ ಬಿಟ್ಟುಕೊಡುತ್ತಿದ್ದರು. ಹಾಗೆ ತಮ್ಮ ಜೀವನಾಧಾರವಾದ ಆಸ್ತಿಗಳನ್ನು ಬಾಧೆಪಡುತ್ತಾ ಅವರು ಒಪ್ಪಿಸುತ್ತಿದ್ದರೆ ತನಗೆ ಹಣವೇ ಮುಖ್ಯವೆಂದುಕೊಂಡ ಈತನು ತನಗೆ ಬರುವ ಹಣವನ್ನೇ ನೋಡಿದ್ದಾನೆ. ಆದರೆ ತನಗೆ ಬರುವ ಪಾಪವನ್ನು ಸ್ವಲ್ಪವಾದರೂ ಗುರುತಿಸಲಿಲ್ಲ. ಪಾಪ ಪುಣ್ಯಗಳನ್ನು ಕುರಿತು ಯಾರಾದರೂ ಹೇಳಿದರೂ, ನನಗೆ

ಅಷ್ಟು ಮಾತ್ರ ತಿಳಿಯದಾ ಎಂದು ಸಮಾಧಾನ ಹೇಳುತ್ತಿದ್ದನು. ಒಂದು ವೇಳೆ ಯಾವುದಾದರೂ ಪಾಪ ಬಂದರೆ ತಾನು ಮಾಡುವ ಪೂಜೆಗಳಿಗೆ ರಾಮನು ತನ್ನನ್ನು ರಕ್ಷಿಸುತ್ತಾನೆಂದು ಅಂದುಕೊಳ್ಳುತ್ತಿದ್ದನು. ತಾನು ನಮಸ್ಕರಿಸುವ ಶ್ರೀರಾಮನ ದಯೆ ಇರುವುದರಿಂದ ತಾನು ಎಷ್ಟೋ ಹಣ ಸಂಪಾದಿಸಿದ್ದೇನೆಂದು ತಾನು ಮಾಡುವ ಬಡ್ಡಿ ವ್ಯಾಪಾರ ದೇವರಿಗೆ ಸಮ್ಮತವಾಗಿರುವುದೇ ಎಂದು, ಆದುದರಿಂದ ತನಗೆ ಪಾಪವೇ ಬರುವುದಿಲ್ಲವೆಂದು ಅಂದುಕೊಳ್ಳುತ್ತಿದ್ದನು.

ಈ ವಿಧವಾಗಿ ನಡೆಯುತ್ತಿರುವ ಸಮಯದಲ್ಲಿ ಧನಿಕನ ಹತ್ತಿರ ಸಾಲ ತೆಗೆದುಕೊಂಡ ಒಬ್ಬ ನಿರ್ಭಾಗ್ಯನು ತನ್ನ ಹತ್ತಿರ ಹಣ ಇಲ್ಲದವನಾಗಿ, ಯಾವ ಆದಾಯ ಇಲ್ಲದವನಾಗಿ, ಬೆಳೆಯುತ್ತಿರುವ ಬಡ್ಡಿಗೆ ಭಯಪಟ್ಟು ಧನಿಕನ ಹತ್ತಿರಕ್ಕೆ ಬಂದು "ನಾನು ಆದಾಯ ಇಲ್ಲದವನಾಗಿದ್ದೇನೆ, ನನ್ನಲ್ಲಿ ಯಾವ ದುರಭ್ಯಾಸವಿಲ್ಲ, ಆದರೂ ನನ್ನ ಕರ್ಮವಶಾತ್ತು ನನ್ನ ಹೊಲದಲ್ಲಿ ಬೆಳೆ ಬೆಳೆಯದ ಕಾರಣದಿಂದ ನಿಮಗೆ ಸ್ವಲ್ಪವೂ ಹಣ ಜಮಾ ಮಾಡದ ಸ್ಥಿತಿ ಏರ್ಪಟ್ಟಿದೆ. ನನ್ನ ಭೂಮಿ ಎಲ್ಲವೂ ಮಾರಿದರೂ ನಿನ್ನ ಬಾಕಿ ಅಸಲಿಗೆ ಸರಿಹೋಗುವುದಿಲ್ಲ. ನಾನು ಇನ್ನೂ ಎಲ್ಲಾದರೂ ಬೇಡಿಕೊಂಡು ನಿನ್ನ ಬಾಕಿ ಅಸಲನ್ನು ಕಟ್ಟಬಲ್ಲೆ. ಬಡ್ಡಿ ಕಟ್ಟಲಾರೆನು, ನೀನು ಬಡ್ಡಿ ಬಿಡು ಎಂದು ಕೇಳಿಕೊಂಡನು. ಅದಕ್ಕೆ ಧನಿಕನು ಯಾವ ಮಾತ್ರ ಒಪ್ಪಿಕೊಳ್ಳಲಿಲ್ಲ. ಅಂತಹ ಸಮಯದಲ್ಲಿ ನಿರುತ್ಸಾಹದಿಂದ ಕಾಲಕಳೆಯುತ್ತಿದ್ದ ಬಡವ ರೈತನನ್ನು ಒಬ್ಬ ಮಹರ್ಷಿ ನೋಡಿ, ಆತನ ಬಾಧೆಯನ್ನು ಗ್ರಹಿಸಿ ಬಡವ ರೈತನನ್ನು ಸಮಾಧಾನಪಡಿಸಿ ಧನಿಕನನ್ನು ಕರೆದು ಈ ವಿಧವಾಗಿ ಹೇಳಿದನು.

**ಯೋಗಿ :–** ಹಣ ಇರುವವನ ಹತ್ತಿರ ನಿನ್ನ ಪದ್ಧತಿ ಪ್ರಕಾರ ಹಣವನ್ನು ಪಡೆದುಕೊಂಡರೆ ಬಾಧೆಪಡುವುದಿಲ್ಲ. ಆದರೆ ಇಲ್ಲದವನನ್ನು ಪೀಡಿಸಿದರೆ ಅವನು ಹಗಲಿರುಳು ಬಾಧೆಪಡುತ್ತಿರುತ್ತಾನೆ. ಹಾಗೆ ನೀನು ಇತರರನ್ನು ಬಾಧೆ ಇಡುವುದರಿಂದ ಕಣ್ಣಿಗೆ ಕಾಣಿಸದ ಪಾಪ ನಿನಗೆ ಸೇರುತ್ತದೆ. ನೀನು ಕಣ್ಣಿಗೆ ಕಾಣಿಸುವ ಹಣದ ಮೇಲೆಯೆ ಆಸೆಪಟ್ಟಿರುವೆ. ಅದರಿಂದ ಕಾಣಿಸದ ಪಾಪ ಬರುತ್ತದೆಂದು ನಿನಗೆ ತಿಳಿದಿಲ್ಲ. ಇಂತಹ ಕೆಲಸಗಳು ತ್ಯಜಿಸು.

(ಎಂದು ಯೋಗಿ ಹೇಳಿದಾಗ ಆತನ ಮಾತುಗಳನ್ನು ಈ ಧನಿಕನು ನಿರ್ಲಕ್ಷ್ಯವಾಗಿ ತೆಗೆದುಕೊಂಡು ಯೋಗಿ ಮಾತನ್ನು ಲೆಕ್ಕ ಹಾಕದೆ ತನಗೆ ಹಣವೇ ಮುಖ್ಯವೆಂದು, ತಾನು ಮಾಡುತ್ತಿರುವುದು ನ್ಯಾಯಬದ್ಧವಾದ ವ್ಯಾಪಾರವೆಂದು ಪ್ರತ್ಯುತ್ತರ ಹೇಳಿದನು. ಧನಿಕನ ಮಾತುಗಳು ಕೇಳಿದ ಯೋಗಿ ಈ ವಿಧವಾಗಿ ಹೇಳಿದನು.)

**ಯೋಗಿ :–** ನಾನು ಹೇಳುವ ಮಾತುಗಳು ನಿನಗೆ ಬೆಲೆಯುಳ್ಳವೆನ್ನುವಂತೆ ಕಾಣಿಸಲಿಲ್ಲ. ನೀನು ಶಾಶ್ವತವೆಂದುಕೊಂಡ ನಿನ್ನ ಜೀವನ ಅಶಾಶ್ವತವಾದದ್ದು. ಯಾರೂ ಶಾಶ್ವತವಾಗಿ ಒಂದೇ ಜನ್ಮದಲ್ಲಿ ಇರಲಾರರು. ನೀನು ಹಣವೇ ಮುಖ್ಯವೆಂದುಕೊಂಡರೂ ಅದು ಸ್ವಲ್ಪವೂ ಸಹ ನಿನ್ನ ಹಿಂದೆ ಬರುವುದಿಲ್ಲ. ನೀನು ಮಾಡಿಕೊಂಡ ಕರ್ಮ ಮಾತ್ರವೇ ನಿನ್ನ ಹಿಂದೆ ಬರುತ್ತದೆ. ನನ್ನದು, ನನ್ನವರು, ನನ್ನ ಆಸ್ತಿ ಎನ್ನುವ ಮೋಹಗುಣದೊಂದಿಗೆ ನೀನು ಮಾಡುವ ಇಂತಹ ಕಾರ್ಯಗಳು ಪಾಪವನ್ನೇ ತಂದಿಡುವವು. ಮಾನವ ಜನ್ಮದೊಳಗೆ ಬಂದಿರುವುದು ಜ್ಞಾನ ಧನವನ್ನು ಸಂಪಾದಿಸಿಕೊಳ್ಳುವುದಕ್ಕೇ ಹೊರತು, ಪ್ರಾಪಂಚಿಕ ಹಣ ಅಕ್ರಮ ಮಾರ್ಗದಲ್ಲಿ ಸಂಪಾದಿಸುವುದಕ್ಕಲ್ಲ. ನೀನು ಪ್ರಪಂಚ ಧನದಲ್ಲಿ ಧನಿಕನಾದರೂ ಪ್ರಯೋಜನವಿಲ್ಲ. ಜ್ಞಾನ ಧನದಲ್ಲಿ ಧನಿಕನಾಗದೆ ಹೋದರೆ ನಿನ್ನ ಜೀವನವೇ ವ್ಯರ್ಥವಾಗುತ್ತದೆ. ಜ್ಞಾನ ಧನದಿಂದ ಜೀವನಕ್ಕೆ ಸಾಫಲ್ಯವೇರ್ಪಡುತ್ತದೆ. ಹಾಗೆ ಇಲ್ಲದ ದಿನ ನೀನು ಭೂಮಿಗೆ ರಾಜನಾದರೂ ಪ್ರಯೋಜನವಿಲ್ಲ. ನೀನು ಮಾಡಿಕೊಂಡಿರುವ ಪಾಪ ನಂತರ ಜನ್ಮದಲ್ಲಿ ಬಾಧಿಸುತ್ತದೆ.

(ಈ ವಿಧವಾಗಿ ಹೇಳಿದ ಯೋಗಿಯ ಮಾತುಗಳನ್ನು ಧನಿಕನು ಕೇಳದಂತೆ ಇವರು ನನ್ನನ್ನು ಮಾತುಗಳಿಂದ ಮೋಸಮಾಡುತ್ತಿದ್ದಾರೆ. ಇವರಿಗಿಂತ ನನಗೆ ಹೆಚ್ಚಿನ ಬುದ್ಧಿ ಇದೆ. ಇವರ ಮಾತುಗಳು ಕೇಳಿ ಮೋಸ ಹೋಗುವಷ್ಟು ಮೂರ್ಖನಲ್ಲವೆಂದುಕೊಂಡನು. ಆ ಧನಿಕನ ಉದ್ದೇಶವನ್ನು ಗ್ರಹಿಸಿದ ಯೋಗಿ ನಾನು ಹೇಳಿದರೂ ಕೇಳದಿರುವಾಗ ನಿನ್ನ ಇಷ್ಟ ಪ್ರಕಾರವೇ ನಡೆದುಕೋ ಎಂದನು. ಆ ಯೋಗಿ ಹೇಳಿದ ಮಾತುಗಳನ್ನು ಸಹ ಕೇಳದ ಈ ಸರ್ಪ ರೂಪ ಜೀವಿ,

ಪಾಪಭೀತಿ ಇಲ್ಲದೆ ತನ್ನ ಇಷ್ಟ ಬಂದಂತೆ ಇತರರ ಶ್ರಮವನ್ನು ಬಡ್ಡಿಗಳ ರೂಪದಲ್ಲಿ ದೋಚಿಕೊಳ್ಳುತ್ತಾ ಇದಕ್ಕಿಂತ ಆನಂದ ಇಲ್ಲವೆಂದುಕೊಳ್ಳುತ್ತಾ ಜೀವಿಸತೊಡಗಿದನು. ತನ್ನ ಮಾತುಗಳನ್ನು ಸಹ ಲೆಕ್ಕಿಸದ ಧನಿಕನ ಬಗ್ಗೆ ಬೇಸರಗೊಂಡು, ಇಂತಹ ಮೂರ್ಖರಿಗೆ ಎಷ್ಟು ಜ್ಞಾನ ಹೇಳಿದರೂ ಪ್ರಯೋಜನವಿಲ್ಲವೆಂದು ತಿಳಿದು, ತನ್ನ ಜ್ಞಾನಕ್ಕೂ ಸಹ ಬೆಲೆ ಕೊಡದ ಆತನನ್ನು ಪ್ರಪಂಚ ರೀತಿಯಲ್ಲಿ ಏನೂ ಮಾಡಲಾರದ ಯೋಗಿ, ತನ್ನ ಮನೋ ಸಂಕಲ್ಪ ಬಲದಿಂದಲೆ ಈತನಿಂದ ಜ್ಞಾನ ಆಶ್ರಯಿಸುವಂತೆ ಮಾಡುತ್ತೇನೆಂದು ತಿಳಿದು, ಯೋಗಾಸೀನನಾಗಿ ಕಣ್ಣು ಮುಚ್ಚಿಕೊಂಡು ಕುಳಿತು "ನನ್ನ ಮಾತು ಕೇಳದ ಈ ಮೂರ್ಖನಿಗೆ ಬಹಳ ಕಾಲ ಬದುಕುವ ಹಾವು ಜನ್ಮ ಲಭಿಸಬೇಕು" ಎಂದು ತನ್ನ ಮನಸ್ಸಿನಿಂದ ಬಲವಾದ ಸಂಕಲ್ಪವನ್ನು ಮೆದುಳಿನಿಂದ ಶೂನ್ಯದೊಳಗೆ ಬಿಟ್ಟನು. ಆ ಸಂಕಲ್ಪ ಕಣ್ಣಿಗೆ ಕಾಣಿಸದಂತಾಗಿ ತೀಕ್ಷ್ಣವಾದ ಬಾಣದಹಾಗೆ ಪ್ರಯಾಣಿಸಿ, ಧನಿಕನನ್ನು ಹುಡುಕಿ ಆತನೊಳಗೆ ತೂರಿಹೋಗಿ ಆತನ ತಲೆಯಲ್ಲಿ ಸೂಕ್ಷ್ಮವಾಗಿರುವ ಕರ್ಮ ಚಕ್ರದಲ್ಲಿ ಪ್ರತಿಷ್ಠಿಸಲ್ಪಟ್ಟಿತು.

ಆ ದಿನ ಯೋಗಿ ಸಂಕಲ್ಪ ಬಲವೇ ಈದಿನ ಧನಿಕನನ್ನು ಹಾವು ಜನ್ಮಕ್ಕೆ ತಂದಿದೆ. ಈ ಜನ್ಮ ಬರುವುದಕ್ಕಿಂತ ಮೊದಲು ಧನಿಕನಾಗಿ ಇರುವ ದಿನಗಳಲ್ಲಿ ವಿಪರೀತವಾಗಿ ಹಣವನ್ನು ಸಂಪಾದಿಸಿದರೂ ಕೊನೆಗೆ ಮನಶ್ಶಾಂತಿ ಇಲ್ಲದೆ ಹೋಗಿದೆ. ಮಧ್ಯವಯಸ್ಸಿನಿಂದಲೇ ಮಾನಸಿಕ ಬಾಧೆಯನ್ನು ಅನುಭವಿಸಿದ್ದಾನೆ. ಸಕ್ಕರೆ ವ್ಯಾಧಿ ಬರುವುದರಿಂದ ತಿಂಡಿ ತಿನ್ನುವುದರಲ್ಲಿ ವೈದ್ಯರು ನಿಬಂಧನೆಗಳು ಇಟ್ಟಿದ್ದಾರೆ. ಬಡವನು ಕೂಳಿಗೆ ಗತಿ ಇಲ್ಲದೆ ಸ್ವಲ್ಪವೇ ತಿನ್ನುವಂತೆ ತಿನ್ನಬೇಕಾಯಿತು. ಹಣದಿಂದ ಸರ್ವವೂ ಲಭಿಸುತ್ತದೆಂದುಕೊಂಡ ಧನಿಕನಿಗೆ ಹಣವಿದ್ದರೂ ಸರಿಯಾದ ಆಹಾರ ಸಹ ತಿನ್ನದ ಕಾಲಬರುತ್ತದೆನ್ನುವ ಸತ್ಯ ಮೊದಲು ತಿಳಿಯಿತು. ಸ್ವಲ್ಪ ದಿನಗಳಿಗೆ ಮೂತ್ರಪಿಂಡಗಳು (ಕಿಡ್ನೀಗಳು) ಕೆಲಸ ಮಾಡುವುದು ಕಡಿಮೆ ಆಗಿದೆಯೆಂದು, ಆಹಾರದಲ್ಲಿ ಉಪ್ಪನ್ನು ಬಳಸಬೇಡವೆಂದು ಹೇಳಿದ ವೈದ್ಯರ ಸಲಹೆ ಮೇರೆಗೆ ರುಚಿ ಇಲ್ಲದ ಆಹಾರ ತಿನ್ನ ಬೇಕಾಯಿತು. ಹಣವಿದ್ದೂ ಸಹ ಪಶುಗಳ ಹಾಗೆ ರುಚಿ ಇಲ್ಲದ ಆಹಾರ ತಿನ್ನುವುದರಿಂದ, ಸತ್ತುಹೋದನಂತರ ಹಣ ಹಿಂದೆ ಬರುವುದಿಲ್ಲವೆನ್ನುವ ಮಾತು ಪಕ್ಕಕ್ಕಿಟ್ಟು, ಹಣವಿದ್ದೂ ಸಹ ತಿನ್ನುವುದಕ್ಕೆ ಅರ್ಹತೆ

ಇಲ್ಲವೆಂದು, ಕರ್ಮ ಪ್ರತ್ಯಕ್ಷವಾಗಿ ತೋರಿಸುತ್ತಿದೆಯೆಂದು ಧನಿಕನು ಗ್ರಹಿಸಿದನು. ಹಾಗೇ ಸ್ವಲ್ಪ ಕಳೆದಾಗ ತನ್ನವರೆಂದುಕೊಂಡ ಸ್ವಂತ ಮಕ್ಕಳೇ, ತನ್ನ ಹಣವನ್ನು ಬಳಸಿಕೊಳ್ಳುತ್ತಾ, ತನ್ನ ಆಸ್ತಿಯನ್ನು ಅನುಭವಿಸುತ್ತಾ, ತನ್ನ ಮಾತನ್ನು ಲೆಕ್ಕ ಮಾಡುವುದಂತಿರುವುದೇ ಅಲ್ಲದೆ, ಬಾಯಿ ಮುಚ್ಚಿಕೊಂಡು ಸುಮ್ಮನೆ ಕುಳಿತುಕೋ ಎಂದು ಗದರಿಸತೊಡಗಿದರು. ಆ ಪರಿಣಾಮಗಳಿಗೆ ಬಾಧೆಪಟ್ಟ ಧನಿಕನಿಗೆ ಆದಿನದ ಯೋಗಿ ಮಾತುಗಳು ಜ್ಞಾಪಕಕ್ಕೆ ಬಂದವು. ಆದಿನ ಮಹರ್ಷಿ ಹೇಳಿದ ಜೀವನ ಸತ್ಯಗಳನ್ನು ಕೇಳದಂತೆ, ಮೇಲಾಗಿ ಅವರನ್ನೇ ಬುದ್ಧಿ ಕಡಿಮೆಯವರನ್ನಾಗಿ ಲೆಕ್ಕಿಸಿಕೊಂಡಿದ್ದಕ್ಕೆ ಮನಸ್ಸಿನಲ್ಲೇ ಬಾಧೆಪಟ್ಟನು. ಆ ದಿನ ಆತನ ಮಾತುಗಳಿಗೆ ಕಿವಿಗೊಡದಂತಿರುವುದಕ್ಕೆ ಯೋಗಿಯನ್ನು ಕ್ಷಮಾಪಣೆ ಕೋರಬೇಕೆಂದು, ಆತನ ಪಾದಗಳ ಮೇಲೆ ಬಿದ್ದು ಅಳಬೇಕೆಂದುಕೊಂಡನು.

ಆ ವಿಧವಾಗಿ ತಿಳಿದ ಧನಿಕನು ತನ್ನವರ ಮೇಲೆ, ತನ್ನ ಆಸ್ತಿ ಮೇಲೆ, ತನ್ನ ಧನದ ಮೇಲೆ ಅಸೂಯೆ ಉಂಟಾಗಿ ಯೋಗಿಯನ್ನು ಹುಡುಕುತ್ತಾ ಹೋದನು. ಸ್ವಲ್ಪ ಕಾಲದ ನಂತರ ಯೋಗಿ ಹತ್ತಿರಕ್ಕೆ ಸೇರಿ, ಆತನ ಪಾದಗಳ ಮೇಲೆ ಬಿದ್ದು ತನ್ನ ತಪ್ಪನ್ನು ಕ್ಷಮಿಸಬೇಕೆಂದು, ತಾನು ನಂಬಿಕೊಂಡ ಹಣ ಎಂತಹ ಸುಖವನ್ನು ಕೊಡಲಿಲ್ಲವೆಂದು, ನಿಮ್ಮ ಮಾತು ಕೇಳದ ನನಗೆ ಎಷ್ಟು ಪಾಪ ಬಂದಿದೆಯೋ ಎಂದು ಅಳತೊಡಗಿದನು. ಅದನ್ನು ನೋಡಿದ ಯೋಗಿ ಧನಿಕನೊಂದಿಗೆ ಹೀಗೆ ಹೇಳಿದ್ದಾನೆ.)

**ಯೋಗಿ :–** ಅಗ್ನಿ ಸುಡುತ್ತದೆಂದು ಹೇಳಿದರೂ ನೀನು ಕೇಳಲಿಲ್ಲ. ನಮ್ಮ ಮಾತುಗಳನ್ನೇ ಅವಿವೇಕವಾಗಿ, ನಿನ್ನ ಯೋಚನೆಗಳನ್ನೇ ವಿವೇಕವಾಗಿ ಅಂದು ಕೊಂಡಿದ್ದೆ. ಈಗ ಅನುಭವಕ್ಕೆ ಬಂದಿರುವುದಕ್ಕೆ ನಮ್ಮ ಮಾತುಗಳು ಜ್ಞಾಪಕಕ್ಕೆ ಬಂದಿವೆ. ಆದರೂ ನೀನು ಅನುಭವಿಸಿರುವುದು ಈ ಜನ್ಮದಲ್ಲಿ ಮಾಡಿಕೊಂಡ ಪಾಪವಲ್ಲ. ಇದು ಎಲ್ಲವೂ ಹೋದ ಜನ್ಮದಲ್ಲಿ ಮಾಡಿಕೊಂಡಿರು ವುದೇ. ಈ ಜನ್ಮದಲ್ಲಿ ಮಾಡಿಕೊಂಡ ಪಾಪವನ್ನು ಮುಂಬರುವ ಜನ್ಮಗಳಲ್ಲಿ ಅನುಭವಿಸಬೇಕಾಗಿ ಬರುತ್ತದೆ. ಅದು ಎಷ್ಟು ಭಯಂಕರವಾಗಿ ಇರುತ್ತದೋ ಹೇಳಲಾರೆವು. ಮನುಷ್ಯ

ತನಗಿರುವ ನೀಚವಾದ ಬುದ್ಧಿಯೇ ದೊಡ್ಡದೆಂದು ಕೊಳ್ಳುತ್ತಾನೆ. ಜ್ಞಾನಿಗಳು ಹೇಳಿದ ಮಾತುಗಳನ್ನು ಲೆಕ್ಕಿಸುವುದಿಲ್ಲ. ಅಷ್ಟೇ ಅಲ್ಲದೆ ನನಗೆ ಆಧ್ಯಾತ್ಮಿಕ ಎಂದರೆ ಸರಿಹೋಗದು ಎನ್ನುತ್ತಾ, ಜ್ಞಾನಿಗಳನ್ನು ಸಹ ಹೀಯಾಳಿಸಿ ಮಾತನಾಡುತ್ತಿರುತ್ತಾರೆ. **ಜ್ಞಾನಿಗಳು ಹೇಳುವ ಮಾತುಗಳು ಜೀವನ ಸತ್ಯಗಳೆಂದು, ಜೀವನ ತನ್ನ ಇಷ್ಟಬಂದಂತೆ ನಡೆಯುವುದಿಲ್ಲವೆಂದು, ತನ್ನ ಜೀವನವನ್ನು ಕರ್ಮಪ್ರಕಾರ ನಡೆಸುವ ಶಕ್ತಿ ಒಂದಿದೆಯೆಂದು, ಆ ಶಕ್ತಿಯನ್ನು ತಿಳಿದುಕೊಳ್ಳುವುದೇ ಆಧ್ಯಾತ್ಮಿಕವೆಂದು ತಿಳಿಯದೆ,** ತಾನು ಮಾಡುವ ಎಷ್ಟು ದೊಡ್ಡ ಪ್ರಪಂಚ ಕೆಲಸಗಳಾದರೂ ಹೊಟ್ಟೆಪಾಡಿಗೋಸ್ಕರವೇ ಎಂದು ತಿಳಿದುಕೊಳ್ಳದೆ, ಅತ್ಯುನ್ನತವಾದ ಆಧ್ಯಾತ್ಮಿಕವನ್ನೇ ಕಡಿಮೆ ಮಾಡಿ ಮಾತನಾಡುತ್ತಿರುತ್ತಾರೆ. ನಾನು ಮೊದಲೇ ಹೇಳಿದ ಜ್ಞಾನ ನಿನಗೆ ಜ್ಞಾಪಕಕ್ಕೆ ಬಂದಿದೆ. ಇಂದಿಗಾದರೂ ಪ್ರಾಪಂಚಿಕವಾಗಿ ಆಲೋಚಿಸುವುದು ತಪ್ಪೆಂದು ತಿಳಿದಿದೆ. ಈಗ ನೀನು ಏನು ಬಾಧೆಪಟ್ಟರೂ ಮಾಡಿಕೊಂಡ ಪಾಪ ಹೋಗುವುದಿಲ್ಲ. ಅದನ್ನು ಅನುಭವಿಸುವುದು ತಪ್ಪುವುದಿಲ್ಲ. ನೀನು ನನ್ನ ಹತ್ತಿರಕ್ಕೆ ಬಂದು ಅತ್ತರೂ ನಾನು ನಿನ್ನನ್ನು ಏನು ಮಾಡಲಾರೆನು.

**ಧನಿಕನು :–** ಸ್ವಾಮೀ! ನೀವು ಹಾಗೆ ಅಂದರೆ ನಾನು ಭರಿಸಲಾರೆನು. ನನ್ನನ್ನು ನೀವೇ ರಕ್ಷಿಸಬೇಕು, ಜ್ಞಾನಿಗಳಾದ ನೀವು ನಾನು ಈ ಪಾಪದಿಂದ ಹೊರಬಿದ್ದು ಮರು ಜನ್ಮದಲ್ಲಿ ಹಣವಿಲ್ಲದಿದ್ದರೂ ಶಾಂತಿಯಾಗಿ ಬದುಕುವುದಕ್ಕೆ ಮಾರ್ಗವನ್ನು ತೋರಿಸಿರಿ. ಇಂದಿನಿಂದ ನೀವು ಹೇಳಿದ ಹಾಗೆ ನಡೆದುಕೊಳ್ಳುತ್ತೇನೆ.

**ಯೋಗಿ :–** (ನಗುತ್ತಾ) ಕಷ್ಟ ಬಂದಾಗ ನಮ್ಮನ್ನು ನೀವು ಮಾನ್ಯರೆನ್ನುತ್ತೀರ. ಯಾವ ಕಷ್ಟವೂ ಇಲ್ಲದಿರುವಾಗ ನೀವೇ ನಮ್ಮನ್ನು ಸಾಮಾನ್ಯರ ಕೆಳಗೆ ಜಮಕಟ್ಟಿ ಹೇಳನವಾಗಿ ಮಾತನಾಡುತ್ತೀರ. ಈಗ ನೀನು ನನ್ನನ್ನು ದೊಡ್ಡವನೆಂದರೂ, ಎಷ್ಟು ಹೊಗಳಿದರೂ ನಾನೇನು ಮಾಡಲಾರೆನು. ನಿನ್ನ ಕಷ್ಟವನ್ನಾಗಲೀ, ನಿನ್ನ ಬಾಧೆಯನ್ನಾಗಲೀ ಇಲ್ಲದಂತೆ ಮಾಡಿಕೊಳ್ಳುವುದಕ್ಕೆ ನೀನೇ ಪ್ರಯತ್ನಿಸಬೇಕು. ಅದು ನಿನ್ನ ಕೈಯಲ್ಲಿನ ಕೆಲಸವೇ. ಇಂದಿನಿಂದಾದರೂ ನಿನ್ನ ಶೇಷ ಜೀವನವನ್ನು ದೈವ ಚಿಂತನೆಯಲ್ಲಿ ಪವಿತ್ರವಾಗಿ ಕಳಿ. ಹಾಗೆ ಮಾಡುವುದರಿಂದ ನೀನು ಹೊಸದಾಗಿ

ಪಾಪವನ್ನು ಸಂಪಾದಿಸಿಕೊಳ್ಳಲಾರೆ. ಹಳೆಯದನ್ನು ನೀನು ತಪ್ಪದೆ ಅನುಭವಿಸಬೇಕಾಗಿದೆ. ಅದರ ಬಾಧೆ ಸಹ ಹೋಗಬೇಕೆಂದರೆ ಒಂದು ವಿಧವಾಗಿ ಹೇಳಿದರೆ ಅದು ಪೂರ್ತಿಯಾಗಿ ಹೋಗುವುದಿಲ್ಲ ಆದರೆ, ಸಾಧ್ಯವಿದ್ದಷ್ಟು ಅದರಲ್ಲಿ ಅನುಭವಿಸುವ ಪ್ರಮಾಣವನ್ನು ಕಡಿಮೆ ಮಾಡಿಕೊಳ್ಳಬಹುದು. ಹಾಗೆ ತಪ್ಪಿಸಿಕೊಳ್ಳುವ ವಿಧಾನ ಮುಂದೆ ನಿನಗೇ ತಿಳಿಯಬಲ್ಲದು. ಈಗ ನಾನು ಕೊಡುವ ಸಲಹೆ, ನೀನು ಜ್ಞಾನ ಮಾರ್ಗದಲ್ಲಿ ಜೀವಿಸು. ಇದಕ್ಕಿಂತ ನಾನೇನು ಹೇಳಲಾರೆನು. (ಈ ವಿಧವಾಗಿ ಹೇಳಿ ಧನಿಕನನ್ನು ಯೋಗಿ ತನ್ನ ಹತ್ತಿರದಿಂದ ಕಳುಹಿಸಿದನು.)

**ಮಹರ್ಷಿ :–** ಚಿಂತಾಕಾಂತನಾದ ಧನಿಕನು ತಾನು ಮಾಡಿಕೊಂಡ ಪಾಪವನ್ನು ನೆನಪು ಮಾಡಿಕೊಳ್ಳುತ್ತಾ, ತಾನು ಧನಾರ್ಜನೆಯ ಆಸೆಯಿಂದ ಎಷ್ಟು ನೀಚವಾದ ಬದುಕು ಬದುಕಿದ್ದೇನೆಂದು ಅಂದುಕೊಳ್ಳುತ್ತಾ, ಇಂದಿನಿಂದ ಮಹರ್ಷಿ ಹೇಳಿದಂತೆ ಬದುಕಬೇಕೆಂದು ನಿರ್ಣಯಿಸಿಕೊಂಡನು. ಹಾಗೆ ತಿಳಿದುಕೊಂಡ ಆತನು ಆ ದಿನದಿಂದ ಇತರರನ್ನು ನೋಯಿಸದೆ ತನಗೆ ಕೈಲಾದ ಸಹಾಯ ಮಾಡತೊಡಗಿದನು. ಅಷ್ಟೇ ಅಲ್ಲದೆ ಅಕ್ರಮವಾಗಿ ತೆಗೆದುಕೊಂಡ ಇತರರ ಆಸ್ತಿಗಳನ್ನು ಅವರಿಗೇ ಕೊಟ್ಟನು. ಯೋಗಿ ಮಾತಿನ ಪ್ರಕಾರ ತನ್ನ ಶೇಷ ಜೀವನವನ್ನು ಜ್ಞಾನ ಮಾರ್ಗದಲ್ಲಿ ಕಳೆದನು. ಹಾಗೆ ಸ್ವಲ್ಪ ಕಾಲದವರೆಗು ಜೀವಿಸಿ ಮರಣವನ್ನು ಹೊಂದಿದನು. ಯೋಗಿ ಸಂಕಲ್ಪ ಶಾಪದಿಂದ ಹಾವು ಜನ್ಮದೊಳಗೆ ಬಂದು, ಅಡವಿಯಲ್ಲಿ ಅರವತ್ತು ಸಂವತ್ಸರಗಳು ಅನೇಕ ಕಷ್ಟಗಳನ್ನು ಅನುಭವಿಸಿ ಕೊನೆಗೆ ನನ್ನ ಹತ್ತಿರಕ್ಕೆ ಸೇರಿ ನನಗೆ ಸೇವೆ ಮಾಡುತ್ತಾ ಕಾಲ ಕಳೆಯುತ್ತಿದ್ದಾನೆ.

**ರಾಘವ :–** ಮಹಾತ್ಮಾ! ಒಂದು ಪ್ರಶ್ನೆ ಕೇಳುತ್ತಿದ್ದೇನೆ ತಪ್ಪಿದ್ದರೆ ಕ್ಷಮಿಸಿ. ನೀವು ಹೇಳಿರುವ ಮಾತಿನಲ್ಲಿ ಈ ಹಾವು ಪೂರ್ವ ಜನ್ಮದಲ್ಲಿ ಪಾಪ ಮಾಡಿಕೊಂಡ ಧನಿಕನೆಂದು, ಆತನ ಕರ್ಮ ವಿಮೋಚನೆಗಾಗಿಯೇ ನಿನ್ನ ಹತ್ತಿರಕ್ಕೆ ಬಂದಿದ್ದಾನೆಂದು ನನಗೆ ಅರ್ಥವಾಗಿದೆ. ಈತನು ಹಾವಿನ ರೂಪದಲ್ಲಿದ್ದು ನಿಮಗೆ ಸೇವೆ ಹೇಗೆ ಮಾಡುತ್ತಿದ್ದಾನೆನ್ನುವುದು ನನಗೆ ಅರ್ಥವಾಗಲಿಲ್ಲ.

**ಮಹರ್ಷಿ :–** ಸೇವೆ ಯಾರಾದರೂ, ಯಾವ ವಿಧವಾಗಿಯಾದರೂ ಮಾಡಬಹುದು.

ಈ ಹಾವಿನ ರೂಪದಲ್ಲಿರುವ ಈತನು ಇಲ್ಲೇ ಇದ್ದೂ ಕೀಟಕಗಳನ್ನು ನನ್ನ ಹತ್ತಿರಕ್ಕೆ ಬಾರದಂತೆ ನೋಡಿಕೊಳ್ಳುತ್ತಿದ್ದಾನೆ. ಅಷ್ಟೇ ಅಲ್ಲದೆ ತನ್ನ ಬಾಯಲ್ಲಿರುವ ಮಣಿಯನ್ನು ಹೊರಗೆ ಇಟ್ಟು ನಾನಿರುವ ಈ ಸ್ಥಳದಲ್ಲಿ ಬೆಳಕಿರುವಹಾಗೆ ಮಾಡಿದ್ದಾನೆ. ಈ ವಿಧವಾಗಿ ತನಗೆ ಕೈಲಾದ ಸೇವೆಯನ್ನು ಮಾಡುತ್ತಿದ್ದಾನೆ.

**ರಾಘವ :–** ಎಲ್ಲೋ ಅಡವಿಯಲ್ಲಿ ಹುಟ್ಟಿ ಬೆಳೆದ ಈ ಹಾವು, ಈ ಗುಹೆಯಲ್ಲಿರುವ ನಿಮ್ಮ ಹತ್ತಿರಕ್ಕೆ ಹೇಗೆ ಸೇರಿದೆ?

**ಮಹರ್ಷಿ :–** ಗತ ಜನ್ಮದಲ್ಲಿ ಧನಿಕನಾದ ಜೀವಿ, ಈ ಹಾವಿನ ರೂಪದಲ್ಲಿ ಅಡವಿಯಲ್ಲಿ ಹುಟ್ಟಿರುವುದು, ಅಡವಿಯಲ್ಲಿ ತಿರುಗುವುದು ನಡೆದಿದೆ. ಈ ಹಾವು ಗಂಡು ಜಾತಿಯ ಹಾವಾಗಿರುವುದರಿಂದ, ಮತ್ತೊಂದು ಹೆಣ್ಣುಹಾವನ್ನು ಸುಮಾರು ಐವತ್ತು ಸಂವತ್ಸರಗಳು ಜೊತೆ ಮಾಡಿಕೊಂಡು ಜೀವಿಸಿದೆ. ಯುಕ್ತವಯಸ್ಸಿನಿಂದ ಜೊತೆಯಾಗಿ ಕಳೆದ ಹೆಣ್ಣು ಹಾವನ್ನು ಒಂದು ದಿನ ಬೇಟೆಗಾರ ಹಿಡಿದುಕೊಂಡು ಹೋಗಿದ್ದಾನೆ. ಆ ವಿಷಯ ಈ ಹಾವಿಗೆ ತಿಳಿದಿಲ್ಲ. ತನ್ನ ಜೊತೆಗಿರುವ ಹಾವು ಕಾಣಿಸದಂತೆ ಹೋಗುವುದರಿಂದ ಈ ಹಾವು ಆ ಹಾವನ್ನು ಹುಡುಕುತ್ತಾ ಬಂದು ಕೊನೆಗೆ ನನ್ನ ಹತ್ತಿರಕ್ಕೆ ಬಂದು ಸೇರಿದೆ.

**ರಾಘವ :–** ಮಹಾತ್ಮಾ! ಒಂದು ಸಂಶಯ. ಇದು ನಾಗರ ಹಾವು ಅಲ್ಲವೆ! ನಾಗರ ಹಾವು ಎಂದರೆ ಹೆಣ್ಣು ಹಾವು ಎಂದು, ಕ್ಯಾರೆಹಾವು ಎಂದರೆ ಗಂಡು ಜಾತಿಯ ಹಾವು ಎಂದು ಇತರರು ಹೇಳಿದಾಗ ಕೇಳಿದ್ದೇನೆ. ಈಗ ನೀವು ಈ ನಾಗರ ಹಾವು ಗಂಡು ಜಾತಿಯದೆಂದು, ಇದಕ್ಕೆ ಹೆಣ್ಣು ಹಾವು ಜೊತೆಯಾಗಿ ಇರುತ್ತಿತ್ತೆಂದು ಹೇಳುತ್ತಿದ್ದೀರ. ನಾಗರ ಹಾವುಗಳಲ್ಲಿ ಗಂಡು ಹಾವು ಇರುತ್ತದಾ?

**ಮಹರ್ಷಿ :–** ರಾಘವಾ! ನಿನಗೆ ತಿಳಿಯದ ವಿಷಯಗಳು ಎಷ್ಟೋ ಇವೆ. ನಿನಗೆ ತಿಳಿಯದ ರಹಸ್ಯಗಳೆಲ್ಲವೂ ತಿಳಿಯಲ್ಪಡುತ್ತವೆ. ನಿನಗೆ ತಿಳಿದ ರಹಸ್ಯಗಳು ಲೋಕಕ್ಕೆ ತಿಳಿಯುತ್ತವೆ. ನೀನು ಎಲ್ಲ ವಿಷಯಗಳಲ್ಲಿ ಆಸಕ್ತಿಹೊಂದಿ ತಿಳಿದುಕೊಳ್ಳುತ್ತೀಯ. ಪ್ರತಿ ವಿಷಯದಲ್ಲಿನ ಸತ್ಯವು ನಿನಗೆ ತಿಳಿಯುತ್ತದೆ. ಆದ್ದರಿಂದ ನಾನು ನಿನ್ನನ್ನು "ಸತ್ಯಾನ್ವೇಷಿ" ಎಂದು ಕರೆಯುತ್ತಿದ್ದೇನೆ. ಈಗ ಈ ಹಾವಿನೊಂದರ ವಿಷಯ ತಿಳಿಸುತ್ತೇನೆ ಕೇಳು. ಭೂಮಂಡಲದಲ್ಲಿನ ಹಾವುಗಳಲ್ಲಿ ಒಟ್ಟು 80 ಜಾತಿಗಳಿವೆ.

ಇಲ್ಲಿಗೆ ಏಳು ಅಥವಾ ಎಂಟು ಜಾತಿಗಳು ಕಣ್ಮರೆಯಾಗಿ ಹೋಗಿವೆ. ಉಳಿದ ಜಾತಿಗಳಲ್ಲಿ ನಾಗರ ಹಾವು ಎನ್ನುವುದು ಒಂದು ಜಾತಿ ಆದಾಗ, ಈ ನಾಗರ ಹಾವು ಜಾತಿಯಲ್ಲಿ ಹನ್ನೊಂದು (11) ವಿಧಗಳಿವೆ. ಈ ಹನ್ನೊಂದು ಜಾತಿಗಳಲ್ಲಿ ಹದಿನೆಂಟು (18) ಅಡಿಗಳ ಉದ್ದವಿರುವ ನಾಗರಾಜ (ಕಿಂಗ್ ಕೋಬ್ರ) ಎನ್ನುವುದು ದೊಡ್ಡ ಜಾತಿ ಆದಾಗ, ಉಳಿದ ಹತ್ತು ಜಾತಿಗಳಲ್ಲಿ ಮಣಿ ಇರುವ ಹಾವು ಉತ್ತಮವಾದದ್ದು. ಒಂದು ಮಣಿ ಜಾತಿಯಾದಾಗ ಉಳಿದ ಒಂಬತ್ತು (9) ಜಾತಿಗಳ ನಾಗರ ಹಾವುಗಳಿವೆ. ಹನ್ನೊಂದು ಜಾತಿಗಳಲ್ಲೂ ಹೆಣ್ಣು, ಗಂಡು ಎರಡು ವಿಧಗಳು ಇರುತ್ತವೆ. ನಾಗರಹಾವು ಎಡೆಗಳನ್ನನುಸರಿಸಿ ಅದು ಹೆಣ್ಣು ಹಾವಾ ಅಥವಾ ಗಂಡು ಹಾವಾ ಎಂದು ಗುರುತಿಸಬಹುದು. ಗಂಡು ಹಾವಿನ ಎಡೆ ದುಂಡಾಗಿರುತ್ತದೆ. ಹೆಣ್ಣು ಹಾವಿನ ಎಡೆ ದುಂಡಾಗಿರದೆ, ಎಡಗಡೆ ಅಳತೆ ಸ್ವಲ್ಪ ಕಡಿಮೆಯಾಗಿ ಇರುತ್ತದೆ. ಈ ಜಾತಿಯಲ್ಲಿ ಹೆಣ್ಣು, ಗಂಡು ಇವೆ ಎನ್ನುವುದಕ್ಕೆ ಆಧಾರವಾಗಿ ನಾಗರ ಕಟ್ಟೆ ಹತ್ತಿರವಿರುವ ನಾಗ ಪ್ರತಿಮೆಗಳನ್ನು ನೋಡಬಹುದು. ನಾಗ ಪ್ರತಿಮೆಗಳ ಪ್ರತಿಷ್ಠೆ ಇರುವ ಪ್ರತಿಯೊಂದು ಕಡೆ ಎರಡು ಎಡೆ ಬಿಚ್ಚಿರುವ ಹಾವುಗಳು ತಳಕು ಹಾಕಿಕೊಂಡ ಪ್ರತಿಮೆ ಇರುತ್ತದೆ. ನಾಗ ಪ್ರತಿಷ್ಠೆಯನ್ನು ನೋಡಿದವರಿಗೆ ಯಾರಿಗಾದರೂ ಸುಲಭವಾಗಿ ಅರ್ಥವಾಗುವುದಕ್ಕೆ ಹಿರಿಯರು ಹಾಗೆ ನಾಗ ಪ್ರತಿಮೆಯನ್ನು ಇಟ್ಟಿದ್ದಾರೆ. ಇನ್ನು ಕೇರೆಹಾವು ಎನ್ನುವುದು ಸಹ ಒಂದು ಪ್ರತ್ಯೇಕವಾದ ಗುಂಪಿನ ಹಾವುಗಳಿವೆ. ಕೇರೆಹಾವು ಗುಂಪಿನಲ್ಲಿಯೂ ಸಹ ಹೆಣ್ಣು, ಗಂಡು ಹಾವುಗಳಿರುತ್ತವೆ. ಕೇರೆಹಾವು ಎಂದರೆ ಗಂಡು ಹಾವು ಎಂದು ಅರ್ಥವಲ್ಲ. ಈ ಜಾತಿ ಹಾವುಗಳು ಬಹಳ ವೇಗವಾಗಿ ಹೋಗುವವು ಆದ್ದರಿಂದ ಅವುಗಳಿಗೆ ಆ ಹೆಸರು ಬಂದಿದೆ. ಯಾವ ಕೆಲಸವನ್ನಾದರೂ ಚೆನ್ನಾಗಿ ಮಾಡುವರೆಂದು ಹೆಸರು ತಂದುಕೊಂಡ ಹೆಂಗಸರನ್ನು ಸಹ ಗಂಡಸರೊಂದಿಗೆ ಸಮಾನವಾಗಿ ನಾವು ಹೊಗಳುವಹಾಗೆ, ವೇಗದಲ್ಲಿ ಮುಂದಿರುವುದರಿಂದ ಈ ಹಾವಿನ ಜಾತಿಯಲ್ಲಿನ ಹೆಣ್ಣು, ಗಂಡು ಎಲ್ಲ ಹಾವುಗಳನ್ನು ಕೇರೆಹಾವುಗಳೆನ್ನುವುದು ನಡೆಯುತ್ತಿದೆ. ಕೇರೆಹಾವುಗಳ ಹಾಗೆ ನಾಗ ಜಾತಿಯೆಲ್ಲವನ್ನು ನಾಗರಹಾವುಗಳೆಂದರೂ, ಅವುಗಳಲ್ಲಿ ಹೆಣ್ಣು ಗಂಡು ಬೇರೆ ಬೇರೆಯೆಂದು ತಿಳಿದುಕೊಂಡಿದ್ದೇವಲ್ಲವೆ! ಹಾವಿನ

ಎಡೆಯನ್ನನುಸರಿಸಿ ಹೆಣ್ಣು, ಗಂಡನ್ನು ಗುರುತಿಸಬಹುದು ಎಂದು ಸಹ ಹೇಳಿಕೊಂಡಿದ್ದೇವೆ. ಹಾಗೆ ಗುರುತಿಸಿದ್ದನ್ನು ಹೆಣ್ಣು ಹಾವು ಎನ್ನುತ್ತಿದ್ದೇವೆ. ಹಾಗೇ ಗಂಡು ಹಾವು (ಕೋಡೆನಾಗು) ಎನ್ನುತ್ತಿದ್ದೇವೆ. ಇದನ್ನನುಸರಿಸಿ ಇಲ್ಲಿರುವ ಈ ಹಾವನ್ನು ಗಂಡುಹಾವು ಎನ್ನಬಹುದು.

**ರಾಘವ :–** ಮಹಾತ್ಮಾ! ನಿಮ್ಮಿಂದ ಇಲ್ಲಿಯವರೆಗು ನನಗೆ ತಿಳಿಯದ ರಹಸ್ಯ ಒಂದು ತಿಳಿದಿದೆ. ಇಂತಹ ಎಷ್ಟೋ ವಿಷಯಗಳನ್ನು ತಿಳಿದುಕೊಳ್ಳಬೇಕೆಂದಿದೆ.

**ಮಹರ್ಷಿ :–** ನಡೆಯಬೇಕಾಗಿರುವ ಮುಂದಿನ ಕಾಲದಲ್ಲಿ ಎಲ್ಲಾ ತಿಳಿಯುತ್ತವೆ. ಈಗ ನಿನ್ನ ಕರ್ತವ್ಯ ನೀನು ಮಾಡು.

**ರಾಘವ :–** ನಿಮಗೆ ತಿಳಿಯದಿರುವುದು ಏನಿದೆ? ನಾನು ಸಮಾಜದಲ್ಲಿ ಬೇಸರಗೊಂಡು ಬಂದಿರುವವನು. ಈ ಅಡವಿಯೊಳಗೆ ಬಂದು ಕಾಲಕಳೆಯುತ್ತಿದ್ದೇನೆ. ನನ್ನ ಜೀವನವೇ ನನಗೆ ಸಮಸ್ಯೆಯಾಗಿ, ಹೇಗೆ ಬದುಕಬೇಕೋ ಸಹ ತಿಳಿಯದವನು. ಜೀವನದಲ್ಲಿ ಯಾವ ಧ್ಯೇಯ ಇಲ್ಲದವನು, ನನ್ನ ಕರ್ತವ್ಯವೇನೋ ತಿಳಿಯದವನು. ನೀವು ಹೇಳಿದಂತೆ ನಡೆಯಬೇಕೆನ್ನುವುದೇ ಪ್ರಸ್ತುತ ನನ್ನ ಕರ್ತವ್ಯ ಹೊರತು, ನನಗೆ ಈ ಜಗತ್ತಿನಲ್ಲಿ ಯಾವ ಕರ್ತವ್ಯವೂ ಇಲ್ಲ.

**ಮಹರ್ಷಿ :–** ನಾನು ಹೇಳಿದಂತೆ ನಡೆಯಬೇಕೆನ್ನುವುದು ನಿನ್ನ ಕರ್ತವ್ಯವಾದರೆ ಹಾಗೇ ಮಾಡು. ನೀನು ಇಲ್ಲಿಂದ ದಕ್ಷಿಣ ದಿಕ್ಕಿಗೆ ಪ್ರಯಾಣಿಸುತ್ತಾ ಹೋಗುತ್ತಿರು. ಯಾವುದೋ ಒಂದು ಕಡೆ ನಿನಗೆ ಒಬ್ಬ ಗುರುವಿನಂತಹ ವ್ಯಕ್ತಿ ಸಿಗುತ್ತಾನೆ. ಆತನು ದೊಡ್ಡ ಯೋಗಿ. ಆತನನ್ನು ಗುರುವಾಗಿ ಹೇಳಿಕೊಂಡರೂ ಒಪ್ಪಿಕೊಳ್ಳುವುದಿಲ್ಲ. ಎಲ್ಲರಿಗೂ ದೇವರೇ ಗುರುವು ಹೊರತು ಮನುಷ್ಯರು ಗುರುಗಳು ಅಲ್ಲ ಎನ್ನುವುದು ಆತನ ಸೂತ್ರ. ಆದ್ದರಿಂದ ನಾನೂ ಸಹ ಆತನನ್ನು ಗುರುವಿನಂತಹವನು ಎಂದಿದ್ದೇನೆ ಹೊರತು ಗುರುವು ಎಂದು ಹೇಳಲಿಲ್ಲ. ಆತನು ಎಷ್ಟೋ ದೈವಜ್ಞಾನವನ್ನು ವಿವರವಾಗಿ ಹೇಳುವ ಸಮರ್ಥನು. ಆತನು ಹೊರತು ಆಧ್ಯಾತ್ಮಿಕ ತತ್ವಜ್ಞಾನಿ ಪ್ರಸ್ತುತ ಕಾಲದಲ್ಲಿ ಯಾರೂ ಇಲ್ಲವೆಂದೇ ಹೇಳಬಹುದು. ಇಂದಿನ ಕಾಲದಲ್ಲಿ ಆಧ್ಯಾತ್ಮಿಕದ ಮೇಲೆ ಯಾರಿಗೂ ಆಸಕ್ತಿ ಇಲ್ಲ. ಆದ್ದರಿಂದ ಆತನು ಯಾರಿಗೂ ತನಗೆ ತಿಳಿದ ಆತ್ಮ ಜ್ಞಾನವನ್ನು ಹೇಳುತ್ತಿಲ್ಲ. ಜಿಜ್ಞಾಸೆ ಇರುವವರಿಗೇ ಆಧ್ಯಾತ್ಮಿಕ ಅಗತ್ಯ. ಜಿಜ್ಞಾಸೆ

ಇಲ್ಲದವರಿಗೆ ಆದಾಯ ಅಗತ್ಯ. ಅದರಿಂದ ಈದಿನ ಯಾರೂ ಆಧ್ಯಾತ್ಮಿಕ ಕೇಂದ್ರವಾದ ಅಸಲಾದ ಯೋಗಿಗಳ ಹತ್ತಿರಕ್ಕೆ ಹೋಗದಂತೆ ಪ್ರಪಂಚ ಧನವನ್ನುಂಟುಮಾಡಿ, ಮಹಿಮೆಗಳು ತೋರಿಸುವ ಬಾಬಾಗಳ ಹತ್ತಿರಕ್ಕೆ ಹೋಗುತ್ತಿದ್ದಾರೆ. **ಕೆಲವರಾದರೆ ಯಾವುದು ಆಧ್ಯಾತ್ಮಿಕ ನಿಲಯವೋ, ಯಾವುದು ಆದಾಯ ನಿಲಯವೊ ತಿಳಿಯದೆ ಮೋಸ ಹೋಗುತ್ತಿದ್ದಾರೆ.** ಅಂತಹ ತೊಡಕುಗಳು ಯಾವುವು ಇಲ್ಲದೆ ನಾನು ಹೇಳುವ ಗುರುವು ನಿನಗೆ ಸಿಗುತ್ತಾನೆ. ಆತನಿಂದ ಧರ್ಮಗಳನ್ನು ತಿಳಿದುಕೋ. ತಿಳಿಸುವ ಶಕ್ತಿ ಆತನಿಗಿದೆ, ತಿಳಿದುಕೊಳ್ಳುವ ಆಸಕ್ತಿ ನಿನಗಿದೆ. ನೀನು ತಿಳಿದುಕೊಂಡ ಧರ್ಮಗಳನ್ನು ಇತರರಿಗೆ ಬೋಧಿಸು, ಅಧರ್ಮಗಳನ್ನು ಖಂಡಿಸು. ಹಾಗೆ ಅಧರ್ಮಗಳನ್ನು ಖಂಡಿಸುವುದರಿಂದ ನಿನಗೆ ಕೆಲವರು ಶತ್ರುಗಳು ಸಹ ತಯಾರಾಗುತ್ತಾರೆ, ಆದರೂ ಪರವಾಗಿಲ್ಲ. ನಿನಗೇನಾದರೂ ಆಪತ್ತು ಸಮಯ ಬಂದರೆ ಅಲ್ಲಿಗೆ ಈ ಹಾವು ಬಂದು ನಿನ್ನನ್ನು ಕಾಪಾಡುತ್ತದೆ. ನೀನು ಇಲ್ಲಿಂದ ಹೋದ ಸ್ವಲ್ಪ ಕಾಲಕ್ಕೆ ನೀನಿರುವ ಜಾಗಕ್ಕೆ ಈ ಹಾವು ಸಹ ಬರುತ್ತದೆ. ಆದರೆ ಈ ಹಾವು ಯಾರಿಗೂ ಕಾಣಿಸದೆ ರಹಸ್ಯವಾಗಿ ಇದ್ದು ನಿನಗೆ ಜೊತೆಯಾಗಿ ಇರುತ್ತದೆ. ಧೈರ್ಯದಿಂದ ಹೋಗು...

**ರಾಘವ :–** ಮಹಾತ್ಮಾ! ನಿಮ್ಮ ದರ್ಶನ ನನಗೆ ಪುನಃ ಯಾವಾಗ ಲಭಿಸುತ್ತದೆ?

**ಮಹರ್ಷಿ :–** ಅಷ್ಟಗ್ರಹ ಕೂಟಮಿ ಬಂದಾಗ ನಾನೇ ನಿನಗೆ ಕಾಣಿಸುತ್ತೇನೆ. ನೀನು ಇಲ್ಲಿಗೆ ಬರುವ ಅಗತ್ಯವಿಲ್ಲ. ನೀನು ಹೋಗುವಾಗ ಮೇಲಿನ ರಂಧ್ರವನ್ನು ಮುಚ್ಚಿ ಹೋಗು.

(ಈ ವಿಧವಾಗಿ ರಾಘವ ಆ ಯೋಗಿ ಹತ್ತಿರ ಅಪ್ಪಣೆ ತೆಗೆದುಕೊಂಡು ಹೊರಗೆ ಬಂದು, ತಾನು ತೆಗೆದ ರಂಧ್ರವನ್ನು ಮೊದಲಿರುವಂತೆ ಇಟ್ಟಿಗೆಗಳಿಂದ ಮುಚ್ಚಿ, ಮಣ್ಣು ಮುಚ್ಚಿ ಯಾರಿಗೂ ಕಾಣಿಸದಂತೆ ಮಾಡಿದನು. ಅಷ್ಟರಲ್ಲಿ ಬೆಳಕರಿಯಿತು. ಸೂರ್ಯನು ಪೂರ್ವ ದಿಕ್ಕಿನಲ್ಲಿ ಕಾಣಿಸತೊಡಗಿದನು. ಆಗ ರಾಘವ ದಕ್ಷಿಣದಿಕ್ಕಿಗೆ ಪ್ರಯಾಣವನ್ನು ಸಾಗಿಸಿದನು. ಮುಂಜಾನೆ ವೇಳೆಯಲ್ಲಿ ಅಡವಿ ದೃಶ್ಯಗಳ ಪ್ರಕೃತಿ ಸೌಂದರ್ಯ ಎಷ್ಟೋ ಆಹ್ಲಾದವಾಗಿ ಕಾಣಿಸುತ್ತಿತ್ತು. ರಾಘವ

ಮುಂದಕ್ಕೆ ಹೋಗುತ್ತಿದ್ದಂತೆ ಎಷ್ಟೋ ಕ್ರೂರಮೃಗಗಳು ಕಾಣಿಸಿದರೂ, ಅವು ರಾಘವನನ್ನು ವಿಚಿತ್ರವಾಗಿ ನೋಡುತ್ತಾ, ರಾಘವನನ್ನು ಏನೂ ಮಾಡದೆ ಸುಮ್ಮನೆ ನೋಡುತ್ತಾ ನಿಂತಿವೆ. ಕ್ರೂರ ಮೃಗಗಳು ಸಹಿತ ತನ್ನ ಮೇಲೆ ದಾಳಿ ಮಾಡದೆ ನಿಂತು ನೋಡುವುದು ಮಹರ್ಷಿಯೊಂದರ ಆಶೀರ್ವಾದವೆ ಎಂದು ರಾಘವ ತನ್ನ ಮನಸ್ಸಿನಲ್ಲಿ ಅಂದುಕೊಂಡು ಮುಂದಕ್ಕೆ ಸಾಗಿ ಹೋಗುತ್ತಿದ್ದನು. ಹಾಗೆ ಬಹಳ ದೂರ ಹೋದ ನಂತರ ಯಾರೋ ದೊಡ್ಡದಾಗಿ ಕಿರುಚುವಂತೆ ಕೇಳಿಸಿತು. ಆ ಕೂಗು ತನಗೆ ಹತ್ತಿರವಾಗಿರುವ ಪೊದೆಗಳ ಮರೆಯಲ್ಲಿಯೇ ಇದೆ. ಆ ಕೂಗಿನಿಂದ ಯಾರೋ ಯಾವುದೋ ಆಪತ್ತಿನಲ್ಲಿರುವಹಾಗೆ ಗ್ರಹಿಸಿದ ರಾಘವ ಬೇಗನೆ ಅಲ್ಲಿಗೆ ಸೇರಿದನು. ಅಲ್ಲಿ ಒಂದು ಕರಡಿ ಒಬ್ಬ ಯುವಕನನ್ನು ಗಾಯಪಡಿಸುತ್ತಾ ಕಾಣಿಸಿತು. ಆ ಯುವಕನು ಪ್ರತಿಭಟಿಸುತ್ತಿದ್ದರೂ ಆ ಕರಡಿ ಲೆಕ್ಕ ಮಾಡಲಿಲ್ಲ. ಆ ದೃಶ್ಯವನ್ನು ನೋಡಿದ ರಾಘವ ಕೂಡಲೆ ಮರದ ಕೊಂಬೆಯನ್ನು ಮುರಿದು, ಯುಕ್ತಿಯಿಂದ ಕರಡಿ ಮೂತಿ ಮೇಲೆ ಹೊಡೆದಿದ್ದಾನೆ. ಮೂತಿ ಮೇಲೆ ಏಟು ಬಿದ್ದ ಕೂಡಲೇ ಭಯಪಟ್ಟ ಆ ಕರಡಿ ರಾಘವನನ್ನು ನೋಡಿ ಓಡಿಹೋಯಿತು.

ಆ ಸಮಯಕ್ಕೆ ರಾಘವ ಅಲ್ಲಿಗೆ ಬಾರದೆ ಹೋಗಿದ್ದರೇ, ಆ ಯುವಕನಿಗೆ ಪ್ರಮಾದವೇ ನಡೆದಿರುತ್ತಿತ್ತು. ಆ ಯುವಕನ ಕೈ ಗಾಯದಿಂದ ರಕ್ತ ಸೋರುವುದನ್ನು ನೋಡಿದ ರಾಘವ ಕೂಡಲೆ ತನ್ನ ಪಂಚೆಯಿಂದ ಸ್ವಲ್ಪ ಬಟ್ಟೆಯನ್ನು ಹರಿದು ಆತನ ಕೈಗೆ ಕಟ್ಟಿದ್ದಾನೆ. ಆಗ ಆ ಯುವಕನು ರಾಘವನೊಂದಿಗೆ ಹೀಗೆ ಹೇಳಿದ್ದಾನೆ.)

**ಯುವಕನು :–** ನೀನು ದೇವರಂತೆ ಸಮಯಕ್ಕೆ ಬಂದು ಕಾಪಾಡಿದ್ದೀಯ. ಸಮಯಕ್ಕೆ ನೀನು ಬಾರದೆ ಹೋಗಿದ್ದರೆ ಈ ಸಮಯಕ್ಕೆ ನಾನು ಮರಣಿಸಿ ಇರುತ್ತಿದ್ದೆನು. ನನ್ನ ಗುರುವು ಸಮಯಕ್ಕೆ ನಿನ್ನನ್ನು ಕಳುಹಿಸಿದ್ದಾನೆ. ಇಲ್ಲದೆ ಹೋದರೆ ಈ ಅರಣ್ಯದಲ್ಲಿ ನನ್ನನ್ನು ಕಾಪಾಡುವವರ್ಯಾರಿದ್ದಾರೆ.

**ರಾಘವ :–** ನಿನ್ನ ಗುರು ಯಾರು? ನೀನು ಏಕೆ ಅಡವಿಯೊಳಗೆ ಬಂದಿದ್ದೀಯ?

**ಯುವಕನು :–** ರಾಜಯೋಗಾನಂದ ಸ್ವಾಮಿ ನಮ್ಮ ಗುರುಗಳು. ನಾನು ನಮ್ಮ ಗುರುಗಳ ಆಶ್ರಮಕ್ಕೆ ಅಡುಗೆ ಸೌದೆಗಳಿಗೋಸ್ಕರ ನಿನ್ನೆಯ ದಿನ ಈ ಅಡವಿಯೊಳಗೆ ಬಂದಿದ್ದೇನೆ. ಅಡುಗೆ ಸೌದೆಗಳನ್ನು ಹೊರೆ ಕಟ್ಟಿಕೊಂಡು ಹೊರಡುವ ಸಮಯದಲ್ಲಿ ದಾಹವಾಯಿತು. ಆಗ ಸೌದೆಗಳ ಹೊರೆಯನ್ನು ಒಂದು ಕಡೆ ಇಟ್ಟು ನೀರಿಗಾಗಿ ಹುಡುಕುತ್ತಾ ಬಂದು, ನೀರು ಕಾಣಿಸಿದರೆ ನೀರು ಕುಡಿದು ಪುನಃ ಸೌದೆ ಹೊರೆಯನ್ನು ಇಟ್ಟಿರುವ ಸ್ಥಳಕ್ಕೆ ಹೋಗಬೇಕೆಂದುಕೊಂಡು ದಾರಿತಪ್ಪಿ ಹೋಗಿದ್ದೇನೆ. ದಾರಿ ತಪ್ಪಿ ಇನ್ನು ಸ್ವಲ್ಪ ದೂರ ಅಡವಿಯೊಳಗೆ ಬಂದಿದ್ದೇನೆ. ರಾತ್ರಿ ಎಲ್ಲವೂ ಈ ಅಡವಿಯಲ್ಲೇ ಕಳೆದಿದೆ. ಮಳೆ ಬಂದು ನೆಂದು (ಒದ್ದೆಯಾಗಿ) ಹಸಿವಾಗಿದ್ದರೂ ನಾನು ಬಾಧೆಪಡಲಿಲ್ಲ. ಬೆಳಕರಿಯಿತಲ್ಲವೆ! ಎಂದು ದಾರಿಗೋಸ್ಕರ ಹುಡುಕುತ್ತಿದ್ದರೆ, ಈ ಕರಡಿ ನನ್ನ ಮೇಲೆ ದಾಳಿ ಮಾಡಿದೆ. ಸಮಯಕ್ಕೆ ನೀನು ಬಂದಿದ್ದೀಯ.

(ಆಗ ರಾಘವ ಆ ಯುವಕನನ್ನು ಸುಧಾರಿಸಿ ಧೈರ್ಯವನ್ನು ಹೇಳಿ ತನ್ನ ಹಿಂದೆ ಬಾಯೆಂದು ಹೇಳಿ, ಆತನನ್ನು ಕರೆದುಕೊಂಡು ದಕ್ಷಿಣದಿಕ್ಕಿಗೆ ನಡೆದನು. ಹಾಗೆ ಸ್ವಲ್ಪ ದೂರ ಒಂದು ಗಂಟೆ ಸಮಯ ನಡೆದ ನಂತರ ಒಂದು ದಾರಿ ಸಿಕ್ಕಿದೆ. ಆ ದಾರಿ ಪಶ್ಚಿಮ ದಿಕ್ಕಿನಿಂದ ಬಂದು ದಕ್ಷಿಣದ ಕಡೆ ತಿರಿವು ತಿರಿಗಿದೆ. ರಾಘವ ಹೋಗಬೇಕಾಗಿರುವುದು ಸಹ ದಕ್ಷಿಣದಿಕ್ಕಿಗೆ, ಆದ್ದರಿಂದ ಆ ದಾರಿಹಿಂದೆ ದಕ್ಷಿಣ ದಿಕ್ಕಿಗೆ ನಡೆದನು. ಹಾಗೆ ಒಂದು ಗಂಟೆ ಕಾಲ ನಡೆದಾಗ ಆ ಪರಿಸರ ಪ್ರಾಂತವನ್ನು ಗಾಯಗೊಂಡ ಆ ಯುವಕನು ಗುರುತಿಸಿದ್ದಾನೆ. ಇನ್ನೂ ಸ್ವಲ್ಪ ದೂರ ಹೋದರೆ ತಮ್ಮ ಆಶ್ರಮ ಇದೆಯೆಂದು ಹೇಳಿದ್ದಾನೆ. ಹಾಗೆ ಒಂದು ಅರ್ಧ ಕಿಲೋಮೀಟರ್ ದೂರ ನಡೆದಾಗ ರಾಜಯೋಗಾನಂದ ಸ್ವಾಮಿ ಅವರ ಆಶ್ರಮ ಕಾಣಿಸಿದೆ. ಆಗ ರಾಘವನಿಗೆ ಗುಹೆಯಲ್ಲಿನ ಯೋಗಿ ಹೇಳಿದ ಮಾತುಗಳು ಜ್ಞಾಪಕ ಬಂದವು. ಶಿವ ಎಂದು ಹೆಸರು ಇರುವ ಆ ಯುವಕನು ರಾಘವನನ್ನು ರಾಜಯೋಗಾನಂದ ಸ್ವಾಮಿ ಅವರಿಗೆ ಪರಿಚಯ ಮಾಡಿಸಿದ್ದಾನೆ. ನಂತರ ನಡೆದ ವಿಷಯವೆಲ್ಲಾ ಹೇಳಿ ರಾಘವನೇ ಆ ಕರಡಿಯಿಂದ ಕಾಪಾಡಿದ್ದಾನೆ ಎಂದು ಹೇಳಿದ್ದಾನೆ. ಆಶ್ರಮಕ್ಕೆ ತಿರುಗಿ ಬರದ ಶಿವನಿಗಾಗಿ ಎದುರು ನೋಡಿದ

ರಾಜಯೋಗಾನಂದ ಸ್ವಾಮಿ ರಾಘವನು ಮಾಡಿದ ಸಹಾಯಕ್ಕೆ ರಾಘವನಿಗೆ ಧನ್ಯವಾದಗಳನ್ನು ತಿಳಿಸಿದನು. ಅದಕ್ಕೆ ರಾಘವ ಸ್ಪಂದಿಸಿ "ನೀವು ನನಗೆ ಗುರುಗಳು. ನನಗೆ ಧನ್ಯವಾದಗಳು ಹೇಳಿಸಿಕೊಳ್ಳುವ ಸಾಮರ್ಥ್ಯ ಇಲ್ಲದವನು" ಎಂದು ಹೇಳಿದ್ದಾನೆ.)

**********************************

ಆ ರಾತ್ರಿ ಸಮಯ ಆಲದ ಮರದ ಕೆಳಗೆ ರಾಘವನನ್ನು ಬಿಟ್ಟು ತಮ್ಮ ಪ್ರಾಂತಕ್ಕೆ ಹೋದ ಗಿರಿಜನರು, ರಾಘವನನ್ನು ಕುರಿತು ಯೋಚಿಸುತ್ತಾ ಮಳೆಯಲ್ಲಿ ನೆಂದುಹೋಗಿರುತ್ತಾನೆಂದುಕೊಂಡರು. ಬೆಳಗ್ಗೆ ಎದ್ದು, ರಾತ್ರಿ ರಾಘವನನ್ನು ಆಲದ ಮರಹತ್ತಿರ ಬಿಟ್ಟು ಬಂದ ವಿಷಯವನ್ನು ತಮ್ಮ ಕುಲಹಿರಿಯ, ಪ್ರಾಂತ್ಯಕ್ಕೆ ನಾಯಕನು ಆದ ಮಲ್ಲುದೊರೆಗೆ ಹೇಳಿದರು. ರಾಘವ ಬಾರದಂತಿರುವುದಕ್ಕೆ ಕಾರಣ ತಿಳಿಯದೆ ಹೋಗುವುದರಿಂದ ಮಲ್ಲುದೊರೆ ತನ್ನ ಮನುಷ್ಯರನ್ನು ರಾಘವನನ್ನು ಹುಡುಕುವುದಕ್ಕೆ ಕಳುಹಿಸಿದನು. ಅಡವಿಯಲ್ಲಿ ಆಲದ ಮರ ಹತ್ತಿರಕ್ಕೆ ಹೋದ ಗಿರಿಜನರು ಅಲ್ಲಿ ರಾಘವ ಇಲ್ಲದಿರುವುದರಿಂದ ಆಶ್ಚರ್ಯಪಟ್ಟು, ರಾಘವನನ್ನು ಅಡವಿ ಮೃಗಗಳು ಯಾವಾದರೂ ಸಾಯಿಸಿದ್ದಾವೇನೋ ಎಂದು ಅನುಮಾನಿಸಿದರು. ಹಾಗೆ ನಡೆದಿದ್ದರೆ ಅಲ್ಲಿ ಮೃಗಗಳ ಪಾದಗಳ ಗುರುತುಗಳಿರುತ್ತವೆಂದು ಅವುಗಳಿಗೋಸ್ಕರ ಹುಡುಕಿದ್ದಾರೆ. ಮಳೆ ಬಂದು ಒದ್ದೆಯಾಗಿರುವ ಆ ಪ್ರಾಂತ್ಯದಲ್ಲಿ ಯಾವ ಮೃಗವೊಂದರ ಪಾದ ಗುರುತುಗಳೂ ಕಾಣಿಸಲಿಲ್ಲ. ಹಾಗೆ ಹುಡುಕುತ್ತಿರುವ ಸಮಯದಲ್ಲಿ ರಾಘವನ ಪಾದ ಗುರುತುಗಳು ಅವರಿಗೆ ಕಾಣಿಸಿದವು. ರಾಘವ ಪಾದಗುರುತುಗಳು ದಕ್ಷಿಣ ದಿಕ್ಕಿಗೆ ಹೋದಂತೆ ತಿಳಿದುಕೊಂಡ ಆ ಗಿರಿಜನರು, ಆ ವಿಷಯವನ್ನು ತಮ್ಮ ಕುಲ ಹಿರಿಯನಾದ ಮಲ್ಲುದೊರೆಗೆ ತಿಳಿಸಿದ್ದಾರೆ. ಆ ವಿಷಯವನ್ನು ತಿಳಿದುಕೊಂಡ ಮಲ್ಲುದೊರೆ ರಾಘವ ಅದೇ ಕೆಲಸದಂತೆ ದಕ್ಷಿಣದ ಕಡೆಗೆ ಏಕೆ ಹೋಗಿದ್ದಾನೆ? ಎಂದು ಯೋಚಿಸಿ, ಆ ವಿಷಯ ಅರ್ಥವಾಗದೆ ಕೊನೆಗೆ ತನ್ನವರನ್ನು ರಾಘವನನ್ನು ಹುಡುಕುವುದಕ್ಕೆ ಹೋಗಲು ಹೇಳಿದ್ದಾನೆ. ಆಗ ಎಂಟು ಜನ ಗಿರಿಜನರು ತಮ್ಮ ಆಯುಧಗಳಾದ ಬಾಣಗಳನ್ನು ತೆಗೆದುಕೊಂಡು ರಾಘವನನ್ನು ಹುಡುಕುವುದಕ್ಕೆ

ಹೊರಟರು. ಮೊದಲು ಆಲದಮರದ ಹತ್ತಿರಕ್ಕೆ ಬಂದು ಅಲ್ಲಿಂದ ಪ್ರಾರಂಭವಾದ ರಾಘವನ ಪಾದ ಗುರುತುಗಳನ್ನು ಅನುಸರಿಸುತ್ತಾ ಮುಂದಕ್ಕೆ ಹೋದರು.

*********************************

(ರಾಘವ ಹೇಳಿದ ಮಾತುಗಳನ್ನು ಕೇಳಿದ ರಾಜಯೋಗಾನಂದ ಸ್ವಾಮಿ ಆಶ್ಚರ್ಯಪಡುತ್ತಾ ಹೀಗೆ ಹೇಳಿದ್ದಾನೆ)

**ರಾಜಯೋಗಾನಂದ :–** ನಾನು ನಿನಗೆ ಗುರುಗಳಾ! ಇದಕ್ಕೂ ಮೊದಲು ನಿನ್ನ ಮುಖವನ್ನು ನಾನು ನೋಡಲಿಲ್ಲ. ನಾನು ನಿನಗೆ ಹೇಗೆ ಗುರುವಾಗುತ್ತೇನೆ.

**ರಾಘವ :–** ಹೌದು. ಇಂದಿನಿಂದ ನೀವು ನನಗಾಗುವ ಗುರುಗಳು. ಆದ್ದರಿಂದ ನಿಮ್ಮನ್ನು ಹುಡುಕುತ್ತಾ ಬಂದಿದ್ದೇನೆ. ಮಾರ್ಗದಲ್ಲಿ ನಿಮ್ಮ ಭಕ್ತನು ಶಿವ ಕಾಣಿಸಿದ್ದಾನೆ. ಶಿವನಿಂದ ನಿಮ್ಮ ಹತ್ತಿರಕ್ಕೆ ಸೇರುವುದಕ್ಕೆ ನನಗೆ ಇನ್ನೂ ಸುಲಭವಾಯಿತು.

**ರಾಜಯೋಗಾ :–** ನಾನು ನಿನ್ನನ್ನು ಯಾವಾಗಲೂ ನೋಡಿಲ್ಲ. ನೀನು ನನ್ನನ್ನು ಯಾವಾಗಲೂ ನೋಡಿಲ್ಲ. ನನ್ನ ಪರಿಚಯವೇ ಇಲ್ಲದವನು. ನೀನು ನನ್ನನ್ನು ಹುಡುಕುತ್ತಾ ಬರುವುದೇನು? ಹಾಗೆ ಬಂದಿದ್ದೀಯೆಂದರೆ ಇದಕ್ಕೂ ಮೊದಲು ನನ್ನ ವಿಷಯ ನಿನಗೆ ತಿಳಿದಿರಬೇಕು. ನನ್ನ ವಿಷಯ ನಿನಗೆ ಮೊದಲೇ ತಿಳಿದಿದೆಯಾ?

**ರಾಘವ :–** ಹೌದು ಸ್ವಾಮೀ! ನಿಮ್ಮನ್ನು ಕುರಿತು ನನಗೆ ಮೊದಲೇ ತಿಳಿದಿದೆ. ಇಲ್ಲಿಗೆ ಉತ್ತರದಲ್ಲಿರುವ ಅಡವಿಯಲ್ಲಿ ಒಬ್ಬ ಮಹಾತ್ಮನು ನಿಮ್ಮನ್ನು ಕುರಿತು ತಿಳಿಸಿದ್ದಾನೆ. ನಿಮ್ಮ ಹತ್ತಿರಕ್ಕೆ ಹೋಗೆಂದಿದ್ದಾನೆ. ನಿಮ್ಮನ್ನು ಮೀರಿದ ಆಧ್ಯಾತ್ಮಿಕ ತತ್ವಜ್ಞಾನಿ ಈ ಭೂಮಿಮೇಲೆ ಯಾರೂ ಇಲ್ಲವೆಂದು ಹೇಳಿದ್ದಾನೆ. ಅದಕ್ಕೇ ನಾನು ನಿಮ್ಮ ಹತ್ತಿರಕ್ಕೆ ಬಂದಿದ್ದೇನೆ.

**ರಾಜಯೋಗಾ :–** ಮಹಾತ್ಮನಾ! ನನ್ನನ್ನು ಕುರಿತು ತಿಳಿಸಿದ್ದಾನಾ!! ಅದೂ ಉತ್ತರದಲ್ಲಿರುವ ಅಡವಿಯಲ್ಲಾ!!! ಆಕಡೆ ಅಡವಿಯಲ್ಲಿ ಅಮಾಯಕ ಗಿರಿಜನರು ಹೊರತು ಯಾರೂ ಇಲ್ಲವೇ, ಯಾರು ಹೇಳಿದ್ದಾರೆ ನಿನಗೆ?

**ರಾಘವ :–** ನಾನು ಹೇಳುವ ಮಾತು ನಿಜವೇ ಸ್ವಾಮೀ! ಅಡವಿಯಲ್ಲಿ ಯಾರಿಗೂ

ತಿಳಿಯದ ಒಬ್ಬ ಮಹಾತ್ಮನಿದ್ದಾನೆ. ಆತನು ಹೊರಗೆ ಯಾರಿಗೂ ಕಾಣಿಸದಂತೆ ಭೂಗರ್ಭ ಗುಹೆಯಲ್ಲಿ ಇದ್ದಾನೆ. ಆತನೇ ನಿಮ್ಮನ್ನು ಕುರಿತು ಹೇಳಿದ್ದಾನೆ. ಅಲ್ಲಿಂದ ದಕ್ಷಿಣದ ಕಡೆಗೆ ಹೋಗೆಂದು, ನಿನಗೆ ಗುರುವು ಸಿಗುತ್ತಾನೆಂದು ಹೇಳಿದ್ದಾನೆ. ಆತನ ಮಾತಿನ ಪ್ರಕಾರ ನೀವು ನನಗೆ ಸಿಕ್ಕಿದ್ದೀರಾ.

**ರಾಜಯೋಗಾ :–** ಭೂಗರ್ಭಗುಹೆಯಲ್ಲಿ ಇದ್ದಾನಾ! ಭೂಗರ್ಭದಲ್ಲಿರುವ ಆತನಿಗೆ ನನ್ನ ವಿಷಯ ಹೇಗೆ ತಿಳಿದಿರುತ್ತದೆ?

**ರಾಘವ :–** ನಿಮ್ಮ ಒಬ್ಬರ ವಿಷಯವೇ ಅಲ್ಲ, ಸರ್ವ ವಿಷಯಗಳು ಆತನಿಗೆ ತಿಳಿದಿವೆ.

**ರಾಜಯೋಗಾ :–** ಆತನು ಭೂಗರ್ಭದಲ್ಲಿ ಏನು ಮಾಡುತ್ತಿದ್ದಾನೆ?

**ರಾಘವ :–** ಯೋಗವಾಚರಿಸುತ್ತಿದ್ದಾನೆ. ಸ್ವಲ್ಪ ಕಾಲಕ್ಕೆ ಹೊರಗೆ ಬರುತ್ತಾನಂತೆ.

**ರಾಜಯೋಗಾ :–** (ಕಣ್ಣುಬ್ಬು ಮೇಲಕ್ಕೆ ಚಾಚಿ ಆಶ್ವರ್ಯವನ್ನು ವ್ಯಕ್ತ ಮಾಡುತ್ತಾ) ಆದರೆ ಆತನು ಸಾಧಾರಣ ಮನುಷ್ಯನಲ್ಲ. ಯಾವುದೋ ಮಹತ್ತರ ಶಕ್ತಿಯಾಗಿರುತ್ತಾನೆ. ಆತನ ಹೆಸರು ಏನೆಂದು ಹೇಳಿದ್ದಾನೆ?

**ರಾಘವ :–** ಆತನು ನನಗೆ ಹೆಸರೇ ಇಲ್ಲವೆಂದಿದ್ದಾನೆ. ಹೆಸರೊಂದಿಗೆ ಸಂಬಂಧವೇ ಇಲ್ಲವೆಂದಿದ್ದಾನೆ. ಹೆಸರಿದ್ದಷ್ಟು ಮಾತ್ರಕ್ಕೆ ರೂಪ, ರೂಪವಿದ್ದಷ್ಟು ಮಾತ್ರಕ್ಕೆ ಹೆಸರು ಇರುತ್ತದೆಂದುಕೊಳ್ಳುವುದು ತಪ್ಪೆಂದು ಹೇಳಿದ್ದಾನೆ.

**ರಾಜಯೋಗಾ :–** ಅನಂತಶಕ್ತಿಯಾದ ದೈವಕ್ಕೂ ಸಹ ಹೆಸರೇ ಇಲ್ಲ. ಆತನು ಯಾರೋ ದೊಡ್ಡವನೇ ಆಗಿರುತ್ತಾನೆ. ಸಾಮಾನ್ಯನಾದರೆ ತನ್ನ ಹೆಸರನ್ನು ಹೇಳುತ್ತಿದ್ದನು. ಅಷ್ಟಕ್ಕೂ ನೀನು ಯಾವ ಉದ್ದೇಶದಿಂದ ಇಲ್ಲಿಗೆ ಬಂದಿದ್ದೀಯ. ನೀನು ಸ್ವತಃವಾಗಿ ಬಂದಿದ್ದೀಯಾ? ಅಥವಾ ಆತನು ಕಳುಹಿಸಿದರೆ ಬಂದಿದ್ದೀಯಾ?

**ರಾಘವ :–** ಆತನು ಕಳುಹಿಸಿದರೇನೆ ಬಂದಿದ್ದೇನೆ. ದಕ್ಷಿಣ ದಿಕ್ಕಿಗೆ ಹೋದರೆ ನಿನಗೆ ಒಬ್ಬ ಗುರುವು ಲಭಿಸುತ್ತಾನೆಂದು ಆತನೇ ಹೇಳಿ ಕಳುಹಿಸಿದ್ದಾನೆ. ನಿಮ್ಮಿಂದ ಎಲ್ಲ ಸತ್ಯಗಳನ್ನು ತಿಳಿದುಕೋ ಎಂದಿದ್ದಾನೆ. ಆದ್ದರಿಂದ ಸತ್ಯಾನ್ವೇಷಣೆಯೇ ನನ್ನ ಉದ್ದೇಶ.

**ರಾಜಯೋಗಾ :–** ಅನ್ವೇಷಿಸುತ್ತೇನೆಂದರೆ ಬೇಡ ಎನ್ನುತ್ತೇನಾ! ನನ್ನಿಂದ ನಿನ್ನ ಅನ್ವೇಷಣೆ ಸಾಗುತ್ತದೆಂದರೆ ಇನ್ನೂ ಸಂತೋಷ. ಈಗ ನೀನು ವಿಶ್ರಾಂತಿಯನ್ನು ತೆಗೆದುಕೋ. ಸಾಯಂಕಾಲ ನಿನ್ನ ಅನುಮಾನಗಳನ್ನು ತಿಳಿಸಿದರೇ ಅದಕ್ಕೆ ನಾನು ಅನ್ವೇಷಣೆ ಮಾರ್ಗವನ್ನು ತಿಳಿಸುತ್ತೇನೆ.

*********************************

(ಎಂಟು ಜನ ಗಿರಿಜನರು ರಾಘವನನ್ನು ಹುಡುಕುತ್ತಾ ಸ್ವಲ್ಪ ದೂರ ಹೋದ ನಂತರ ಅವರ ಹಿಂದೆ ಇರುವ ನಾಯಿಗಳು ಬೊಗಳಲಾರಂಭಿಸಿದವು. ಆಗ ಆ ಅಡವಿ ಸಂಚರು ತಮಗೆ ಹತ್ತಿರದಲ್ಲಿ ಯಾವವೋ ಮೃಗಗಳಿವೆಯೆಂದು ತಿಳಿದು ಅವರ ಬಾಣಗಳನ್ನು ಸಿದ್ಧವಾಗಿ ಕೈಯ್ಯಲ್ಲಿ ಹಿಡಿದುಕೊಂಡು ನಿಂತರು. ಅಷ್ಟರಲ್ಲಿ ಆನೆಗಳ ಗುಂಪೊಂದರ ಘೀಂಕಾರ ಕೇಳಿಸಿತು. ಆನೆಗಳ ಗುಂಪನ್ನು ತಾವು ಏನೂ ಮಾಡಲಾರೆವೆಂದು ತಿಳಿದ ಗಿರಿಜನರು ಪಕ್ಕದಲ್ಲಿರುವ ನದಿಯಲ್ಲಿ ಇಳಿದು ಈಜುತ್ತಾ ಆಚೆ ದಡಕ್ಕೆ ಹೋದರು. ಆನೆಗಳ ಗುಂಪು ಅಲ್ಲಿಂದ ಹೋದ ನಂತರ ಪುನಃ ಈಚೆ ದಡಕ್ಕೆ ಬಂದು ರಾಘವನ ಹೆಜ್ಜೆಗುರುತಿಗಾಗಿ ನೋಡಿದರು. ಆನೆಗಳ ಗುಂಪು ಆ ಪ್ರಾಂತವೆಲ್ಲಾ ತುಳಿದಿರುವುದರಿಂದ ರಾಘವ ಹೆಜ್ಜೆಗಳ ಗುರುತು ಯಾವ ಮಾತ್ರ ಕಾಣಿಸಲಿಲ್ಲ. ಆದ್ದರಿಂದ ರಾಘವನು ಹೋದ ದಾರಿಯು ಅರ್ಥವಾಗದೆ ಹೋಯಿತು. ಆಗ ಗಿರಿಜನರು ಪುನಃ ತಮ್ಮ ಪ್ರಾಂತಕ್ಕೆ ಹೋಗಿ ಇರುವ ವಿಷಯವನ್ನು ತಮ್ಮ ಹಿರಿಯನಾದ ಮಲ್ಲು ದೊರೆಗೆ ತಿಳಿಸಿದರು. ಆಗ ಮಲ್ಲುದೊರೆ ಸ್ವಲ್ಪ ಆಲೋಚಿಸಿ ತಮ್ಮವರೊಂದಿಗೆ ಅಂಜನ ಹಾಕಿಸಿ ನೋಡಲು ಹೇಳಿದನು.)

*********************************

(ಸಾಯಂಕಾಲ ರಾಘವ ರಾಜಯೋಗಾನಂದ ಸ್ವಾಮಿ ಹತ್ತಿರಕ್ಕೆ ಸೇರಿ ನಮಸ್ಕರಿಸಿ, ಕುಳಿತುಕೊಂಡು, ಸವಿನಯವಾಗಿ ತನ್ನ ಅನುಮಾನವನ್ನು ಪ್ರಶ್ನೆ ರೂಪದಲ್ಲಿ ಸ್ವಾಮಿ ಅವರನ್ನು ಹೀಗೆ ಕೇಳಿದನು.)

**ರಾಘವ :–** ಸ್ವಾಮೀ! ದೇಶದಲ್ಲಿ ಎಷ್ಟೋ ಆಶ್ರಮಗಳು ಇವೆ. ಆ ಆಶ್ರಮದಲ್ಲಿ ಗುರುಗಳೆಲ್ಲರೂ ಕಾಷಾಯ ವಸ್ತ್ರಗಳನ್ನು ಧರಿಸಿದ್ದಾರೆ. ನೀವು ಮಾತ್ರ ಕಾಷಾಯ ವಸ್ತ್ರಗಳನ್ನು ಧರಿಸದೆ ಎಲ್ಲರಂತೆ ಸಾಧಾರಣ ವಸ್ತ್ರಗಳನ್ನೇ ಧರಿಸಿದ್ದೀರ. ಅವರಿಗು ನಿಮಿಗೂ ಏನು ವ್ಯತ್ಯಾಸವಿದೆ?

**ರಾಜಯೋಗಾ :–** ಜ್ಞಾನಿಗಳಲ್ಲಿ ಮುಖ್ಯವಾಗಿ ಇರಬೇಕಾಗಿರುವುದು ಜ್ಞಾನ. ಹಾಗೇ ಯೋಗಿಗಳಲ್ಲಿ ಮುಖ್ಯವಾಗಿ ಇರಬೇಕಾಗಿರುವುದು ಜ್ಞಾನಾಗ್ನಿ (ಯೋಗಶಕ್ತಿ). ಮೇಲೆ ಧರಿಸುವ ಬಟ್ಟೆಗಳು ಮುಖ್ಯವಲ್ಲ. ಮೇಲೆ ಬಟ್ಟೆಗಳು ಗುರುತಿಗೋಸ್ಕರ ಧರಿಸುವವು. ಪೂರ್ವ ಕಾಲದಲ್ಲಿ ಕಾಷಾಯ ವಸ್ತ್ರಗಳಿಗೆ ಒಂದು ಅರ್ಥವಿರುತ್ತಿತ್ತು. ಆದರೆ ಈ ದಿನ ಅವುಗಳ ಅರ್ಥ ತಿಳಿಯದಂತೆ ಹೋಗಿದೆ. ಅರ್ಥ ತಿಳಿಯದವರು ಸಹ ಕಾಷಾಯ ಬಣ್ಣ ವಸ್ತ್ರಗಳನ್ನು ಧರಿಸುತ್ತಿದ್ದಾರೆ.

**ರಾಘವ :–** ಪೂರ್ವ ಕಾಲದಲ್ಲಿ ಕಾಷಾಯ ಬಣ್ಣ ವಸ್ತ್ರಗಳಿಗೆ ಯಾವ ಅರ್ಥವಿದ್ದಿತೋ ದಯವಿಟ್ಟು ತಿಳಿಸಬೇಕೆಂದು ಪ್ರಾರ್ಥನೆ.

**ರಾಜಯೋಗಾ :–** ತಪ್ಪದೆ ತಿಳಿಸುತ್ತೇನೆ. ಕೆಲವು ಗಿಡಗಳ ಮೂಲಿಕೆಗಳನ್ನು ನೀರಿನಲ್ಲಿ ಹಾಕಿ ಚೆನ್ನಾಗಿ ಬಿಸಿ ಮಾಡಿದಾಗ ಆ ಮೂಲಿಕೆಗಳ ಸಾರವೆಲ್ಲವೂ ನೀರಿನೊಳಗೆ ಇಳಿಯುತ್ತದೆ. ಹಾಗೆ ಇಳಿದ ಮೂಲಿಕೆಗಳು ಅಥವಾ ಗಿಡಗಳ ಸಮೂಲಗಳ ಸಾರವನ್ನು "ಕಷಾಯ" ಎನ್ನುವುದು ನಮ್ಮ ಆಯುರ್ವೇದ ವೈದ್ಯದಲ್ಲಿ ಇದೆ. ಹಾಗೇ **ಕಾಲವೆನ್ನುವ ನೀರನ್ನು ಜ್ಞಾನವೆನ್ನುವ ಅಗ್ನಿಯಿಂದ ಬಿಸಿ ಮಾಡಿದಾಗ ಜೀವನ ಎನ್ನುವ ಮೂಲಿಕೆಸಾರ ಮನಸ್ಸಿಗೆ ಇಳಿದವನು ಜೀವನ ಕಷಾಯವನ್ನು ಹೊಂದಿದವನಾಗುತ್ತಾನೆ.** ಕಷಾಯ ಎನ್ನುವ ಮಾತು ಕಾಲಕ್ರಮದಲ್ಲಿ ಸ್ವಲ್ಪ ಬದಲಾವಣೆ ಹೊಂದಿ ಕಾಷಾಯ ಎನ್ನುವ ಶಬ್ದವಾಗಿ ಬದಲಾಗಿದೆ. ಜೀವನ ಸಾರಾಂಶ ತಿಳಿದವನೆನ್ನುವ ಗುರುತಿಗಾಗಿ ಮೂಲಿಕೆಗಳ ಸಾರವೊಂದರ ಬಣ್ಣದ ವಸ್ತ್ರವನ್ನು ಧರಿಸುತ್ತಿದ್ದರು. ಮೂಲಿಕೆಗಳ ಸಾರ ತಿಳಿ ಕೆಂಪು ಬಣ್ಣವಾದ ಕಷಾಯವೊಂದರ ವರ್ಣವಾಗಿಯೇ ಇರುತ್ತದೆ. ಆದ್ದರಿಂದ ಅದೇ ಬಣ್ಣದ ವಸ್ತ್ರಗಳನ್ನು ಪೂರ್ವದಲ್ಲಿ ಅರ್ಥ ತಿಳಿದು ಧರಿಸುತ್ತಿದ್ದರು. ಆದರೆ ಈ ದಿನ ಕಷಾಯವೆಂದರೆ ಏನೋ

ತಿಳಿಯದು. ಹಾಗೇ ಕಾಷಾಯಬಣ್ಣ ವೊಂದರ ಅರ್ಥ ತಿಳಿಯದಂತೆ ಹೋಗಿದೆ. ಅರ್ಥ ತಿಳಿಯದವರು ಸಹ ಕಾಷಾಯಬಣ್ಣದ ವಸ್ತ್ರಗಳು ಧರಿಸುತ್ತಿದ್ದಾರೆ. ನಾನು ಜೀವನ ಸಾರಾಂಶವಾದ ಆಧ್ಯಾತ್ಮಿಕವನ್ನು ತಿಳಿದವನೆನ್ನುವ ಗುರುತು ನನಗೆ ಅಗತ್ಯವಿಲ್ಲ. ನಾನು ಆಧ್ಯಾತ್ಮಿಕ ತತ್ವಜ್ಞಾನಿ ಎಂದು ಹೊರಗೆ ತಿಳಿಯದಂತಿರುವುದಕ್ಕೆ ಆ ಬಣ್ಣದ ವಸ್ತ್ರಗಳು ಧರಿಸಲಿಲ್ಲ.

ಪ್ರಸ್ತುತ ಕಾಲದಲ್ಲಿ ಕೆಲವರು ಸೂರ್ಯನು ಉದಯಿಸುವ ವೇಳೆ ಇರುವ ಬಣ್ಣವನ್ನು ಅನುಸರಿಸಿ ಆ ಬಣ್ಣವಿರುವ ಕಾಷಾಯ ವಸ್ತ್ರಗಳನ್ನು ಧರಿಸುತ್ತಿದ್ದೇವೆನ್ನುತ್ತಿದ್ದಾರೆ. ಆ ಬಣ್ಣ ಸನ್ಯಾಸಿಗಳಿಗೆ ಗುರುತೆಂದು ಹೇಳುತ್ತಿದ್ದಾರೆ. ಆದರೆ ಈ ಬಣ್ಣಕ್ಕೂ ಸನ್ಯಾಸಿಗಳಿಗೂ ಯಾವ ಸಂಬಂಧವಾಗಲಿ, ಅರ್ಥವಾಗಲಿ ಕಾಣಿಸುತ್ತಿಲ್ಲ. ಭಗವಂತನು ಹೇಳಿದ ಭಗವದ್ಗೀತೆಯಲ್ಲಿ ಆತ್ಮ ಸಂಯಮ ಯೋಗ ಎನ್ನುವ ಅಧ್ಯಾಯದಲ್ಲಿ ಮೊದಲ ಶ್ಲೋಕದಲ್ಲಿ ***"ಅನಾಶ್ರಿತಃ ಕರ್ಮಫಲಮ್ ಕಾರ್ಯಮ್ ಕರ್ಮ ಕರೋತಿಯಃ, ಸಸನ್ಯಾಸೀಚ ಯೋಗೀಚ ನನಿರಗ್ನಿ ರ್ನಚಾಕ್ರಿಯಃ"*** ಎಂದು ಇದೆ. ಆ ಶ್ಲೋಕ ವೊಂದರ ಭಾವನೆಯನ್ನು ನೋಡಿದರೆ ಫಲಾಪೇಕ್ಷೆ ಇಲ್ಲದವನು, ಅಹಂಕಾರ ರಹಿತನೂ, ಜ್ಞಾನಾಗ್ನಿ ಇರುವವನೂ ನಿಜವಾದ ಸನ್ಯಾಸಿ ಎಂದು ಅರ್ಥವಾಗುತ್ತಿದೆ. ಜ್ಞಾನಾಗ್ನಿ ಇರುವವನು, ಅಹಂಕಾರ ರಹಿತನು ಹೊರಗೆ ವಸ್ತ್ರಗಳು ಯಾವು ಧರಿಸಿದರೂ ಅವನು ನಿಜವಾದ ಸನ್ಯಾಸಿಯೇ. **ಬಣ್ಣದ ವಸ್ತ್ರಗಳನ್ನು ಅನುಸರಿಸಿ ಸನ್ಯಾಸಿ ಎನ್ನದೆ ಜ್ಞಾನಾಗ್ನಿಯನ್ನು ಅನುಸರಿಸಿ ಸನ್ಯಾಸಿ ಎಂದು ಗೀತೆಯಲ್ಲಿ** ಹೇಳಲಾಗಿದೆ. ಆದ್ದರಿಂದ ವಸ್ತ್ರಗಳು ಮುಖ್ಯವಲ್ಲ. ಕಾಷಾಯ ವಸ್ತ್ರಗಳು ಹೊರಗಿನ ಪ್ರಜೆಗಳ ಗುರುತಿಸುವುದಕ್ಕೇ ಆಗಲಿ, ಅಂತರಂಗದಲ್ಲಿನ ಆತ್ಮ ಗುರುತಿಸುವುದಕ್ಕಲ್ಲವೆಂದು ತಿಳಿಯುತ್ತಿದೆ. ಆದ್ದರಿಂದ ನನಗೆ ಹೊರಗಿನ ಪ್ರಜೆಗಳು ಗುರುತಿಸುವುದು ಅವಶ್ಯವಿಲ್ಲ. ಆದ್ದರಿಂದ ನಾನು ಕಾಷಾಯವಸ್ತ್ರಗಳನ್ನು ಧರಿಸಲಿಲ್ಲ. ಕೆಲವರು ಹೆಂಡತಿ ಮಕ್ಕಳನ್ನು ಬಿಡುವುದೇ ಸನ್ಯಾಸವೆಂದು ಸಹ ತಿಳಿದುಕೊಳ್ಳುತ್ತಿರುವರು. ಆ ವಿಧವಾಗಿ ತಿಳಿದುಕೊಳ್ಳುವುದು ಸಹ ತಪ್ಪೇ ಅಗುತ್ತದೆ. ಕುಟುಂಬವನ್ನು ಬಿಟ್ಟು, ಕೆಲಸಗಳು ಬಿಟ್ಟವನು ಸನ್ಯಾಸಿ ಅಲ್ಲವೆಂದು ಗೀತೆಯಲ್ಲೇ ***"ನಚಾಕ್ರಿಯಃ"*** ಎಂದು ಸಹ ಹೇಳುವುದು ನಡೆದಿದೆ. ಭಗವದ್ಗೀತೆಯಲ್ಲಿ ಭಗವಂತನು ಹೇಳಿದಂತಿರುವುದು

ನಿಜವಾದ ಸನ್ಯಾಸ ಆದರೆ, ಕಾಷಾಯ ವಸ್ತ್ರಗಳು ಧರಿಸುವುದು ಮುಖ್ಯವಲ್ಲ. ಆದ್ದರಿಂದ ಆಧ್ಯಾತ್ಮಿಕಕ್ಕೂ ಬಣ್ಣದ ವಸ್ತ್ರಗಳಿಗೂ ಯಾವ ಸಂಬಂಧವೂ ಇಲ್ಲವೆಂದು ತಿಳಿಯುತ್ತಿದೆ.

**ರಾಘವ :–** ಸ್ವಾಮೀ! ನೀವು ಹೇಳಿದ ವಿಷಯ, ನಾವು ಚಿಕ್ಕಂದಿನಿಂದ ಬಣ್ಣದ ವಸ್ತ್ರಗಳು ಹಾಕಿಕೊಂಡವರೇ ಸನ್ಯಾಸಿಗಳೆನ್ನುವ ಉದ್ದೇಶವನ್ನು ತಲೆಕೆಳಗೆ ಮಾಡಿದೆ. ಅರ್ಥ ತಿಳಿಯದಿದ್ದರೂ ಕಾಷಾಯಾಂಬರಗಳು ಧರಿಸಿದವರು ಯಾವುದೋ ಒಂದು ವಿಧವಾಗಿ ದೇವರ ಮಾರ್ಗವನ್ನೇ ಅನುಸರಿಸುತ್ತಿದ್ದಾರೆಂದು ಅಂದುಕೊಳ್ಳುತ್ತೇನೆ. ಉಳಿದ ಮನುಷ್ಯರಿಗಿಂತ ಕಾಷಾಯ ಧರಿಸಿದವರೇ ಉತ್ತಮರೆಂದುಕೊಳ್ಳುತ್ತೇನೆ. ನಿಮ್ಮ ಉದ್ದೇಶವನ್ನು ಹೇಳಿರಿ.

**ರಾಜಯೋಗಾ :–** ನೀನು ಸತ್ಯಾನ್ವೇಷಿ. ಆದ್ದರಿಂದ ಸತ್ಯವನ್ನೇ ತಿಳಿದುಕೊಳ್ಳಬೇಕು. ಸತ್ಯವನ್ನು ತಿಳಿದುಕೊಳ್ಳುವುದಕ್ಕೆ ಕಾಷಾಯಾಂಬರಗಳು ಧರಿಸಿದ ಸ್ವಾಮಿಗಳಿರುವ ಕೆಲವು ಆಶ್ರಮಗಳ ಹತ್ತಿರಕ್ಕೆ ಹೋಗಿ ಅವರನ್ನು ಕುರಿತಿರುವ ಸತ್ಯವನ್ನು ತಿಳಿದುಕೋ. ಆಗ ನಿನಗೆ ಯಾವುದಾದರೂ ಸಂದೇಹ ಬಂದರೆ ನನ್ನನ್ನು ಕೇಳು ನಂತರ ಹೇಳುತ್ತೇನೆ.

**ರಾಘವಾ :–** ಹಾಗೇ ಸ್ವಾಮೀ! ಮೊದಲು ನನ್ನನ್ನು ಯಾವ ಆಶ್ರಮಕ್ಕೆ ಹೋಗೆನ್ನುತ್ತೀರಾ?

**ರಾಜಯೋಗಾ :–** ಇಲ್ಲಿಗೆ ಪೂರ್ವಕ್ಕೆ ಇಪ್ಪತ್ತಾರು ಮೈಲು ದೂರದಲ್ಲಿರುವ ಆಶ್ರಮದಿಂದ ಪ್ರಾರಂಭಿಸು, ಕೆಲವು ಆಶ್ರಮಗಳು ಸುತ್ತಿದ ನಂತರ ಇಲ್ಲಿಗೆ ಬಂದು ನಿನ್ನ ಅನುಭವಗಳನ್ನು ಹೇಳು. ನಾಳೆನೇ ನಿನ್ನ ಪ್ರಯಾಣ.

**********************************

(ತಮ್ಮ ನಾಯಕನು ಮಲ್ಲುದೊರೆ ಹೇಳಿದಂತೆ ಅಂಜನವನ್ನು ಮಾಡಿ ಅದರ ಮುಖಾಂತರ ರಾಘವ ಜಾಡನ್ನು ಗಿರಿಜನರು ತಿಳಿದುಕೊಳ್ಳಬೇಕೆಂದು ಕೊಂಡಿದ್ದಾರೆ. ಅಂಜನವನ್ನು ತಯಾರು ಮಾಡುವುದಕ್ಕೆ 1) ಬಿಳಿ ಈಶ್ವರಿ

2) ಬಿಳಿ ಬ್ರಹ್ಮದಂಡಿ 3) ಬಿಳಿ ಉತ್ತರೇಣಿ 4) ಬಿಳಿ ಗಂಜರಿ 5) ಬಿಳಿ ಕನಗಲ 6) ಬಿಳಿ ಎಕ್ಕೆ ವೊಂದರ ಬೇರುಗಳನ್ನು ತಂದು, ನೆರಳಿನಲ್ಲಿ ಒಣಗಿಸಿ, ಭಾನುವಾರ ಒಣಗಿದ ಬೇರುಗಳನ್ನು ಎಳ್ಳೆಣ್ಣೆ ದೀಪದಿಂದ ಸುಟ್ಟು ಅವು ಬೆಂಕಿಯಾಗಿ ಬದಲಾದಾಗ ಅದೇ ಎಣ್ಣೆಯಲ್ಲಿ ಅದ್ದಿ ಇದ್ದಿಲು ಮಾಡಿ ಇಟ್ಟುಕೊಂಡು, ನಂತರ ಬರುವ ಬುಧವಾರದಂದು ಪಚ್ಚ ಕರ್ಪೂರವನ್ನು ಸುಟ್ಟಾಗ ಬಂದಿರುವ ಮಸಿಯನ್ನು ತೆಗೆದು, ನಂತರ ಆರು ಮೂಲಿಕೆಗಳ ಇದ್ದಿಲುಗಳನ್ನು, ಪಚ್ಚ ಕರ್ಪೂರವೊಂದರ ಮಸಿಯನ್ನು ಎಳ್ಳೆಣ್ಣೆಯಲ್ಲೇ ಎಲ್ಲಾ ಸಮಾನವಾಗಿ ಬೆರೆಸಿ ಮೆತ್ತನೆಯ ಕಾಡಿಗೆಯಂತೆ ಮಾಡಿಕೊಂಡರು. ಅಲ್ಲಿಗೆ ಪೂರ್ತಿಯಾಗಿ ಅಂಜನ ತಯಾರಾಗಿದೆ. ಹಾಗೆ ತಯಾರು ಮಾಡಿದ ಅಂಜನವನ್ನು ನೋಡಬೇಕೆಂದರೆ ನೋಟದಲ್ಲಿ ದೋಷ ಇಲ್ಲದವನಾಗಿ ರಬೇಕು. ಬೆಕ್ಕಿನ ಕಣ್ಣಿನವನಾದರೆ ಚೆನ್ನಾಗಿ ನೋಡಬಲ್ಲನೆಂದು ಅವರ ಪ್ರಾಂತದಲ್ಲಿರುವ ಒಬ್ಬ ಬೆಕ್ಕಿನ ಕಣ್ಣಿನವನಿಂದ ಅಂಜನವನ್ನು ತೋರಿಸಿದರು. ಕಣ್ಣು ರೆಪ್ಪೆ ಹೊಡೆಯದಂತೆ ಅಂಜನವನ್ನು ನೋಡಬೇಕು. ನೋಡುವವನಿಗೆ ಆ ವಿಧವಾಗಿ ನೋಡುವುದು ಅಭ್ಯಾಸವಾಗಿರುವುದರಿಂದ ಅವನು ನೋಡತೊಡಗಿದನು. ಅಂಜನದಲ್ಲಿ ನೋಡುವ ವನಿಗೆ ಮೊದಲು, ರಾತ್ರಿಹೊತ್ತು ಆಕಾಶ ಕಾಣಿಸುವಂತೆ ಕಪ್ಪನೆಯ ಆಕಾಶ ಕಾಣಿಸತೊಡಗಿತು. ನಂತರ ಆಕಾಶದಲ್ಲಿ ಅಲ್ಲಲ್ಲಿ ಕೆಲವು ಚುಕ್ಕೆಗಳು (ನಕ್ಷತ್ರಗಳು) ಕಾಣಿಸಿದವು. ಅವುಗಳಲ್ಲಿ ಒಂದು ಚುಕ್ಕೆಯನ್ನು ಮಾತ್ರ ತದೇಕ ದೃಷ್ಟಿಯಿಂದ ಆತನು ನೋಡತೊಡಗಿದನು. ಹಾಗೆ ನೋಡುತ್ತಿರುವಾಗ ಆ ಚುಕ್ಕೆ ಆಕಾಶದಲ್ಲಿ ಪ್ರಯಾಣಿಸಿದಂತೆ ಮುಂದಕ್ಕೆ ಹೋಗುತ್ತಿತ್ತು. ರಾಘವ ಎಲ್ಲಿರುವುದು ಕಾಣಿಸಬೇಕೆಂದು, ಆತನನ್ನು ನೋಡಬೇಕೆಂದು ಮನಸ್ಸಿನಲ್ಲಿ ಅಂಜನದ ಮುಂದೆ ಕುಳಿತುಕೊಂಡವನು ಅಂದುಕೊಳ್ಳುವುದರಿಂದ ಅಂಜನದಲ್ಲಿನ ನಕ್ಷತ್ರ ರಾಘವನನ್ನು ತೋರಿಸುವುದಕ್ಕೆ ರಾಘವ ಇರುವ ಪ್ರಾಂತದ ಮೇಲಿನವರೆಗು ಒಂದು ನಿಮಿಷದಲ್ಲಿ ಸೇರಿಹೋಗಿದೆ. ಆಗ ಆ ಚುಕ್ಕೆ ಚಿಕ್ಕದಾಗಿ ತನ್ನ ಕಾಂತಿಯನ್ನು ಬಿಟ್ಟು ಹೋಗುವಂತೆ, ಆ ನಕ್ಷತ್ರವೊಂದರ ಬೆಳಕು ದುಂಡಾಗಿ ಹತ್ತು ಅಡಿಗಳ ಅಗಲ ವೃತ್ತವಾಗಿ ಬಿಟ್ಟುಹೋಗಿದೆ. ಹಾಗೆ ಬಿಟ್ಟುಹೋದ ಅಗಲವಾದ ವೃತ್ತದಲ್ಲಿ ಚಿಕ್ಕದಾಗಿ ದೃಶ್ಯ ಕಾಣಿಸತೊಡಗಿತು. ಆ ದೃಶ್ಯ ಮುನ್ನೂರು ಅಡಿಗಳ ಎತ್ತರದಿಂದ ನೋಡಿದರೆ ಹೇಗೆ ಇರುತ್ತದೋ ಹಾಗೆ

ಮೇಲಿನಿಂದ ಕಾಣಿಸುತ್ತಾ ಇದೆ. ಮೇಲಿನಿಂದ ಕಾಣಿಸುವ ದೃಶ್ಯದಲ್ಲಿ ಅಡವಿ ಪ್ರಾಂತದಲ್ಲಿನ ಮರಗಳು, ಪ್ರಾಣಿಗಳು, ಕಲ್ಲು, ಮಣ್ಣು ಕಾಣಿಸುತ್ತಿರುವಾಗ ಅದು ಅಡವಿ ಪ್ರಾಂತವೆಂದು ನೋಡುವವನಿಗೆ ಅರ್ಥವಾಯಿತು. ಆ ಅಡವಿಯಲ್ಲಿ ರಾಘವ ಪ್ರಯಾಣಿಸುತ್ತಾ ಹೋಗುವುದೂ ಸಹ ಕಾಣಿಸಿದೆ. ಹಾಗೆ ಅವರು ನೋಡಿದ ವಿಷಯ ಅವರ ಕುಲ ಹಿರಿಯರಿಗೆ ತಿಳಿಸಿದರು. ಆಗ ಅವರ ಕುಲ ಹಿರಿಯನಾದ ಮಲ್ಲುದೊರೆ ರಾಘವನನ್ನು ತನ್ನ ಹತ್ತಿರಕ್ಕೆ ಕರೆತರಲು ಹೇಳಿದನು. ಅದಕ್ಕೆ ಗಿರಿಜನರಲ್ಲಿ ಒಬ್ಬನು ಹೀಗೆ ಹೇಳಿದನು.)

**ಗಿರಿಜನರು :–** ರಾಘವನಿಂದ ನಮಗೇನು ಕೆಲಸವಿದೆ? ಆತನು ನಮಗೇನಾದರೂ ಸಂಬಂಧಿಕನಾ? ಅಥವಾ ಬೇಕಾದವನಾ? ಆತನೊಂದಿಗೆ ನಮಗೇನು ಪ್ರಯೋಜನ?

**ಮಲ್ಲುದೊರೆ :–** (ಮುಗುಳ್ನಗೆಯಿಂದ ನಗುತ್ತಾ) ರಾಘವ ಬುದ್ಧಿವಂತನು. ಆತನನ್ನು ಇಲ್ಲೇ ನಮ್ಮ ಪ್ರಾಂತದಲ್ಲೇ ಇಟ್ಟುಕೊಂಡರೇ ಚೆನ್ನಾಗಿರುತ್ತದೆ. ಆತನಿಗೆ ನನ್ನ ಮಗಳನ್ನು ಕೊಟ್ಟು ವಿವಾಹ ಮಾಡಬೇಕೆಂದುಕೊಂಡಿದ್ದೇನೆ. ಆದ್ದರಿಂದಲೇ ಆತನನ್ನು ಕರೆದುಕೊಂಡು ಬನ್ನಿ ಎನ್ನುತ್ತಿದ್ದೇನೆ.

**ಗಿರಿಜನರು :–** ಈ ಮಾತನ್ನು ನಮಗೆ ಮೊದಲೇ ಹೇಳಿದ್ದರೇ ರಾಘವನನ್ನು ಒಂಟಿಯಾಗಿ ಬಿಡುತ್ತಿರಲಿಲ್ಲ ಅಲ್ಲವೆ! (ಎಲ್ಲರೂ ನಗುತ್ತಾ ಮಾತನಾಡಿದರು).

**ಮಲ್ಲುದೊರೆ :–** ಈಗಗಲಾದರೂ ಮೀರಿ ಹೋಗಿರುವುದೇನು ಇಲ್ಲ. ನಮ್ಮ ಭೈರಿಕಾ ದೇವತೆಗೆ ಪೂಜೆ ಮಾಡಿ ಹೊರಟುಹೋಗಿ, ಆತನಿಗೆ ನನ್ನ ಉದ್ದೇಶವನ್ನು ಹೇಳಿ ಕರೆದುಕೊಂಡು ಬನ್ನಿ.

**ಗಿರಿಜನರು :–** ಆತನು ನಮ್ಮ ಮಾತನ್ನು ಒಪ್ಪಿಕೊಳ್ಳುವನೋ ಇಲ್ಲವೋ! ಬರುತ್ತಾನೋ ಬರಲ್ಲವೋ! ಬಾರದೆ ಹೋದರೆ ಏನು ಮಾಡಬೇಕು?

**ಮಲ್ಲುದೊರೆ :–** ನಾನು ಹೇಳಿದ ವಿಷಯವನ್ನು ಹೇಳಿರಿ. ನೀವು ಯಾವುದಕ್ಕೂ ಒತ್ತಾಯ ಮಾಡಬೇಡಿರಿ. (ದೀರ್ಘವಾಗಿ ಯೋಚಿಸುತ್ತಾ ಹೇಳಿದನು)

**ಗಿರಿಜನರು :–** ನಾಯಕಾ? ನಾವು ಈ ದಿನವೇ ಹೊರಟು ಹೋಗುತ್ತೇವೆ. ನಮಗೆ ಯಾವ ಪ್ರಮಾದಗಳು ನಡೆಯದಂತೆ ಬದನಿಕೆಗಳನ್ನು ತೆಗೆದುಕೊಂಡು ಹೋಗುತ್ತೇವೆ.

**ಮಲ್ಲುದೊರೆ :–** ಸರಿ ಹಾಗೇ ತೆಗೆದುಕೊಂಡು ಹೋಗಿ.

**ಗಿರಿಜನರು :–** ರಾಘವ ಬರುವುದಕ್ಕೆ ಒಪ್ಪಿಕೊಂಡು ಸ್ವಲ್ಪ ತಡವಾಗಿ ಬರುತ್ತೇನೆಂದರೆ, ನಾವು ಆತನೊಂದಿಗೆ ಇದ್ದು ಕರೆದುಕೊಂಡು ಬರಬೇಕೆನ್ನುತ್ತೀರಾ?

**ಮಲ್ಲುದೊರೆ :–** ಎರಡು ಮೂರು ತಿಂಗಳಾದರೂ ಇದ್ದು ಕರೆದುಕೊಂಡು ಬನ್ನಿ. ಒಂದು ವೇಳೆ ಇನ್ನೂ ಏನಾದರೂ ತಡವಾಗುವಂತೆ ಇದ್ದರೆ ನನಗೆ ತಿಳಿಸಿರಿ. ಈಗ ನಮ್ಮ ಆಚಾರದ ಪ್ರಕಾರ ಭೈರಿಕಾದೇವತೆಗೆ ಪೂಜೆ ಮಾಡಿ ಆಕೆ ಸನ್ನಿಧಿಯಲ್ಲಿರುವ ಬದನಿಕೆಗಳನ್ನು ತೆಗೆದುಕೊಂಡಿ ಹೋಗಿರಿ.

(ಗಿರಿಜನರು ಎಂಟು ಜನ ತಮ್ಮ ನಾಯಕನ ಮಾತಿನ ಪ್ರಕಾರ ಅವರ ದೇವತೆಗೆ ಪೂಜೆ ಮಾಡಿ ಬದನಿಕೆಗಳನ್ನು ತೆಗೆದುಕೊಂಡು ಹೊರಟು ಹೋದರು.)

**********************************

(ಕಾಷಾಯಾಂಬರಗಳು ಮತ್ತು ಆಶ್ರಮಗಳನ್ನು ಕುರಿತಿರುವ ಸತ್ಯಾನ್ವೇಷಣೆ ಕುರಿತು, ರಾಜಯೋಗಾನಂದ ಸ್ವಾಮಿ ಹೋಗಿ ಬರಬೇಕೆಂದು ಹೇಳಿದ ಹಾಗೆ ರಾಘವ ಹೊರಟು ಹೋಗಿ ಪ್ರಯಾಣ ಮುಂದುವರೆಸಿ, ಒಂದು ಆಶ್ರಮವನ್ನು ಸೇರಿ ಅಲ್ಲಿರುವವರೊಂದಿಗೆ ಹೀಗೆ ಸಂಭಾಷಿಸಿದನು.)

**ರಾಘವ :–** ನಾನು ನಿಮ್ಮ ಹತ್ತಿರ ಸ್ವಲ್ಪಕಾಲವಿದ್ದು, ಈ ಆಶ್ರಮದಲ್ಲಿ ತಿಳಿಸುವ ದೈವಜ್ಞಾನವನ್ನು ತಿಳಿದುಕೊಳ್ಳಬೇಕೆಂದುಕೊಂಡಿದ್ದೇನೆ. ನಾನು ನನ್ನ ಖರ್ಚನ್ನು ನಾನೇ ಭರಿಸಿಕೊಂಡು ಇರುತ್ತೇನೆ. ನಿಮಗೆ ನನ್ನಿಂದ ಯಾವ ತೊಂದರೆ ಇರುವುದಿಲ್ಲ.

**ಆಶ್ರಮದವರು :–** ದೈವಜ್ಞಾನವಾ! ನೀನು ತಪ್ಪಾಗಿ ತಿಳಿದಿದ್ದೀಯ. ಇದು ದೈವಜ್ಞಾನ ಹೇಳುವ ಆಶ್ರಮವಲ್ಲ. ಮಕ್ಕಳಿಗೆ ಓದನ್ನು ಹೇಳುವುದು.

**ರಾಘವ :–** ಇದು ಆಶ್ರಮವೆಂದಿದ್ದಾರಲ್ಲ! ಇಲ್ಲಿ ಗುರುವು ಇಲ್ವಾ? ಆತ್ಮಜ್ಞಾನ ಹೇಳುವುದಿಲ್ಲವಾ? (ಆಶ್ಚರ್ಯವಾಗಿ ಕೇಳಿದ್ದಾನೆ.)

**ಆಶ್ರಮದವರು :–** (ನಗುತ್ತಾ) ನಮ್ಮ ಗುರುಗಳು ಕಾಶೀಯಲ್ಲಿದ್ದಾರೆ. ತಿಂಗಳಿಗೊಮ್ಮೆ ಬಂದು ಹೋಗುತ್ತಿರುತ್ತಾರೆ. ಆದರೆ ನಮ್ಮ ಗುರುಗಳು ಆತ್ಮಜ್ಞಾನಕ್ಕಿಂತ ಅನ್ನ

ಇಡುವ ವಿದ್ಯಾ ಜ್ಞಾನ ದೊಡ್ಡದೆಂದು ಹೇಳುತ್ತಿರುತ್ತಾರೆ. ಆದ್ದರಿಂದ ಆತ್ಮಜ್ಞಾನವನ್ನು ಹೇಳುವುದಿಲ್ಲ.

**ರಾಘವ :–** ಪರಮಾತ್ಮ ಜ್ಞಾನಕ್ಕಿಂತ ಪ್ರಪಂಚ ವಿದ್ಯೆ ದೊಡ್ಡದಾ, ಆತ್ಮ ಜ್ಞಾನಕ್ಕಿಂತ ಶಾಲೆ ಓದು ದೊಡ್ಡದಾ?

**ಆಶ್ರಮದವರು :–** ನೋಡಪ್ಪಾ! ಬ್ರಹ್ಮವಿದ್ಯೆ ಅನ್ನ ಇಡುವುದಿಲ್ಲ, ಹಸಿವು ತೀರಿಸುವುದಿಲ್ಲ. ಆದ್ದರಿಂದ ಮೊದಲು ಬದುಕುವುದಕ್ಕೆ ವಿದ್ಯೆ ಕಲಿಸುವುದು ನಮ್ಮ ಕೆಲಸ.

**ರಾಘವ :–** ಹಾಗಿರುವಾಗ ವಿದ್ಯಾಬೋಧನೆ ಮಾಡುವ "ಶಾಲೆ" ಎಂದು ಹೆಸರು ಇಟ್ಟುಕೊಳ್ಳುವುದು ಒಳ್ಳೆಯದು, ಆದರೆ "ಆಶ್ರಮ" ಎಂದು ಹೆಸರು ಇಡುವುದು ಏಕೆ?

**ಆಶ್ರಮದವರು :–** ಶಾಲೆ ಎನ್ನುವುದು ಹಳೆ ಪದ. ಶಾಲೆ ಎನ್ನುವ ಹೆಸರುಗಿಂತ ಆಶ್ರಮ ಎನ್ನುವ ಹೆಸರಿನ ಮೇಲೆ ಹೆಚ್ಚಿನ ಗೌರವವಿದೆ. ಆದ್ದರಿಂದ ಆಶ್ರಮವೆಂದು ಹೆಸರು ಇಟ್ಟಿದ್ದೇವೆ. ಸಾಧಾರಣ ಶಾಲೆಗಳಿಗಿಂತ ಗುರುಕುಲ ಆಶ್ರಮದಲ್ಲಿ ಓದು ಚೆನ್ನಾಗಿ ಹೇಳುವರೆಂದು ಪ್ರಜೆಗಳ ನಂಬಿಕೆ. ಆದ್ದರಿಂದ ನಮ್ಮ ಗುರುಗಳು ಎಷ್ಟೋ ಗುರುಕುಲ ಆಶ್ರಮಗಳನ್ನು ಸ್ಥಾಪನೆಮಾಡಿ, ಎಲ್ಲಾವುಗಳಲ್ಲಿ ಮಕ್ಕಳಿಗೆ ಓದು ಹೇಳುತ್ತಿದ್ದಾರೆ. ಹಿರಿಯರಿಗೆ ಜ್ಞಾನ ಹೇಳುವ ಕೆಲಸವನ್ನು ನಮ್ಮ ಗುರುಗಳು ಇಟ್ಟುಕೊಂಡಿಲ್ಲ.

(ಮೊದಲ ಅನುಭವವೇ ರಾಘವ ತಲೆಯಲ್ಲಿ ಎಷ್ಟೋ ಪ್ರಶ್ನೆಗಳನ್ನುದ್ಭವಿಸುವಂತೆ ಮಾಡಿದೆ. ತನ್ನ ಪ್ರಶ್ನೆಗಳಿಗೆ ಅಲ್ಲಿರುವವರು ಸರಿಯಾದ ಸಮಾಧಾನ ಹೇಳುವುದಿಲ್ಲವೆಂದು ತಿಳಿದಾಗಲೂ ಮತ್ತೊಂದು ಪ್ರಶ್ನೆಯನ್ನು ಅವರನ್ನು ಕೇಳಿದ್ದಾನೆ)

**ರಾಘವ :–** ಇಲ್ಲಿ ಓದಿಕೊಳ್ಳುವ ಮಕ್ಕಳಿಗೆ ಸ್ವಲ್ಪವಾದರೂ ದೈವಜ್ಞಾನವನ್ನು ತಿಳಿಸುವುದಿಲ್ಲವಾ?

**ಆಶ್ರಮದವರು :–** ಪ್ರತಿ ದಿನ ಭಗವದ್ಗೀತೆಯಲ್ಲಿನ ಶ್ಲೋಕಗಳನ್ನು ಹತ್ತಾದರೂ ಪಾರಾಯಣ ಮಾಡಿಸುತ್ತೇವೆ. ನಮ್ಮ ಹತ್ತಿರ ಇರುವ ಮಕ್ಕಳೆಲ್ಲರಿಗೂ ಗೀತೆ ಶ್ಲೋಕಗಳು ಚೆನ್ನಾಗಿ ಬರುತ್ತವೆ.

**ರಾಘವ :–** ಶ್ಲೋಕಗಳು ಮಾತ್ರವೇ ತಿಳಿದಿದೆಯಾ, ಅಥವಾ ಅದರಲ್ಲಿನ ಅರ್ಥವೂ ಸಹ ತಿಳಿದಿದೆಯಾ?

**ಆಶ್ರಮದವರು :–** ಶ್ಲೋಕಗಳ ಅರ್ಥ ಸರಿಯಾಗಿ ಹಿರಿಯರಿಗೇ ತಿಳಿಯದು. ನಮ್ಮ ಮಕ್ಕಳಿಗೆ ಅರ್ಥ ತಿಳಿದಿಲ್ಲ ಆದರೆ, ಶ್ಲೋಕಗಳು ಮಾತ್ರ ಕಂಠಾಪಾಟವಾಗಿ ಬರುತ್ತವೆ.

**ರಾಘವ :–** ಅರ್ಥ ತಿಳಿಯದ ಶ್ಲೋಕಗಳೊಂದಿಗೆ ಏನು ಪ್ರಯೋಜನ?

**ಆಶ್ರಮದವರು :–** ಶ್ಲೋಕಗಳಿಂದ ನಮಗೆ ತಿಳಿದ ಪ್ರಯೋಜನ ಒಂದು ಇದೆ. ಅದೇನೆಂದರೆ! ಶ್ಲೋಕಗಳಲ್ಲಿ ಹೆಚ್ಚಾಗಿ ಕಠಿಣ ಪದಗಳೂ, ಒತ್ತಾಕ್ಷರಗಳೂ ಇರುತ್ತವೆ. ಅವುಗಳನ್ನು ಓದುವುದರಿಂದ ಉಳಿದ ಕನ್ನಡ ಪದಗಳನ್ನು ಸುಲಭವಾಗಿ ಹೇಳಬಹುದು, ಬರೆಯಬಹುದು. ಆದ್ದರಿಂದ ಶ್ಲೋಕಗಳನ್ನು ಹೆಚ್ಚಾಗಿ ಓದಿಸುತ್ತೇವೆ.

(ಆ ಮಾತುಗಳಿಂದ ರಾಘವಗೆ ಹುಚ್ಚು ಹಿಡಿದಷ್ಟು ಕೆಲಸವಾಯಿತು. ಆಶ್ರಮದಲ್ಲಿಯೇ ಬ್ರಹ್ಮವಿದ್ಯೆಗೆ ಬೆಲೆ ಇಲ್ಲದಂತೆ ಹೋಗುವುದು ವಿಚಿತ್ರವಾಗಿ ಕಾಣಿಸಿತು. ಅಲ್ಲಿಂದ ಯಾವುದಾದರೂ ಬ್ರಹ್ಮವಿದ್ಯೆ ಇರುವ ಆಶ್ರಮಕ್ಕೆ ಹೋಗಬೇಕೆಂದುಕೊಂಡು ಅವರನ್ನು ಹೀಗೆ ಕೇಳಿದ್ದಾನೆ.)

**ರಾಘವ :–** ನೀವು ಹೇಳುವುದನ್ನನುಸರಿಸಿ ಇಲ್ಲಿರುವುದು ಕೇವಲ ಪ್ರಪಂಚ ವಿದ್ಯೆಗೆ ಸಂಬಂಧಿಸಿದ ಆಶ್ರಮವೆಂದು ತಿಳಿಯಿತು. ನನಗೆ ಬೇಕಾಗಿರುವುದು ಪರಮಾತ್ಮ ವಿದ್ಯೆಗೆ ಸಂಬಂಧಿಸಿದ ಆಶ್ರಮ. ಅಂತಹ ಆಶ್ರಮ ಇಲ್ಲಿ ಎಲ್ಲಾದರೂ ಇದ್ದರೆ ತಿಳಿಸಿ. ನಾನಲ್ಲಿಗೆ ಹೋಗುತ್ತೇನೆ.

(ಅದಕ್ಕೆ ರಾಘವ ಕಡೆ ದೀನವಾಗಿ ನೋಡುತ್ತಾ ಅಲ್ಲಿದ್ದವರು ಹೀಗೆ ಹೇಳಿದ್ದಾರೆ)

**ಆಶ್ರಮದವರು :–** ಅಂತಹ ಆಶ್ರಮ ಬೇಕೆಂದರೆ ಚಿಕ್ಕದು ಬೇಕಾ? ದೊಡ್ಡದು ಬೇಕಾ?

**ರಾಘವ :–** ಚಿಕ್ಕದೆಂದರೆ ಏನು?, ದೊಡ್ಡದೆಂದರೆ ಏನು? ಎಲ್ಲಾದರೂ ಇರುವುದು ಜ್ಞಾನ ಒಂದೇ ಅಲ್ಲವೆ!

**ಆಶ್ರಮದವರು :–** ನೋಡು ಹುಡುಗಾ! ಚಿಕ್ಕದೆಂದರೆ ಜ್ಞಾನವನ್ನು ಮಾತ್ರ ತಿಳಿಸುವುದು. ದೊಡ್ಡದೆಂದರೆ ಜ್ಞಾನ ಎಂದು ಹೆಸರು ಇಟ್ಟು ನೀತಿಯನ್ನು ಕುರಿತು ಹೇಳುತ್ತಿರುವರು. ಮತ್ತು ಮಹಿಮೆಗಳನ್ನು ಸಹ ತೋರಿಸುತ್ತಿರುವರು.

**ರಾಘವ :–** ಹಾಗಾದರೆ ಎರಡು ಆಶ್ರಮಗಳ ವಿಳಾಸ ಹೇಳಿರಿ. ನಾನು ಚಿಕ್ಕ ದೊಡ್ಡ ಎರಡು ಅಶ್ರಮಗಳನ್ನು ಸಂದರ್ಶಿಸುತ್ತೇನೆ.

**ಆಶ್ರಮದವರು :–** ಚಿಕ್ಕ ಆಶ್ರಮ ಮನೋಡ ಎನ್ನುವ ಜಿಲ್ಲೆಯಲ್ಲಿ, ಚೈತನ್ಯನಗರ್ ಎನ್ನುವ ಹೋಬಳಿಯಲ್ಲಿ, ಪ್ರಕಾಶ್‌ಪುರಿ ಎನ್ನುವ ಗ್ರಾಮದಲ್ಲಿ ಎತ್ತರವಾದ ಗುಡ್ಡದಮೇಲೆ ಇದೆ. ಅದು ಇಲ್ಲಿಗೆ ಉತ್ತರದಲ್ಲಿರುವ ಹತ್ತು ಮೈಲು ದೂರದಲ್ಲಿ ಇದೆ. ಇನ್ನು ದೊಡ್ಡ ಆಶ್ರಮವನ್ನು ಕುರಿತು ಹೇಳಿದರೇ ಅದು ಇಲ್ಲಿಗೆ ದಕ್ಷಿಣದಲ್ಲಿ ನೂರು ಮೈಲು ದೂರದಲ್ಲಿರುವ ಅಮ್ಮಾನಗರ್ ಜಿಲ್ಲೆಯಲ್ಲಿ, ಲಕ್ಷ್ಮೀಪುರ ಹೋಬಳಿ ಯಲ್ಲಿ, ಶಾಂತಿ ಪುರ ಗ್ರಾಮದಲ್ಲಿ ವಿಶಾಲವಾದ ಮೈದಾನದಲ್ಲಿ ಕಲಿಯುಗ ವೈಕುಂಠದಂತೆ ಸುಂದರವಾದ ಕಟ್ಟಡಗಳಿಂದ ಕಂಗೊಳಿಸುತ್ತಿರುತ್ತದೆ.

**ರಾಘವ :–** ನಿಮ್ಮನ್ನು ಎಷ್ಟೋ ಪ್ರಶ್ನೆಗಳನ್ನು ಕೇಳಿ ಶ್ರಮಿಸುವಂತೆ ಮಾಡಿರುವುದಕ್ಕೆ ಕ್ಷಮಿಸಿ, ಹೋಗಿಬರುತ್ತೇನೆ.

(ಎಂದು ಹೇಳಿ ರಾಘವ ಅಲ್ಲಿಂದ ಹೊರಟುಹೋಗಿ ಮೊದಲು ಪ್ರಕಾಶ್‌ಪುರಿಯಲ್ಲಿರುವ ಚಿಕ್ಕ ಆಶ್ರಮಪ್ರಾಂತಕ್ಕೆ ಸೇರಿದ್ದಾನೆ. ಆ ಸಮಯಕ್ಕೆ ಸಾಯಂಕಾಲ ಕತ್ತಲಾಗಲಾರಂಭಿಸಿತು. ಮಸಕು ಕತ್ತಲಿನಲ್ಲಿ ರಾಘವ ಹೋಗುತ್ತಿದ್ದನು. ಆತನು ಇನ್ನೂ ಆಶ್ರಮವನ್ನು ಸೇರಲಿಲ್ಲ. ಆಶ್ರಮವನ್ನು ಸಮೀಪಿಸುತ್ತಿದ್ದಂತೆ ಯಾರೋ ದೊಡ್ಡದಾಗಿ ಕೂಗಿದಹಾಗೆ ರಾಘವನಿಗೆ ಕೇಳಿಸಿತು. ಏನಾದರೂ ಪ್ರಮಾದವೇನೋ ಎಂದು ತಿಳಿದ ರಾಘವ ಬೇಗನೆ ಮುಂದಕ್ಕೆ ಹೋಗುವುದಕ್ಕೆ ಪ್ರಯತ್ನಿಸಿದನು. ಅಷ್ಟರಲ್ಲಿ ತನಗೆ ಎದುರಾಗಿ ಒಬ್ಬ ವ್ಯಕ್ತಿ ಕಿರುಚುತ್ತಾ ಓಡಿಬರುತ್ತಿದ್ದನು. ಆ ವ್ಯಕ್ತಿ ದೆವ್ವ..ದೆವ್ವಯೆಂದು ಕಿರುಚುತ್ತಾ ಓಡುತ್ತಿದ್ದಾನೆ. ಆತನ ಹಿಂದೆ ಕುಳ್ಳಗಿರುವ ಮೂರು ಅಡಿಗಳ ಎತ್ತರವಿರುವ ಕಪ್ಪನೆಯ ಆಕಾರ ಆತನನ್ನು ಹಿಂಬಾಲಿಸುತ್ತಾ ಬರುತ್ತಿದೆ. ಕತ್ತಲಲ್ಲಿ ಅರ್ಥವಾಗದ ಆ ಆಕಾರವನ್ನು ನೋಡಿ ಮೊದಲು ರಾಘವ ಸಹ ಸ್ವಲ್ಪ

ಅಧೈರ್ಯಪಟ್ಟಿದ್ದಾನೆ. ಅಷ್ಟರಲ್ಲಿಯೇ ರಾಘವ ಧೈರ್ಯವನ್ನು ತಂದುಕೊಂಡು, ಭಯಪಟ್ಟು ಓಡುತ್ತಿರುವ ಮನುಷ್ಯನಿಗೆ ಎದುರಾಗಿ ಭಯಪಡಬೇಡ ನಾನಿದ್ದೇನೆಂದು ಧೈರ್ಯವನ್ನು ಹೇಳಿ ನಿಲ್ಲಿಸಿದನು. ಅಷ್ಟರಲ್ಲಿ ಹಿಂದೆಯೇ ಬರುವ ಆಕಾರ ಸಮೀಪಿಸಿತು. ರಾಘವ ಆ ಆಕಾರದ ಮೇಲೆ ಬಿದ್ದು ಅದನ್ನು ಒತ್ತಿಟ್ಟು ಹಿಡಿದಿದ್ದಾನೆ. ರಾಘವ ಕೈಗೆ ಕಪ್ಪು ಕಂಬಳಿ ಸಿಕ್ಕಿತು. ಕಂಬಳಿ ಕೆಳಗಿಂದ ನಾಯಿ ಹೊರಗೆ ಬಂದಿದೆ. ವಿಚಿತ್ರವಾದ ಆ ಸಂಘಟನೆಯನ್ನು ನೋಡಿ ರಾಘವನಿಗೆ ಏನೂ ಅರ್ಥವಾಗಲಿಲ್ಲ. ಕೂಡಲೆ ರಾಘವ ಮನಸ್ಸಿನಲ್ಲಿ ದೆವ್ವಗಳು ನಾಯಿಗಳಾಗಿ ಬದಲಾಗಿ ಕಾಣಿಸುತ್ತವೆಂದು ಯಾರೋ ಹೇಳಿದ ಮಾತು ನೆನಪಿಗೆ ಬಂದಿತು. ಆಗ ಅದನ್ನು ಹೊಡೆಯುವುದಕ್ಕೆ ಪಕ್ಕದಲ್ಲಿರುವ ಕಲ್ಲನ್ನು ಕೈಯೊಳಗೆ ತೆಗೆದುಕೊಳ್ಳುವುದರಲ್ಲಿ ಆ ನಾಯಿ ಮೊದಲ ವ್ಯಕ್ತಿ ಹತ್ತಿರಕ್ಕೆ ಸೇರಿತು. ಮೊದಲ ವ್ಯಕ್ತಿ ಮತ್ತಷ್ಟು ಭಯದಿಂದ ಆಶ್ರಮದ ಕಡೆ ಓಡಿದನು. ಹಾಗೆ ಓಡುತ್ತಿರುವ ಆತನ ಹಿಂದೆ ನಾಯಿ, ನಾಯಿ ಹಿಂದೆ ರಾಘವ ಓಡಿದರು. ಮೊದಲ ವ್ಯಕ್ತಿ ಆಶ್ರಮದೊಳಗೆ ತೂರಿ ದೆವ್ವ...ದೆವ್ವ ಎಂದು ಕೂಗಿದಾಗ ಅಲ್ಲಿರುವವರೆಲ್ಲರೂ ಆತನ ಹತ್ತಿರಕ್ಕೆ ಸೇರಿದರು. ಅಷ್ಟರಲ್ಲಿ ನಾಯಿ, ನಾಯಿ ಹಿಂದೆ ರಾಘವ ಆಶ್ರಮ ಹತ್ತಿರಕ್ಕೆ ಸೇರಿದರು. ಅಲ್ಲಿ ಗುಂಪು ಸೇರಿದವರು ನಾಯಿಯನ್ನು ಏನೂ ಅನ್ನದೆ ರಾಘವನನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದಾರೆ. ಹಾಗೆ ಹಿಡಿದುಕೊಂಡವರಲ್ಲಿ ಕೆಲವರು, ಇದು ದೆವ್ವವೇ ಎಂದು ಕೆಲವರೆಂದರೆ, ಅಲ್ಲ ಈತನು ಮನುಷ್ಯನೇ ಎಂದು ಕೆಲವರೆಂದರು. ಆ ಸಂಘಟನೆಗೆ ರಾಘವ ಅಯೋಮಯ ಸ್ಥಿತಿಯಲ್ಲಿ ಬಿದ್ದು, ನಾನು ಮನುಷ್ಯನೇ ಎಂದು ದೆವ್ವ ಅಲ್ಲವೆಂದು ಗಟ್ಟಿಯಾಗಿ ಕಿರುಚಿ ಹೇಳಿದನು. ಅಷ್ಟರಲ್ಲಿ ಮೊದಲು ಭಯಪಟ್ಟು ಓಡಿದ ಮನುಷ್ಯ ಬಂದು ಈತನು ಮನುಷ್ಯನೇ, ನಾನು ನಾಯಿಯನ್ನು ನೋಡಿ ಭಯಪಟ್ಟಿದ್ದೇನೆಂದು ಹೇಳಿದ್ದಾನೆ. ಅದಕ್ಕೆ ಅಲ್ಲಿ ಭಕ್ತರು ಆತನನ್ನು ಹೀಗೆ ಕೇಳಿದ್ದಾರೆ.)

**ಭಕ್ತರು :–** ಇದು ನಮ್ಮ ನಾಯಿಯೆ ಅಲ್ಲವೆ! ಇದನ್ನು ನೋಡಿ ಏಕೆ ಭಯಪಟ್ಟಿದ್ದೀಯ?

**ಭಯಪಟ್ಟ ವ್ಯಕ್ತಿ :–** ನಾನು ಕಂಬಳಿ ಭುಜದ ಮೇಲೆ ಹಾಕಿಕೊಂಡು ಹೊಲದ

ಹತ್ತಿರ ಕಾವಲು ಕಾಯಲು ಹೋಗಬೇಕೆಂದು ಹೋಗಿದ್ದೇನೆ. ಹೊಲದ ಹತ್ತಿರಕ್ಕೆ ಹೋದ ನಂತರ ಕಟ್ಟೆ ಮೇಲೆ ಚಾಪೆ ಹಾಸಬೇಕೆಂದುಕೊಂಡು, ನನ್ನ ಭುಜದ ಮೇಲಿರುವ ಕಂಬಳಿಯನ್ನು ಕೆಳಗೆ ಹಾಕಿದ್ದೇನೆ. ಆ ಕಂಬಳಿ ಈ ನಾಯಿ ಮೇಲೆ ಬಿದ್ದ ವಿಷಯ ನನಗೆ ತಿಳಿಯದು. ನಾನು ಚಾಪೆಯನ್ನು ಹಾಸಿ ಪಕ್ಕದಲ್ಲಿ ನೋಡಿದೆನು. ಕಂಬಳಿ ನಾಯಿ ಮೇಲೆ ಇರುವುದರಿಂದ ನಾಯಿ ಕದಲಿಕೆ ಕಪ್ಪು ಆಕಾರ ಕದಲಿದಂತೆ ಕಾಣಿಸಿತು. ನನ್ನ ಪಕ್ಕದಲ್ಲೇ ಹಾಗೆ ಕದಲುವುದರಿಂದ ನಾನು ಕಪ್ಪು ಆಕಾರವನ್ನು ನಿಜವಾಗಿ ದೆವ್ವ ಎಂದುಕೊಂಡು ಕಿರುಚುತ್ತಾ ಓಡಿದ್ದೇನೆ. ಅಷ್ಟರಲ್ಲಿ ಈತನು ಬಂದು ನನ್ನನ್ನು ಭಯಪಡಬೇಡ ಎಂದು ಈ ನಾಯಿ ಮೇಲೆ ಬಿದ್ದಿದ್ದಾನೆ. ಈತನ ಕೈಗೆ ಕಂಬಳಿ ಬಂದಿತು. ನಾಯಿ ನನ್ನ ಹತ್ತಿರಕ್ಕೆ ಬಂದಿತು. ಆದರೂ ಕತ್ತಲಲ್ಲಿ ಏನು ನಡೆದಿದೆಯೋ ಅರ್ಥವಾಗದೇ, ನಮ್ಮ ನಾಯಿ ನೆನಪಾಗದೆ, ದೆವ್ವವೇ ನಾಯಿಯ ಹಾಗೆ ನನ್ನ ಹತ್ತಿರಕ್ಕೆ ಬರುತ್ತಿದೆಯೆಂದು ಭಯಪಟ್ಟು ಇಲ್ಲಿಗೆ ಓಡಿ ಬಂದಿದ್ದೇನೆ. ಈತನು ಸಹ ನನ್ನ ಹಿಂದೆ ಬಂದಿದ್ದಾನೆ.

(ನಡೆದ ಘಟನೆಗೆ ಎಲ್ಲರೂ ನಗಾಡಿದರು. ಆಗ ರಾಘವನನ್ನು ಕುರಿತು ಅಲ್ಲಿರುವ ಆಶ್ರಮ ಭಕ್ತರು ಹೀಗೆ ಕೇಳಿದ್ದಾರೆ)

**ಭಕ್ತರು :–** ನೀನು ಯಾರು? ಈ ಪ್ರಾಂತಕ್ಕೆ ಏಕೆ ಬಂದಿದ್ದೀಯ?

**ರಾಘವ :–** ನಾನು ದೈವಜ್ಞಾನ ವಿಷಯದಲ್ಲಿ ಸತ್ಯವನ್ನು ತಿಳಿದುಕೊಳ್ಳುವುದಕ್ಕಾಗಿ ಸತ್ಯಾನ್ವೇಷಣೆ ಮಾಡುತ್ತಾ, ಕೆಲವು ಆಶ್ರಮಗಳನ್ನು ಸಂದರ್ಶಿಸಿ ಅಲ್ಲಿರುವ ಗುರುಗಳಿಂದ ಜ್ಞಾನವನ್ನು ತಿಳಿದುಕೊಳ್ಳಬೇಕೆಂದು ಇಲ್ಲಿಗೆ ಬಂದಿದ್ದೇನೆ. ಇಲ್ಲಿ ಒಳ್ಳೆಯ ದೈವಜ್ಞಾನವಿದೆಯೆಂದು ಇತರರು ಹೇಳಿದಾಗ ಕೇಳಿ ಬಂದಿದ್ದೇನೆ.

**ಭಕ್ತರು :–** ನಮ್ಮ ಗುರುಗಳು ನೀವು ಕೇಳಿದ ಎಲ್ಲವುಗಳಿಗು ಉತ್ತರ ಹೇಳಬಲ್ಲನು, ಆದರೆ ನೀನು ಆತನನ್ನು ಕೇಳಲಾರೆ. ಆತನಿಗೆ ಬಹಳ ಕಿವುಡು ನೀನು ಕೇಳುವುದು ಆತನಿಗೆ ಕೇಳಿಸುವುದಿಲ್ಲ. ಈ ನಡುವೆ ಏನೂ ಕೇಳಿಸದಂತೆ ಹೋಗಿದೆ.

**ರಾಘವ :–** ಹಾಗಾ! ಆದರೆ ಜೋರಾಗಿ ಕಿರುಚಿಯಾದರೂ ಕೇಳುತ್ತೇನೆ.

(ಅಲ್ಲಿರುವ ಆಶ್ರಮ ಭಕ್ತರು ರಾಘವನಿಗೆ ಅನ್ನ ಇಟ್ಟು, ತಿಂದ ನಂತರ ತಮ್ಮ ಗುರು ಹತ್ತಿರಕ್ಕೆ ಕರೆದುಕೊಂಡು ಹೋಗಿ ಗುರುವನ್ನು ತೋರಿಸಿ, ಗುರುಗಳಿಗೆ ಚೀಟಿಯಲ್ಲಿ ರಾಘವ ವಿಷಯವನ್ನು ಬರೆದು ತೋರಿಸಿ, ರಾಘವನನ್ನು ಗುರುಗಳೊಂದಿಗೆ ಮಾತನಾಡೆಂದು ಹೇಳಿದರು. ಆಗ ರಾಘವ ಗುರುಗಳಿಗೆ ನಮಸ್ಕರಿಸಿ ವಿನಯವಾಗಿ ಹೀಗೆ ಪ್ರಶ್ನಿಸಿದನು.)

**ರಾಘವ :–** ಸ್ವಾಮೀ! ಮನುಷ್ಯ ಹುಟ್ಟುವಿಕೆಯಲ್ಲಿನ ಅಂತರಾರ್ಥವೇನು?

(ರಾಘವ ಮಾತು ಗುರುಗಳಿಗೆ ಕೇಳಿಸಲಿಲ್ಲ. ಆಗ ಕಿವಿಗಳು ತೋರಿಸಿ ಕೈ ಅಲ್ಲಾಡಿಸುತ್ತಾ ಏನು? ಎಂದನು ಗುರುಗಳು)

**ರಾಘವ :–** ಮನುಷ್ಯ ಏಕೆ ಹುಟ್ಟಿದ್ದಾನೆ? (ಎಂದು ಹಿಡಿಕೆ ಹಿಡಿದು ಅಲ್ಲಾಡಿಸುತ್ತಾ ಕೇಳಿದ್ದಾನೆ. ಅದಕ್ಕೆ ಗುರುವು ಹೀಗೆ ಹೇಳಿದ್ದಾನೆ.)

**ಗುರುವು :–** ತಾಂಬೂಲ ಏಕೆ ಹಾಕಿಕೊಂಡಿದ್ದೀಯೆಂದು ಕೇಳುತ್ತಿದ್ದೀಯಾ? ತಿಂದ ಆಹಾರ ಚೆನ್ನಾಗಿ ಜೀರ್ಣವಾಗುತ್ತದೆಂದು ಹಾಕಿಕೊಂಡಿದ್ದೇನೆ.

(ಆ ಮಾತು ಕೇಳಿ ರಾಘವನಿಗೆ ನಗು ಬಂದಿತು. ಆದರೂ ತಡೆದು ಆ ಪ್ರಶ್ನೆಯನ್ನು ಬಿಟ್ಟು ಬೇರೊಂದು ಪ್ರಶ್ನೆಯನ್ನು ಕೇಳಿದ್ದಾನೆ.)

**ರಾಘವ :–** ದೇವರೆಂದರೆ ಯಾರು? (ಎಂದು ಜೋರಾಗಿಗಿ ಕೇಳಿದ್ದಾನೆ)

**ಗುರುವು :–** ನಾನೇನಯ್ಯಾ ಇಲ್ಲಿರುವ ಗುರು.

(ಗುರುಗಳು ಹೇಳಿರುವ ಸಮಾಧಾನಕ್ಕೆ ರಾಘವನಿಗೆ ದಿಕ್ಕು ತೋಚದೆ ತಲೆ ಕೆರೆದುಕೊಂಡು ಈತನಿಗಿರುವುದು ಮಾಮೂಲು ಕಿವುಡು ಅಲ್ಲ, ಬ್ರಹ್ಮ ಕಿವುಡು ಎಂದುಕೊಂಡನು. ಕಿವುಡರಿಗೆ ಇರುವವರಿಗೆ ಕೈಗಳು ತೋರಿಸಿ ಕೇಳಬೇಕಾಗಿರುವುದೇ ಹೊರತು ಎಷ್ಟು ಜೋರಾಗಿ ಕಿರುಚಿ ಕೇಳಿದರೂ ಪ್ರಯೋಜನ ಇಲ್ಲವೆಂದುಕೊಂಡಿದ್ದಾನೆ. ಈ ಸಲ ತನ್ನ ಕೈಬೆರಳುಗಳನ್ನು ಎರಡನ್ನು ತೋರಿಸುತ್ತಾ ಹೀಗೆ ಕೇಳಿದ್ದಾನೆ.)

**ರಾಘವ :–** ಜೀವಾತ್ಮ, ಪರಮಾತ್ಮ ಎರಡು ಎಲ್ಲಿವೆ?

**ಗುರುವು :–** ಎರಡಕ್ಕೆ ಬರುತ್ತದಾ ಹೋಗಿಬಾ ಹೋಗು, ನಂತರ ಮಾತನಾಡಬಹುದು.

(ಈ ಬಾರಿ ಎರಡು ಕೈ ಬೆರಳನ್ನು ತೋರಿಸುವುದರಿಂದ ಗುರುಗಳು ಮತ್ತೊಂದು ವಿಧವಾಗಿ ಅರ್ಥ ಮಾಡಿಕೊಳ್ಳುವುದರಿಂದ ರಾಘವ ಆಯಾಸ ಗೊಂಡಷ್ಟು ಕೆಲಸವಾಯಿತು. ಇನ್ನು ಲಾಭವಿಲ್ಲ ಇಲ್ಲಿಂದ ಹೋಗುವುದು ಒಳ್ಳೆಯದೆಂದುಕೊಂಡು, ಅಲ್ಲಿಂದ ಪಕ್ಕಕ್ಕೆ ಬಂದು ಆ ಆಶ್ರಮ ಭಕ್ತನೊಂದಿಗೆ ಮಾತನಾಡ ತೊಡಗಿದನು.)

**ರಾಘವ :–** ಏನಯ್ಯಾ! ನಿಮ್ಮ ಗುರುಗಳಿಗೆ ಎಷ್ಟು ಕಿರುಚಿ ಕೇಳಿದರೂ ಕೇಳಿಸುವುದಿಲ್ಲವೇ, ಸನ್ನೆ ಮಾಡಿ ಕೇಳಿದರೂ ಬೇರೆ ವಿಧವಾಗಿ ಅರ್ಥ ಮಾಡಿಕೊಳ್ಳುತ್ತಾನೆ. ಈತನ ಹತ್ತಿರ ನೀವು ಹೇಗೆ ಜ್ಞಾನವನ್ನು ತಿಳಿದುಕೊಳ್ಳುತ್ತೀರ.

**ಭಕ್ತನು :–** ನಾವು ಏನೂ ಕೇಳುವುದಿಲ್ಲ. ಆತನು ಹೇಳುವುದನ್ನು ಮಾತ್ರವೇ ಕೇಳಿಸಿಕೊಳ್ಳುತ್ತೇವೆ.

**ರಾಘವ :–** ನಿಮಗೇನಾದರೂ ಅರ್ಥವಾಗದಿದ್ದರೂ, ಇಲ್ಲವೆ ಅನುಮಾನ ಬಂದರೂ ಹೇಗೆ ಕೇಳುತ್ತೀರಾ?

**ಭಕ್ತನು :–** ಇಲ್ಲಿನವರಿಗೆ ಯಾವ ಅನುಮಾನ ಬರುವುದಿಲ್ಲ. ಏಕೆಂದರೆ ಇಲ್ಲಿಗೆ ಬರುವವರು ಜ್ಞಾನದ ಮೇಲೆ ಆಸಕ್ತಿಯಿಂದ ಬರುತ್ತಿಲ್ಲ. ಗುರುಗಳು ಹೇಳುವಾಗ ಅರ್ಥವಾದಂತೆ ಕಾಣಿಸುವುದಕ್ಕೆ ಸುಮ್ಮನೇ ತಲೆ ಅಲ್ಲಾಡಿಸುತ್ತಿರುತ್ತಾರೆ. ಇಲ್ಲಿಗೆ ಬರುವವರು ಮೇಲ್ನೋಟಕ್ಕೆ ಜ್ಞಾನಕ್ಕೋಸ್ಕರ ಬರುತ್ತಿರುವಂತೆ ಕಾಣಿಸಿದರೂ, ಅವರು ನಿಜವಾಗಿ ಜ್ಞಾನಕ್ಕೋಸ್ಕರ ಬರುತ್ತಿಲ್ಲ.

**ರಾಘವ :–** ಹಾಗಾದರೇ ಏಕೆ ಬಂದಂತೆ? (ರಾಘವ ಕಣ್ಣುಬ್ಬನ್ನು ಕೂಡಿಸಿ ಕೇಳಿದನು)

**ಭಕ್ತನು :–** ಎಷ್ಟೋ ವಿಚಿತ್ರ ಮನಸ್ಥತ್ವಗಳಿರುವ ಮನುಷ್ಯರು ಗುರುಗಳ ಹತ್ತಿರಕ್ಕೆ ಬರುತ್ತಿರುತ್ತಾರೆ. ಬಂದಿರುವವರು ಜ್ಞಾನವನ್ನು ತಿಳಿದುಕೊಳ್ಳುವ ಸಲುವಾಗಿ ಬಂದಂತೆ ಕಾಣಿಸಿದರೂ, ಅವರು ಜ್ಞಾನವನ್ನು ತಿಳಿದುಕೊಂಡು ಯಾವ ಬದಲಾವಣೆ ಆಗುವುದಿಲ್ಲ. ಗುರುಗಳು ಕಿವುಡನಾದರೂ ಆತನು ತಿಳಿಸುವ ಜ್ಞಾನ ಉತ್ತಮವಾದದ್ದು. ಆದರೆ ಅದನ್ನು ತಿಳಿದುಕೊಂಡಂತೆ ನಟಿಸುತ್ತಾ ಕೆಲವು ಸಂವತ್ಸರಗಳು ಇಲ್ಲಿಗೆ

ಬಂದರೂ, ಕೊನೆಗೆ ಕೆಲವು ಸಂವತ್ಸರಗಳ ನಂತರ ಸಹ ಜ್ಞಾನದ ಪ್ರಕಾರ ಅಲ್ಲದೆ, ಮೊದಲಿನಿಂದ ಇರುವ ಅವರವರ ಸಹಜತ್ವದ ಪ್ರಕಾರ ನಡೆದುಕೊಳ್ಳುತ್ತಿರುವರು. ಈ ವಿಧವಾಗಿ ಬಹಳ ಜನ ಎಷ್ಟು ಜ್ಞಾನವನ್ನು ತಿಳಿದುಕೊಂಡರೂ ಕೊನೆಗೆ, ಗುರುಗಳನ್ನೇ ಎದರಿಸಿ ನಿನ್ನದೇ ತಪ್ಪು, ನಾವೇ ಸರಿ ಎನ್ನುವಂತೆ ಸಹ ಪ್ರವರ್ತಿಸುತ್ತಿರುವರು.

**ರಾಘವ :–** ಗುರುಗಳು ಹೇಳಿದ ಜ್ಞಾನದ ಪ್ರಕಾರ ಆಚರಿಸದೆ ಹೋದರೆ, ಇಲ್ಲಿಗೆ ಏಕೆ ಬರಬೇಕು?

**ಭಕ್ತನು :–** "ಕುಡಿಕೆಗಳನ್ನಿಟ್ಟು ಮಡಿಕೆಗಳನ್ನು ಎತ್ತಿಕೊಂಡು ಹೋದಂತೆ" ಎನ್ನುವ ಒಂದು ಗಾದೆ ಇದೆ. ಅದೇ ಪ್ರಕಾರವೇ ಗುರುಗಳ ಹತ್ತಿರ ಕೆಲವರು ಪ್ರವರ್ತಿಸುತ್ತಿರುವರು. ಕೆಲವರಾದರೆ ಕುಡಿಕೆಗಳನ್ನು ಸಹ ಇಡದಂತೆ ಮಡಿಕೆಗಳನ್ನು ಎತ್ತಿಕೊಂಡುಹೋಗುವವರಿದ್ದಾರೆ. ಗುರುಗಳ ಹತ್ತಿರಕ್ಕೆ ಬಂದು ಬೆಲೆ ಇಲ್ಲದ್ದನ್ನು ಕೊಟ್ಟು ಅದಕ್ಕೆ ಬದಲು ಬೆಲೆ ಇರುವುದನ್ನು ತೆಗೆದುಕೊಂಡು ಹೋಗುವವರಿದ್ದಾರೆ. ಕೆಲವರಾದರೆ ಬೆಲೆ ಇಲ್ಲದ್ದನ್ನು ಸಹ ಕೊಡದಂತೆ ಬೆಲೆ ಇರುವವುಗಳನ್ನು ತೆಗೆದುಕೊಂಡು ಹೋಗುವವರಿದ್ದಾರೆ. ಗುರುಗಳು ಬಂದಿರುವವರಿಗೆ ಅನ್ನ ಇಟ್ಟು, ಜ್ಞಾನ ಹೇಳುವುದು ಆತನಿಗೆ ಖರ್ಚಿನಿಂದ ಕೂಡಿಕೊಂಡ ಕೆಲಸ ಎಂದು ಎಲ್ಲರಿಗೂ ತಿಳಿದಿರುತ್ತದೆ. ಆ ಖರ್ಚು ಸಹ ಕೊಡದವರು ಕೆಲವರಿರುವಾಗ, ನೂರು ರೂಪಾಯಿಗಳು ಕೊಟ್ಟವನು ತನ್ನ ಹಿಂದೆ ಹತ್ತು ಜನರನ್ನು ಕರೆದುಕೊಂಡು ಬರುವುದು ನಡೆಯುತ್ತಿದೆ. ಕೆಲವರು ಅನ್ನ ಇಡುವ ಗುರುಗಳನ್ನು ಬುದ್ಧಿ ಕಡಿಮೆಯವನನ್ನಾಗಿ ಭಾವಿಸಿ, ಅದೇ ಕೆಲಸದಂತೆ ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಬರುತ್ತಿದ್ದೇವೆನ್ನುವಂತೆ ನಟಿಸುತ್ತಾ, ಕೆಲವು ದಿನಗಳು ಇಲ್ಲೇ ಇದ್ದು ಕಾಲವನ್ನು ಕಳೆದುಹೋಗುತ್ತಿರುವರು. ಇಂತಹವರಿಗೆ ಜ್ಞಾನ ಅವಶ್ಯವಿಲ್ಲ. ಅವರು ಗುರುವನ್ನೇ ಮೋಸ ಮಾಡುತ್ತಿರುವರು.

**ರಾಘವ :–** ಇಂತಹವರೆಲ್ಲರೂ ಮೋಸಗಾರರೆಂದು ಗುರುಗಳಿಗೆ ತಿಳಿಯದಾ?

**ಭಕ್ತನು :–** ತಿಳಿಯದೇ ಏನು! ಎಲ್ಲಾ ಗೊತ್ತು. ನಾನು ಹೇಳಿರುವುದು ಕೆಲವರನ್ನೇ.

ಆದರೆ ಆತನು ಉಳಿದ ಎಲ್ಲ ವಿಧಗಳ ಮೋಸಗಾರರನ್ನು ಸಹ ಗ್ರಹಿಸಿದ್ದಾನೆ. ನೋಡುವುದಕ್ಕೆ ಆತನು ಕಿವುಡನೇ, ಆದರೆ ಆತನು ದೊಡ್ಡ ಮೇಧಾವಿ. ಉಳಿದ ಮೋಸಗಾರರನ್ನು ಕುರಿತು ಸಹ ಮೊದಲೇ ನಮಗೆ ಹೇಳಿದ್ದಾನೆ. ನಾನು ನಿನಗೆ ಹೇಳಿರುವುದು ಒಂದು ವಿಧವಾದರೆ ಗುರುಗಳು ಹೇಳಿರುವವು ಸುಮಾರು ಇಪ್ಪತ್ತು ವಿಧಗಳ ಮೋಸಗಾರರಿರುವಂತೆ ಗ್ರಹಿಸಿದ್ದಾನೆ. ಅದರಲ್ಲಿ ತನ್ನ ಹತ್ತಿರ ಸ್ವಲ್ಪ ಜ್ಞಾನವನ್ನು ತಿಳಿದುಕೊಂಡು, ಎಲ್ಲಾ ತಿಳಿದುಕೊಂಡಿದ್ದೇನೆಂದುಕೊಂಡು ಪಕ್ಕಕ್ಕೆ ಹೋಗಿ, ತಾವೂ ಸಹ ಗುರುಗಳಾಗಿ ಚಲಾವಣೆ ಆಗುತ್ತಾ, ಅದರಿಂದ ಹಣ ಸಂಪಾದಿಸಿಕೊಳ್ಳಬೇಕೆಂದುಕೊಳ್ಳುವವರು ಮೊದಲನೆ ಮೋಸಗಾರರೆಂದು ಹೇಳಿದ್ದಾನೆ.

**ರಾಘವ :–** ಹಾಗಿರುವಾಗ ತಿಳಿದೂ ಅಂತಹವರನ್ನು ಜ್ಞಾನದ ಹತ್ತಿರಕ್ಕೆ ಏಕೆ ಕರೆದುಕೊಳ್ಳಬೇಕು?

**ಭಕ್ತನು :–** ನಾವೂ ಸಹ ಈ ಮಾತೇ ಹೇಳಿದ್ದೇವೆ. ಅದಕ್ಕೆ ಆತನು ನಮ್ಮ ಹತ್ತಿರಕ್ಕೆ ಬರುವವರೆಲ್ಲರೂ ಅಜ್ಞಾನಿಗಳೇ. ಅದರಲ್ಲಿ ಅವರು ನಮ್ಮನ್ನು ಮೋಸಮಾಡಬೇಕೆಂದುಕೊಳ್ಳುವುದು ವಿಚಿತ್ರವೇನೂ ಅಲ್ಲ. ರೋಗವಿರುವವರಿಗೇ ವೈದ್ಯವೆನ್ನುವಂತೆ ಅಂತಹವರಿಗೇ ನಮ್ಮ ಜ್ಞಾನ ಅಗತ್ಯ. ಒಂದುವೇಳೆ ನಮ್ಮ ವೈದ್ಯದಿಂದ ಅವರ ರೋಗ ಹೋಗದಿರುವಾಗ, ನಮ್ಮ ವೈದ್ಯ ಅವರಿಗೆ ಕೆಲಸಕ್ಕೆ ಬರುವುದಿಲ್ಲವೆಂದು ಕಳುಹಿಸುತ್ತೇವೆ ಎಂದನು.

**ರಾಘವ :–** ಪ್ರಸ್ತುತ ಈಗ ಇಂತಹ ಮೋಸಗಾರರು ನಿಮ್ಮ ಹತ್ತಿರಕ್ಕೆ ಬರುತ್ತಿದ್ದಾರೆಂದು ತಿಳಿದಿದೆ ಅಲ್ಲವೆ! ಅಂತಹವರಿಗೆ ನೀವು ಜ್ಞಾನದ ಪ್ರಕಾರ ಆಚರಿಸಿದಾಗಲೇ ಇಲ್ಲಿಗೆ ಬರಬಹುದು, ಇಲ್ಲದೆ ಹೋದರೆ ಇಲ್ಲಿ ಸ್ಥಾನವಿಲ್ಲವೆಂದು ಹೇಳಬಹುದಲ್ಲವೆ!

**ಭಕ್ತನು :–** ನಾವಾದರೆ ಹಾಗೇ ಹೇಳುತ್ತೇವೆ. ಆದರೆ ಗುರುಗಳು ಹಾಗೆ ಹೇಳುವುದಿಲ್ಲ. ಆತನು ಕಿವುಡನಾದರೂ ಅಮೋಘವಾದ ಯುಕ್ತಿ ಇರುವವನು. ಯಾರನ್ನು ಯಾವ ವಿಧವಾಗಿ ದೂರ ಮಾಡಬೇಕೋ, ಆ ವಿಧವಾಗಿಯೇ ಹೇಳದಂತೆ ಮಾಡುತ್ತಾನೆ.

**ರಾಘವ :–** ನಿಮ್ಮಂತಹ ನಿಜವಾದ ಭಕ್ತರು ಯಾರೂ ಇಲ್ಲವಾ?

**ಭಕ್ತನು :–** ಕೆಲವರಿದ್ದಾರೆ. ಆದರೂ ಅವರು ಮೇಲ್ನೋಟಕ್ಕೆ ಕಾಣಿಸದೆ ಸೇವಾ ಭಾವದಿಂದ ಕೆಲಸವನ್ನು ಮಾಡುತ್ತಾ, ಜ್ಞಾನ ಪ್ರಚಾರಕ್ಕೋಸ್ಕರ ಪಾಟುಬೀಳುತ್ತಿರುತ್ತಾರೆ. ಅಂತಹವರನ್ನು ನೋಡಿ ಸಹಿಸಲಾರದ ಅಜ್ಞಾನಿಗಳು, ತಮಗಿಂತ ಹೆಚ್ಚಾಗಿ ಯಾರೂ ಇರಬಾರದೆನ್ನುವ ಭಾವನೆಯಿಂದ, ಗುರುಗಳ ಹತ್ತಿರ ಸೇರಿ ಒಳ್ಳೆಯವರನ್ನು ಕುರಿತು ಕೆಟ್ಟದಾಗಿ ಹೇಳುವುದು ಸಹ ನಡೆಯುತ್ತಿರುತ್ತದೆ. ಆದರೂ ಗುರುಗಳಿಗೆ ಎಲ್ಲಾ ಗೊತ್ತು. ಯಾರು ಎಂತಹವರೋ, ಯಾರು ಜ್ಞಾನಕ್ಕೋಸ್ಕರ ಕೆಲಸ ಮಾಡುತ್ತಿದ್ದಾರೋ, ಯಾರು ತಮ್ಮ ಸ್ವಾರ್ಥಕ್ಕೋಸ್ಕರ ಕೆಲಸ ಮಾಡುತ್ತಿದ್ದಾರೋ ಆತನಿಗೆ ತಿಳಿದಿದೆ. ಆದ್ದರಿಂದ ಆಗ ಅವರು ಹೇಳಿರುವುದನ್ನು ಕೇಳಿದರೂ, ನಂತರ ಅವರಿಗೇ ಗುರುಗಳ ಹತ್ತಿರ ಸ್ಥಾನ ಇಲ್ಲದಂತೆ ಹೋಗುತ್ತದೆ. ಹಾಗೆ ನಾವೇ ಗುರುಗಳ ಹತ್ತಿರ ಮೊದಲನೆಯವರೆಂದುಕೊಂಡವರೆಲ್ಲರೂ ಕೊನೆಗೆ ಗುರುಗಳ ಹತ್ತಿರಕ್ಕೂ ಸಹ ಬಾರದಂತೆ ಹೋಗಿದ್ದಾರೆ. ಗುರುವು ಹೇಳಿದ ಜ್ಞಾನ ನಮ್ಮಿಂದಲೇ ನಿಮಗೆ ತಿಳಿಯುತ್ತದೆ. ನಾವು ಗುರುಗಳಿಗೆ ಹತ್ತಿರದವರೆಂದು ಹೇಳಿಕೊಂಡವರೆಲ್ಲರಿಗೂ ಗುರು ದರ್ಶನ ಸಹ ಸಿಗದಂತೆ ಹೋಗಿದೆ. ಜ್ಞಾನದಲ್ಲಿ ನಾವೇ ಮೊದಲನೆಯವರೆಂದು ಕೊಂಡವರೆಲ್ಲರೂ ಕೊನೆಯವರಾಗಿ ಹೋಗಿದ್ದಾರೆ. ಗುರುವೊಂದರ ಸಂಕಲ್ಪದಿಂದ ಮಾಯೆ ಅಂತಹವರೆಲ್ಲರನ್ನೂ ಆಶ್ರಮಕ್ಕೆ ದೂರ ಮಾಡಿದೆ.

(ಇದೆಲ್ಲಾ ಕೇಳಿದ ರಾಘವನಿಗೆ ಯಾವುದೋ ದೊಡ್ಡ ಸಂಸಾರದ ಕಥೆ ಕೇಳಿದಂತಾಯಿತು. ತಲೆ ಕೊಡವಿಕೊಂಡು ಆ ರಾತ್ರಿ ಅಲ್ಲೇ ಮಲಗಿಕೊಂಡು, ಬೆಳಗ್ಗೆ ಎದ್ದು ಅಲ್ಲಿರುವ ಭಕ್ತರೊಂದಿಗೂ, ಗುರುಗಳೊಂದಿಗೂ ಹೇಳಿ ಹೊರಟು ದೊಡ್ಡ ಆಶ್ರಮವನ್ನು ನೋಡಬೇಕೆಂದು ಪ್ರಯಾಣವನ್ನು ಸಾಗಿಸಿದನು.)

***********************************

(ತಮ್ಮ ಹಟ್ಟಿಯಿಂದ ಹೊರಟ ಗಿರಿಜನರು ಮಾರ್ಗ ಮಧ್ಯದಲ್ಲಿ ಒಂದು ದೊಡ್ಡ ಪಟ್ಟಣವನ್ನು ಸೇರಿದರು. ಅಷ್ಟರಲ್ಲಿ ಸಂಜೆ ಆಯಿತು. ಆದ್ದರಿಂದ ಅವರು ಆ ರಾತ್ರಿ ಅಲ್ಲೇ ಇರಬೇಕೆಂದುಕೊಂಡರು. ಅವರ ಹಿಂದೆ ತಂದುಕೊಂಡ ಜೇನು, ರೊಟ್ಟಿಗಳನ್ನು ತಿಂದು ಮಲಗುವುದಕ್ಕಾಗಿ ಸ್ಥಳವನ್ನು ಹುಡುಕಿದರು. ಅವರು

ಯಾವಾಗಲೂ ಪಟ್ಟಣ ಪ್ರಾಂತಕ್ಕೆ ಬಂದಿರುವವರಲ್ಲ. ಹಾಗೆ ಬಂದಿರುವುದು ಅದೇ ಮೊದಲ ಅನುಭವ. ರಸ್ತೆಯ ಮೇಲೆ ಹೆಚ್ಚಾಗಿ ತಿರುಗುವ ಮನುಷ್ಯರು, ವೇಗವಾಗಿ ಹೋಗುವ ವಾಹನಗಳು ಅವರಿಗೆ ವಿಚಿತ್ರವಾಗಿ ಕಾಣಿಸುತ್ತಿತ್ತು. ರಾತ್ರಿ ಹನ್ನೊಂದು ಗಂಟೆಯಾದರೂ ಅವರಿಗೆ ಸರಿಯಾದ ಜಾಗ ಕಾಣಿಸಲಿಲ್ಲ. ಕೊನೆಗೆ ಒಂದು ಕಡೆ ರಸ್ತೆ ಪಕ್ಕದಲ್ಲೇ ಖಾಲಿ ಜಾಗ ಕಾಣಿಸಿತು. ಅದನ್ನು ನೋಡಿದವರು ಆ ರಾತ್ರಿ ಅಲ್ಲೇ ಮಲಗಬೇಕೆಂದುಕೊಂಡರು. ಅಲ್ಲಿ ಮಲಗಿದವರಿಗೆ ಹೊಸ ಜಾಗ ಆಗಿರುವುದರಿಂದ ಕೆಲವರಿಗೆ ನಿದ್ರೆ ಬರಲಿಲ್ಲ, ಕೆಲವರು ನಿದ್ರೆ ಹೋದರು. ರಾತ್ರಿ ಎರಡು ಗಂಟೆಗಳ ಸಮಯದಲ್ಲಿ ಯಾರೋ ತಮ್ಮನ್ನು ಎಬ್ಬಿಸಿದಂತಾಯಿತು. ಕಣ್ಣು ತೆರೆದು ನೋಡಿದರು, ಎದುರಲ್ಲಿ ನಾಲ್ಕು ಜನ ಪೊಲೀಸ್‌ನವರಿದ್ದಾರೆ. ಗಿರಿಜನರು ಎಂದೂ ತಮ್ಮ ಪ್ರಾಂತವನ್ನು ಬಿಟ್ಟು ಹೊರಗೆ ಬರಲಿಲ್ಲ. ಆದ್ದರಿಂದ ತಮ್ಮನ್ನು ಎಬ್ಬಿಸಿದವರು ಪೊಲೀಸರೆಂದು ಸಹ ಅವರಿಗೆ ತಿಳಿದಿಲ್ಲ. ನಮ್ಮನ್ನು ಏಕೆ ಎಬ್ಬಿಸಿದ್ದೀರೆಂದು ಪೊಲೀಸರನ್ನು ಗಿರಿಜನರು ಕೇಳಿದರು. ಆ ಮಾತಿಗೆ ಪೊಲೀಸ್‌ನವರು ಉತ್ತರ ಹೇಳದಂತೆ ದೌರ್ಜನ್ಯ ಮಾಡುತ್ತಾ, ಕಳ್ಳರ ಗುಂಪನ್ನು ಹಿಡಿದುಕೊಂಡಷ್ಟು ಸಂತೋಷಪಡುತ್ತಾ ವ್ಯಾನನ್ನು ಹತ್ತಿರಿ ಎಂದು ಗದರಿಸಿದರು. ಗಿರಿಜನರಿಗೆ ಅವರ ಪ್ರವರ್ತನೆ ಏನೂ ಅರ್ಥವಾಗಲಿಲ್ಲ. ಅಷ್ಟರಲ್ಲಿ ಮತ್ತೆ ನಾಲ್ವರು ಪೊಲೀಸರು, ಒಬ್ಬ ಇನ್‌ಸ್ಪೆಕ್ಟರ್ ವ್ಯಾನ್ ಇಳಿದು ಬಂದರು. ನಗರದಲ್ಲಿ ದರೋಡೆಗಳು ಮಾಡುತ್ತಾ ಇಲ್ಲಿಯವರೆಗು ಸಿಗದಂತೆ ಪೊಲೀಸರನ್ನು ಕಾಡುತ್ತಿರುವ ಕಳ್ಳರ ಗುಂಪು ಗಿರಿಜನರ ಗುಂಪೇಯೆಂದು ತಿಳಿದ ಇನ್‌ಸ್ಪೆಕ್ಟರ್, ಕೂಡಲೇ ವೈರ್‌ಲೆಸ್ ಸೆಟ್‌ನಲ್ಲಿ ಯಾರೊಂದಿಗೊ ಮಾತನಾಡಿದನು. ಮಾತನಾಡಿದ ಸ್ವಲ್ಪ ಸಮಯಕ್ಕೆ ಎರಡು ಪೊಲೀಸ್ ಜೀಪುಗಳು ಬಂದವು. ಅದರಲ್ಲಿನ ಪೊಲೀಸರು ಬಂದೂಕುಗಳೊಂದಿಗೆ ಬಂದರು. ಪೊಲೀಸರು ಎಲ್ಲರೂ ಸೇರಿ ಗಿರಿಜನರನ್ನು ಬಲವಂತವಾಗಿ ವ್ಯಾನಿನೊಳಗೆ ಹತ್ತಿಸಿದರು. ಪೊಲೀಸ್‌ನವರು ಏನು ಮಾಡುತ್ತಿದ್ದಾರೋ, ತಮ್ಮನ್ನು ವ್ಯಾನಿನಲ್ಲಿ ಹತ್ತಿಸಿ ಏಕೆ ಕರೆದುಕೊಂಡುಹೋಗುತ್ತಿದ್ದಾರೋ, ಗಿರಿಜನರಿಗೆ ಯಾವ ಮಾತ್ರ ಅರ್ಥವಾಗಲಿಲ್ಲ. ತಮ್ಮನ್ನು ಹೆದರಿಸುತ್ತಿರುವ ಒಬ್ಬ ಪೊಲೀಸ್‌ನನ್ನು ಗಿರಿಜನರು ಹೀಗೆ ಕೇಳಿದರು)

**ಗಿರಿಜನರು :–** ನಮ್ಮನ್ನು ಎಲ್ಲಿಗೆ ಕರೆದುಕೊಂಡು ಹೋಗುತ್ತಿದ್ದೀರ?

**ಪೊಲೀಸ್ :–** ನಿಮ್ಮ ಅತ್ತೆ ಮನೆಗೆ.

**ಗಿರಿಜನರು :–** ಏನ್ರೀ ಟೋಪೀ ಮಾಮ! ನಿಮ್ಮ ಇಷ್ಟ ಬಂದಂತೆ ಮಾತನಾಡುತ್ತಿದ್ದೀರ. ನಮ್ಮ ಅತ್ತೆ ಮನೆ ಅಡವಿಯಲ್ಲಿದೆ. ಆದರೆ ಇಲ್ಲೇಕಿರುತ್ತದೆ.

**ಪೊಲೀಸ್ :–** ಬಾಯಿ ಮುಚ್ಚಿಕೊಂಡು ಕುತ್ಕೋ! ಮಗನೆ! ಎಂದನು

**ಗಿರಿಜನರು :–** ನಾವು ಮಾಮ ಎಂದು ಮರ್ಯಾದೆಯಿಂದ ಕರೆದರೆ, ನಮ್ಮನ್ನು ಮಗನೆ ಎನ್ನುತ್ತೀಯ, ನಮ್ಮ ಅಡವಿ ಮನುಷ್ಯರ ಬಲ ನಿಮ್ಮ ಪಟ್ಟಣದವರಿಗೆ ತಿಳಿದಿಲ್ಲ. ನಾವು ಇಲ್ಲಿಯವರೆಗೂ ಸುಮ್ಮನಿದ್ದೇವೆ. ಇನ್ನು ನಮಗೆ ಕೋಪ ಬಂದಿದೆಯೆಂದರೆ ಯಾವ ಕಾರಣಕ್ಕು ಸುಮ್ಮನಿರುವುದಿಲ್ಲ.

**ಪೊಲೀಸರು :–** ನಿಮ್ಮ ಕಥೆ ಸ್ಟೇಷನ್‌ಗೆ ಹೋದ ನಂತರ ಕಣೋ, ನಮ್ಮನ್ನೇ ಹೆದರಿಸುತ್ತೀರಾ, ನಿಮ್ಮನ್ನು ಏನು ಮಾಡುತ್ತೀವೋ ನೋಡಿರಿ!

(ಅಷ್ಟರಲ್ಲಿ ಪೊಲೀಸ್‌ಸ್ಟೇಷನ್ ಬಂದೇ ಬಟ್ಟಿತು. ಸ್ಟೇಷನ್ ಮುಂದೆ ವ್ಯಾನ್ ನಿಂತಿತು. ಗಿರಿಜನರೆಲ್ಲರನ್ನೂ ಇಳಿಸಿ ಲಾಕಪ್‌ರೂಂನಲ್ಲಿ ಇಟ್ಟು ಬೀಗ ಹಾಕಿದರು. ಅಷ್ಟರಲ್ಲಿ ಸ್ಟೇಷನ್‌ನಲ್ಲಿ ಫೋನ್ ಬಂದಿತು. ಫೋನ್‌ನನ್ನು ತೆಗೆದುಕೊಂಡ ಇನ್‌ಸ್ಪೆಕ್ಟರ್ ಆಕಡೆ ಮಾತುಗಳನ್ನು ಕೇಳಿ, ಫೋನ್‌ನ್ನು ಕೂಡಲೆ ಇಟ್ಟು, "ರಾಣಿನಗರ್‌ನಲ್ಲಿ ಮರ್ಡರ್ ನಡೆದಿದೆ. ತಕ್ಷಣವೇ ಹೋಗಬೆಕೆಂದು" ಪೊಲೀಸರನ್ನು ಕರೆದುಕೊಂಡು ಆತುರದಿಂದ ಹೋದನು. ಪೊಲೀಸ್ ಸ್ಟೇಷನ್‌ನಲ್ಲಿ ಡ್ಯೂಟೀಯಲ್ಲಿದ್ದ ಸೆಂಟ್ರೀ (ಕಾವಲಿದ್ದ) ಪೊಲೀಸರು ಇಬ್ಬರು ಮಾತ್ರ ಇದ್ದಾರೆ. ಲಾಕಪ್‌ನಲ್ಲಿ ಬಂದೀಗಳಾದ ಗಿರಿಜನರಿಗೆ ಸಮಸ್ಯೆ ಏನೋ, ತಮ್ಮನ್ನು ಏಕೆ ಅಲ್ಲಿಗೆ ತಂದಿಟ್ಟಿದ್ದಾರೋ ಏನೂ ಅರ್ಥವಾಗಲಿಲ್ಲ. ಪೊಲೀಸ್‌ರವರ ಪ್ರವರ್ತನೆಗೆ ಬೇಸರಗೊಂಡ ಗಿರಿಜನರು ಅಲ್ಲಿಂದ ತಪ್ಪಿಸಿಕೊಂಡು ಹೋಗಬೇಕೆಂದು ನಿರ್ಣ ಯಿಸಿಕೊಂಡಿದ್ದಾರೆ.

ಕೂಡಲೇ ಅವರಲ್ಲಿ ಒಬ್ಬರ ಕೈಗೆ ಕಡಗದಂಥದ್ದನ್ನು ಹಾಕಿಕೊಂಡ ಮುತ್ತುಗದ ಮರ ಬದನಿಕೆಯನ್ನು ಹೊರಗೆ ತೆಗೆದು ಎಲ್ಲರ ತಲೆಮೇಲೆ ತಾಕಿಸಿದನು. ಹಾಗೆ

ತಾಕಿಸಿದ ಬದನಿಕೆ (ಮೂಲಿಕೆ) ಪ್ರಭಾವದಿಂದ ಅವರ ರೂಪಗಳು ಮಸಕು ಮಸಕಾಗಿ ಬದಲಾಗಲು ಆರಂಭಿಸಿತು. ಹಾಗೆ ಕಾಣಿಸುತ್ತಿರುವ ಅವರು ಸ್ವಲ್ಪ ಸ್ವಲ್ಪ ಬದಲಾಗುತ್ತಾ, ಅವರ ಆಕಾರಗಳು ಪೂರ್ತಿ ಕಾಣಿಸದಂತೆ ಹೋಗುವುದಕ್ಕೆ ಎರಡು ನಿಮಿಷಗಳು ಹಿಡಿಯಿತು. ಆ ವಿಧವಾಗಿ ಒಂದು ಬದನಿಕಾ ಪ್ರಭಾವದಿಂದ ಲಾಕಪ್‌ನಲ್ಲಿರುವ ಎಂಟು ಜನ ಗಿರಿಜನರು ಅದೃಶ್ಯವಾದರು. ಹಾಗೆ ನಡೆದ ಸ್ವಲ್ಪ ಹೊತ್ತಿಗೆ ಕಾವಲಾಗಿದ್ದ ಪೋಲೀಸ್ ಲಾಕಪ್ ಕಡೆ ನೋಡುವುದು ನಡೆಯಿತು. ಲಾಕಪ್‌ನಲ್ಲಿನ ಗಿರಿಜನರು ಪೊಲೀಸರಿಗೆ ಕಾಣಿಸಲಿಲ್ಲ. ಖಾಲಿಯಾಗಿರುವ ಲಾಕಪ್‌ನ್ನು ನೋಡಿದ ಪೊಲೀಸ್ ಆಶ್ಚರ್ಯಪಟ್ಟು, ಕೂಡಲೇ ಲಾಕಪ್ ಬಾಗಿಲು ತೆರೆದು ಎರಡು ಹೆಜ್ಜೆಗಳು ಒಳಗೆ ಹೋದನು. ದಪ್ಪನೆಂದು ಯಾರೋ ಪೊಲೀಸ್ ಭುಜದಮೇಲೆ ಹೊಡೆದಂತಾಯಿತು. ಆ ಏಟಿಗೆ ಪೊಲೀಸ್ ಎಚ್ಚರ ತಪ್ಪಿ ಬಿದ್ದನು. ಅದೃಶ್ಯವಾಗಿರುವ ಗಿರಿಜನರು ಪೊಲೀಸ್ ಒಳಗೆ ಬಂದ ಕೂಡಲೇ, ಭುಜದ ಮೇಲೆ ಹೊಡೆದು ಆತನು ಕೆಳಗೆ ಬಿದ್ದ ಕೂಡಲೇ, ಎಲ್ಲರೂ ಹೊರಗೆ ಬಂದರು. ಲಾಕಪ್‌ನಲ್ಲಿ ಕೆಳಗೆ ಬಿದ್ದ ಶಬ್ಧವನ್ನು ಕೇಳಿದ ಎರಡನೆ ಪೊಲೀಸ್ ಆತುರದಿಂದ ಲಾಕಪ್ ರೂಮ್ ಹತ್ತಿರಕ್ಕೆ ಬಂದನು. ಲಾಕಪ್ ತೆರೆದಿರುವುದು, ತನ್ನ ಸಹಪಾಟಿ ಪೊಲೀಸ್ ಕೆಳಗೆ ಬಿದ್ದಿರುವುದನ್ನು ನೋಡಿ ಆಶ್ಚರ್ಯಪಟ್ಟು, ಕೆಳಗೆ ಬಿದ್ದಿರುವ ಪೊಲೀಸ್‌ನ್ನು ಎಬ್ಬಿಸುವುದಕ್ಕೆ ಲಾಕಪ್ ಒಳಗೆ ಹೋಗಿದ್ದಾನೆ. ಕೂಡಲೇ ಲಾಕಪ್ ಬಾಗಿಲು ಮುಚ್ಚಿಕೊಂಡಿವೆ. ಬಾಗಿಲಿಗೆ ಬೀಗ ಹಾಕಲಾಯಿತು. ಅದೃಶ್ಯವಾಗಿರುವ ಗಿರಿಜನರು ಮಾಡುತ್ತಿರುವ ಆ ಕೆಲಸ ಎರಡನೆ ಪೊಲೀಸ್‌ಗೆ ಅರ್ಥವಾಗಲಿಲ್ಲ. ತಾನು ನೋಡುತ್ತಿದ್ದಂತೆ ಬಾಗಿಲು ಅವೇ ಮುಚ್ಚಿಕೊಳ್ಳುವುದು, ಬೀಗ ಹಾಕಿಕೊಳ್ಳುವುದನ್ನು ಗಮನಿಸಿದ ಎರಡನೆ ಪೊಲೀಸ್ ಭಯಪಟ್ಟು ಜೋರಾಗಿ ಕೂಗಿದನು. ಆದರೂ ಕೇಳಿಸಿಕೊಳ್ಳುವವರು ಯಾರೂ ಅಲ್ಲಿ ಇಲ್ಲ.

ಪೊಲೀಸ್ ಲಾಕಪ್‌ನಿಂದ ಹೊರ ಬಂದ ಎಂಟು ಜನ ಗಿರಿಜನರು ಇನ್ನು ಇಂತಹ ಪಟ್ಟಣಗಳೊಳಗೆ ಪ್ರವೇಶಿಸಬಾರದೆಂದುಕೊಂಡಿದ್ದಾರೆ. ಬದನಿಕಾ ಪ್ರಭಾವ ತಮ್ಮನ್ನು ಮೂರು ಗಂಟೆಗಳು ಮಾತ್ರವೇ ಅದೃಶ್ಯವಾಗಿ ಇಡುತ್ತದೆಂದು ತಿಳಿದ ಗಿರಿಜನರು, ಅಷ್ಟರೊಳಗೇ ಆ ಪಟ್ಟಣವನ್ನು ಬಿಟ್ಟು ಬರಬೇಕೆಂದು ಪ್ರಯಾಣ

ಸಾಗಿಸಿದರು. ಅವರು ಪಟ್ಟಣವನ್ನು ಬಿಟ್ಟು ಸ್ವಲ್ಪ ದೂರ ಬಂದ ನಂತರ ಬೆಳಗಾಯಿತು. ಬೆಳಗಾದ ನಂತರ ಪೋಲೀಸ್ ಸ್ಟೇಷನ್‌ನಲ್ಲಿ ನಡೆದ ವಿಚಿತ್ರ ಸಂಘಟನೆವೊಂದರ ವಿಷಯ ಪಟ್ಟಣವೆಲ್ಲಾ ಹಬ್ಬಿತು. ಆ ಜಿಲ್ಲಾ ಯಸ್.ಪಿ (S.P) ಅವರು ಆ ಸಂಘಟನೆಯನ್ನು ವಿಚಾರಣೆ ಮಾಡುವುದಕ್ಕೆ ಪ್ರತ್ಯೇಕ ತಂಡವನ್ನು ಏರ್ಪಾಟು ಮಾಡಿದ್ದಾನೆ. ಮಾಯಾಜಾಲವಾಗಿ ನಡೆದ ಲಾಕಪ್ ಸಂಘಟನೆ ಮೇಲೆ ಪೋಲೀಸ್ ಡಿಪಾರ್ಟ್‌ಮೆಂಟ್ ಸ್ಪಂದಿಸಿತು. ವಾರ್ತೆ ಡಿ.ಐ.ಜಿವರೆಗು ಹೋಯಿತು. "ಕಳ್ಳರ ಗುಂಪು ಮಾಯಾ ಜಾಲಮ್" ಎನ್ನುವ ಹೆಸರಿಂದ ವಾರ್ತೆ ಪತ್ರಿಕೆಗಳು ಆ ವಿಷಯವನ್ನು ಪ್ರಚಾರ ಮಾಡಿದವು. ಅಸಲು ಕಳ್ಳರ ಮುಠಾ ನಾಯಕನಾದ ತಾಟಿ ಮಾನು ಮುನೆಪ್ಪ, ಮುನೆಪ್ಪ ಗುಂಪಿನಲ್ಲಿನ ಸದಸ್ಯರು ಆ ವಾರ್ತೆಯನ್ನು ನೋಡಿ ಆಶ್ಚರ್ಯಪಟ್ಟರು. ತಾವು ಆ ದಿನ ಪಟ್ಟಣದೊಳಗೆ ಹೋಗದಿದ್ದರೂ, ತಮ್ಮ ಗುಂಪಿನ ಮೇಲೆಯೇ ವಾರ್ತೆ ಬರುವುದು ವಿಚಿತ್ರವಾಗಿ ತೋಚಿತು. ಅಸಲು ವಿಷಯ ಏನೋ, ಹೇಗೆ ನಡೆದಿದೆಯೋ ತಿಳಿದುಕೊಂಡು ಬರುವುದಕ್ಕೆ ಮುನೆಪ್ಪ ತಮ್ಮ ಮನುಷ್ಯನನ್ನು ಪಟ್ಟಣಕ್ಕೆ ಕಳುಹಿಸಿದನು.

***********************************

ರಾಘವ ಕಿವುಡು ಸ್ವಾಮಿ ಹತ್ತಿರ ನಡೆದ ಅನುಭವಗಳನ್ನು ಮೆಲುಕು ಹಾಕಿಕೊಳ್ಳುತ್ತಾ ಪ್ರಯಾಣಿಸಿ ಕೊನೆಗೆ ದೊಡ್ಡ ಆಶ್ರಮವನ್ನು ಸೇರಿದನು. ದೊಡ್ಡ ಸುಂದರವಾದ ಮಹಡಿಗಳು, ಹೂವಿನ ಗಿಡಗಳಿಂದ ಕೂಡಿಕೊಂಡ ವಿಶಾಲವಾದ ಬೃಂದಾವನಗಳು, ಸಾವಿರ ಜನರೊಂದಿಗೆ ಕೂಡಿಕೊಂಡ ಆ ಪ್ರಾಂತವೆಲ್ಲವೂ ಎಷ್ಟೋ ಸುಂದರವಾಗಿ, ನೋಡುವುದಕ್ಕೆ ಆನಂದವಾಗಿ ಕಲಿಯುಗ ವೈಕುಂಠದಂತೆ ಇದೆ. ಆ ಪ್ರಾಂತವನ್ನು ಅಲ್ಲಿ ಭಕ್ತಿ ವಾತಾವರಣವನ್ನು ನೋಡುತ್ತಲೇ ರಾಘವನಲ್ಲಿ ಸಹ ಭಕ್ತಿ ಭಾವ ಬಂದಿವೆ. ಇಲ್ಲಿರುವ ಸ್ವಾಮೀಜೀ ಯಾರೋ ದೊಡ್ಡವನೆನ್ನುವ ಭಾವನೆ ಆತನಲ್ಲಿ ಉಂಟಾಯಿತು. ಅಲ್ಲಿರುವ ವಾತಾವರಣವೇ ಆತನನ್ನು ಹಾಗೆ ಬದಲಾಯಿಸಿದೆ. ಕೂಡಲೇ ರಾಘವನಲ್ಲಿರುವ ಹೇತುಬದ್ಧತೆ, ಸತ್ಯಾನ್ವೇಷಣೆ ನೆನಪಾದವು. ಬುದ್ಧಿಯಿಂದ ಸತ್ಯವನ್ನು ತಿಳಿಯದೇ, ಯಾವುದಕ್ಕಾದರೂ ಹೇತುಬದ್ಧತೆ ಇಲ್ಲದೇ, ಒಂದು ನಿರ್ಣಯಕ್ಕೆ ಏಕ ಪಕ್ಷವಾಗಿ ಬರಬಾರದೆಂದು, ಹಾಗೆ ಒಂದು

ನಿರ್ಣಯಕ್ಕೆ ಬರುವುದು ಮೂಢನಂಬಿಕೆ ಯಾಗುತ್ತದೆನ್ನುವ ಯೊಚನೆ ರಾಘವನಿಗೆ ಬಂದಿತು. ರಾಘವ ಸತ್ಯಾನ್ವೇಷಿ ಆದ್ದರಿಂದ, ಪೂರ್ತಿ ಪರಿಶೋಧನೆ ನಡೆದ ನಂತರವೇ ಯಾವುದನ್ನಾದರೂ, ಯಾರನ್ನಾದರೂ ಸರಿಯಾದ ಪದ್ಧತಿಯಲ್ಲಿ ಲೆಕ್ಕಿಸಬಹುದೆಂದು ಅಂದುಕೊಂಡಿದ್ದಾನೆ. ಆಗ ಆ ಆಶ್ರಮಕ್ಕೆ ಅಧಿಪತಿಯಾದ ಸ್ವಾಮೀಜಿಯನ್ನು ಕುರಿತು ತಿಳಿದುಕೊಳ್ಳಬೇಕೆಂದು ಅಲ್ಲೇ ಇರುವ ಒಬ್ಬ ವೃದ್ಧನನ್ನು ಹೀಗೆ ಕೇಳಿದ್ದಾನೆ.

**ರಾಘವ** :– ತಾತಾ, ಇಲ್ಲಿ ಸ್ವಾಮಿ ದರ್ಶನ ನನಗೆ ಯಾವಾಗ ಸಿಗುತ್ತದೆ?

**ವೃದ್ಧನು** :– ಆರು ತಿಂಗಳಿಂದಿರುವ ನಮಗೇ ಸಿಗಲಿಲ್ಲ. ಅಷ್ಟು ಬೇಗನೇ ನಿನಗೆ ಹೇಗೆ ಸಿಗುತ್ತದೆ? ಆತನ ದರ್ಶನ ಅಷ್ಟು ಸುಲಭವಾಗಿ ಸಿಗುವುದಿಲ್ಲ. ಎಷ್ಟು ಕಾಲವಾದರೂ ಕಾದುಕೊಂಡಿರುವ ತಾಳ್ಮೆ ಬೇಕು. ಆಗ ನಿನ್ನ ಪುಣ್ಯವಿದ್ದಂತೆ ಸಿಗುತ್ತದೆ.

**ರಾಘವ** :– ಸ್ವಾಮಿ ಅವರ ಹೆಸರೇನು?

**ವೃದ್ಧನು** :– (ಆಶ್ಚರ್ಯವಾಗಿ ರಾಘವನ ಕಡೆ ನೋಡಿ) ಸ್ವಾಮಿ ಅವರ ಹೆಸರು ತಿಳಿಯದಾ? ಆತನ ಹೆಸರು ತಿಳಿಯದವರೇ ಇಲ್ಲವಲ್ಲ?

**ರಾಘವ** :– ನಿಜವಾಗಿ ನನಗೆ ತಿಳಿಯದು, ನಾನು ಈ ಪ್ರಾಂತಕ್ಕೆ ಹೊಸಬನು.

**ವೃದ್ಧನು** :– ಸ್ವಾಮಿ ಅವರ ಹೆಸರು ದಾದಾಬಾಬಾ. ಆತನು ದೊಡ್ಡ ಮಹಿಮೆ ಇರುವವರು. ನಮ್ಮ ದೇಶದಲ್ಲೇ ಅಲ್ಲದೇ, ವಿದೇಶಗಳಲ್ಲಿ ಸಹ ದಾದಾಬಾಬಾರವರಿಗೆ ಬಹಳ ಹೆಸರಿದೆ. ಇಲ್ಲಿರುವ ಭಕ್ತರಲ್ಲಿ ಬಹಳ ಜನ ವಿದೇಶೀಯರೇ ಇದ್ದಾರೆ. ಇಂದಿನ ಕಲಿಯುಗದಲ್ಲಿ ಈತನೇ ಪ್ರತ್ಯಕ್ಷ ದೈವ.

**ರಾಘವ** :– ಇಷ್ಟು ದೊಡ್ಡ ಸ್ವಾಮೀಜಿಯನ್ನು ಕುರಿತು ನಿಜವಾಗಿ ನನಗೆ ತಿಳಿದಿಲ್ಲ. ತಿಳಿದಿದ್ದರೇ ಆಗಲೇ ಬರುತ್ತಿದ್ದೆ. ಈಗೀಗ ದೈವಜ್ಞಾನವನ್ನು ತಿಳಿದುಕೊಳ್ಳಬೇಕೆನ್ನುವ ಆಸಕ್ತಿ ಹುಟ್ಟಿದೆ. ಆದ್ದರಿಂದ ಆಶ್ರಮಗಳನ್ನು ನೋಡಬೇಕೆಂದು, ಅಲ್ಲಿ ಜ್ಞಾನವನ್ನು ತಿಳುದುಕೊಳ್ಳಬೇಕೆಂದು ಆಸಕ್ತಿಯಿಂದ ತಿರುಗುತ್ತಾ ಇಲ್ಲಿಗೆ ಬಂದಿದ್ದೇನೆ. ದಾದಾಬಾಬಾರವರನ್ನು ನೋಡಬೇಕೆಂದು ಬಹಳ ಆಸಕ್ತಿಯಾಗಿ ಇದೆ.

**ವೃದ್ಧನು :–** ನಿಜವೇ ಹುಡುಗ, ನಾನು ಸಹ ಆತನ ದರ್ಶನಕ್ಕಾಗಿಯೇ ಕಾದಿದ್ದೇನೆ. ಬಾಬಾರವರು ವಿದೇಶೀ ಪರ್ಯಟನೆಯಲ್ಲಿ ಇದ್ದಾರೆ. ಆತನು ಬಂದ ನಂತರವೇ ದರ್ಶನ ಲಭಿಸಬಲ್ಲದು.

**ರಾಘವ :–** ಸ್ವಾಮಿರವರ ಚಿತ್ರಪಟವನ್ನಾದರೂ ನೋಡುತ್ತೇನೆ. ನಿಮ್ಮ ಹತ್ತಿರ ಇದ್ದರೇ ತೋರಿಸಿ.

(ಆಗ ಆ ವೃದ್ಧನು ಬಾಬಾರವರ ಚಿತ್ರಪಟವನ್ನು ತೋರಿಸುವುದಕ್ಕೆ ಬಹಳ ಕಾಲದಿಂದ ಅಲ್ಲೇ ಇರುವ ಮತ್ತೊಬ್ಬ ವೃದ್ಧನ ಹತ್ತಿರಕ್ಕೆ ಕರೆದುಕೊಂಡು ಹೋಗಿ, ರಾಘವನನ್ನು ಆ ವೃದ್ಧನಿಗೆ ಪರಿಚಯ ಮಾಡಿ ಬಾಬಾರವರ ಚಿತ್ರ ಪಟವನ್ನು ತೋರಿಸೆಂದು ಹೇಳಿದನು. ಅದಕ್ಕೆ ಎರಡನೆ ವೃದ್ಧನು ಸಂತೋಷಪಟ್ಟು ಪಕ್ಕದಲ್ಲೇ ಪೂಜೆಯಲ್ಲಿರುವ ದಾದಾಬಾಬಾರವರ ಚಿತ್ರ ಪಟವನ್ನು ತೋರಿಸಿದನು. ಬೊಕ್ಕತಲೆ ಇರುವ ಬಾಬಾರವರ ಚಿತ್ರವನ್ನು ರಾಘವ ಶ್ರದ್ಧೆಯಿಂದ ನೋಡಿದನು. ನಂತರ ರಾಘವ ಬಾಬಾ ರವರ ವಿಷಯವನ್ನು ಕುರಿತು ಎರಡನೆ ವೃದ್ಧನನ್ನು ಕೇಳಲಾರಂಭಿಸಿದನು.)

**ರಾಘವ:–** ನೀವು ಮೊಟ್ಟ ಮೊದಲು ಹೇಗೆ ಬಾಬಾರವರನ್ನು ಗುರುತಿಸಿ ಇಲ್ಲಿಗೆ ಬಂದಿದ್ದೀರ?

**ವೃದ್ಧನು :–** ಹತ್ತು ಸಂವತ್ಸರಗಳ ಕೆಳಗೆ ಒಂದು ಆಕ್ಸಿಡೆಂಟ್‌ನಲ್ಲಿ ನನ್ನ ಕಾಲು ಮುರಿದಿದೆ. ಆಗ ಆಸ್ಪತ್ರೆಯಲ್ಲಿ ಚಿಕಿತ್ಸೆಯ ಸಲುವಾಗಿ ಇದ್ದೆನು. ಅಲ್ಲೇ ನನ್ನ ಪಕ್ಕದ ಮಂಚದ ಮೇಲೆ ಒಬ್ಬ ತಲೆ ನೋವು ರೋಗಿ ಇದ್ದನು. ಆತನಿಗೆ ಎಷ್ಟೋ ವೈದ್ಯಗಳು ಮಾಡಿದರೂ ತಲೆನೋವು ಕಡಿಮೆ ಆಗಲಿಲ್ಲವಂತೆ. ಆದ್ದರಿಂದ ಆತನು ಆಸ್ಪತ್ರೆಯಲ್ಲಿ ಸೇರಿ ಒಂದು ತಿಂಗಳಿಂದ ಚಿಕಿತ್ಸೆ ಮಾಡಿಸಿಕೊಳ್ಳುತ್ತಿದ್ದಾನೆ. ಆದರೂ ಆತನು ತಲೆನೋವಿನಿಂದ ಹಾಗೇ ಬಾಧೆಪಡುತ್ತಿದ್ದನು. ಒಂದು ದಿನ ಆತನ ಬಂಧು ಒಬ್ಬರು ಬಂದು ದಾದಾಬಾಬಾರವರ ವಿಭೂತಿಯನ್ನು ತಂದು ಕೊಟ್ಟಿದ್ದಾನೆ. ಆ ವಿಭೂತಿಯನ್ನು ಆ ರೋಗಿ ತಲೆಗೆ ಹಚ್ಚಿಕೊಂಡು ಮಲಗಿದ್ದಾನೆ. ಬೆಳಗ್ಗೆ ಏಳುವ ಸಮಯಕ್ಕೆ ಆತನ ನೋವು ಇಲ್ಲದಂತೆ ಹೋಗಿದೆ. ಆ ವಿಷಯ ನನಗೆ ತಿಳಿದು ಆಶ್ಚರ್ಯಪಟ್ಟೆನು. ಆ ಸಂಘಟನೆಯಿಂದ ಬಾಬಾರವರು ಶಕ್ತಿವಂತನೆಂದು

ನನಗರ್ಥವಾಯಿತು. ಆಗ ಪಕ್ಕದಲ್ಲಿರುವ ಬಾಬಾ ಭಕ್ತನಿಂದ ವಿಭೂತಿಯನ್ನು ಸ್ವಲ್ಪ ಪಡೆದುಕೊಂಡು ನನ್ನ ಕಾಲಿಗೆ ಸಹ ಸ್ವಲ್ಪ ಹಚ್ಚಿ ಮನಸ್ಸಿನಲ್ಲೇ ಬಾಬಾರವರನ್ನು ಬೇಡಿಕೊಂಡೆನು. ನಾನು ಹಾಗೆ ಮಾಡಿದ ಸಮಯದಿಂದಲೇ ನನ್ನ ಕಾಲಿನ ನೋವಿನಲ್ಲಿ ವ್ಯತ್ಯಾಸ ಕಾಣಿಸತೊಡಗಿತು. ಅಲ್ಲಿಯವರೆಗು ನಡೆಯಲಾರದ ನಾನು ಮೂರು ದಿನಗಳಿಗೇ ಎದ್ದು ಕೋಲು ಸಹಾಯದಿಂದ ನಡೆದಾಡಿದೆನು. ಕಾಲಿನ ಮೂಳೆಗೆ ಸ್ಟೀಲ್‌ರಾಡ್ ಹಾಕಬೇಕೆಂದ ಡಾಕ್ಟರ್‌ಗಳು ನಾನು ನಡೆಯುವುದನ್ನು ನೋಡಿ ಆಶ್ಚರ್ಯಪಟ್ಟರು. ನನ್ನ ಕಾಲನ್ನು ಪರೀಕ್ಷಿಸಿದ ಡಾಕ್ಟರ್‌ಗಳು ಸ್ಟೀಲ್‌ರಾಡ್ ಅವಶ್ಯವಿಲ್ಲ ಎಂದರು. ಆ ವಿಧವಾಗಿ ನನ್ನ ಕಾಲು ಮೂಳೆ ಬಾಬಾರವರ ವಿಭೂತಿಯಿಂದಲೇ ಸುಲಭವಾಗಿ ಅಂಟಿಕೊಳ್ಳುವುದು ನಿಜವಾಗಿ ಬಾಬಾರವರ ಮಹಿಮೆಯೆಂದು ನನಗರ್ಥವಾಯಿತು. ಅಂದಿನಿಂದ ಇಲ್ಲಿಗೆ ಬಂದು ಬಾಬಾರವರ ಸನ್ನಿಧಿಯಲ್ಲಿ ಇರುತ್ತಿದ್ದೇನೆ. ಸಂವತ್ಸರಕ್ಕೆ ಮೂರು ತಿಂಗಳು ಇಲ್ಲೇ ಕಳೆಯುತ್ತೇನೆ.

**ರಾಘವ :–** ನೀವು ಇಲ್ಲಿಗೆ ಬಂದಾಗಲೆಲ್ಲಾ ಮೂರು ತಿಂಗಳ ಕಾಲವಿರುತ್ತಿದ್ದೀರಲ್ಲ! ನಿಮಗೆ ಆಹಾರ ಇಲ್ಲಿ ಉಚಿತವಾಗಿ ಸಿಗುತ್ತದಾ, ಅಥವಾ ನೀವು ಸ್ವತಃವಾಗಿ ಮಾಡಿಕೊಳ್ಳುತ್ತೀರಾ?

**ವೃದ್ಧನು :–** ಇಲ್ಲ ತಂದೆ! ಯಾರ ಖರ್ಚು ಅವರು ಇಟ್ಟುಕೊಂಡು ಇರಬೇಕಾಗಿರುವುದೇ. ಇಲ್ಲಿಗೆ ಬರುವವರು ಯಾರಾದರೂ ಸೇವಾ ಭಾವನೆಯಿಂದಲೇ ಬರುತ್ತಿರುತ್ತಾರೆ. ಯಾರ ಖರ್ಚುನಿಂದ ಅವರಿದ್ದು ಹೋಗುತ್ತಿರುತ್ತಾರೆ.

**ರಾಘವ :–** ದಾದಾ ಬಾಬಾರವರು ಎಷ್ಟೋ ದೊಡ್ಡವರಾಗಿ ಎಷ್ಟೋ ಭಕ್ತರನ್ನು ಹೊಂದಿದ್ದಾನಲ್ಲ! ಇಷ್ಟು ದೊಡ್ಡ ವ್ಯಕ್ತಿ ನಮ್ಮ ದೇಶದಲ್ಲಿ ಈಗಾಗಲೀ, ಗತದಲ್ಲಾಗಲೀ ಯಾರೂ ಇಲ್ಲವೆಂದುಕೊಳ್ಳುತ್ತೇನೆ.

**ವೃದ್ಧನು :–** ಎಂದಿಗೂ ಬಾಬಾರವರಿಗೆ ಸಮಾನರಿಲ್ಲ. ಒಂದು ವಿಷಯವನ್ನು ಹೇಳಬೇಕೆಂದುಕೊಂಡಿದ್ದೇನೆ. ಗತ ಜನ್ಮ ಕಾಲದಲ್ಲೂ ಬಾಬಾರವರೇ ದೊಡ್ಡ ವ್ಯಕ್ತಿಯಾಗಿ ಇರುತ್ತಿದ್ದರು. ಆ ವಿಷಯ ಎಲ್ಲರಿಗೂ ತಿಳಿಯದೆ ಈತನಗಿಂತ ಆತನೇ ದೊಡ್ಡವನು ಎಂದು ಕೆಲವರೆನ್ನುತ್ತಿದ್ದಾರೆ.

**ರಾಘವ :–** ಏನು ತಾತ! ಈ ಬಾಬಾರವರ ಮೊದಲ ಜನ್ಮ ಸಹ ನಿಮಗೆ ತಿಳಿದಿದೆಯಾ! ಹೇಗೆ ತಿಳಿದಿದೆ? ಬಾಬಾರವರು ಗತ ಜನ್ಮದಲ್ಲಿ ಹೇಗಿರುತ್ತಿದ್ದರು?

(ಕೂಡಲೇ ಆ ವೃದ್ಧನು ತನ್ನ ಸೂಟ್‌ಕೇಸ್‌ನಲ್ಲಿನ ಒಂದು ಫೋಟೋವನ್ನು ತೆಗೆದು ತೋರಿಸಿ ಇದೇ ಗತ ಜನ್ಮದಲ್ಲಿನ ಬಾಬಾರವರ ಫೋಟೊಯೆಂದು ಹೇಳಿದ್ದಾನೆ. ರಾಘವ ಆ ಫೋಟೊವನ್ನು ಆಶ್ಚರ್ಯವಾಗಿ ನೋಡಿದ್ದಾನೆ. ಬಾಬಾರವರ ಈ ಜನ್ಮಕ್ಕು ಗತಜನ್ಮಕ್ಕು ಯಾವ ಹೋಲಿಕೆಗಳು ಇಲ್ಲದಂತೆ ಗ್ರಹಿಸಿದನು. ಆದರೆ ಎರಡು ಫೋಟೊಗಳಲ್ಲಿಯೂ ಒಂದೇ ಒಂದು ಗುರುತು ಕಾಣಿಸಿತು. ಅಲ್ಲಿವರೆಗು ಯಾರೂ ಗುರುತಿಸದ ಒಂದು ಗುರುತನ್ನು ರಾಘವ ಗ್ರಹಿಸಿ ಆ ವಿಷಯವನ್ನು ಹೊರಗೆ ಹೇಳದೇ ತನ್ನ ಮನಸ್ಸಿನಲ್ಲೇ ಇಟ್ಟುಕೊಂಡಿದ್ದಾನೆ. ರಾಘವ ಗುರುತಿಸಿದ ಒಂದು ಗುರುತು ಗತ ಜನ್ಮದಲ್ಲೂ, ಈ ಜನ್ಮದಲ್ಲೂ ಇರುವ ಬಾಬಾರವರು ಒಬ್ಬರೇ ಎನ್ನುವ ಬಲವನ್ನು ಕೈಗೂಡಿಸುತ್ತಿದೆ. ರಾಘವ ಕಂಡುಕೊಂಡ ಎರಡು ಫೋಟೊಗಳಲ್ಲಿನ ಗುರುತು ಯಾವುದೋ ಆ ವೃದ್ಧರಿಗೂ ಸಹ ತಿಳಿದಿಲ್ಲ.)

**ರಾಘವ :–** ತಾತಾ! ಗತ ಜನ್ಮದಲ್ಲಿ ಬಾಬಾರವರ ಹೆಸರೇನು?

**ವೃದ್ಧನು :–** ದೇಸಾಯಿ ಬಾಬಾ ಎನ್ನುವ ನಾಮಧೇಯದಿಂದ ಗತಜನ್ಮದಲ್ಲಿ ಇರುತ್ತಿದ್ದರು. ಆ ಜನ್ಮದಲ್ಲಿ ಎಷ್ಟೋ ಮಹಿಮೆಗಳನ್ನು ತೋರಿಸಿದ ದೇಸಾಯಿ ಬಾಬಾರವರು, ಈ ಜನ್ಮದಲ್ಲಿ ದಾದಾಬಾಬಾನಾಗಿ ಅವತರಿಸಿದ್ದಾರೆ. ಗತ ಜನ್ಮ ವಿಷಯವೂ, ಆಗ ಎಲ್ಲಿರುವುದೂ, ಯಾವ ಹೆಸರಿಂದ ಇರುವುದೂ ದಾದಾಬಾಬಾರವರೇ ಸ್ವತಃ ಹೇಳಿದ್ದಾರೆ. ಬಾಬಾರವರು ಸ್ವತಃವಾಗಿ ಹೇಳಿರುವುದಕ್ಕೆ ಹೋದ ಜನ್ಮ ವಿಷಯ ತಿಳಿಯಿತು. ಇಲ್ಲದಿದ್ದರೆ ತಿಳಿಯುತ್ತಿರಲಿಲ್ಲ. ಗತ ಜನ್ಮದಲ್ಲೇ ದೇಸಾಯಿ ಬಾಬಾರವರಿಗೆ ಎಷ್ಟೋ ಜನ ಭಕ್ತರಿರುತ್ತಿದ್ದರು. ಆದ್ದರಿಂದ ಈ ಜನ್ಮದಲ್ಲಿ ದಾದಾಬಾಬಾರವರ ರೂಪದಲ್ಲಿರುವುದು ದೇಸಾಯಿ ಬಾಬಾ ಎಂದು ತಿಳಿಯುವುದರಿಂದ, ಆತನ ಭಕ್ತರೆಲ್ಲರೂ ಒಂದೇ ಸಲ ಈತನ ಭಕ್ತರಾಗಿದ್ದಾರೆ. ದಾದಾಬಾಬಾರವರು ಸಹ ಹೋದ ಜನ್ಮದಲ್ಲಿ ಪವಾಡಗಳು ತೋರಿಸಿದಂತೆ, ಈ

ಜನ್ಮದಲ್ಲಿಯೂ ಸಹ ತೋರಿಸುವುದರಿಂದ, ದಾದಾ ಬಾಬಾರವರಿಗೆ ಕೋಟ್ಯಾದಿ ಜನ ಭಕ್ತರಾಗಿದ್ದಾರೆ.

(ರಾಘವ ವೃದ್ಧನೊಂದಿಗೆ ಮಾತನಾಡುತ್ತಿರುವಾಗಲೇ ಆಶ್ರಮಪ್ರಾಂತದಲ್ಲಿ ಭಕ್ತರು ಆತುರದಿಂದ ಆಕಡೆ, ಈಕಡೆ ತಿರುಗಾಡುವುದು ಹೂವಿನ ತೋರಣಗಳು ಕಟ್ಟುವುದನ್ನು ರಾಘವ ಗಮನಿಸಿದ್ದಾನೆ. ತಾನು ನೋಡಿದ ವಿಷಯವನ್ನು ಆ ವೃದ್ಧನಿಗೆ ತಿಳಿಸಿ ಏಕೆ ತೋರಣಗಳು ಕಟ್ಟುತ್ತಿದ್ದಾರೆಂದು ಕೇಳಿದ್ದಾನೆ. ಕೂಡಲೇ ಆ ವೃದ್ಧನು ಸಹ ಅಲ್ಲಿ ನಡೆಯುತ್ತಿರುವ ತರಾತುರಿಯನ್ನು ನೋಡಿ ಬಾಬಾರವರು ಬರುತ್ತಿದ್ದಂತಿದೆ. ಅದಕ್ಕೇ ಈ ಅಲಂಕರಣೆಗಳು ಮಾಡುತ್ತಿದ್ದಾರೆಂದು ಸಂತೋಷವನ್ನು ವ್ಯಕ್ತಪಡಿಸುತ್ತಾ ಹೇಳಿದ್ದಾನೆ. ತಾನು ಬಂದಿರುವ ದಿನವೇ ಬಾಬಾರವರು ಬರುವುದು ರಾಘವನಿಗೆ ಸಹ ಆನಂದವಾಯಿತು. ಎಲ್ಲರೂ ಬಾಬಾರವರು ಬರುವುದನ್ನು ಕಾಯುತ್ತಿದ್ದರು. ಕೆಲವು ಗಂಟೆಗಳ ನಂತರ ಕಾರು ಹಿಂದೆ ಕಾರು ಬರುತ್ತಾ ಕಾಣಿಸಿವೆ. ಆಶ್ರಮ ಪ್ರಾಂತದೊಳಗೆ ಎಷ್ಟೋ ಕಾರುಗಳು ಬಂದಿವೆ. ಅವುಗಳ ಮಧ್ಯದಲ್ಲಿ ಖರೀದಾದ ಕಾರಿನಲ್ಲಿ ಬಾಬಾರವರು ಬಂದಿದ್ದಾರೆ. ದಾದಾಬಾಬಾರವರು ಕಾರುನಿಂದ ಕಾಲು ಕೆಳಗಿಡುತ್ತಲೇ ಭಕ್ತರಿಂದ ಹೂವಿನ ಮಳೆ ಸುರಿಯಿತು. ತಾನು ಬಂದಿರುವ ದಿನವೇ ಬಾಬಾರವರ ದರ್ಶನ ಸಿಕ್ಕಿರುವುದಕ್ಕೆ ರಾಘವ ಸಂತೋಷ ಪಟ್ಟನು. ರಾಘವ ಐದು ದಿನಗಳು ಅಲ್ಲೇ ಕಳೆದಿದ್ದಾನೆ. ಪ್ರತಿ ದಿನ ಬೆಳಗ್ಗೆ, ಸಾಯಂಕಾಲ ಬಾಬಾರವರು ಅಲ್ಲಿರುವ ಪ್ರಜೆಗಳಿಗೆ ದರ್ಶನಕೊಡುತ್ತಿದ್ದನು. ದರ್ಶನ ಸಮಯದಲ್ಲಿ ತನ್ನ ಖಾಲಿ ಕೈಯಿಂದ ವಿಭೂತಿಯನ್ನು ಸೃಷ್ಟಿಸಿ ಕೆಲವರಿಗೆ ಕೊಡುತ್ತಿದ್ದನು. ಒಬ್ಬ ಭಕ್ತನಿಗೆ ಚಿನ್ನದ ಉಂಗರವನ್ನು ಸಹ ತನ್ನ ಖಾಲಿ ಕೈಯಿಂದ ತೆಗೆದು ಕೊಟ್ಟಿದ್ದಾನೆ. ಹಾಗೆ ಇದ್ದಕ್ಕಿದ್ದಂತೆ ಬಂಗಾರದ ವಸ್ತುಗಳನ್ನೂ, ವಿಭೂತಿಯನ್ನೂ ಕೊಡುವುದು ರಾಘವನು ಸ್ವತಃವಾಗಿ ಹತ್ತಿರದಿಂದ ನೋಡಿದ್ದಾನೆ. ಹಾಗೆ ಕೊಡುವುದು ಬಹಳ ದೊಡ್ಡ ಮಹಿಮೆಯೆಂದು ರಾಘವ ತಿಳಿದುಕೊಂಡಿದ್ದಾನೆ. ದಾದಾಬಾಬಾರವರ ಹಿರಿಮೆಯನ್ನು ನೋಡಿದ ರಾಘವ ಸಂತೃಪ್ತಿಯಾಗಿ ಅಲ್ಲಿಂದ ಹೊರಟು ಪ್ರಯಾಣವನ್ನು ಸಾಗಿಸಿದನು.)

***********************************

(ಎಂಟು ಜನ ಗಿರಿಜನರ ಗುಂಪಿನೊಳಗೆ ಯೋಗಾ, ಮೇಘಾ, ಚಕ್ರಿ ಎನ್ನುವ ಮೂವರು ಬುದ್ಧಿವಂತರಾದ ಯುವಕರಿದ್ದರು. ಅವರು ಪಟ್ಟಣದಲ್ಲಿ ನಡೆದ ಸಂಘಟನೆಯನ್ನು ಪುನಃ ನಡೆಯದಂತೆ ಜಾಗ್ರತೆಪಟ್ಟು, ಅವರ ಪ್ರಯಾಣ ದಾರಿಗಳ ಹಿಂದೆ ಅಲ್ಲದೆ ದಾರಿಗೆ ಸ್ವಲ್ಪ ದೂರವಾಗಿ ನಡೆಯುತ್ತಾ, ದಾರಿಯನ್ನು ಆಧಾರ ಮಾಡಿಕೊಂಡು ಪ್ರಯಾಣ ಸಾಗಿಸುತ್ತಿದ್ದರು. ಹಾಗೆ ಅವರು ಒಂದು ರೈಲು ಮಾರ್ಗವನ್ನು ಅನುಸರಿಸುತ್ತಾ, ಅದಕ್ಕೆ ಸುಮಾರು 200 ಅಡಿಗಳ ದೂರದಲ್ಲಿ ನಡೆಯುತ್ತಾ ಹೋಗುತ್ತಿದ್ದರು. ಅವರು ನೋಡುತ್ತಿದ್ದಷ್ಟು ದೂರದಲ್ಲಿ ಪ್ರಯಾಣಿಕರ ರೈಲುಬಂಡಿ ವೇಗವಾಗಿ ಬರುತ್ತಿತ್ತು. ಗಿರಿಜನರು ಗತದಲ್ಲಿ ಎಂದೂ ರೈಲುಬಂಡಿಯನ್ನು ನೋಡಲಿಲ್ಲ. ಆದ್ದರಿಂದ ಬರುತ್ತಿರುವ ರೈಲನ್ನು ನಿಂತು ವಿಚಿತ್ರವಾಗಿ ನೋಡುತ್ತಿದ್ದಾರೆ. ಅವರು ನಿಂತಿರುವ ಸ್ಥಳದಲ್ಲಿ ಸಾಲಾಗಿ ಗಿಡಗಳಿರುವುದರಿಂದ ಅವರು ಯಾರಿಗೂ ಕಾಣಿಸದಂತಿದ್ದರು. ಆದರೆ ಅವರಿಗೆ ರೈಲು ಮರಗಳ ಸಂದಿಗಳಲ್ಲಿ ಚೆನ್ನಾಗಿ ಕಾಣಿಸುತ್ತಿತ್ತು. ಗಿರಿಜನರು ನೋಡುತ್ತಿರುವ ರೈಲು ವೇಗವಾಗಿ ಅವರಿರುವ ಜಾಗವನ್ನು ದಾಟಿಹೋಯಿತು. ಹಾಗೆ ರೈಲು ಬಂಡಿ ಹೋಗುವಾಗ ಒಂದು ಕಂಪಾರ್ಟ್‌ಮೆಂಟ್‌ನಿಂದ ರೈಲು ಕಟ್ಟೆ ಪಕ್ಕದಲ್ಲಿರುವ ಮರಗಳ ಪೊದೆಗಳಲ್ಲಿ ಯಾವುದೋ ಪೆಟ್ಟಿಗೆಯಂತಹದ್ದು ಬಿದ್ದಂತೆ ಗಿರಿಜನರು ನೋಡಿದರು. ಯೋಗಾ, ಮೇಘಾ ಅದನ್ನು ಗಮನಿಸಿದವರಾಗಿ ಉಳಿದವರಿಗೂ ಸಹ ಆ ವಿಷಯವನ್ನು ತಿಳಿಸಿದ್ದಾರೆ. ರೈಲು ಎರಡು ನಿಮಿಷಗಳಲ್ಲೇ ಕಣ್ಣಮುಂದೆ ಕಾಣಿಸದಂತೆ ಹೋಯಿತು. ರೈಲು ಹೋದ ನಂತರ ಗಿರಿಜನರು ಎಲ್ಲರೂ ಪೆಟ್ಟಿಗೆ ಬಿದ್ದ ಮರಗಳ ಹತ್ತಿರಕ್ಕೆ ಹೋಗಿ ಹುಡುಕಿದರು. ಅವರಲ್ಲಿ ಚಕ್ರೀಗೆ ರೈಲಿನಿಂದ ಕೆಳಗೆ ಬಿದ್ದ ಸೂಟ್‌ಕೇಸ್ ಕಾಣಿಸಿತು. ಕೂಡಲೇ ಅದನ್ನು ತೆಗೆದುಕೊಂಡು ಎಲ್ಲರೂ ಕಾಲುದಾರಿಯೊಳಗೆ ಸೇರಿದರು. ಆಗ ಮಧ್ಯಾಹ್ನ ಎರಡು ಗಂಟೆಗಳಾಗುವುದರಿಂದ ಹಸಿದುಕೊಂಡವರಾಗಿ, ಅವರ ಹತ್ತಿರವಿರುವ ತಿಂಡಿಯನ್ನು ತಿನ್ನುವುದಕ್ಕೆ ಅಲ್ಲಿಗೆ ಸಮೀಪದಲ್ಲಿರುವ ನಿಂಬೆ ತೋಟದೊಳಗಿನ ಬಾವಿ ಹತ್ತಿರಕ್ಕೆ ಸೇರಿದರು. ತಮ್ಮ ಹತ್ತಿರವಿರುವ ತಿಂಡಿ ತಿಂದ ನಂತರ ನಿಂಬೆ ಗಿಡಗಳ ಕೆಳಗೆ ಕುಳಿತುಕೊಂಡು ವಿಶ್ರಾಂತಿ ತೆಗೆದುಕೊಳ್ಳಬೇಕೆಂದುಕೊಂಡರು. ನಿಂಬೆ ಗಿಡಗಳ ಕೆಳಗೆ ಸ್ವಲ್ಪ ಮಾತ್ರ

ನೆರಳಿರುವುದರಿಂದ, ಒಂದೊಂದು ಗಿಡದ ಕೆಳಗೆ ಒಬ್ಬೊಬ್ಬರು ಕುಳಿತುಕೊಂಡು, ವಿಶ್ರಾಂತಿ ತೆಗೆದುಕೊಳ್ಳುತ್ತಾ ತಮಗೆ ಸಿಕ್ಕ ಪೆಟ್ಟಿಗೆಯಲ್ಲಿ ಏನಿದೆಯೋ ಎಂದು ಯೋಚಿಸುತ್ತಾ ಇದ್ದರು. ಅಷ್ಟರಲ್ಲಿ ದೂರದಲ್ಲಿ ಎರಡು ಸೈಕಲ್ ಮೋಟಾರ್‌ಗಳ ಶಬ್ದ ಕೇಳಿಸಿತು. ಪಟ್ಟಣದಲ್ಲಿ ನಡೆದ ಸಂಘಟನೆಯಿಂದ ಜಾಗ್ರತೆಯಾಗಿರುವ ಯೋಗಾ ಗಿಡಗಳ ಮರೆಯಿಂದ ನೋಡಿದನು. ಕಾಲ್ದಾರಿಯಲ್ಲಿ ಬರುತ್ತಾ ಮೋಟರ್ ಸೈಕಲ್ ಎರಡೂ, ಸೂಟ್‌ಕೇಸ್ ಬಿದ್ದಿರುವ ಕಡೆಗೆ ಹತ್ತಿರವಾಗಿ ನಿಂತವು. ಅದರಲ್ಲಿಂದ ಇಳಿದ ಇಬ್ಬರು ವ್ಯಕ್ತಿಗಳು ರೈಲು ಕಟ್ಟೆ ಪಕ್ಕಕ್ಕೆ ಹೋಗಿ ಸೂಟ್‌ಕೇಸ್ ಬಿದ್ದಿರುವ ಜಾಗದಲ್ಲಿ ಹುಡುಕಿದರು. ಅವರು ಹಾಗೆ ಹುಡುಕುವುದನ್ನು ಗಿರಿಜನರೆಲ್ಲರೂ ಪಕ್ಕದಲ್ಲೇ ಇರುವ ನಿಂಬೆ ತೋಟದಲ್ಲಿಂದ ಗಮನಿಸುತ್ತಿದ್ದರು. ಹುಡುಕಿ ಬೇಸರಗೊಂಡ ಇಬ್ಬರು ವ್ಯಕ್ತಿಗಳು ಅವರಿಗೆ ಬೇಕಾದ ಸೂಟ್‌ಕೇಸ್ ಸಿಗಲಿಲ್ಲವೆಂದು, ಅದನ್ನು ಯಾರೋ ಕದ್ದಿದ್ದಾರೆನ್ನುವ ನಿರ್ಣಯಕ್ಕೆ ಬಂದಿದ್ದಾರೆ. ಅಲ್ಲಿಂದ ಇಬ್ಬರೂ ದಾರಿಯೊಳಗೆ ಬಂದು ಹೀಗೆ ಮಾಡನಾಡತೊಡಗಿದರು.)

**ಒಬ್ಬನು** :– ಅರೇ ವೆಂಕೂ! ಸೂಟ್‌ಕೇಸನ್ನು ಇಲ್ಲೇ ಹಾಕಿದ್ದೇನೆ ಕಣೋ, ಅದು ಹೇಗೆ ಮಾಯವಾಗಿದೆಯೋ ಅರ್ಥವಾಗಲಿಲ್ಲ. ನಮ್ಮ ನಾಯಕನಿಗೆ ಏನೆಂದು ಹೇಳಬೇಕು?

**ವೆಂಕು** :– ನೂಕಾ! ನೀನು ಭಯಪಡಬೇಡ, ನಮ್ಮ ನಾಯಕನಿಗೆ ಇರುವ ವಿಷಯವನ್ನು ಹೇಳಬಹುದು. ಆದರೆ ಸೂಟ್‌ಕೇಸ್‌ನಲ್ಲಿ ಲಕ್ಷ ಬೆಲೆಬಾಳುವ ವಜ್ರಗಳಿವೆ ಕಣೋ! ಅವು ನಾವು ನಷ್ಟಹೋದಂತೇ ಅಲ್ಲವೆ!

**ನೂಕಾ** :– ನಮ್ಮ ನಾಯಕನು ನಮ್ಮನ್ನು ಅನುಮಾನಿಸಿದರೇ, ನಮ್ಮ ಪ್ರಾಣಕ್ಕೇ ಅಪಾಯವಲ್ಲವೆ!

**ವೆಂಕು** :– ನಿನಗೆ ಅಂತಹ ಭಯ ಏನೂ ಬೇಡ. ನಿನ್ನೊಂದಿಗೆ ನಾನೂ ಇದ್ದೇನಲ್ಲ! ನಾಯಕನು ನನಗೆ ಸ್ವತಃ ಅಣ್ಣನೇ ಆದ್ದರಿಂದ ಇರುವ ವಿಷಯವೆಲ್ಲಾ ನಾನು ನಮ್ಮ ಅಣ್ಣನೊಂದಿಗೆ ಹೇಳುತ್ತೇನೆ. ಆದರೇ ನಾನು ಅರ್ಧಗಂಟೆ ಕೆಳಗೇ ಸೂಟ್‌ಕೇಸನ್ನು ರೈಲಿನಿಂದ ಕೆಳಗೆ ಹಾಕಿದ್ದೇನೆ. ಆಗ ಇಲ್ಲಿ ಯಾರೂ ಇಲ್ಲ.

ನಂತರ ಯಾರಾದರೂ ಬಂದು ತೆಗೆದುಕೊಂಡಿದ್ದರೇ, ಅವರು ಬಹಳ ದೂರ ಹೋಗಿರುವುದಿಲ್ಲ. ಆದ್ದರಿಂದ ತಕ್ಷಣವೇ ನಾವು ಹುಡುಕುವುದು ಒಳ್ಳೆಯದು.

(ವೆಂಕೂ, ನೂಕಾ ಇಬ್ಬರೂ ಮಾತನಾಡುವ ಮಾತುಗಳೆಲ್ಲವುಗಳನ್ನು ಗಿರಿಜನರು ಕೇಳಿದ್ದಾರೆ. ತಮ್ಮ ಹತ್ತಿರವಿರುವ ಸೂಟ್‌ಕೇಸ್‌ನಲ್ಲಿ ವಜ್ರಗಳಿವೆಯೆಂದು ತಿಳಿದುಕೊಂಡ ಗಿರಿಜನರಿಗೆ ಆಶ್ಚರ್ಯವೆನಿಸಿತು. ಅಷ್ಟರಲ್ಲಿ ಸೈಕಲ್ ಮೋಟಾರ್‌ಗಳ ಮೇಲೆ ಹೊರಟುಹೋಗುವ ವೆಂಕು ದೃಷ್ಠಿ ನಿಂಬೆ ತೋಟದ ಮೇಲೆ ಬಿತ್ತು. ಈ ತೋಟದಲ್ಲಿ ಯಾರಾದರೂ ತೋಟದವರಿರಬಹುದು. ಒಂದು ವೇಳೆ ಅವರು ರೈಲಿನಿಂದ ಬಿದ್ದ ಸೂಟ್‌ಕೇಸನ್ನು ಗಮನಿಸಿ ಅವರು ತೆಗೆದಿರಬಹುದು. ಯಾವುದಕ್ಕೂ ಒಂದು ಸಲ ತೋಟದೊಳಗೆ ಹೋಗಿ ನೋಡಿ ಬರೋಣ ಎಂದು ವೆಂಕು, ನೂಕಾ ನಿರ್ಣಯಿಸಿಕೊಂಡು ಇಬ್ಬರೂ ತೋಟದ ಕಡೆಗೆ ಬಂದಿದ್ದಾರೆ.)

***********************************

(ತಾಳೆಮರ ಮುನೆಪ್ಪ ಕಳ್ಳರ ಗುಂಪಿನನಾಯಕನು. ಮುನೆಪ್ಪ ತಮಗೆ ಸಮಯಕ್ಕೆ ಸೇರಬೇಕಾದ ವಜ್ರಗಳು ಸೇರದಂತಿರುವುದಕ್ಕೂ, ತಮ್ಮ ಮನುಷ್ಯರೂ ಸಹ ಬಾರದಂತಿರುವುದಕ್ಕೂ ಯೋಚಿಸುತ್ತಿದ್ದನು. ಒಂದುವೇಳೆ ಪೊಲೀಸರ ಕಾಟ ತಮ್ಮವರಿಗೆ ಎದುರಾಗಿದೆಯೋನೋ ಎಂದು ತಿಳಿದು, ತನ್ನ ಗುಂಪಿನಲ್ಲಿನ ಜಾನ್ ಎನ್ನುವವನನ್ನು ಕರೆದು ಹೀಗೆ ಹೇಳಿದ್ದಾನೆ.

**ಮುನೆಪ್ಪ :–** ನಮ್ಮವರು ಇಷ್ಟೊತ್ತಿಗೆ ವಜ್ರಗಳಿಂದ ಬರಬೇಕಿತ್ತು, ಆದರೆ ಇಲ್ಲಿಯವರೆಗು ಬರಲಿಲ್ಲ. ಅವರಿಗೇನಾದರೂ ಆಪತ್ತಾಗಲೀ, ಪ್ರಮಾದವಾಗಲೀ ನಡೆದಿರಬಹುದು. ಮುಖ್ಯವಾದ ವಿಷಯವಾದ್ದರಿಂದ ನನ್ನ ತಮ್ಮನು ಸಹ ಹೋಗಿದ್ದಾನೆ. ನೀನು ಹೋಗಿ ಈ ವಿಷಯವೆಲ್ಲವನ್ನು ಪೂರ್ತಿಯಾಗಿ ತಿಳಿದುಕೊಂಡು ಬಾ.

**ಜಾನ್ :–** ಹಾಗೇ ಬಾಸ್, ಒಂದು ವೇಳೆ ನಮ್ಮವರು ಪೊಲೀಸರಿಗೆ ಸಿಕ್ಕಿದ್ದರೆ ನಾನೇನು ಮಾಡಬೇಕು?

**ಮುನೆಪ್ಪ :–** ನಮ್ಮವರು ಸುಲಭವಾಗಿ ಸಿಗುವುದಿಲ್ಲ. ಒಂದುವೇಳೆ ಅವರು ಸಿಕ್ಕರೂ ನಮ್ಮವರ ಹತ್ತಿರವಿರುವ ವಜ್ರಗಳನ್ನು ಪೊಲೀಸರು ಗಮನಿಸಲಾರರು. ನಮ್ಮವರು ಪೊಲೀಸ್ ಕಷ್ಟಡಿಯಲ್ಲಿ ಇದ್ದರೆ ನೀನು ಅವರನ್ನು ಭೇಟಿಯಾಗಿ, ನಮ್ಮವರು ಸಿಕ್ಕಿಬಿದ್ದು ವಜ್ರಗಳು ಸಿಗದಿದ್ದರೆ ಬಲ ಭುಜವನ್ನು ಕೆರೆದುಕೊಳ್ಳುತ್ತಾರೆ. ಒಂದುವೇಳೆ ವಜ್ರಗಳೊಂದಿಗೆ ಸಹ ಸಿಕ್ಕಿದ್ದರೆ ಎಡ ಭುಜವನ್ನು ಕೆರೆದುಕೊಳ್ಳುತ್ತಾರೆ. ನೀನು ಕೂಡಲೇ ಬಂದು ಆ ವಿಷಯವನ್ನು ತಿಳಿಸು.

**ಜಾನ್ :–** ಬಾಸ್! ನಮ್ಮವರು ಪೊಲೀಸರಿಗೆ ಸಿಗಲಿಲ್ಲವೇನೋ!

**ಮುನೆಪ್ಪ :–** ಹಾಗೆ ಸಿಗದೆ ಇದ್ದರೆ ಈ ಸಮಯಕ್ಕೆ ಅವರು ಬಂದು ಸೇರಬೇಕಿತ್ತು. ಇದು ವಜ್ರಗಳ ವ್ಯವಹಾರ. ಇದರಲ್ಲಿ ನಮಗೆ ಕಮೀಷನ್ ಮಾತ್ರ ಬರುತ್ತದೆ. ವಜ್ರಗಳು ಹೋದರೆ ನಾವು ಅವುಗಳ ಮೊತ್ತವನ್ನು ಕೊಡಬೇಕಾಗಿರುತ್ತದೆ. ನಾವು ದೊಡ್ಡ ಕಷ್ಟದಲ್ಲಿ ಬೀಳುತ್ತೇವೆ. ಆದ್ದರಿಂದ ನೀವು ಬೇಗನೆ ಈ ವಿಷಯವನ್ನು ತಿಳಿದುಕೊಂಡು ಬಾ.

**ಜಾನ್ :–** ಹಾಗೇ ಬಾಸ್ (ತಾನು ಸಾಕಿರುವ ನಾಯಿ ಜಾನೀಯೊಂದಿಗೆ ಸಹ ಜಾನ್ ಹೊರಟು ಹೋದನು.)

********************************

(ಶಾಂತಿಪುರದಲ್ಲಿನ ಆಶ್ರಮದಲ್ಲಿ ವೃದ್ಧನಿಂದ ದಾದಾಬಾಬಾರವರನ್ನು ಕುರಿತು ಅನೇಕ ವಿಷಯಗಳು ತಿಳಿದುಕೊಂಡ ರಾಘವ ತನ್ನ ಅನ್ವೇಷಣೆಯಲ್ಲಿ ಇನ್ನೂ ಸ್ವಲ್ಪ ಪ್ರಯಾಣವನ್ನು ಸಾಗಿಸಿದನು. ಹಾಗೆ ಹೋಗುತ್ತಿರುವ ರಾಘವನಿಗೆ ಒಂದು ಕಡೆ ಸತ್ಯಾನ್ವೇಷಣೆ ಸಮಿತಿ ಎನ್ನುವ ಹೆಸರಿರುವ ಒಂದು ಬೋರ್ಡು ಕಾಣಿಸಿತು. ರಾಘವನಿಗೆ ಬೇಕಾಗಿರುವುದು ಸತ್ಯಾನ್ವೇಷಣೆ ಆದ್ದರಿಂದ ಕೂಡಲೇ ಅಲ್ಲಿಗೆ ಹೋಗಿ ಅಲ್ಲೇನು ತಿಳಿಯುತ್ತದೋ ಅದನ್ನು ತಿಳಿದುಕೊಳ್ಳೋಣ ಎಂದುಕೊಂಡಿದ್ದಾನೆ. ಹಾಗೇ ಹೋಗಿದ್ದಾನೆ. ತನ್ನ ಉದ್ದೇಶವನ್ನು ತಿಳಿಸಿದ್ದಾನೆ. ಅದಕ್ಕೆ ಆ ಸಮಿತಿಯವರು ಸಂತೋಷಪಟ್ಟು, ಒಳ್ಳೆ ಭೋಜನ ಇಟ್ಟು, ನೀನು

ಯಾವುದನ್ನಾದರೂ ಕೇಳಿ ತಿಳಿದುಕೊಳ್ಳಬಹುದು. ಇಲ್ಲಿ ಹೇಳುವುದೆಲ್ಲಾ ಸತ್ಯವೇ ಆಗಿರುತ್ತದೆ. ಅಸತ್ಯವನ್ನು ಖಂಡಿಸಿ ಸತ್ಯವನ್ನು ತಿಳಿಸುವುದೇ ತಮ್ಮ ಕೆಲಸ ಎಂದು ರಾಘವನೊಂದಿಗೆ ಹೇಳಿದ್ದಾರೆ.

ಸತ್ಯಾನ್ವೇಷಣೆ ಸಮಿತಿ ಎಂದರೆ ಯಾವುದೋ ದೈವಜ್ಞಾನವನ್ನು ಬೋಧಿಸುವುದೆಂದು ರಾಘವ ತಿಳಿದುಕೊಂಡಿದ್ದಾನೆ. ನಿಜಕ್ಕೆ ಆ ಸಮಿತಿ ಅಂಥದ್ದಲ್ಲ. ಹೆಸರು ಒಳ್ಳೆಯದೇ ಆದರೂ ಅದು ಒಂದು ಹೇತುವಾದ ಸಂಘವಂಥದ್ದು. ಹಾಗೆಂದು ತಿಳಿದುಕೊಳ್ಳುವುದಕ್ಕೂ ಸಹ ಸಾಧ್ಯವಿಲ್ಲ. ಮೇಲ್ನೋಟಕ್ಕೆ ಸತ್ಯಾನ್ವೇಷಣೆ ಎಂದು ಹೇತುವಾದದಂತೆ ಕಾಣಿಸಿದರೂ ವಾಸ್ತವಕ್ಕೆ ಅದು ನಾಸ್ತಿಕವಾದಕ್ಕೆ ಸಂಬಂಧಿಸಿರುವುದೇ ಎಂದು ಹೇಳಬಹುದು. 'ಸತ್ಯಾನ್ವೇಷಣೆ' ಎನ್ನುವ ಹೆಸರನ್ನು ಅಡ್ಡ ಇಟ್ಟುಕೊಂಡು ಎಲ್ಲವನ್ನು ಅಡ್ಡವಾಗಿ ಖಂಡಿಸುವುದು ಹೊರತು ಬೇರೆ ಉದ್ದೇಶ ಅದರಲ್ಲಿ ಇಲ್ಲವೇ ಇಲ್ಲ. ಎಲ್ಲರನ್ನು ಖಂಡಿಸುತ್ತಾ, ಎಲ್ಲರಿಗಿಂತ ನಾನೇ ತಿಳಿದವನೆನಿಸಿಕೊಳ್ಳಬೇಕೆನ್ನುವ ತಾಪತ್ರಯ ಹೊರತು ಸತ್ಯವನ್ನು ಅನುಸರಿಸಿ ಮಾತನಾಡು ವುದು ಏನೂ ಇರುವುದಿಲ್ಲ. ರಾಘವ ಸತ್ಯಾನ್ವೇಷಣೆ ಯಾವ ಮಾತ್ರ ಇಲ್ಲದ ಅಂತಹ ನಾಸ್ತಿಕರನ್ನು ಈ ವಿಧವಾಗಿ ಪ್ರಶ್ನಿಸುವುದನ್ನು ಶುರು ಮಾಡಿದ್ದಾನೆ.)

**ರಾಘವ :–** ದೇವರಿದ್ದಾನೆಂದೂ, ಆತನು ಕಾಣಿಸದಂತೆ ಇದ್ದಾನೆಂದು ಕೆಲವರು ಹೇಳುತ್ತಿರುತ್ತಾರೆ. ಈ ಮಾತಲ್ಲಿ ಸತ್ಯವೆಷ್ಟು ಇದೆ?

**ಸತ್ಯವಾದಿ :–** ಕಾಣಿಸದ ದೇವರಿದ್ದಾನೆನ್ನುವುದು ಸತ್ಯವಲ್ಲ.

**ರಾಘವ :–** ದೆವ್ವವಿದೆಯೆಂದು ಅದು ಕೆಲವರಿಗೆ ಕಾಣಿಸಿದೆಯೆಂದು ಹೇಳುತ್ತಿರುತ್ತಾರೆ. ಈ ಮಾತಲ್ಲಿ ಸತ್ಯವೆಷ್ಟು ಇದೆ?

**ಸತ್ಯವಾದಿ :–** ದೇವರು ಕಾಣಿಸುವುದಿಲ್ಲವೆನ್ನುವ ಮಾತು, ದೆವ್ವ ಕಾಣಿಸುತ್ತದೆನ್ನುವ ಮಾತು ಎರಡೂ ಸತ್ಯವಲ್ಲ. ವಾಸ್ತವಕ್ಕೆ ಸತ್ಯಶೋಧನೆಯಲ್ಲಿ ಅಭೌತಿಕವಾದ ದೇವರು ಇಲ್ಲ, ಹಾಗೇ ಅಭೌತಿಕವಾದ ದೆವ್ವವೂ ಇಲ್ಲ.

**ರಾಘವ** :– ಕೆಲವರು ಸ್ವಾಮೀಜಿಯರು ಕೆಲವು ಮಹಿಮೆಗಳು ಹೊಂದಿರುತ್ತಾರೆ ಎನ್ನುವುದನ್ನು ಕೇಳಿದ್ದೇನೆ. ಈ ಮಾತಿನಲ್ಲಿ ಸತ್ಯವೆಷ್ಟಿದೆ?

**ಸತ್ಯವಾದಿ** :– ಈ ಮಾತಿನಲ್ಲಿ ಸಹ ಸತ್ಯ ಸ್ವಲ್ಪವಾದರೂ ಇಲ್ಲ. ಅಸಲು ಮಹಿಮೆ ಎನ್ನುವುದೇ ಇಲ್ಲ. ಒಂದು ವೇಳೆ ಯಾರಾದರೂ ಮಹಿಮೆಗಳು ತೋರಿಸುತ್ತಿದ್ದಾರೆಂದರೆ ಅದು ತನ್ನ ಮ್ಯಾಜಿಕ್‍ನ್ನು ಯಾರಿಗೂ ತಿಳಿಯದಂತೆ ಮಹಿಮೆಯಾಗಿ ಹೇಳುತ್ತಿದ್ದಾರೆಂದು, ಅವರು ಪ್ರಜೆಗಳನ್ನು ಮೋಸಗೊಳಿಸಿ ಮ್ಯಾಜಿಕ್ ಮಾಡಿ ತೋರಿಸುತ್ತಿದ್ದಾರೆ ಹೊರತು ಅವು ಮಹಿಮೆಗಳು ಅಲ್ಲವೆಂದು ಹೇಳಬಹುದು.

**ರಾಘವ** :– ಕ್ರೈಸ್ತರಿಗೆ ಪ್ರವಕ್ತ ಯೇಸು, ಹಿಂದೂಗಳಿಗೆ ಪ್ರವಕ್ತ ಕೃಷ್ಣನು ಎಂದು ಹೇಳುತ್ತಿರುತ್ತಾರೆ. ಈ ಮಾತಿನಲ್ಲಿ ಸತ್ಯವೆಷ್ಟಿದೆ?

**ಸತ್ಯವಾದಿ** :– ಯೇಸು, ಕೃಷ್ಣನು ಕೆಲವು ಮಾತುಗಳು ಹೇಳಿದ್ದಾರೆ. ಆದ್ದರಿಂದ ಕೆಲವರು ಅವರನ್ನು ಪ್ರವಕ್ತರೆನ್ನುತ್ತಿದ್ದಾರೆ. ನಿಜವಾಗಿ ಅವರು ವಕ್ತರು ಮಾತ್ರವೇ, ಪ್ರವಕ್ತರು ಅಲ್ಲ.

**ರಾಘವ** :– ಅವರು ದೊಡ್ಡವರೆಂದು ಎಲ್ಲರೂ ಹೇಳುತ್ತಿದ್ದಾರಲ್ಲವೆ! ಅವರು ದೊಡ್ಡವರಲ್ಲವಾ?

**ಸತ್ಯವಾದಿ** :– ಅವರಿಗಿಂತ ನಾನೇ ದೊಡ್ಡವನು, ನನಗೆ ತಿಳಿದಷ್ಟು ಕೂಡಾ ಅವರಿಗೆ ತಿಳಿದಿಲ್ಲ. ಅವರಲ್ಲಿ ಸತ್ಯಾನ್ವೇಷಣೆಯೇ ಇಲ್ಲ.

**ರಾಘವ** :– ಇಂದಿನ ಕಾಲದಲ್ಲಾದರೂ ದೊಡ್ಡ ಜ್ಞಾನಿಗಳು ಯಾರಾದರೂ ಇದ್ದಾರಾ?

**ಸತ್ಯವಾದಿ** :– ಹಾಗೆ ಇಲ್ಲವೆಂದೇ ನಾನು ಸತ್ಯಾನ್ವೇಷಣಾ ಸಮಿತಿಯನ್ನು ಸ್ಥಾಪಿಸಿರುವುದು. ಈತನು ಜ್ಞಾನಿ ಎಂದು ಯಾರನ್ನಾದರೂ ಅಂದರೆ ಆತನು ಅಭೌತಿಕವಾದದ್ದನ್ನು ಕುರಿತು ಬೋಧಿಸುತ್ತಿರುತ್ತಾನೆ. ಭೌತಿಕ ಹೊರತು ಅಭೌತಿಕ ನಿರೂಪಣೆಗೆ ಬರುವುದಿಲ್ಲ. ಆದ್ದರಿಂದ ಅಭೌತಿಕವನ್ನು ಖಂಡಿಸಿ ಸತ್ಯವನ್ನು ತಿಳಿಸುವ ನಾನು ಹೊರತು ಯಾರೂ ನಿಜವಾದ ಜ್ಞಾನಿಗಳು ಭೂಮಿಮೇಲೆ ಇಲ್ಲ. ನಾನು ಎಷ್ಟೋ ಜನರೊಂದಿಗೆ ವಾದ (ಚರ್ಚೆ) ಮಾಡಿದ್ದೇನೆ. ನನ್ನ ವಾದಕ್ಕೆ ಎಲ್ಲರೂ ಸೋತುಹೋಗಿದ್ದಾರೆ.

(ಆ ಮಾತಿನಿಂದ ರಾಘವನಿಗೆ ಸ್ವಲ್ಪ ಅನುಮಾನ ಬಂದಿತು. ಇಷ್ಟಕ್ಕೂ ಈತನು ಸತ್ಯವಾದಿಯಾ ಅಥವಾ ನಾಸ್ತಿಕವಾದಿಯಾ ಎಂದು ಮನಸ್ಸಿನಲ್ಲಿ ಪ್ರಶ್ನೆ ಬಂದು ಅದನ್ನು ದೃಢಪಡಿಸಿಕೊಳ್ಳುವುದಕ್ಕೆ ಕೆಲವು ಪ್ರಶ್ನೆಗಳನ್ನು ಕೇಳಿದ್ದಾನೆ).

**ರಾಘವ** :– ಮನುಷ್ಯನ ಶರೀರ ಕಾಣಿಸಿದರೂ, ಶರೀರದಲ್ಲಿನ ಜೀವಿಯು ಕಾಣಿಸುವುದಿಲ್ಲ. ಕೆಲವರು ತತ್ತ್ವಜ್ಞರು ಕಾಣಿಸುವ ಶರೀರವನ್ನು ಹುತ್ತದಂತೆ, ಕಾಣಿಸದ ಜೀವಿಯನ್ನು ಹುತ್ತದಲ್ಲಿನ ಹಾವಾಗಿ ಹೇಳುತ್ತಿರುವುದನ್ನು ಕೇಳಿದ್ದೇನೆ. ಇದನ್ನನುಸರಿಸಿ ಕಾಣಿಸುವ ಶರೀರ ಭೌತಿಕವಾದರೆ, ಕಾಣಿಸದ ಜೀವಿಯು ಅಭೌತಿಕ ಆಗುತ್ತದಲ್ಲವೆ! ಇದನ್ನು ಕುರಿತು ನೀವೇನನ್ನುತ್ತೀರಾ?

**ಸತ್ಯವಾದಿ** :– ಅಭೌತಿಕ ಎನ್ನುವುದು ಇಲ್ಲವೇ ಇಲ್ಲ. ಜೀವಿಯು ಎನ್ನುವವನು ಇಲ್ಲವೇ ಇಲ್ಲ, ದೇವರು ಎನ್ನುವವನು ಇಲ್ಲ. ಇದೆಲ್ಲಾ ಸೈನ್ಸ್ (ವಿಜ್ಞಾನ) ತಿಳಿಯದವರು ಮಾತನಾಡುವ ವಿಧಾನ. ಶರೀರದಲ್ಲಿ ಜೀವಕಣಗಳಿವೆ. ಜೀವಕಣಗಳು ಎಲ್ಲಿಯವರೆಗು ಕೆಲಸ ಮಾಡುತ್ತವೊ ಅಲ್ಲಿಯವರೆಗು ಮನುಷ್ಯ ಬದಕುತ್ತಿದ್ದಾನೆ. ಜೀವಕಣಗಳು ಕೆಲಸ ಮಾಡದ ಸ್ಥಿತಿಯಲ್ಲಿ ಮನುಷ್ಯ ಸತ್ತುಹೋಗುತ್ತಿದ್ದಾನೆ. ಅಷ್ಟೇ ಹೊರತು ಪ್ರತ್ಯೇಕವಾಗಿ ಜೀವಿಯು ಇದ್ದಾನೆನ್ನುವುದು ಅಸತ್ಯವಾದವಾಗುತ್ತದೆ.

(ಈ ಮಾತಿನಿಂದ ರಾಘವನಿಗೆ ಇವರು ಮಾತನಾಡುವುದು ನಾಸ್ತಿಕವಾದ ಹೊರತು ಸತ್ಯವಾದ ಅಲ್ಲವೆಂದು ಸ್ವಲ್ಪ ಅರ್ಥವಾಯಿತು.)

**ರಾಘವ** :– ಸೃಷ್ಠಿ, ಸೃಷ್ಠಿಕರ್ತ ಎಂದು ಕೆಲವರನ್ನುತ್ತಿರುತ್ತಾರೆ. ಒಂದು ವಸ್ತು ಇದೆ ಎಂದರೆ ಅದು ಸೃಷ್ಠಿಸಲ್ಪಟ್ಟಿರುವುದೆಂದು, ಅದನ್ನು ಸೃಷ್ಠಿಸಿದವನಿದ್ದಾನೆಂದು ಹೇಳುತ್ತಿರುವರು. ಆ ಪದ್ಧತಿ ಪ್ರಕಾರ ಈ ವಿಶ್ವವನ್ನು ಸೃಷ್ಠಿಸಿದವನು ಒಬ್ಬನಿದ್ದಾನಾ?

**ಸತ್ಯವಾದಿ** :– ಮನುಷ್ಯ ಸೃಷ್ಠಿಯಲ್ಲಿನ ಒಂದು ಭಾಗವೇ, ಹಾಗೇ ಭೂಮಿ, ಆಕಾಶ, ಸಮುದ್ರಗಳು ಸಹ ಸೃಷ್ಠಿಯಲ್ಲಿನ ಭಾಗಗಳೇ. ಆದರೇ ಇವುಗಳಿಗೆ ಸೃಷ್ಠಿಕರ್ತ ಒಬ್ಬನಿದ್ದಾನೆಂದುಕೊಳ್ಳುವುದು ತಪ್ಪು. ಕಾಣಿಸುವವು ಮಾತ್ರವೇ ಅಲ್ಲದೆ ಸೂರ್ಯನು, ಚಂದ್ರನು ಮೊದಲಾದ ಗ್ರಹಗಳು, ಇನ್ನೂ ವಿಶ್ವದಲ್ಲಿನ ನಕ್ಷತ್ರಗಳು, ನಕ್ಷತ್ರ ಸಮುದಾಯವಾದ ಉಲ್ಕೆಗಳು ಇನ್ನೂ ಎಷ್ಟೋ ಪರಸ್ಪರ ವಾತಾವರಣ

ಬದಲಾವಣೆಯಿಂದ ಏರ್ಪಡುತ್ತಿವೆ, ಹಾಗೇ ನಶಿಸುತ್ತಿವೆ. ಇದೆಲ್ಲಾ ಖಗೋಳ ಶಾಸ್ತ್ರವನ್ನು ನೋಡಿದರೆ ತಿಳಿಯುತ್ತದೆ. ಅಷ್ಟೇ ಹೊರತು ಈ ವಿಶ್ವವನ್ನು ಹುಟ್ಟಿಸಿದವನಾಗಲೀ, ನಾಶ ಮಾಡುವವನಾಗಲೀ ಇಲ್ಲವೇ ಇಲ್ಲ ಎನ್ನುವುದು ಸತ್ಯ.

(ಈ ಮಾತುಗಳಿಂದ ಈತನು ಪೂರ್ತಿ ನಾಸ್ತಿಕವಾದಿಯೆಂದು, ಈತನು ಸತ್ಯವಾದಿ ಎನ್ನುವ ಮುಸುಗು ತಗಲಿಸಿಕೊಂಡಿದ್ದಾನೆಂದು ಅರ್ಥವಾಗಿದೆ.)

**ರಾಘವ :–** ನೀವು ಬಹಳ ಚೆನ್ನಾಗಿ ಹೇಳುತ್ತಿದ್ದೀರ. ಆದರೂ ನನ್ನ ಹತ್ತಿರ ಕೇಳುವುದಕ್ಕೆ ಪ್ರಶ್ನೆಗಳು ಇಲ್ಲದಂತೆ ಹೋಗಿವೆ. ಕೊನೆಯದಾಗಿ ಒಂದು ಪ್ರಶ್ನೆ ಕೇಳುತ್ತಿದ್ದೇನೆ. ಅದೇನೆಂದರೆ! ಸತ್ಯವೆಂದರೇ ಏನು? ಅಸತ್ಯವೆಂದರೆ ಏನು?

**ಸತ್ಯವಾದಿ :–** ಸತ್ಯವೆಂದರೆ ಸೈನ್ಸ್, ಸೈನ್ಸ್ ಅಲ್ಲದಿರುವುದು ಎಲ್ಲಾ ಅಸತ್ಯವೇ. ಇನ್ನೂ ಹೇಳಿದರೆ ಸೈನ್ಸ್ ಎಂದರೆ ವಿಜ್ಞಾನ, ಸೈನ್ಸ್ ಅಲ್ಲದ್ದು ಅಜ್ಞಾನ.

(ಈ ಮಾತಿನಿಂದ ಸತ್ಯಾನ್ವೇಷಿ ಆದ ರಾಘವನಿಗೆ ಸತ್ಯವಾದಿಯಲ್ಲಿ ಅಸತ್ಯವಾದಿ, ನಾಸ್ತಿಕವಾದಿ ಕಾಣಿಸಿದಂತಾಯಿತು. ಇನ್ನು ಈತನೊಂದಿಗೆ ಒಂದು ಮಾತು ಮಾತನಾಡಿದರೂ ಅದು ವೃಥಾ ಪ್ರಯಾಸವೇ ಎಂದುಕೊಂಡಿದ್ದಾನೆ. ಅಲ್ಲಿಯವರೆಗು ತನ್ನೊಂದಿಗೆ ಮಾತನಾಡಿರುವುದಕ್ಕೆ ಆತನಿಗೆ ಧನ್ಯವಾದಗಳು ತಿಳಿಸಿ ಅಲ್ಲಿಂದ ಹೊರಬಿದ್ದು, ತನಗೆ ಮೂರು ಕಡೆ ಎದುರಾದ ಅನುಭವಗಳನ್ನು ನೆನಪು ಮಾಡಿಕೊಳ್ಳುತ್ತಾ ಇನ್ನು ಎಲ್ಲಿಗೆ ಹೋದರೂ ಪ್ರಯೋಜನವಿಲ್ಲವೆಂದು, ರಾಜಯೋಗಾ ನಂದ ಸ್ವಾಮಿ ಹತ್ತಿರಕ್ಕೆ ಹೋಗುವುದಕ್ಕೆ ನಿರ್ಣಯಿಸಿಕೊಂಡು ಹಿಂತಿರುಗಿ ಪ್ರಯಾಣ ಸಾಗಿಸಿದನು. ಕೊನೆಗೆ ರಾಜಯೋಗಾನಂದ ಸ್ವಾಮಿ ಹತ್ತಿರಕ್ಕೆ ಸೇರಿದ ರಾಘವ ತಾನು ಮೂರು ಆಶ್ರಮಗಳಿಗೆ ಹೋಗಿ ಅಲ್ಲಿ ನಡೆದ ಅನುಭವಗಳನ್ನು ಸ್ವಾಮಿಯವರಿಗೆ ಹೇಳತೊಡಗಿದನು. ಮೊದಲು ಸತ್ಯಾನ್ವೇಷಣೆ ಸಮಿತಿ ಅವರೊಂದಿಗೆ ನಡೆದ ಸಂಭಾಷಣೆ ಕುರಿತು ಹೇಳಿದನು.)

**ರಾಘವ :–** ಸ್ವಾಮೀ! ನೀವು ಕೆಲವು ಪ್ರಾಂತಗಳಿಗೆ ಹೋಗಿ, ಅಲ್ಲಿ ಅವರ

ವಿಧಾನಗಳು ತಿಳಿದುಕೊಂಡು ಬಾ ಎಂದು ಹೇಳಿದ್ದೀರ. ಹಾಗೇ ಹೋಗಿ ಬಂದಿದ್ದೇನೆ. ನಾನು ಅಲ್ಲಿಗೆ ಹೋಗಿ ಬರದಂತಿದ್ದರೆ ಆಧ್ಯಾತ್ಮಿಕ ಲೋಕದಲ್ಲಿ ಮನುಷ್ಯರು ಇಷ್ಟು ವಿಧಗಳಲ್ಲಿದ್ದಾರೆಂದು ತಿಳಿಯುತ್ತಿರಲಿಲ್ಲ. ಹೋಗಿ ಬಂದಿರುವುದರಿಂದ ಎಷ್ಟೋ ಅನುಭವ ಉಂಟಾಯಿತು. ವಿಚಿತ್ರವೇನೆಂದರೆ ದೇವರಿದ್ದಾನೆನ್ನುವವರು, ತಿಳಿಯದೆ ಸರಿಯಾದ ಜ್ಞಾನ ಮಾರ್ಗದಲ್ಲಿ ನಡೆಯಲಿಲ್ಲ ಎಂದರೆ, ಅದಕ್ಕೆ ಸಮಾಧಾನವಾಗಿ ಅವರಿಗೆ ತಿಳಿದ ಮಾರ್ಗದಲ್ಲಿ ಅವರು ನಡೆಯುತ್ತಿದ್ದಾರೆಂದು ಅಂದುಕೊಳ್ಳಬಹುದು. ಆದರೆ ಸತ್ಯಾನ್ವೇಷಣೆ ಎಂದು ಬೋರ್ಡು ಇಟ್ಟುಕೊಂಡು ದೇವರ ವಿಷಯದಲ್ಲಿ ಯಾವ ಸತ್ಯ ಮಾರ್ಗವನ್ನು ಅಲ್ಲದೆ, ಅಸತ್ಯ ಮಾರ್ಗವನ್ನು ಅನುಸರಿಸುತ್ತಾ, ತಮ್ಮದೇ ಸತ್ಯವೆಂದು ಹೇಳಿಕೊಳ್ಳುವವರಿರುವುದು, ನನಗೆ ಬಹಳ ವಿಚಿತ್ರವಾಗಿ ತೋಚಿತು. ಭೌತಿಕ ಹೊರತು ಅಭೌತಿಕ ಇಲ್ಲವೆಂದು ಹೇಳುವುದೇ ಅವರ ಸತ್ಯವಾದವಂತೆ. ದೇವರೇ ಇಲ್ಲವೆಂದು ಪೂರ್ತಿ ನಾಸ್ತಿಕತ್ವವನ್ನು ಬೋಧಿಸುತ್ತಾ ಅದಕ್ಕಿಂತ ಸತ್ಯ ಇಲ್ಲವೆಂದು, ಹಾಗೆ ಹೇಳುವುದೇ ಸರಿಯಾದ ಸತ್ಯವಾದವೆಂದು ಹೇಳುವುದು ನಡೆದಿದೆ. ಇದು ನನಗೆ ಬಹಳ ಹೊಸ ಅನುಭವ.

**ರಾಜಯೋಗಾನಂದ :–** ಸತ್ಯಾನ್ವೇಷಣೆ ಸಮಿತಿಯನ್ನು ಸ್ಥಾಪಿಸಿರುವುದು ನಿನ್ನೊಂದಿಗೆ ಮಾತನಾಡಿದ ವ್ಯಕ್ತಿಯೇ. ಆತನು ತಾನು ಹೊರಗೆ ತಿಳಿಯಬೇಕೆನ್ನುವ ಕೋರಿಕೆಯಿಂದ ಸೈನ್ಸ್ ಎಂದೂ, ಸತ್ಯಾನ್ವೇಷಣೆ ಎಂದು ಹೇಳುತ್ತಾ, ಎಲ್ಲರಿಗೂ ಅಡ್ಡವಾಗಿ ಮಾತನಾಡಿ, ತಾನು ಎಲ್ಲಾ ತಿಳಿದವನೆಂದು ಅನಿಸಿಕೊಳ್ಳಬೇಕೆಂದು ಆತನ ಉದ್ದೇಶ. ಆತನು ಇಂದಿನವರಿಗಿಂತ ನಾನು ಹಿರಿಯನು ಎನ್ನುವುದೇ ಅಲ್ಲದೆ, ಪೂರ್ವದ ಪ್ರವಕ್ತರಿಗಿಂತ ನಾನೇ ದೊಡ್ಡವನೆಂದು ಹೇಳಿಕೊಳ್ಳುವುದು ಆತನ ಹವ್ಯಾಸ. ಸತ್ಯಾನ್ವೇಷಣೆ ಎನ್ನುವ ಮುಸುಗು ಹಾಕಿಕೊಂಡು ಪ್ರತಿ ಒಂದಕ್ಕೂ ಸೈನ್ಸ್ ಎಂದು ಹೇಳುತ್ತಾ, ಇತರರನ್ನು ಕಡಿಮೆ ಮಾಡಿ ಮಾತನಾಡುವುದು ಆತನಿಗಿರುವ ರೋಗ. ಆತನು ದೈವಜ್ಞಾನ ಹೇಳುವವರೆಲ್ಲರನ್ನೂ ಮೋಸಗಾರರೆನ್ನುತ್ತಿರುತ್ತಾನೆ.

**ರಾಘವ :–** ಅಂತಹ ವ್ಯಕ್ತಿ ಹತ್ತಿರಕ್ಕೆ ಯಾರು ಹೋಗುತ್ತಾರೆ? ಆತನ ಬೋಧನೆಗಳನ್ನು ಯಾರು ಕೇಳುತ್ತಾರೆ?

**ರಾಜಯೋಗಾನಂದ** :– ಯಾವ ಜಾತಿ ಪಕ್ಷಿ ಆ ಜಾತಿ ಗೂಡಿಗೇ ಸೇರುತ್ತದೆನ್ನುವಂತೆ, ಅಂತಹ ನಾಸ್ತಿಕತ್ವ ಭಾವನೆಗಳಿರುವವರೇ ಆತನ ಹತ್ತಿರಕ್ಕೆ ಹೋಗುತ್ತಿರುತ್ತಾರೆ. ಮೇಲ್ನೋಟಕ್ಕೆ ತಮಗೇ ವಿದ್ಯೆ ಎಲ್ಲ ಬಂದಿರುವವರಂತೆ, ತಮಗೇ ಶಾಸ್ತ್ರಗಳೆಲ್ಲವೂ ತಿಳಿದಂತೆ ಕೆಲವು ಶಾಸ್ತ್ರಗಳ ಹೆಸರುಗಳು ಹೇಳುತ್ತಾ, ಆಯಾ ಶಾಸ್ತ್ರಗಳಲ್ಲಿ ಇಲ್ಲದ್ದನ್ನು ಸಹ ಇದೆಯೆಂದು ಹೇಳುತ್ತಿರುವರು. ಆದ್ದರಿಂದ ಅವರ ಸಂಘಗಳು ಅವರವರೆಗೇ ಪರಿಮಿತವಾಗಿರುತ್ತವೆ. ಪ್ರಜೆಗಳು ಯಾರೂ ಅವರನ್ನು, ಅವರ ಮಾತುಗಳನ್ನೂ ವಿಶ್ವಾಸಿಸುವುದಿಲ್ಲ.

**ರಾಘವ** :– ಅವರು ಹೇಳುವ ಸೈನ್ಸ್ ಪ್ರಕಾರವಾದರೂ ಅಭೌತಿಕವಾಗಿ ಕಾಣಿಸದಿರುವುದು ಸೈನ್ಸ್ ಅಲ್ಲವೆಂದು ಹೇಳುವುದಕ್ಕೆ ಸಾಧ್ಯವಿಲ್ಲವಲ್ಲ! ಆಸ್ಪತ್ರೆಗಳಲ್ಲಿ ತೆಗೆಯುವ ಎಕ್ಸ್‌ರೇ ಕಿರಣಗಳು ಕಣ್ಣಿಗೆ ಕಾಣಿಸುವುದಿಲ್ಲ ಅಲ್ಲವೆ! ಕಾಣಿಸದಷ್ಟು ಮಾತ್ರಕ್ಕೆ ಎಕ್ಸ್‌ರೇ ಕಿರಣಗಳನ್ನು ಸೈನ್ಸ್ ಅಲ್ಲ ಎನ್ನುತ್ತೇವಾ? ಟೀವಿ ರಿಮೋಟ್ ಮುಖಾಂತರ ದೂರದಿಂದ ಟೀವಿಯನ್ನು ಆನ್ ಮಾಡಬಹುದು, ಛಾನಲ್ಸ್‌ನ್ನು ಬದಲಾಯಿಸಬಹುದು. ಅಲ್ಲಿ ರಿಮೋಟ್ ಕೆಲಸ ಎಲ್ಲವೂ ಅಭೌತಿಕವೇ ಅಲ್ಲವೆ! ಅದನ್ನು ಸೈನ್ಸ್ ಅಲ್ಲ ಎನ್ನಬಹುದಾ, ಹಾಗೆ ಅಭೌತಿಕವನ್ನು ಒಪ್ಪಿಕೊಳ್ಳದೇ ಹೋದರೆ ಅವರು ಸೈನ್ಸ್‌ನ್ನೇ ಒಪ್ಪಿಕೊಳ್ಳದಂತಾಗುತ್ತದೆ.

**ರಾಜಯೋಗಾನಂದ** :– ಯಾರು ಏನು ಮಾತನಾಡಿದರೂ ಅವರಿಗೆ ವಿರುದ್ಧವಾಗಿ ಮಾತನಾಡಿ ಎದುರಿಗಿರುವವರ ವಾದನೆಯನ್ನು ಅಲ್ಲಗಳೆಯುವುದೇ ಅವರ ಮುಖ್ಯ ಉದ್ದೇಶ. ಆದ್ದರಿಂದ ಎಕ್ಸ್‌ರೇ ಕಿರಣಗಳನ್ನು ಕುರಿತಾಗಲೀ, ಟೀವಿ ರಿಮೋಟ್ಸ್ ಕುರಿತಾಗಲೀ ಕೇಳಿದರೆ ಅದು ನಿಮಗೆ ತಿಳಿಯದ ಸೈನ್ಸ್, ಅದು ಅಭೌತಿಕ ಅಲ್ಲ. ಅದರಲ್ಲಿ ಎಲೆಕ್ಟ್ರಿಕಲ್ ಕಿರಣಗಳಿರುವುದರಿಂದ ಅವು ಕಾಣಿಸುವುದಿಲ್ಲ. ಅವು ಕಾಣಿಸ ದಷ್ಟು ಮಾತ್ರಕ್ಕೆ ನೀವಂದುಕೊಂಡಹಾಗೆ ಅಭೌತಿಕವಲ್ಲ. ಅದರಲ್ಲಿ ಕಿರಣಗಳಿವೆ, ಅವುಗಳಿಂದ ಕೆಲಸಗಳು ನಡೆಯುತ್ತಿವೆ. ಅದರಲ್ಲಿ ಅವು ಭೌತಿಕವೇ! ನೀವು ಅಂದುಕೊಂಡಂತೆ ಅಭೌತಿಕವಲ್ಲ ಎಂದು ಹೇಳುತ್ತಿರುವರು. ಈ ವಿಧವಾಗಿ ನಾವು ಟೀವಿ ರಿಮೋಟ್‌ನ್ನು ಕುರಿತು, ಎಕ್ಸ್‌ರೇ ಕಿರಣಗಳನ್ನು ಕುರಿತು ಅಭೌತಿಕ ಎಂದರೆ

ಅವು ಅಭೌತಿಕವಾದರೂ ಅಲ್ಲ ಅವು ಭೌತಿಕವೇ ಎಂದು ಆ ಶಾಸ್ತ್ರ, ಈ ಶಾಸ್ತ್ರ ಎಂದು ಅಡ್ಡ ಮಾತನಾಡಿ, ಎದುರಿಗಿರುವವನ ಬಾಯಿ ಮುಚ್ಚಿಸಬೇಕೆಂದು ನೋಡುವುದೇ, ಸತ್ಯಾನ್ವೇಷಣೆ ಸಮಿತಿ ಮುಖ್ಯ ಕಾರ್ಯಕ್ರಮ. ಮೊಂಡರೊಂದಿಗೆ ಏಕೆ ವಾದಿಸಬೇಕು, ವಾದಿಸಿದರೂ ಏನು ಪ್ರಯೋಜನ ಇರುವುದಿಲ್ಲವೆಂದು, ಯಾರಾದರೂ ಅವರೊಂದಿಗೆ ವಾದಿಸುವುದನ್ನು ನಿಲ್ಲಿಸಿದರೆ, ನಮ್ಮ ವಾದಕ್ಕೆ ಅವರು ಸೋತುಹೋಗಿದ್ದಾರೆಂದು ಪ್ರಚಾರ ಸಹ ಮಾಡಿಕೊಳ್ಳುತ್ತಾರೆ. ಬುದ್ಧಿ ಇರುವವನು ಯಾರೂ ಮೂರ್ಖನೊಂದಿಗೆ ಮಾತನಾಡುವುದಿಲ್ಲ. ಇಂತಹವರಿಗೆ ಶಾಸ್ತ್ರಗಳು ಎಷ್ಟೋ ತಿಳಿಯವು, ನಾವು ಶಾಸ್ತ್ರಜ್ಞರೆನ್ನುತ್ತಾರೆ. ಪೂರ್ವದಿಂದ ಹಿರಿಯರು ಏರ್ಪಡಿಸಿದ ಷಟ್ ಶಾಸ್ತ್ರಗಳು ಯಾವುವೂ ಸಹ ಅವರಿಗೆ ತಿಳಿದಿಲ್ಲ. ಎಷ್ಟೋ ಬುದ್ಧಿಯನ್ನು ಉಪಯೋಗಿಸಿ ವಾಕ್ ಚಾತುರ್ಯದಿಂದ ಮಾಡನಾಡಿದರೂ, ಅವರು ಕೇವಲ ನಾಲ್ಕು ಶಾಸ್ತ್ರಗಳನ್ನು ಕುರಿತೇ ಮಾತನಾಡುತ್ತಿರುತ್ತಾರೆ. ಎರಡು ಶಾಸ್ತ್ರಗಳ ಕುಲ, ಗೋತ್ರವೂ ಸಹ ಅವರಿಗೆ ತಿಳಿದಿಲ್ಲ. ಆದರೂ ಎಲ್ಲರಿಗಿಂತ ನಾವೇ ದೊಡ್ಡ ಸತ್ಯವಾದಿಗಳೆಂದು, ಸತ್ಯಾನ್ವೇಷಿಗಳೆಂದು ಹೇಳಿಕೊಳ್ಳುತ್ತಿರುವರು. ಅವರದೊಂದು ಹೆಚ್ಚಾದ ಹುಚ್ಚುವಾದನೆಯೆಂದು, ಅವರಿಗೆ ಯಾವ ಶಾಸ್ತ್ರದ ಮೇಲೆ ಪೂರ್ತಿ ಅವಗಾಹನೆ ಇರುವುದಿಲ್ಲವೆಂದು, ಮಾತನಾಡುವುದಕ್ಕೆ ಮಾತ್ರ ಶಾಸ್ತ್ರಗಳ ಹೆಸರುಗಳು ಬಳಸಿಕೊಳ್ಳುತ್ತಿರುವರೆಂದು, ಎದುರಿಗಿರುವವರ ವಾದನೆಯನ್ನು ಖಂಡಿಸಿ, ಯಾವುದೋ ಒಂದು ವಿಧವಾಗಿ ಅಡ್ಡದಾರಿಯಲ್ಲಿ ಮಾತನಾಡುವುದೇ, ಅವರ ಕೆಲಸ ಎಂದು ತಿಳಿಯುತ್ತಿದೆ.

**ರಾಘವ** :– ನಾನು ಸ್ವಲ್ಪ ಹೊತ್ತು ಅವರೊಂದಿಗೆ ಮಾತನಾಡಿದ ನಂತರ ನೀವು ಹೇಳಿದಂತೆ ಇವರೊಂದಿಗೆ ಮಾತನಾಡುವುದರಿಂದ ಪ್ರಯೋಜನ ಇಲ್ಲವೆನಿಸಿತು. ಅಷ್ಟೇ ಅಲ್ಲದೆ ಅವರು ಒಂದು ವಿಧವಾದ ನಾಸ್ತಿಕವಾದಿಗಳಾಗಿ ಕಾಣಿಸಿದ್ದಾರೆ. ನೀವು ಹೇಳಿದಂತೆ ಅವರದು ಸತ್ಯವಾದನೆ ಅಲ್ಲವೆಂದು ನನಗೆ ಅರ್ಥವಾಯಿತು.

**ರಾಜಯೋಗಾನಂದ** :– ಕಾಲಿಗೆ ಹಾಕಿದರೆ ಕುತ್ತಿಗೆಗೆ, ಕುತ್ತಿಗೆಗೆ ಹಾಕಿದರೆ ಕಾಲಿಗೆ ಹಾಕುವುದೆ ಇವರ ಕೆಲಸ. ಇಂತಹ ಮೊಂಡುತನ ಇರುವವರು ಸಹ ಸಮಾಜದಲ್ಲಿ

ಎಷ್ಟೋ ಇದ್ದಾರೆ. ಅಂತಹವರಲ್ಲಿ ಸತ್ಯಾನ್ವೇಷಣಾ ಸಂಘದವರು ಒಂದು ವಿಧದವರೆಂದುಕೋ. ಇಂತಹವರೊಂದಿಗೆ ವಾದ ಬೆಂಕಿಯ ಕೊಳ್ಳಿಯಿಂದ ಬೋಳಿಸಿಕೊಂಡಂತಿರುತ್ತದೆ. ಆದ್ದರಿಂದ ಒಳ್ಳೆಯವರು ಯಾರೂ ಅವರೊಂದಿಗೆ ಸಂಬಂಧ ಇಟ್ಟುಕೊಳ್ಳುವುದಿಲ್ಲ. ಇಂತಹವರ ವಿಷಯ ಬಿಟ್ಟು ಇತರ ವಿಷಯವೇನಾದರೂ ಇದ್ದರೆ, ಅದರಲ್ಲಿ ಏನಾದರೂ ಅನುಮಾನವಿದ್ದರೆ ಕೇಳು.

**ರಾಘವ :–** ಸ್ವಾಮೀ! ಶಾಂತಿನಗರ ಎನ್ನುವ ಊರಲ್ಲಿ ದಾದಾಬಾಬಾ ಎನ್ನುವ ಒಬ್ಬ ಸ್ವಾಮೀಜಿಯನ್ನು ದರ್ಶಿಸಿಕೊಂಡು ಬಂದಿದ್ದೇನೆ. ಅಲ್ಲಿ ಅವರ ಆಶ್ರಮ ಇದು ವೈಕುಂಠಪುರವಾ ಎನ್ನುವಂತಿದೆ. ಎಷ್ಟೋ ಸಾವಿರ ಜನ ಸ್ವದೇಶೀ ಭಕ್ತರೂ, ನೂರು ಜನ ವಿದೇಶೀ ಭಕ್ತರು ಅಲ್ಲಿದ್ದಾರೆ. ದಾದಾಬಾಬಾರವರು ಸ್ವತಃವಾಗಿ ತನ್ನ ಹಸ್ತದಿಂದ ವಿಭೂತಿ ಕೊಡುತ್ತಿದ್ದಾನೆ. ಅಷ್ಟೇ ಅಲ್ಲದೆ ಕೆಲವು ವಸ್ತುಗಳನ್ನು ಸಹ ಸೃಷ್ಠಿಸಿ ಕೊಡುತ್ತಿದ್ದಾನೆ. ಹಾಗೆ ಕೊಡುವುದೇ ಅಲ್ಲದೆ ಎಷ್ಟೋ ಭಕ್ತರ ಮನೆಗಳಲ್ಲಿ ದಾದಾಬಾಬಾರವರ ಫೋಟೋದಿಂದ ವಿಭೂತಿ ಸುರಿಯುವುದು, ಕುಂಕುಮ ಸುರಿಯುವುದು ನಡೆಯುತ್ತಿದೆ. ಇಷ್ಟು ಮಹಿಮೆಗಳನ್ನು ಬಾಬಾನಿಂದ ಬಹಳ ಜನ ನೋಡುತ್ತಿದ್ದಾರೆ. ಇಷ್ಟು ವಿಧಗಳ ಮಹಿಮೆಗಳಿರುವ ಬಾಬಾರವರು ಬಹಳ ದೊಡ್ಡ ವ್ಯಕ್ತಿ ಎಂದು ನಾನು ತಿಳಿದುಕೊಳ್ಳುತ್ತಿದ್ದೇನೆ. ಎಷ್ಟೋ ಲಕ್ಷ ಜನ ಭಕ್ತರು ಆತನನ್ನು ಪ್ರತ್ಯಕ್ಷ ದೈವವಾಗಿ ಭಾವಿಸುತ್ತಿದ್ದಾರೆ, ಹಾಗೇ ಪೂಜಿಸುತ್ತಿದ್ದಾರೆ. ಅಷ್ಟು ದೊಡ್ಡ ವ್ಯಕ್ತಿಯನ್ನು ನಾನು ಇಲ್ಲಿಯವರೆಗೂ ಎಲ್ಲೂ ನೋಡಲಿಲ್ಲ. ಆತನ ದರ್ಶನ ಸಹ ನನಗೆ ಲಭಿಸಿದೆ. ಅದನ್ನು ನಾನು ದೊಡ್ಡ ಭಾಗ್ಯವಾಗಿ ತಿಳಿದಿದ್ದೇನೆ. ಆತನನ್ನು ಅಲ್ಲಿನವರೆಲ್ಲರೂ ಸಾಕ್ಷಾತ್ತು ದೇವರೆಂದು ಹೇಳುವುದನ್ನು ಪ್ರತ್ಯಕ್ಷವಾಗಿ ನೋಡಿ ಬಂದಿದ್ದೇನೆ. ಎಲ್ಲರೂ ತಿಳಿದುಕೊಂಡಹಾಗೆ ಆತನು ಪ್ರತ್ಯಕ್ಷ ದೇವರಾ? ಅಥವಾ ಅಸಾಮಾನ್ಯವಾದ ದೊಡ್ಡ ವ್ಯಕ್ತಿಯಾ? ಎನ್ನುವ ಸಂಶಯ ನನ್ನಲ್ಲಿ ಸ್ವಲ್ಪವಿದೆ. ಅದನ್ನು ಕುರಿತು ವಿವರಿಸಬೇಕೆಂದು ಕೋರುತ್ತಿದ್ದೇನೆ.

(ರಾಘವ ಮಾತುಗಳನ್ನು ಕೇಳಿದ ರಾಜಯೋಗಾನಂದ ಸ್ವಾಮಿ ಮುಗುಳ್ನಕ್ಕು, ದೀರ್ಘವಾಗಿ ತಲೆ ಅಲ್ಲಾಡಿಸಿ ಹೀಗೆ ಹೇಳಿದ್ದಾನೆ.)

**ರಾಜಯೋಗಾನಂದ** :– ನೀನು ಸಹ ಎಲ್ಲರಂತೆ ಅಜ್ಞಾನವೆನ್ನುವ ಬುಟ್ಟಿಯಲ್ಲಿ ಬಿದ್ದಿದ್ದೀಯ. ನಿನ್ನನ್ನು ಸತ್ಯಾನ್ವೇಷಣೆ ಮಾಡೆಂದಿದ್ದೇನೆ. ಸತ್ಯಾನ್ವೇಷಣೆ ಮಾಡುವವರು ಒಂದು ವಿಷಯದಲ್ಲಿನ ಪೂರ್ತಿ ಸತ್ಯವನ್ನು ತಿಳಿದುಕೊಳ್ಳುವವರೆಗು, ಒಂದು ನಿರ್ಧಾರಕ್ಕೆ ಬರಬಾರದು. ಒಂದು ನಿರ್ಧಾರಕ್ಕೆ ಬರುವುದಕ್ಕಿಂತ ಮೊದಲು ಆ ವಿಷಯ ಪೂರ್ತಿ ಶಾಸ್ತ್ರಬದ್ಧವಾದುದೋ ಅಲ್ಲವೊ ಶೋಧಿಸಿ ನೋಡಬೇಕು. ಶಾಸ್ತ್ರಬದ್ದವಾದಾಗಲೇ ಆ ವಿಷಯದ ಮೇಲೆ ನಿರ್ಧಾರಕ್ಕೆ ಬಂದು ಅದು ಸತ್ಯವಾದುದ್ದಾಗಿ ಹೇಳಬಹುದು. ಹಾಗಲ್ಲದೆ ಯಾರೋ ಹೇಳಿದ ಅಶಾಸ್ತ್ರೀಯ ಮಾತುಗಳನ್ನು ನಂಬಿ, ನಾವೂ ಸಹ ಹಾಗೇ ಹೇಳಿದರೇ ಅದು ಅಸತ್ಯವಾದನೆ ಆಗುತ್ತದೆ. ಆಗ ನಮ್ಮದು ಸತ್ಯಾನ್ವೇಷಣೆ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ.

(ರಾಘವ ತಾನು ತಪ್ಪಾಗಿ ಅರ್ಥ ಮಾಡಿಕೊಂಡಿದ್ದೇನೆಂದು ಗ್ರಹಿಸಿ, ತನ್ನ ತಪ್ಪನ್ನು ಅರ್ಥ ಮಾಡಿಕೊಂಡು ಸ್ವಾಮಿಯವರೊಂದಿಗೆ ವಿನಯದಿಂದ ಹೀಗೆ ಮಾತನಾಡಿದ್ದಾನೆ.)

**ರಾಘವ** :– ಸ್ವಾಮೀ! ನೀವಂದಹಾಗೆ ನಾನು ಸುಲಭವಾಗಿ ತಪ್ಪಾಗಿ ತಿಳಿದಿದ್ದೇನೆ. ಕೇಳಿದ ವಿಷಯ ಸತ್ಯವಾ ಅಲ್ಲವಾಯೆಂದು ಯೋಚಿಸಲಿಲ್ಲ. ನಿರ್ಧಾರ ಮಾಡದ ಮೊದಲೇ ಎಲ್ಲರಂತೆ ಸತ್ಯವೆಂದುಕೊಂಡಿದ್ದೇನೆ. ನನ್ನ ಮೆದುಳಿಗೆ ತಿಳಿಯದ ವಿಷಯಗಳು, ನನ್ನ ಯೋಚನೆಗೆ ಕಾಣಿಸದ ವಿಷಯಗಳು ಕೆಲವು ಇರುವುದರಿಂದ ನಾನು ತಪ್ಪಾಗಿ ತಿಳಿದಿದ್ದೇನೆ. ನನಗೆ ತಿಳಿಯದ ವಿಷಯಗಳನ್ನು ನಿಮ್ಮನ್ನು ಕೇಳಿ ತಿಳಿದುಕೊಳ್ಳಬೇಕು. ಆದರೆ ನಾನು ಹಾಗೆ ಕೇಳಿ ತಿಳಿದುಕೊಳ್ಳುವುದಕ್ಕೆ ಮೊದಲೇ ಒಂದು ನಿರ್ಧಾರಕ್ಕೆ ಬಂದಿದ್ದೇನೆ. ಈ ನನ್ನ ತಪ್ಪನ್ನು ಕ್ಷಮಿಸಿ ನನಗೆ ಅರ್ಥ ಆಗದಂತಹ ಮಹಿಮೆಗಳ ವಿವರವನ್ನು ಶಾಸ್ತ್ರೀಯವಾಗಿ ತಿಳಿಸಬೇಕೆಂದು ಕೋರುತ್ತಿದ್ದೇನೆ.

**ರಾಜಯೋಗಾನಂದ** :– ಸರಿ, ನೀನು ಮಹಿಮೆಗಳಲ್ಲಿನ ಶಾಸ್ತ್ರೀಯತೆಯನ್ನು ಕೋರಿದಕ್ಕೆ ಸಂತೋಷ. **ಪ್ರಪಂಚದಲ್ಲಿ ಒಂದು ವಿಷಯ ಶಾಶ್ವತವಾಗಿ ನಿಲ್ಲಬೇಕೆಂದರೆ ಅದಕ್ಕೆ ಶಾಸ್ತ್ರೀಯತೆ ಶ್ವಾಸದಂಥದ್ದು. ಶಾಸ್ತ್ರೀಯತೆ ಇಲ್ಲದೆ ಯಾವುದು ಸತ್ಯವಲ್ಲ, ಶಾಶ್ವತವೂ**

**ಅಲ್ಲ**. ನಿನಗೆ ಅರ್ಥವಾಗದ ವಿಷಯ ಮಹಿಮೆ. ಮಹಿಮೆ ಹತ್ತಿರ ನೀನು ಒಬ್ಬನೇ ಅಲ್ಲ, ನಿನಗಿಂತ ದೊಡ್ಡ ಮೇಧಾವಿಗಳು ಸಹ ತಪ್ಪಾಗಿ ತಿಳಿದಿದ್ದಾರೆ. ಆದ್ದರಿಂದ ಈ ವಿಷಯವನ್ನು ಜಾಗ್ರತೆಯಿಂದ ಕೇಳು. ಮಹಿಮೆ ಎನ್ನುವ ಪದದಲ್ಲಿ ದೊಡ್ಡ (ಶ್ರೇಷ್ಠ) ತನ ಎನ್ನುವ ಅರ್ಥ ಇದೆ. **ಮಹ + ಆತ್ಮ = ಮಹಾತ್ಮ ಆದಂತೆ, ಮಹ+ಆತ್ಯ= ಮಹಾತ್ಯ ಆಗುತ್ತಿದೆ.** ಹತ್ಯ ಎಂದರೆ ಸಾಯಿಸುವುದು ಎಂದು ಅರ್ಥ, ಹಾಗೇ ಆತ್ಯ ಎಂದರೆ ಜೀವಿಸುವಂತೆ ಮಾಡುವುದು ಎಂದು ಅರ್ಥ. ಇದನ್ನನುಸರಿಸಿ ದೊಡ್ಡದಾಗಿ ಜೀವಿಸುವಂತೆ ಮಾಡುವುದು ಎಂದು ಅರ್ಥವಾಗುತ್ತಿದೆ. ಒಂದು ಮಹಿಮೆ ಒಬ್ಬ ಮನುಷ್ಯನನ್ನು ದೊಡ್ಡದಾಗಿ ಹೊರಗಿನ ಮನುಷ್ಯರಿಗೆ ಕಾಣಿಸುವಂತೆ ಮಾಡುವು ದರಿಂದ ಆ ವ್ಯಕ್ತಿ ದೊಡ್ಡದಾಗಿ ಜೀವಿಸುವುದಕ್ಕೆ ಅವಕಾಶವಿದೆ. ಮಹಾತ್ಯ ಎನ್ನುವ ಶಬ್ದ ಕಾಲಕ್ರಮದಲ್ಲಿ ಮಹತ್ಯ ಎಂದು ಹೇಳಲಾಗುತ್ತಿದೆ. **ಮಹಾತ್ಯಗಳು ಮೂರು ವಿಧಗಳು ಇವೆ.** ಅದರಲ್ಲಿ ಎರಡು ವಿಧಗಳನ್ನು ಮನುಷ್ಯ ಮಾಡಬಲ್ಲನು. ಮನುಷ್ಯ ಮಾಡುವ ಎರಡು ವಿಧಗಳಲ್ಲಿ ಒಂದನ್ನು ಮನುಷ್ಯ ತನ್ನ ಹಸ್ತ ಚಳಕದಿಂದ ಮಾಡುತ್ತಾನೆ. ಹಾಗೇ ಎರಡನೆಯದನ್ನು ತಾನು ಕಲಿತ ಒಂದು ವಿಧವಾದ ವಿದ್ಯೆಯಿಂದ ಮಾಡಬಲ್ಲನು. ಮೂರನೆಯದನ್ನು ಯಾವ ಮನುಷ್ಯ ಮಾಡಲಾರನು. ಮೂರನೆ ವಿಧ ಮಹಿಮೆ ಮನುಷ್ಯನಿಗೆ ತಿಳಿಯದಂತೆ ನಡೆಯುತ್ತದೆ.

ಮನುಷ್ಯ ಮಾಡುವ ಎರಡು ವಿಧಗಳ ಮಹಿಮೆಗಳಿಗೆ ಹೆಸರುಗಳು ಸಹ ಇವೆ. ಅವುಗಳನ್ನೇ ಟಕ್ಕುಟಮಾರಾ (ಜಾದೂ), ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ ವಿದ್ಯೆಗಳೆನ್ನುತ್ತೇವೆ. ಈ ಮೂರು ವಿಧಗಳ ಹೆಸರುಗಳಲ್ಲಿ ಮನುಷ್ಯ ಮಾಡುವ ಮೊದಲನೆ ವಿಧ ಮಹಿಮೆಯನ್ನು ಟಕ್ಕುಟಮಾರಾ ವಿದ್ಯೆ ಎನ್ನುತ್ತಾರೆ. ಹಾಗೇ ಮನುಷ್ಯ ಮಾಡುವ ಎರಡನೆ ವಿಧ ಮಹಾತ್ಯವನ್ನು ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ ವಿದ್ಯೆಗಳೆನ್ನುತ್ತಾರೆ. ಈ ಎರಡು ವಿಧಗಳ ಮಹಿಮೆಗಳನ್ನು ಮನುಷ್ಯ ಕಲಿಯಬಹುದು. ಆದ್ದರಿಂದ ಇವನ್ನು ವಿದ್ಯೆಗಳು ಎನ್ನುತ್ತಿದ್ದೇವೆ. ಇನ್ನು ಮೂರನೆ ವಿಧ ಮಹಿಮೆಯನ್ನು ಯಾವ ಮನುಷ್ಯ ಮಾಡಲಾರನು, ಯಾವ ಮನುಷ್ಯ ಕಲಿಯುವುದಿಲ್ಲ. ಆದ್ದರಿಂದ ಅದು ಯಾವ ವಿದ್ಯೆ ಅಲ್ಲ. ಮೊದಲು ಎರಡು ವಿಧಗಳ ಮಹಿಮೆ ವಿದ್ಯೆಗಳಲ್ಲಿ ಮೊದಲನೆಯದು

ಟಕ್ಕುಟಮಾರಾ. ಇದನ್ನು ಮನುಷ್ಯ ಕೈಚಳಕದಿಂದ ಮಾಡುತ್ತಿದ್ದಾನೆ, ಉದಾಹರಣೆಗೆ ಒಂದು ರೂಪಾಯಿ ನಾಣ್ಯವನ್ನು ಕೈಯಲ್ಲಿ ಇಟ್ಟುಕೊಂಡು ಹಸ್ತ ಲಾಘವದಿಂದ, ಇಲ್ಲದಂತೆ ಒಂದು ಸಲ, ಇದ್ದಂತೆ ಒಂದು ಸಲ ತೋರಿಸುವುದು. ಅದನ್ನು ನೋಡುವವರು ಇರುವ ರೂಪಾಯಿಯನ್ನು ಮಾಯೆ ಮಾಡಿದ್ದಾನೆಂದು, ಹಾಗೇ ಇಲ್ಲದ ರೂಪಾಯಿಯನ್ನು ಸೃಷ್ಠಿಸಿ ತೋರಿಸಿದ್ದಾನೆಂದು ತಿಳಿದುಕೊಳ್ಳುತ್ತಾರೆ. ಇದರಿಂದ ಅದು ಮೊದಲ ವಿಧ ಮಹಾತ್ಯವಾಗುತ್ತಿದೆ. ಇನ್ನು ಎರಡನೆ ವಿಧ ಮಹಿಮೆ ಮಂತ್ರ ವಿದ್ಯೆಯಿಂದ ಬರುತ್ತಿದೆ. ಮನುಷ್ಯನಿಗೆ ಕಾಣಿಸದ ಎಷ್ಟೋ ದೊಡ್ಡ ವಸ್ತುವನ್ನಾದರೂ ಕಾಣಿಸುವಂತೆ ಮಾಡುವುದು, ಹಾಗೇ ಕಾಣಿಸುವ ಯಾವುದನ್ನಾದರೂ ಕಾಣಿಸದಂತೆ ಮಾಡುವುದನ್ನು ಇಂದ್ರಜಾಲ ಮಹೇಂದ್ರಜಾಲ ವಿದ್ಯೆ ಎನ್ನುತ್ತಿದ್ದೇವೆ. ಅದೇ ವಿಧವಾಗಿ ನಮಗೆ ಕೇಳಿಸದ ಶಬ್ಧವನ್ನು ತಾನು ಕೇಳಿ ಹೇಳುವುದನ್ನು ಗಜಕರ್ಣ ಗೋಕರ್ಣವಿದ್ಯೆ ಎನ್ನುತ್ತೇವೆ. ಎರಡನೆ ವಿಧವಾದ ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ ವಿದ್ಯೆಗಳನ್ನು ಮನುಷ್ಯ ಮಂತ್ರಶಕ್ತಿಯಿಂದ ಹೊಂದುತ್ತಿದ್ದಾನೆ. ಮೂರನೆ ವಿಧ ಮಹಿಮೆ ಮನುಷ್ಯನಿಗೆ ಸಂಬಂಧವಿಲ್ಲದ್ದು. ಅದನ್ನು ಸ್ವತಃವಾಗಿ ಪ್ರಕೃತಿ (ಮಾಯೆ) ಯೇ ಮಾಡುತ್ತದೆ. ನೀನು ದಾದಾಬಾಬಾರವರ ಹತ್ತಿರ ನಡೆಯುತ್ತಿರುವ ಮಹಿಮೆಯೇನೋ ಹೇಳು ಅದು ಯಾವ ವಿಧವಾದ ಮಹಿಮೆಯೊ, ಅದು ಹೇಗೆ ನಡೆಯುತ್ತಿದೆಯೋ ವಿವರಿಸಿ ಹೇಳಬಲ್ಲೆನು.

**ರಾಘವ :–** ಸ್ವಾಮೀ! ದಾದಾಬಾಬಾರವರು ತನ್ನಕೈಯಿಂದ ವಿಭೂತಿ ಕೊಡುತ್ತಿದ್ದಾರೆ. ಹಾಗೇ ಚಿನ್ನದ ಉಂಗುರಗಳನ್ನೂ, ಚಿನ್ನದ ಸರಗಳನ್ನು ಕೊಡುತ್ತಿದ್ದಾನೆ. ಬಾಬಾರವರು ಹಾಗೆ ಕೊಡುವುದನ್ನು ಯಾವ ಮಹಿಮೆ ಎನ್ನಬಹುದು? ಇದು ಆತ್ಮ ಜ್ಞಾನಕ್ಕೆ ಸಂಬಂಧವಿಲ್ಲವಾ? ಇದು ಬ್ರಹ್ಮವಿದ್ಯೆ ಅಲ್ಲವಾ?

**ರಾಜಯೋಗಾ :–** ಪ್ರಪಂಚದಲ್ಲಿ ಎಲ್ಲಿ ಯಾರು ಯಾವ ಮಹಿಮೆಯನ್ನು ತೋರಿಸಿದರೂ, ಅದು ಪ್ರಪಂಚ ವಿದ್ಯೆಯೇ, ಆದರೆ ಪರಮಾತ್ಮ ವಿದ್ಯೆ ಅಲ್ಲ. ಯಾವ ಮಹಿಮೆಯಾದರೂ ಪ್ರಕೃತಿ (ಮಾಯೆ) ಯಿಂದ ನಡೆಯುವುದೇ, ಆದರೆ

ಪರಮಾತ್ಮನಿಂದ ನಡೆಯುವುದಲ್ಲ. ಯಾವ ಮಹಿಮೆಯಾದರೂ ಆತ್ಮಜ್ಞಾನಕ್ಕೆ ಸಂಬಂಧವಿಲ್ಲ. ದಾದಾಬಾಬಾರವರು ವಿಭೂತಿ ಕೊಟ್ಟಿದ್ದಾರೆನ್ನುತ್ತಿದ್ದೀಯಲ್ಲವೆ! ಹಾಗೆ ವಿಭೂತಿ ಕೊಡುವವರು ಇನ್ನೂ ಕೆಲವರಿದ್ದಾರೆ. ಅದು ಟಕ್ಕುಟಮಾರಾ ವಿದ್ಯೆಗಳೊಳಗೆ ಬರುತ್ತದೆ. ವಿಭೂತಿಯನ್ನು ಕೆಲವರು ಬಾಬಾಗಳು ಕೊಡುತ್ತಿರುವಾಗ ಅದು ಮಹಿಮೆಯಲ್ಲ, ಅದು ಇತರರನ್ನು ಮೋಸ ಮಾಡುವುದಕ್ಕೆ ಮಾಡುವ ಮೋಸಪೂರಿತ ಕೆಲಸವೆಂದು, ಅಂತಹ ಟ್ರಿಕ್‌ನ್ನು (ಕೈಚಮತ್ಕಾರವನ್ನು) ನಾವು ಮಾಡಿ ತೋರಿಸಬಲ್ಲೆವೆಂದು ಕೆಲವರು ನಾಸ್ತಿಕವಾದಿಗಳು, ವಿಜ್ಞಾನ ವೇದಿಕೆಯವರು ಸಹ ವಿಭೂತಿಯನ್ನು ಕೈಯಿಂದ ಕೊಡುತ್ತಿದ್ದಾರೆ. ಅಂತಹ ಕೆಲಸವನ್ನು ಹೇಗೆ ಮಾಡಬಹುದೋ ಸಹ ವಿವರವಾಗಿ ಹೇಳುತ್ತಿದ್ದಾರೆ. ಬಾಬಾಗಳು ಕೊಡುವಹಾಗೆ ತಾವು ಸಹ ಕೈಯಿಂದ ವಿಭೂತಿಯನ್ನು ಕೊಡುತ್ತಾ, ಈ ಕೆಲಸ ಸ್ವಲ್ಪ ಚಾಕಚಕ್ಯತೆ ಇರುವವರು ಯಾರಾದರೂ ಮಾಡಬಹುದೆಂದು ತೋರಿಸುತ್ತಿದ್ದಾರೆ. ಆದ್ದರಿಂದ ಬಾಬಾಗಳು ವಿಭೂತಿ ಕೊಟ್ಟರೂ, ಹೊರಗೆ ಕೆಲವರಿಗೆ ಅದು ಮಹಿಮೆಯಾಗಿ ಕಾಣಿಸಿದರೂ, ಕೊನೆಗೆ ಅದು ಪ್ರಾಪಂಚಿಕ ವಿದ್ಯೆಯೇಯೆಂದು ತಿಳಿದು ಹೋಗಿದೆ. ಕೈಚಳಕದಿಂದ ತಮ್ಮ ಹತ್ತಿರ ಇಟ್ಟುಕೊಂಡ ವಿಭೂತಿಯನ್ನು ಆಗಲೇ ಸೃಷ್ಟಿಸಿದಂತೆ ನಟಿಸಿ ಕೊಟ್ಟರೂ, ಅದು ಟಕ್ಕುಟಮಾರಾ ವಿದ್ಯೆ ಎಂದೂ, ಗಾರುಡಿ ಮಾಡುವವನು ಮಾಡುವ ಮ್ಯಾಜಿಕ್‌ನಂತಹದೆಂದು ತಿಳಿದುಹೋಗಿದೆ. ಆದ್ದರಿಂದ ಅದು ಆತ್ಮಜ್ಞಾನ ಅಲ್ಲವೆಂದು ಹೇಳಬಹುದು.

ನಾಸ್ತಿಕವಾದಿಗಳು ಕೇವಲ ಬಾಬಾಗಳನ್ನು ವಿಮರ್ಶಿಸುವುದನ್ನೇ ತಮ್ಮ ಕೆಲಸವಾಗಿ ಇಟ್ಟುಕೊಂಡಿದ್ದಾರೆ. ಆದ್ದರಿಂದ ಕೆಲವರು ಬಾಬಾಗಳು ಮಾಡುವ ವಿಭೂತಿ ಮಹಿಮೆಯನ್ನು ತಾವೂ ಸಹ ಮಾಡಿ ತೋರಿಸಿ, ಇದು ಕೈಚಳಕದಿಂದ ಮಾಡುವ ಕೆಲಸವೇಯೆಂದು ಮಹಿಮೆಯಲ್ಲವೆಂದು ಋಜುವು ಮಾಡುತ್ತಿದ್ದಾರೆ. ಇಂತಹ ಟಕ್ಕುಟಮಾರಾ ಮಹಿಮೆಗಳಲ್ಲಿ ಕೆಲವನ್ನು ನಾಸ್ತಿಕವಾದಿಗಳು, ವಿಜ್ಞಾನವಾದಿಗಳೂ ಮಾಡಿ ತೋರಿಸುವುದೇ ಅಲ್ಲದೆ, ಮಹತ್ವಗಳೆಲ್ಲವು ಇತರರನ್ನು ಮೋಸ ಮಾಡುವ ಮ್ಯಾಜಿಕ್ ವಿದ್ಯೆಗಳೇ ಎಂದು ಪ್ರಚಾರ ಮಾಡುತ್ತಿದ್ದಾರೆ. ಆದರೆ ಮಹಿಮೆಗಳು ಮೂರು ವಿಧಗಳೆಂದು, ಅವುಗಳಲ್ಲಿ ತಮಗೆ ತಿಳಿದಿರುವುದು

ಒಂದೇ ವಿಧವೆಂದು ನಾಸ್ತಿಕವಾದಿಗಳಿಗೂ, ವಿಜ್ಞಾನವಾದಿಗಳಿಗೂ ತಿಳಿದಿಲ್ಲ. ಕೆಲವು ಟಕ್ಕುಟಮಾರಾ ವಿದ್ಯೆಗಳನ್ನು ಮಾಡಿ ತೋರಿಸಿದರೂ ಉಳಿದ ಎರಡನೆ ವಿಧ ಮಂತ್ರ ವಿದ್ಯೆಗಳಾದ ಇಂದ್ರಜಾಲ, ಮಹೇಂದ್ರಜಾಲ, ಗಜಕರ್ಣ ಗೋಕರ್ಣ ವಿದ್ಯೆಗಳನ್ನು ಮಾಡಿ ತೋರಿಸಲಾರರು. ಒಂದು ವೇಳೆ ಈ ಎರಡನೆ ವಿಧ ಮಹಿಮೆಗಳನ್ನು ಸಹ ಟಕ್ಕುಟಮಾರಾ ವಿದ್ಯೆಗಳಂತೆ ಕೈಚಳಕದಿಂದ ಮಾಡುವ ವಿದ್ಯೆಗಳೇಯೆಂದು ಇತರರಿಗೆ ಹೇಳಿ ನಂಬಿಸಿದರೂ, ವಾಸ್ತವವಾಗಿ ನಾಸ್ತಿಕವಾದಿಗಳು ಅವುಗಳನ್ನು ಮಾಡಿ ತೋರಿಸಲಾರರು. ಇನ್ನು ಮೂರನೆ ವಿಧ ಮಹಿಮೆ ಕೇವಲ ಕೆಲವರು ಮುಖ್ಯವಾದ ಸ್ವಾಮೀಜಿಗಳು, ಬಾಬಾಗಳ ಹತ್ತಿರ ಮಾತ್ರವೇ ನಡೆಯುತ್ತಿರುತ್ತದೆ. ಅಂತಹ ಮಹಿಮೆಗಳನ್ನು ನಾಸ್ತಿಕವಾದಿಗಳು ಸಹ ವಿವರವಾಗಿ ಖಂಡಿಸಲಾರರು. ಅವುಗಳ ವಿಷಯದಲ್ಲಿ ಮೌನವಾಗಿ ಇರುತ್ತಾರೆ. ಮೂರನೆ ವಿಧ ಮಹಿಮೆಗಳನ್ನು ಮ್ಯಾಜಿಕ್ ವಿದ್ಯೆಗಳಾಗಿ ಹೇಳುವುದಕ್ಕೂ ಸಹ ಆಗುವುದಿಲ್ಲ. ಆದ್ದರಿಂದ ಇವುಗಳ ವಿಷಯದಲ್ಲಿ ವಿಜ್ಞಾನಿಗಳೆನ್ನುವವರಾಗಲೀ, ನಾಸ್ತಿಕರೆನ್ನುವ ವರಾಗಲಿ ಏನೂ ಮಾತನಾಡುವುದಿಲ್ಲ. ಈಗ ಎರಡನೆ ವಿಧ ಮಹಿಮೆಗಳಾದ ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ ವಿದ್ಯೆಗಳನ್ನು ಕುರಿತು ಹೇಳುತ್ತೇನೆ ಕೇಳು.

ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ ವಿದ್ಯೆಗಳು ಕೈಚಳಕಗಳಲ್ಲ. ಇವು ಮಂತ್ರಶಕ್ತಿಯಿಂದ ಕೂಡಿಕೊಂಡಿರುವವು. ಪೂರ್ವದಲ್ಲಿ ಈ ವಿದ್ಯೆಗಳಿಗೆ ಬೆಲೆ, ಆದರಣೆ ಇತ್ತು. ಆದ್ದರಿಂದ ಪೂರ್ವಕಾಲದಲ್ಲಿ ಬಹಳ ಜನ ಈ ವಿದ್ಯೆಗಳನ್ನು ಕಲಿತುಕೊಳ್ಳುತ್ತಿದ್ದರು. ಆದ್ದರಿಂದ ಮಂತ್ರವಿದ್ಯೆಗಳ ವಿವರ ಆದಿನ ಎಲ್ಲರಿಗೂ ತಿಳಿದಿರುತ್ತಿತ್ತು. ಕಾಲಕ್ರಮದಲ್ಲಿ ಆ ಮಂತ್ರ ವಿದ್ಯೆಗಳು ಕಾಣಿಸದಂತೆ ಹೋಗಿವೆ. ಅವುಗಳ ಅವಗಾಹನೆ ಯಾರಿಗೂ ಇಲ್ಲದಂತೆ ಹೋಗಿದೆ. ಆದರೂ ಇಂದಿನ ಕಾಲದಲ್ಲಿ ಸಹ ಎಲ್ಲೋ ಒಂದು ಕಡೆ ಸ್ವಲ್ಪ ಜನ ಮಾತ್ರವೇ ಈ ವಿದ್ಯೆಗಳನ್ನು ತಿಳಿದವರಿದ್ದಾರೆ. ಅಂತಹವರು ಕೇರಳ ರಾಜ್ಯದಲ್ಲಿ ಇದ್ದಾರೆಂದು ಹೇಳಬಹುದು. ಮಂತ್ರ ವಿದ್ಯೆಗಳಿಗೆ ಮಳಯಾಲ ದೇಶವಾದ ಕೇರಳರಾಜ್ಯ ತವರು ಮನೆಯಂತಹದು. ಆಂಧ್ರರಾಜ್ಯದಲ್ಲಿ ಮಂತ್ರವಿದ್ಯೆ ತಿಳಿದವರು ಬಹಳ ಕಡಿಮೆ

ಇದ್ದಾರೆ. ಹಾಗೆ ತಿಳಿದವರು ಬಾಬಾಗಳಾಗಿ, ಸ್ವಾಮೀಜಿಗಳಾಗಿ ಚಲಾವಣೆ ಆಗುತ್ತಿದ್ದಾರೆ. ತಮ್ಮ ಮಂತ್ರವಿದ್ಯೆಯಿಂದ ಕೆಲವು ಮಹಿಮೆಗಳು ಮಾಡುವವರು, ಆ ಮಹಿಮೆಗಳು ತಮಗಿರುವ ದೈವಶಕ್ತಿಯಿಂದ ನಡೆದಿದೆಯೆಂದು ಪ್ರಚಾರ ಮಾಡುವುದರಿಂದ, ಪ್ರಜೆಗಳ ದೃಷ್ಟಿಯಲ್ಲಿ ಅಂತಹವರು ದೊಡ್ಡ ದೊಡ್ಡ ಸ್ವಾಮೀಜಿಗಳಾಗಿ ಬಾಬಾಗಳಾಗಿ ಚಲಾವಣೆ ಆಗುತ್ತಿದ್ದಾರೆ. ಆದರೆ ವಿಜ್ಞಾನತಜ್ಞರು ಮಂತ್ರ ಶಕ್ತಿಯನ್ನು ವಿಶ್ವಾಸಿಸುವುದಿಲ್ಲ. ವಿಜ್ಞಾನತಜ್ಞರಿಗೆ ಸ್ಥೂಲ ಹೊರತು ಸೂಕ್ಷ್ಮ ತಿಳಿದಿಲ್ಲ. ಅಂತಹವರು ಕೇವಲ ಕಾಣಿಸುವ ಭೌತಿಕವನ್ನು ಮಾತ್ರವೇ ನಿಜವೆಂದು, ಅಭೌತಿಕ ಅಸತ್ಯವೆಂದು ಹೇಳುತ್ತಿರುವರು. ಮಂತ್ರಶಕ್ತಿ ಅಭೌತಿಕವಾದದ್ದು. ಆದ್ದರಿಂದ ವಿಜ್ಞಾನಿಗಳು ಮಂತ್ರಗಳನ್ನಾಗಲೀ, ಅವುಗಳ ಶಕ್ತಿಯನ್ನಾಗಲೀ ನಂಬುವುದಿಲ್ಲ. ಯಾರು ನಂಬಿದರೂ ನಂಬದಿದ್ದರೂ ಮಂತ್ರಶಕ್ತಿ ಇದೆ. ಆದ್ದರಿಂದ ಆ ಶಕ್ತಿಯಿಂದ ಕೆಲವು ಕೆಲಸಗಳು ನಡೆಯುತ್ತಿವೆ. ಆ ಕೆಲಸಗಳನ್ನು ಕೆಲವರು ನಾಸ್ತಿಕವಾದಿಗಳು, ವಿಜ್ಞಾನ ತಜ್ಞರು ಮಂತ್ರಶಕ್ತಿಯಿಂದ ನಡೆದಿರುವವೆಂದು ತಿಳಿಯದೆ, ಅವುಗಳನ್ನು ಸಹ ಮನುಷ್ಯ ಮಾಡಿದ ಕೆಲಸಗಳಾಗಿ ವರ್ಣಿಸುತ್ತಿದ್ದಾರೆ. ಉದಾಹರಣೆಗೆ ಮಂತ್ರಶಕ್ತಿಯಿಂದ ನಡೆದ ಒಂದು ಕೆಲಸವನ್ನು ವಿವರಿಸಿಕೊಂಡು, ಅದನ್ನು ನಾಸ್ತಿಕರು, ವಿಜ್ಞಾನಿಗಳು ಹೇಗೆ ಖಂಡಿಸುತ್ತಿದ್ದಾರೋ ವಿವರಿಸಿಕೊಳ್ಳೋಣ.

ಒಬ್ಬ ಸ್ವಾಮೀಜಿ ಸಮುದ್ರ ಪ್ರಾಂತದಲ್ಲಿನ ಒಂದು ಬೀಚ್‌ಗೆ ಹೋಗಿದ್ದಾನೆ. ಆಗ ಆ ಸ್ವಾಮಿ ಹಿಂದೆ ನೂರೆಂಟು ಜನ ಅಲ್ಲಿಗೆ ಹೋಗುವುದು ನಡೆದಿದೆ. ಸ್ವಾಮಿಯವರ ಹಿಂದೆ ಬಂದಿರುವ ಭಕ್ತರೇ ಅಲ್ಲದೆ, ಅಲ್ಲಿ ಬೀಚ್‌ನಲ್ಲಿರುವ ಅನೇಕ ಜನ ಸಹ ಸ್ವಾಮಿಯನ್ನು ನೋಡುವುದಕ್ಕೆ ಅಲ್ಲಿಗೆ ಬಂದಿದ್ದಾರೆ. ಹಾಗೆ ಎಷ್ಟೋ ಜನ ಇರುವ ಸಮಯದಲ್ಲಿ ಬಾಬಾರವರು ಒಬ್ಬ ಭಕ್ತನನ್ನು ಕರೆದು, ನಿನಗೆ ಒಂದು ಕಾಣಿಕೆಯನ್ನು ಕೊಡುತ್ತೇನೆ ತೆಗೆದುಕೋ ಎಂದಿದ್ದಾನೆ. ಅದಕ್ಕೆ ಆ ಭಕ್ತನು ಮತ್ತು ಪಕ್ಕದಲ್ಲಿರುವವರು ಸ್ವಾಮಿಯವರು ಏನು ಕೊಡುತ್ತಿದ್ದಾರೋ ಎಂದು ಆತುರದಿಂದ ನೋಡುತ್ತಿದ್ದಾರೆ. ಆಗ ಸ್ವಾಮಿರವರು ತನಗೆ ಆರುಅಡಿಗಳ ದೂರದಲ್ಲಿರುವ ಮರಳಿನ ಕಡೆ ಕೈಯನ್ನು ತೋರಿಸಿ, ಅಲ್ಲಿ ತೆಗೆದು ನೋಡೆಂದಿದ್ದಾನೆ. ಆಗ ಆ ಭಕ್ತನು ಹಾಗೇ ಮಾಡಿದಾಗ ಮರಳಿನಲ್ಲಿ ಆತನಿಗೆ ಭಗವದ್ಗೀತೆ ಗ್ರಂಥ

ಕಾಣಿಸಿತು. ಅದನ್ನು ನೋಡಿದ ಆ ಭಕ್ತನು ಉಳಿದವರೆಲ್ಲರೂ ಅದು ಸ್ವಾಮಿರವರ ಮಹಿಮೆಯೆಂದು ಸಂತೋಷಪಟ್ಟರು. ಸ್ವಾಮಿಯವರು ನೋಡೆಂದ ಕಡೆ ಸ್ವಲ್ಪ ಮರಳನ್ನು ತೆಗೆದಕೂಡಲೇ ಗೀತಾ ಗ್ರಂಥ ಲಭಿಸುವುದು ಅಲ್ಲಿರುವವರೆಲ್ಲರಿಗೂ ಅದು ದೊಡ್ಡ ಮಹಿಮೆಯಾಗಿ, ಸ್ವಾಮಿಯವರು ದೊಡ್ಡ ದೈವಶಕ್ತಿ ಸಂಪನ್ನನಾಗಿ ತಿಳಿಯಿತು. ಅಷ್ಟೇ ಅಲ್ಲದೆ ಸ್ವಾಮಿರವರು ಇನ್ನೂ ಸ್ವಲ್ಪ ದೂರ ನಡೆದುಹೋದ ನಂತರ ಆತನನ್ನೇ ಅನುಸರಿಸುತ್ತಿರುವ ಮತ್ತೊಬ್ಬ ಭಕ್ತನನ್ನು ನೋಡಿ ಆತನನ್ನು ಕರೆದಿದ್ದಾನೆ. ಆತನು ಒಬ್ಬ ವಿದೇಶೀ ಸೈಂಟಿಸ್ಟ್, ಆತನು ಸ್ವಾಮಿರವರು ಮಾಡುವವು ಮಹಿಮೆಗಳು ಅಲ್ಲ ಮೋಸಪೂರಿತ ಕಾರ್ಯಗಳೆಂದು, ಅವುಗಳನ್ನು ಆಧಾರ ಪೂರಿತವಾಗಿ ಕಂಡುಹಿಡಿದು ಹೊರಗೆ ತಿಳಿಸಬೇಕೆಂದು ಬಂದ ವ್ಯಕ್ತಿ. ಸ್ವಾಮಿಯವರು ಸಾಧಾರಣವಾಗಿ ಕರೆದಂತೆ ಆತನನ್ನು ಕರೆದಿದ್ದಾನೆ. ಆದರೆ ಆತನು ತನ್ನ ಮೇಲೆಯೆ ಪರಿಶೋಧನೆ ಮಾಡುವುದಕ್ಕೆ ಬಂದ ವ್ಯಕ್ತಿಯೆಂದು ನಿಜಕ್ಕೆ ಸ್ವಾಮಿಯವರಿಗೂ ಸಹ ತಿಳಿದಿಲ್ಲ. ಸಾಧಾರಣವಾಗಿ ಸ್ವಾಮಿ ಆತನನ್ನು ಕರೆದು ಇಲ್ಲಿ ನಿನಗೆ ಇಷ್ಟಬಂದ ಕಡೆ ಮರಳನ್ನು ತೆಗೆದು ನೋಡು. ಅಲ್ಲಿ ನಿನಗೆ ಬಂಗಾರದ ಸರ ಸಿಗುತ್ತದೆ. ಅದನ್ನು ನೀನು ಧರಿಸು. ಅದು ನಿನ್ನ ಕೊರಳಲ್ಲಿ ಇರುವವರೆಗು ನಿನಿಗೆ ಎಲ್ಲಾ ಒಳ್ಳೆಯದೇ ನಡೆಯುತ್ತದೆಂದಿದ್ದಾನೆ.

ಆಗ ಆ ವಿದೇಶೀ ಭಕ್ತನು ಸ್ವಾಮಿಯವರ ಮಾತಿನ ಪ್ರಕಾರ ಮರಳನ್ನು ತೆಗೆದು ನೋಡಬೇಕೆಂದುಕೊಂಡಿದ್ದಾನೆ. ಆಗ ಆತನು ತನ್ನ ಪರಿಶೋಧನೆ ದೃಷ್ಠಿಯಲ್ಲಿ ಇಟ್ಟುಕೊಂಡು ಅಲ್ಲಿರುವ ಪ್ರಜೆಗಳೆಲ್ಲರೂ ನೋಡುತ್ತಿದ್ದಂತೆ ಸ್ವಾಮಿಯವರಿಗೆ ಎಡಗಡೆ 20 ಅಡಿಗಳ ದೂರದಲ್ಲಿ ಮರಳನ್ನು ತೆಗೆದು ನೋಡಬೇಕೆಂದುಕೊಂಡಿದ್ದಾನೆ. ಹಾಗೆ ಅಂದುಕೊಂಡ ಕೂಡಲೇ ಸುಮಾರು 20 ಅಡಿಗಳು ಸ್ವಾಮಿಯವರಿಂದ ಎಡಗಡೆಗೆ ಹೋಗಿ ಅಲ್ಲಿ ಕುಳಿತುಕೊಂಡು ಸ್ವಲ್ಪ ಸ್ವಲ್ಪ ಮರಳನ್ನು ತೊಲಗಿಸ ತೊಡಗಿದನು. ಹಾಗೆ ಒಂದು ಅಡಿ ಆಳ ತೆಗೆಯುತ್ತಲೇ ಅಲ್ಲಿ ಸ್ವಾಮಿಯವರು ಹೇಳಿದಂತೆ ಚಿನ್ನದ ಸರ ಕಾಣಿಸಿತು. ಆಗ ಆ ವಿದೇಶೀ ಭಕ್ತನು ಮತ್ತು ಅಲ್ಲಿರುವವರೆಲ್ಲರೂ ಆಶ್ಚರ್ಯಪಟ್ಟಿದ್ದಾರೆ. ಮೊದಲು ಒಬ್ಬ ಭಕ್ತನಿಗೆ ಸ್ವಾಮಿಯವರು ತೋರಿಸಿದ ಜಾಗಾದಲ್ಲಿ ಭಗವದ್ಗೀತೆ ಗ್ರಂಥ ಸಿಕ್ಕಿದೆ. ಎರಡನೆ ಸಲ ಸ್ವಾಮಿಯವರು

ಸ್ಥಳವನ್ನು ತೋರಿಸದಂತೆ ನಿನ್ನ ಇಷ್ಟಬಂದ ಕಡೆ ಅಗೆದು ನೋಡು ಚಿನ್ನದ ಸರ ಸಿಗುತ್ತದೆಂದು ಹೇಳಿದ್ದಾನೆ. ಹಾಗೆಯೇ ಸಿಕ್ಕಿದೆ, ಅಲ್ಲಿರುವ ಪ್ರಜೆಗಳು ಸ್ವಾಮಿಯವರನ್ನು ನಿಜವಾದ ದೇವರಾಗಿ ವರ್ಣಿಸಿ ಹೇಳಿಕೊಳ್ಳುವುದು ನಡೆದಿದೆ. ಈ ವಿಷಯವೆಲ್ಲಾ ಎರಡನೆ ದಿನ ವಾರ್ತಾಪತ್ರಿಕೆಗಳಲ್ಲಿ ಪ್ರಚಾರಿಸಲಾಗಿದೆ. ಆ ವಿಷಯ ಆ ಸಮಯದಲ್ಲಿ ಅಲ್ಲಿರುವ ಭಕ್ತರಿಗೇ ಅಲ್ಲದೆ ಅಲ್ಲಿಲ್ಲದ ಪ್ರಜೆಗಳೆಲ್ಲರಿಗೂ ಪತ್ರಿಕೆಗಳಿಂದ ತಿಳಿದುಹೋಯಿತು. ಮರುದಿನ "ಮಹಿಮೆಯಾ–ಮೋಸವಾ" ಎನ್ನುವ ವಾರ್ತೆಯನ್ನು ವಿಜ್ಞಾನವಾದಿಗಳು ಹೇಳಿದಂತೆ ವಾರ್ತಾಪತ್ರಿಕೆಗಳಲ್ಲಿ ಬಂದಿದೆ. ಅದರಲ್ಲಿ ಸ್ವಾಮಿಯವರು ಮಾಡಿರುವುದು ಮಹಿಮೆ ಅಲ್ಲವೆಂದು, ತಾನು ಮೊದಲೇ ಭಗವದ್ಗೀತೆಯನ್ನು ಒಂದು ಜಾಗಾದಲ್ಲಿ ಹೂತಿಟ್ಟು, ಆ ಜಾಗಾದಲ್ಲೇ ತೆಗೆಯಬೇಕೆಂದು ಹೇಳಿದ್ದಾನೆಂದು ಅದು ಮೋಸವೆಂದು, ಹಾಗೇ ತನಗೆ ಅನುಕೂಲವಾದ ಭಕ್ತನಿಂದ ನಿನ್ನ ಇಷ್ಟಬಂದ ಜಾಗಾದಲ್ಲಿ ಅಗೆದು ನೋಡು, ಚಿನ್ನದ ಸರ ಸಿಗುತ್ತದೆಂದು ಹೇಳಿದ್ದಾನೆಂದು, ಆ ಭಕ್ತನು ಮೊದಲೇ ತಾನು ಹೂತಿಟ್ಟ ಜಾಗಾದಲ್ಲೆ ಅಗೆದು ಚಿನ್ನದ ಸರವನ್ನು ತೆಗೆದಿದ್ದಾನೆಂದು, ಇದು ಆ ಭಕ್ತನೂ ಸ್ವಾಮಿ ಇಬ್ಬರೂ ಸೇರಿ ಆಡಿದ ನಾಟಕವೆಂದು, ಅದರಲ್ಲಿ ಆ ವಿದೇಶೀ ಭಕ್ತನು ಸಹ ಭಾಗಿಯಾಗಿದ್ದಾನೆಂದು, ಅ ಭಕ್ತನು ಹಾಗೆ ಮಾಡಿರುವುದಕ್ಕೆ ಕೋಟಿ ರೂಪಾಯಿಗಳು ಆ ಭಕ್ತನಿಗೆ ಕೊಟ್ಟಿದ್ದಾರೆಂದು, ಹೀಗೆ ಸ್ವಾಮಿಯವರು ತನ್ನ ಮಹಿಮೆಯನ್ನು, ತನ್ನ ದೊಡ್ಡಸ್ತಿಕೆಯನ್ನು ಮೋಸಪೂರಿತ ಕೆಲಸಗಳಿಂದ ಹೊರಗೆ ಕಾಣಿಸುವಂತೆ ಮಾಡಿ, ಪ್ರಜೆಗಳನ್ನು ತನ್ನ ಭಕ್ತರಾಗಿ ಬದಲಾಯಿಸಿಕೊಳ್ಳುತ್ತಿದ್ದಾರೆಂದು ವಾರ್ತೆಗಳಲ್ಲಿ ಬರೆದಿರುವುದು ನಡೆದಿದೆ.

ಈಗ ವಿಜ್ಞಾನವಾದಿಗಳು, ನಾಸ್ತಿಕವಾದಿಗಳು ವಾರ್ತಾ ಪತ್ರಿಕೆಗಳಲ್ಲಿ ಸ್ವಾಮಿಯವರ ಮೇಲೆ ಮಾಡಿದ ಆರೋಪಣೆ ಪೂರ್ತಿ ಅವಾಸ್ತವವಾದದ್ದು. ಸ್ವಾಮಿಯವರು ಹೀಗೆ ಮಾಡಿದ್ದಾನೆಂದು ವಾರ್ತೆಗಳು ಬರೆಯುವುದು ಪೂರ್ತಿ ತಪ್ಪು. ವಿಜ್ಞಾನವಾದಿಗಳು ವಿವರಿಸಿದಂತೆ ಅಲ್ಲಿ ನಡೆಯಲಿಲ್ಲ. ಆದ್ದರಿಂದ ಅವರ ಆರೋಪಣೆ ಪೂರ್ತಿ ಆಧಾರವಿಲ್ಲದ್ದೆಂದು ಹೇಳಬಹುದು. ವಾಸ್ತವಕ್ಕೆ ಸ್ವಾಮಿಯವರು ಮಾಡಿರುವುದು ಎರಡನೆ ವಿಧದ ಮಹಿಮೆ. ಅದು ಸ್ವಾಮಿಯವರ ಮಂತ್ರಶಕ್ತಿಯಿಂದ

ನಡೆದಿದೆ. ಆದರೆ ಮೊದಲೇ ಆ ವಸ್ತುಗಳನ್ನು ಅಲ್ಲಿ ಹೂತಿಟ್ಟಿದ್ದಾನೆನ್ನುವುದು, ವಿದೇಶಿ ಭಕ್ತನು ಸಹ ಸ್ವಾಮಿಯವರು ಹೇಳಿದಂತೆ ನಟಿಸಿದ್ದಾನೆಂದು ಹೇಳುವುದು ಪೂರ್ತಿ ಅವಾಸ್ತವ. ಒಂದು ವಿಧವಾಗಿ ಹೇಳಿದರೆ ಸ್ವಾಮಿ ಮಾಡಿರುವುದು ಮಹಿಮೆಯಲ್ಲ ಮಂತ್ರ. ಆದರೂ ಸ್ವಾಮಿಗೆ ಮಂತ್ರವೆಂದು ತಿಳಿದೂ, ಪ್ರಜೆಗಳನ್ನು ಮಹಿಮೆಯೆಂದು ನಂಬಿಸಿದ್ದಾನೆ. ಸ್ವಾಮಿ ಹಾಗೆ ಮಾಡಿದರೂ ವಿಜ್ಞಾನಿಗಳು, ನಾಸ್ತಿಕವಾದಿಗಳು ಅಂದುಕೊಂಡಂತೆ ಮಾತ್ರ ಅಲ್ಲ. ಸ್ವಾಮಿಯವರು ಮೊದಲನೆ ಭಕ್ತನಿಗೆ ಹೇಳಿದಾಗ ಆತನ ಸಂಕಲ್ಪದಿಂದಲೇ ಭಗವದ್ಗೀತಾ ಗ್ರಂಥ ಸಿಕ್ಕಿದೆ. ಹಾಗೆಯೇ ಎರಡನೆ ವಿದೇಶೀ ಭಕ್ತನಿಗೆ ಹೇಳಿದಾಗ ಸಹ ಸ್ವಾಮಿ ಸಂಕಲ್ಪದಿಂದಲೇ ಆತನಿಗೆ ಚಿನ್ನದ ಸರ ಸಿಕ್ಕಿದೆ. ಎರಡು ಕೆಲಸಗಳಲ್ಲಿ ಅವರಿಗೆ ಇಂತಹ ವಸ್ತುಗಳು ಸಿಗಬೇಕೆಂದು ಮಾತ್ರವೇ ಸ್ವಾಮಿಯವರ ಸಂಕಲ್ಪ ಇದೆ. ಆದರೆ ಎಲ್ಲಿ ಸಿಗಬೇಕು, ಎಷ್ಟು ಆಳದಲ್ಲಿ ಸಿಗಬೇಕು ಎನ್ನುವುದು ಮಾತ್ರ ಸ್ವಾಮಿಯವರಿಗೂ ಸಹ ತಿಳಿದಿಲ್ಲ. ಸ್ವಾಮಿಯವರ ಮಹಿಮೆಗಳನ್ನು ಪರಿಶೋಧಿಸಬೇಕೆಂದು ಬಂದ ವಿದೇಶಿ ವಿಜ್ಞಾನಿ ತನಗೆ ಚಿನ್ನದ ಸರ ಸಿಕ್ಕಿದಾಗ, ಅದು ನಿಜವಾಗಿ ಸ್ವಾಮಿಯವರ ಮಹಿಮೆಯೇ ಎಂದುಕೊಂಡಿದ್ದಾನೆ. ಏಕೆಂದರೆ ಸ್ವಾಮಿ ಊಹಿಸದ ಕಡೆ ತಾನು ಅಗೆದಾಗಲೂ, ಅಲ್ಲಿ ಚಿನ್ನದ ಸರ ಸಿಗುವುದು ಸ್ವಾಮಿಯವರ ಮಹಿಮೆಯೇ ಎಂದುಕೊಂಡಿದ್ದಾನೆ. ಎರಡನೆ ದಿನ "ಮಹತ್ಯವಾ–ಮೋಸವಾ" ಎನ್ನುವ ವಾರ್ತೆ ನೋಡಿದಾಗ, ಆ ವಾರ್ತೆಯನ್ನು ಆ ವಿದೇಶೀಯನೇ ಖಂಡಿಸಿದ್ದಾನೆ. ತಾನು ಒಬ್ಬ ಪರಿಶೋಧಕನೆಂದು, ಈ ಮಹಿಮೆ ತನ್ನ ಸೈನ್ಸ್‌ಗೂ ಸಿಗದಿರುವುದೆಂದು, ಇದರಲ್ಲಿ ಯಾವ ಮೋಸ ಇಲ್ಲವೆಂದು, ನ್ಯೂಸ್ ಪೇಪರ್‌ಗೆ ವಾರ್ತೆಯನ್ನು ಕೊಟ್ಟಿದ್ದಾನೆ. ಇಲ್ಲಿ ವಿದೇಶೀ ಪರಿಶೋಧಕನು ಅಂದುಕೊಂಡಿರುವುದು ಸಹ ಒಂದು ವಿಧವಾಗಿ ತಪ್ಪೇ. ಏಕೆಂದರೆ ಸ್ವಾಮಿಯವರು ಮಾಡಿರುವುದು ಮಹಿಮೆಯಲ್ಲ ಮಂತ್ರವೆಂದು ತಿಳಿದುಕೊಳ್ಳಲಾರದೆ ಹೋಗಿದ್ದಾನೆ. ಸ್ವಾಮಿಯವರು ಸಮುದ್ರದ ದಂಡೆಯ ಹತ್ತಿರ ಎರಡು ವಸ್ತುಗಳನ್ನು ತನ್ನ ಮಂತ್ರಶಕ್ತಿಯಿಂದ ಇಬ್ಬರಿಗೆ ಸಿಗುವಂತೆ ಮಾಡಿದರೆ ಅದನ್ನು ನೋಡಿದ ನಾಸ್ತಿಕರು, ವಿಜ್ಞಾನಿಗಳು ಅದು ಮಂತ್ರಶಕ್ತಿ ಎಂದು ಗ್ರಹಿಸದೆ ಮೋಸವೆಂದಿದ್ದಾರೆ. ಹಾಗೆಯೇ ವಿದೇಶಿಯನು ಆ ಕೆಲಸ ಮಂತ್ರಶಕ್ತಿಯಿಂದ ನಡೆದಿರುವುದೆಂದು ಗ್ರಹಿಸದೆ ಮಹಿಮೆ

ಎಂದಿದ್ದಾನೆ. ಈ ವಿಧವಾಗಿ ಈಕಡೆ ಸ್ವದೇಶೀಯರೂ, ಆಕಡೆ ವಿದೇಶೀಯರೂ ಅಲ್ಲಿ ನಡೆದ ವಾಸ್ತವಿಕತೆಯನ್ನು ಗ್ರಹಿಸಲಾರದೆ ಇಬ್ಬರೂ ತಪ್ಪಾಗಿ ಅರ್ಥೈಸಿಕೊಂಡಿದ್ದಾರೆ.

ವಾಸ್ತವಕ್ಕೆ ಅವರಿಗೆ ಯಾರಿಗೂ ತಿಳಿಯದ ಮಂತ್ರಶಕ್ತಿ ಅಲ್ಲಿ ಕೆಲಸ ಮಾಡಿದೆಯೆಂದು ಸ್ವಾಮಿಗೆ ತಿಳಿದರೂ, ಅದು ಮಂತ್ರಬಲವೇ ಆಗಲಿ, ಮಹಿಮೆ ಅಲ್ಲವೆಂದು ಸ್ವಾಮಿಗೆ ತಿಳಿದರೂ, ಆಕಾರ್ಯದಲ್ಲಿನ ಪೂರ್ತಿ ವಿವರಗಳು ಆತನಿಗು ಸಹ ತಿಳಿದಿಲ್ಲ. ಆತನು ಅಂದುಕೊಂಡರೇನೆ ಆ ಕೆಲಸ ನಡೆದರೂ, ಆ ಕೆಲಸದಲ್ಲಿನ ಎಲ್ಲ ವಿವರಗಳು ಆತನಿಗೆ ತಿಳಿದಿಲ್ಲ. ಏಕೆ ತಿಳಿಯಲಿಲ್ಲವೆಂದರೆ! ಕೆಲಸವನ್ನು ಆದೇಶಿಸಿರುವುದು ಸ್ವಾಮಿಯೇ ಆದರೂ, ಆ ಕೆಲಸವನ್ನು ಸ್ವಾಮಿ ಮಾಡಲಿಲ್ಲ ಅಲ್ಲವೆ! ಅ ಕೆಲಸವನ್ನು ಮಾಡಿದವರು ಇತರರು, ಆದ್ದರಿಂದ ಎಷ್ಟು ಆಳದಲ್ಲಿ ವಸ್ತುಗಳಿವೆಯೆನ್ನುವುದೂ ಆತನಿಗೆ ತಿಳಿದಿಲ್ಲ. ಆತನಗಿಂತ ಮೊದಲು ನಾವು ಅಲ್ಲಿ ಯಾವ ವಿಧವಾಗಿ ಆ ಕೆಲಸ ನಡೆದಿದೆಯೋ ತಿಳಿದುಕೊಂಡರೇ, ಸ್ವಾಮಿಗೆ ಹೇಗೆ ಎಲ್ಲ ವಿವರಗಳು ತಿಳಿದಿಲ್ಲವೋ ನಮಗೆ ಅರ್ಥವಾಗುತ್ತದೆ.

**ಗ,ಖ,ರ,ಭೌ,ಜ್ಯೋ,ಬ್ರ** ಎನ್ನುವ ಆರು ಬೀಜಾಕ್ಷರಗಳು ಆರು ಶಾಸ್ತ್ರಗಳನ್ನು ತಿಳಿಸುತ್ತಿವೆ. ಆರು ಶಾಸ್ತ್ರಗಳಲ್ಲಿ ಮೂರನೆ ಶಾಸ್ತ್ರವಾದ ರಸಾಯನ ಶಾಸ್ತ್ರಕ್ಕೆ ಸಂಬಂಧಿಸಿರುವುದು ವೈದ್ಯ. ಮಾನವ ಜೀವನದಲ್ಲಿ ಆರೋಗ್ಯ, ಅನಾರೋಗ್ಯ ಎನ್ನುವ ಎರಡು ಸ್ಥಿತಿಗಳು ಇವೆ. ಅನಾರೋಗ್ಯವಾಗಿ ಮನುಷ್ಯ ಇರುವಾಗ, ಆತನಿಗೆ ವೈದ್ಯವನ್ನು ಉಪಯೋಗಿಸಿ ಪುನಃ ಆರೋಗ್ಯ ಸ್ಥಿತಿಗೆ ತರಬಹುದು. ಮಾನವ ಸೃಷ್ಠಿ ನಡೆದ ಸ್ವಲ್ಪ ಕಾಲಕ್ಕೆ ವೈದ್ಯ ಜಾರಿಯೊಳಗೆ ಬಂದಿದೆ. ಪೂರ್ವದಲ್ಲಿ ವೈದ್ಯವನ್ನು **"ರಸಪಟ್ಟು"** ಎನ್ನುತ್ತಿದ್ದರು, ವೈದ್ಯದಲ್ಲಿನ ಔಷಧಿಗಳನ್ನು ರಸಗಳು ಎನ್ನುತ್ತಿದ್ದರು. ವೈದ್ಯಕ್ಕೆ ಆ ಹೆಸರು ಬರುವುದಕ್ಕೆ ಮುಖ್ಯಕಾರಣ ಏನೆಂದರೆ! ಪೂರ್ವ ವೈದ್ಯ ಎಲೆಗಳ ರಸದಿಂದ ಪ್ರಾರಂಭವಾಗಿದೆ. ಪ್ರತಿ ರೋಗಕ್ಕೂ ಅದಕ್ಕೆ ಸರಿಹೋಗುವ ಗಿಡದ ಎಲೆ ರಸವನ್ನು ಬಳಸುತ್ತಿದ್ದರು. ಆದ್ದರಿಂದ ವೈದ್ಯವೊಂದರ ಮೊಟ್ಟಮೊದಲ ಹೆಸರು ರಸಪಟ್ಟು. ವೈದ್ಯದಲ್ಲಿನ ಔಷಧಿಗಳನ್ನು ರಸಗಳು ಎನ್ನುವುದು ಅಂದಿನಿಂದ

ಬಂದಿದೆ. ಸ್ವಲ್ಪ ಕಾಲ ಕಳೆದ ನಂತರ ರಸಾಯನ ಶಾಸ್ತ್ರ ಅಭಿವೃದ್ಧಿ ಹೊಂದಿರುವುದಾಗಿ, ಸ್ವಲ್ಪ ಪರಿಶೋಧನೆ ನಂತರ ವೈದ್ಯದಲ್ಲಿ ಸ್ವಲ್ಪ ಬದಲಾವಣೆ ಬಂದಿದೆ. ಮೊದಲು ಅನಾರೋಗ್ಯಕ್ಕೆ ಮರದ ರಸಗಳೇ ಬಳಸುತ್ತಿದ್ದರಲ್ಲವೆ! ಹಾಗೆ ಮರದ ರಸಗಳೇ ಅಲ್ಲದೆ ರಸಾಯನ ಶಾಸ್ತ್ರದಲ್ಲಿ ಕಂಡುಹಿಡಿದ ಮಂತ್ರಗಳನ್ನು ಸಹ ಬಳಸುತ್ತಿದ್ದರು. ಮಂತ್ರ ಮಾತಿನಿಂದ ಹುಟ್ಟಿದೆ, ರಸ ಎಲೆಯಿಂದ ಹುಟ್ಟಿದೆ. ಆ ದಿನಗಳಲ್ಲಿ ವೈದ್ಯವು ಎಲೆ ರಸದಿಂದ, ಮಾತು ಮಂತ್ರದಿಂದ ನಡೆಯುತ್ತಿತ್ತು. ಇಂದಿನ ಕಾಲದಲ್ಲಿ ವೈದ್ಯ ಎಷ್ಟೋ ಬದಲಾವಣೆ ಹೊಂದಿ, ಕೊನೆಗೆ ವೈದ್ಯದಲ್ಲಿ ಎಲೆ ರಸವಾಗಲೀ, ಮಾತು ಮಂತ್ರವಾಗಲೀ ಕಾಣಿಸದಂತೆ ಹೋಗಿವೆ. ವೈದ್ಯ ವಿಧಾನದಲ್ಲಿ ಎಲೆಗಳ ರಸಗಳು, ಮಾತುಗಳ ಮಂತ್ರಗಳು ಕಣ್ಮರೆಯಾಗಿ ಹೋದರೂ, ಅಲ್ಲಲ್ಲಿ ಪೂರ್ವಕಾಲ ವೈದ್ಯಕ್ಕೆ ಜೀವಂತವಾದ ಮಾತು ಒಂದು ಉಳಿದಿದೆ. **ಭೂಮಿ ಮೇಲೆ ಔಷಧವಾಗದ ಎಲೆಯೂ ಇಲ್ಲ, ಮಂತ್ರವಾಗದ ಮಾತೂ ಇಲ್ಲ**. ಎನ್ನುವ ವಾಕ್ಯ ಪೂರ್ವ ವೈದ್ಯಕ್ಕೆ ಗುರುತಾಗಿ ಉಳಿದಿದೆ. ಅದನ್ನನುಸರಿಸಿ ಪ್ರತಿ ಎಲೆ ಔಷಧವೇ, ಪ್ರತಿ ಮಾತು ಮಂತ್ರವೇ ಎಂದು ನಾವು ಹೇಳುತ್ತಿದ್ದೇವೆ. ಇದೆಲ್ಲಾ ಕೇಳಿದ ನಂತರ ಯಾರಿಗಾದರೂ ಔಷಧವೂ, ಮಂತ್ರವೂ ಒಂದೇ ರಸಾಯನ ಶಾಸ್ತ್ರಕ್ಕೆ ಸಂಬಂಧಿಸಿರುವವೆಂದು ತಿಳಿಯುತ್ತಿದೆ.

ಈ ನಮ್ಮ ಮಾತನ್ನು ಇಂದಿನ ವಿಜ್ಞಾನಿಗಳು ಒಪ್ಪಿಕೊಳ್ಳದಿರಬಹುದು. **ಸತ್ಯವನ್ನು ಸಾವಿರ ಜನ ಅಲ್ಲಗಳೆದರೂ ಅದು ಅಸತ್ಯವಲ್ಲ** ಎನ್ನುವ ಸೂತ್ರದ ಪ್ರಕಾರ, ಮಂತ್ರಗಳು ರಸಾಯನಿಕ ಶಾಸ್ತ್ರಕ್ಕೆ ಸಂಬಂಧಿಸಿರುವವೇ. ಈ ಮಾತು ಸತ್ಯವೆನ್ನುವುದಕ್ಕೆ ಕೆಲವು ಪ್ರಮಾಣಗಳನ್ನು ಗಮನಿಸಿ ನೋಡೋಣ. ಒಬ್ಬ ವ್ಯಕ್ತಿ ಒಂದು ಮಾತನ್ನು ಹೇಳಿದರೇ, ಅದನ್ನು ಕೇಳಿದ ಎರಡನೆ ವ್ಯಕ್ತಿಯಲ್ಲಿ ಒಂದು ಬದಲಾವಣೆ ನಡೆಯುತ್ತಿದೆ. ಅದನ್ನು ವಿವರವಾಗಿ ಹೇಳಿದರೇ ಒಬ್ಬ ವ್ಯಕ್ತಿ ಹುಣಿಸೆಕಾಯಿ ಎನ್ನುವ ಮಾತನ್ನು ಹೇಳಿದಾಗ ಅದನ್ನು ಕೇಳಿದ ಎರಡನೆ ವ್ಯಕ್ತಿ ಬಾಯಲ್ಲಿ ಕೂಡಲೇ ನೀರು ಊರುತ್ತಿದೆ. ಇದನ್ನನುಸರಿಸಿ ಒಂದು ಮಾತು ಮಂತ್ರವಾಗಿ ಕೆಲಸಮಾಡಿ ಎರಡನೆ ವ್ಯಕ್ತಿಯಲ್ಲಿ ಒಂದು ಆಕ್ಷನ್ (ಕದಲಿಕೆ) ಶುರುವಾಗಿದೆ. ಆಗ ಹುಣಿಸೆಕಾಯಿ ಎನ್ನುವ ಮಾತು ಮಂತ್ರವಾಗಿ ಕೆಲಸ ಮಾಡಿದೆಯೆಂದು ಹೇಳಬಹುದು. ಹಾಗೇ ಸೂ..ಮಗನೆ ಎಂದು ಒಬ್ಬ ಮನುಷ್ಯ ಇನ್ನೊಬ್ಬ ಮನುಷ್ಯ ಹತ್ತಿರ ಅಂದರೆ, ಎರಡನೆ ಮನುಷ್ಯನಲ್ಲಿ

ಒಂದು ರಿಯಾಕ್ಷನ್ (ಪ್ರತಿಸ್ಪಂದನೆ) ಬರುತ್ತದೆ. ಹುಣಿಸೆಕಾಯಿ ಎಂಬ ಐದಕ್ಷರಗಳ ಮಾತಿಗೆ ಒಬ್ಬ ಮನುಷ್ಯನಲ್ಲಿ ಹೇಗೆ ಸ್ಪಂದನೆ ಬರುತ್ತಿದೆಯೋ, ಹಾಗೇ ಐದು ಅಕ್ಷರಗಳ ಮತ್ತೊಂದು ಮಾತಿಗೂ ಪ್ರತಿ ಸ್ಪಂದನೆ ಸಹ ಬರುತ್ತಿದೆ. ಇದನ್ನನುಸರಿಸಿ ಒಂದೊಂದು ಶಬ್ಧದಿಂದ ಒಂದೊಂದು ಸ್ಪಂದನೆ ಮನುಷ್ಯನಲ್ಲಿ ಏರ್ಪಡುತ್ತಿದೆಯೆಂದು ತಿಳಿಯುತ್ತಿದೆ. ಈ ಆಧಾರಗಳಿಂದ ಪೂರ್ವದ ಹಿರಿಯರು ಹೇಳಿದಂತೆ ಪ್ರತಿ ಮಾತು ಮಂತ್ರವೇಯೆಂದು, ಮಂತ್ರ ಸಹ ಶಾಸ್ತ್ರಬದ್ಧವೇಯೆಂದು ಅರ್ಥವಾಗುತ್ತಿದೆ.

ಈಗ ಅಸಲು ವಿಷಯಕ್ಕೆ ಬರೋಣ. ಪೂರ್ವದಲ್ಲಿ ಹಿರಿಯರು ಕೆಲವು ಶಬ್ದಗಳಿಗೆ ಕೆಲವು ಕೆಲಸಗಳು ನಡೆಯುವವೆಂದು ಕಂಡುಹಿಡಿದು, ಆ ಶಬ್ದಗಳನ್ನು ಗ್ರಂಥ ರೂಪಗಳಲ್ಲಿ ಲಿಖಿಸಿ ಹೋಗಿದ್ದಾರೆ. ಹಿರಿಯರು ಲಿಖಿಸಿದ ಮಾತುಗಳನ್ನು ಮಂತ್ರಗಳು ಎಂದು ಕರೆಯುತ್ತಿದ್ದೇವೆ. ಯಾವ ಮಂತ್ರಕ್ಕೆ ಯಾವ ಕೆಲಸ ನಡೆಯುತ್ತದೋ ಲಿಖಿತವಾಗಿ ಇರುವುದರಿಂದ, ಅಂತಹ ಮಂತ್ರಗಳನ್ನು ತಿಳಿದುಕೊಂಡು ಸಾಧಿಸಿದ ಕೆಲವರು ಸ್ವಾಮಿಗಳಾಗಿ ಚಲಾವಣೆ ಆಗುತ್ತಿದ್ದಾರೆ. ಅವರು ಸಾಧಿಸಿದ ಮಂತ್ರ ಫಲಗಳನ್ನು ಮಹಾತ್ಯಗಳಾಗಿ ಸಾರಿಕೊಳ್ಳುತ್ತಿದ್ದಾರೆ. ಅಂತಹ ಸ್ವಾಮಿಯೇ ಸಮುದ್ರದ ಹತ್ತಿರ ಬೀಚ್‌ನಲ್ಲಿ ತನ್ನ ಮಂತ್ರ ಬಲದಿಂದ ಭಗವದ್ಗೀತೆಯನ್ನೂ, ಚಿನ್ನದ ಸರವನ್ನು ಕೊಟ್ಟಿದ್ದಾನೆ. ಅದು ಹೇಗೆ ಸಾಧ್ಯವಾಗಿ ದೆಯೆನ್ನುವ ವಿವರದೊಳಗೆ ಹೋದರೆ, ಆ ವಿವರವನ್ನು ಈ ವಿಧವಾಗಿ ಹೇಳಬಹುದು. ಕೆಲವು ಅಕ್ಷರಗಳ ಸಮ್ಮೇಳನವಾದ ಒಂದೊಂದು ಮಂತ್ರದಲ್ಲಿ ಒಂದೊಂದು ಶಕ್ತಿ ಇರುತ್ತದೆ. ಮಂತ್ರ ಸ್ಥೂಲವಾದರೂ ಮಂತ್ರಶಕ್ತಿ ಸೂಕ್ಷ್ಮವಾಗಿ ಕಾಣಿಸದೆ ಇರುತ್ತದೆ. ಖಗೋಳದಲ್ಲಿ ಕೋಟ್ಯಾಂತರ ಗ್ರಹಗಳಿವೆ. ಅವುಗಳಲ್ಲಿ ಎಷ್ಟೋ ಕೋಟಿ ಗ್ರಹಗಳು ಭೂಮಿಮೇಲೆ ಸೂಕ್ಷ್ಮವಾಗಿ ಬರುತ್ತಾ ಹೋಗುತ್ತಾ ಇವೆ. ಆ ವಿಧವಾಗಿ ಭೂಮಿಯೊಂದಿಗೆ ಸಂಬಂಧ ಇಟ್ಟುಕೊಂಡ ಗ್ರಹಗಳು, ಒಂದೊಂದು ಮಂತ್ರಕ್ಕೆ ಒಂದೊಂದು ಅಧಿಪತಿಯಾಗಿ ಇವೆ. ಒಂದು ಮಂತ್ರದಿಂದ ಒಂದು ಕೆಲಸ ನೆರವೇರುತ್ತಿದೆಯೆಂದರೆ, ಅಲ್ಲಿ ಯಾವುದೋ ನಮಗೆ ತಿಳಿಯದ ಶಕ್ತಿ ಕೆಲಸ ಮಾಡುತ್ತಿದೆಯೆಂದು ಅರ್ಥವಾಗುತ್ತಿದೆ. ಒಂದೊಂದು ಮಂತ್ರಕ್ಕೆ ಒಂದೊಂದು ಗ್ರಹ ಅಧಿಪತಿಯಾಗಿ ಇದ್ದು, ಆ ಮಂತ್ರವೊಂದರ ಕಾರ್ಯವನ್ನು ಮಾಡುತ್ತಿದೆ.

ಒಂದು ಮಂತ್ರದಿಂದ ಒಂದು ಕೆಲಸ ಈಡೇರುತ್ತಿದೆಯೆಂದರೆ, ಅಲ್ಲಿ ಒಂದು ಗ್ರಹಶಕ್ತಿ ಉಪಯೋಗಪಡುತ್ತಿದೆ. ಮಂತ್ರದಿಂದ ಉಪಯೋಗವಾಗುವ ಗ್ರಹಶಕ್ತಿಯನ್ನೇ ಮಂತ್ರಶಕ್ತಿ ಎಂದು ಕರೆಯುತ್ತಿದ್ದೇವೆ. ಒಂದು ಗ್ರಹ ಸ್ಥೂಲವಾಗಿ ಇದ್ದರೆ ಅದರಲ್ಲಿನ ಜೀವಿಯು ಸೂಕ್ಷ್ಮವಾಗಿ ಇರುವನು. ಸಮುದ್ರದ ಹತ್ತಿರಕ್ಕೆ ಹೋದ ಸ್ವಾಮಿ ಹೇಳಿದ ಮಂತ್ರಕ್ಕೆ ಒಂದು ಗ್ರಹ ಅಧಿಪತಿಯಾಗಿ ಇರುವುದರಿಂದ, ಆ ಸ್ವಾಮಿ ಆ ಮಂತ್ರವನ್ನು ಸ್ಮರಿಸಿ ಒಂದು ಕೆಲಸವನ್ನು ಸಂಕಲ್ಪಿಸಿದ ಕೂಡಲೇ, ಆ ಮಂತ್ರಕ್ಕೆ ಅಧಿಪತಿಯಾಗಿರುವ ಗ್ರಹ ಸೂಕ್ಷ್ಮವಾಗಿ ಅ ಕೆಲಸವನ್ನು ನೆರವೇರಿಸುತ್ತಿದೆ. ಸಮುದ್ರದ ಹತ್ತಿರ ಸ್ವಾಮಿ "ಮೊದಲು ನಾನು ಹೇಳಿರುವವನಿಗೆ, ನಾನು ಹೇಳಿದ ಸ್ಥಳದಲ್ಲೇ ಭಗವದ್ಗೀತೆ ಗ್ರಂಥವನ್ನು ಕೊಡಬೇಕೆಂದು" ಸಂಕಲ್ಪಿಸಿ ಮಂತ್ರವನ್ನು ಹೇಳಿದ್ದಾನೆ. ಮಂತ್ರವನ್ನು ಹೇಳಿದ ಕೂಡಲೇ, ಆ ಮಂತ್ರಕ್ಕೆ ಅಧಿಪತಿಯಾದ ಗ್ರಹವೊಂದರ ಸೂಕ್ಷ್ಮ ಶರೀರ ಸ್ವಾಮಿ ಕೊಠಡಿಯಲ್ಲಿರುವ ಭಗವದ್ಗೀತೆಯನ್ನು ತಂದು ಸ್ವಾಮಿ ಹೇಳಿದ ಕಡೆ ಮರಳಿನಲ್ಲಿ ಇಟ್ಟಿದೆ. ಗ್ರಹವೊಂದರ ಸೂಕ್ಷ್ಮ ಕಾಣಿಸುವುದಿಲ್ಲ. ಆದ್ದರಿಂದ ಈ ಕೆಲಸ ಎಲ್ಲವೂ ಕಾಣಿಸದಂತೇ ನಡೆದಿದೆ. ಸ್ವಾಮಿ ಹೇಳಿದಂತೆ ಸ್ವಾಮಿ ತೋರಿಸಿದ ಕಡೆ ಅಗೆದು ನೋಡಿದರೆ ಭಗವದ್ಗೀತೆ ಸಿಕ್ಕಿದೆ. ಆ ಭಗವದ್ಗೀತೆ ಹೇಗೆ ಬಂದಿದೆಯೋ ಸ್ವಾಮಿಗೂ ಸಹ ತಿಳಿದಿಲ್ಲ. ಮಂತ್ರವನ್ನು ಜಪಿಸಿದರೇ ಇಂತಹ ಕೆಲಸ ನಡೆಯುತ್ತದೆಂದು ಮಾತ್ರ ಸ್ವಾಮಿಗೆ ತಿಳಿದಿರುತ್ತದೆ. ಅಷ್ಟೇ ಹೊರತು ಮಂತ್ರಕ್ಕೆ ಒಂದು ಗ್ರಹ ಅಧಿಪತಿಯೆಂದು, ಆ ಗ್ರಹವೇ ತಾನು ಹೇಳಿದ (ಅಂದುಕೊಂಡ) ಕೆಲಸವನ್ನು ನೆರವೇರಿಸಿದೆಯೆಂದು ತಿಳಿದಿಲ್ಲ. ಸ್ವಾಮಿಗೆ ತಿಳಿಯದಿದ್ದರೂ ಸ್ವಾಮಿ ಅಂದುಕೊಂಡ ಕೆಲಸ ನಡೆದಿದೆ. ಹಾಗೆಯೇ ವಿದೇಶಿ ವ್ಯಕ್ತಿಯನ್ನು ಸ್ವಾಮಿ ಕರೆದು ನಿನ್ನ ಇಷ್ಟಬಂದ ಕಡೆ ನೀನು ಮರಳನ್ನು ತೆಗೆದರೆ ಬಂಗಾರದ ಸರ ಸಿಗುತ್ತದೆಂದು ಹೇಳಿದ್ದಾನೆ. ಸ್ವಾಮಿ ಹೇಳಿದಂತೆ ಆ ವಿದೇಶಿ ಪರಿಶೋಧಕನು ಮಾಡಿದಾಗ, ಆತನಿಗೆ ಚಿನ್ನದ ಸರ ಸಿಕ್ಕಿದೆ. ಈ ಬಾರಿ ಸ್ವಾಮಿ ಜಾಗವನ್ನು ತೋರಿಸದಂತೆ ನಿನ್ನ ಇಷ್ಟ ಬಂದ ಕಡೆ ಅಗೆ ಎಂದಾಗ, ಮಂತ್ರಶಕ್ತಿ ಆದ ಗ್ರಹಶಕ್ತಿ ಸ್ವಾಮಿಯವರು ಮೊದಲೇ ತಯಾರು ಮಾಡಿ ತನ್ನ ಕೊಠಡಿಯಲ್ಲಿ ಇಟ್ಟುಕೊಂಡ ಚಿನ್ನದ ಸರವನ್ನು ತೆಗೆದುಕೊಂಡು ಬಂದು ಆತನು ಎಲ್ಲಿ ಅಗೆಯುವುದನ್ನು ಪ್ರಾರಂಭಿಸಿದ್ದಾನೋ,

ಆಗ ಅಲ್ಲಿ ಆ ಸರವನ್ನು ಇಟ್ಟಿದೆ. ಹಾಗೆ ಕಾಣಿಸದ ಗ್ರಹವು ಅತ್ತ ಸ್ವಾಮಿಗಾಗಲೀ, ಇತ್ತ ವಿದೇಶಿ ಭಕ್ತನಿಗಾಗಲೀ ಕಾಣಿಸದಂತೆ ಮಾಡುವುದರಿಂದ, ಚಿನ್ನದ ಸರ ಸಿಕ್ಕಿರುವುದು ದೊಡ್ಡ ಮಹಿಮೆಯಾಗಿ ಕಾಣಿಸಿದೆ.

ಮೊದಲು ಗ್ರಹ ಮರಳಿನಲ್ಲಿ ಇಟ್ಟ ಭಗವದ್ಗೀತೆ, ಸ್ವಾಮಿ ಕೊಠಡಿಯಲ್ಲಿ ಮೊದಲೇ ಇಟ್ಟಿರುವುದೇ! ಕೊಠಡಿಯಲ್ಲಿರುವ ಭಗವದ್ಗೀತೆ ಗ್ರಂಥವನ್ನೇ ಗ್ರಹ (ಮಂತ್ರಶಕ್ತಿ) ತಂದಿದೆ, ಆದರೆ ಬೇರೆಯದಾಗಿ ತಾನು ಸೃಷ್ಟಿಸಲಿಲ್ಲ. ಹಾಗೆ ಮರಳಿನಲ್ಲಿ ಸಿಕ್ಕಿರುವ ಭಗವದ್ಗೀತೆ ಯಾವ ಪ್ರೆಸ್‌ನಲ್ಲಿ ತಯಾರಾಗಿದೆಯೋ, ಅದರ ಬೆಲೆ ಎಷ್ಟು ಎನ್ನುವುದು, ಅದರ ರಚನಕಾರ ಯಾರಾಗಿರುವುದು ಎಲ್ಲವೂ ಅದರ ಮೇಲೆ ಇವೆ. ಹಾಗೆಯೇ ಚಿನ್ನದ ಸರ ಸಹ ಮೊದಲೇ ತಯಾರು ಮಾಡಿ ಒಂದು ಕಡೆ ಇಟ್ಟಿರುವುದನ್ನೇ ಮಂತ್ರಶಕ್ತಿಯಾಗಿರುವ ಗ್ರಹ ತಂದಿದೆ. ಆದರೆ ಆ ಸರವನ್ನು ಸ್ವಾಮಿ ಸ್ವತಃವಾಗಿ ಸೃಷ್ಟಿಸಲಿಲ್ಲ. ಹಾಗೇ ಆ ಗ್ರಹವೂ ಸಹ ಸೃಷ್ಟಿಸಿಕೊಂಡು ತರಲಿಲ್ಲ. ತಾನು ಮಂತ್ರಿಸುವ ಮಂತ್ರದಿಂದ ತನ್ನ ಕೊಠಡಿಯಲ್ಲಿರುವ ಚಿನ್ನದ ಸರ ಬರುತ್ತದೆಂದು ಸ್ವಾಮಿಗೆ ತಿಳಿದಿತ್ತು, ಆದರೆ ಆ ಕೆಲಸ ಹೇಗೆ ನಡೆದಿದೆಯೋ ಸ್ವಾಮಿಗೂ ಸಹ ತಿಳಿಯದು. ಈ ವಿಧವಾಗಿ ಒಬ್ಬ ಮಾಂತ್ರಿಕನಿಗೆ ಮಂತ್ರವೊಂದರ ಫಲಿತ (ಕೆಲಸ) ತಿಳಿದಿದೆ, ಆದರೆ ಅದು ಹೇಗೆ ಜಾರಿಯಾಗುತ್ತಿರುವುದು, ಅದನ್ನು ಯಾರು ಹೇಗೆ ಮಾಡುತ್ತಿದ್ದಾರೆನ್ನುವುದು ಮಾತ್ರ ತಿಳಿದಿಲ್ಲ. ಯಾವ ಮಾಂತ್ರಿಕನಿಗಾದರೂ ಮಂತ್ರವೂ ತಿಳಿದಿದೆ, ಅದರ ಕೆಲಸ ತಿಳಿದಿದೆ, ಆದರೆ ಅದು ಹೇಗೆ ನಡೆಯುತ್ತಿದೆ ಎನ್ನುವುದು ಮಾತ್ರ ತಿಳಿದಿಲ್ಲ. ಒಬ್ಬ ಮಾಂತ್ರಿಕನು ಒಂದು ಮಂತ್ರವನ್ನು ತನ್ನ ಇಷ್ಟ ಬಂದಾಗ ಬಳಸಿಕೊಳ್ಳುವುದಕ್ಕೆ, ಆ ಮಂತ್ರವನ್ನು ಮೊದಲೇ ಸಿದ್ಧಿ ಮಾಡಿಕೊಂಡಿರಬೇಕು. ಒಂದು ಮಂತ್ರ ಒಬ್ಬ ಮನುಷ್ಯನಿಗೆ ಸಿದ್ಧಿಸಬೇಕೆಂದರೆ, ಆ ಮಂತ್ರವನ್ನು ಕಂಡುಹಿಡಿದ ಪರಿಶೋಧಕರು ಅದಕ್ಕಿರುವ ನಿಯಮಗಳನ್ನು ಮಂತ್ರದೊಂದಿಗೆ ತಿಳಿಸಿರುತ್ತಾರೆ. ಮಂತ್ರವನ್ನು ನಿರ್ಮಿಸಿದವರು ಹೇಗೆ ಹೇಳಿದ್ದರೆ ಹಾಗೆ ಮಾಡಿದಾಗಲೇ ಆ ಮಂತ್ರ ಸಿದ್ಧಿಸುತ್ತದೆ. ಮಂತ್ರವೊಂದರ ಕೆಲಸವನ್ನನುಸರಿಸಿ, ಅದರಲ್ಲಿ ಉಪಯೋಗವಾಗುವ ಶಕ್ತಿಯನ್ನನುಸರಿಸಿ, ಆ ಮಂತ್ರವನ್ನು ಮೊದಲು ಸಾವಿರ ಸಂಖ್ಯಯಲ್ಲೋ, ಅಥವಾ ಲಕ್ಷಗಳ ಸಂಖ್ಯೆಯಲ್ಲೋ ಏಕಧಾಟಿಯಾಗಿ

ಜಪಿಸಬೇಕಾಗಿರುತ್ತದೆ. ಹಾಗೆ ಮೊಟ್ಟ ಮೊದಲು ಯಾವ ಆತಂಕವಿಲ್ಲದೆ ಕೆಲವು ನಿಯಮಗಳು ಪಾಟಿಸುತ್ತಾ, ಮಧ್ಯದಲ್ಲಿ ಮಂತ್ರವನ್ನು ನಿಲ್ಲಿಸದೆ ಜಪಿಸಿದಾಗ ಆ ಮಂತ್ರ ಸಿದ್ಧಿಸುತ್ತದೆ. ಹಾಗೆ ಸಿದ್ಧಿಸಿದ ಮಂತ್ರಕ್ಕೆ ಗ್ರಹಶಕ್ತಿ ಮಂತ್ರಶಕ್ತಿಯಾಗಿ ಬದಲಾಗಿ, ಆ ಮಂತ್ರವೊಂದರ ಕೆಲಸವನ್ನು ಮಾಡುತ್ತದೆ. ಸಮುದ್ರದ ಹತ್ತಿರ ಹೋದ ಸ್ವಾಮಿ ತಾನು ಏನು ಅಂದುಕೊಂಡರೆ ಆ ವಸ್ತು (ತಾನು ಮೊದಲೇ ಒಂದು ಕಡೆ ಇಟ್ಟಿರುವುದು) ಬರುವಹಾಗೆ ಇರುವ ಮಂತ್ರವನ್ನು ಸಿದ್ಧಿಸುವಂತೆ ಮಾಡಿಕೊಂಡಿದ್ದಾನೆ. ಆ ಮಂತ್ರಕ್ಕೆ ಇರುವ ನಿಯಮದ ಪ್ರಕಾರ ನಡೆದುಕೊಳ್ಳುತ್ತಾ, ತಾನು ಸಮುದ್ರ ತೀರದ ಹತ್ತಿರ ತನ್ನ ಭಕ್ತರು ನೋಡುವಂತೆ ತನ್ನ ಮಂತ್ರಶಕ್ತಿಯನ್ನು ಬಳಸಿ ಕೊಂಡಿದ್ದಾನೆ. ಅದರಿಂದ ತಾನು ಮೊದಲೇ ತನ್ನ ಕೊಠಡಿಯಲ್ಲಿ ಇಟ್ಟುಕೊಂಡಿರುವ ವಸ್ತುಗಳು ಅಲ್ಲಿಗೆ ಬರುವುದರಿಂದ, ಪ್ರಜೆಗಳಿಗೆ ಅದು ಮಹಾತ್ಯವಾಗಿ ಕಾಣಿಸಿದೆ. ಪ್ರಜೆಗಳ ಲೆಕ್ಕದಲ್ಲಿ ಆತನು ಸ್ವಾಮೀಜಿ ಆದರೂ, ನಮ್ಮ ಲೆಕ್ಕದಲ್ಲಿ ಆತನು ಒಬ್ಬ ಮಾಂತ್ರಿಕನೇ. ಹಾಗೆಯೇ ಆತನು ಮಾಡಿರುವುದು ಮಹಾತ್ಯವಾಗಿ ಎಲ್ಲರಿಗೂ ಕಾಣಿಸಿದರೂ, ನಮ್ಮ ಲೆಕ್ಕದಲ್ಲಿ ಮಾತ್ರ ಅದು ಮಂತ್ರ ವಿದ್ಯೆಯೇ. ಆ ಸ್ವಾಮಿ ತಾನು ಮಾಂತ್ರಿಕನಾದರೂ, ಆ ವಿಷಯವನ್ನು ಹೊರಗೆ ತಿಳಿಸಲಿಲ್ಲ. ಆದ್ದರಿಂದ ಆತನು ಯಾವಾಗಲೂ ಸ್ವಾಮಿಯ ಹಾಗೆಯೇ ಲೆಕ್ಕಿಸಲ್ಪಡುತ್ತಿದ್ದಾನೆ.

ಈ ವಿಧವಾಗಿ ಕೆಲವರು ಕೆಲವು ವಸ್ತುಗಳನ್ನು ಸೃಷ್ಟಿಸುತ್ತಿರುವುದನ್ನು **ಇಂದ್ರಜಾಲ ವಿದ್ಯೆ** ಎನ್ನುತ್ತಾರೆ. ಹಾಗೇ ವಸ್ತುಗಳನ್ನಲ್ಲದೆ ಪ್ರಾಣವಿರುವ ಪ್ರಾಣಿಗಳನ್ನು, ಮನುಷ್ಯರನ್ನು ತೋರಿಸುವುದನ್ನು **ಮಹೇಂದ್ರಜಾಲ** ವಿದ್ಯೆ ಎನ್ನುತ್ತಾರೆ. ಕೆಲವು ವಸ್ತುಗಳ ಶಬ್ಧಗಳನ್ನು ಕೇಳಿ ಹೇಳುವುದೂ, ಕೆಲವು ಅಸ್ತ್ರಗಳನ್ನು ಪ್ರಯೋಗಿಸುವುದನ್ನೂ **ಗಜಕರ್ಣ** ಎಂದೂ, ಕೆಲವು ಜೀವರಾಶಿಗಳ ಶಬ್ದಗಳನ್ನೂ, ಮನುಷ್ಯರ ಮಾತುಗಳನ್ನೂ ಕೇಳಿ ಹೇಳುವುದು, ಕೆಲವು ಮರಣಕ್ಕೀಡಾಗುವಂತಹ ಪ್ರಯೋಗಗಳನ್ನು ಮಾಡುವುದೂ **ಗೋಕರ್ಣ** ವಿದ್ಯೆಗಳೆಂದು ಕರೆಯುತ್ತಾರೆ. ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ ವಿದ್ಯೆಗಳು ಮಂತ್ರಶಕ್ತಿಯಿಂದ ಕೂಡಿ ಕೊಂಡಿವೆ. ಆದ್ದರಿಂದ ಜ್ಞಾನಿಗಳು ಜ್ಞಾನಶಕ್ತಿಯನ್ನು ಬಿಟ್ಟು ಮಂತ್ರಶಕ್ತಿ ಕಡೆ ಹೋಗುವುದಿಲ್ಲ. ಮಾಯೆ ಎನ್ನುವುದು ಜ್ಞಾನಿಗಳಿಗೆ ವಿರುದ್ಧ ದಿಕ್ಕಿನಲ್ಲಿ ಇರುತ್ತದೆ.

ಆದ್ದರಿಂದ ಮಾಯೆ ಜ್ಞಾನಕ್ಕಿಂತ ದೊಡ್ಡವರನ್ನಾಗಿ ಮಾಂತ್ರಿಕರನ್ನು ತೋರಿಸುತ್ತದೆ. ಮಾಂತ್ರಿಕರನ್ನು ಮಾಂತ್ರಿಕರಾಗಿ ಅಲ್ಲದೆ ದೇವರೊಂದಿಗೆ ಸಮಾನವಾಗಿ, ಪ್ರತ್ಯಕ್ಷ ದೈವವೆಂದು ಪ್ರಜೆಗಳು ನಂಬುವಂತೆ ಮಾಡುವುದಕ್ಕೆ ಮಾಯೆ ಪ್ರತ್ಯೇಕವಾದ ಕೆಲಸವನ್ನು ಮಾಡುತ್ತಿದೆ. ಮಹಿಮೆಗಳು ಮೂರು ವಿಧಗಳೆಂದು ಮೊದಲೇ ಹೇಳಿದ್ದೇನೆ ಅಲ್ಲವೆ! ಅದರಲ್ಲಿ ಟಕ್ಕು ಟಮಾರಾಗಳೆಲ್ಲವೂ ಒಂದು ವಿಧವೆಂದು, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ, ಗೋಕರ್ಣ ವಿದ್ಯೆಗಳೆಲ್ಲವೂ ಎರಡನೇ ವಿಧವೆಂದು ಸಹ ತಿಳಿದುಕೊಂಡಿದ್ದೇವೆ. ಈ ಎರಡು ವಿಧಗಳ ಮಹಿಮೆಗಳಿಂದ ಯಾವ ಮನುಷ್ಯನಾದರೂ ಒಬ್ಬ ದೊಡ್ಡ ವ್ಯಕ್ತಿಯಾಗಿ, ದೊಡ್ಡ ಸ್ವಾಮೀಜಿಯಾಗಿ ಹೆಸರು ತಂದುಕೊಳ್ಳುವನು. ಅಂತಹ ವ್ಯಕ್ತಿ ಅಷ್ಟು ವಿಧಗಳಲ್ಲಿ ದೊಡ್ಡದಾಗಿ ಪ್ರಚಾರ ಹೊಂದಿದರೂ, ಈತನೇ ಸಾಕ್ಷಾತ್ತು ದೇವರು ಎನ್ನುವ ಹೆಸರನ್ನು ತಂದುಕೊಳ್ಳಲಾರನು. ಎಂತಹ ದೊಡ್ಡವನನ್ನಾದರೂ ದೇವರೊಂದಿಗೆ ಸಮಾನನೆಂದು ಪ್ರಜೆಗಳೆನ್ನುತ್ತಾರೆ, ಆದರೆ ದೇವರೆಂದು ಅನ್ನುವುದಿಲ್ಲ.

ಮಾಯೆ ಅಂದುಕೊಂಡರೆ ಯಾರನ್ನಾದರೂ ಈತನೇ ದೇವರೆಂದು ಗುರುತಿಸುವಂತೆ ಮಾಡಬಲ್ಲದು. ಇದಕ್ಕೂ ಮೊದಲು ನಾವು ಹೇಳಿಕೊಂಡ ಎರಡು ವಿಧಗಳ ಮಹಿಮೆಗಳಿಗೆ ಸಂಬಂಧಿಸಿದ ವಿದ್ಯೆಗಳನ್ನು ಯಾವ ಮನುಷ್ಯನಾದರೂ ಮಾಡಬಹುದು. ಒಂದುವೇಳೆ ಮಾಡಲಾರದೆ ಹೋದರೂ ಇಂತಹ ವಿದ್ಯೆಗಳಿಂದಲೆ ಈ ಮಹಿಮೆಗಳು ನಡೆಯುತ್ತಿವೆಯೆಂದು ಹೇಳಬಹುದು. ಆದ್ದರಿಂದ ವಿದ್ಯೆಗಳಿಂದ ನಡೆಯುವ ಮಹಿಮೆಗಳನ್ನು ಅಲ್ಲದೆ, ಮಾಯೆ (ಪ್ರಕೃತಿ) ಪ್ರತ್ಯೇಕವಾಗಿ ತನ್ನ ಶಕ್ತಿಯಿಂದ ಒಬ್ಬ ಮನುಷ್ಯನನ್ನು ದೊಡ್ಡದಾಗಿ ಜನರಿಗೆ ತೋರಿಸಬಲ್ಲದು. ಮಾಯೆ ಸ್ವತಃವಾಗಿ ತೋರಿಸಿದ ಯಾವ ಮನುಷ್ಯನನ್ನಾದರೂ ಪ್ರಜೆಗಳು ದೇವರು ಎಂದು ಕರೆಯಬೇಕಾಗಿದ್ದೆ! ಮಾಯೆ ಮನುಷ್ಯನನ್ನು ದೇವರಾಗಿ ತೋರಿಸಿದರೆ, ಅಂತಹ ಮನುಷ್ಯನನ್ನು ಮನುಷ್ಯರು ಸಾಕ್ಷಾತ್ತು ದೇವರೆಂದು ಕೊಂಡಾಡುವುದು ನಡೆಯುತ್ತದೆ. ಪ್ರಪಂಚದಲ್ಲಿ ಎಷ್ಟು ದೊಡ್ಡ ಮೇಧಾವಿಗಳಾದರೂ, ಎಷ್ಟು ದೊಡ್ಡ ಹುದ್ದೆ ಇರುವ ವ್ಯಕ್ತಿಗಳಾದರೂ, ವಿದ್ಯಾವಂತರಾದರೂ, ಶ್ರೀಮಂತರಾದರೂ ಯಾರಾದರೂ ಮಾಯೆ ದೊಡ್ಡದಾಗಿ ತೋರಿಸಿದ ವ್ಯಕ್ತಿಯನ್ನು ಯಾವ ಮಾತ್ರ ಸಂಶಯವಿಲ್ಲದೆ ಆತನನ್ನೇ

ಪ್ರತ್ಯಕ್ಷ ದೈವವೆಂದು, ನಡೆದಾಡುವ ದೇವರೆಂದೂ, ಕಾಣಿಸುವ ಪರಮಾತ್ಮ ಎಂದು ಹೊಗಳುವರು. ಸಾಕ್ಷಾತ್ತು ದೇವರಾಗಿ ಒಬ್ಬ ಮನುಷ್ಯನನ್ನು ಇತರರು ಹೇಳಬೇಕೆಂದರೆ ಮಾಯೆ ಆತನ ಹೆಸರಿನ ಮೇಲೆ, ಆತನ ಆಕಾರದ ಮೇಲೆ ಮೂರನೆ ವಿಧ ಮಹಿಮೆಯನ್ನು ಪ್ರದರ್ಶಿಸುತ್ತಿದೆ. ಇದಕ್ಕೂ ಮೊದಲು ಹೇಳಿದ ಎರಡು ವಿಧಗಳ ಮಹಿಮೆಗಳನ್ನು ಮನುಷ್ಯ ತಾನು ಕಲಿತ ವಿದ್ಯೆಗಳಿಂದ ತಾನೇ ಪ್ರದರ್ಶಿಸಿಕೊಂಡು ದೇವರಷ್ಟವನಾಗಿ ಹೆಸರು ತಂದುಕೊಳ್ಳಬಹುದೆಂದು ಹೇಳಿದ್ದೇವೆ. ಆದರೆ ಒಬ್ಬ ಮನುಷ್ಯನನ್ನು ಈತನೇ ದೇವರೆಂದು ಹೇಳುವುದಕ್ಕೆ ಮನುಷ್ಯ ಮಾಡುವ ಮಹಿಮೆಗಳು ಕೆಲಸಕ್ಕೆ ಬರುವುದಿಲ್ಲ. ಆದ್ದರಿಂದ ಒಬ್ಬ ಮನುಷ್ಯನನ್ನು ಮಾಯೆಯೇ ತನ್ನ ಮಹಿಮೆಗಳ ಮುಖಾಂತರ ಇತರರಿಂದ ದೇವರೆಂದು ಹೇಳಿಸುತ್ತಿದೆ. ಮನುಷ್ಯ ಮಾಡುವ ಮಹಿಮೆಗಳು ಅಲ್ಲದೆ, ಪ್ರತ್ಯೇಕವಾಗಿ ಮಾಯೆ ಮಾಡುವ ಮಹಿಮೆಗಳು ಹೇಗಿರುತ್ತವೊ ಕೆಲವು ಸಂಘಟನೆಗಳಿಂದ ವಿವರಿಸಿಕೊಳ್ಳೋಣ.

ಯಾವ ಮನುಷ್ಯನನ್ನಾದರೂ ದೇವರಕಡೆ ಹೋಗದಂತೆ, ದೇವರ ಜ್ಞಾನ ತಿಳಿಯದಂತೆ ಮಾಡುವುದಕ್ಕೆ, ಮನುಷ್ಯರಿಗೆ ದೇವರ ಧರ್ಮಗಳನ್ನು ತಿಳಿಯದಂತೆ ಮಾಡುವುದಕ್ಕೆ, ಯಾವ ಯೋಗಿಯಾದರೂ ದೇವರ ಜ್ಞಾನವನ್ನು ಹೇಳಿದರೆ, ಮನುಷ್ಯರು ಅದನ್ನು ಹಿಡಿಸಿಕೊಳ್ಳದೆ ಇರುವುದಕ್ಕೆ, ಮಹಿಮೆಗಳು ಎನ್ನುವ ತನ್ನ ಬಲೆಯನ್ನು ಮಾಯೆ ಮನುಷ್ಯರ ಮೇಲೆ ಬೀಸುತ್ತಿದೆ. ಬಹುಶಃ ಆ ಬಲೆಯಲ್ಲಿ ಸಿಲುಕಿಕೊಳ್ಳದವರ್ಯಾರೂ ಇರುವುದಿಲ್ಲವೆಂದೇ ಹೇಳಬಹುದು. ಇದು ಮಾಯೆ ಬಲೆ ಎಂದು ತಿಳಿದ ಜ್ಞಾನಿಗಳು ಮಾತ್ರವೇ ಅದರಿಂದ ತಪ್ಪಿಸಿಕೊಳ್ಳುವರು. ಅಂತಹ ಜ್ಞಾನಿಗಳು ಭೂಮಿಮೇಲೆ ಅಪರೂಪವಾಗಿ ಇರುತ್ತಾರೆ. ಆದ್ದರಿಂದ ಮಾಯೆ ಬಲೆಯಲ್ಲಿ ಸುಮಾರು ಎಲ್ಲರೂ ಸಿಲುಕಿಕೊಂಡಿರುತ್ತಾರೆಂದೇ ಹೇಳಬಹುದು. ಮಾಯೆ ಮನುಷ್ಯರ ಮೇಲೆ ಬೀಸುವ ಬಲೆ ಎರಡು ವಿಧಗಳಾಗಿ ಇರುತ್ತದೆ. **ಒಂದು ವಿಧವಾದ ಬಲೆ ತಾನು ಯಾರನ್ನಾದರೆ ದೊಡ್ಡದಾಗಿ ತೋರಿಸಬೇಕೋ ಆತನ ಹೆಸರಿನ ಮೇಲೆ ಇರುತ್ತದೆ. ಈ ಬಲೆಯಿಂದ ಯಾರಾದರೂ ತಪ್ಪಿಸಿಕೊಳ್ಳುವ ಅವಕಾಶವಿದ್ದರೆ, ಅಂತಹ ಅವಕಾಶ ಇಲ್ಲದೆ ಮನುಷ್ಯ ಆಕಾರದ ಮೇಲೆ ಎರಡನೆ ಬಲೆ ಇರುತ್ತದೆ. ಎರಡನೆಯ ಬಲೆಯಿಂದ ಯಾರೂ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಿಲ್ಲ.**

ಮನುಷ್ಯನ ಹೆಸರಿನ ಮೇಲೆ ಮಾಯೆ ಪ್ರಯೋಗಿಸುವ ಬಲೆ ಹೇಗಿರುತ್ತದೋ ವಿವರಿಸಿಕೊಳ್ಳೋಣ.

ಪ್ರಪಂಚದಲ್ಲಿ ಒಬ್ಬ ಮನುಷ್ಯ ತನ್ನ ಸ್ವಂತ ವಿದ್ಯೆಗಳಿಂದ ಮಹಿಮೆ ಮಾಡುತ್ತಾ, ಪ್ರಜೆಗಳಲ್ಲಿ ಸ್ವಲ್ಪ ಹೆಸರು ಹೊಂದಿದ ನಂತರ ಅವನನ್ನು ಮಾಯೆ ಮೊದಲು ತನ್ನ ಪ್ರತಿನಿಧಿಯಾಗಿ ಆಯ್ಕೆ ಮಾಡಿಕೊಂಡು, ಆತನನ್ನು ದೊಡ್ಡದಾಗಿ ಪ್ರಪಂಚ ಪ್ರಜೆಗಳಿಗೆ ತೋರಿಸಬೇಕೆಂದುಕೊಳ್ಳುತ್ತದೆ. ಹಾಗೆ ಮಾಯೆ ಒಬ್ಬ ವ್ಯಕ್ತಿಯನ್ನು ತನ್ನ ಪ್ರತಿನಿಧಿಯಾಗಿ ತೆಗೆದುಕೊಂಡು ಆತನನ್ನು ದೇವರಾಗಿ ತೋರಿಸುವುದಕ್ಕೆ ಪ್ರಯತ್ನಿಸುತ್ತದೆ. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ ಮಂತ್ರ ವಿದ್ಯೆಗಳಲ್ಲಿ ಸ್ವಲ್ಪ ಹೆಸರು ತಂದುಕೊಂಡ ತನ್ನ ಪ್ರತಿನಿಧಿ ಹತ್ತಿರಕ್ಕೆ ಕೋರಿಕೆಗಳಿಗೋಸ್ಕರ ಕೆಲವರು ಬರುತ್ತಿರುವುದನ್ನು ಗಮನಿಸಿದ ಮಾಯೆ ಅವರ ಕೋರಿಕೆಗಳನ್ನು ಈಡೇರುವಂತೆ ಮಾಡುತ್ತದೆ. ಹೀಗೆ ಈಡೇರಿದ ಕೋರಿಕೆಗಳು ತನ್ನ ಪ್ರತಿನಿಧಿಯಿಂದಲೇ ಈಡೇರಿದಂತೆ ಪ್ರಜೆಗಳನ್ನು ನಂಬಿಸುತ್ತದೆ. ಆ ವಿಧವಾಗಿ ತನ್ನ ಪ್ರತಿನಿಧಿಯಾದ ವ್ಯಕ್ತಿಗೆ ಸ್ವಲ್ಪ ಹೆಸರು ಪ್ರಖ್ಯಾತಿಗಳು ಬರುವಂತೆ ಮಾಡುತ್ತದೆ. ಉದಾಹರಣೆಗೆ ನೀನು ನೋಡಿದ ದಾದಾಬಾಬಾರವರನ್ನೇ ತೆಗೆದುಕೊಳ್ಳೋಣ. ದಾದಾಬಾಬಾರವರು ಮೊದಲು ಸಣ್ಣ ಪುಟ್ಟ ಮಹಿಮೆಗಳನ್ನು ಮಾಡಿ ಜನರಿಗೆ ತೋರಿಸುತ್ತಿದ್ದನು. ಹಾಗಿರುವಾಗ ಪ್ರಜೆಗಳು ಹೆಚ್ಚಾಗಿ ದಾದಾಬಾಬಾರವರ ಹತ್ತಿರಕ್ಕೆ ಬರುವುದಕ್ಕೆ ಅಭ್ಯಾಸವಾಗಿದ್ದಾರೆ. ಅಂತಹ ವ್ಯಕ್ತಿಯೊಂದಿಗೆ ತನ್ನ ಕೆಲಸ ಸುಲಭವಾಗಿ ಇರುತ್ತದೆ. ಆದ್ದರಿಂದ ಮಾಯೆ, ದಾದಾಬಾಬಾರವರನ್ನು ತನ್ನ ಪ್ರತಿನಿಧಿಯಾಗಿ ಆಯ್ಕೆ ಮಾಡಿಕೊಂಡು ಆತನಿಂದ ತಮ್ಮ ಕೋರಿಕೆಗಳು ನೆರವೇರುತ್ತಿವೆ ಎನ್ನುವ ಭ್ರಮೆಯನ್ನು ಪ್ರಜೆಗಳಿಗೆ ಉಂಟು ಮಾಡಿದೆ. ಅದರಿಂದ ದಾದಾಬಾಬಾರವರ ಹತ್ತಿರಕ್ಕೆ ಹತ್ತರ ಸಂಖ್ಯೆಯಲ್ಲಿ ಬರುವ ಭಕ್ತರು ನೂರು ಸಂಖ್ಯೆಯಲ್ಲಿ ಬರುವುದಕ್ಕೆ ಪ್ರಾರಂಭಿಸಿದ್ದಾರೆ. ಆಗ ದೇಶವೊಂದರ ನಾಲ್ಕುಮೂಲೆಗಳಿಂದ ದಾದಾಬಾಬಾರವರ ಹತ್ತಿರಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಪ್ರಜೆಗಳು ಬರುವಂತೆ ಮಾಯೆ ಮಾಡಬೇಕೆಂದುಕೊಂಡಿದೆ. ಅಗ ಬೊಂಬಾಯ್ ನಗರದಲ್ಲಿ ಸಿನೀ ಪರಿಶ್ರಮದಲ್ಲಿ ದೊಡ್ಡ ಹೀರೊ ಆಗಿ ಹೆಸರುಹೊಂದಿದ ಒಬ್ಬ ವ್ಯಕ್ತಿಗೆ ಯಾವುದೋ ರೋಗ ಬರುವಂತೆ ಮಾಡಿ, ಆತನನ್ನು ಆಸ್ಪತ್ರೆಯಲ್ಲಿ ಸೇರುವಂತೆ

ಮಾಡಿದೆ. ಆ ರೋಗ ಯಾವುದೋ ಡಾಕ್ಟರ್‌ಗಳಿಗೆ ಅರ್ಥವಾಗಲಿಲ್ಲ. ಅದರಿಂದ ಅವರು ಕೊಡುವ ಔಷಧಗಳು ಆರೋಗದ ಮೇಲೆ ಕೆಲಸ ಮಾಡುತ್ತಿಲ್ಲ. ಆಗ ಆ ಹೆಸರು ಗಳಿಸಿದ ಹೀರೋ ಮತ್ತಷ್ಟು ಅನಾರೋಗ್ಯ ಪಾಲಾದನು. ಹಾಗೆ ಅಷ್ಟು ದೊಡ್ಡ ಹೀರೋ ಅನಾರೋಗ್ಯ ಪಾಲಾಗುವುದು ದೇಶದಲ್ಲಿನ ಪ್ರಜೆಗಳೆಲ್ಲರಿಗೂ ತಿಳಿದುಹೋಗಿ, ತಮ್ಮ ಅಭಿಮಾನ ಹೀರೋ ಏನಾಗುತ್ತಾನೋ ಏನೋ ಎಂದು ಎಲ್ಲರೂ ಚಿಂತಿಸುತ್ತಿದ್ದರು. ಕೆಲವರಾದರೇ ಆ ಹೀರೋ ಹೆಸರಿನ ಮೇಲೆ ಗುಡಿಯಲ್ಲಿ ಅರ್ಚನೆಗಳು ಮಾಡಿಸುತ್ತಿದ್ದರು. ಮತ್ತೆ ಕೆಲವರು ಆತನ ಆರೋಗ್ಯ ಚೆನ್ನಾಗಾಗಬೇಕೆಂದು ಯಜ್ಞಗಳನ್ನು ಸಹ ಮಾಡಿಸುತ್ತಿದ್ದರು ಇಂತಹ ಪರಿಸ್ಥಿತಿಯಲ್ಲಿ ಆ ಹೀರೋರವರ ಕಿವಿಯಲ್ಲಿ ಒಂದು ಶಬ್ದ ಕೇಳಿಸಲು ಆರಂಭವಾಯಿತು. ಆ ಶಬ್ದ ದೂರದಿಂದ ಯಾರೋ ಹೇಳಿದಂತೆ, ತನ್ನೊಂದಿಗೆ ಮಾತನಾಡುತ್ತಿದ್ದಂತೆ ಕೇಳಿಸುತ್ತಿದೆ. ಆಗ ಆ ಹೀರೋ, ಆ ಮಾತುಗಳನ್ನು ಶ್ರದ್ಧೆಯಿಂದ ಕೇಳಿದ್ದಾನೆ. ಆತನಿಗೆ ಆ ಮಾತುಗಳು ಹೀಗೆ ಕೇಳಿಸಿವೆ. “ನಾನು ದಾದಾಬಾಬಾ, ಶಾಂತಿನಗರದಿಂದ ಹೇಳುತ್ತಿದ್ದೇನೆ. ನಿನ್ನ ರೋಗವನ್ನು ನಾನು ತೆಗೆದುಕೊಂಡಿದ್ದೇನೆ. ಈ ದಿನದಿಂದ ನೀನು ಆರೋಗ್ಯವಂತನಾಗುತ್ತೀಯ. ನನ್ನ ದಯೆ ನಿನ್ನ ಮೇಲೆ ಯಾವಾಗಲೂ ಇರುತ್ತದೆ.” ಆ ಮಾತುಗಳನ್ನು ಕೇಳಿದ ಹೀರೋರವರು ಕೂಡಲೇ ಎದ್ದು ಕುಳಿತು ಕೊಂಡಿದ್ದಾನೆ. ತಾನು ಕೇಳಿಸಿಕೊಂಡ ಮಾತುಗಳನ್ನು ಪಕ್ಕದಲ್ಲೇ ಇದ್ದ ತನ್ನ ಬಂದುಗಳಿಗೆ ಹೇಳಿದ್ದಾನೆ. ಮಾರನೆ ದಿನಕ್ಕೆ ತನ್ನ ಆರೋಗ್ಯ ಚೆನ್ನಾಗಾಯಿತು. ಬಾಬಾರವರು ತಮ್ಮ ಅಭಿಮಾನ ಹೀರೋಗೆ ಹೇಳಿದ ಮಾತುಗಳು ಕೊನೆಗೆ ದೇಶವ್ಯಾಪ್ತವಾಗಿ ತಿಳಿದು ಹೋಗಿವೆ. ಆ ಒಂದು ಸಂಘಟನೆಯಿಂದ ದಾದಾಬಾಬಾರವರ ಹೆಸರು ದೇಶವೆಲ್ಲಾ ತಿಳಿದುಹೋಯಿತು. ನಂತರ ನಾಲ್ಕು ದಿನಗಳಿಗೇ ಹೀರೋರವರು ದಾದಾಬಾಬಾ ದರ್ಶನಕ್ಕೆ ಬಂದು ಹೋಗಿದ್ದಾನೆ. ಅಂದಿನಿಂದ ಸಾವಿರ ಸಂಖ್ಯೆಯಲ್ಲಿ ದಾದಾಬಾಬಾರವರ ದರ್ಶನಕ್ಕೆ ಪ್ರಜೆಗಳು ಬರುವುದಕ್ಕೆ ಪ್ರಾರಂಭಿಸಿದ್ದಾರೆ.

ದಾದಾಬಾಬಾರವರು ಈ ದೇಶದಲ್ಲೇ ಅಲ್ಲದೆ ಪ್ರಪಂಚ ವ್ಯಾಪ್ತವಾಗಿ ವಿದೇಶಗಳಲ್ಲಿ ಸಹ ಈತನೇ ದೇವರೆನ್ನುವಹಾಗೆ ಮಾಯೆ ಮಾಡಬೇಕೆಂದುಕೊಂಡಿದೆ.

ಒಂದು ದಿನ ವಿದೇಶೀ ಭಕ್ತನು ಬಂದು ದಾದಾಬಾಬಾರವರ ದರ್ಶನ ಮಾಡಿಕೊಂಡು ಹೋಗಿದ್ದಾನೆ. ಆತನು ಭಾರತದೇಶವೆಲ್ಲಾ ಪರ್ಯಟಿಸಿ, ಈ ದೇಶದಲ್ಲಿನ ಸಂಸ್ಕೃತಿಯನ್ನು ಪೂರ್ತಿ ಅಧ್ಯಯನ ಮಾಡಿ ಹೋಗಿದ್ದಾನೆ. ಒಂದು ದಿನ ಭಾರತದೇಶದಲ್ಲಿನ ಸಂಪ್ರದಾಯದ ಪ್ರಕಾರ ತಮ್ಮ ದೇಶವಾದ ಅಮೆರಿಕಾದಲ್ಲಿ ಯಜ್ಞ ಮಾಡಬೇಕೆಂದುಕೊಂಡಿದ್ದಾನೆ. ಯಜ್ಞ ಮಾಡುವುದಕ್ಕೆ ಭಾರತ ದೇಶದಿಂದ ವೇದ ಪಂಡಿತರಾದ ಬ್ರಾಹ್ಮಣರನ್ನು ಬರಮಾಡಿಕೊಂಡಿದ್ದಾನೆ. ಶುಭಲಗ್ನವನ್ನು ನೋಡಿ ಯಜ್ಞ ಪ್ರಾರಂಭಿಸಿದ್ದಾರೆ. ಮೊದಲು ಯಜ್ಞಕುಂಡದಲ್ಲಿ ಅಗ್ನಿಗೋಸ್ಕರ ಕಟ್ಟಿಗೆಗಳನ್ನು ಉಜ್ಜುವುದಕ್ಕೆ ಪ್ರಾರಂಭಿಸಿದ್ದಾರೆ. ಒಂದು ಕಟ್ಟಿಗೆ ರಂಧ್ರದಲ್ಲಿ ಮತ್ತೊಂದು ಕಟ್ಟಿಗೆಯನ್ನಿಟ್ಟು ಉಜ್ಜುತ್ತಾ ತಿರಿಗಿಸುವುದರಿಂದ ಏರ್ಪಟ್ಟ ಅಗ್ನಿಯಿಂದ ಯಜ್ಞ ಮಾಡಬೇಕಾಗಿರುತ್ತದೆ. ಅವರು ಅಗ್ನಿಗೋಸ್ಕರ ಶ್ರಮಿಸುವ ಸಮಯದಲ್ಲಿ ಅವರಿಗೆ ಒಂದು ಶಬ್ದ ಕೇಳಿಸಿತು. ಆ ಶಬ್ದದಲ್ಲಿ ತಾನು ದಾದಾಬಾಬಾಯೆಂದು, ನೀವು ಅಗ್ನಿಗೋಸ್ಕರ ಶ್ರಮಪಡಬೇಡವೆಂದು, ಭಾರತದೇಶದಿಂದ ನಾನೇ ಅಗ್ನಿಯನ್ನು ಅಲ್ಲಿಗೆ ಕಳುಹಿಸುತ್ತಿದ್ದೇನೆಂದು, ನಾನು ಕಳುಹಿಸಿದ ಅಗ್ನಿಯಿಂದಲೇ ಯಜ್ಞ ಮಾಡೆಂದು ಕೇಳಿಸಿತು. ದಾದಾಬಾಬಾರವರು ಅಲ್ಲಿ ಇಲ್ಲದಿದ್ದರೂ, ಆತನ ಮಾತುಗಳು ಅಮೆರಿಕಾದಲ್ಲಿ ಕೇಳಿಸುವುದು ಅಲ್ಲಿರುವ ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿತು. ಆ ಮಾತುಗಳು ಕೇಳಿಸಿದ ನಿಮಿಷಕ್ಕೇ ಅವರಿರುವ ಕಡೆ ಹೊಗೆ, ವ್ಯಾಪಿಸಿಕೊಂಡಂತಾಯಿತು. ಎಲ್ಲರೂ ನೋಡುತ್ತಿದ್ದಂತೆ ಆ ಹೊಗೆ ಒಂದು ಕಡೆ ಕುಪ್ಪೆಯಾಗಿ ಸೇರುವುದು ಆರಂಭಿಸಿತು. ಹಾಗೆ ಒಂದೇ ಕೇಂದ್ರದೊಳಗೆ ಸೇರಿದ ಹೊಗೆ ಒಂದೇಸಲ ಉರಿದು ಯಜ್ಞಕುಂಡದಲ್ಲಿ ಬಿದ್ದಿತು. ಅದು ನೋಡಿದ ಎಲ್ಲರೂ ದಾದಾಬಾರವರು ತಾನು ಹೇಳಿದಂತೆ ಅಗ್ನಿಯನ್ನು ಕಳುಹಿಸಿದ್ದಾನೆಂದುಕೊಂಡಿದ್ದಾರೆ. ಎರಡನೆ ದಿನ ಆ ವಾರ್ತೆ ಅಮೆರಿಕಾ ಎಲ್ಲಾ ಹರಡಿಹೋಗಿದೆ. ಹಾಗೆ ನಡೆಯುವುದರಿಂದ ದಾದಾಬಾಬಾರವರು ಅಮೆರಿಕಾದಲ್ಲಿ ಸಹ ಎಲ್ಲರಿಗೂ ತಿಳಿದುಹೋಗಿ, ಆತನಿಗೆ ಅಮೆರಿಕಾ ಭಕ್ತರು ಸಹ ಹೆಚ್ಚಾಗಿ ಹೋಗಿದ್ದಾರೆ.

ಬೊಂಬಾಯ್‌ನಲ್ಲಿನ ಆಸ್ಪತ್ರೆಯಲ್ಲಿ ಸಿನಿಮಾ ಹೀರೋಗೆ ಕೇಳಿಸಿದ ಮಾತುಗಳಾಗಲೀ, ಅಮೆರಿಕಾದಲ್ಲಿ ಕೇಳಿಸಿದ ಮಾತುಗಳಾಗಲೀ ವಾಸ್ತವವಾಗಿ

ದಾದಾಬಾಬಾರವರಿಗೆ ತಿಳಿದಿಲ್ಲ. ದಾದಾಬಾಬಾರವರಿಗೂ, ಆ ಮಾತುಗಳಿಗೂ ಯಾವ ಸಂಬಂಧವಿಲ್ಲ. ದಾದಾಬಾಬಾಗೆ ಇದ್ಯಾವುದೂ ತಿಳಿಯದಂತೆ ಅವು ನಡೆದುಹೋಗಿವೆ. ಹಾಗೆ ನಡೆದಂತೆ ನಂತರ ದಾದಾಬಾಬಾರವರಿಗೆ ತಿಳಿದರೂ, ಆತನಿಗೆ ಅವು ಒಳ್ಳೆಯದನ್ನು ಕೈಗೂಡಿಸುವ ಸಂಘಟನೆಗಳೇ ಆದ್ದರಿಂದ, ಆ ಕಾರ್ಯಗಳನ್ನು ತಾನೇ ಮಾಡಿದಂತೆ ಮೌನವಾಗಿ ಇದ್ದಾನೆ. ಆ ಕಾರ್ಯಗಳಿಗೂ, ತನಗೂ ಯಾವ ಮಾತ್ರ ಸಂಬಂಧವಿಲ್ಲದಿದ್ದರೂ ಅ ವಿಷಯವನ್ನು ಹೊರಗೆ ಹೇಳಲಿಲ್ಲ. ಆ ವಿಷಯಗಳನ್ನು ಇತರರು ತನ್ನ ಮುಂದೆ ಪ್ರಸ್ತಾವಿಸಿದಾಗ ಅದಕ್ಕೆ ತಕ್ಕಂತೆ ನಟಿಸುತ್ತಾ, ತಲೆ ಅಲ್ಲಾಡಿಸುತ್ತಾ, ಕೈಯಿಂದ ಆಶೀರ್ವಾದ ಮಾಡುತ್ತಾ ಕಾಣಿಸುವುದರಿಂದ ದಾದಾಬಾಬಾರವರನ್ನು ಎಲ್ಲರೂ ದೊಡ್ಡವನೆಂದು, ನಿಜವಾದ ದೇವರೆಂದು ಅಂದುಕೊಳ್ಳುವುದು ನಡೆದಿದೆ. ಬಾಬಾರವರಿಗೆ ಆ ವಿಷಯ ಸ್ವಲ್ಪವಾದರೂ ಅರ್ಥವಾಗದಿದ್ದರೂ, ಹಾಗೆ ನಡೆಯುವುದು ತನ್ನ ದೊಡ್ಡತನವೇ ಎಂದು ತಿಳಿದುಕೊಂಡಿದ್ದಾನೆ. ದಾದಾಬಾಬಾರವರನ್ನು ಪ್ರತ್ಯಕ್ಷದೈವವಾಗಿ ಪ್ರಜೆಗಳಿಗೆ ತೋರಿಸುವುದು ಮಾಯೆವೊಂದರ ಮುಖ್ಯ ಉದ್ದೇಶ. ಆದ್ದರಿಂದ ದಾದಬಾಬರವರ ಹೆಸರನ್ನು ಹೇಳಿ ಮಾಯೆಮಾತೆ ಹಾಗೆ ಮಾಡುವುದು ನಡೆದಿದೆ. ಆ ಕೆಲಸದಿಂದ ದೇವರೂ, ದೇವರ ಜ್ಞಾನವೂ ಎಂದು ಯಾರೂ ಪರದಾಡದಂತೆ ನಿಜವಾದ ದೇವರು ಈತನೇ ಎಂದು ಬಾಬಾರವರನ್ನೇ ಹೇಳಿಕೊಳ್ಳುವರು. ಪ್ರಜೆಗಳ ದೃಷ್ಠಿ ಎಲ್ಲವೂ ಅಸಲಾದ ದೇವರ ಮೇಲೆ ಹೋಗದಂತೆ ಬಾಬಾಮೇಲೆಯೇ ಇರುತ್ತದೆ.

ಇಂತಹ ಮಹಿಮೆಗಳನ್ನು ಸ್ವತಃವಾಗಿ ಮಾಯಯೇ ಮಾಡುತ್ತಾ ಬಾಬಾರವರನ್ನು ದೇವರಾಗಿ ತೋರಿಸತೊಡಗಿತು. ಇಲ್ಲಿಯವರೆಗೂ ಬಾಬಾರವರ ಹೆಸರನ್ನು ಮಾತ್ರ ಹೇಳಿ, ಆತನ ಮಾತುಗಳಾಗಿ ಕೇಳಿಸಿದ ಮಾಯೆ, ಈ ಸಲ ದಾದಾಬಾಬಾರವರ ರೂಪವನ್ನು ತೋರಿಸಿ ಮಹಾತ್ಯವನ್ನು ಮಾಡಬೇಕೆಂದು ಕೊಂಡಿದೆ. ಢಿಲ್ಲೀಯಲ್ಲಿ ದಾದಾಬಾಬಾರವರ ಭಕ್ತನು ಬಾಬಾರವರ ಭಾವಚಿತ್ರವನ್ನು ಇಟ್ಟುಕೊಂಡು ಪ್ರತಿ ದಿನ ಬೆಳಗ್ಗೆ ನಮಸ್ಕಾರ ಮಾಡುತ್ತಿದ್ದನು. ಒಂದು ದಿನ ಬಾಬಾರವರ ಭಾವಚಿತ್ರಕ್ಕೆ ನಮಸ್ಕಾರ ಮಾಡುವುದಕ್ಕೆ ಫೋಟೊ ಇರುವ ಕೊಠಡಿಯೊಳಗೆ ಹೋಗಿದ್ದಾನೆ. ಅಲ್ಲಿ ಬಾಬಾರವರ ಫೋಟೊದ ತುಂಬೆಲ್ಲಾ

ಕುಂಕುಮ ಕಾಣಿಸುತ್ತಾ ಸ್ವಲ್ಪ ಸ್ವಲ್ಪ ಕೆಳಗೆ ಬೀಳುತ್ತಿದೆ. ಆ ದೃಶ್ಯವನ್ನು ನೋಡಿದ ಆ ಭಕ್ತನು ತನ್ನ ಮನೆಯಲ್ಲಿ ಬಾಬಾರವರ ಭಾವಚಿತ್ರದಿಂದ ಕುಂಕುಮ ಬೀಳುತ್ತಿದೆಯೆಂದು ಅಕ್ಕಪಕ್ಕದವರಿಗೆ ಹೇಳಿದನು. ಹಾಗೆ ಆ ವಿಷಯ ಆ ಪ್ರಾಂತವೆಲ್ಲಾ ಹರಡಿಹೋಗಿ, ಜನ ಗುಂಪು ಗುಂಪುಗಳಾಗಿ ಬಂದು ಆ ವಿಚಿತ್ರವನ್ನು ನೋಡಿ, ಬಾಬಾರವರು ಸಾಕ್ಷಾತ್ತು ದೇವರೇ ಎಂದು ಹೇಳಿಕೊಂಡರು. ಈ ವಿಧವಾಗಿ ದೇಶದಲ್ಲಿನ ವಿವಿಧ ಪಟ್ಟಣಗಳಲ್ಲಿ ಬಾಬಾರವರ ಆಕಾರದಿಂದ ಸುಗಂಧದ ಎಣ್ಣೆ ಒಂದು ಕಡೆ, ಜೇನು ಒಂದು ಕಡೆ, ನೀರು ಒಂದು ಕಡೆ, ವಿಭೂತಿ ಒಂದು ಕಡೆ ಬೀಳುವುದರಿಂದ ಬಾಬಾರವರ ಮಹಾತ್ಯವೂ, ದೊಡ್ಡತನವೂ ದೇಶವೆಲ್ಲಾ ಹರಡಿಹೋಗಿ, ಆತನನ್ನು ಪ್ರತ್ಯಕ್ಷ ದೈವವಾಗಿ ಭಾವಿಸತೊಡಗಿದರು. ಈ ಕೆಲಸಗಳಿಗು ದಾದಾಬಾಬಾರವರಿಗು ಯಾವ ಸಂಬಂಧವಿಲ್ಲವೆಂದು ಜ್ಞಾಪಕ ಇಟ್ಟುಕೊಳ್ಳಬೇಕು. ಈ ಕೆಲಸವೆಲ್ಲವನ್ನೂ ಮಾಯೆಯೇ ಬಾಬಾರವರ ಆಕಾರವನ್ನು ಅಡ್ಡ ಇಟ್ಟುಕೊಂಡು ಮಾಡುವುದರಿಂದ ಆ ಕೆಲಸಗಳಲ್ಲಿನ ಕೀರ್ತಿ ಪ್ರತಿಷ್ಠೆಗಳೆಲ್ಲವೂ ಬಾಬಾರವರಿಗೆ ದಕ್ಕಿವೆ. ಮಾಯೆಯೇ ಈ ಕೆಲಸಗಳು ಮಾಡುತ್ತಿದೆಯೆನ್ನುವ ವಿಷಯ ಪ್ರಪಂಚದಲ್ಲಿ ಯಾರಿಗೂ ತಿಳಿದಿಲ್ಲ. ಕೊನೆಗೆ ದಾದಾಬಾಬಾಗೂ ಸಹ ತಿಳಿದಿಲ್ಲ. ತನಗಿರುವ ಶಕ್ತಿಯಿಂದ ಹಾಗೆ ನಡೆದಿವೆಯೆಂದು ದಾದಾಬಾಬಾ ತಿಳಿದುಕೊಳ್ಳುವುದು ನಡೆದಿದೆ.

ಚಿಕ್ಕಚಿಕ್ಕ ಮಹಿಮೆಗಳನ್ನು ತನಗೆ ತಿಳಿದ ವಿದ್ಯೆಗಳಿಂದ ಮಾಡುವ ಬಾಬಾರವರಿಗೆ ಕೊನೆಗೆ ಸ್ವದೇಶದಲ್ಲೂ, ವಿದೇಶದಲ್ಲೂ ಒಳ್ಳೆಯ ಹೆಸರು ಪ್ರಖ್ಯಾತಿಗಳು ಬಂದಿವೆ. ಬಾಬಾರವರು ತನಗೆ ಒಳ್ಳೆಯದೆ ನಡೆಯುತ್ತಿದೆಯೆಂದುಕೊಂಡಿದ್ದಾನೆ. ಆದರೆ ಮಾಯೆಯಿಂದ ಹಾಗೆ ನಡೆಯುತ್ತಿವೆಯೆಂದು ತನಗೆ ಯಾವುದೂ ತಿಳಿದಿಲ್ಲ. ಇವು ಪ್ರಸ್ತುತ ಕಾಲದಲ್ಲಿ ನಡೆಯುತ್ತಿರುವ ಮಾಯೆವೊಂದರ ಮಹಿಮೆಗಳು. ಪ್ರಸ್ತುತ ಕಾಲದಲ್ಲೇ ಅಲ್ಲದೇ, ಗತ ಯುಗಗಳಲ್ಲಿಯೂ ಸಹ ಮಾಯೆ ಇಂತಹ ಕೆಲಸವನ್ನೇ ಮಾಡಿದೆ. ಗತಕಾಲದಲ್ಲಾಗಲಿ, ಪ್ರಸ್ತುತ ಕಾಲದಲ್ಲಾಗಲಿ, ಮುಂಬರುವ ಕಾಲದಲ್ಲಾಗಲಿ ಮಾಯೆ ಕರ್ತವ್ಯವೇ ಅದು ಎಂದು ಹೇಳಬಹುದು. **ದೇವರು ತನ್ನ ಪ್ರತಿನಿಧಿಯಾದ ಭಗವಂತನಿಂದ ತನ್ನ ಧರ್ಮಗಳನ್ನು ಭೂಮಿ ಮೇಲೆ ಸ್ಥಾಪಿಸಿದರೆ ಅವುಗಳನ್ನು ಮನುಷ್ಯರು ತಿಳಿದುಕೊಳ್ಳದಂತೆ ಮಾಡುವುದೇ ಮಾಯೆವೊಂದರ ಕೆಲಸ.** ಜಗತಿಯಲ್ಲಿ

**ಒಂದು ಸಲ ಧರ್ಮಗಳನ್ನು ಬೋಧಿಸುವುದಕ್ಕೆ, ದೇವರು ಭಗವಂತನಾಗಿ ಮೂರು ಸಲ ಅವತರಿಸಬೇಕಾದ ಅಗತ್ಯವಿದೆ.** ಪ್ರಸ್ತುತ ಕಾಲದಲ್ಲಿಂದ ಲೆಕ್ಕಿಸಿದರೆ ಐದು ಸಾವಿರ ಸಂವತ್ಸರಗಳ ಪೂರ್ವದಿಂದ ಭಗವಂತನ ಜನ್ಮಗಳು ಪ್ರಾರಂಭವಾಗಿವೆ. ಐದು ಸಾವಿರ ಸಂವತ್ಸರಗಳ ಕೆಳಗೆ ಕೃಷ್ಣನ ಜನ್ಮದಿಂದ ಆರಂಭಗೊಂಡ ಭಗವಂತನ ಬರುವಿಕೆ, ಎರಡನೆ ಸಲ ಸಹ ಮುಗಿದುಹೋಗಿದೆ. ಇನ್ನು ಮೂರನೆ ಬಾರಿ ಬರಬೇಕಾಗಿದೆ. ಮೂರನೆ ಸಲ ಬಂದು ಧರ್ಮಗಳಿಗೆ ಸಂಪೂರ್ಣತೆಯನ್ನು ಕೈಗೂಡಿಸಿ ಹೋಗುವನು. ಹಾಗೆ ಮೂರು ಸಲ ಬರುವುದಕ್ಕೂ ಸಹ ಕಾರಣವಿದೆ. ದೇವರು ಜೀವಾತ್ಮ, ಆತ್ಮ, ಪರಮಾತ್ಮಗಳಾಗಿ ವಿಭಜಿಸಲ್ಪಟ್ಟಿದ್ದಾನೆ. ಹಾಗೇ ಪ್ರಕೃತಿ ಐದು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ದೇವರು ಮೂರು ಭಾಗಗಳು ಆದ್ದರಿಂದ ಮೂರು ಭಾಗಗಳಾಗಿಯೇ ತನ್ನ ಧರ್ಮಗಳನ್ನು ಬೋಧಿಸಬೇಕು. ಆದ್ದರಿಂದ ಮೂರು ಸಲ ಅವತರಿಸಬೇಕು. ಪ್ರಕೃತಿ ದೇವರಿಗೆ ವಿರುದ್ಧವಾದ ಮಾಯೆಯಾಗಿ ಭೂಮಿಮೇಲೆ ಇದೆ. ದೇವರು ಅವತರಿಸಿದಾಗ ಪ್ರಕೃತಿ ತನ್ನ ಮಾಯೆಯಿಂದ ಮನುಷ್ಯರನ್ನು ದೇವರ ಕಡೆ ಹೋಗದಂತೆ, ಆತನ ಧರ್ಮಗಳನ್ನು ತಿಳಿದುಕೊಳ್ಳದಂತೆ ಮಾಡುವುದು. ಹಾಗೆ ಮಾಡುವುದಕ್ಕೆ ಮಾಯೆ ಐದು ಅವತಾರಗಳನ್ನು ತೆಗೆದುಕೊಳ್ಳುವುದು. ಭಗವಂತನು ಭೂಮಿಮೇಲಕ್ಕೆ ಬಂದ ಮೂರುಸಲ ಮಾಯೆ ಯಾವುದೋ ಒಬ್ಬ ಸ್ವಾಮೀಜಿಯನ್ನು ಆವರಿಸಿ ತನ್ನ ಮಹಿಮೆಗಳನ್ನು ತೋರಿಸುತ್ತಾ, ಧರ್ಮಗಳ ಕಡೆ ಹೋಗದಂತೆ ಮಾಡುವುದೇ ಅಲ್ಲದೆ, ಭಗವಂತನ ಜನ್ಮ ಪ್ರಾರಂಭವಾಗುವುದಕ್ಕಿಂತ ಮೊದಲು ಒಂದು ಸಲ, ಭಗವಂತನ ಮೂರು ಜನ್ಮಗಳು ಮುಗಿದುಹೋದ ನಂತರ ಒಂದು ಸಲ, ಮನುಷ್ಯರನ್ನು ಆವರಿಸಿ ತನ್ನ ಕಾರ್ಯವನ್ನು ತಾನು ಮಾಡುವುದು. ಮಾಯೆ ಭಗವಂತನ ಹಾಗೆ ಪ್ರತ್ಯೇಕವಾದ ಜನ್ಮ ತೆಗೆದುಕೊಳ್ಳುವುದಿಲ್ಲ. ಹುಟ್ಟಿದ ಮನುಷ್ಯನನ್ನು ಆಯ್ಕೆ ಮಾಡಿಕೊಂಡು ಆತನನ್ನು ಆವರಿಸುತ್ತದೆ. ಹಾಗೆ ಐದು ಜೀವನಗಳಲ್ಲಿ ಸೇರಿ ಅಧರ್ಮಗಳನ್ನು ಪ್ರಚಾರ ಮಾಡುತ್ತಾ, ಧರ್ಮಗಳನ್ನು ಅಡಗಿಸಬೇಕೆಂದು ನೋಡುತ್ತದೆ.

ಗತ ಯುಗದಲ್ಲಿ ದೇವರು ಭಗವಂತನಾಗಿ ಬಂದು ತನ್ನ ಧರ್ಮಗಳನ್ನು ಬೋಧಿಸಿ ಹೋಗಿದ್ದಾನೆ. ಈಗಲೂ ಸಹ ಭಗವಂತನು ತನ್ನ ಧರ್ಮಗಳನ್ನು

ಬೋಧಿಸುವುದಕ್ಕೆ ಅವತಾರಗಳನ್ನು ಪ್ರಾರಂಭಿಸಿದ್ದಾನೆ. ಒಂದು ಸಲ ಧರ್ಮಗಳನ್ನು ಬೋಧಿಸುವುದಕ್ಕೆ ಮೂರು ಸಲ ಭಗವಂತನು ಹುಟ್ಟಬೇಕಾಗಿದೆ ಎಂದು ಹೇಳಿಕೊಂಡಿದ್ದೇವಲ್ಲವೆ! ಇಲ್ಲಿಗೆ ಎರಡು ಸಲ ಬಂದುಹೋಗಿದ್ದಾನೆ. ಗತದಲ್ಲಿ ಭಗವಂತನು ಬಂದಾಗ ಎರಡು ಸಲ, ಬರುವುದಕ್ಕಿಂತ ಮೊದಲೇ ಒಂದು ಸಲ ಮಾಯೆ ಸಹ ಮನುಷ್ಯರಲ್ಲಿ ಅವತರಿಸಿ ತನ್ನ ಮೂರು ಜನ್ಮಗಳನ್ನು ಪೂರ್ತಿ ಮಾಡಿಕೊಂಡಿದೆ. ಇನ್ನು ದೇವರಿಗೆ ಒಂದು ಅವತಾರ, ಮಾಯೆಗೆ ಎರಡು ಅವತಾರಗಳು ಉಳಿದಿವೆ. ಮಾಯೆ ಗತದಲ್ಲಿ ತನ್ನ ಒಂದು ಅವತಾರದಲ್ಲಿ ಒಬ್ಬ ಸ್ವಾಮೀಜಿಯನ್ನು ಆವರಿಸಿ, ಈಗ ದಾದಾಬಾಬಾರವರಿಂದ ಮಹಿಮೆಗಳು ತೋರಿಸಿದಂತೆ, ಆಗ ಆ ಸ್ವಾಮಿಯಿಂದ ಮಹಿಮೆಗಳು ತೋರಿಸುತ್ತಾ, ಭಗವಂತನ ಕಡೆ ಯಾರನ್ನೂ ಹೋಗದಂತೆ, ತಾನು ಆವರಿಸಿದ ಸ್ವಾಮಿಯೇ ದೇವರೆನ್ನುವಂತೆ ಮಾಡಿದೆ. ಅಷ್ಟೇ ಅಲ್ಲದೆ ತಾನು ಆವರಿಸಿದ ಮನುಷ್ಯನಿಗೆ ಭಗವಾನ್ ಎಂದು ಬಿರುದನ್ನು ಸಹ ಕೊಟ್ಟು ಪ್ರಜೆಗಳಿಂದ ಭಗವಾನ್ ಸ್ವಾಮಿಯಾಗಿ ಕರೆಯುವಂತೆ ಮಾಡಿದೆ. ಭಗವಾನ್ ಸ್ವಾಮಿಯಿಂದ ತನ್ನ ಮಹಿಮೆಗಳನ್ನು ಪ್ರಜೆಗಳಿಗೆ ತೋರಿಸಿ, ಆತನನ್ನು ನಿಜವಾಗಿ ದೇವರೆನ್ನುವಹಾಗೆ ಮಾಡಿದೆ. ಪ್ರಜೆಗಳಿಂದ ಪ್ರತ್ಯಕ್ಷ ದೈವವಾಗಿ, ದೇವರ ಅವತಾರವಾಗಿ ಭಾವಿಸುವಂತೆ ಮಾಡಿದೆ. ಆ ಕಾಲದಲ್ಲಿ ದೇವರು ಭಗವಂತನಾಗಿ ಭೂಮಿ ಮೇಲೆ ಇದ್ದರೂ, ಆತನ ಕಡೆ ಯಾರನ್ನೂ ಹೋಗದಂತೆ ಮಾಡಿ, ಎಲ್ಲರನ್ನೂ ಭಗವಾನ್ ಸ್ವಾಮಿ ಕಡೆ ಅಕರ್ಷಿಸಿದೆ. ಈ ದಿನ ದಾದಾ ಬಾಬಾರಿಂದ ಮಹಿಮೆಗಳು ತೋರಿಸಿದಂತೆ ಭಗವಾನ್ ಸ್ವಾಮಿ ಹೆಸರಿನ ಮೇಲೆ, ಆಕಾರದಿಂದ ಎಷ್ಟೋ ಮಹಿಮೆಗಳನ್ನು ತೋರಿಸಿದೆ. ಅಂತಹ ಸ್ಥಿತಿಯಲ್ಲಿ ಪ್ರಜೆಗಳು ಭಗವಾನ್ ಸ್ವಾಮಿಯನ್ನೇ ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದರು. ಭಗವಂತನ ಜ್ಞಾನದ ಕಡೆ ಯಾರೂ ಹೋಗುತ್ತಿರಲಿಲ್ಲ.

ಮಾಯೆ ಎಂದಿಗೂ ಭಗವಂತನ ಬರುವಿಕೆಗಿಂತ ಮೊದಲೇ ಬಂದು ಮೊದಲೇ ಹೋಗುತ್ತಿರುತ್ತದೆ. ಅಂದಿನ ಕಾಲದಲ್ಲಿ ಭಗವಂತನ ಅವತಾರಕ್ಕಿಂತ ಮುವ್ವತ್ತು (30) ಸಂವತ್ಸರಗಳ ಮೊದಲೇ ಅವತರಿಸಿದ ಮಾಯೆ ಮೊದಲೇ ತನ್ನ ಅವತಾರವನ್ನು ಮುಗಿಸಿದೆ. ಮಾಯೆ ಒಬ್ಬ ವ್ಯಕ್ತಿಯನ್ನು ಆವರಿಸಿ ತನ್ನ ಮಹಿಮೆಗಳನ್ನು

ಮಾಡುವುದೆಂದು, ಆ ಮಹಿಮೆಗಳಿಗೂ, ಆ ವ್ಯಕ್ತಿಗೂ ಯಾವುದೇ ಸಂಬಂಧ ಇರುವುದಿಲ್ಲವೆಂದು ಹೇಳಿಕೊಂಡಿದ್ದೇವಲ್ಲವೆ! ಅದೇ ವಿಧವಾಗಿ ಪ್ರಸ್ತುತ ಕಾಲದಲ್ಲಿ ದಾದಾಬಾಬಾ ಶರೀರದಿಂದ ಮಹಿಮೆಗಳನ್ನು ತೋರಿಸುತ್ತಿದೆ. ದಾದಾಬಾಬಾರವರನ್ನು ಕೂಡ ಭಗವಾನ್ ಬಾಬಾನಂತೆ ಮಾಡಿದೆ. ಆ ಕಾಲದಲ್ಲಿ ಕೂಡ ಮಾಯೆ ಈಗ ಮಾಡಿದಂತೆ ಭಗವಾನ್ ಸ್ವಾಮಿಯಿಂದ ಮಾಡುತ್ತಿತ್ತು. ಭಗವಾನ್ ಸ್ವಾಮಿಗೆ, ಆತನ ಹೆಸರು ಮೇಲೆ, ಆಕಾರದ ಮೇಲೆ ನಡೆಯುವ ಮಹಿಮೆಗಳಿಗೂ ಯಾವ ಸಂಬಂಧವಿಲ್ಲ. ಭಗವಾನ್ ಸ್ವಾಮಿಯಾಗಿ ಅವತಾರವನ್ನು ಮುಗಿಸುವ ಸಮಯದಲ್ಲೂ, ಭಗವಾನ್ ಸ್ವಾಮಿ ಮರಣಿಸಿದ ನಂತರವೂ ನಡೆದ ಸಂಘಟನೆಗಳನ್ನು ಅನುಸರಿಸಿ ನೋಡಿದರೆ ಆ ಸ್ವಾಮಿ ಬೇರೆ, ಆತನಲ್ಲಿರುವ ಮಾಯೆಬೇರೆಯೆಂದು ತಿಳಿಯಬಲ್ಲದು. ಈಗ ಆ ಕಾಲದಲ್ಲಿ ನಡೆದ ಸಂಘಟನೆಗಳನ್ನು ಗಮನಿಸಿ ನೋಡೋಣ.

ಭಗವಾನ್ ಸ್ವಾಮಿಯನ್ನು ಅಮೆರಿಕಾ ಭಕ್ತನೊಬ್ಬನು ತನ್ನ ಮನೆಗೆ ಒಂದು ಶುಭಕಾರ್ಯಕ್ಕೋಸ್ಕರ ಕರೆದುಕೊಂಡು ಹೋಗಬೇಕೆಂದುಕೊಂಡು, ಒಂದು ವರ್ಷದ ಹಿಂದಿನಿಂದ ಸ್ವಾಮಿಯವರನ್ನು ಕೇಳುತ್ತಿದ್ದನು. ಸ್ವಾಮಿ ಸರಿ ಬರುತ್ತೇನೆಂದು ಒಪ್ಪಿಕೊಂಡಿದ್ದಾನೆ. ಶುಭಕಾರ್ಯ ಮಾಡುವ ಸಮಯ ಬಂದಿತು, ಆದ್ದರಿಂದ ಅಮೆರಿಕಾ ಭಕ್ತನು ಬಂದು ಸ್ವಾಮಿಯರವನ್ನು ಪ್ರತ್ಯೇಕ ವಿಮಾನದಲ್ಲಿ ಕರೆದುಕೊಂಡು ಹೋಗಬೇಕೆಂದುಕೊಂಡಿದ್ದಾನೆ. ಹಾಗೇ ಏರ್ಪಾಟುಗಳನ್ನು ಮಾಡಿಕೊಂಡು ಪ್ರತ್ಯೇಕ ವಿಮಾನದಲ್ಲಿ ಹೊರಟು ಹೋಗಿದ್ದಾರೆ. ಅದಕ್ಕೆ ಒಂದು ದಿನ ಮೊದಲೇ ಮಾಯೆ ಮಾತೆ ಆತನ ಶರೀರದಿಂದ ತೊಲಗಿಹೋಗಿದೆ. ಭಗವಾನ್ ಸ್ವಾಮಿಗೆ ತನ್ನ ಶರೀರದಲ್ಲಿ ಅಷ್ಟುಕಾಲ ಮಾಯೆ ಆವರಿಸಿ ಇದ್ದಿತೆಂದು, ಈಗದು ಹೋಗಿದೆಯೆಂದು ಯಾವದೂ ತಿಳಿದಿಲ್ಲ. ತನ್ನ ಅಮೆರಿಕಾ ಪ್ರಯಾಣಕ್ಕೆ ಒಂದು ದಿನ ಮೊದಲೇ ಮಾಯೆ ಹೋಗುವುದರಿಂದ ಆತನಲ್ಲಿ ಮಹಿಮೆಗಳು ಯಾವವೂ ಇಲ್ಲದಂತೆ ಹೋಗಿವೆ. ವಿಮಾನದಲ್ಲಿ ಹೊರಟು ಹೋದ ಅವರು ಭಾರತದೇಶವನ್ನು ದಾಟುವುದರೊಳಗೆ ವಿಮಾನದಲ್ಲಿ ಸಾಂಕೇತಿಕ ಲೋಪ ಏರ್ಪಟ್ಟಿದೆ. ವಿಮಾನ ಸ್ಫೋಟಗೊಳ್ಳುತ್ತದೆಂದು ತಿಳಿದಿದೆ. ಕೂಡಲೇ ವಿಮಾನದಲ್ಲಿರುವ ನಾಲ್ವರೂ ಭಗವಾನ್ ಸ್ವಾಮಿಯೊಂದಿಗೆ

ಪೇರಾಚ್ಯೂಟ್ ಸಹಾಯದಿಂದ ವಿಮಾನದಿಂದ ಕೆಳಗೆ ದುಮುಕಿದ್ದಾರೆ. ಹಾಗೆ ದುಮುಕಿದ ಅವರು ಒಬ್ಬೊಬ್ಬರು ಒಂದೊಂದು ದಿಕ್ಕಿಗೆ ಹೋಗಿ ಇಳಿಯುವುದು ನಡೆದಿದೆ. ಸ್ವಾಮೀಜಿ ಒಂದು ಅಡವಿಯೊಳಗೆ ಹೋಗಿ ಇಳಿದಿದ್ದಾನೆ. ಪೇರಾಚೂಟ್‌ಗಳು ಗಾಳಿಗೆ ತಮ್ಮ ಇಷ್ಟ ಬಂದಂತೆ ಹೋಗುವುದರಿಂದ ಸ್ವಾಮಿಯವರು ಅಡವಿಯಲ್ಲಿ ಒಬ್ಬಂಟಿಗನಾಗಿ ಇಳಿದಿದ್ದಾನೆ. ಅದು ಕ್ರೂರಮೃಗಗಳು ಇರುವಂತಹ ಅಡವಿ, ಆದ್ದರಿಂದ ಸ್ವಾಮಿಗೆ ಎಂತಹ ರಕ್ಷಣೆ ಇಲ್ಲ. ಸ್ವಾಮಿಗೆ ಯಾವಕಡೆ ಹೋಗಬೇಕೋ ತಿಳಿಯಲಿಲ್ಲ. ಎಷ್ಟೋ ದೊಡ್ಡ ಸ್ವಾಮಿ ಒಬ್ಬಂಟಿಗನಾಗಿ ಅಡವಿಯಲ್ಲಿ ಸಿಲುಕಿಕೊಂಡು ಹೋಗಿದ್ದಾನೆ. ಸಂಜೆ ಆಯಿತು. ಆಗ ರಕ್ಷಣೆಗೋಸ್ಕರ ಒಂದು ಮರವನ್ನು ಏರಿ ಕುಳಿತುಕೊಂಡಿದ್ದಾನೆ. ಸ್ವಾಮಿಯವರಿಗೆ ಮರವನ್ನು ಏರುವುದೇ ಕಷ್ಟವಾಗಿದೆ, ಏರಿದ ನಂತರ ಅದರ ಮೇಲೆ ಇರುವುದು ಇನ್ನು ಕಷ್ಟವಾಯಿತು. ಹಾಗೆ ಮರದ ಮೇಲೆ ಎರಡು ರಾತ್ರಿ, ಎರಡು ಹಗಲು ಕಳೆದನು. ತಿನ್ನುವುದಕ್ಕೆ ಆಹಾರವಿಲ್ಲ, ಕುಡಿಯುವುದಕ್ಕೆ ನೀರೂ ಇಲ್ಲ. ಕೆಳಗೆ ಇಳಿಯಳು ಸಾಧ್ಯವಾಗದಂತೆ ಕ್ರೂರಮೃಗಗಳು ಅಲ್ಲಿಗೆ ಬಂದು ತಿರುಗಿ ಹೋಗುತ್ತಿವೆ. ಎರಡು ದಿನಗಳು ಆ ಮರದ ಎಲೆಗಳನ್ನು ತಿಂದು ಕಾಲ ಕಳೆದ ಆತನಿಗೆ ಇನ್ನು ಶರೀರದಲ್ಲಿ ಶಕ್ತಿ ಇಲ್ಲದಂತೆ ಹೋಗಿದೆ. ಹಾಗೆ ಇರುವುದಕ್ಕಿಂತ ಸತ್ತುಹೋಗುವುದೇ ಮೇಲೆಂದುಕೊಂಡಿದ್ದಾನೆ. ಅಷ್ಟರಲ್ಲೇ ಅಲ್ಲಿಗೆ ಒಂದು ಚಿರತೆ ಬಂದು ಆತನನ್ನು ನೋಡಿ ಮರ ಏರಿ ಆತನನ್ನು ಸಾಯಿಸಿತು. ಅಡವಿಯಲ್ಲಿ ಅಷ್ಟು ಘೋರ ನಡೆದುಹೋಯಿತು. ಆದರೆ ಹೊರಗಿನ ಪ್ರಜೆಗಳಿಗೆ ಆ ವಿಷಯ ತಿಳಿದಿಲ್ಲ. ವಿಮಾನದಿಂದ ಪೇರಾಚ್ಯೂಟ್‌ನಲ್ಲಿ ಇಳಿದ ಸ್ವಾಮಿ ಎಲ್ಲೋ ಒಂದು ಕಡೆ ಕ್ಷೇಮವಾಗಿ ಇರುತ್ತಾನೆಂದು, ಮತ್ತೆ ಬರುತ್ತಾನೆಂದೂ ಗಂಟೆಗಂಟೆಗೂ ವಾರ್ತೆಗಳು ಬರುತ್ತಲೇ ಇವೆ. ಸ್ವಾಮಿ ತಪ್ಪಿ ಹೋದಾಗಿನಿಂದ ಇಪ್ಪತ್ತು (20) ದಿನಗಳವರೆಗು ಆತನಿಗೋಸ್ಕರ ಹೆಲಿಕ್ಯಾಪ್ಟರ್‌ನಲ್ಲಿ ಹುಡುಕುತ್ತಲೇ ಇದ್ದಾರೆ. ಆದರೂ ಆತನ ಸುಳಿವು ತಿಳಿಯಲಿಲ್ಲ.

ಭಕ್ತರೆಲ್ಲರೂ ತಮ್ಮತಮ್ಮ ಮನೆಗಳಲ್ಲಿ ಸ್ವಾಮಿಯನ್ನು ಕುರಿತು ಆತನು ಕ್ಷೇಮದಿಂದ ಬರಬೇಕೆಂದು ಭಜನೆಗಳೂ, ಯಜ್ಞಗಳು ಮಾಡುವುದಕ್ಕೆ ಪ್ರಾರಂಭಿಸಿದರು. ಆ ವಿಧವಾಗಿ ಸ್ವಾಮಿಯವರು ತಪ್ಪಿ ಹೋದಾಗಿನಿಂದ ಆತನ ಭಕ್ತರೆಲ್ಲರೂ

ಆತನಿಗೋಸ್ಕರ ತಪಿಸುತ್ತಿದ್ದಾರೆ. ಸ್ವಾಮಿಯವರು ತಪ್ಪಿ ಹೋದ ಮೊದಲನೇ ದಿನವೇ ಒಬ್ಬ ಭಕ್ತನ ಮನೆಯಲ್ಲಿ ಸ್ವಾಮಿಯವರ ಭಾವಚಿತ್ರದಿಂದ ಜೇನು ಹನಿಗಳು ಬೀಳುವುದಕ್ಕೆ ಪ್ರಾರಂಭವಾಗಿವೆ. ಹಾಗೆ ಜೇನು ಸೋರುವ ಸಮಯದಲ್ಲಿ ಬಾಬಾರವರು ಅಡವಿಯಲ್ಲಿ ಜೀವಂತವಾಗಿದ್ದಾರೆ. ಅಲ್ಲಿ ಆತನಿಗೆ ಅಡವಿಯಲ್ಲಿ ಭಯದಿಂದ ಬೆವರು ಸೋರುತ್ತಿದೆ. ಆತನು ಪೂರ್ತಿ ನಿಶ್ಶಕ್ತನಾಗಿದ್ದಾನೆ. ಆ ಸಮಯದಲ್ಲಿ ಮಾಯೆ ಆತನಲ್ಲಿ ಇಲ್ಲದಿದ್ದರೂ ಆತನ ರೂಪದಿಂದ ಜೇನನ್ನು ಸೋರುವಂತೆ ಮಾಡಿದೆ. ಹಾಗೆ ಜೇನು ಸೋರುವುದರಿಂದ ಸ್ವಾಮಿಯವರ ಮೇಲಿನ ಭಕ್ತಿ ಯಾವ ಮಾತ್ರ ಸಡಿಲವಾಗದೆ ನಿಂತಿದೆ. ಆ ವಿಧವಾಗಿ ಸ್ವಾಮಿಯವರನ್ನೇ ಎಲ್ಲರೂ ನಂಬಿ ಇರುವಂತೆ ಆತನ ಫೋಟೋಗಳಿಂದ ಅನೇಕ ಕಡೆ ಸುಗಂಧದಿಂದ ಕೂಡಿಕೊಂಡ ಪನ್ನೀರು ಸೋರುವುದೂ, ಕುಂಕುಮ ಬೀಳುವುದು, ವಿಭೂತಿ ಬೀಳುವುದು ನಡೆಯುತ್ತಿತ್ತು. ಕೊನೆಗೆ 20 ದಿನಗಳ ನಂತರ ಆತನು ಸತ್ತುಹೋದಂತೆ ತಿಳಿಯಿತು. ಆತನು ಸತ್ತುಹೋದ ಕಡೆ ಸ್ವಾಮಿಯವರ ಹರಿದು ಹೋದ ಬಟ್ಟೆಗಳೂ, ಶರೀರ ಅವಶೇಷಗಳು ಸಿಗುವುದರಿಂದ ಸ್ವಾಮಿ ಸತ್ತುಹೋದಂತೆ ನಿರ್ಧಾರ ಮಾಡಿ, ಬಟ್ಟೆಗಳನ್ನು ಮೂಳೆಗಳನ್ನು ತಂದು ಸಮಾಧಿ ಮಾಡಿದ್ದಾರೆ. ಆತನನ್ನು ಸಮಾಧಿ ಮಾಡಿದ ನಂತರ ಸಹ ಆತನ ಭಾವಚಿತ್ರದಿಂದ ಮಹಿಮೆ ನಡೆಯುವುದು, ಆತನು ಕಾಣಿಸಿ ಮಾತನಾಡಿದಂತೆ ನಡೆಯುವುದರಿಂದ ಸ್ವಾಮಿಯವರು ಹೋದ ನಂತರವೂ ಸಹ, ಆತನನ್ನು ದೇವರೆಂದೇ ಪ್ರಜೆಗಳು ನಂಬಿ ಅಸಲಾದ ದೇವರನ್ನು, ನಿಜವಾದ ಜ್ಞಾನವನ್ನು ಮರೆತುಹೋಗಿದ್ದಾರೆ. ಸ್ವಾಮಿ ಅಡವಿಯಲ್ಲಿ ಸಿಲುಕಿಕೊಂಡಾಗಲೂ, ಆತನು ಸತ್ತುಹೋದಾಗಲೂ ಆತನಿಗೆ ಸಂಬಂಧವಿಲ್ಲದಂತೇ ಮಹಿಮೆಗಳು ಹೇಗೆ ನಡೆದಿವೆಯೆಂದು ಯಾರೂ ಆಲೋಚನೆ ಮಾಡಲಿಲ್ಲ. ಅಂತಹ ಆಲೋಚನೆ ಯಾರಿಗೂ ಬಾರದಂತಿರುವುದರಿಂದ ಸ್ವಾಮಿ ಬೇರೆ, ಮಾಯೆ ಬೇರೆಯೆಂದು ಯಾರಿಗೂ ತಿಳಿಯದಂತೆ ಹೋಗಿದೆ. **ಪ್ರಪಂಚದಲ್ಲಿ ಎಷ್ಟು ದೊಡ್ಡ ಮೇಧಾವಿ ಯಾದರೂ, ತನ್ನ ವಿಷಯದಲ್ಲಿ ಸ್ವಲ್ಪವಾದರೂ ಯೋಚಿಸದೇ ನಂಬುವಂತೆ, ಜ್ಞಾನದ ಕಡೆ ಹೋಗದಿರುವಂತೆ ಮಾಯೆ ಮಾಡುತ್ತಿದೆ.**

**ರಾಘವ :–** ಸ್ವಾಮೀ! ನೀವು ಹೇಳಿದ ಮಾಯೆವೊಂದರ ಮಹಿಮೆ ವಿಧಾನ

ಪ್ರಪಂಚದಲ್ಲಿ ಯಾರಿಗೂ ತಿಳಿಯದೆಂದೇ ಹೇಳಬಹುದು. ಪ್ರಪಂಚದಲ್ಲಿ ಎಷ್ಟು ಬುದ್ಧಿ ಇರುವವರಾದರೂ ಮಹಿಮೆಗಳನ್ನು ಕುರಿತು ಆಲೋಚಿಸದೆ, ಅದಕ್ಕೊಂದು ವಿಧಾನವಿದೆಯೆಂದು ತಿಳಿಯದಂತಿದ್ದಾರೆ. ಮೇಧಾವಿಗಳು ಸಹ ಕುರುಡರಾಗಿ ನಂಬುತ್ತಿದ್ದಾರೆ. ಇನ್ನು ವಿಜ್ಞಾನ ವೇದಿಕೆಯವರು, ನಾಸ್ತಿಕರು ಇರುವುದನ್ನು ಇಲ್ಲ ಎನ್ನುವುದು, ಹೇಳಿದ್ದನ್ನು ಅಲ್ಲಗಳೆಯುವುದು ಹೊರತು ಮಹಿಮೆಯಲ್ಲಿನ ರಹಸ್ಯಗಳನ್ನು ಅವರು ಸಹ ಯೋಚಿಸುತ್ತಿಲ್ಲ. ಪ್ರತಿಯೊಂದಕ್ಕೂ ಶಾಸ್ತ್ರೀಯತೆ, ಶಾಸ್ತ್ರಬದ್ಧತೆ ಎಂದು ಹೇಳುವ ವಿಜ್ಞಾನ ತಜ್ಞರು, ಮಹಿಮೆಗಳು ಇಲ್ಲ ಇವೆಲ್ಲಾ ಮ್ಯಾಜಿಕ್‌ಗಳು ಎಂದು ಹೇಳುತ್ತಿದ್ದಾರಾಗಲೀ ಶಾಸ್ತ್ರಪದ್ಧತಿಯಲ್ಲಿ ಖಂಡಿಸುತ್ತಿಲ್ಲ. ಕುರುಡರಂತೆ ಖಂಡಿಸುತ್ತಿದ್ದಾರೆ. ನೀವು ವೈದ್ಯಕ್ಕು, ಮಂತ್ರಗಳಿಗು ರಸಾಯನ ಶಾಸ್ತ್ರ ಆಧಾರವೆಂದು ವಿವರವಾಗಿ ಹೇಳಿದ್ದೀರ. ಇಂದಿನ ವಿಜ್ಞಾನಿಗಳು ಮಂತ್ರಗಳಿಗೆ ಶಾಸ್ತ್ರಬದ್ಧತೆ ಇಲ್ಲ ಎಂದು ಹೇಳುತ್ತಿದ್ದಾರೆ. ನೀವು ಹೇಳಿರುವುದು ವಿವರವಾಗಿ ಅರ್ಥವಾಗಿದೆ. ನನಗೆ ಇನ್ನೊಂದು ಸಂಶಯವಿದೆ. ಅದೇನೆಂದರೆ! ಮಂತ್ರಶಕ್ತಿಯಿಂದ ಕೆಲವು ಕೆಲಸಗಳನ್ನು ಮಾಡಬಹುದೆಂದು ಹೇಳಿದ್ದೀರ. ಬಾಬಾರವರು ಕೊಡುತ್ತಿರುವ ಕೆಲವು ವಸ್ತುಗಳು ಸೂಕ್ಷ್ಮಗ್ರಹಗಳು ಕೊಡುವವೆಂದು ಹೇಳಿದ್ದೀರ. ಕೆಲವರು ನನಗೆ ಹೇಳಿದ್ದನ್ನನುಸರಿಸಿ ಆತನು ಚಿಕ್ಕಂದಿನಿಂದ ಹಾಗೆ ಕೊಡುತ್ತಿದ್ದಾನೆಂದು ಹೇಳಿದ್ದಾರೆ. ಹಾಗಿರುವಾಗ ಆತನು ಮಂತ್ರಸಾಧನೆ ಮಾಡಲಿಲ್ಲವೆಂದು ತಿಳಿಯುತ್ತಿದೆ. ಮಂತ್ರ ಸಾಧನೆ ಇಲ್ಲದೆ ವಸ್ತುಗಳನ್ನು ಕೊಡುವುದು ಹೇಗೆ ಸಾಧ್ಯವಾಗುತ್ತದೋ ಅರ್ಥವಾಗದ ವಿಷಯವಾಗಿದೆ. ನನಗಿರುವ ಈ ಸಂಶಯಕ್ಕೆ ವಿವರವಾಗಿ ಉತ್ತರ ಹೇಳಲು ಕೋರುತ್ತಿದ್ದೇನೆ.

**ರಾಜಯೋಗಾ :–** ನಿನ್ನ ಸಂಶಯ ಸರಿಯಾದುದೆ, ಯಾರಿಗಾದರೂ ಈ ಪ್ರಶ್ನೆ ಬರಬಲ್ಲದು. ಅದಕ್ಕೆ ನಾನು ಹೇಳುವ ಉತ್ತರವೇನೆಂದರೆ! ದಾದಾಬಾಬಾರವರು ಚಿಕ್ಕ ವಯಸ್ಸಿನಿಂದ ತಾನು ಕಲಿತುಕೊಂಡ ವಿದ್ಯೆಗಳಿಂದ ಕೆಲವು ಮಹಿಮೆಗಳು ಮಾಡುವುದು ವಾಸ್ತವವೇ. ಆದರೇ ಈ ಜನ್ಮದಲ್ಲಿ ಆತನು ಯಾವ ವಿದ್ಯೆಗಳು ಕಲಿತುಕೊಂಡಿಲ್ಲ. ಆತನ ಹಿಂದಿನ ಜನ್ಮದಲ್ಲಿ ಎಷ್ಟೋ ತಪೋಸಾಧನೆ ಮಾಡಿ ಕಲಿತುಕೊಂಡ ವಿದ್ಯೆಗಳಿಂದ ಹಾಗೆ ಮಾಡುತ್ತಿದ್ದಾನೆ.

**ರಾಘವ :–** ಸ್ವಾಮೀ! ಇಲ್ಲೊಂದು ಚಿಕ್ಕ ಸಂಶಯ. ಹೋದ ಜನ್ಮದಲ್ಲಿನ ಜ್ಞಾಪಕಗಳು ಈ ಜನ್ಮದಲ್ಲಿ ಇರುವುದಿಲ್ಲವಲ್ಲವೆ!

**ರಾಜಯೋಗಾ :–** ನಿನ್ನ ಮಾತು ವಾಸ್ತವವೇ ರಾಘವಾ! ಆದರೆ ದಾದಾಬಾಬಾನಾಗಿ ಚಲಾವಣೆ ಆಗುತ್ತಿರುವ ಜೀವಿಯು ಹೋದ ಜನ್ಮದಲ್ಲಿ ಸತ್ತುಹೋಗಲಿಲ್ಲ. ಈ ಜನ್ಮದಲ್ಲಿ ಹುಟ್ಟಲೂ ಇಲ್ಲ.

**ರಾಘವ :–** ಅದುಹೇಗೆ ಸಾಧ್ಯ ಸ್ವಾಮೀ! ಅಲ್ಲಿ ಸತ್ತುಹೋದರೇ ಅಲ್ಲವೆ ಇಲ್ಲಿ ಹುಟ್ಟುವುದು.

**ರಾಜಯೋಗಾ :–** ಅದನ್ನೇ ಹೇಳುತ್ತಿದ್ದೇನೆ, ಆತನು ಅಲ್ಲಿ ಸತ್ತುಹೋಗಲಿಲ್ಲ. ಸತ್ತುಹೋದಂತೆ ಶರೀರವನ್ನು ಬಿಟ್ಟು ಎಲ್ಲರ ದೃಷ್ಠಿಯಲ್ಲಿ ಸತ್ತುಹೋದಂತೆ ಕಾಣಿಸಿದ್ದಾನೆ. ಸ್ಥೂಲಶರೀರವನ್ನು ಮಾತ್ರ ಬಿಟ್ಟಿರುವ ಆತನು, ತನ್ನ ಸೂಕ್ಷ್ಮಶರೀರದಿಂದ ಬಂದು ಸಣ್ಣ ವಯಸ್ಸಿರುವ ಬಾಲಕನ ಶರೀರದೊಳಗೆ ಸೇರಿಕೊಂಡಿದ್ದಾನೆ. ಆ ಬಾಲಕನನ್ನು ನಿದ್ರೆಯೊಳಗೆ ಕಳುಹಿಸಿ, ಆ ಶರೀರವನ್ನು ತಾನು ಆಕ್ರಮಿಸಿಕೊಂಡಿದ್ದಾನೆ. ಒಂದು ದೆವ್ವ ಮತ್ತೊಂದು ಶರೀರದೊಳಗೆ ಪ್ರವೇಶಿಸಿದಂತೆ, ಬಾಲಕನ ಶರೀರದೊಳಗೆ ಪ್ರವೇಶಿಸಿದ್ದಾನೆ. ಹಾಗೆ ಪ್ರವೇಶಿಸುವುದನ್ನು ಜನನ ಎನ್ನುವುದಿಲ್ಲ. ಹಾಗೇ ಸೂಕ್ಷ್ಮ ಶರೀರದಿಂದ ಹೊರಗೆ ಬರುವುದನ್ನು ಮರಣ ಎನ್ನುವುದಿಲ್ಲ. ಆದ್ದರಿಂದ ದಾದಾಬಾಬಾರವರು ಹಿಂದಿನ ಜನ್ಮದಲ್ಲಿ ಮರಣಿಸಿದಂತಾಗಲಿ, ಈ ಜನ್ಮದಲ್ಲಿ ಹುಟ್ಟಿದಂತಾಗಲೀ ಹೇಳುವುದಕ್ಕೆ ಸಾಧ್ಯವಿಲ್ಲ. ಆತನ ಹಳೆ ಶರೀರವನ್ನು ಬಿಟ್ಟು ಹೊಸ ಶರೀರದೊಳಗೆ ಬಂದರೂ, ಆತನು ಹಿಂದಿನ ಜನ್ಮದಲ್ಲಿ ಇದ್ದಂತೆ ಲೆಕ್ಕಿಸಲ್ಪಡುತ್ತದೆ.

**ರಾಘವ :–** ಆದರೆ ಹಾಗೆ ಶರೀರವನ್ನು ಬದಲಾದರೂ ಹೊಸ ಜನ್ಮವಲ್ಲ ಅಲ್ಲವೆ! ಹಾಗಿರುವಾಗ ಹೊಸ ಶರೀರದಲ್ಲಿ ಸಹ ಹಳೆ ಹವ್ಯಾಸಗಳೇ ಇರುತ್ತವೆಂದುಕೊಳ್ಳುತ್ತೇನೆ.

**ರಾಜಯೋಗಾ :–** ಹೌದು, ಹಳೆ ಹವ್ಯಾಸಗಳೇ ಅಲ್ಲ, ಹಳೆ ವಿದ್ಯೆಗಳು ಸಹ ಹಾಗೇ ಇರುತ್ತವೆ. ಆದ್ದರಿಂದಲೇ ದಾದಾಬಾಬಾರವರು ಹಿಂದಿನ ಶರೀರದಲ್ಲಿ

ತಾನು ಕಲಿತ ವಿದ್ಯೆಗಳನ್ನು ಹೊಸ ಶರೀರದಲ್ಲಿ ಉಪಯೋಗಿಸಿಕೊಳ್ಳುವುದರಿಂದ ಚಿಕ್ಕ ವಯಸ್ಸಿನಿಂದಲೇ ಮಹಿಮೆಗಳನ್ನು ಮಾಡಿದ್ದಾನೆ.

**ರಾಘವ :–** ಸ್ವಾಮೀ ನಾನು ಬೇರೆಯವರ ಹತ್ತಿರವಿರುವ ಒಂದು ಭಾವಚಿತ್ರವನ್ನು ನೋಡಿದ್ದೇನೆ. ಆ ಭಾವಚಿತ್ರ ದಾದಾಬಾಬಾರವರ ಗತಜನ್ಮದ್ದು ಎಂದು ತೋರಿಸಿದ್ದಾರೆ. ನಾನು ಹೋದ ಜನ್ಮದಲ್ಲಿನ ಭಾವಚಿತ್ರದಲ್ಲೂ, ಈ ಜನ್ಮದ ಭಾವಚಿತ್ರದಲ್ಲೂ ಆಕಾರ ಎಲ್ಲಾ ಬೇರೆ ಬೇರೆಯಾಗಿ ಇದ್ದರೂ ತಲೆ ಮೇಲೆ ಮಾತ್ರ ಎರಡು ಭಾವಚಿತ್ರಗಳಲ್ಲೂ ಒಂದೇ ಒಂದು ಗುರುತು ಬದಲಾಗದಂತೆ ಕಾಣಿಸಿತು. ನೀವು ಇಲ್ಲಿಯವರೆಗು ಹೇಳಿದ ಹಳೆ ಹವ್ಯಾಸಗಳು, ಹಳೆ ವಿದ್ಯೆಗಳು ಹಾಗೇ ಇರುತ್ತವೆನ್ನುವುದಕ್ಕೆ ನನಗೆ ಕಾಣಿಸಿದ ಗುರುತು ನಿದರ್ಶನವೆಂದುಕೊಳ್ಳುತ್ತೇನೆ.

**ರಾಜಯೋಗಾ :–** ನೀನು ಹೋಗಿಬಂದ ಈ ಚಿಕ್ಕ ಯಾತ್ರೆಯಿಂದ ನಿನಗೆ ಏನು ಅರ್ಥವಾಗಿದೆ?

**ರಾಘವ :–** ನಾನು ನೋಡಿದಾಗ ನನಗೆ ಏನೂ ಅರ್ಥವಾಗಲಿಲ್ಲ. ಈಗ ನೀವು ಹೇಳಿದ ನಂತರ ನಾನು ಒಂದು ಕಡೆ ನೋಡಿರುವುದು ಪರಮಾತ್ಮ ಜ್ಞಾನವೆಂದೂ, ಮತ್ತೊಂದು ಕಡೆ ನೋಡಿರುವುದು ಮಾಯೆ (ಪ್ರಕೃತಿ) ಮಹಿಮೆಯೆಂದು ತಿಳಿಯಿತು. ಅಷ್ಟೇ ಅಲ್ಲದೆ ಜ್ಞಾನವಿದ್ದ ಕಡೆ, ಭಕ್ತಿ ಇಲ್ಲದ ಕಪಟ ಭಕ್ತರೂ, ಬುದ್ಧಿ ಇಲ್ಲದ ಭಕ್ತರೂ ಇದ್ದಾರೆಂದೂ, ಜ್ಞಾನವಿಲ್ಲದ ಮಾಯೆ ಮಹಿಮೆಗಳಿರುವ ಕಡೆ, ಒಳ್ಳೆಯ ಬುದ್ಧಿವಂತರಾದ ಭಕ್ತರೂ, ಒಳ್ಳೆ ಭಕ್ತಿ ಶ್ರದ್ಧೆಗಳಿರುವವರೂ ಇದ್ದಾರೆಂದು ಸಹ ಅರ್ಥವಾಗಿದೆ. ಇನ್ನೂ ಮುಖ್ಯವಾಗಿ ಹೇಳಿದರೇ ಮಾಯೆ ಮಹಿಮೆಗಳ ಮರ್ಮಗಳೆಲ್ಲವೂ ತಿಳಿದುಹೋಗಿವೆ. ಯಾರಿಗೂ ತಿಳಿಯದ ಮಾಯೆ ಅವತಾರಗಳನ್ನು ಕುರಿತು ತಿಳಿದಿದೆ.

**********************************

(ನೂಕಾ, ವೆಂಕೂ ಇಬ್ಬರೂ ತಾವಿರುವ ನಿಂಬೆ ತೋಟದ ಕಡೆ ಬರುವುದನ್ನು ಗ್ರಹಿಸಿದ ಗಿರಿಜನರು ಜಾಗ್ರತೆಯಿಂದಿದ್ದರು. ನೂಕಾ, ವೆಂಕೂ

ತೋಟದೊಳಗೆ ಬಂದು ಅಲ್ಲಿರುವ ಗಿರಿಜನರನ್ನೂ, ಅವರ ಹತ್ತಿರವಿರುವ ತಮ್ಮ ಸೂಟ್‌ಕೇಸ್‌ನ್ನು ನೋಡಿದ್ದಾರೆ. ಆಗ ವೆಂಕೂ, ನೂಕಾ ಕಡೆ ನೋಡಿ ಕಣ್ಣುಬ್ಬುಗಳಿಂದ ಸನ್ನೆ ಮಾಡಿ ನೇರವಾಗಿ ಯೋಗಾ ಹತ್ತಿರಕ್ಕೆ ಬಂದು ಹೀಗೆ ಹೇಳಿದ್ದಾನೆ.)

**ವೆಂಕೂ :–** ಈ ಸೂಟ್‌ಕೇಸ್ ನಮ್ಮದು, ಆಕಸ್ಮಿಕವಾಗಿ ರೈಲಿನಿಂದ ಕೆಳಗೆ ಬಿದ್ದಿದೆ. ನಾವು ಪಕ್ಕದ ಸ್ಟೇಷನ್‌ನಲ್ಲಿ ಇಳಿದು ಈ ಸೂಟ್‌ಕೇಸ್ ಗೋಸ್ಕರ ಹುಡುಕುತ್ತಾ ಬಂದಿದ್ದೇವೆ. ಇದು ಕೆಳಗೆ ಬಿದ್ದ ಸ್ಥಳದಲ್ಲಿ ಕಾಣಿಸಲಿಲ್ಲ. ಯಾರಿಗಾದರೂ ಸಿಕ್ಕಿರುತ್ತದೆಂದು ಇದಕ್ಕೋಸ್ಕರವೇ ಹುಡುಕುತ್ತಿದ್ದೇವೆ. ಇಲ್ಲೇ ಹತ್ತಿರದಲ್ಲೇ ನಿಮ್ಮ ಹತ್ತಿರ ಕಾಣಿಸಿರುವುದಕ್ಕೆ ಸಂತೋಷಿಸುತ್ತಿದ್ದೇವೆ. ನಮ್ಮದು ನಮಗೆ ಕೊಟ್ಟುಬಿಡಿ, ನಾವು ಬೇಗ ಹೋಗಬೇಕು.

**ಯೋಗಾ :–** ಇದು ನಮಗೆ ಸಿಕ್ಕಿರುವ ಮಾತು ನಿಜವೇ. ಆದರೆ ಇದು ನಿಮ್ಮದೇ ಎನ್ನುವುದಕ್ಕೆ ಗುರುತೇನು? ಇದು ನಿಮ್ಮದಾದರೆ ಇದರೊಳಗೆ ಏನಿದೆಯೋ ಹೇಳಿ. ನೀವು ಹೇಳಿದಂತಿದ್ದರೆ ನಿಮ್ಮದೇ ಎಂದು ನಂಬಿ ಕೊಡಬಲ್ಲೆವು. ನೀವು ಹೇಳಿದಂತೆ ಇಲ್ಲದೇ ಹೋದರೆ ಇದು ನಿಮ್ಮದಲ್ಲ, ಮತ್ಯಾರದೋ ಎಂದು ತಿಳಿದುಕೊಳ್ಳುತ್ತೇವೆ.

(ಆ ಸೂಟ್‌ಕೇಸ್‌ನಲ್ಲಿ ಏನಿದೆಯೋ ವೆಂಕೂಗು ನೂಕಾಗು ತಿಳಿದಿದ್ದರೂ ಅವರು ಹೇಳಲಿಲ್ಲ. ನಂತರ ಸ್ವಲ್ಪ ಕೋಪದಿಂದ ಹೀಗೆ ಅಂದಿದ್ದಾರೆ.)

**ನೂಕಾ :–** ನನ್ನ ಮಾತನ್ನು ಕೇಳಿ. ನಮ್ಮ ಸೂಟ್‌ಕೇಸ್‌ನ್ನು ನಾವು ಹುಡುಕುತ್ತಾ ಬಂದಿದ್ದೇವೆ. ನಿಮ್ಮ ಹತ್ತಿರವಿರುವುದನ್ನು ನೋಡಿ ನಿಮ್ಮನ್ನು ಕೇಳುತ್ತಿದ್ದೇವೆ. ಇದಕ್ಕಿಂತ ಸಾಕ್ಷಿ ಬೇಕಾ! ನಮ್ಮ ಸೂಟ್‌ಕೇಸ್ ನಮಗೆ ಕೊಡಿ.

**ಮೇಘ :–** ನಿಮ್ಮದು ನಿಮಗೆ ಕೊಡುವುದಕ್ಕೆ ನಮಗೆ ಯಾವ ಅಭ್ಯಂತರವೂ ಇಲ್ಲ. ಇದು ಯಾರದೋ ಅವರಿಗೇ ಕೊಡಬೇಕೆನ್ನುವುದೇ ನಮ್ಮ ಉದ್ದೇಶ. ನಾವು ಹೇಳುವುದು ನೀವು ಸಹ ಕೇಳಿ. ಈ ಪೆಟ್ಟಿಗೆ ರೈಲಿನಿಂದ ಕೆಳಗೆ ಬಿದ್ದಾಗ ಯಾರಾದರೂ ನೋಡಿರಬಹುದು. ಹಾಗೆ ನೋಡಿದವರು ಯಾರಾದರೂ ಇದು ನಮ್ಮದೇ ಎಂದು ಕೇಳುವ ಅವಕಾಶವಿದೆ. ಒಂದುವೇಳೆ ನಿಮಗೆ ಕೊಟ್ಟಿರುವ ನಂತರ ಕಳೆದುಕೊಂಡವರು

ಬಂದರೆ ನಾವು ತಪ್ಪು ಮಾಡಿದಂತಾಗುತ್ತದೆ. ಆದ್ದರಿಂದ ಇದು ನಿಮ್ಮದೇ ಆದರೇ ಇದರಲ್ಲಿ ಏನಿದೆಯೋ ಹೇಳಿ ತೋರಿಸಿ ತೆಗೆದುಕೊಂಡು ಹೋಗಿ. ನಮಗೆ ಎಂತಹ ಅಭ್ಯಂತರವೂ ಇಲ್ಲ.

**ವೆಂಕೂ :–** ನೀವು ಮರ್ಯಾದೆಯಿಂದ ನಮ್ಮದು ನಮಗೆ ಕೊಡಿ. ಇಲ್ಲದೆ ಹೋದರೆ ದೊಡ್ಡ ಗಲಾಟೆ ನಡೆಯುತ್ತದೆ, ಹುಷಾರ್.

**ಮೇಘ :–** ನಾವು ನಿಮ್ಮ ಹೆದರಿಕೆಗಳಿಗೆ ಹೆದರುವವರಲ್ಲ. ಇದರಲ್ಲಿ ಏನಿದೆಯೋ ಹೇಳದೆ ಕೊಡುವುದಿಲ್ಲ.

(ಕೂಡಲೇ ವೆಂಕೂ ಸೂಟ್‌ಕೇಸ್ ಯೋಗಕೈಯಿಂದ ಕಸಿದುಕೊಂಡಿದ್ದಾನೆ. ಆ ಮರುಕ್ಷಣವೇ ವೆಂಕೂ ಭುಜಕ್ಕೆ ಮೇಘಾ ಹಿಡಿಕೆ ಏಟು ಬಿತ್ತು. ಕೆಳಗೆ ಬಿದ್ದ ವೆಂಕೂ ಮೇಲೆ ನಾಲ್ಕು ಜನ ಗಿರಿಜನರು ಬಿದ್ದು ಸೂಟ್‌ಕೇಸ್‌ನ್ನು ಕಸಿದುಕೊಂಡಿದ್ದಾರೆ. ಕೆಳಗೆ ಬಿದ್ದ ವೆಂಕೂನನ್ನು ಮೇಲಕ್ಕೆ ಏಳದಂತೆ ಹಾಗೇ ಅದುಮಿಟ್ಟುಕೊಂಡಿದ್ದಾರೆ. ಪರಿಸ್ಥಿತಿಯನ್ನು ಗಮನಿಸಿದ ನೂಕಾ ಒಳಗಿರುವ ರಿವಾಲ್ವರ್‌ನ್ನು ಹೊರಗೆ ತೆಗೆದು ಗಿರಿಜನರನ್ನು ಸುಟ್ಟುಹಾಕುತ್ತೇನೆಂದು ಹೆದರಿಸಿದನು. ಅದು ರಿವಾಲ್ವರ್ ಎಂದೂ, ಅದರಿಂದ ಗುಂಡುಗಳು ಹೊರಗೆ ಬರುತ್ತವೆಂದೂ ತಿಳಿಯದ ಗಿರಿಜನರು ಆ ಮಾತುಗಳಿಗೆ ಹೆದರಲಿಲ್ಲ. ಯೋಗಾ ಮಿಂಚಿನಂತೆ ನೂಕಾ ಕಡೆ ಹೋಗಿದ್ದಾನೆ. ಅಷ್ಟರಲ್ಲಿ ನೂಕಾ ತನ್ನ ರಿವಾಲ್ವರ್‌ನ್ನು ಯೋಗಾ ಗುಂಡಿಗೆ ಕಡೆ ಗುರಿ ಇಟ್ಟು ಟ್ರಿಗ್ಗರ್ ಒತ್ತಿದನು. ಢಾಮ್ ಎನ್ನುವ ಶಬ್ದ ದೊಡ್ಡದಾಗಿ ಸುತ್ತಮುತ್ತ ಪ್ರಾಂತದವರೆಗು ಕೇಳಿಸಿತು. ಅರ್ಥವಾಗದ ಅಯೋಮಯದಲ್ಲಿ ಏನು ನಡೆದಿದೆಯೋ ಎಂದು ಗಿರಿಜನರೆಲ್ಲರೂ ಆಕಡೆ ನೋಡಿದ್ದಾರೆ. ರಿವಾಲ್ವರ್ ಹಾರಿದಾಗ ಅದರಲ್ಲಿನ ಗುಂಡು ಸಿಟಿಂಗ್ ಸರಿಯಾಗಿ ಇಲ್ಲದ ಕಾರಣ, ಗುಂಡು ಮುಂದಕ್ಕೆ ಹೋಗದಂತೆ ಅಲ್ಲೇ ಹೊಡೆದುಹೋಯಿತು. ಗುಂಡು ಹೊರಗೆ ಹೋಗದಂತೆ ರಿವಾಲ್ವರ್‌ನಲ್ಲಿ ಹೊಡೆದುಹೋಗಿರುವುದರಿಂದ ರಿವಾಲ್ವರ್ ಬಾರೆಲ್ ಹೊಡೆದುಹೋಗಿ ಅದರ ತುಣುಕುಗಳು ಎಗರಿ ನೂಕಾ ಹಣೆಗೂ, ಕೈಯಿಗೂ ತಗುಲಿ ಗಾಯಮಾಡಿವೆ. ಸ್ವಲ್ಪ ಗಾಯವಾದ ನೂಕಾಗೆ ಏನೂ ಅರ್ಥವಾಗಲಿಲ್ಲ. ತಕ್ಷಣ ಯೋಗಾ ಮತ್ತು

ಉಳಿದವರು ಆತನನ್ನು ಹಿಡಿದುಕೊಂಡಿದ್ದಾರೆ. ರಿವಾಲ್ವರ್ ಹಾರಿದ ಶಬ್ದ ಕೇಳಿದ ಸಮೀಪ ಗ್ರಾಮಸ್ಥರು ಅಲ್ಲಿಗೆ ಓಡುತ್ತಾ ಬಂದಿದ್ದಾರೆ. ಹಾಗೆ ಬಂದಿರುವ ಗ್ರಾಮಸ್ಥರನ್ನು ನೋಡಿದ ವೆಂಕೂ, ನೂಕಾ ಇಬ್ಬರೂ "ಕಳ್ಳರು ಕಳ್ಳರು ಕಾಪಾಡಿ ಕಾಪಾಡಿ, ನಮ್ಮ ಸೂಟ್‌ಕೇಸ್ ಕಸಿದುಕೊಂಡು ನಮ್ಮನ್ನು ಹೊಡೆಯುತ್ತಿದ್ದಾರೆಂದು" ಜೋರಾಗಿ ಕೂಗಿದರು. ಆ ಮಾತುಗಳನ್ನು ಕೇಳಿದ ಗ್ರಾಮಸ್ಥರು ಗಿರಿಜನರನ್ನು ಕಳ್ಳರೆಂದುಕೊಂಡು ಅವರನ್ನು ಹಿಡಿದುಕೊಳ್ಳುವುದಕ್ಕೆ ಪ್ರಯತ್ನಿಸಿದರು.

ಪ್ರಮಾದವನ್ನು ಗ್ರಹಿಸಿದ ಗಿರಿಜನರು ಕಾಲಿಗೆ ಬುದ್ಧಿ ಹೇಳಿದರು. ವೆಂಕೂ, ಗಾಯಪಟ್ಟ ನೂಕಾ ಮತ್ತು ಗ್ರಾಮಸ್ಥರು ಗಿರಿಜನರನ್ನು ಹಿಂಬಾಲಿಸಿದರು. ಇದು ಸಮಯವಲ್ಲ ಎಂದು ಓಡುತ್ತಿರುವ ಗಿರಿಜನರ ಕೈಯಿಂದ ಸೂಟ್‌ಕೇಸ್ ಜಾರಿ ಕೆಳಗೆ ಬಿದ್ದಿತು. ಕೆಳಗೆ ಬಿದ್ದ ಹೊಡತಕ್ಕೆ ಸೂಟ್‌ಕೇಸ್ ಹೊಡೆದು ಹೋಗಿ ತೆರೆದುಕೊಂಡಿತು. ಹಾಗೆ ಹೊಡೆದುಹೋಗಿ ತೆರೆದುಕೊಂಡ ಸೂಟ್‌ಕೇಸ್‌ನಿಂದ ದೊಡ್ಡ ನಾಗರಹಾವು ಬುಸುಗುಟ್ಟುತ್ತಾ ಹೊರಗೆ ಬಂದಿದೆ. ಆ ಸಂಘಟನೆಯನ್ನು ನೋಡಿದ ಗಿರಿಜನರು ಆಶ್ಚರ್ಯವಾಗಿ ನಿಂತಿದ್ದಾರೆ. ಗ್ರಾಮಸ್ಥರು ಸಹ ಹಾವನ್ನು ನೋಡುತ್ತಾ ನಿಂತುಕೊಂಡಿದ್ದಾರೆ. ಎಲ್ಲರೂ ನೋಡುತ್ತಿದ್ದಂತೆ ಹಾವು ಅಲ್ಲಿಂದ ದೂರವಾಗಿ ಹೋಗುತ್ತಿದೆ. ವೆಂಕೂ, ನೂಕಾ ಮಾತ್ರ ಹಾವಿನ ಹಿಂದೆಬಿದ್ದು ಹಿಡಿದುಕೊಳ್ಳಲು ಹೋಗಿದ್ದಾರೆ. ಹಾವು ಬುಸುಗುಟ್ಟುತ್ತಾ ಕೋಪದಿಂದ ಅವರಿಬ್ಬರ ಮೇಲೆ ಎದ್ದಿತು. ನಿಂತು ನೋಡುತ್ತಿರುವ ಗಿರಿಜನರಿಗೂ, ಗ್ರಾಮಸ್ಥರಿಗೂ ಅವರು ಅದರಹಿಂದೆ ಏಕೆ ಹೋಗುತ್ತಿದ್ದಾರೋ ಅರ್ಥವಾಗಲಿಲ್ಲ. ಪ್ರಾಣಕ್ಕಿಂತ ಹೆಚ್ಚಾಗಿ ವೆಂಕೂ ಹಾವನ್ನು ಹಿಡಿದುಕೊಳ್ಳಲು ಹೋಗಿದ್ದಾನೆ. ಹಾವು ವೆಂಕೂನನ್ನು ಕಚ್ಚಿ ಓಡಿಹೋಯಿತು. ಹಾವು ಕಡಿದ ವೆಂಕೂನನ್ನು ರಕ್ಷಿಸುವುದಕ್ಕೆ ಗ್ರಾಮಸ್ಥರು, ಗಿರಿಜನರು ಪ್ರಯತ್ನಮಾಡಿದರು. ಆಗ ಯೋಗ ತಮ್ಮ ವಿಷಯವೆಲ್ಲಾ ಗ್ರಾಮಸ್ಥರಿಗೆ ತಿಳಿಸಿ, ತಾವು ಕಳ್ಳರು ಅಲ್ಲವೆಂದು ವಿವರವಾಗಿ ಹೇಳಿದ್ದಾನೆ.)

***********************************

(ರಾಜಯೋಗಾನಂದಸ್ವಾಮಿ ಹತ್ತಿರ ಮಹಿಮೆಗಳನ್ನು ಕುರಿತು ತಿಳಿದು ಕೊಂಡ ರಾಘವನಿಗೆ ಅವುಗಳ ವಿಷಯದಲ್ಲಿ ಇನ್ನೂ ಕೆಲವು ಪ್ರಶ್ನೆಗಳನ್ನು ಕೇಳಿ ತಿಳಿದುಕೊಳ್ಳಬೇಕೆಂದುಕೊಂಡಿದ್ದಾನೆ. ಎರಡನೆ ದಿನ ಊಟ ಮಾಡಿ ವಿಶ್ರಾಂತಿ ತೆಗೆದುಕೊಂಡು ಕುಳಿತಿರುವ ರಾಜಯೋಗಾನಂದಸ್ವಾಮಿ ಸನ್ನಿಧಿಗೆ ಹೋದ ರಾಘವ, ಸಮಯ ನೋಡಿ ಸವಿನಯವಾಗಿ ಪ್ರಶ್ನಿಸಿದನು.)

**ರಾಘವ :-** ಸ್ವಾಮೀ! ಪೂರ್ವದಲ್ಲಿ ಒಬ್ಬ ವ್ಯಕ್ತಿ ತಾನು ಅನುಭವಿಸಬೇಕಾದ ಪಾಪವನ್ನು ಅನುಭವಿಸದೆ ತಪ್ಪಿಸಿಕೊಂಡಿದ್ದಾನೆಂದು, ಅದು ಒಬ್ಬ ಗುರುವು ಹತಿರಕ್ಕೆ ಹೋಗಿ ಇರುವುದರಿಂದ ಸಾಧ್ಯವಾಗಿದೆಯೆಂದು ಹೇಳುತ್ತಿರುವರು. ಆಗ ಆ ಗುರುಗಳ ಮಹಾತ್ಯದಿಂದ ಆ ಪಾಪವನ್ನು ಅನುಭವಿಸದಂತೆ ಹೋಗಿದ್ದಾನಾ? ಅಥವಾ ಮಾಯೆ ಮಹಾತ್ಯದಿಂದ ಅನುಭವಿಸದಂತೆ ಹೋಗಿದ್ದಾನಾ?

**ರಾಜಯೋಗಾ :-** ಮಹಿಮೆಗಳನ್ನು ಕುರಿತು ತಿಳಿದುಕೊಳ್ಳುವುದಕ್ಕೆ ಮೊದಲು ಒಂದು ಮುಖ್ಯ ಸೂತ್ರವನ್ನು ತಿಳಿದುಕೊಳ್ಳಬೇಕು. ಹಾಗೆ ತಿಳಿದುಕೊಳ್ಳುವುದರಿಂದ ಯಾವುದು ಮಹಿಮೆಯೋ, ಯಾವುದು ಮಹಿಮೆ ಅಲ್ಲವೋ ಎಂದು ತಿಳಿಯಬಲ್ಲದು. ಎಲ್ಲಾದರೆ ಅನುಭವಿಸುವ ಕರ್ಮ ಹೋಗುತ್ತಿದೆಯೋ, ಆಗ ಅದು ಜ್ಞಾನಶಕ್ತಿ ಯಿಂದಲೇ ಹೋಗಿದೆಯೆಂದು ಲೆಕ್ಕಿಸಬೇಕು. **ಅನುಭವಿಸಲ್ಪಡುವ ಕರ್ಮವೇ ಅಲ್ಲದೆ ಯಾವುದು ನಡೆದರೂ, ಅದು ಮಾಯೆ ಮಹಿಮೆ ಕೆಳಗೇ ಲೆಕ್ಕಿಸಲಾಗುತ್ತದೆ.** ಉದಾಹರಣೆಗೆ ಒಂದು ಭಾವಚಿತ್ರದಿಂದ ವಿಭೂತಿ ಉದುರಿದೆ ಎಂದುಕೊಳ್ಳೋಣ, ಆಗ ಅದು ಮಾಯೆವೊಂದರ ಮಹಿಮೆಯೆಂದು ಹೇಳಬಹುದು. ಹಾಗೇ ಒಂದು ವಿಗ್ರಹದಿಂದ ಸಕ್ಕರೆ ಬಿದ್ದಿದೆ ಎಂದುಕೊಳ್ಳೋಣ, ಆಗ ಅದು ಸಹ ಮಾಯೆ ಮಹಿಮೆಯ ಕೆಳಗೇ ಜಮ ಹಾಕಬೇಕಾಗುತ್ತದೆ. ಇವೆಲ್ಲಾ ಜೀವಾತ್ಮ ಕರ್ಮಕ್ಕೆ ಸಂಬಂಧಿಸಿದ ಕಾರ್ಯಗಳು ಅಲ್ಲ. ಒಬ್ಬ ಗುರುವು ಅಥವಾ ಒಬ್ಬ ಯೋಗಿ ಒಬ್ಬ ಜೀವಿಯ ಕರ್ಮವನ್ನು ತೊಲಗಿಸಿದರೆ ಅದು ಮಾಯೆ ಮಹಿಮೆಯಲ್ಲ. ಅದು ಜ್ಞಾನಶಕ್ತಿಯಿಂದ ನಡೆದಿದೆಯೆಂದು ಹೇಳಬಹುದು. ಭಗವದ್ಗೀತೆಯಲ್ಲಿ ಜ್ಞಾನಯೋಗ ಎನ್ನುವ ಅಧ್ಯಾಯದಲ್ಲಿ 37ನೇ ಶ್ಲೋಕ ಈ ವಿಧವಾಗಿ ಇದೆ.

**ಶ್ಲೋ॥ ಯಥೈದಾಂಸಿ ಸಮಿದ್ಧೋಗ್ನಿ ರ್ಭಸ್ಮಸಾತ್ಕುರುತೇರ್ಜುನ ।**
**ಜ್ಞಾನಾಗ್ನಿ ಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥**

ಇದರ ಭಾವ ಏನೆಂದರೆ! ಯಾವ ವಿಧದಲ್ಲಿ ಅಗ್ನಿಯಲ್ಲಿ ಕಟ್ಟಿಗೆಗಳು ಸುಟ್ಟು ಹೋಗುತ್ತಿವೆಯೋ, ಆ ವಿಧವಾಗಿಯೇ ಜ್ಞಾನವೆನ್ನುವ ಅಗ್ನಿಯಲ್ಲಿ ಕರ್ಮ ಗಳೆನ್ನುವ ಕಟ್ಟಿಗೆಗಳು ಸುಟ್ಟುಹೋಗುತ್ತವೆ. ಭಗವಂತನು ಹೇಳಿದ ಈ ಮಾತಿನ ಪ್ರಕಾರ ಕರ್ಮಗಳು ಒಂದು ಜ್ಞಾನವೆನ್ನುವ ಅಗ್ನಿಯಿಂದಲೆ ಇಲ್ಲದಂತೆ ಹೋಗುತ್ತವೆ. ಈ ಸೂತ್ರವನ್ನು ಅನುಸರಿಸಿ **ಎಲ್ಲಿ ಕರ್ಮಗಳು ಇಲ್ಲದಂತೆ ನಾಶವಾಗುತ್ತಿವೆಯೋ, ಅಲ್ಲಿ ಜ್ಞಾನವೇ ಕೆಲಸ ಮಾಡುತ್ತಿದೆಯೆಂದೂ, ಅದು ಮಾಯೆ ಮಹಿಮೆಯಲ್ಲವೆಂದೂ ತಿಳಿಯಬಹುದು.** ಜ್ಞಾನವನ್ನು ಮುಚ್ಚಿಟ್ಟು ಅಜ್ಞಾನವನ್ನು ಬಹಿರ್ಗತ ಮಾಡುವುದೇ ಮಾಯೆವೊಂದರ ಮುಖ್ಯವಾದ ಕೆಲಸದಂತೆ ಇರುವುದರಿಂದ, ಇಲ್ಲಿ ಭಗವಂತನ ಮಾತನ್ನು ಸಹ ಅರ್ಥವಾಗದಂತೆ ಮಾಡುವುದಕ್ಕೆ, ಮಾಯೆ ಒಂದು ವಿಧವಾಗಿ ಕೆಲಸ ಮಾಡುತ್ತಿದೆ. ನಾನು ಮೇಲಿನ ಶ್ಲೋಕವನ್ನು ಅದರ ವಿವರವನ್ನು ಹೇಳಿದಾಗ, ಆ ಮಾತಿನಲ್ಲಿ ಸಹ ಅನುಮಾನವನ್ನು ಹೆಚ್ಚಿಸುವಂತೆ ಮನುಷ್ಯರ ತಲೆಯಲ್ಲಿ ಮಾಯೆ ಪ್ರಶ್ನೆಯನ್ನು ಉದ್ಭವಿಸುವಂತೆ ಮಾಡುತ್ತದೆ. ಆ ಪ್ರಶ್ನೆಯಿಂದ ಮೇಲಿನ ಶ್ಲೋಕದಲ್ಲಿನ ಭಗವಂತನ ಮಾತನ್ನೇ ತಪ್ಪು ಹಿಡಿಯುವಂತೆ ಮಾಡುತ್ತದೆ. ಆದ್ದರಿಂದ ಆ ಪ್ರಶ್ನೆಗೂ ಸಹ ಮೊದಲೇ ನಾವು ಉತ್ತರವನ್ನು ತಿಳಿದುಕೊಳ್ಳೋಣ. ಮಾಯೆ ಮನುಷ್ಯರ ತಲೆಯಲ್ಲಿ ಗುಣಗಳ ರೂಪದಲ್ಲಿ ನಿವಾಸ ಏರ್ಪಡಿಸಿಕೊಂಡಿದೆ. ಆ ಗುಣಗಳ ಮಧ್ಯದಲ್ಲೇ ಜೀವಿಯು ಇರುತ್ತಿದ್ದಾನೆ. ಆದ್ದರಿಂದ ಪ್ರತಿ ಜೀವಿಯು ಹುಟ್ಟುವಿಕೆಯಿಂದಲೆ ಮಾಯೆಯಲ್ಲಿ ಇದ್ದಾನೆಂದು ಹೇಳಬಹುದು. ಹಾಗೆ ಜೀವಿಯು ಮಾಯೆಯಲ್ಲಿ ಇರುವುದರಿಂದ, ಮಾಯೆ ಮಾತುಗಳನ್ನೇ ಹೆಚ್ಚಾಗಿ ಕೇಳುವುದಕ್ಕೆ ಅಭ್ಯಾಸವಾಗಿದ್ದಾನೆ. ಜ್ಞಾನದ ಮಾತುಗಳು ಪ್ರತಿ ಮನುಷ್ಯನಿಗೆ ಹೊಸದಾಗಿ ಇರುತ್ತವೆ. ಆದ್ದರಿಂದ **ಚೆನ್ನಾಗಿ ಯೋಚನೆ ಮಾಡುವವರಿಗೆ ಮಾತ್ರವೇ ಜ್ಞಾನ ಅರ್ಥವಾಗುತ್ತದೆ. ಮಾಯೆ, ಯೋಚನೆ ಮಾಡದಿದ್ದರೂ ಸುಲಭವಾಗಿ ಅರ್ಥವಾಗುತ್ತದೆ.** ಸುಲಭವಾಗಿ ಮೇಲಿನ ಶ್ಲೋಕಕ್ಕೆ ವಿರುದ್ಧವಾಗಿ ಬರುವ ಪ್ರಶ್ನೆ ಏನೆಂದರೆ! ಒಂದು ದೇಶಕ್ಕೆ ಪ್ರಧಾನಮಂತ್ರಿಯಾದ ವ್ಯಕ್ತಿ ರೋಗದಿಂದ ಅನೇಕ ದಿನಗಳಿಂದ ಆಸ್ಪತ್ರೆಯಲ್ಲಿ

ಇದ್ದಾನೆಂದುಕೊಳ್ಳಿ. ಆತನಿಗಿರುವ ರೋಗ ಕ್ಯಾನ್ಸರ್ ಎಂದುಕೊಳ್ಳಿ. ಆ ಕ್ಯಾನ್ಸರ್ ಕೊನೆಯ ಹಂತಕ್ಕೆ ಬಂದು ಶರೀರವೆಲ್ಲಾ ಕ್ಯಾನ್ಸರ್ ಕಣಗಳು ತುಂಬಿಕೊಂಡಿರುವುದರಿಂದ ಆತನು ಕೆಲವು ಗಂಟೆಗಳೇ ಬದುಕುವನೆಂದು ಡಾಕ್ಟರ್‌ಗಳು ಸಹ ನಿರ್ಧಾರಕ್ಕೆ ಬಂದಿದ್ದಾರೆ. ಅಂತಹ ಸಮಯದಲ್ಲಿ ಒಬ್ಬ ದೇವತೆ ಆತನ ಕನಸಿನೊಳಗೆ ಕಾಣಿಸಿ ನಿನ್ನ ರೋಗವನ್ನು ನಾನು ಇಲ್ಲದಂತೆ ಮಾಡುತ್ತಿದ್ದೇನೆ, ನೀನು ಬದುಕುತ್ತೀಯ. ನಂತರ ನೀನು ನನ್ನ ಗುಡಿಗೆ ಬಂದು ಅಲ್ಲಿ ನನ್ನ ಗುಡಿಯನ್ನು ಅಭಿವೃದ್ಧಿ ಮಾಡಬೇಕೆಂದು ಹೇಳಿದೆ. ಬೆಳಗ್ಗೆ ಆ ವಿಷಯವನ್ನು ಆ ವ್ಯಕ್ತಿ ಉಳಿದವರಿಗೂ ಸಹ ಹೇಳಿದ್ದಾನೆ. ಅಂದಿನಿಂದ ಆತನು ಮೂರು ದಿನಗಳಲ್ಲಿ ಪೂರ್ತಿ ಆರೋಗ್ಯವನ್ನು ಹೊಂದಿದ್ದಾನೆ. ಆತನಲ್ಲಿ ಆ ರೋಗ ಪೂರ್ತಿಯಾಗಿ ಹೋಗಿದೆ. ಆತನು ಆ ದೇವತಾ ಗುಡಿಗೆ ಹೋಗಿ ಅಲ್ಲಿ ಅಭಿವೃದ್ಧಿಗಾಗಿ ಕೆಲವು ಕೋಟಿ ಹಣವನ್ನು ಸರ್ಕಾರದಿಂದ ಬಿಡುಗಡೆ ಮಾಡಿದ್ದಾನೆ. ಆ ದೇವತಾ ಗುಡಿ ಸಹ ಅಭಿವೃದ್ಧಿ ಆಗಿದೆ. ಈ ಸಂಘಟನೆ ಎಲ್ಲವೂ ನೋಡಿದ ನಂತರ ಕ್ಯಾನ್ಸರ್‌ನ್ನು ಪ್ರಧಾನಮಂತ್ರಿ ಅನುಭವಿಸುತ್ತಿದ್ದಾನಲ್ಲವೆ! ಅದು ಆತನು ಅನುಭವಿಸುವ ಕರ್ಮವೇ ಅಲ್ಲವೆ! ಹಾಗಿರುವಾಗ ಆತನಿಗೆ ಯಾವ ಜ್ಞಾನ ಇಲ್ಲದಿದ್ದರೂ, ಒಂದು ದೇವತೆ ಆತನ ಕನಸಿನೊಳಗೆ ಬಂದು ನಿನ್ನ ರೋಗವನ್ನು ಇಲ್ಲದಂತೆ ಮಾಡುತ್ತೇನೆಂದು ಹೇಳಿ ಹಾಗೇ ಮಾಡಿದೆ ಅಲ್ಲವೆ! ಹಾಗಿರುವಾಗ ಆತನು ಅನುಭವಿಸುವ ಕರ್ಮ ಜ್ಞಾನದಿಂದ ಹೋಗಲಿಲ್ಲ ಅಲ್ಲವೆ! ಆ ದೇವತೆ ಆತನ ಕರ್ಮವನ್ನು ಇಲ್ಲದಂತೆ ಮಾಡಿದೆ, ಆದ್ದರಿಂದ ಆ ದೇವತಾ ರೂಪದಲ್ಲಿ ಮಾಯೆಯೇ ಆತನ ಕರ್ಮವನ್ನು ಇಲ್ಲದಂತೆ ಮಾಡಿದೆಯೆಂದು ಅರ್ಥವಾಗುತ್ತಿದೆ. ಹಾಗಿರುವಾಗ ಜ್ಞಾನ ಮಾತ್ರವೇ ಕರ್ಮವನ್ನು ಇಲ್ಲದಂತೆ ಮಾಡುತ್ತಿದೆ. ಮಾಯೆ ಹಾಗೆ ಮಾಡಲಾರದು ಎಂದು ಹೇಳುವುದಕ್ಕೆ ಅವಕಾಶವಿಲ್ಲ ಅಲ್ಲವೆ! ಎಂದು ಯಾರಾದರೂ ಕೇಳಬಹುದು. ಒಟ್ಟಿನಲ್ಲಿ ಭಗವದ್ಗೀತೆಯಲ್ಲಿನ ಭಗವಂತನ ಮಾತಿನ ಮೇಲೆಯೇ ಅನುಮಾನ ಬರುವಂತೆ ಗುಣರೂಪದಲ್ಲಿರುವ ಮಾಯೆ ಮಾಡಿದೆಯೆಂದು ಹೇಳಬಹುದು. ಅದಕ್ಕೆ ಉತ್ತರವನ್ನು ಹೇಳಬೇಕಾದ ಜವಾಬ್ದಾರಿ ಈಗ ನಮ್ಮದೇ, ಆದ್ದರಿಂದ ನಮ್ಮ ಉತ್ತರ ಏನೆಂದರೆ!

ದೇವರು ಭಗವಂತನ ರೂಪದಲ್ಲಿ ಹೇಳಿದ ಜ್ಞಾನ ಶಾಸ್ತ್ರಬದ್ಧವಾದದ್ದು. ಅದು ಶಾಸನಗಳಿಂದ ಕೂಡಿಕೊಂಡಿದೆ. ಆದ್ದರಿಂದ ಭಗವಂತನು ಹೇಳಿದ ಮಾತಿನ ಪ್ರಕಾರ ಮಾಯೆ ಕರ್ಮವನ್ನು ಇಲ್ಲದಂತೆ ಮಾಡಲಾರದು. ಒಂದು ಜ್ಞಾನ ಮಾತ್ರವೇ ಕರ್ಮವನ್ನು ನಾಶ ಮಾಡಬಲ್ಲದು. ಆದರೆ ದೇವತಾ ರೂಪದಲ್ಲಿ ಮಾಯೆ ಕರ್ಮವನ್ನು ಇಲ್ಲದಂತೆ ಮಾಡಿದೆ ಅಲ್ಲವೆ! ಎನ್ನುವ ಪ್ರಶ್ನೆಗೆ ಸರಿಯಾದ ಉತ್ತರವನ್ನು ನೋಡಿದರೆ ಈ ವಿಧವಾಗಿ ವಿವರ ಇದೆ. **ಮಾಯೆಗೆ ಕರ್ಮವನ್ನು ಸ್ಥಾನ ಪಲ್ಲಟ ಮಾಡುವ ಶಕ್ತಿ ಇದೆ, ಆದರೆ ನಾಶ ಮಾಡುವ ಶಕ್ತಿ ಇಲ್ಲ. ಇನ್ನೂ ವಿವರವಾಗಿ ಹೇಳಿಕೊಂಡರೇ ಕರ್ಮವನ್ನು ಕಾಲದಲ್ಲಿ ಬದಲಾಯಿಸುವ ಬಲ ಮಾತ್ರ ಮಾಯೆಗಿದೆ, ಆದರೆ ಕರ್ಮವನ್ನು ಇಲ್ಲದಂತೆ ಮಾಡುವ ಬಲ ಮಾಯೆಗೆ ಇಲ್ಲ.** ದೇವತಾ ರೂಪದಲ್ಲಿ ಕಾಣಿಸಿದ ಮಾಯೆ, ಅನುಭವಿಸುವ ವ್ಯಕ್ತಿವೊಂದರ ರೋಗವನ್ನು ಅಲ್ಲಿಗೆ ನಿಲ್ಲಿಸಿ, ಅದನ್ನು ಐವತ್ತು ಸಂವತ್ಸರಗಳ ನಂತರ ಅನುಭವಕ್ಕೆ ಬರುವಂತೆ ಮಾಡಿದೆ. ಅಷ್ಟೇ ಹೊರತು ಆ ಕರ್ಮವನ್ನು ಶಾಶ್ವತವಾಗಿ ಇಲ್ಲದಂತೆ ಮಾಡಲಾರದು. ಒಬ್ಬ ಜೀವಿಯು ಒಂದು ಕರ್ಮವನ್ನು ಒಂದು ಸಲ ಸಂಪಾದಿಸಿಕೊಂಡರೇ ಅದು ಆ ಜೀವಿಯು ಅನುಭವಿಸಿದ ನಂತರವೇ ಹೋಗುತ್ತದೆ. ಇಲ್ಲದೇ ಹೋದರೆ ಜ್ಞಾನದಿಂದಾದರೂ ಸುಟ್ಟುಹೋಗಬೇಕು. ಹಾಗಲ್ಲದೆ ಆ ಕರ್ಮ ಹೋಗುವುದಕ್ಕೆ ಬೇರೆ ವಿಧಾನವೇ ಇಲ್ಲ. ಮಾಯೆ ಎಂದಿಗೂ ಕರ್ಮವನ್ನು ಇಲ್ಲದಂತೆ ಮಾಡಲಾರದು. ಮಾಯೆ ಎಂದಿಗಾದರೂ ಕರ್ಮವನ್ನು ಬದಲಾಯಿಸಬಲ್ಲದು. ಇಲ್ಲಿ ದೇವತಾ ರೂಪದಲ್ಲಿ ಪ್ರಧಾನಮಂತ್ರಿ ಕ್ಯಾನ್ಸರ್ ಐವತ್ತು ಸಂವತ್ಸರಗಳ ನಂತರದ ಕಾಲಕ್ಕೆ ಬದಲಾಯಿಸಿದೆ. ನಂತರದ ಜನ್ಮದಲ್ಲಿ ಆತನು ಅದನ್ನು ಪುನಃ ಅನುಭವಿಸಬೇಕಾದ ಕೆಲಸ ಏರ್ಪಟ್ಟಿದೆ. ಆದ್ದರಿಂದ ಭಗವಂತನ ಮಾತಿನ ಪ್ರಕಾರ ಕರ್ಮವನ್ನು ಸುಡುವ ಶಕ್ತಿ ಒಂದು ಜ್ಞಾನಕ್ಕೇ ಇದೆಯೆಂದು ಜ್ಞಾಪಕವಿಟ್ಟುಕೊಳ್ಳಬೇಕು.

**ರಾಘವ :–** ಎಂತಹ ಅನುಮಾನವೂ ಬಾರದಂತೆ ವಿವರವಾಗಿ ಮಾಯೆ ವಿಷಯವನ್ನು ತಿಳಿಸಿದ್ದೀರ. ಗತದಲ್ಲಿ ನಾನು ಒಂದು ಕಡೆ ನೋಡಿದ ಚಿಕ್ಕ ಮಹಿಮೆಯನ್ನು ಕುರಿತು ನೀವು ವಿವರವಾಗಿ ಹೇಳಿದರೇನೆ ನಮಗೆ ಅರ್ಥವಾಗುತ್ತದೆ. ಆದ್ದರಿಂದ ಕೇಳುತ್ತಿದ್ದೇನೆ. ಒಬ್ಬ ವ್ಯಕ್ತಿ ಒಂದು ಮನೆಯಲ್ಲಿರುವವರಿಗೆ ತಮ್ಮ

ಮನೆಯಲ್ಲಿರುವ ನೀರನ್ನು ತರಲು ಹೇಳಿ, ಅವರು ತಂದಿರುವ ನೀರನ್ನು ನಿಮಗೆ ತೀರ್ಥವಾಗಿ ಕೊಡುತ್ತಿದ್ದೇನೆಂದು ಹೇಳಿ ಯಾವುದೋ ಮಂತ್ರ ಹೇಳಿದಂತೆ ನಟಿಸಿ, ಆ ನೀರನ್ನು ತನ್ನ ಬೆರಳಿಂದ ನಾಲ್ಕು ಕಡೆ ಚಿಮುಕಿಸಿ, ನಿಮ್ಮ ಮನೆಯಲ್ಲಿನ ದೋಷಗಳೆಲ್ಲವೂ ಈ ತೀರ್ಥದಿಂದ ಹೋಗಿವೆ. ಈ ನೀರನ್ನು ಎಲ್ಲರೂ ತೀರ್ಥವಾಗಿ ತೆಗೆದುಕೊಳ್ಳಿ, ಯಾವಾದರೂ ನಿಮ್ಮಲ್ಲಿ ದೋಷಗಳಿದ್ದರೇ ಕೂಡಲೇ ಹೋಗುತ್ತದೆ ಎಂದಿದ್ದಾನೆ. ಆಗ ಆ ನೀರನ್ನು ಆ ಮನೆಯವರೆಲ್ಲರೂ ತೀರ್ಥವಾಗಿ ತೆಗೆದು ಕೊಂಡಿದ್ದಾರೆ. ಆ ನೀರು ಎಲ್ಲರಿಗೂ ಸಿಹಿಯಾಗಿ ಕಾಣಿಸಿದವು. ತಮ್ಮ ಮನೆಯಲ್ಲಿನ ನೀರು ಆತನ ಕೊಟ್ಟ ನಂತರ ಅಷ್ಟು ಸಿಹಿಯಾಗಿ ಕಾಣಿಸಿರುವುದರಿಂದ, ಆತನ ಮಂತ್ರದಲ್ಲಿ ಯಾವುದೋ ಶಕ್ತಿ ಇದೆಯೆಂದು ಎಲ್ಲರೂ ಅಂದುಕೊಂಡಿದ್ದಾರೆ. ಅಷ್ಟೇ ಅಲ್ಲದೆ ಸಿಹಿಯಾಗಿ ಬದಲಾದ ಆ ನೀರಿನಿಂದ ತಮ್ಮ ಮನೆಯಲ್ಲಿನ ದೋಷಗಳೂ, ತಮ್ಮ ಮೈಯ್ಯಲ್ಲಿರುವ ದೋಷಗಳೂ ಹೋಗಿವೆಯೆಂದು ತಿಳಿದುಕೊಂಡಿದ್ದಾರೆ. ಹಾಗೆ ತಮ್ಮ ದೋಷಗಳನ್ನು ನಿವಾರಿಸಿರುವುದಕ್ಕೆ ಹತ್ತು ಸಾವಿರ ಹಣ ಆತನಿಗೆ ಕೊಟ್ಟು ಕಳುಹಿಸಿದರು. ವಾಸ್ತುದೋಷಗಳನ್ನು ಇಲ್ಲದಂತೆ ಮಾಡುತ್ತೇನೆಂದು ಹೇಳಿ ಆತನು ಹಾಗೆ ಮಾಡಿದ್ದಾನೆ. ಹಾಗೆ ಮಾಡುವುದರಿಂದ ವಾಸ್ತುದೋಷ ಹೋಗುತ್ತದೋ ಇಲ್ಲವೋ ತಿಳಿದಿಲ್ಲ. ಆದರೆ ನೀರು ಪ್ರತ್ಯಕ್ಷವಾಗಿ ಸಿಹಿಯಾಗಿ ಬದಲಾಗಿವೆ. ಆ ನೀರು ಹೇಗೆ ಸಿಹಿಯಾಗಿ ಬದಲಾಗಿರುವುದು ಅರ್ಥವಾಗಲಿಲ್ಲ. ಅದು ಮಂತ್ರ ಮಹಿಮೆಯೇ ಆಗಿರಬಹುದಾ, ಈ ವಿಷಯ ನೀವು ತಿಳಿಸಬೇಕಾಗಿರುವುದೇ ಎಂದು ಕೇಳುತ್ತಿದ್ದೇನೆ.

**ರಾಜಯೋಗಾ :–** ಅದು ಮಾಯಾ ಅಲ್ಲ, ಮಂತ್ರವೂ ಅಲ್ಲ. ಟಕ್ಕು ಟಮಾರಾ ವಿದ್ಯೆಗಳಲ್ಲಿ ಒಂದು ವಿಧ. ಅದು ಕೇವಲ ಕೈಚಳಕದಿಂದ ಮಾಡುವುದು. ಇನ್ನೊಂದು ವಿಚಿತ್ರವೇನೆಂದರೇ ವಾಸ್ತು ದೋಷ ಎನ್ನುವುದು ಕಲ್ಪಿಸಿ ಹೇಳುವುದೆ. ವಾಸ್ತು ಎನ್ನುವುದು ಅವಾಸ್ತವವಾದದ್ದು. ನೀರನ್ನು ತೀರ್ಥವಾಗಿ ಕೊಡುವುದರಿಂದ ಮೈಯಲ್ಲಿ ದೋಷ ಹೋಗುತ್ತದೆನ್ನುವುದು ಸಹ ಅಸತ್ಯವೇ. ಆ ಮಾತನ್ನು ನಂಬುವುದಕ್ಕೆ ನೀರನ್ನು ಆ ವ್ಯಕ್ತಿಯೇ ತನ್ನ ಕೈಚಳಕದಿಂದ ಸಿಹಿಯಾಗಿ ಬದಲಾಯಿಸಿದ್ದಾನೆ. ಆದರೆ ಆ ನೀರು ಮಂತ್ರದಿಂದಾಗಲೀ, ಮಾಯೆಯಿಂದಾಗಲೀ ಸಿಹಿಯಾಗಿ

ಬದಲಾಗಲಿಲ್ಲ. ಯಾರಿಗೂ ತಿಳಿಯದಂತೆ ನೀರನ್ನು ಸಿಹಿಯಾಗಿ ಬದಲಾಯಿಸುವುದೇ ಆತನು ಮುಖ್ಯವಾಗಿ ಮಾಡಿದ ಕೆಲಸ. ಅದುಹೇಗೆ ಮಾಡಿದ್ದಾನೆಂದರೆ! ಅವರು ಮನೆಯಲ್ಲಿ ತುಂಬಿದ ಕೊಡದಿಂದ ನೀರನ್ನು ಗ್ಲಾಸ್‌ನಲ್ಲಿ ತಂದಾಗ ಅವು ಸಾಧಾರಣ ನೀರೇ. ವಾಸ್ತು ದೋಷವನ್ನು ನಿವಾರಿಸುತ್ತೇನೆಂದು ಹೇಳಿದ ವ್ಯಕ್ತಿ ಯಾವುದೋ ಮಂತ್ರ ಹೇಳಿದಂತೆ ನಟಿಸಿ, ತನ್ನ ಕೈಬೆರಳನ್ನು ನೀರಿನಲ್ಲಿ ಅದ್ದಿ ಕೊಠಡಿಯಲ್ಲಿ ನಾಲ್ಕೂ ಕಡೆ ನೀರನ್ನು ಆ ಬೆರಳಿನಿಂದ ಚಿಮುಕಿಸಿದ್ದಾನೆ. ಆಗ ಆ ಕೆಲಸ ಮಾಡುವುದಕ್ಕಿಂತ ಮೊದಲೇ ತನ್ನ ಬೆರಳಿಗೆ ಸಾಕ್ರಿನ್‌ಪೌಡರ್‌ನನ್ನು ಹಚ್ಚಿ ಕೊಂಡಿರುತ್ತಾನೆ. ತನ್ನ ಬೆರಳನ್ನು ನೀರಿನಲ್ಲಿ ಅದ್ದಿದಾಗ ಬೆರಳಿಗಿರುವ ಸಾಕ್ರಿನ್ ಪೌಡರ್‌ದಿಂದ ನೀರು ಸಿಹಿಯಾಗಿ ಬದಲಾಗಿಹೋಗುತ್ತಿದೆ. ಬೆರಳಿಂದ ನೀರನ್ನು ನಾಲ್ಕು ಕಡೆ ಎಲ್ಲರೂ ನೋಡುವಂತೆ ಚಿಮುಕಿಸಿ ಆ ನೀರನ್ನು ತೀರ್ಥವಾಗಿ ಕೊಡುವನು. ಮೊದಲೇ ನೀರು ಸಿಹಿಯಾಗಿ ಬದಲಾಗಿರುವುದರಿಂದ ಆ ತೀರ್ಥ ಸಿಹಿಯಾಗಿ ಕಾಣಿಸುತ್ತದೆ. ಬೆರಳು ನೀರಿನಲ್ಲಿ ಅದ್ದುವುದರಿಂದ ನೀರು ಸಿಹಿಯಾಗಿ ಬದಲಾಗಿದೆಯೆಂದು ಯಾರಿಗೂ ತಿಳಿದಿಲ್ಲ. ಆದ್ದರಿಂದ ಅದು ಮಹಿಮೆಯಾಗಿ ಕಾಣಿಸುತ್ತಿದೆ. ಅದು ಟಕ್ಕು (ಜಾದು) ಕೆಲಸ ಹೊರತು ಬೇರೆ ಅಲ್ಲ. ಇಂತಹ ಕೈಚಳಕದಿಂದ ಮಾಡುವ ಕೆಲಸಗಳನ್ನು ನೋಡಿ ಪ್ರಜೆಗಳು ಮೋಸ ಹೋಗದಂತಿರುವು ದರಕ್ಕೆ ಜನವಿಜ್ಞಾನ ಸಂಸ್ಥೆಯವರು ಸಹ ಕೆಲವು ಇಂತಹ ಕೆಲಸಗಳನ್ನು ಮಾಡಿ ತೋರಿಸುತ್ತಿರುವರು. ಇವು ಇತರರನ್ನು ಮೋಸ ಮಾಡುವುದಕ್ಕೆ ಮಾಡುವ ಕೆಲಸಗಳೇ ಹೊರತು, ಮಂತ್ರವೂ ಅಲ್ಲ, ಮಾಯೆ ಅಲ್ಲ.

**ರಾಘವ :–** ಇದು ಎಲ್ಲರಿಗೂ ತಿಳಿಯಬೇಕಾದ ವಿಷಯ. ಈ ವಿಷಯದಲ್ಲಿ ಇಷ್ಟು ಮೋಸವಿದೆಯೆಂದು ವಾಸ್ತವವಾಗಿ ಯಾರಿಗೂ ತಿಳಿಯದು. ಈ ವಿಷಯ ನೀವು ತಿಳಿಸುವುದು ನಮಗೆ ಬಹಳ ಸಂತೋಷ. ಈ ವಿಷಯಗಳನ್ನು ನೀವು ಹೊರತು ಯಾರು ಹೇಳಲಾರರು. ಇಂತಹ ವಿಷಯವೇ ಮತ್ತೊಂದು ಇದೆ. ಅದು ಮಹಿಮೆಯೋ, ಮೋಸವೋ ನೀವೇ ಹೇಳಬೇಕು. ಅದೇನೆಂದರೆ! ಒಬ್ಬ ಮಾಂತ್ರಿಕನು ಒಂದು ಮನೆಯಲ್ಲಿನ ಆರ್ಥಿಕ ಬಾಧೆಗಳನ್ನು ನಿವಾರುಸುವುದಕ್ಕೆ ಆ ಮನೆಗೆ ಬಂದು, ಒಂದು ಚಿಕ್ಕ ಪೂಜೆಯನ್ನು ನಿರ್ವಹಿಸಿ, ಆ ಪೂಜೆ ಹತ್ತಿರ ತನ್ನ

ಹತ್ತಿರವಿರುವ ತಾಯತಗಳನ್ನು ರಾಶಿ ಹಾಕಿ, ಆ ಮನೆ ಯಜಮಾನನ ಹೆಸರು ಹೇಳಿ, ಈತನಿಗಿರುವ ಆರ್ಥಿಕ ಸಮಸ್ಯೆಗಳು ಹೋಗುವುದಕ್ಕೆ ಈ ರಾಶಿಯೊಳಗಿನ ತಾಯತಗಳಲ್ಲಿ ಯಾವ ತಾಯತ ಕೆಲಸಕ್ಕೆ ಬರುತ್ತದೋ ಅದು ಹೊರಗೆ ಬಾ ಎಂದು ಹೇಳಿದನು. ಹಾಗೆ ಹೇಳಿದ ಒಂದು ನಿಮಿಷದ ನಂತರ ಆ ತಾಯತ ರಾಶಿಯೊಳಗಿಂದ ಒಂದು ತಾಯತ ಕದಲುತ್ತಾ ಹೊರಗೆ ಬಂದಿದೆ. ಆ ಮನೆಯಲ್ಲಿನವರೆಲ್ಲರೂ ನೋಡುತ್ತಿದ್ದಂತೆ ಆ ತಾಯತ ಸ್ವಲ್ಪ ಸ್ವಲ್ಪ ಸರಿಯುತ್ತಾ ಬರುತ್ತಿದೆ. ಹಾಗೆ ಸರಿಯುತ್ತಾ ಬರುತ್ತಿರುವ ತಾಯತವನ್ನು ಆ ಮಾಂತ್ರಿಕನು ತೆಗೆದುಕೊಂಡು, ಮನೆ ಯಜಮಾನನ ಕೈಯಿಗೆ ಕಟ್ಟಿ "ಇದು ನನ್ನ ಮಂತ್ರಬಲದಿಂದ ನಿನಗೆ ಸರಿಹೋಗುವ ತಾಯತ ಅದಷ್ಟಕ್ಕದೇ ಬಂದಿದೆ. ಇಂದಿನಿಂದ ನಿನಗೆ ಯಾವ ಆರ್ಥಿಕ ಸಮಸ್ಯೆಗಳಿರುವುದಿಲ್ಲ." ಎಂದು ಹೇಳಿದ್ದಾನೆ. ತಾಯತ ಅದಷ್ಟಕ್ಕದೇ ಕದಲುತ್ತಾ ಬರುವುದನ್ನು ಮಂತ್ರಶಕ್ತಿ ಅಲ್ಲ ಎನ್ನುತ್ತೀರಾ?

**ರಾಜಯೋಗಾ :–** ಹಾಗೆ ತಾಯತ ಕದಲಿ ಬರುವುದನ್ನು ಯಾವಕಾರಣಕ್ಕೂ ಮಂತ್ರಶಕ್ತಿ ಅಲ್ಲ ಎನ್ನುತ್ತೇನೆ. ಇಲ್ಲಿ ತಾಯತ ಕದಲಿ ಬರುವುದನ್ನು, ಅದೂ ಕೆಲವು ತಾಯತಗಳಲ್ಲಿ ಒಂದು ಮಾತ್ರ ಕದಲಿ ಬರುವುದನ್ನು ಯಾರಾದರೂ ಮಂತ್ರಶಕ್ತಿಯಾಗೇ ಅಂದುಕೊಳ್ಳುತ್ತಾರೆ. ಆದರೆ ಅದು ಯಾವ ಮಂತ್ರಶಕ್ತಿ ಅಲ್ಲ. ಮಂತ್ರಗಳಿಗೆ ಸಂಬಂಧ ಇಲ್ಲದಂತೆ ಆ ಕೆಲಸ ಹೇಗೆ ನಡೆಯುತ್ತಿದೆಯೋ ವಿವರಿಸುತ್ತೇನೆ ಶ್ರದ್ಧೆಯಿಂದ ಕೇಳು. ಸ್ತ್ರೀರತ್ನ, ಪುರುಷರತ್ನ ಎನ್ನುವ ಎರಡು ಗಿಡಗಳು ಇವೆ. ಆ ಎರಡು ಗಿಡಗಳ ಮೂಲಿಕೆಗಳನ್ನು ಒಂದೇ ದಿನ, ಒಂದೇ ನಕ್ಷತ್ರದಲ್ಲಿ ಮಾಂತ್ರಿಕರು ತೆಗೆದು ಇಟ್ಟುಕೊಳ್ಳುವರು. ಪುರುಷ ರತ್ನ ಮೂಲಿಕೆಯನ್ನು ಒಂದು ತಾಯತದಲ್ಲಿ ಇಟ್ಟು, ಸ್ತ್ರೀರತ್ನ ಮೂಲಿಕೆಯನ್ನು ತನ್ನ ಪಕ್ಕದ ಜೇಬಿನಲ್ಲಿ ಮಾಂತ್ರಿಕನು ಇಟ್ಟುಕೊಳ್ಳುವನು. ಪುರುಷರತ್ನ ಮೂಲಿಕೆಯನ್ನಿಟ್ಟದ್ದ ತಾಯತವನ್ನು, ಮತ್ತೆ ಕೆಲವು ಖಾಲಿ ತಾಯತಗಳೊಂದಿಗೆ ಬೆರೆಸಿ ಒಂದು ಚೀಲದಲ್ಲಿ ಇಟ್ಟುಕೊಂಡು ಇರುತ್ತಾನೆ. ಆ ಮೂಲಿಕೆಗಳು ಎರಡು ಒಂದಕ್ಕೊಂದು ಸ್ವಲ್ಪ ದೂರದಲ್ಲಿರುವಾಗ ಅವುಗಳಲ್ಲಿ ಯಾವ ಚಲನವೂ ಇರುವುದಿಲ್ಲ. ಯಾವಾಗಾದರೂ ಸ್ತ್ರೀರತ್ನ ಮೂಲಿಕೆಗೆ ಪುರುಷರತ್ನ ಮೂಲಿಕೆಯನ್ನು ಗಜ ಅಥವಾ ನಾಲ್ಕು ಅಡಿಗಳ ದೂರದಲ್ಲಿ ಇಟ್ಟರೇ,

ಒಂದು ನಿಮಿಷಯ ನಂತರ ಸ್ತ್ರೀರತ್ನ ಮೂಲಿಕೆವೊಂದರ ಆಕರ್ಷಣೆಗೆ ಪುರುಷ ರತ್ನ ಮೂಲಿಕೆ ಕದಲಿ ಸ್ತ್ರೀರತ್ನ ಕಡೆ ಬರುತ್ತದೆ. ಈ ವಿಧಾನವನ್ನು ತಿಳಿದವರು ಕೆಲವರು ಮಾಂತ್ರಿಕರ ಹಾಗೆ ನಟಿಸುತ್ತಾ ತನ್ನ ಹತ್ತಿರ ಸ್ತ್ರೀರತ್ನ ಮೂಲಿಕೆಯನ್ನು ಇಟ್ಟುಕೊಂಡು, ಮೊದಲೇ ಖಾಲಿ ತಾಯತಗಳಲ್ಲಿ ಬೆರೆಸಿ ಇಟ್ಟುಕೊಂಡ ಪುರುಷರತ್ನ ಮೂಲಿಕೆ ಇರುವ ತಾಯತವನ್ನು ಒಂದು ಚೆಲದಲ್ಲಿ ಇಟ್ಟುಕೊಂಡು, ಯಾವ ಮನೆಯಲ್ಲಿ ಹಣದ ಸಮಸ್ಯೆಗಳನ್ನು ನಿವಾರಿಸುತ್ತೇನೆಂದು ಮಾತನಾಡಿ ಕೊಂಡಿದ್ದಾನೋ, ಆ ಮನೆಗೆ ಮಾಂತ್ರಿಕನು ಹೋಗಿ ಅಲ್ಲಿ ಮಂತ್ರಿಸಿದಂತೆ ನಟಿಸಿ, ತನ್ನ ಹತ್ತಿರ ಚೀಲದಲ್ಲಿ ಇರುವ ತಾಯತಗಳನ್ನು ಕೆಳಗೆ ರಾಶಿಯಂತೆ ಹಾಕಿ "ಈ ಮನೆ ಯಜಮಾನನ ಆರ್ಥಿಕ ಸಮಸ್ಯೆಗಳು ಹೋಗುವುದಕ್ಕೆ ಸರಿಹೊಂದುವುದು ಇದರಲ್ಲಿ ಯಾವ ತಾಯತ ಇದೆಯೋ ಅದು ಹೊರಗೆ ಬರಬೇಕು" ಎಂದು ಮಾಂತ್ರಿಕನು ಹೇಳುವನು. ಮಾಂತ್ರಿಕನ ಪಕ್ಕದ ಜೇಬಿನಲ್ಲಿರುವ ಸ್ತ್ರೀರತ್ನಕ್ಕೆ ಗಜ ದೂರದಲ್ಲಿ ತಾಯತಗಳ ರಾಶಿ ಇರುವುದರಿಂದ, ಸ್ತ್ರೀರತ್ನ ಆಕರ್ಷಣೆ ಶಕ್ತಿಗೆ ತಾಯತಗಳ ಕುಪ್ಪೆಯಲ್ಲಿ ಪುರುಷರತ್ನ ಇರುವ ತಾಯತ ನಿಮಿಷದ ನಂತರ ಕದಲಿ ಸ್ತ್ರೀರತ್ನದ ಕಡೆಗೆ ಬರುವುದು ನಡೆಯುತ್ತದೆ. ಹಾಗೆ ಕುಪ್ಪೆಯಿಂದ ಒಂದು ಅಡಿ ದೂರ ಕದಲಿಬಂದ ಪುರುಷರತ್ನ ತಾಯತವನ್ನು ಮಾಂತ್ರಿಕನು ತೆಗೆದುಕೊಂಡು, ಆ ಮನೆ ಯಜಮಾನನ ಕೈಯಿಗೆ ಕಟ್ಟುತ್ತಿದ್ದಾನೆ. ಇಲ್ಲಿ ನಡೆದಿರುವುದು ಮೂಲಿಕೆ ಪ್ರಭಾವವೇ ಹೊರತು, ಮಂತ್ರಗಳ ಪ್ರಭಾವವಲ್ಲ. ಸ್ತ್ರೀರತ್ನ ಮೂಲಿಕೆ, ಪುರುಷರತ್ನ ಮೂಲಿಕೆಯನ್ನು ಆಕರ್ಷಿಸುವುದೆಂದು, ಸ್ತ್ರೀರತ್ನಕ್ಕೆ ಪುರುಷರತ್ನ ಮೂರು ಅಥವಾ ನಾಲ್ಕು ಅಡಿಗಳ ದೂರದಲ್ಲಿರುವಾಗಲೇ ಪುರುಷರತ್ನದ ಮೇಲೆ ಸ್ತ್ರೀರತ್ನವೊಂದರ ಆಕರ್ಷಣೆ ಅಯಸ್ಕಾಂತ ಶಕ್ತಿಯಹಾಗೆ ಕೆಲಸ ಮಾಡಿ ತನ್ನ ಕಡೆ ಕದಲುವಂತೆ ಮಾಡುತ್ತಿದೆಯೆಂದು, ಒಂದು ಮೊಳ ಒಳಗಾಗಲಿ ನಾಲ್ಕಡಿ ಹೊರಗಾಗಲಿ ಇರುವ ಪುರುಷ ರತ್ನನನ್ನು ಸ್ತ್ರೀ ರತ್ನ ಆಕರ್ಷಿಸಿದೆಯೆಂದು, ಸ್ತ್ರೀರತ್ನ ಕದಲದ ಮೂಲಿಕೆ ಯೆಂದೂ, ಪುರುಷರತ್ನ ಕದಲುವ ಮೂಲಿಕೆಯೆಂದು ಬಹಳ ಜನರಿಗೆ ತಿಳಿದಿಲ್ಲ. ತಿಳಿಯದಿರುವಾಗ ತಾಯತ ಕದಲಿ ಬರುವುದನ್ನು ಯಾರಾದರೂ ಮಂತ್ರಶಕ್ತಿಯ ಹಾಗೇ ತಿಳಿಯುತ್ತಾರೆ.

**ರಾಘವ :–** ಸ್ವಾಮೀ! ನೀವು ಇದಕ್ಕೂ ಮೊದಲು ಹೇಳಿದ ಟಕ್ಕು ಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ ವಿದ್ಯೆಗಳಲ್ಲಿ ಈ ಮೂಲಿಕೆಗಳ ಕೆಲಸ ಯಾವ ವಿದ್ಯೆಗೆ ಸಂಬಂಧಿಸಿರುವುದು?

**ರಾಜಯೋಗಾ :–** ಒಂದು ವಿಧವಾಗಿ ಹೇಳಬೇಕೆಂದರೆ ಮೂಲಿಕೆಗಳು ಎಲ್ಲಾ ವಿದ್ಯೆಗಳಲ್ಲಿಯೂ ಕೆಲಸ ಮಾಡುತ್ತಿವೆ. ಹಾವು, ಚೇಳಿನ ವಿಷಗಳನ್ನು ನಿವಾರಿಸುವು ದರಲ್ಲೂ, ಅನೇಕ ವಸ್ತುಗಳನ್ನು, ಪ್ರಾಣಿಗಳನ್ನು ಸಹಿತ ತೋರಿಸುವುದರಲ್ಲೂ, ಮನುಷ್ಯನಿಗೆ ವಿನೋದವನ್ನು ರಕ್ಷಣೆಯನ್ನು ಕೊಡುವುದರಲ್ಲೂ ಹೆಸರುಗಳಿಸಿದ ಇಂದ್ರಜಾಲ ಮಹೇಂದ್ರಜಾಲ ವಿದ್ಯೆಗಳಲ್ಲಿ ಮೂಲಿಕೆಗಳು ಹೆಚ್ಚಾಗಿ ಉಪಯೋಗ ವಾಗುತ್ತಿವೆ. ಹಾಗೇ ಅನೇಕ ಶಬ್ದಗಳನ್ನು, ಮಾತುಗಳನ್ನು ಕೇಳಿಸುವುದರಲ್ಲಿಯೂ, ಮಾರಣ ಹೋಮ ಮಾಡುವ ಅಸ್ತ್ರಗಳು ಉಪಯೋಗಿ ಸುವುದರಲ್ಲಿಯೂ, ಹೆಸರುಪಡೆದ ಗಜಕರ್ಣ, ಗೋಕರ್ಣ ವಿದ್ಯೆಗಳಲ್ಲಿ ಕಡಿಮೆಯಾಗಿಯೂ ಮೂಲಿಕೆಗಳು ಉಪಯೋಗವಾಗುತ್ತಿವೆಯೆಂದು ಹೇಳಬಹುದು.

**ರಾಘವ :–** ಸ್ವಾಮೀ! ನೀವು ಹೇಳಿದ ಟಕ್ಕುಟಮಾರ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ, ಗೋಕರ್ಣ ವಿದ್ಯೆಗಳನ್ನು ಕಲಿತುಕೊಂಡ ಮನುಷ್ಯ ಪ್ರಪಂಚದಲ್ಲಿ ಎಲ್ಲವನ್ನೂ ಮಾಡುವ ಸಾಮರ್ಥ್ಯವಿರುವ ಮನುಷ್ಯನಾಗಿ ತಯಾರಾಗಿ ತಾನೇ ದೊಡ್ಡ ವ್ಯಕ್ತಿಯಾಗಿ ಕಾಣಿಸುವನು. ಮನುಷ್ಯನನ್ನು ದೊಡ್ಡದಾಗಿ ತೋರಿಸುವ ಈ ವಿದ್ಯೆಗಳಿಗಿಂತ ಇನ್ನೂ ಯಾವುದಾದರೂ ದೊಡ್ಡ ವಿದ್ಯೆ ಇದೆಯಾ?

**ರಾಜಯೋಗಾ :–** ಈ ವಿದ್ಯೆಗಳೆಲ್ಲವೂ ಪ್ರಪಂಚದಲ್ಲಿ ದೊಡ್ಡವೇ, ಈ ವಿದ್ಯೆಗಳು ಯಾವ ಮನುಷ್ಯನನ್ನಾದರೂ ದೊಡ್ಡ ಶಕ್ತಿವಂತನಾಗಿ, ಪೂಜ್ಯನಾಗಿ ತೋರಿಸಬಲ್ಲವು. ಇವುಗಳನ್ನು ಕೇವಲ ಪ್ರಪಂಚ ವಿದ್ಯೆಗಳೆಂದು ಅಥವಾ ಪ್ರಕೃತಿ ವಿದ್ಯೆಗಳೆಂದು ಹೇಳಬಹುದು. ಪ್ರಕೃತಿಯನ್ನು ಸೃಷ್ಟಿಸಿದ ಪರಮಾತ್ಮ ಒಬ್ಬನಿದ್ದಾನೆ. ಪರಮಾತ್ಮ ಪ್ರಕೃತಿಗೆ ದೊಡ್ಡದಾಗಿರುವುದರಿಂದ ಪರಮಾತ್ಮ ಜ್ಞಾನವನ್ನು ತಿಳಿಸುವ ವಿದ್ಯೆ ಪ್ರಕೃತಿ ವಿದ್ಯೆಗಳಿಗಿಂತ ದೊಡ್ಡದೆಂದು ಹೇಳಬಹುದು. ದೈವಜ್ಞಾನವನ್ನು ತಿಳಿಸುವ ವಿದ್ಯೆ ಎಲ್ಲದಕ್ಕಿಂತ ದೊಡ್ಡದೂ ಮತ್ತು ಅದಕ್ಕೆ ಮಿಗಿಲಾದದ್ದು ಇಲ್ಲ ಆದ್ದರಿಂದ ದೈವಜ್ಞಾನ

ವಿದ್ಯೆಯನ್ನು ದೊಡ್ಡ ವಿದ್ಯೆ ಎನ್ನುತ್ತಿದ್ದೇವೆ. ಅದನ್ನೇ ಬ್ರಹ್ಮವಿದ್ಯೆ ಎಂದು ಸಹ ಕರೆಯುತ್ತಿದ್ದೇವೆ. ಬ್ರಹ್ಮ ಎಂದರೆ ದೊಡ್ಡದು ಎಂದು ಅರ್ಥ. ಎಲ್ಲದಕ್ಕಿಂತ ದೊಡ್ಡದೆಂದು ತಿಳಿಯುವುದಕ್ಕೆ ಬ್ರಹ್ಮವಿದ್ಯೆಯನ್ನು ಇತರ ವಿದ್ಯೆಗಳೊಂದಿಗೆ ಹೋಲಿಸಿದಾಗ ಅವುಗಳನ್ನು ಇದೇನು ಬ್ರಹ್ಮವಿದ್ಯೆನಾ ಎಂದು ಹೇಳುವುದು ನಡೆಯುತ್ತಿದೆ. ಆ ಮಾತಿನಿಂದ ಪ್ರಪಂಚ ವಿದ್ಯೆಗಳಲ್ಲಿ ಯಾವುದೂ ಬ್ರಹ್ಮವಿದ್ಯೆ (ದೊಡ್ಡ ವಿದ್ಯೆ) ಅಲ್ಲವೆಂದು ತಿಳಿಯುತ್ತಿದೆ.

**ರಾಘವ :–** ಸ್ವಾಮೀ ನೀವು ಎಷ್ಟೋ ದೊಡ್ಡ ಮೇಧಾವಿಗಳು. ಪ್ರಪಂಚದಲ್ಲಿ ಹೆಸರು ಪ್ರಖ್ಯಾತಿಗಳು ತರುವ ಎಲ್ಲ ವಿದ್ಯೆಗಳನ್ನು ವಿವರವಾಗಿ ತಿಳಿಸಿ, ಬ್ರಹ್ಮವಿದ್ಯೆಯೇ ಎಲ್ಲದಕ್ಕಿಂತ ದೊಡ್ಡ ವಿದ್ಯೆ ಎಂದು ಸುಲಭವಾಗಿ ಅರ್ಥವಾಗುವಂತೆ ಮಾಡಿದ್ದೀರ. ನಿಮ್ಮಿಂದ ಈ ವಿಷಯಗಳನ್ನು ತಿಳಿದುಕೊಳ್ಳದೆ ಹೋಗಿದ್ದರೇ, ದೈವತ್ವವನ್ನು ಸೇರಿಸಲಾರದ ಪ್ರಪಂಚ ವಿದ್ಯೆಗಳನ್ನೇ ನಾನು ಸಹ ದೊಡ್ಡದಾಗಿ ತಿಳಿದು, ಅವುಗಳ ಮಾರ್ಗದಲ್ಲೇ ಪ್ರಯಾಣಿಸುತ್ತಿದ್ದನು. ಈಗ ಬ್ರಹ್ಮವಿದ್ಯೆಯೇ ದೊಡ್ಡದೆಂದು ನಿಮ್ಮಿಂದ ತಿಳಿದಿದೆ. ಆದ್ದರಿಂದ ನಾನು ಬ್ರಹ್ಮವಿದ್ಯೆಗೇ ಪ್ರಾಧಾನ್ಯತೆಯನ್ನು ಕೊಡುತ್ತೇನೆ. ಬ್ರಹ್ಮವಿದ್ಯೆ ಮುಸುಕಿನಲ್ಲಿರುವ ಇತರ ವಿದ್ಯೆಗಳು ಎಲ್ಲವೂ ಪ್ರಪಂಚ ವಿದ್ಯೆಗಳೇ ಎಂದು, ಅವುಗಳ ರಹಸ್ಯಗಳನ್ನು ಪ್ರಜೆಗಳಿಗೆ ತಿಳಿಸಿ ಅವರನ್ನು ಸಹ ದೈವಮಾರ್ಗದಲ್ಲಿ ನಡೆಯುವಂತೆ ಮಾಡುತ್ತೇನೆ. ನನಗೆ ಆ ಬಲವನ್ನು ಕೊಡುತ್ತಾ ಆಶೀರ್ವದಿಸಿರಿ.

**********************************

ತಮ್ಮ ನಾಯಕನು ತಾಳೆಮರ ಮುನೆಪ್ಪ ಹೇಳಿದಂತೆ ಜಾನ್ ತನ್ನ ನಾಯಿ ಜಾನೀಯೊಂದಿಗೆ ಸಹ ಹೊರಟು, ತಮ್ಮ ಮನುಷ್ಯರಾದ ವೆಂಕೂ, ನೂಕಾಗೋಸ್ಕರ ಅವರು ಹೋದ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದಾನೆ. ರೈಲು ಸೂಟ್‌ಕೇಸ್ ಬಿದ್ದ ಸ್ಥಳಕ್ಕೆ ಸರಿಯಾಗಿ ಹೋಗುವ ಸಮಯದಲ್ಲಿ ಜಾನ್ ಪಕ್ಕದಲ್ಲಿರುವ ನಾಯಿ ಬೊಗಳಲು ಪ್ರಾರಂಭಿಸಿತು. ಜಾನ್ ಅದರ ಬೊಗಳುವುದಕ್ಕೆ ಅರ್ಥವನ್ನು ಗ್ರಹಿಸಿ ಪಕ್ಕದ ಸ್ಟೇಷನ್‌ನಲ್ಲಿ ಇಳಿದಿದ್ದಾನೆ. ಅಲ್ಲಿಂದ ನಾಯಿ ಮುಂದೆ ಹೋಗುತ್ತಿದ್ದರೆ ಜಾನ್ ಅದರ ಹಿಂದೆ ಹೋಗುತ್ತಿದ್ದನು. ನಾಯಿ ಒಂದು ಗ್ರಾಮದ ಕಡೆ

ಓಡತೊಡಗಿತು. ಅದರಹಿಂದೆ ಜಾನ್ ಆ ಗ್ರಾಮವನ್ನು ಸೇರಿದನು. ಆ ಗ್ರಾಮದ ಮಧ್ಯದಲ್ಲಿ ದೊಡ್ಡ ಜನ ಸಮೂಹವನ್ನು ಜಾನ್ ನೋಡಿದ್ದಾನೆ. ಆ ಜನ ಸಮೂಹವೇನೋ ನೋಡಬೇಕೆಂದು ತಾನೂ ಸಹ ಅಲ್ಲಿಗೆ ಹೋಗಿದ್ದಾನೆ. ಮುಖಕ್ಕೆ ಸ್ವಲ್ಪ ಗಾಯಗಳಾದ ನೂಕಾ ಕಾಣಿಸಿದ್ದಾರೆ. ಜಾನ್ ಮಾತ್ರ ನೂಕಾಗೆ ಕಾಣಿಸದಂತೆ ಇದ್ದೂ, ತನ್ನ ನಾಯಿ ಸಹ ಕಾಣಿಸದಂತೆ ಅದಕ್ಕೆ ಸನ್ನೆ ಮಾಡಿ, ಅಲ್ಲಿ ಏನು ನಡೆಯುತ್ತಿದೆಯೋ ನೋಡುತ್ತಿದ್ದನು.

ಆ ದಿನ ನಾಗರಪಂಚಮಿ ಆಗಿರುವುದರಿಂದ, ಊರಿನ ಮಧ್ಯದಲ್ಲಿ ನಾಗರ ಕಟ್ಟೆ ಹತ್ತಿರ ಬಹಳ ಜನ ಸ್ತ್ರೀಯರು ನಾಗಪೂಜೆಯಲ್ಲಿ ಪಾಲ್ಗೊಂಡಿದ್ದರು. ಕೆಲವರು ಪುರುಷರು ಅವರಿಗೆ ಸಹಾಯವಾಗಿ ಅಲ್ಲೇ ಇದ್ದಾರೆ. ಪೂಜಾರಿಗಳು ಪೂಜಾ ವಿಧಾನದಲ್ಲಿ ಲಗ್ನವಾಗಿದ್ದಾರೆ. ಗಿರಿಜನರು ಅಲ್ಲಿರುವ ಭಕ್ತರನ್ನೂ, ಪೂಜಾರಿಗಳನ್ನು ಪಕ್ಕಕ್ಕೆ ಹೋಗಲು ಹೇಳುತ್ತಿದ್ದರು. ಪೂಜಾರಿಗಳು ಗಿರಿಜನರ ಮೇಲೆ ಕೋಪಿಸಿಕೊಳ್ಳುತ್ತಾ ನೀವು ಯಾರು ನಮ್ಮನ್ನು ಪಕ್ಕಕ್ಕೆ ಹೋಗಲು ಹೇಳುವುದಕ್ಕೆ, ಮೊದಲು ನೀವು ಇಲ್ಲಿಂದ ಹೋಗಿ ಎಂದು ಗದರಿಸಿದರು. ಹಾವು ಕಡಿತದಿಂದ ಒಬ್ಬ ಮನುಷ್ಯ ಪ್ರಮಾದದಲ್ಲಿದ್ದಾನೆಂದು, ಆತನಿಗೆ ಇಲ್ಲೇ ಚಿಕಿತ್ಸೆ ಮಾಡಬೇಕೆಂದೂ, ಇನ್ನು ಬೇರೆ ವಿಧಾನವಿಲ್ಲವೆಂದು, ಸ್ವಲ್ಪ ತಡವಾದರೂ ಆ ಮನುಷ್ಯ ಸತ್ತುಹೋಗುವನೆಂದು, ಗಿರಿಜನರು ಪೂಜಾರಿಗಳಿಗೆ ಎಷ್ಟು ಹೇಳಿದರೂ ಅವರು ಕೇಳಲಿಲ್ಲ. ಆಗ ಗಿರಿಜನರೊಂದಿಗೆ ವೆಂಕೂನನ್ನು ಹೊತ್ತುಕೊಂಡು ಬಂದ ಗ್ರಾಮಸ್ಥರು ಜೋಕ್ಯ ಮಾಡಿಕೊಂಡು, ಅಲ್ಲಿರುವ ಭಕ್ತರನ್ನು ಪೂಜಾರಿಗಳನ್ನು ಪಕ್ಕಕ್ಕೆ ತೊಲಗಿಸಿದ್ದಾರೆ. ಕೂಡಲೇ ಗಿರಿಜನರಲ್ಲಿ ಒಬ್ಬನು ಬೇವಿನಮರ ಏರಿ ಬೇವಿನ ಕೊಂಬೆಯನ್ನು ಮುರಿದುಕೊಂಡು ಇಳಿದು ಬಂದು, ಬೇವಿನ ಎಲೆಯನ್ನು ಹಾವಿನ ಕಡಿತಕ್ಕೆ ಗುರಿಯಾದ ವೆಂಕೂಗೆ ತಿನಿಸಿದನು. ನಂತರ ಬೇವಿನೆಲೆ ಕಹಿಯಾಗಿ ಇದೆಯಾ ಇಲ್ಲವಾ ಎಂದು ಕೇಳಿದನು. ಬೇವಿನೆಲೆಯನ್ನು ತಿಂದ ವೆಂಕೂ ಬೇವಿನ ಎಲೆ ಕಹಿಯಾಗಿ ಇಲ್ಲ, ಸಪ್ಪೆಯಾಗಿದೆ ಎಂದು ಹೇಳಿದ್ದಾನೆ. ಆ ಮಾತುಗಳಿಂದ ಗಿರಿಜನರು ಹಾವಿನ ವಿಷ ವೆಂಕೂ ಶರೀರವೆಲ್ಲಾ ವ್ಯಾಪಿಸಿ ತಲೆಗೂ ಸಹ ಏರಿದೆಯೆಂದು ಗ್ರಹಿಸಿದ್ದಾರೆ. ತಕ್ಷಣ ಅರಳಿ ಮರವನ್ನು ಏರಿ ಅರಳಿ ಮರದ

ಕೊಂಬೆಯನ್ನು ಮುರಿದು ಕೆಳಗೆ ತಂದಿದ್ದಾರೆ. ಕೊಂಬೆಯನ್ನು ಮುರಿದ ಭಾಗವನ್ನು ಮೇಲಕ್ಕೆ ಹಿಡಿದುಕೊಂಡಿದ್ದಾರೆ. ಆಗ ಯೋಗ ಅರಳಿಮರದ ಕೊಂಬೆಯಿಂದ ಎರಡು ಎಲೆಗಳನ್ನು ತುಂಬುಳೊಂದಿಗೆ ಸಹ ಕಿತ್ತು ಅಲ್ಲೇ ಮಲಗಿಸಿದ ವೆಂಕುವೊಂದರ ಎರಡು ಕಿವಿಗಳೊಳಗೆ ಅರಳಿ ಎಲೆಗಳ ತುಂಬುಗಳನ್ನು ಇಟ್ಟಿದ್ದಾನೆ. ಎಲೆಗಳ ತುಂಬುಗಳು ಪೂರ್ತಿಯಾಗಿ ತಮಟೆಗೆ ತಾಕದಂತೆ, ಮತ್ತು ಹೊರಗೂ ಇಲ್ಲದಂತೆ ಒಳಗೆ ಗೂಗೆಗೆ ತಾಕುವಂತೆ ಇಟ್ಟಿದ್ದಾನೆ. ಆ ವಿಧವಾಗಿ ಇಟ್ಟಿರುವ ತುಂಬುಗಳನ್ನು ಎರಡು ಅಥವಾ ಮೂರು ನಿಮಿಷಗಳವರೆಗು ಹಾಗೇ ಇಟ್ಟಿದ್ದಾನೆ. ವೆಂಕೂ ಕಿವಿಗಳಲ್ಲಿ ಯಾವುದೋ  ಬಾಧೆ ಕಾಣಿಸತೊಡಗಿತು. ವೆಂಕೂ ಬಿಡಿಸಿಕೊಳ್ಳುವುದಕ್ಕೆ ಪ್ರಾರಂಭಿಸಿದಾಗ ಉಳಿದ ಗಿರಿಜನರು ವೆಂಕುನನ್ನು ಕದಲದಂತೆ ಬಲವಾಗಿ ಹಿಡಿದುಕೊಂಡರು. ಹಾಗೆ ಇಟ್ಟಿರುವ ಎಲೆ ತುಂಬುಗಳನ್ನು ಮೂರು ನಿಮಿಷಗಳ ನಂತರ ತೆಗೆದು, ಮತ್ತೊಂದು ಜೊತೆ ಎಲೆ ತುಂಬುಗಳನ್ನು ಮೊದಲು ಇಟ್ಟಂತೇ ಕಿವಿಯಲ್ಲಿ ಇಟ್ಟು ಮೂರು ನಿಮಿಷಗಳ ನಂತರ ತೆಗೆದುಹಾಕಿದ್ದಾನೆ. ಹಾಗೆ ಮೂರು ಜೊತೆಗಳ ಎಲೆಗಳನ್ನು ಇಟ್ಟ ನಂತರ ವೆಂಕುನಿಂದ ಬೇವಿನೆಲೆಯನ್ನು ತಿನಿಸಿ ರುಚಿ ಹೇಗಿದೆಯೆಂದು ಕೇಳಿದ್ದಾನೆ. ಸ್ವಲ್ಪ ಕಹಿಯಾಗಿ ಕಾಣಿಸುತ್ತಿದ್ದಂತೆ ವೆಂಕು ಹೇಳಿದನು. ಇನ್ನೂ ಸ್ವಲ್ಪ ವಿಷ ವೆಂಕು ಶರೀರದಲ್ಲಿ ಇದೆಯೆಂದು ಗ್ರಹಿಸಿದ ಯೋಗ ಮತ್ತೊಂದು ಜೊತೆ ಎಲೆಗಳನ್ನು ವೆಂಕೂ ಕಿವಿಯಲ್ಲಿ ಇಟ್ಟು ಮೂರು ನಿಮಿಷಗಳ ನಂತರ ತೆಗೆದುಹಾಕಿ, ನಂತರ ಬೇವಿನ ಎಲೆಯನ್ನು ತಿನಿಸಿ ರುಚಿಯನ್ನು ಕೇಳಿದಾಗ ಬೇವಿನೆಲೆ ಪೂರ್ತಿ ಕಹಿಯಾಗಿ ಇರುವಂತೆ ವೆಂಕೂ ಹೇಳಿದ್ದಾನೆ. ಆಗ ಆತನ ಶರೀರದಲ್ಲಿ ಹಾವಿನ ವಿಷ ಪೂರ್ತಿ ಹೋಗಿದೆಯೆಂದು ಗ್ರಹಿಸಿದ ಯೋಗ ಇನ್ನು ಆತನಿಗೆ ಪ್ರಾಣಭಯ ಇಲ್ಲವೆಂದು ಹೇಳಿದ್ದಾನೆ. ಹಾವಿನ ವಿಷ ಪೂರ್ತಿಯಾಗಿ ಎಲೆಗಳೊಳಗೆ ಬಂದಿದೆಯೆಂದು, ಆ ಎಲೆಗಳನ್ನು ಪಶುಗಳು ತಿಂದರೆ ಅವುಗಳಿಗೆ ವಿಷ ಏರುತ್ತದೆಂದು ಆ ಎಲೆಗಳನ್ನು ಹೂತಿಡಲು, ಯೋಗಾ ಹೇಳಿದ್ದಾನೆ.

ಇದೆಲ್ಲವೂ ವಿಚಿತ್ರವಾಗಿ ನೋಡಿದ ಅಲ್ಲಿರುವ ಗ್ರಾಮಸ್ಥರೂ, ಭಕ್ತರೂ, ಪೂಜಾರಿಗಳು ಗಿರಿಜನರು ಮಾಡಿದ ವೈದ್ಯವನ್ನು ಕುರಿತು ಕೇಳಿದ್ದಾರೆ. ಆಗ

ಯೋಗಾ ಈ ವಿಧವಾಗಿ ಹೇಳಲು ಪ್ರಾರಂಭಿಸಿದನು. "ಭೂಮಿ ಮೇಲೆ ಪ್ರತಿ ಎಲೆಯೂ ಒಂದು ಔಷಧವೇ ಎನ್ನುವ ಮಾತನ್ನು ಈದಿನದ ಪ್ರಜೆಗಳು ಪೂರ್ತಿಯಾಗಿ ಮರೆತುಹೋಗಿದ್ದಾರೆ. ಪೂರ್ವಕಾಲದಲ್ಲಿ ಹಿರಿಯರು ಯಾವ ಉದ್ದೇಶದಿಂದ ಒಂದು ಕೆಲಸವನ್ನು ಸೂಚಿಸಿದ್ದಾರೋ ಆ ಉದ್ದೇಶ ಈದಿನ ನಮಗೆ ತಿಳಿಯದಂತೆ ಹೋಗಿದೆ. ಪೂರ್ವಕಾಲದಲ್ಲಿ ರೋಗ ನಿವಾರಣೆಗೆ ವೈದ್ಯರು ಪೂರ್ತಿಯಾಗಿ ಪ್ರಕೃತಿಯಿಂದ ಲಭಿಸುವ ಮೂಲಿಕೆಗಳ ಮೇಲೆ ಆಧಾರಪಡುತ್ತಿದ್ದರು. ಅಮೃತಮಯನಾದ ಚಂದ್ರನ ಕಿರಣಗಳಿಂದ ಭೂಮಿ ಮೇಲೆ ಗಿಡ ಮರಗಳೆಲ್ಲವೂ ಔಷಧ ಗುಣ ಹೊಂದಿವೆಯೆಂದು, ತಿಳಿದ ಹಿರಿಯರು ಅನೇಕ ವಿಧಗಳಾಗಿ ಮರಗಳನ್ನು ಔಷಧಗಳಾಗಿ ಉಪಯೋಗಿಸಿ ರೋಗ ನಿರ್ಮೂಲನೆ ಮಾಡುತ್ತಿದ್ದರು. ಒಂದು ಮರದ ಎಲೆ ಒಂದು ರೋಗಕ್ಕೆ ಔಷಧವೆಂದು ಗ್ರಹಿಸಿದ ವೈದ್ಯರು ಪೂರ್ವದಲ್ಲಿರುತ್ತಿದ್ದರು. ಅವರ ವೈದ್ಯ ವಿಧಾನವನ್ನು ಅವರ ಹತ್ತಿರವಿರುವ ಶಿಷ್ಯರಿಗೆ ಕಲಿಸುತ್ತಿದ್ದರು. ಸ್ವಲ್ಪ ಕಾಲಕ್ಕೆ ವೈದ್ಯರಲ್ಲಿ ಒಂದು ದುಷ್ಟ ಸಂಪ್ರದಾಯ ಏರ್ಪಟ್ಟಿದೆ. ತಮ್ಮ ಹತ್ತಿರ ವೈದ್ಯವನ್ನು ಅಭ್ಯಾಸಿಸುವ ಶಿಷ್ಯರಿಗೆ ತಮಗೆ ತಿಳಿದಿರುವವೆಲ್ಲಾ ವೈದ್ಯ ಕ್ರಿಯೆಗಳನ್ನು ಬೋಧಿಸದೆ ಯಾವುದೋ ಒಂದು ಕ್ರಿಯೆಯನ್ನು ಮಾತ್ರ ಶಿಷ್ಯರಿಗೆ ಹೇಳದಂತೆ ತಮ್ಮಹತ್ತಿರವೇ ಬಚ್ಚಿಟ್ಟುಕೊಳ್ಳುತ್ತಿದ್ದರು.

ಉದಾಹರಣೆಗೆ ಒಬ್ಬ ವೈದ್ಯ ಗುರುವಿಗೆ ನೂರು (100) ರೋಗಗಳಿಗೆ ನೂರು ಔಷಧಗಳು ತಿಳಿದಿದ್ದರೇ, ತನ್ನ ಶಿಷ್ಯರಿಗೆ 99 ರೋಗಗಳಿಗೆ ಮಾತ್ರವೇ ವೈದ್ಯವನ್ನು ಕಲಿಸುತ್ತಿದ್ದರು. ಒಂದು ವೈದ್ಯವನ್ನು ಮಾತ್ರ ತಮ್ಮೊಳಗೆ ಬಚ್ಚಿಟ್ಟುಕೊಳ್ಳುತ್ತಿದ್ದರು. ತಮ್ಮ ಹತ್ತಿರವಿರುವ ವಿದ್ಯೆಯೆಲ್ಲವನ್ನೂ ಹೇಳಿದರೆ ಶಿಷ್ಯರು ತಮ್ಮೊಂದಿಗೆ ಸಮಾನರಾಗುವರೆಂದು, ಹಾಗೆ ಆಗದೆ ತಮಗಿಂತ ಕಡಿಮೆಯವರಾಗಿ ಇರಬೇಕೆಂದು ಆದಿನದ ವೈದ್ಯ ಗುರುಗಳು ಹಾಗೆ ಮಾಡುತ್ತಿದ್ದರು. ಹಾಗೆ ಹೇಳದೇ ಹೋಗುವುದರಿಂದ ಆ ಒಂದು ವಿದ್ಯೆಗೋಸ್ಕರ ಶಿಷ್ಯರು ಗುರುವಿಗೆ ವಿನಮ್ರತೆಯಾಗಿಇರುವರೆಂದೂ, ಎಲ್ಲಾ ವಿದ್ಯೆಗಳು ತಿಳಿದರೆ ಗುರುವನ್ನು ಮೀರಿದ ಶಿಷ್ಯರಾಗಿ ಗುರುವನ್ನು ಗೌರವಿಸದೇ, ಗುರುವಿನ ಮಾತು ಕೇಳದಂತೆ ಹೋಗುವರೆಂದು ಆದಿನದ ಗುರುಗಳ ಅಭಿಪ್ರಾಯ. ಗುರುವೊಂದರ ಅವಸಾನದಶೆವರೆಗು ಯಾರಾದರೇ

ಗುರುವನ್ನು ಗೌರವಿಸುತ್ತಾ ಇರುತ್ತಾರೋ, ಆ ಶಿಷ್ಯರಿಗೇ ತಮ್ಮ ಹತ್ತಿರವಿರುವ ಒಂದು ವೈದ್ಯ ರಹಸ್ಯವನ್ನು ಹೇಳಿ ಹೋಗುತ್ತಿದ್ದರು. ಒಂದುವೇಳೆ ಆ ಗುರುವು ಮಧ್ಯದಲ್ಲೇ ಅಕಾಲಮರಣವನ್ನು ಹೊಂದಿದರೇ, ಆತನ ಹತ್ತಿರ ಇರುವ ರಹಸ್ಯ ಶಿಷ್ಯರಿಗೆ ತಿಳಿಯದಂತೆ ಆತನೊಂದಿಗೇ ಅಂತ್ಯವಾಗಿ ಹೋಗುತ್ತಿತ್ತು. ಹಾಗೆ ಸತ್ತುಹೋದ ಗುರುಗಳಿಂದ ಕೆಲವು ವೈದ್ಯ ರಹಸ್ಯಗಳು ಕಾಲಗರ್ಭದಲ್ಲಿ ಬೆರೆತು ಹೋಗಿವೆ. ಆದಿನದ ವೈದ್ಯ ಗುರುಗಳು ಬಹಳ ಮುಖ್ಯವಾದ ವೈದ್ಯ ವಿಧಾನವನ್ನು ಒಂದನ್ನು ತಮ್ಮ ಹತ್ತಿರ ರಹಸ್ಯವಾಗಿ ಇಟ್ಟುಕೊಳ್ಳುವುದರಿಂದ ಅವರ ಅಕಸ್ಮಾತ್ ಮರಣದಿಂದ ಮುಖ್ಯವಾದ ವೈದ್ಯ ರಹಸ್ಯಗಳೇ ತಿಳಿಯದಂತೆ ಹೋಗುತ್ತಿದ್ದವು. ಈ ವಿಧವಾಗಿ ಕಾಲಗರ್ಭದಲ್ಲಿ ಮುಖ್ಯವಾದ ವೈದ್ಯ ವಿಧಾನಗಳು ನಶಿಸಿ ಹೋಗುವುದನ್ನು ಗಮನಿಸಿದ ಕೆಲವರು ಹಿರಿಯರು ಯೋಚಿಸಿ ಎಲ್ಲದಕ್ಕಿಂತ ಮುಖ್ಯವಾದದ್ದು, ವೈದ್ಯಕ್ಕೆ ಕಾಲವ್ಯವಧಿ ಇಲ್ಲದ್ದು, ಗಂಟೆಯೊಳಗೆ ಪ್ರಾಣಾಪಾಯ ಸ್ಥಿತಿಗೆ ತೆಗೆದುಕೊಂಡು ಹೋಗುವಂಥದ್ದಾದ ಹಾವು ಕಡಿತ ವೈದ್ಯವು (ಚಿಕಿತ್ಸೆ) ರಹಸ್ಯವಾಗಿ ಬದಲಾಗದಂತೆ ಇರುವುದಕ್ಕೆ ಸರಿಯಾದ ವಿಧಾನವನ್ನು ಅನುಸರಿಸಬೇಕೆಂದು ಕೊಂಡಿದ್ದಾರೆ. ವೈದ್ಯರ ಸ್ವಾರ್ಥಪೂರಿತ ವಿಧಾನದಿಂದ ಹಾವಿನ ವೈದ್ಯವನ್ನು ಹೊರತುಪಡಿಸಿ, ಹಾವು ಕಡಿತಕ್ಕೆ ವೈದ್ಯ ಕಣ್ಮರೆಯಾಗಿ ಹೋಗದಂತೆ, ಪ್ರತಿ ಮನುಷ್ಯನಿಗೂ ತಿಳಿಯುವಂತೆ ಮಾಡಬೇಕೆಂದುಕೊಂಡಿದ್ದಾರೆ. ಹಾಗೆ ತಿಳಿಯುವುದಕ್ಕೆ ಆ ದಿನ ಆ ವೈದ್ಯವನ್ನು ಎಲ್ಲರಿಗೂ ಹೇಳಿದರೂ ಸ್ವಲ್ಪ ಕಾಲಕ್ಕೆ ಪುನಃ ಮರೆಯಲ್ಲಿ ಬೀಳುವ ಅವಕಾಶ ಇದೆ. ಆದ್ದರಿಂದ ಶಾಶ್ವತವಾಗಿ ಆ ವೈದ್ಯ ಕಣ್ಮರೆಯಾಗದಂತೆ ಇರುವುದಕ್ಕೆ ಎಲ್ಲರಿಗೂ ಪ್ರತ್ಯಕ್ಷವಾಗಿ ಸದಾ ಕಾಲ ತಿಳಿಯುವಂತೆ ದೇಶವೆಲ್ಲಾ ಪ್ರತಿ ಊರಿನಲ್ಲೂ ಹಾವು ಕಡಿತ ವೈದ್ಯಕ್ಕೆ ಸಂಬಂಧಿಸಿದ ಗುರುತನ್ನೂ ಮತ್ತೂ ಆ ಗುರುತಿನ ಹತ್ತಿರವೇ ಹಾವು ಕಡಿತಕ್ಕೆ ಔಷಧಗಳನ್ನೂ ಇರುವಹಾಗೆ ಮಾಡಬೇಕೆಂದುಕೊಂಡಿದ್ದಾರೆ. ಆ ಪ್ರಕ್ರಿಯೆಯಲ್ಲಿ ಭಾಗವಾಗಿ ಮೊದಲು ಪ್ರತಿ ಊರಲ್ಲೂ ನಾಗರಹಾವಿನ ಗೊಂಬೆಗಳನ್ನು ಒಂದು ಕಟ್ಟೆ ಮೇಲೆ ಇಟ್ಟಿದ್ದಾರೆ. ಈ ಹಾವುಗಳು ಕಚ್ಚಿದರೆ ಅದಕ್ಕೆ ವೈದ್ಯವಾಗಿ ಈ ಮೂಲಿಕೆಗಳನ್ನು ಬಳಸಿರೆಂದು, ಎರಡನೆ ಪ್ರಕ್ರಿಯೆಯಾಗಿ ಆ ಪ್ರತಿಮೆಗಳ ಹಿಂದೆ ಬೇವಿನ ಮರ, ಅರಳಿ ಮರಗಳನ್ನು

ಬೆಳೆಸಿದ್ದಾರೆ. ಈ ಹಾವುಗಳು ಕಚ್ಚಿದರೆ ಈ ಗಿಡಗಳೇ ಹಾವುಗಳ ವಿಷವನ್ನು ಹರಿಸುತ್ತವೆಂದು ತಿಳಿಸಿದ್ದಾರೆ. ಹಾಗೆ ಆ ದಿನ ಹಿರಿಯರು ಯೋಚಿಸಿ ಪ್ರತಿಷ್ಠಿಸಿರುವವೇ ಈದಿನದ ನಾಗರ ಕಟ್ಟೆಗಳು. ಪ್ರತಿ ಊರಿನಲ್ಲಿಯೂ ನಾಗರ ಕಟ್ಟೆ, ಆ ಕಟ್ಟೆ ಮೇಲೆ ಬೇವು ಆಲದ ಮರಗಳನ್ನು ಆಚಾರದಂತೆ ಇಡಬೇಕೆಂದು ಆದಿನದ ಹಿರಿಯರು ಸೂಚಿಸಿದ್ದಾರೆ. ಅಷ್ಟೇ ಅಲ್ಲದೆ ಹಾವು ಕಡಿದಾಗ ಆ ಮರಗಳನ್ನು ಹೇಗೆ ಉಪಯೋಗಿಸಬೇಕೋ ಸಹ ತಿಳಿಸಿದ್ದಾರೆ.

ಪೂರ್ವದ ಹಿರಿಯರು ನಿರ್ಮಿಸಿದ ನಾಗರ ಕಟ್ಟೆಯಿಂದ ಎಲ್ಲರಿಗೂ ಹಾವು ಕಡಿತ ವೈದ್ಯವು ತಿಳಿದುಹೋಗಿದೆ. ಹಾವು ಕಡಿತದಿಂದ ಪ್ರತಿ ಒಬ್ಬರೂ ಬೇವು ಅರಳಿ ಮರಗಳಿಂದ ವೈದ್ಯವನ್ನು ಸಕಾಲದಲ್ಲಿ ಹೊಂದುತ್ತಿದ್ದರು. ಹಾವು ಕಡಿತ ವೈದ್ಯದಲ್ಲಿ ಅರಳಿ ಎಲೆಗಳು ಮುಖ್ಯವಾದ ಪಾತ್ರ ಪೋಷಿಸುತ್ತಿವೆಯೆಂದು ಆದಿನ ಎಲ್ಲರಿಗೂ ತಿಳಿದುಹೋಗಿದೆ. ಅಷ್ಟೇ ಅಲ್ಲದೆ ಪ್ರತಿ ಅರಳಿ ಎಲೆ ಹಾವಿನ ಎಡೆಯ ಆಕಾರವನ್ನು ಹೋಲಿರುವಂತೆ ಗ್ರಹಿಸಿದ್ದಾರೆ. ಯಾವ ಹಾವು ಕಚ್ಚಿದರೂ ಹಾವಿನ ಎಡೆ ಆಕಾರದಲ್ಲಿರುವ ಅರಳಿ ಎಲೆ ಆ ವಿಷಯವನ್ನು ಹೀರಿಕೊಳ್ಳುತ್ತದೆಂದು ಹೇಳಿಕೊಳ್ಳುತ್ತಿದ್ದರು. ಈ ವಿಧವಾಗಿ ಹಾವುಗಳ ವೈದ್ಯ ಪ್ರತಿ ಮನುಷ್ಯನಿಗೂ ತಿಳಿದುಹೋಗಿದ್ದರೂ ಕಾಲ ಕ್ರಮದಲ್ಲಿ ಅಜ್ಞಾನ ಬೆಳೆದುಹೋಗಿ, ತನ್ನ ಶರೀರದಲ್ಲಿನ ದೈವತ್ವವನ್ನು ಗುರುತಿಸಲಾರದ ಮಾನವನು ಕೊನೆಗೆ ಕಲ್ಲಿಗೋ, ಮರಕ್ಕೋ ಕೈ ಮುಗಿಯುವುದನ್ನು ಆರಂಭಿಸಿದ್ದಾನೆ. ಮಾನವನ ಅಜ್ಞಾನ ಪ್ರವಾಹದಲ್ಲಿ ಆದಿನ ತಿಳಿದ ಹಾವಿನ ವೈದ್ಯವಿಧಾನ ಕೊನೆಗೆ ಪೂಜಾವಿಧಾನವಾಗಿ ಬದಲಾಗಿಹೋಗಿದೆ. ಆ ದಿನದ ಹಿರಿಯರ ಉದ್ದೇಶ ಕಣ್ಮರೆಯಾಗಿ ಹೋಗಿ ಯಾವುದಾದರೇ ರಹಸ್ಯ ಆಗಬಾರದೆಂದುಕೊಂಡಿದ್ದಾರೋ, ಅದು ಈದಿನ ನಮ್ಮೆಲ್ಲರಿಗೂ ತಿಳಿಯದ ರಹಸ್ಯವಾಗಿದೆ. ಈ ವೈದ್ಯ ವಿಧಾನವೇನೋ ಈಗ ನಿಮಗೆ ತಿಳಿಯದೆ ಇರುವುದರಿಂದ, ನಾವು ಸಾವು ಬದುಕುಗಳ ಮಧ್ಯದಲ್ಲಿರುವ ಮನುಷ್ಯನನ್ನು ತಂದು ಸ್ವಲ್ಪ ಪಕ್ಕಕ್ಕೆ ಹೋಗೆಂದರೂ, ಈ ಮನುಷ್ಯನಿಗೆ ವೈದ್ಯ ಮಾಡಬೇಕೆಂದು ಅಂಗಲಾಚಿದರೂ ಯಾರೂ ಕೇಳಿಸಿಕೊಳ್ಳದೆ ಹೋಗಿದ್ದಾರೆ. ನೀವು ಭಕ್ತಿಯಿಂದ ಪೂಜೆ ಮಾಡುತ್ತಿರು ವಾಗ, ನಾವು ಅದನ್ನು ಭಂಗಪಡಿಸುವುದಕ್ಕೆ ಬಂದಂತೆ ತಿಳಿದಿದ್ದೀರ. ನಂತರ

ಹೇಗೋ ಕೊನೆಗೆ ವೈದ್ಯ ಮಾಡಿ ಈತನನ್ನು ಬದುಕಿಸಿದ್ದೇವೆ. ಈಗ ನಿಮ್ಮೆಲ್ಲರ ಮುಂದೆ ರಹಸ್ಯವಾಗಿ ತಿಳಿಯದಂತಿದ್ದ ವೈದ್ಯವನ್ನು ಮಾಡಿ ಹೊರಗಿಟ್ಟಿದ್ದೇವೆ. ಈಗ ಪ್ರತ್ಯಕ್ಷವಾಗಿ ನೋಡಿದ ನೀವು ಇಂದಿನಿಂದಾದರೂ, ಈ ಔಷಧ ವೃಕ್ಷಗಳು ಹಾವಿಗೆ ವಿರುದ್ಧವಾದವೆಂದು ತಿಳಿದು, ಇವುಗಳನ್ನು ಔಷಧಗಳಾಗಿ ನೀವು ಉಪಯೋಗಿಸಿಕೊಳ್ಳಬೇಕೆಂದು ಕೋರುತ್ತಿದ್ದೇವೆ." ಎಂದು ಯೋಗ ಏಕದಾಟಿಯಲ್ಲಿ ಹೇಳಿದ ಮಾತುಗಳನ್ನು ಕೇಳಿ ಅಲ್ಲಿರುವವರು ಒಬ್ಬರ ಮುಖವನ್ನು ಒಬ್ಬರು ನೋಡಿಕೊಂಡಿದ್ದಾರೆ. ಆಗ ಅವರಲ್ಲಿ ಒಬ್ಬ ಪೂಜಾರಿ ಹೀಗೆ ಹೇಳಿದ್ದಾನೆ.

**ಪೂಜಾರಿ :–** ಎಲ್ಲ ವಿಷಯಗಳನ್ನು ತಿಳಿದ ಹಿರಿಯರು, ಎಷ್ಟೋ ಜನ ಮೇಧಾವಿಗಳೂ ಮತ್ತು ಎಷ್ಟೋ ಶ್ರದ್ಧೆ ಭಕ್ತಿಯುಳ್ಳವರೂ ಬಹಳ ಕಾಲದಿಂದ ನಾಗಪ್ರತಿಮೆಗಳನ್ನು ಪೂಜಿಸುತ್ತಿದ್ದಾರೆ. ಅವರಿಗೆ ತಿಳಿಯದ ರಹಸ್ಯವಿರುತ್ತದಾ? ನೀವು ಹೇಳಿದಂತೆ ಅವರು ಎಲ್ಲೂ ಹೇಳಲಿಲ್ಲ. ಅವರಿಗಿಂತ ನೀವು ತಿಳಿದವರಾ? (ಎಂದು ಗಿರಿಜನರನ್ನು ಆತನು ವಿಮರ್ಶಿಸಿದಾಗ? ಅಲ್ಲಿರುವವರೆಲ್ಲರೂ ಆತನ ಮಾತುಗಳನ್ನೇ ಬಲಪಡಿಸಿದರು ಹಾಗೆ ಅವರ ಮಾತುಗಳನ್ನು ಕೇಳಿದ ಯೋಗಾ ಕೂಡಲೇ ಹೀಗೆ ಹೇಳಿದ್ದಾನೆ.)

**ಯೋಗಾ :–** ಇಲ್ಲಿ ಪ್ರಸ್ತುತ ಪೂಜಿಸುತ್ತಿರುವವರು ಮತ್ತು ಪೂಜೆಗಳು ಮಾಡದಿರುವವರೂ ಇರಬಹುದು. ಪೂರ್ವದಿಂದ ಈ ಪೂಜೆಗಳನ್ನು ಪ್ರೋತ್ಸಹಿಸಿದವರೂ ಇರಬಹುದು. ಅವರು ಏನು ಹೇಳಿದರೂ ಆ ಮಾತುಗಳನ್ನೇ ದೊಡ್ಡದಾಗಿ ತಿಳಿದು ಕುರುಡರಂತೆ ನಂಬುವವರೂ ಇರಬಹುದು. ಅಷ್ಟು ಮಾತ್ರಕ್ಕೆ ಅವರು ಸರ್ವವೂ ತಿಳಿದವರೆಂದುಕೊಳ್ಳುವುದು ತಪ್ಪು. ನೀವು ನಾಗಪ್ರತಿಮೆಗಳನ್ನು ಪೂಜಿಸುತ್ತಿದ್ದೀರಲ್ಲವೆ! ಆದರೇ ಧೈರ್ಯವಾಗಿ ನಾಗರಹಾವು ಹತ್ತಿರಕ್ಕೆ ಹೋಗಬಲ್ಲಿರಾ? ನಮ್ಮನ್ನು ಪೂಜಿಸುತ್ತಿದ್ದಾರೆಂದು ಅದು ನಿಮ್ಮನ್ನು ಕಚ್ಚದಂತೆ ಬಿಡುತ್ತದಾ? ಅವರು ಹೇಳಿರುವುದು ಜಾರಿಯಾಗದಂತಹ ಫಲಿತ. ನಾವು ಇಲ್ಲಿಯವರೆಗು ಏನು ಹೇಳಿದ್ದೇವೋ ಅದು ಜಾರಿಯಾಗುವ ಫಲಿತ. ಅವರು ಹೇಳಿರುವುದು ಭಕ್ತಿಯಿಂದ ಇವುಗಳನ್ನು ಪೂಜಿಸು ಎಂದು, ನಾವು ಹೇಳುವುದು

ಬುದ್ಧಿವಂತಿಗೆಯಿಂದ ಇವುಗಳನ್ನು ವೈದ್ಯವಾಗಿ (ಚಿಕಿತ್ಸೆಯಾಗಿ) ಬಳಸಿಕೊಳ್ಳಿರೆಂದು. ನಮ್ಮ ಮಾತು ನಿಜವೆನ್ನುವುದಕ್ಕೆ ನಿದರ್ಶನ ನೀವು ಈಗ ನೋಡಿದ್ದೀರಲ್ಲ!

**ಪೂಜಾರಿ :–** ನೀವು ಹೇಳಿರುವುದೂ, ಮಾಡಿ ತೋರಿಸಿರುವುದೂ ನಿಜವೇ. ಆದರೆ ಇದರಿಂದ ಭಕ್ತಿಭಾವನೆಗಳು ಕಡಿಮೆಯಾಗಿ, ದೇವರೇ ಇಲ್ಲೆನ್ನುವ ನಾಸ್ತಿಕತ್ವಕ್ಕೆ ಹಾದಿ ಏರ್ಪಡುತ್ತದೇನೋ?

**ಯೋಗಾ :–** ನಾವು ದೇವರು ಇಲ್ಲ ಎಂದು ಹೇಳಲಿಲ್ಲ. ಅಸಲಾದ ದೇವರನ್ನು ಮರೆತು, ಕಲ್ಪಿತ ಭಕ್ತಿಯಲ್ಲಿ ಬಿದ್ದು ದೇವರಿಗೆ ದೂರವಾಗುತ್ತಿದ್ದಾರೆಂದು ಹೇಳುತ್ತಿದ್ದೇವೆ. ನಮ್ಮಲ್ಲಿ ಭಕ್ತಿ ಇದೆ, ಆದರೆ ಅದು ದೇವರ ಕಡೆ ಅಲ್ಲದೆ ಮತ್ತೊಂದು ಕಡೆ ವೃಥಾ ಆಚರಿಸಲಾಗುತ್ತಿದೆಯೆಂದು ಹೇಳುತ್ತಿದ್ದೇವೆ.

**ಪೂಜಾರಿ :–** ನಾವು ಮಾಡುವುದು ವೃಥಾ ಭಕ್ತಿಯಾ! ನಮ್ಮ ಭಕ್ತಿ ಸರಿಯಾದುದಲ್ಲವಾ!

**ಯೋಗಾ :–** ಹೌದು, ನನ್ನ ಮಾತಿನಲ್ಲಿ ಸತ್ಯವನ್ನು ಗ್ರಹಿಸಿರಿ. ನಿಜ ನಿಷ್ಟೂರವಾಗಿ, ಕಠಿಣವಾಗಿ ಇರುತ್ತದೆ. ಆದ್ದರಿಂದ ಸ್ವಲ್ಪ ಯೋಚಿಸಿ ಅರ್ಥ ಮಾಡಿಕೊಳ್ಳಿ. ಕದಲಿಕೆ (ಚಲನೆ) ಇಲ್ಲದ ಕಲ್ಲಿನ ಪ್ರತಿಮೆಗಳ ಹಾವುಗಳನ್ನು ಭಕ್ತಯಿಂದ ಪೂಜಿಸುತ್ತಿರುವ ನಾವು, ಪ್ರಾಣವಿರುವ ಹಾವು ಕಾಣಿಸಿದ ಕೂಡಲೆ ಹೊಡೆದು ಅದರ ಪ್ರಾಣವನ್ನು ತೆಗೆಯುತ್ತಿದ್ದೇವೆ. ಹಾಗಿರುವಾಗ ಹಾವುಗಳ ಮೇಲಿರುವ ನಮ್ಮ ಭಕ್ತಿ ನಿಜವಾದದ್ದಾ? ಕಲ್ಲಿನ ಬಸವಣ್ಣನಿಗೆ ಕೈ ಮುಗಿಯುವವರು ಶಕ್ತಿಗೆ ಮೀರಿದ ಭಾರವನ್ನು ಬದುಕಿರುವ ಬಸವಣ್ಣನಿಗೆ ಇಟ್ಟು, ಎಳೆಯಲಾರದೆ ನಿಧಾನವಾಗಿ ಹೆಜ್ಜೆಗಳು ಹಾಕಿದರೆ ಕೋಲಿನಿಂದ ಹೊಡೆದು ಮತ್ತಷ್ಟು ಎಳೆಸುತ್ತಾರೆ. ಬದುಕಿರುವ ಬಸವಣ್ಣನನ್ನು ಹೊಡೆದು ಕಲ್ಲಿನ ಬಸವಣ್ಣನಿಗೆ ಕೈಮುಗಿಯುವುದಾ ಭಕ್ತಿ. ನಾಯಿಯನ್ನು ಕಾಟಮಯ್ಯನಂತೆ, ಹಂದಿಯನ್ನು ವರಾಹ ಅವತಾರದಂತೆ ಪೂಜಿಸುವ ನಾವು ಅವುಗಳನ್ನು ಎಷ್ಟರಮಟ್ಟಿಗೆ ಗೌರವಿಸುತ್ತಿದ್ದೇವೆ? ನಾವು ಪೂಜಿಸುವ ಮರಗಳನ್ನು ಕಡಿದು ಒಲೆಯಲ್ಲಿ ಇಡುತ್ತಿದ್ದೇವೆ. ಆರಾಧಿಸುವ ದೇವತೆಗಳನ್ನು ಬಯ್ಯುತ್ತಿದ್ದೇವೆ. ಮೇಲಾಗಿ ನಮ್ಮದು ಭಕ್ತಿ ಅಲ್ಲವಾ? ಎಂದು ಕೇಳುತ್ತಿದ್ದಾರೆ. ನೀವೇ ಯೋಚಿಸಿ ನಮ್ಮ ಭಕ್ತಿ ಎಂತಹದ್ದೋ.

ನಾವು ದೈವವಿಲ್ಲವೆನ್ನುವ ನಾಸ್ತಿಕತ್ವವನ್ನು ಹೇಳಲಿಲ್ಲ. ದೇವರಿದ್ದಾನೆಂದೂ, ಆತನು ನಮ್ಮ ಶರೀರದಲ್ಲೇ ಇದ್ದಾನೆಂದೂ, ಆತನನ್ನು ತಿಳಿದುಕೊಳ್ಳುವುದಕ್ಕೆ ಜ್ಞಾನ ಅವಶ್ಯವೆಂದು ಹೇಳುತ್ತಿದ್ದೇವೆ. **ಜ್ಞಾನವನ್ನು ತಿಳಿದವರೇ ದೈವವನ್ನು ತಿಳಿಯಬಲ್ಲರು.** ಜ್ಞಾನ ತಿಳಿಯದಿರುವಾಗ ನಮ್ಮ ಭಕ್ತಿ ದೈವದಕಡೆ ಅಲ್ಲದೆ ಮರದ ಕಡೆ ಕಲ್ಲಿನ ಕಡೆ ಮರಳಿಹೋಗುವುದು. ನಿಜವಾದ ದೈವವನ್ನು ತಿಳಿಸುವುದಕ್ಕೆ ನಮ್ಮ ಹಿರಿಯರು ಎಷ್ಟೋ ಜ್ಞಾನ ಸೂಚನೆಗಳು ಇರುವ ದೇವಾಲಯಗಳನ್ನು ನಿರ್ಮಿಸಿ ತೋರಿಸಿದ್ದಾರೆ. ಆದರೆ ಈದಿನ ಅವುಗಳ ಅರ್ಥವನ್ನು ಬಿಟ್ಟು, ಕುರುಡರಂತೆ ಪೂಜೆಗಳನ್ನು ಮಾಡುತ್ತಾ, ಕೋರಿಕೆಗಳನ್ನು ಕೋರುವುದಕ್ಕೆ ಅನುಗುಣವಾಗಿ ಬದಲಾಯಿಸಿಕೊಂಡಿದ್ದಾರೆ. ಈ ಮರಗಳಿಂದ ವೈದ್ಯವನ್ನು ಗ್ರಹಿಸಲಾರದ ಹಾಗೇ ದೇವಾಲಯಗಳಿಂದ ದೈವತ್ವವನ್ನು ಗ್ರಹಿಸದ ಸ್ಥಿಯೊಳಗೆ ಇದ್ದೇವೆ. ಪ್ರಪಂಚವೆಲ್ಲದಕ್ಕೂ ಒಬ್ಬನೇ ದೇವರೆಂದು ತಿಳಿಸುವ ದೇವಾಲಯ ರಹಸ್ಯಗಳನ್ನು ತಿಳಿದುಕೊಳ್ಳದೆ ಅವುಗಳಲ್ಲಿ ಸಹ ಇವು ವೈಷ್ಣವ ದೇವಾಲಯಗಳು, ಇವು ಶೈವ ದೇವಾಲಯಗಳೆಂದು ಹೆಸರು ಇಟ್ಟು ವರ್ಗಗಳಾಗಿ ಏರ್ಪಡಿಸಿಕೊಂಡಿದ್ದೇವೆ. ಇದು ನಮ್ಮ ಭಾಷೆಯಲ್ಲಿ ಭಕ್ತಿ ಎಂದುಕೊಂಡರೂ ದೇವರ ಭಾವನೆಯಲ್ಲಿ ಭಕ್ತಿ ಅಲ್ಲ.

ಹೆಜ್ಜೆಹೆಜ್ಜೆಗೂ, ಅಣುಅಣುವಿನಲ್ಲೂ ತುಂಬಿ ಕಾಣಿಸದ ಶಕ್ತಿಯಾಗಿರುವ ದೇವರು ಈಗಿರುವ ನಮ್ಮ ಭಕ್ತಿಗೆ ತಿಳಿಯಲಾರನು. ನಮ್ಮ ಶರೀರದಲ್ಲೇ ಇದ್ದು ನಮಗೆ ಚೈತನ್ಯವನ್ನು ಕೊಟ್ಟು ದೈವವನ್ನು ಕಂಡುಕೊಳ್ಳುವುದಕ್ಕೆ ಈದಿನವಿರುವ ಭಕ್ತಿ ಮನುಷ್ಯನಿಗೆ ಉಪಯೋಗಪಡುವುದಿಲ್ಲ. (ಹಾಗೆ ಉದ್ವೇಗಭರಿತವಾಗಿ ಯೋಗಾ ಹೇಳಿದ ಮಾತುಗಳನ್ನು ಕೇಳಿದ ಜನಸಮೂಹದಲ್ಲಿ ಸ್ವಲ್ಪ ಬದಲಾವಣೆ ಬಂದಿತು. ದೇವರೇ ಇಲ್ಲವೆಂದು ನಾಸ್ತಿಕನಾಗಿ ತಿರುಗುತ್ತಿರುವ ಒಬ್ಬ ಗ್ರಾಮಸ್ಥನು ಜೋರಾಗಿ ಚಪ್ಪಾಳೆ ಹೊಡೆದು ಈ ವಿಧವಾಗಿ ಹೇಳಿದ್ದಾನೆ.)

**ನಾಸ್ತಿಕನು :–** ಶಭಾಷ್, ಈ ವಿಧವಾಗಿ ದೇವರಿದ್ದಾನೆಂದರೇ ನಾನು ಸಹ ಒಪ್ಪಿಕೊಳ್ಳುತ್ತೇನೆ. ಈ ವಿಧವಾಗಿ ಅಲ್ಲದೆ ಮೂಢನಂಬಿಕೆಯಿಂದ ಕುರುಡರಂತೆ ಹೇಳುವ ಮಾತುಗಳನ್ನು, ಮಾಡುವ ಭಕ್ತಿಯನ್ನು ನಾನು ಒಪ್ಪಿಕೊಳ್ಳುವುದಿಲ್ಲ.

ಜಾತ್ರೆಯಲ್ಲಿ ರಥಚಕ್ರಗಳಿಗೆ ತೆಂಗಿನಕಾಯಿಗಳು ಹೊಡೆಯಬೇಕೆಂದು ಕೊನೆಗೆ ಅದರ ಕೆಳಗೇ ಬಿದ್ದು ಸತ್ತುಹೋಗುವುದು, ಯಾತ್ರೆಗೆ ಹೋದವರು ದರೋಡೆಗಳಿಗೆ ಗುರಿಯಾಗುವುದನ್ನೂ ನೋಡಿ ದೇವರಿದ್ದರೆ ತನ್ನ ಭಕ್ತರನ್ನೇ ರಕ್ಷಿಸಲಿಲ್ಲವೇ, ಅಂಥವನು ದೇವರು ಹೇಗೆ ಆಗುತ್ತಾನೆಂದು ಅಂದುಕೊಳ್ಳುತ್ತಿದ್ದೆನು. ಈದಿನ ಈತನು ಹೇಳುವ ಮಾತುಗಳಿಂದ ಆ ದೇವರು ನಿಜ ದೇವರುಗಳು ಅಲ್ಲವೆನ್ನುವ ಸತ್ಯವನ್ನು ಕೇಳಿದ್ದೇನೆ. ನಿಜದೇವನೊಬ್ಬನಿದ್ದಾನೆನ್ನುವ ವಿಷಯ ಈದಿನ ನನಗೆ ಅರ್ಥವಾಗಿದೆ. ನಾನೂ ಸಹ ಈತನು ಹೇಳುವ ಪದ್ಧತಿ ಪ್ರಕಾರ ದೇವರಿದ್ದಾನೆಂದು ಒಪ್ಪಿಕೊಳ್ಳುತ್ತಿದ್ದೇನೆ. (ಈ ರೀತಿ ಒಬ್ಬ ನಾಸ್ತಿಕನು ಮಾತನಾಡುವುದರಿಂದ ಆ ಊರಿನ ಹಿರಿಯ ಸಹ ಹೀಗೆ ಹೇಳಿದ್ದಾನೆ.)

**ಊರಿನ ಹಿರಿಯ :–** ಇದೆಲ್ಲಾ ನೋಡಿದ ನಂತರ, ಕೇಳಿದ ನಂತರ ನಾವು ಯಾವುದೋ ತಪ್ಪಾಗಿ ತಿಳಿದಿದ್ದೇವೆಂದು, ನಮಗೆ ತಿಳಿಯದ ರಹಸ್ಯಗಳು ಎಷ್ಟೋ ಇವೆಯೆಂದು ಅರ್ಥವಾಗುತ್ತಿದೆ. ನೀವು ನಮಗೆ ತಿಳಿಯದ ಅಮೂಲ್ಯವಾದ ಹಾವಿನ ವೈದ್ಯವನ್ನು ತಿಳಿಸಿದ್ದೀರ. ಇಲ್ಲಿಯವರೆಗು ನಮಗೆ ತಿಳಿಯದ ದೈವಜ್ಞಾನವನ್ನು ಸಹ ಕೆಲವು ದಿನಗಳು ನೀವು ಇಲ್ಲೇ ಇದ್ದು ತಿಳಿಸಿರೆಂದು ಕೋರುತ್ತಿದ್ದೇವೆ. ನೀವು ನಮ್ಮೊಂದಿಗೆ ಸ್ವಲ್ಪ ಕಾಲವಿದ್ದು ನಿಜವಾದ ಭಕ್ತಿಯನ್ನೂ, ಜ್ಞಾನವನ್ನೂ ತಿಳಿಸಿ ದೇವರ ಮಾರ್ಗದ ಕಡೆ ಮರಳಿಸಬಲ್ಲಿರೆಂದು ಆಶಿಸುತ್ತಿದ್ದೇವೆ.

(ಈ ವಿಧವಾಗಿ ಆ ಗ್ರಾಮಸ್ಥರು ಬದಲಾವಣೆ ಹೊಂದಿದವರಾಗಿ ಅಲ್ಲಿರುವ ನಾಸ್ತಿಕನೊಂದಿಗೆ ಸಹ ಎಲ್ಲರೂ ಗಿರಿಜನರನ್ನು ಕೆಲವು ದಿನಗಳು ಅಲ್ಲೇ ಇರಲು ಹೇಳಿದಾಗ! ಅದಕ್ಕೆ ಗಿರಿಜನರು ಈಗಲ್ಲ. ನಾವು ಈಗ ಒಂದು ಕೆಲಸಕ್ಕೋಸ್ಕರ ಬಂದಿದ್ದೇವೆಂದು, ನಂತರ ಯಾವಾಗಾದರೂ ಬಿಡುವಿದ್ದರೆ ಬರುತ್ತೇವೆಂದು ಹೇಳುತ್ತಿದ್ದರು. ಹೀಗೆ ಗ್ರಾಮಸ್ಥರು, ಗಿರಿಜನರು ಮಾತನಾಡಿಕೊಳ್ಳುತ್ತಿರುವಾಗ ಜಾನ್ ನೂಕಾನನ್ನು ಬೇಟಿಮಾಡಿ ನಡೆದ ವಿಷಯವೆಲ್ಲಾ ತಿಳಿದುಕೊಂಡಿದ್ದಾನೆ. ತಮ್ಮ ನಾಯಕನು ಅದೇ ಕೆಲಸವಾಗಿ ಕಳುಹಿಸಿದರೆ ಬಂದಿದ್ದೇನೆಂದು ಹೇಳಿದ ಜಾನ್ ತಾವು ತಮ್ಮ ನಾಯಕನ ಹತ್ತಿರಕ್ಕೆ ಕೂಡಲೇ ಹೋಗಬೇಕೆಂದು ಹೇಳಿದ್ದಾನೆ. ಆಗ

ಗ್ರಾಮಸ್ಥರು ಮಾತನಾಡುತ್ತಿರುವಾಗ, ಅವರು ಗಮನಿಸದಂತೆ ತಮ್ಮೊಂದಿಗೆ ವೆಂಕೂನನ್ನು ಕರೆದುಕೊಂಡು ಅಲ್ಲಿಂದ ತಪ್ಪಿಸಿಕೊಂಡು ಹೋದರು. ನಂತರ ತಮ್ಮ ನಾಯಕನ ಹತ್ತಿರಕ್ಕೆ ಹೋಗಿ ನಡೆದ ವಿಷಯವೆಲ್ಲಾ ಹೇಳಿದ್ದಾರೆ. ಹಾವನ್ನೂ, ಅದರಲ್ಲಿನ ವಜ್ರಗಳನ್ನೂ ಕಳೆದುಕೊಂಡಿರುವುದಕ್ಕೆ ನಾಯಕ ಮುನೆಪ್ಪ ವೆಂಕೂ, ನೂಕಾ ಮೇಲೆ ಕೋಪಗೊಂಡು ಏನು ಮಾಡಬೇಕೋ ತಿಳಿಯದೆ ಹೀಗೆಂದಿದ್ದಾನೆ.)

**ಮುನೆಪ್ಪ :–** ಹೋದ ವಜ್ರಗಳನ್ನು ಹೇಗೆ ತಂದು ಕೊಡಬಲ್ಲೆವು? ವಜ್ರಗಳನ್ನು ಕೊಡದೇ ಹೋದರೆ ಅವುಗಳ ಖರೀದಿ ಒಟ್ಟು ಹಣ ಕೊಡಬೇಕಾಗಿರುತ್ತದೆ. ಅಷ್ಟು ಹಣ ಬ್ಯಾಂಕುಗಳನ್ನು ದರೋಡೆ ಮಾಡಿದರೂ ಕೊಡಲಾರೆವು. ನಿಮ್ಮನ್ನು ನಂಬಿಕೊಂಡಿರುವುದಕ್ಕೆ ನನ್ನನ್ನು ನಡು ನೀರಲ್ಲಿ ಮುಳುಗಿಸಿದ್ದೀರ. ಏನು ಮಾಡಬೇಕೋ ಅರ್ಥವಾಗಲಿಲ್ಲ. ಈ ವಿಷಯವನ್ನು ಇರುವುದು ಇರುವಂತೆ ಅವರಿಗೆ ಹೇಳಿಕೊಳ್ಳುವುದು ಒಳ್ಳೆಯದು. ಕೊನೆಗೆ ಅವರು ಏನನ್ನುತ್ತಾರೋ ನೋಡಬೇಕು.

**ವೆಂಕು :–** ಈ ವಿಷಯ ಯಾರಿಗೆ ಹೇಳಬೇಕೋ ಹೇಳಿರಿ. ನಾವು ಹೋಗಿ ಅವರಿಗೆ ನಡೆದಿದ್ದು ನಡೆದಂತೆ ತಿಳಿಸುತ್ತೇವೆ.

**ಮುನೆಪ್ಪ :–** ಇದು ಬಹಳ ರಹಸ್ಯವಾದ ವ್ಯವಹಾರ. ದೊಡ್ಡ ಸ್ವಾಮೀಜಿಯಾಗಿ ಹೆಸರಿರುವ ತಪಸ್ವಿಬಾಬಾ ಎನ್ನುವ ಸ್ವಾಮಿಗೆ ಈ ವಿಷಯ ತಿಳಿಯಬೇಕು. ಆತನಿಗೇ ನಾವು ವಜ್ರಗಳನ್ನು ಕೊಡಬೇಕಾಗಿರುವುದು. ವಜ್ರಗಳು ಹೋಗಿವೆಯೆಂದು ಆತನಿಗೆ ತಿಳಿಸಿ ನಂತರ ಆತನು ಏನನ್ನುತ್ತಾರೋ ಆ ವಿಷಯವನ್ನು ತಿಳಿದುಕೊಂಡು ಬರಬೇಕು.

**ವೆಂಕು :–** ನಡೆದ ಸಂಘಟನೆಗೆ ಬಾಧೆಪಟ್ಟರೆ ಹೇಗೆ ಅಣ್ಣಾ! ನಾವು ಈಗಲೇ ಹೊರಟು ಹೋಗಿ ಇರುವುದು ಇದ್ದಂತೆ ಹೇಳಿ, ನಡೆದ ಘಟನೆಗೆ ನಾವು ಹೊಣೆಗಾರರಲ್ಲ ಎಂದು ಹೇಳುತ್ತೇವೆ. ನಾವು ಎಲ್ಲಿಗೆ ಹೋಗಿ ಹೇಳಿ ಬರಬೇಕೋ ನೀನು ಆ ಅಡ್ರಸ್ ಹೇಳು.

(ಅದಕ್ಕೆ ಮುನೆಪ್ಪ ಬೇಸರಗೊಂಡು ಹೀಗೆ ಹೇಳಿದನು)

**ಮುನೆಪ್ಪ :–** ನೀವು ಅವಸರಪಟ್ಟು ಮುಂದೆ ಹಿಂದೆ ಆಲೋಚಿಸದಂತೆ ಕೆಲಸ ಮಾಡಿ ಕಷ್ಟಗಳು ತಂದುಕೊಳ್ಳುತ್ತೀರ. ಅಡ್ರಸ್ ತಿಳಿದುಕೊಂಡು ಹೋದಷ್ಟು ಮಾತ್ರಕ್ಕೆ ಅಷ್ಟು ಸುಲಭವಾಗಿ ನಾನು ಹೇಳಿದ ಕೆಲಸ ನೆರವೇರುವುದಿಲ್ಲ. ತಪಸ್ವಿ ಬಾಬಾ ಆಶ್ರಮದಲ್ಲಿ ನಿತ್ಯ ಸಾವಿರ ಜನ ಭಕ್ತರಿರುತ್ತಾರೆ. ತಪಸ್ವಿ ಬಾಬಾರೊಂದಿಗೆ ಮಾತನಾಡುವುದಕ್ಕೆ ಯಾರಿಗೂ ಅವಕಾಶವಿರುವುದಿಲ್ಲ. ಆತನು ಯಾರ ಪ್ರವೇಶವೂ ಇಲ್ಲದ ರಹಸ್ಯ ಮಂದಿರದಲ್ಲಿ ಇರುತ್ತಾನೆ. ಯಾರೂ ಆ ಮಂದಿರದೊಳಗೆ ಹೋಗುವುದಿಲ್ಲ. ಆತನು ಕೆಲವು ಸಮಯಗಳಲ್ಲಿ ಮಾತ್ರವೇ ಹೊರಗೆ ಬರುತ್ತಾನೆ. ಆಗಲೂ ಸಹ ಅಲ್ಲಿ ಸೇರಿದ ಭಕ್ತರಿಗೆ ದರ್ಶನಕೊಡುವುದಕ್ಕೇ ಬರುತ್ತಾನೆ. ಪುನಃ ಆತನು ತನ್ನ ಮಂದಿರದೊಳಗೆ ಹೋಗುತ್ತಾನೆ. ಆದ್ದರಿಂದ ವಜ್ರಗಳ ವಿಷಯವನ್ನು ಅಷ್ಟು ಸುಲಭವಾಗಿ ನೀವು ಆತನಿಗೆ ಹೇಳಲಾರೆರು.

**ವೆಂಕು :–** ಮತ್ತೆ ಆತನಿಗೆ ನಾವು ಹೇಗೆ ಈ ವಿಷಯವನ್ನು ತಿಳಿಸಬಲ್ಲೆವು. ಅದಕ್ಕೆ ನೀನೇ ಉಪಾಯವನ್ನು ಹೇಳು.

**ಮುನೆಪ್ಪ :–** ಇಂತಹ ರಹಸ್ಯವಾದ ವಿಷಯಗಳನ್ನು ತಿಳಿಸುವುದಕ್ಕೆ ಇತರರಿಗ್ಯಾರಿಗೂ ಅರ್ಥವಾಗದಂತಹ ಸುಲಭವಾದ ವಿಧಾನವೊಂದು ಇದೆ. ಅದು ಏನೆಂದರೆ! ತಪಸ್ವಿ ಬಾಬಾರವರು ಭಕ್ತರಿಗೆ ದರ್ಶನಕೊಡುವುದಕ್ಕೆ ಹೊರೆಗ ಬಂದಾಗ ಭಕ್ತರೆಲ್ಲರೂ ನಿಶ್ಶಬ್ದವಾಗಿ ಸಾಲಾಗಿ ಕುಳಿತುಕೊಂಡಿರುತ್ತಾರೆ. ಕೆಲವರು ಭಕ್ತರು ಅವರವರ ಕಷ್ಟಗಳನ್ನೂ, ಕೋರಿಕೆಗಳನ್ನು ಉತ್ತರಗಳಲ್ಲಿ ಬರೆದುಕೊಂಡು ಬಾಬಾರವರು ಅವರಿಗೆ ಹತ್ತಿರವಾಗಿ ಹೋದಾಗ ತಮ್ಮ ಪತ್ರಗಳನ್ನು ಬಾಬಾರವರಿಗೆ ಕೊಡುತ್ತಿರುತ್ತಾರೆ. ಅಂತಹ ಸಮಯದಲ್ಲೇ ನೀವು ಈ ವಿಷಯವನ್ನು ಆತನಿಗೆ ತಿಳಿಸಬೇಕು. ಗೋಧಿಬಣ್ಣದ ಪೇಪರ್ ಮೇಲೆ ವಿಷಯವೆಲ್ಲಾ ಬರೆದು ನಾಲ್ಕು ಮಡತೆಗಳಾಗಿ ಮಡಚಿ ಕೊಡಿ. ಗೋಧಿ ಬಣ್ಣದ ಪೇಪರು ತನಗೆ ಸಂಬಂಧಿಸಿರುವುದೆಂದು ಆತನಿಗೆ ತಿಳಿದಿದೆ ಆದ್ದರಿಂದ ತಪ್ಪದೆ ತೆಗೆದುಕೊಳ್ಳುತ್ತಾನೆ. ಹಾಗೆ ಮೊದಲ ದಿನ ಸಾಧ್ಯವಾಗದಿದ್ದರೆ ಎರಡನೆ ದಿನವಾದರೂ ಕೊಡಿ. ತಪಸ್ವಿಬಾಬಾರವರು ಎಲ್ಲರ ಕಾಗದಗಳ ಜೊತೆಗೆ ನಿಮ್ಮ ಕಾಗದವನ್ನು ಸಹ ತೆಗೆದುಕೊಂಡು ಹೋಗಿ, ಆ

ಕಾಗದವನ್ನು ಯಾರೂ ನೋಡದಂತೆ ತನ್ನ ಮಂದಿರದಲ್ಲಿ ತಾನೊಬ್ಬನು ಮಾತ್ರ ಓದಿಕೊಳ್ಳುತ್ತಾನೆ. ನಂತರ ಆತನು ನಮಗೆ ತಿಳಿಸುವ ವಿಷಯವನ್ನು ಸಹ ಯಾರಿಗೂ ತಿಳಿಯದಂತೆ ತಿಳಿಸುವನು. ಆತನಿಗೆ ಚೀಟಿಗಳು ಕೊಟ್ಟಿರುವ ಭಕ್ತರಲ್ಲಿ ಒಬ್ಬರನ್ನೋ ಅಥವಾ ಇಬ್ಬರನ್ನೋ ಕರೆದು ಮಾತನಾಡುವನು. ಅದೂ ಸಹ ಯಾರೂ ಇಲ್ಲದ ಪ್ರತ್ಯೇಕ ಕೊಠಡಿಯಲ್ಲಿ, ಸಮಸ್ಯೆಗಳು ಬರೆದುಕೊಂಡವರಿಗೆ ತನ್ನ ಆಶೀರ್ವಾದ ಕೊಡುವುದೊ, ಅಥವಾ ಕೋರಿಕೆಗಳು ನೆರವೇರುವಂತೆ ಭರವಸೆ ಕೊಟ್ಟು ಕಳುಹಿಸುವುದೋ, ಅಥವಾ ಅವರ ಕಷ್ಟಗಳನ್ನು ಕೇಳಿ ಸಮಾಧಾನ ಮಾಡಿ ಕಳುಹಿಸುವುದೋ ನಡೆಯುತ್ತಿರುತ್ತದೆ. ಆ ವಿಧವಾಗಿಯೇ ನಿನಗೂ ಆತನ ಕರೆ ಬರುತ್ತದೆ. ಆಗ ನಿನಗೆ ತಪಸ್ವಿ ಬಾಬಾರವರೊಂದಿಗೆ ಏಕಾಂತವಾಗಿ ಬೇಟಿಯಾಗಿ ಮಾತನಾಡುವುದಕ್ಕೆ ಅವಕಾಶ ಸಿಗುತ್ತದೆ. ಆಗ ನೀನು ಒಬ್ಬನೇ ಇರುತ್ತೀಯ. ಆದ್ದರಿಂದ ಆತನು ತನ್ನ ವಿವರವನ್ನು ತಿಳಿಸಿ ಕಳುಹಿಸುವನು. ಆತನು ತನ್ನ ಸಮಾಚಾರವನ್ನು ಯಾವ ಕಾಗದದ ಮೇಲೆ ಬರೆದು ಕೊಡುವುದಿಲ್ಲ. ಬೇಟಿಯಾದಾಗ ಮಾತುಗಳ ರೂಪದಲ್ಲೇ ಹೇಳುವನು. ಆದ್ದರಿಂದ ನೀನು ಜಾಗ್ರತೆಯಿಂದ ಕೇಳಿ ಬರಬೇಕು. ಈಗ ನಾವೆಲ್ಲಾ ಆತನ ಕೃಪೆಯ ಮೇಲೆ ಆಧಾರಪಟ್ಟಿದ್ದೇವೆ. ನಮ್ಮನ್ನು ಶಿಕ್ಷಿಸಿದರೂ ರಕ್ಷಿಸಿದರೂ ಆತನ ಇಷ್ಟ.

(ದೀರ್ಘವಾಗಿ ವಿಷಯವೆಲ್ಲಾ ಕೇಳಿದ ವೆಂಕೂ ತನ್ನ ಅಣ್ಣನಾದ ತಾಳೆಮರ ಮುನೆಪ್ಪ ಹತ್ತಿರ ತಪಸ್ವಿಬಾಬಾರವರ ಅಡ್ರಸ್ ಎಲ್ಲಾ ತೆಗೆದುಕೊಂಡು ತಪಸ್ವಿ ಬಾಬಾರವರ ಆಶ್ರಮಕ್ಕೆ ಹೊರಟು ಹೋದನು.)

*********************************

(ಗ್ರಾಮಸ್ಥರ ಕೋರಿಕೆಯನ್ನು ತಿರಸ್ಕರಿಸಿದ ಯೋಗ ಮೊದಲಾದ ಗಿರಿಜನರು ಹೊರಟುಹೋಗಿ ರಾಘವನನ್ನು ಹುಡುಕುತ್ತಾ ಹೋಗಿದ್ದಾರೆ. ಆದರೆ ಪ್ರತಿಯೊಂದು ಕಡೆ ಅವರಿಗೆ ಯಾವುದೋ ಒಂದು ಆತಂಕ ಏರ್ಪಡುತ್ತಿರುವುದರಿಂದ ರಾಘವನನ್ನು ಬೇಗ ಕಂಡುಕೊಳ್ಳಲಾರದೆ ಹೋಗಿದ್ದಾರೆ. ಅವರು ಒಂದು ಗ್ರಾಮವನ್ನು ದಾಟಿ ಹೋಗುತ್ತಿರುವಾಗ ಆ ಸಮಯಕ್ಕೇ ಒಂದು ಚಿರತೆ ಕಾಡಿನಿಂದ ದಾರಿತಪ್ಪಿ ಆ

ಗ್ರಾಮದೊಳಕ್ಕೆ ಪ್ರವೇಶಿಸಿ ವೀರ ವಿಹಾರ ಮಾಡತೊಡಗಿತು. ಒಂದು ಮನೆಯೊಳಗೆ ನಿಗ್ಗಿ ಪಶುಗಳನ್ನು ಗಾಯಪಡಿಸುವುದಕ್ಕೆ ಪ್ರಾರಂಭಿಸಿತು. ಗ್ರಾಮಸ್ಥರು ಅದನ್ನು ಹೆದರಿಸಿ ಗ್ರಾಮದಿಂದ ಓಡಿಸಬೇಕೆಂದು ಪ್ರಯತ್ನಿಸಿದಾಗ, ಅವರ ಮೇಲೆ ದಾಳಿ ಮಾಡಿ ಗಾಯಪಡಿಸಲು ಪ್ರಾರಂಭಿಸಿತು. ಕೆಲವರು ಗ್ರಾಮಸ್ಥರು ಊರಿನ ಹೊರಗೆ ಭಯದಿಂದ ಓಡತೊಡಗಿದರು. ಕೋಪಗೊಂಡ ಚಿರತೆ ಗ್ರಾಮದಲ್ಲಿ ಅಲ್ಲೋಲಕಲ್ಲೋಲ ಹುಟ್ಟಿಸಿತು. ಆ ಗೊಂದಲವೆಲ್ಲಾ ಗಿರಿಜನರು ನೋಡುತ್ತಿದ್ದಂತೆ ನಡೆಯುತ್ತಿತ್ತು. ಅಡವಿಯಲ್ಲಿ ನಿವಾಸಿಸುವುದಕ್ಕೆ ಅಭ್ಯಾಸವಾದ ಗಿರಿಜನರು ಚಿರತೆಯನ್ನು ಹೆದರಿಸಿ ಗ್ರಾಮಸ್ಥರನ್ನು ಕಾಪಾಡಬೇಕೆಂದುಕೊಂಡರು. ಅಷ್ಟರಲ್ಲಿ ಚಿರತೆ ಗಿರಿಜನರ ಮೇಲೆಗರಲು ಬಂದಿದೆ. ಚಿರತೆ ಬರುವುದನ್ನು ಗಮನಿಸಿದ ಗಿರಿಜನರು ಪಕ್ಕದಲ್ಲೇ ಇದ್ದ ಒಂದು ಹಗ್ಗದ ಮಂಚವನ್ನು ಹಿಡಿದುಕೊಂಡು, ಚಿರತೆ ಅವರ ಮೇಲೆಗೆ ಜಿಗಿದ ಕೂಡಲೇ ಮಂಚ ಅಡ್ಡ ಇಟ್ಟು ಮಂಚದಿಂದಲೇ ಭೂಮಿಗೆ ಹುಲಿಯನ್ನು ಅದುಮಿಟ್ಟರು. ಹಗ್ಗದ ಮಂಚದ ಕೆಳಗೆ ಸಿಲುಕಿಕೊಂಡ ಚಿರತೆ ತಪ್ಪಿಸಿಕೊಳ್ಳಬೇಕೆಂದು ಪ್ರಯತ್ನಿಸುತ್ತಿದ್ದಾಗ ಅದರ ಕಾಲುಗಳು ಹಗ್ಗಗಳಲ್ಲಿ ಸಿಲುಕಿಕೊಂಡಿವೆ. ಚಿರತೆಯನ್ನು ಎಲ್ಲೂ ಅಲುಗಾಡದಂತೆ ನಾಲ್ವರು ಗಿರಿಜನರು ಹಿಡಿದುಕೊಂಡಾಗ, ಉಳಿದ ನಾಲ್ವರು ಹುಲಿಕಾಲನ್ನು ಕಟ್ಟಿಹಾಕಿದ್ದಾರೆ. ಸುಲಭವಾಗಿ ಚಿರತೆಯನ್ನು ಬಂಧಿಸಿದ ಗಿರಿಜನರನ್ನು ನೋಡಿ ಗ್ರಾಮಸ್ಥರು ಧೈರ್ಯವಾಗಿ ಅಲ್ಲಿಗೆ ಸೇರಿದರು. ಗಿರಿಜನರನ್ನು ಎಲ್ಲರೂ ಹೊಗಳುತ್ತಾ ತಮ್ಮನ್ನು ಗಾಯಪಡಿಸಿದ ಚಿರತೆಯನ್ನು ಬಿಡಬಾರದೆಂದಿದ್ದಾರೆ. ಮಂಚದ ಕೆಳಗೆ ಸಿಲುಕಿಕೊಂಡು ಕಟ್ಟಿಹಾಕಲಾಗಿರುವ ಚಿರತೆಯನ್ನು ತಲಾ ಒಂದೊಂದು ಏಟು ಹಾಕಿದರು. ಆ ಏಟಿಗೆ ಚಿರತೆ ಸತ್ತುಹೋಗಿದೆ.

ಅಷ್ಟರಲ್ಲಿ ಅರಣ್ಯ ಅಧಿಕಾರಿಗಳು ಅಲ್ಲಿಗೆ ಸೇರಿ ಚಿರತೆ ಸತ್ತುಹೋಗಿರುವುದನ್ನು ನೋಡಿ ಇದನ್ನು ಯಾರು ಸಾಯಿಸಿದ್ದಾರೆಂದು ಕೇಳಿದರು. ಚಿರತೆಯನ್ನು ಸಾಯಿಸುವುದು ಕಾನೂನಿನ ದೃಷ್ಟಿಯಲ್ಲಿ ಅಪರಾಧವೆಂದು ತಿಳಿದ ಗ್ರಾಮಸ್ಥರು ನಾವಲ್ಲ ಎಂದು ತಪ್ಪಿಸಿಕೊಂಡರು. ಚಿರತೆಯನ್ನು ನಾವೇ ಹಿಡಿದುಕೊಂಡಿದ್ದೇವೆಂದು ಗಿರಿಜನರು ಹೇಳಿದಾಗ, ಚಿರತೆಯನ್ನು ಸಹ ಅವರೇ ಸಾಯಿಸಿರುತ್ತಾರೆಂದು

ತಿಳಿದುಕೊಂಡ ಅರಣ್ಯ ಅಧಿಕಾರಿಗಳು ಗಿರಿಜನರನ್ನು ಹಿಡಿದುಕೊಂಡು ಹೋದರು. ತಾವು ಒಳ್ಳೆಯದನ್ನು ಮಾಡಿದರೂ ಕೆಟ್ಟದಾಗಿ ತಿಳಿಯುವ ನಾಗರಿಕ ಸಮಾಜವನ್ನು ನೋಡಿ ಗಿರಿಜನರಿಗೆ ಬಹಳ ಬೇಸರವಾಯಿತು. ಪುನಃ ಬೇರೊಂದು ಕಡೆ ಹಾಗೆ ಸಿಲುಕಿಕೊಂಡು ರಾಘವನನ್ನು ಹುಡುಕಲಾರದೆ ಹೋಗಿರುವುದಕ್ಕೆ ಚಿಂತಿಸುತ್ತಾ ಅರಣ್ಯ ಅಧಿಕಾರಿಗಳ ಕೈಯಿಂದ ತಪ್ಪಿಸಿಕೊಳ್ಳುವ ಉಪಾಯವನ್ನು ಆಲೋಚಿಸತೊಡಗಿದರು.)

**********************************

(ರಾಜಯೋಗಾನಂದ ಸ್ವಾಮಿಯವರ ಹತ್ತಿರ ಅನೇಕ ಮಹಿಮೆಗಳನ್ನೂ, ಅವುಗಳ ಪದ್ಧತಿಗಳನ್ನೂ ತಿಳಿದುಕೊಂಡ ರಾಘವ ದೈವಜ್ಞಾನಾಸಕ್ತನಾಗಿ, ದೈವವನ್ನು ಕುರಿತು ತಿಳಿದುಕೊಳ್ಳುವುದಕ್ಕೋಸ್ಕರ ತನ್ನಲ್ಲಿರುವ ಪ್ರಶ್ನೆಗಳನ್ನು ಹೀಗೆ ಕೇಳಲು ಪ್ರಾರಂಭಿಸಿದನು.)

**ರಾಘವ :–** ಸ್ವಾಮೀ! ಈ ಜಗತ್ತೆಲ್ಲದಕ್ಕೂ ಯಾರು ಅಧಿಪತಿ?

**ರಾಜಯೋಗಾ :–** ಸರ್ವಾಧಿಕಾರಿ, ಸರ್ವ ಸೃಷ್ಠಿಕರ್ತ ಆದ ಪರಮಾತ್ಮ ಒಬ್ಬನೇ ಈ ಜಗತ್ತಿಗೆ ಅಧಿಪತಿ. ಆತನನ್ನು ಕ್ರೈಸ್ತರು ಪರಲೋಕ ತಂದೆಯೆಂದು, ಮುಸ್ಲಿಮ್‌ರು ಅಲ್ಲಹ್ ಎಂದೂ, ಇಂದೂಗಳು ಪರಮಾತ್ಮ ಎಂದು ಕರೆಯುತ್ತಿದ್ದಾರೆ.

**ರಾಘವ :–** ಆದರೆ ಪರಮಾತ್ಮ ಎನ್ನುವ ದೇವರು ಎಲ್ಲರಿಗೂ ಸಮಾನನೇ ಅಲ್ಲವೆ!

**ರಾಜಯೋಗಾ :–** ಹೌದು ಆತನು ನಮ್ಮೆಲ್ಲರಿಗೂ, ಸರ್ವ ಜೀವರಾಶಿಗಳಿಗೂ ಸಮಾನನು.

**ರಾಘವ :–** ನಮಗೆಲ್ಲರಿಗೂ ಆತನು ಸಮಾನನಾಗಿರುವಾಗ, ಆತನಿಗೂ ಸಹ ಎಲ್ಲರೂ ಸಮಾನರೆ ಅಲ್ಲವೆ!

**ರಾಜಯೋಗಾ :–** ಸರ್ವಜೀವರಾಶಿಗಳು ಆತನಿಗೆ ಸಮಾನವೇ. ಯಾವ ಜೀವರಾಶಿ ಬಗ್ಗೆ ಆತನಿಗೆ ಭೇಧವಿಲ್ಲ.

**ರಾಘವ :–** ಸ್ವಾಮೀ! ಇಲ್ಲೇ ನನಗೆ ದೊಡ್ಡ ಸಂಶಯವಿದೆ.

**ರಾಜಯೋಗಾ :–** ಏನು ನಿನ್ನ ಅನುಮಾನ.

**ರಾಘವ :–** ಭೂಮಿ ಮೇಲೆ ಮನುಷ್ಯರಲ್ಲಿ ಕೆಲವರು ಧನಿಕರಾಗಿ, ಕೆಲವರು ಬಡವರಾಗಿ, ಕೆಲವರು ಮಧ್ಯಮವರ್ಗದವರಾಗಿ ಜೀವಿಸುತ್ತಿದ್ದಾರೆ. ಸರ್ವರನ್ನು ಸೃಷ್ಠಿಸಿದ ದೇವರು ಎಲ್ಲರಿಗೂ ಸಮಾನವಾದರೆ, ಎಲ್ಲರನ್ನೂ ಸಮಾನವಾಗಿ ಹುಟ್ಟಿಸಬೇಕು. ಆದರೆ ಕೆಲವರು ಬಡವರಾಗಿ ಕಷ್ಟಗಳು ಅನುಭವಿಸುವುದೂ, ಕೆಲವರು ಧನವಂತರಾಗಿ ಸುಖಗಳನ್ನು ಅನುಭವಿಸುವುದರಿಂದ ದೇವರಿಗೆ ಇವರು ಸಮಾನವಲ್ಲವೆಂದು ಅರ್ಥವಾಗುತ್ತಿದೆ. ದೇವರಿಗೆ ಎಲ್ಲರೂ ಸಮಾನವಾದರೆ ಎಲ್ಲರನ್ನೂ ಒಂದೇ ವಿಧವಾಗಿ ಹುಟ್ಟಿಸಬೇಕಲ್ಲವೆ!

**ರಾಜಯೋಗಾ :–** ಮನುಷ್ಯರ ಹುಟ್ಟುವಿಕೆಗಳೂ, ಹಾಗೇ ಅವರು ಅನುಭವಿಸುವ ಕಷ್ಟ ಸುಖಗಳೂ ದೇವರು ಮಾಡುವವಲ್ಲ, ದೇವರು ಕೊಡುವವಲ್ಲ. ದೇವರು ಮನುಷ್ಯರನ್ನು ಸೃಷ್ಠಿ ಆದಿಯಲ್ಲಿ ಸೃಷ್ಠಿಸಿದ ಮಾತು ವಾಸ್ತವವೇ. ಸೃಷ್ಠಿ ನಡೆದ ನಂತರ ದೇವರು ಕೆಲಸ ಮಾಡುವುದಿಲ್ಲ. ಅಷ್ಟೇ ಅಲ್ಲ ದೇವರಿಗೆ ರೂಪವೂ ಇಲ್ಲ, ಹೆಸರೂ ಇಲ್ಲ. ಆದ್ದರಿಂದ ದೇವರನ್ನು ರೂಪ, ನಾಮ, ಕ್ರಿಯಾರಹಿತನು ಎಂದು ಕರೆಯುತ್ತಾರೆ. ದೇವರು ಎಲ್ಲರಿಗೂ ಸಮಾನನೇ ಆತನು ಯಾರಿಗೂ ಮಿತ್ರನೂ ಅಲ್ಲ, ಶತ್ರುವೂ ಅಲ್ಲ. ನಾವೇ ಆತನಿಗೆ ಸಮಾನವಾಗಿ ಇಲ್ಲ. ಒಬ್ಬ ಮನುಷ್ಯ ದೇವರನ್ನು ಹೊಗಳುತ್ತಾ ಇದ್ದರೇ, ಮತ್ತೊಬ್ಬ ಮನುಷ್ಯ ದೇವರನ್ನು ದೂಷಿಸುತ್ತಾ ಇರುತ್ತಾನೆ. ಇನ್ನೊಬ್ಬನೇನೋ ದೇವರೇ ಇಲ್ಲ ಎಂದು ಹೇಳುತ್ತಿರುತ್ತಾನೆ. ಇನ್ನು ನಾವು ಅನುಭವಿಸುವ ಕಷ್ಟಸುಖಗಳು ದೇವರು ವಿಧಿಸುವವಲ್ಲ. ಅವೆಲ್ಲವುಗಳನ್ನು ಪ್ರಕೃತಿಯೇ ನಾವು ಸ್ವತಃವಾಗಿ ಮಾಡಿಕೊಂಡ ಕರ್ಮಗಳನ್ನನುಸರಿಸಿ ವಿಧಿಸುತ್ತಿದೆ. ಜೀವರಾಶಿಗಳನ್ನು ಹುಟ್ಟಿಸುವುದು, ಸಾಯಿಸುವುದು ಅನೇಕ ವಿಧಗಳಾಗಿ ಬದುಕಿಸುವುದನ್ನು ಪ್ರಕೃತಿಯೇ ಮಾಡುತ್ತಿದೆ. ದೇವರು ಏನೂ ಮಾಡಲಿಲ್ಲ.

**ರಾಘವ :–** ಹಾಗಾದರೆ ನಾವು ಪ್ರಕೃತಿ ಅಧೀನದಲ್ಲಿ ಇದ್ದೇವಾ? ಆದರೆ ಸರ್ವಜೀವರಾಶಿಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡ ಪ್ರಕೃತಿ ಯಾರ ಅಧೀನದಲ್ಲಿ ಇದೆ?

**ರಾಜಯೋಗಾ :–** ಪರಮಾತ್ಮ ಅಧೀನದಲ್ಲಿ ಪ್ರಕೃತಿ ಇದೆ. ಪ್ರಕೃತಿ ಅಧೀನದಲ್ಲಿ ಸರ್ವಜೀವರಾಶಿಗಳ ಮನುಗಡೆ ಇದೆ. ಆದ್ದರಿಂದ ಪ್ರತಿ ಜೀವರಾಶಿ, ಪ್ರತಿ ಮನುಷ್ಯ ಪ್ರಕೃತಿ ಕೈಯಲ್ಲಿ ಅಸ್ವತಂತ್ರರಾಗಿ ಕೀಲು ಗೊಂಬೆಗಳಂತೆ ಪ್ರಕೃತಿ ಆಡಿಸಿದಂತೆ ಆಡುತ್ತಿದ್ದೇವೆ.

**ರಾಘವ :–** ಪ್ರಕೃತಿ ನಮ್ಮನ್ನು ಹೇಗೆ ಆಡಿಸುತ್ತಿದೆ?

**ರಾಜಯೋಗಾ :–** ಪ್ರಕೃತಿ ಗುಣಗಳ ರೂಪದಲ್ಲಿ ಪ್ರತಿ ಮನುಷ್ಯನ ತಲೆಯಲ್ಲೂ ಇದೆ. ಪ್ರಕೃತಿ ಜನಿತಗಳಾದ ಗುಣಗಳಿಂದ ಮನುಷ್ಯ ಆಡಿಸಲ್ಪಡುತ್ತಿದ್ದಾನೆ. ಗುಣಗಳನ್ನೇ ಮಾಯೆ ಎಂದು ಸಹ ಕರೆಯುತ್ತಿದ್ದೇವೆ. ಪ್ರಕೃತಿವೊಂದರ ಮಾಯೆಯಿಂದ ಪ್ರತಿ ಮನುಷ್ಯ ಕೆಲಸಗಳು ಮಾಡಬೇಕಾಗಿಬಂದಿದೆ. ಕಷ್ಟಸುಖಗಳನ್ನು ಅನುಭವಿಸಬೇಕಾಗಿ ಬಂದಿದೆ. ಮನುಷ್ಯ ಸಂಪಾದಿಸಿಕೊಂಡ ಪಾಪಪುಣ್ಯಗಳನ್ನನುಸರಿಸಿ ಮಾಯೆ ಕದಲಿಸಿ ಕಷ್ಟಸುಖಗಳನ್ನು ಅನುಭವಿಸುವಂತೆ ಮಾಡುತ್ತಿದೆ. ಪಾಪ ಪುಣ್ಯಗಳನ್ನು ಕರ್ಮ ಎನ್ನುತ್ತೇವೆ. ಕರ್ಮ ಮಾಯೆಯ ಅಧೀನದಲ್ಲಿ, ಮಾಯೆ ಪರಮಾತ್ಮನ ಅಧೀನದಲ್ಲಿ ಇದೆಯೆಂದು ತಿಳಿಯುತ್ತಿದೆ. ಆದ್ದರಿಂದ ಎಲ್ಲದಕ್ಕೂ ಮೂಲಕರ್ತ ಕೊನೆಗೆ ಪರಮಾತ್ಮನೇ ಎಂದು ಹೇಳಬಹುದು.

**ರಾಘವ :–** ಪ್ರಕೃತಿ ಅಧೀನದಲ್ಲಿಂದ ತಪ್ಪಿಸಿಕೊಂಡು ನೇರವಾಗಿ ದೇವರನ್ನು ಸೇರಬೇಕೆಂದುಕೊಂಡರೆ ಏನು ಮಾಡಬೇಕು?

**ರಾಜಯೋಗಾ :–** ಗುಣಗಳು ಎನ್ನುವ ಮಾಯೆಯಿಂದ ತಪ್ಪಿಸಿಕೊಳ್ಳಬೇಕು. ಮಾಯೆ ತನ್ನಿಂದ ಯಾರನ್ನೂ ತಪ್ಪಿಸಿಕೊಳ್ಳಲು ಬಿಡುವುದಿಲ್ಲ. ಆದ್ದರಿಂದ ಮಾಯೆಯನ್ನು ಜಯಿಸಬೇಕು. ಮಾಯೆಯನ್ನು ಜಯಿಸುವುದು ದುಸ್ಸಾಧ್ಯ. ದೇವರನ್ನು ಆಶ್ರಯಿಸಿದವನು ಮಾತ್ರವೇ ಮಾಯೆಯನ್ನು ಜಯಿಸಬಲ್ಲನು. ದೇವರನ್ನು ಆಶ್ರಯಿಸುವುದಕ್ಕೆ ದೇವರ ಜ್ಞಾನವನ್ನು ಪೂರ್ತಿಯಾಗಿ ತಿಳಿದಿರಬೇಕು. ಜ್ಞಾನವನ್ನು ಸಂಪೂರ್ಣವಾಗಿ ತಿಳಿದಾಗಲೇ ಮಾಯೆಯನ್ನು ಜಯಿಸಿ ದೇವರನ್ನು ಸೇರಬಹುದು.

**ರಾಘವ :–** ದೇವರ ಜ್ಞಾನವನ್ನು ತಿಳಿದರೆ ಮಾಯೆಯನ್ನು ಹೇಗೆ ಜಯಿಸಬಹುದು. ಜ್ಞಾನವನ್ನು ತಿಳಿದವರೆಲ್ಲರೂ ಮಾಯೆಯನ್ನು ಜಯಿಸಿದ್ದಾರಾ?

**ರಾಜಯೋಗಾ :–** ದೇವರ ಜ್ಞಾನವನ್ನು ತಿಳಿದವರು ಮಾಯೆಯನ್ನು ದಾಟಬಹುದು. ಆದರೆ ಜ್ಞಾನಿಗಳೆನ್ನುವವರು ಎಲ್ಲರೂ ಮಾಯೆಯನ್ನು ಜಯಿಸಲಾರದೆ ಹೋಗುತ್ತಿದ್ದಾರೆ. ಮಾಯೆಯನ್ನು ಜಯಿಸಲಾರದೆ ಹೋಗುತ್ತಿದ್ದಾರೆಂದರೆ, ಅವರು ತಿಳಿದುಕೊಂಡಿರುವುದು ದೇವರ ಜ್ಞಾನವಲ್ಲವೆಂದು ತಿಳಿಯಬಹುದು. ತನ್ನನ್ನು ಜಯಿಸದಂತೆ ಇರುವುದಕ್ಕೆ, ತಾನು ಯಾರ ಕೈಯಲ್ಲಿ ಸೋತುಹೋಗದಂತೆ ಇರುವುದಕ್ಕೆ ಮಾಯೆ ಸ್ವತಃವಾಗಿ ತನ್ನ ಜ್ಞಾನವನ್ನು ಮನುಷ್ಯನಿಗೆ ಕಲಿಸಿ, ಅದು ದೇವರ ಜ್ಞಾನವೇ ಎಂದು ನಂಬಿಸುತ್ತದೆ. ಮನುಷ್ಯ ಮಾಯೆ ಕೈಯಲ್ಲಿ ಸಿಲುಕಿ, ಮಾಯೆ ಜ್ಞಾನವನ್ನೇ ತಿಳಿದುಕೊಂಡು ತನ್ನದು ದೇವರ ಜ್ಞಾನವೆಂದುಕೊಳ್ಳುವುದರಿಂದ, ಕೊನೆಗೆ ಅದು ದೇವರ ಜ್ಞಾನ ಅಲ್ಲದಿರುವುದರಿಂದ, ಮಾಯೆಯನ್ನು ಜ್ಞಾನಿಗಳೆಲ್ಲರೂ ಜಯಿಸಲಾರದೆ ಹೋಗುತ್ತಿದ್ದಾರೆ. ನಿಜವಾದ ದೇವರ ಜ್ಞಾನ ಯಾವುದೋ, ದೇವರ ಜ್ಞಾನದಂತೆ ಇರುವ ಮಾಯೆ ಜ್ಞಾನ ಯಾವುದೋ ತಿಳಿಯದ ಮನುಷ್ಯರು ಬಹಳ ಜನ ಮಾಯೆ ಜ್ಞಾನವನ್ನೇ ಆಶ್ರಯಿಸಿ ತಪ್ಪಾಗಿ ತಿಳಿದಿರುವುದರಿಂದ ಮಾಯೆ ಅವರೆಲ್ಲರನ್ನೂ ತನ್ನ ಪಕ್ಷದಲ್ಲೇ ಇಟ್ಟುಕೊಂಡು ದೇವರನ್ನು ತಿಳಿಯದಂತೆ ಮಾಡಿದೆ. ಅಷ್ಟೇ ಅಲ್ಲದೆ ಅಂತಹವರನ್ನು ಬಹಳ ಜನರನ್ನು ಗುರುಗಳಾಗಿ ಬದಲಾಯಿಸುವು ದರಿಂದ ಅವರನ್ನು ಆಶ್ರಯಿಸಿ ಅವರು ಹೇಳುವ ಜ್ಞಾನವನ್ನು ಅನುಸರಿಸುವವರು ಸಹ ದೇವರನ್ನು ತಿಳಿಯಲಾರದೆ ಹೋಗಿದ್ದಾರೆ.

ನಿಜವಾದ ದೇವರ ಜ್ಞಾನವನ್ನು ತಿಳಿದವರು ಬಹಳ ಅಪರೂಪವಾಗಿ ಇರುತ್ತಾರೆ. ಅಂತಹವರು ದೇವರನ್ನು ತಿಳಿಯುವುದಕ್ಕೆ ಧರ್ಮಬದ್ಧವಾದ ಮಾರ್ಗಗಳು ಎರಡು ಇವೆಯೆಂದು ತಿಳಿದು, ಅವುಗಳಲ್ಲಿ ಯಾವುದೋ ಒಂದನ್ನು ಅನುಸರಿಸಿ, ಕೊನೆಗೆ ಮಾಯೆಯನ್ನು ಜಯಿಸಿ ದೈವವನ್ನು ಸೇರುತ್ತಿದ್ದಾರೆ. ದೇವರು ಭಗವಂತನ ರೂಪದಲ್ಲಿ ಬಂದು ತನ್ನನ್ನು ಸೇರುವುದಕ್ಕೆ ಹೇಳಿದ ಮಾರ್ಗಗಳು ಧರ್ಮವಾಗಿರುವವು ಎರಡೇ ಇವೆ. ಅವುಗಳೇ ಒಂದು ಬ್ರಹ್ಮಯೋಗ, ಎರಡನೆಯದು ಕರ್ಮಯೋಗ. ಬ್ರಹ್ಮಯೋಗ ಮಾರ್ಗದಲ್ಲಿ ಹೋಗುವವನು ತನ್ನ ಶರೀರದಲ್ಲಿನ ಮನಸ್ಸನ್ನು ಅಧೀನದಲ್ಲಿ ಇಟ್ಟುಕೊಳ್ಳಬೇಕಾಗಿರುತ್ತದೆ. ಕರ್ಮಯೋಗ ಮಾರ್ಗದಲ್ಲಿ ಪ್ರಯಾಣಿಸುವವನು ತನ್ನ ಶರೀರದಲ್ಲಿನ ಅಹಂನ್ನು ಅಧೀನದಲ್ಲಿ ಇಟ್ಟುಕೊಳ್ಳಬೇ

ಕಾಗಿರುತ್ತದೆ. ಇದನ್ನನುಸರಿಸಿ ಮನುಷ್ಯ ದೇವರನ್ನು ಸೇರುವುದಕ್ಕೆ ದೇವರೇ ಹೇಳಿದ ಎರಡು ಮಾರ್ಗಗಳು ಶರೀರದಲ್ಲೇ ಇವೆಯೆಂದು ತಿಳಿಯುತ್ತಿದೆ. **ಶರೀರದಲ್ಲೇ ಇರುವ ಮಾಯೆಯನ್ನು ಜಯಿಸುವುದಕ್ಕೆ, ಶರೀರದಲ್ಲೇ ಎರಡು ಯೋಗ ಮಾರ್ಗಗಳನ್ನು ದೇವರು ಹೇಳಿದರೂ, ಮಾಯೆ ಹೇಳುವ ಜ್ಞಾನದಿಂದ ಎಲ್ಲರೂ ಶರೀರದಲ್ಲಿ ಅಲ್ಲದೆ ಹೊರಗಿನ ಮಾರ್ಗಗಳೊಳಗೆ ಸಾಗುತ್ತಿದ್ದಾರೆ**. ಆದ್ದರಿಂದ ಅವರಿಗೆ ದೇವರ ಸಾನ್ನಿಧ್ಯವಾದ ಮೋಕ್ಷ ಲಭಿಸಲಿಲ್ಲ.

**ರಾಘವ :–** ಮನುಷ್ಯರನ್ನು ಹುಟ್ಟಿಸಿ ಕಷ್ಟಸುಖಗಳಲ್ಲಿ ಮುಳುಗಿಸುತ್ತಾ ಎಲ್ಲರನ್ನೂ ತನ್ನ ಅಧೀನದಲ್ಲಿ ಇಟ್ಟುಕೊಂಡ ಪ್ರಕೃತಿಯಿಂದ ತಪ್ಪಿಸಿಕೊಂಡು ಪರಮಾತ್ಮನನ್ನು ಸೇರಬೇಕೆಂದರೆ ಮುಖ್ಯವಾಗಿ ನಮ್ಮ ಶರೀರದಲ್ಲಿ ಕಾಣಿಸದ ಮನಸ್ಸಿನ ಮೇಲೆ ಮತ್ತು ಕಾಣಿಸದ ಅಹಂ ಮೇಲೆ ಆಧಾರಪಡಬೇಕಾಗಿರುವುದೆ ಎಂದು ನನಗೆ ಚೆನ್ನಾಗಿ ಅರ್ಥವಾಯಿತು.

**ರಾಜಯೋಗಾ :–** ಹೌದು. ಶರೀರದಲ್ಲಿ ಎರಡರ ಮೇಲೆ ಎರಡು ಯೋಗಗಳು ಆಧಾರಪಟ್ಟಿವೆ. ಈ ವಿಷಯ ತಿಳಿಯದೆ ಬಾಹ್ಯದಲ್ಲಿ ಭಜನೆಗಳು ಮಾಡಿದರೂ, ವ್ರತಕ್ರತುಗಳು ಮಾಡಿದರೂ, ಬ್ರಹ್ಮೋತ್ಸವಗಳು ಮಾಡಿದರೂ, ತೀರ್ಥಯಾತ್ರೆಗಳು ಮಾಡಿದರೂ ಪರಮಾತ್ಮನನ್ನು ಯಾರೂ ಸೇರಲಾರರು. ಆದ್ದರಿಂದ ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗದಲ್ಲಿ 48ನೇ ಶ್ಲೋಕದಲ್ಲಿ ಮತ್ತು 53ನೇ ಶ್ಲೋಕದಲ್ಲಿ ಯಜ್ಞಗಳಿಂದಾಗಲೀ, ದಾನಗಳಿಂದಾಗಲೀ, ವೇದಾಧ್ಯಯನಗಳಿಂದಾಗಲೀ, ತಪಸ್ಸುಗಳು ಮಾಡುವುದರಿಂದಾಗಲೀ ದೇವರನ್ನು ತಿಳಿಯುವುದಕ್ಕೆ ಸಾಧ್ಯವಾಗುವುದಿಲ್ಲವೆಂದು ಸ್ವತಃವಾಗಿ ಭಗವಂತನೇ ಹೇಳಿದ್ದಾನೆ.

**ರಾಘವ :–** ಸ್ವಾಮೀ ಈಗ ಬಹಳ ರಾತ್ರಿ(ಸಮಯ) ಕಳೆದುಹೋಗಿದೆ. ನೀವು ವಿಶ್ರಾಂತಿ ತೆಗೆದುಕೊಳ್ಳಿ. ನಾಳೆ ನಾನು ಇನ್ನೂ ಕೆಲವು ಜ್ಞಾನ ವಿಷಯಗಳನ್ನು ನಿಮ್ಮಿಂದ ತಿಳಿದುಕೊಳ್ಳುತ್ತೇನೆ.

*********************************

(ಮುನೆಪ್ಪ ಗುಂಪಿನಲ್ಲಿನ ವೆಂಕು ತಪಸ್ವಿಬಾಬಾರವರ ಆಶ್ರಮವನ್ನು ಸೇರಿ, ಅಲ್ಲಿ ಪರಿಸ್ಥಿತಿಗಳನ್ನು ಗಮನಿಸಿದನು. ಒಂದು ದಿನಕ್ಕೇ ಅಲ್ಲಿರುವ ಪರಿಸ್ಥಿತಿ ಎಲ್ಲಾ ವೆಂಕೂಗೆ ಅರ್ಥವಾಯಿತು. ಬೆಳಗ್ಗೆ, ಸಾಯಂಕಾಲ ಭಕ್ತರೆಲ್ಲರೂ ತಪಸ್ವಿಬಾಬಾರವರ ದರ್ಶನಕ್ಕೆ ಕುಳಿತಿರುವುದನ್ನು ನೋಡಿ ತಾನೂ ಸಹ ಅವರಲ್ಲಿ ಸೇರಿಹೋಗಿ ಎಲ್ಲರೊಂದಿಗೆ ತಾನೂ ಕುಳಿತುಕೊಂಡಿದ್ದಾನೆ. ತಮ್ಮ ನಾಯಕನು ಹೇಳಿದಂತೆ ಮೊದಲೇ ವಿಷಯವೆಲ್ಲವನ್ನೂ ಗೋಧಿ ಬಣ್ಣದ ಹಾಳೆಯಲ್ಲಿ ಬರೆದುಕೊಂಡು ಜಾಗ್ರತೆಯಿಂದ ಇಟ್ಟುಕೊಂಡಿದ್ದನು. ಆ ದಿನ ಯಾವುದೋ ಹಬ್ಬವಾಗಿರುವುದರಿಂದ ಭಕ್ತರು ಹೆಚ್ಚಾಗಿ ಇದ್ದರು. ಆ ದಿನ ತಪಸ್ವಿಬಾಬಾರವರು ತನ್ನ ಸಮೀಪಕ್ಕೆ ಬರಲಿಲ್ಲ. ಆದ್ದರಿಂದ ವೆಂಕು ತನ್ನ ಕಾಗದವನ್ನು ಬಾಬಾರವರಿಗೆ ಕೊಡಲಾಗಲಿಲ್ಲ. ಎರಡನೆ ದಿನವೂ ಹಾಗೇ ಆಗಿದೆ. ಮೂರನೆ ದಿನ ಬಾಬಾರವರು ತನ್ನ ಸಮೀಪಕ್ಕೆ ಬಂದಾಗ ವೆಂಕು ತನ್ನ ಕಾಗದವನ್ನು ಕೈಯ್ಯಲ್ಲಿ ಹಿಡಿದುಕೊಂಡಿದ್ದಾನೆ. ಆ ಕಾಗದವನ್ನು ಗಮನಿಸಿದ ಬಾಬಾರವರು ಎಲ್ಲರ ಕಾಗದಗಳನ್ನು ತೆಗೆದುಕೊಂಡಂತೆ ವೆಂಕೂ ಕೈಯಲ್ಲಿನ ಕಾಗದವನ್ನು ಸಹ ತೆಗೆದುಕೊಂಡಿದ್ದಾನೆ. ನಂತರ ಅದೇ ದಿನ ಸಾಯಂಕಾಲ ಬಾಬಾರವರ ಬಳಿಯಿಂದ ವೆಂಕುಗೆ ಕರೆ ಬಂದಿತು. ಆ ಕರೆ ಪ್ರಕಾರ ಅಲ್ಲಿರುವ ಭಕ್ತರು ವೆಂಕೂನನ್ನು ಬಾಬಾರವರ ಮಂದಿರದೊಳಗೆ ಒಂಟಿಯಾಗಿ ಕಳುಹಿಸಿದ್ದಾರೆ. ಬಾಬಾರವರು ಒಂದು ಉನ್ನತಾಸನದ ಮೇಲೆ ಕುಳಿತುಕೊಂಡಿದ್ದಾರೆ. ವೆಂಕು ಬಾಬಾರವರಿಗೆ ನಮಸ್ಕರಿಸಿ ನಾನು ತಾಳೆಮರ ಮುನೆಪ್ಪ ಹತ್ತಿರದಿಂದ ಬಂದಿದ್ದೇನೆಂದನು. ಅದಕ್ಕೆ ಬಾಬಾ ಮುಗುಳ್ನಗೆಯಿಂದ ಹೀಗೆ ಹೇಳಿದನು.)

**ಬಾಬಾ :–** ವಿವರವೆಲ್ಲಾ ತಿಳಿಯಿತು. ಈಗ ನೀವು ಏನು ಮಾಡಬೇಕೆಂದು ಕೊಂಡಿದ್ದೀರ?

**ವೆಂಕೂ :–** ನೀವು ಹೇಗೆ ಹೇಳಿದರೆ ಹಾಗೆಯೇ ಮಾಡುತ್ತೇವೆಂದು ನಮ್ಮ ನಾಯಕನು ಹೇಳಿದ್ದಾನೆ.

**ಬಾಬಾ :–** ಆದರೆ ತಪ್ಪಿಹೋದ ಹಾವನ್ನು ಹುಡುಕಿರಿ. ಅದನ್ನು ಹಿಡಿದುಕೊಂಡು ಬನ್ನಿ. ಹಾಗೆ ಮಾಡುವುದು ಹೊರತು ಬೇರೆ ಮಾರ್ಗವಿಲ್ಲ.

**ವೆಂಕು :–** ಅದು ಹೇಗೆ ಸಾಧ್ಯ ಸ್ವಾಮೀ! ಎಲ್ಲಿದೆಯೆಂದು ಹುಡಕಬೇಕು, ಹೋದ ಹಾವು ಸಿಗುತ್ತದಾ?

**ಬಾಬಾ :–** ಹಾವುಗಳು ಎಂದಿಗೂ ದೂರ ಪ್ರಯಾಣ ಮಾಡುವುದಿಲ್ಲ. ನೀರಿನ ವಸತಿ ಇರುವ ಸಮೀಪದಲ್ಲೇ ಸ್ಥಾವರವನ್ನು ಏರ್ಪಡಿಸಿಕೊಳ್ಳುತ್ತವೆ. ಆದ್ದರಿಂದ ಹಾವು ಓಡಿಹೋದ ಹತ್ತಿರದಲ್ಲಿ ನೀರಿನ ವಸತಿಗಳಿರುವ ಕಡೆ ಹುಡುಕಿ. ತಪ್ಪದೆ ಸಿಗುತ್ತದೆ. ಯಾರಿಗೂ ಯಾವ ಅನುಮಾನ ಬಾರದಂತೆ ಅನ್ವೇಷಣೆ ಮಾಡಬೇಕು. ಕೆಲವು ತಿಂಗಳಿಗಾದರೂ ಆ ಹಾವನ್ನು ಹಿಡಿದುಕೊಳ್ಳಿ. ನೀವು ಬಿಕ್ಷೆ ಬೇಡಿಕೊಂಡು ತಿನ್ನುವ ಯಾಚಕರ ಹಾಗೆ ಆ ಪ್ರಾಂತದಲ್ಲಿ ಗುಡಿಸಲು ಹಾಕಿಕೊಂಡು ಸ್ವಲ್ಪ ಕಾಲ ಅಲ್ಲೇ ಇದ್ದು ಪ್ರತಿ ದಿನ ಮೊಲ ಬೇಟೆಗೆಂದು, ಇಲಿಗಳ ಬೇಟೆಗೆಂದು, ಪಕ್ಷಿಗಳ ಬೇಟೆಗೆನ್ನುವ ನೆಪದಿಂದ ಹೊರಟುಹೋಗಿ ಪ್ರತಿ ದಿನ ಹಾವಿಗೋಸ್ಕರ ಅನ್ವೇಷಣೆ ಮಾಡಿ. ರಂಧ್ರಗಳು ಕಾಣಿಸಿದರೆ ಇಲಿಗಳಿಗೋಸ್ಕರ ಎನ್ನುವಂತೆ ಅಗೆದು ನೋಡಿ. ಪೊದೆಗಳು ಕಾಣಿಸಿದರೆ ಮೊಲಕ್ಕೋಸ್ಕರ ಎನ್ನುವಂತೆ ಹುಡುಕಿ. ಮುಖ್ಯವಾಗಿ ಯಾರಿಗೂ ಈ ವಿಷಯ ತಿಳಿಯದಂತೆ ಜಾಗ್ರತೆಯಿಂದ ಹುಡುಕಿರಿ. ಹಾವಿನ ಹೊಟ್ಟೆ ಹತ್ತಿರ ಚರ್ಮದ ಕೆಳಗೆ ವಜ್ರಗಳಿರುವ ವಿಷಯ ಯಾರಿಗೂ ತಿಳಿಯದು. ಆದ್ದರಿಂದ ಹಾವನ್ನು ನೀವು ಬಹಿರಂಗವಾಗಿ ಹಿಡಿದುಕೊಂಡರೂ ಯಾರೂ ಅದನ್ನು ಕುರಿತು ತಲೆಕೆಡಿಸಿಕೊಳ್ಳುವುದಿಲ್ಲ. ನೀವು ಬುದ್ಧಿವಂತಿಗೆಯಿಂದ ಈ ಕೆಲಸವನ್ನು ಮಾಡಬೇಕು.

**ವೆಂಕು :–** ಸ್ವಾಮೀ! ನಮ್ಮ ಹಿಂದೆ ಹಾವುಗಳನ್ನು ಹಿಡಿಯುವವರನ್ನು ಇಟ್ಟುಕೊಳ್ಳುತ್ತೇವೆ.

**ಬಾಬಾ :–** ಹಾಗೆ ಯಾರನ್ನೂ ಇಟ್ಟುಕೊಳ್ಳಬೇಡಿ. ಈ ಕೆಲಸದಲ್ಲಿ ಎಂತಹವರಿಗೂ ಅವಕಾಶಕೊಡಬಾರದು. ನಿಮ್ಮ ಗುಂಪಿನಲ್ಲಿರುವವರೇ ಈ ಕೆಲಸವನ್ನು ಮಾಡಿ.

**ವೆಂಕು :–** ಹಾವುಗಳು ಪ್ರಮಾದಕರವಾದವಲ್ಲವೆ! ಒಂದು ವೇಳೆ ಇದಕ್ಕೂ ಮೊದಲು ನಾನು ಹಾವಿನ ಕಡಿತಕ್ಕೆ ಗುರಿಯಾದಂತೆ ನಡೆದರೆ ಕಷ್ಟವಲ್ಲವೆ! ಇದಕ್ಕೆ ನೀವೇ ಉಪಾಯವನ್ನು ಹೇಳಬೇಕು.

**ಬಾಬಾ :–** ಅಂತಹದ್ದು ನಡೆದರೆ ಅದರ ನಿವಾರಣೆಗೋಸ್ಕರ ನಿಮ್ಮ ಹತ್ತಿರ ಬಿಳಿ ಈಶ್ವರಿ ಬಳ್ಳಿವೊಂದರ ಮೂಲಿಕೆಯನ್ನು ಇಟ್ಟುಕೊಳ್ಳಿ. ಬಿಳಿ ಈಶ್ವರಿ ಕಡ್ಡಿಯ ಗಂಧವನ್ನಾಗಲೀ, ಪುಡಿಯನ್ನಾಗಲೀ ಹೊಟ್ಟೆಯೊಳಗೆ ಕೊಟ್ಟರೆ ಹಾವಿನ ವಿಷ ನಿವಾರಿಸಲ್ಪಡುತ್ತದೆ. ಒಂದುವೇಳೆ ವಿಷ ತಲೆಗೇರಿ ಅಪಸ್ಮಾರಕ (ಕೋಮಾ) ಸ್ಥಿತಿಯೊಳಗಿರುವವನಿಗೆ, ಬಿಳಿ ಈಶ್ವರಿ ಮೂಲಿಕೆವೊಂದರ ಗಂಧವನ್ನು ಸ್ವಲ್ಪ ಕಣ್ಣಿನಲ್ಲಿ ಇಟ್ಟರೇ ತಲೆಯಿಂದ ಹಾವಿನ ವಿಷ ಕೆಳಗೆ ಇಳಿಯುತ್ತದೆ. ನಂತರ ಮೂಲಿಕೆಯನ್ನು ಹೊಟ್ಟೆಯೊಳಗೆ ಕೊಡಬಹುದು. ಈ ಮೂಲಿಕೆ ಇರುವುದರಿಂದ ಹಾವು ಕಡಿತಕ್ಕೆ ಭಯ ಇರುವುದಿಲ್ಲ. ಇದಕ್ಕಿಂತ ಹೆಚ್ಚಾಗಿ ಏನೂ ಹೇಳಬೇಕಾದ ಅಗತ್ಯವಿಲ್ಲ. ನೀನು ಬಹಳ ಹೊತ್ತು ಇಲ್ಲಿ ಇರಬಾರದು. ನೀನು ಕೂಡಲೇ ಇಲ್ಲಿಂದ ಹೊರಟುಹೋಗು..

(ವೆಂಕು ಕೂಡಲೇ ಅಲ್ಲಿಂದ ಹೊರಗೆ ಬಂದಿದ್ದಾನೆ. ಹೊರಗಿರುವ ಭಕ್ತರು ಕೆಲವರು ವೆಂಕು ಹತ್ತಿರಕ್ಕೆ ಬಂದು ನಿನಗೆ ಬಾಬಾರವರ ದರ್ಶನ ಸಿಕ್ಕಿದೆ. ಅದೃಷ್ಟವಂತ. ನಿನಗೆ ಬಾಬಾರವರು ಏನೆಂದು ಆಶೀರ್ವಾದ ಮಾಡಿದ್ದಾರೆಂದು ಕೇಳಿದರು. ಅವರ ಮಾತುಗಳಿಗೆ ವೆಂಕು ಬುದ್ಧಿವಂತಿಕೆಯಿಂದ ಸಮಾಧಾನಕೊಡುತ್ತಾ "ನನಗೆ ಬಹಳ ಕಾಲದಿಂದ ಹೊಟ್ಟೆನೋವು ಇದೆ. ಅದನ್ನು ಕುರಿತು ಬಾಬಾರವರಿಗೆ ಹೇಳಿಕೊಂಡಾಗ ಆತನು ನನ್ನ ಹೊಟ್ಟೆ ಮೇಲೆ ಕೈಯ್ಯನ್ನಿಟ್ಟು ತೆಗೆದನು. ಕೂಡಲೇ ನೋವು ಮಾಯವಾಗಿಹೋಯಿತು. ಎಂದು ಹೇಳಿ ವೆಂಕು ಅವರಿಂದ ಹೊರಬಿದ್ದು ತಮ್ಮ ನಾಯಕನ ಹತ್ತಿರಕ್ಕೆ ಹೊರಟು ಹೋದನು.)

**********************************

(ವಿಧಿವಶಾತ್ತು ಯಾವಾಗ ಏನು ನಡೆಯುತ್ತಿದೆಯೋ ಯಾರಿಗೂ ತಿಳಿದಿಲ್ಲ. ಕೆಲಸದ ಮೇಲೆ ಹೊರಟು ಹೋದ ಗಿರಿಜನರಿಗೆ ಎಲ್ಲಾ ಆತಂಕಗಳೇ ಎದುರಾದವು. ಆದರೂ ಅವರು ಛಲ ಬಿಡದ ಧೈರ್ಯವನ್ನು ಹೊಂದಿದ್ದಾರೆ. ಅರಣ್ಯ ಅಧಿಕಾರಿಗಳು ಸಣ್ಣ ಜೀಪಿನಲ್ಲಿ ಬಂದಿರುವುದರಿಂದ ಎಂಟು ಜನ ಗಿರಿಜನರನ್ನು ಅದರಲ್ಲಿ ತೆಗೆದುಕೊಂಡು ಹೋಗುವುದು ಕಷ್ಟವೆಂದು, ವ್ಯಾನ್‌ಗೋಸ್ಕರ ಕೇಂದ್ರಕ್ಕೆ ಜೀಪನ್ನು

ಕಳುಹಿಸಿದ್ದಾರೆ. ಅಷ್ಟರಲ್ಲಿ ಸಂಜೆಯಾಗಿ ಕತ್ತಲಾಯಿತು. ರಾತ್ರಿ ಸಮಯವಾದ್ದರಿಂದ ಗಿರಿಜನರಿಗೆ ಅಲ್ಲೇ ಊಟವನ್ನು ಕೊಡಿಸಿ, ಅಧಿಕಾರಿಗಳು ವ್ಯಾನ್‌ಗೋಸ್ಕರ ಕಾಯುತ್ತಿದ್ದಾರೆ. ಬಹಳ ರಾತ್ರಿ ಕಳೆಯಿತು. ಗಿರಿಜನರನ್ನು ಅಧೀನದಲ್ಲಿಟ್ಟುಕೊಂಡ ಮೂವರು ಅಧಿಕಾರಿಗಳಿಗು ನಿದ್ರೆ ಬರತೊಡಗಿತು. ಅವರು ಇಬ್ಬರು ನೋಡುತ್ತಿದ್ದಾರೆಂದು ಆ ಮೂವರಲ್ಲಿ ಒಬ್ಬನು ಕುಳಿತುಕೊಂಡು ನಿದ್ರೆ ಹೋದನು. ಹಾಗೇ ಅಂದುಕೊಂಡು ಇನ್ನೊಬ್ಬನು ನಿದ್ರೆಹೋದನು. ಚೆನ್ನಾಗಿ ಎಚ್ಚರದಿಂದಿರುವ ಮೂರನೆ ಅಧಿಕಾರಿ ಸಹ ತೂಗುವುದಕ್ಕೆ ಪ್ರಾರಂಭಿಸಿದನು. ಅದೇ ಸಮಯವೆಂದು ಭಾವಿಸಿದ ಗಿರಿಜನರು ಎಂಟು ಜನ, ಒಬ್ಬರಿಗೊಬ್ಬರು ಸನ್ನೆ ಮಾಡಿಕೊಂಡು ಮೆಲ್ಲನೆ ಕತ್ತಲೊಳಗೆ ಜಾರಿಕೊಂಡರು. ಕಣ್ಣು ಮುಚ್ಚುತ್ತಾ ತೆರೆಯುತ್ತಾ ತೂಗುತ್ತಿರುವ ಮೂರನೆ ಅಧಿಕಾರಿ ಎಚ್ಚರಗೊಂಡು ನೋಡುವುದರಲ್ಲೇ ಗಿರಿಜನರು ಕಾಣಿಸದಂತೆ ಹೋಗಿದ್ದಾರೆ. ಕೂಡಲೇ ಎದ್ದ ಆ ಅಧಿಕಾರಿ ಉಳಿದ ಇಬ್ಬರನ್ನು ಎಬ್ಬಿಸಿ ಗಿರಿಜನರಿಗೋಸ್ಕರ ಹುಡುಕಲು ಪ್ರಾರಂಭಿಸಿದರು. ಅದು ಹಳ್ಳಿ ಊರು ಆಗಿರುವುದರಿಂದ ಕರೆಂಟು ಲೈಟುಗಳು ಸಹ ಇಲ್ಲ. ಬಹಳ ಕತ್ತಲಿರುವುದರಿಂದ ಗಿರಿಜನರನ್ನು ಗುರುತಿಸಲಾರದೆ ಹೋಗಿದ್ದಾರೆ. ಅದೇ ಸರಿಯಾದ ಸಮಯದಂತೆ ಎಂಟು ಜನ, ಗಿರಿಜನರು ಊರಿನ ಹೊರಗೆ ಓಡುತ್ತಾ ಬಂದು ಅಲ್ಲಿಂದ ದಾರಿಯನ್ನು ಬಿಟ್ಟು ಹೊಲಗಳ ಮಧ್ಯದಲ್ಲಿ ಅಡ್ಡ ದಾರಿಯಲ್ಲಿ ನಡೆದು ಹೋಗಿದ್ದಾರೆ. ಅಧಿಕಾರಿಗಳು ಯಾವ ದಾರಿಹಿಂದೆ ಓಡಿ ಹೋಗಿ ನೋಡಿದರೂ ಫಲ ಇಲ್ಲದಂತೆ ಹೋಯಿತು. ಬೆಳಗಾಗುವುದರೊಳಗೆ ಬಹಳ ದೂರ ಹೋಗಬೇಕೆಂದುಕೊಂಡ ಗಿರಿಜನರು ವೇಗವಾಗಿ ನಡಿಗೆಯನ್ನು ಸಾಗಿಸುತ್ತಿದ್ದರು. ಅವರ ನಡಿಗೆಗೆ ರೈಲು ಮಾರ್ಗ ಅಡ್ಡ ಬಂದಾಗ ಅದನ್ನು ದಾಟಿ ಆಚೆಗೆ ಹೋಗುತ್ತಿದ್ದರು. ಆಗ ದೂರದಿಂದ ರೈಲು ಮಾರ್ಗದ ಹಿಂದೆ ಯಾರೋ ಬರುತ್ತಿದ್ದಂತೆ ಮಸುಕಾಗಿ ಕಾಣಿಸಿತು. ಕೂಡಲೇ ರೈಲು ಮಾರ್ಗದ ಪಕ್ಕದಲ್ಲೇ ಇರುವ ಮರಗಳ ಪೊದೆಗಳಲ್ಲಿ ಅಡಗಿ ಕುಳಿತು ಬರುತ್ತಿರುವವರು ಯಾರೆಂದು ನೋಡುತ್ತಿದ್ದರು. ಅಷ್ಟರಲ್ಲಿ ಒಂದು ಕಡೆಯಿಂದ ರೈಲು ಬರುತ್ತಿರುವುದರಿಂದ ಲೈಟ್ ಫೋಕಸ್‌ನಿಂದ ರೈಲು ಮಾರ್ಗ ಉದ್ದಕ್ಕೆ ಕಾಣಿಸುತ್ತಿತ್ತು. ಯಾರೋ ಬರುತ್ತಿದ್ದಂತೆ ಕಾಣಿಸಿದ ಆಕಾರ ಪೂರ್ತಿಯಾಗಿ ಕಾಣಿಸಿತು.

ಒಬ್ಬ ಯುವತಿ ಗಾಬರಿಯಿಂದ ಆಕಡೆ ಬರುತ್ತಿದ್ದಂತೆ ಗಿರಿಜನರು ಗಮನಿಸಿದ್ದಾರೆ. ಆಕೆ ಕೂಡಲೆ ರೈಲು ಮಾರ್ಗದ ಮೇಲೆ ಹೋಗಿ ರೈಲು ಕಂಬಿಗಳ ಮೇಲೆ ಮಲಗಿದಳು. ಆಕೆ ಆತ್ಮಹತ್ಯೆ ಮಾಡಿಕೊಳ್ಳುವುದಕ್ಕೆ ಆ ವಿಧವಾಗಿ ರೈಲು ಕಂಬಿಗಳ ಮೇಲೆ ಮಲಗಿದ್ದಾಳೆಂದು ಗ್ರಹಿಸಿದ ಗಿರಿಜನರು, ಓಡಿಹೋಗಿ ಆಕೆಯನ್ನು ಪಕ್ಕಕ್ಕೆ ಎಳೆದು ತಂದರು. ರೈಲು ಹೊರಟುಹೋಯಿತು. ನಂತರ ಕತ್ತಲು ಆವರಿಸಿತು. ಆಕೆಯ ಸುತ್ತಲೂ ಸೇರಿದ ಗಿರಿಜನರು ಅಳುತ್ತಿರುವ ಆಕೆಯನ್ನು ಸಮಾಧಾನ ಪಡಿಸುತ್ತಾ ಹೀಗೆ ಹೇಳಿದರು.)

**ಯೋಗಾ :–** ಯಾರಮ್ಮಾ ನೀನು? ನೋಡಿದರೆ ಚಿಕ್ಕ ವಯಸ್ಸಿನಂತಿದೆ. ನೀನು ಏಕೆ ರೈಲು ಕೆಳಗೆ ಬೀಳಲು ಹೋಗಿದ್ದೀಯ?

**ಯುವತಿ :–** ನನ್ನನ್ನು ಏಕೆ ಸಾಯಲು ಬಿಡಲಿಲ್ಲ. ನಾನು ಸತ್ತುಹೋಗಬೇಕು, ನಾನು ಬದುಕಬಾರದು. (ಎಂದಳು ಅಳುತ್ತಾ)

**ಮೇಘ :–** ಯಾವುದಾದರೂ ಕಷ್ಟ ಬಂದರೆ ಧೈರ್ಯವಾಗಿ ನಿಲ್ಲಬೇಕು. ಆದರೆ ಭಯಪಟ್ಟು ಸತ್ತುಹೋಗಬಾರದು. ಅದು ಪದ್ಧತಿ ಅಲ್ಲ.

**ಯುವತಿ :–** ಧೈರ್ಯವಾಗಿ ನಿಲ್ಲುವುದಕ್ಕೆ, ಬದಕುವುದಕ್ಕೆ ನನಗೆ ಯಾರೂ ಇಲ್ಲ. ನಾನು ಬದುಕಬೇಕೆಂದರೂ ನನ್ನನ್ನು ಹೇಗಾದರೂ ಸಾಯಿಸುತ್ತಾರೆ.

**ಯೋಗಾ :–** ನಿನಗೆ ಯಾವ ಕಷ್ಟವಿದೆಯೋ ನಮಗೆ ತಿಳಿಯದು. ನೀನು ಸಾಯಬಾರದೆಂದು ನಾವು ಕೋರುತ್ತಿದ್ದೇವೆ. ನಾವು ಅಡವಿಯಲ್ಲಿ ನಿವಾಸಿಸುವ ಮನುಷ್ಯರು. ನಿನಗೆ ಈ ಸಮಾಜದಲ್ಲಿ ಇರುವುದಕ್ಕೆ ಕಷ್ಟವಾದರೆ, ಕಲ್ಲಾಕಪಟವಿಲ್ಲದ ನಮ್ಮ ಹಟ್ಟಿಯ ಮನುಷ್ಯರ ಮಧ್ಯದಲ್ಲಿ ಯಾವ ಚಿಂತೆ ಇಲ್ಲದೆ ಇರಬಹುದು. ನಾವೀಗ ಒಬ್ಬ ಮನುಷ್ಯನಿಗೋಸ್ಕರ ಹುಡುಕುತ್ತಾ ಬಂದಿದ್ದೇವೆ. ಆತನನ್ನು ಕರೆದುಕೊಂಡು ನಮ್ಮ ಹಟ್ಟಿಯ ನಾಯಕನ ಹತ್ತಿರಕ್ಕೆ ಹೋಗಬೇಕು. ನೀನು ಸಹ ನಮ್ಮ ಜೊತೆ ಇರು, ನಿನಗೆ ಏನೂ ಭಯವಿರುವುದಿಲ್ಲ. ನಿನಗೆ ನಾವು ಎಂಟು ಜನ ಅಣ್ಣಂದಿರು ಇದ್ದೇವೆಂದುಕೊ.

(ಯಾವ ದಿಕ್ಕೂ ಇಲ್ಲದ ಪ್ರಾಣಾಪಾಯ ಸ್ಥಿತಿಯಲ್ಲಿರುವ ಆಕೆಗೆ ಆದರದಿಂದ ಮಾತನಾಡಿದ ಅವರ ಮಾತುಗಳು ಸ್ವಲ್ಪ ಧೈರ್ಯವನ್ನು ಕೊಟ್ಟಿವೆ. ಸರಿ ಎಂದು ಸಮ್ಮತಿಸಿ ಕತ್ತಲಲ್ಲಿ ಅವರ ಹಿಂದೆ ನಡೆದಳು.)

**********************************

(ಬೆಳಗಾಗುವುದರ ಮೊದಲೆ ಎದ್ದ ರಾಘವ ಸ್ನಾನ ಮಾಡಿ, ಅಡಿಗೆ ಸೌದೆಗಳಿಗೋಸ್ಕರ ಹೋಗುವ ಆಶ್ರಮಭಕ್ತರ ಹಿಂದೆ ತಾನೂ ಸಹ ಹೋಗಿ ತನಗೆ ಕೈಲಾದಷ್ಟು ಸೇವೆ ಮಾಡಬೇಕೆಂದುಕೊಂಡಿದ್ದಾನೆ. ಅಲ್ಲಿರುವವರು ನೀನು ಬೇಡಬಿಡು ಎಂದು ಹೇಳಿದರೂ ತಾನೂ ಸಹ ಸೇವೆ ಮಾಡಬೇಕೆಂದು ಹೊರಟು ಅವರ ಹಿಂದೆ ಹೋದನು. ಅದು ಮಳೆಗಾಲವಾಗಿರುವುದರಿಂದ ಒಣಗಿದ ಸೌದೆಗಳಿಗಾಗಿ ಬಹಳ ದೂರ ಹೋಗಬೇಕಾಗಿರುತ್ತದೆಂದುಕೊಳ್ಳುತ್ತಾ ರಾಘವ ಮತ್ತು ಆತನ ಆಶ್ರಮ ಸ್ನೇಹಿತರು ಹೋಗುತ್ತಿದ್ದರು. ಸ್ವಲ್ಪ ದೂರ ಹೋದ ನಂತರ ಆಕಾಶದಲ್ಲಿ ಮೋಡಗಳು ಕವಿದುಕೊಂಡವು. ಮಳೆ ಬಂದರೆ ಇರುವುದಕ್ಕೆ ಏನೂ ಇಲ್ಲವೆ ಎಂದು ನೋಡುತ್ತಿದ್ದಾಗ ಸ್ವಲ್ಪ ದೂರದಲ್ಲಿ ಒಂದು ಛತ್ರದಂತಹ ಹಳೆ ಗುಡಿ ಕಾಣಿಸಿತು. ಅಷ್ಟರಲ್ಲಿ ಮಳೆ ಬೀಳುವುದಕ್ಕೆ ಪ್ರಾರಂಭಿಸಿತು. ರಾಘವನೊಂದಿಗೆ ಸಹ ಎಲ್ಲರೂ ಆ ಛತ್ರದಹತ್ತಿರಕ್ಕೆ ಹೋಗಿ ನೆನೆಯದಂತೆ ನಿಂತುಕೊಂಡಿದ್ದಾರೆ. ಅಲ್ಲಿಗೆ ಸಮೀಪದಲ್ಲಿ ನಡೆಯುತ್ತಾ ಬಂದ ಗಿರಿಜನರು ಸಹ ಸ್ವಲ್ಪ ನೆಂದವರಾಗಿ, ಅಲ್ಲಿ ಛತ್ರವನ್ನು ನೋಡಿ ಓಡುತ್ತಾ ಛತ್ರದೊಳಗೆ ಬಂದಿದ್ದಾರೆ. ಅದಕ್ಕು ಮೊದಲು ಅಲ್ಲಿಗೆ ಬಂದಿರುವ ರಾಘವನನ್ನು ಗಿರಿಜನರು ನೋಡಿದರು. ಗಿರಿಜನರನ್ನು ರಾಘವ ಸಹ ನೋಡಿದ್ದಾನೆ. ಅಲ್ಲಿರುವ ರಾಘವನನ್ನು ನೋಡಿದ ಗಿರಿಜನರು ಆಶ್ಚರ್ಯಪಟ್ಟರು. ಆಗ ಅವರಿಗೆ ಹುಡುಕಬೇಕೆಂದು ಹೋದ ಬಳ್ಳಿ ಕಾಲಿಗೆ ತಾಕಿದಂತಾಯಿತು. ರಾಘವ ಕಾಣಿಸುವುದು ಗಿರಿಜನರಿಗೆ ಬಹಳ ಸಂತೋಷವಾಯಿತು. ಅವರನ್ನು ನೋಡಿದ ರಾಘವ ಸಹ ಸಂತೋಷಪಟ್ಟನು. ವಿಧಿ ಮಾಡಿದ ಆ ಸಂಘಟನೆ ಬಹಳ ವಿಚಿತ್ರವೆಂದುಕೊಂಡರು. ಮಳೆ ಬರದಂತಿದ್ದರೆ ತಾವು ಭೇಟಿಯಾಗುತ್ತಿರಲಿಲ್ಲ ಎಂದುಕೊಂಡರು.)

**ರಾಘವ :–** ನೀವು ಹೇಗೆ ಇಲ್ಲಿಗೆ ಬಂದಿದ್ದೀರ.

**ಮೇಘ :–** ನಿನಗೋಸ್ಕರವೇ ಹುಡುಕುತ್ತಾ ಬಂದಿದ್ದೇವೆ.

**ರಾಘವ :–** ನನ್ನಗೋಸ್ಕರನಾ!

**ಯೋಗ :–** ಹೌದು ನಿನ್ನಗೋಸ್ಕರವೇ ನಾಯಕನು ಕಳುಹಿಸಿದರೆ ಬಂದಿದ್ದೇವೆ.

**ರಾಘವ :–** ನಾಯಕ ಮಲ್ಲುದೊರೆ ಚೆನ್ನಾಗಿದ್ದಾನಾ?

**ಯೋಗ :–** ಎಲ್ಲರೂ ಚೆನ್ನಾಗಿದ್ದಾರೆ. (ಅವರೊಂದಿಗೆ ಅಲ್ಲಿಗೆ ಬಂದಿರುವ ಯುವತಿಯನ್ನು ನೋಡಿ ರಾಘವ ಹೀಗೆ ಕೇಳಿದನು.)

**ರಾಘವ :–** ಈಕೆ ಯಾರು?

**ಮೇಘ :–** ಈಕೆ ವಿಷಯ ಪೂರ್ತಿಯಾಗಿ ನಮಗೂ ಸಹ ತಿಳಿಯದು. ರಾತ್ರಿ ಈಕೆ ಆತ್ಮಹತ್ಯೆ ಮಾಡಿಕೊಳ್ಳುವಾಗ ನಮ್ಮ ಕಣ್ಣಿಗೆ ಬಿದ್ದಳು. ನಾವು ತಡೆದು ಹಾಗೆ ಮಾಡುವುದು ಒಳ್ಳೆಯದಲ್ಲವೆಂದು ತಿಳಿಹೇಳಿ ನಮ್ಮ ಹಿಂದೆ ಕರೆದುಕೊಂಡು ಬಂದಿದ್ದೇವೆ. ಆಕೆ ಬೇಸರಗೊಂಡ ಮನಸ್ಸಿನಿಂದ ಇದ್ದಾಳೆ. ಆದ್ದರಿಂದ ಆಕೆಯನ್ನು ಏನೂ ಕೇಳಲಿಲ್ಲ.

**ರಾಘವ :–** ನಾನು ನಿಮ್ಮೊಂದಿಗೆ ಏನೂ ಹೇಳದಂತೆ ಹೊರಟು ಬಂದಿದ್ದೇನೆ. ನಾನು ಹಾಗೆ ಬರಬೇಕಾಯಿತು. ಸ್ವಲ್ಪ ದಿನಗಳ ನಂತರ ಅಲ್ಲಿಗೆ ಬಂದು ವಿಷಯವೆಲ್ಲಾ ತಿಳಿಸಬೇಕೆಂದುಕೊಂಡಿದ್ದೇನೆ. ಅಷ್ಟರಲ್ಲೇ ನೀವೇ ನನಗೋಸ್ಕರ ಬಂದಿದ್ದೀರ. ನಾನೀಗ ಇಲ್ಲಿಗೆ ಹತ್ತಿರದಲ್ಲೇ ನಿವಾಸವಿರುತ್ತಿರುವ ರಾಜಯೋಗಾನಂದಸ್ವಾಮಿ ಹತ್ತಿರ ಇದ್ದೇನೆ. ಅಲ್ಲಿಗೆ ಹೋಗಿ ಗುರುಗಳಿಗೆ ವಿಷಯವನ್ನು ಹೇಳಿ ಆತನ ಅನುಮತಿ ತೆಗೆದುಕೊಂಡು ಹಟ್ಟಿಗೆ ಹೋಗೋಣ.

(ಎಲ್ಲರೂ ಸೇರಿ ಆಶ್ರಮಕ್ಕೆ ಹೊರಟು ಹೋದರು. ಮಾರ್ಗದಲ್ಲಿ ಯೋಗಾ, ಮೇಘ ತಮಗೆ ಉಂಟಾಗಿದ್ದ ಆತಂಕಗಳೆಲ್ಲವನ್ನು ರಾಘವನಿಗೆ ವಿವರವಾಗಿ ಹೇಳಿದರು. ತಮಾಷೆಯಿಂದ ನಡೆದ ಆ ಸಂಘಟನೆಗಳಿಗೆ ಎಲ್ಲರೂ ನಗುತ್ತಾ ಆಶ್ರಮವನ್ನು ಸೇರಿದರು. ರಾಘವ ಗಿರಿಜನರನ್ನು ರಾಜಯೋಗಾನಂದ ಸ್ವಾಮಿಗೆ ಪರಿಚಯ ಮಾಡಿದ್ದಾನೆ. ಅವರು ತನಗೋಸ್ಕರ ಬಂದಿರುವಂತೆ ತಿಳಿಸಿದನು. ಗಿರಿಜನರೆಲ್ಲರ ವಿಷಯವನ್ನು ತಿಳಿದುಕೊಂಡ ಸ್ವಾಮಿ, ಅವರಹಿಂದೆ ಬಂದಿರುವ

ಯುವತಿ ವಿಷಯವನ್ನು ಕೇಳಿದನು. ಗಿರಿಜನರು ಆಕೆಯನ್ನು ಕುರಿತು ತಮಗೆ ತಿಳಿದ ವಿಷಯವೆಲ್ಲವನ್ನೂ ತಿಳಿಸಿದರು. ಆಗ ರಾಜಯೋಗಾನಂದಸ್ವಾಮಿ ಆಕೆಯೊಂದಿಗೆ ಹೀಗೆ ಮಾತನಾಡಿದನು.)

**ರಾಜಯೋಗಾ :–** ನಿನ್ನ ಹೆಸರು ಏನಮ್ಮಾ?

**ಯುವತಿ :–** ನನ್ನ ಹೆಸರು ರಾಧೇಶ್ವರಿ. ನನ್ನ ಊರು ಸ್ಥಂಬಾಪುರ. ನನಗೆ ಇನ್ನೂ ವಿವಾಹವೂ ಸಹ ಆಗಿಲ್ಲ.

**ರಾಜಯೋಗಾ :–** ನೀನು ಸಾಯಬೇಕೆನ್ನುವಷ್ಟು ಕಷ್ಟ ಏನು ಬಂದಿದೆ. ನಿನಗೆ ನಾನು ತಂದೆಯಂತಹವನು. ನನ್ನ ಹತ್ತಿರ ಹೇಳುವುದರಿಂದ ನಿನಗೆ ಒಳ್ಳೆಯದೇ ನಡೆಯುತ್ತದೆ.

**ರಾಧೇಶ್ವರಿ :–** ನಮ್ಮದೊಂದು ದೊಡ್ಡ ಜಮೀಂದಾರಿ ಕುಟುಂಬ. ಆಸ್ತಿಪಾಸ್ತಿಗಳು ಬಹಳ ಇವೆ. ಒಂದು ದಿನ ನಮ್ಮ ಕುಟುಂಬ ತೀರ್ಥ ಯಾತ್ರೆಗಳಿಗೆ ಹೋಗಿ ರಸ್ತೆ ಅಪಘಾತದಲ್ಲಿ ಎಲ್ಲರೂ ಮರಣಕ್ಕೀಡಾದರು. ಆದಿನ ನನಗೆ ಆರೋಗ್ಯ ಸರಿಯಿಲ್ಲದಿರುವುದರಿಂದ ನಾನು ಹೋಗಲಿಲ್ಲ. ನಮ್ಮ ಕುಟುಂಬಕ್ಕೆಲ್ಲ ನಮ್ಮ ತಾತ ನಾನು ಉಳಿದಿದ್ದೇವೆ. ನಮ್ಮ ತಾತನಿಗೆ ಆರೋಗ್ಯ ಸರಿ ಇಲ್ಲದೆ ಈ ಮಧ್ಯಕಾಲದಲ್ಲೇ ಮರಣಿಸಿದ್ದಾನೆ. ತಾತ ಸಾಯುವುದಕ್ಕಿಂದ ಮೊದಲು ತನ್ನ ಹೆಸರಿನಲ್ಲಿದ್ದ ಆಸ್ತಿ ಎಲ್ಲವನ್ನು ನನಗೆ ಸೇರುವಂತೆ ಉಯಿಲು ಬರೆದು ಹೋಗಿದ್ದಾರೆ. ತಾತ ಸತ್ತುಹೋದಾಗಿನಿಂದ ನಾನು ಒಬ್ಬಂಟಿಗಳಾಗಿದ್ದೇನೆ. ಆಸ್ತಿ ಎಲ್ಲಾ ನನ್ನ ಹೆಸರಿನಲ್ಲಿ ಇರುವುದರಿಂದ, ಮಧ್ಯ ವಯಸ್ಸಿರುವ ನನ್ನ ಸೋದರಮಾವನಿಗೆ ದುರ್ಬುದ್ಧಿ ಹುಟ್ಟಿದೆ. ಆತನು ಎಲ್ಲಾ ವಿಧಗಳಲ್ಲಿ ಕೆಟ್ಟುಹೋದ ವ್ಯಕ್ತಿ. ಎಲ್ಲ ಕೆಟ್ಟ ವ್ಯಸನಗಳು ಆತನಿಗೆ ಇವೆ. ಆತನಿಗೆ ಹೆಂಡತಿಯೂ ಸಹ ಇಲ್ಲ. ಯಾರೂ ಆತನನ್ನು ಹತ್ತಿರಕ್ಕೆ ಕರೆಯುವುದಿಲ್ಲ. ಅಂತಹ ವ್ಯಕ್ತಿ ನನ್ನನ್ನು ಬಲವಂತವಾಗಿ ಮದುವೆ ಮಾಡಿಕೊಳ್ಳಬೇಕೆಂದು ನೋಡುತ್ತಿದ್ದಾನೆ. ಹಾಗೆ ಮಾಡಿಕೊಳ್ಳುವುದರಿಂದ ಆಸ್ತಿಯನ್ನು ಹೊಂದಬಹುದೆಂದು ಆತನ ಅಭಿಪ್ರಾಯ. ನಾನು ಅದಕ್ಕೆ ಒಪ್ಪಿಕೊಳ್ಳಲಿಲ್ಲ. ಆದರಿಂದ ಆತನು ನನ್ನನ್ನು ಸಾಯಿಸುವುದಕ್ಕೆ ಹೊಂಚು ಹಾಕಿದ್ದಾನೆ. ಇಲ್ಲಿಗೆ ಮೂರು ತಿಂಗಳಿಂದ

ನಾಲ್ಕು ಸಲ ನನ್ನನ್ನು ಸಾಯಿಸಬೇಕೆಂದು ನೋಡಿದ್ದಾನೆ. ನಾಲ್ಕು ಸಲ ಆತನ ಪ್ರಯತ್ನ ವಿಫಲವಾಯಿತು. ಆತನು ನನ್ನನ್ನು ಸಾಯಿಸುವುದಕ್ಕೆ ಬಾಡಿಗೆ ಹಂತಕರನ್ನು ಏರ್ಪಾಟು ಮಾಡಿದ್ದಾನೆ. ನನ್ನ ಸೋದರ ಮಾವನಿಗೆ ಬೆಂಬಲ ಕೊಡುವುದಕ್ಕೆ ನಮ್ಮ ತಂದೆ ಬಿಟ್ಟುಹಾಕಿರುವ ಮಲತಾಯಿ ಸಹ ಜೊತೆಯಾಗಿದ್ದಾಳೆ. ಅವರಿಂದ ತಪ್ಪಿಸಿಕೊಳ್ಳುವುದಕ್ಕೆ ನಾನು ಮನೆ ಬಿಟ್ಟು ಬಂದು ತಿಂಗಳಿಂದ ಹೊರಗೇ ತಪ್ಪಿಸಿಕೊಂಡು ತಿರುಗುತ್ತಿದ್ದೇನೆ. ನನ್ನ ಹತ್ತಿರ ಹಣವೂ ಸಹ ಇಲ್ಲ. ಎಷ್ಟೋ ಆಸ್ತಿ ಇದ್ದರೂ ಸಹ ಹಸಿವಿನಿಂದ ಬಾಧೆಪಡಬೇಕಾಗಿ ಬಂದಿದೆ. ಕೊನೆಗೆ ಹೇಗೂ ಅವರು ನನ್ನನ್ನು ಸಾಯಿಸುತ್ತಾರೆ. ಅವರು ಸಾಯಿಸುವುದಕ್ಕಿಂತ ಮೊದಲೆ ನಾನು ಸತ್ತುಹೋಗಬೇಕೆಂದು ಕೊಂಡಿದ್ದೇನೆ. ಆ ಪ್ರಯತ್ನದಲ್ಲಿಯೂ ಸಹ ವಿಫಲವಾಗಿದ್ದೇನೆ. ಕೊನೆಗೆ ಈ ಅಣ್ಣಂದಿರು ಧೈರ್ಯ ಹೇಳಿ ಆದರಣೆಯಿಂದ ಮಾತನಾಡಿ ನಿಮ್ಮ ಹತ್ತಿರಕ್ಕೆ ಕರೆ ತಂದಿದ್ದಾರೆ. ಇದು ನನ್ನ ಜೀವನ ಚರಿತ್ರೆ. ನಾನು ಚೆನ್ನಾಗಿ ಓದಿಕೊಂಡಿದ್ದೇನೆ. ನಾನು ಜಮೀನ್ದಾರಿ ಮನೆಯಲ್ಲಿ ಹುಟ್ಟಿದರೂ ನನ್ನಲ್ಲಿ ಒಳ್ಳೆ ಭಾವನೆಗಳಿವೆ.

**ರಾಜಯೋಗಾ :–** ಭೂಮಿ ಮೇಲೆ ಸಾವು ಹುಟ್ಟುಗಳು ಯಾರ ಕೈಯಲ್ಲಿ ಇಲ್ಲ. ಎಲ್ಲಾ ಕರ್ಮಕೈಯಲ್ಲಿ ಇವೆ. ಕರ್ಮದ ಪ್ರಕಾರ ಏನು ನಡೆಯಬೇಕೋ ಅದೇ ನಡೆಯುತ್ತದೆ. ಭವಿಷ್ಯತ್ತು ಅಂಧಕಾರಮಯ. ಅದು ಯಾರಿಗೂ ಕಾಣಿಸುವುದಿಲ್ಲ, ಕಾಲ ಕಳೆಯುತ್ತಿದ್ದಂತೆ ತಿಳಿಯುತ್ತಾ ಹೋಗುತ್ತಿರುತ್ತದೆ. ನೀನು ಸಾಯಬೇಕೆಂದು ಕೊಂಡರೂ ಸಾಯಲಿಲ್ಲ ಅಲ್ಲವೆ! ಇನ್ನೊಬ್ಬರು ಸಾಯಿಸಬೇಕೆಂದು ಕೊಂಡರೂ ಸಾಯಿಸಲಾರದೆಹೋಗಿದ್ದಾರೆ ಅಲ್ಲವೆ! ನಮ್ಮ ಹಿಂದೆ ನಮಗೆ ತಿಳಿಯದಂತೆ ಕರ್ಮ ಎನ್ನುವುದು ಒಂದಿದೆ, ಅದೇ ಎಲ್ಲರ ಜೀವನಗಳನ್ನು ನಡೆಸುತ್ತಿದೆಯೆಂದು ತಿಳಿಯದಂತೆ ಹೋಗುವುದೇ ಅಜ್ಞಾನ. ಕರ್ಮ ವಿಧಾನ ತಿಳಿಯದ ಅಜ್ಞಾನದಿಂದ ಮನುಷ್ಯ ತಾನು ಅಂದುಕೊಂಡಂತೆ ನಡೆಯುತ್ತದೆಂದು ಅಂದುಕೊಳ್ಳುವನು. ಪ್ರಸ್ತುತ ನೀನು ಸಹ ಹಾಗೇ ಅಂದುಕೊಂಡಿದ್ದೀಯ. ಮನುಷ್ಯ ಹೇಗೆ ತಿಳಿದುಕೊಂಡರೂ ಎಲ್ಲಾ ಕರ್ಮಪ್ರಕಾರವೇ ನಡೆಯುತ್ತದೆ. **ಕರ್ಮಪ್ರಕಾರ ನಡೆಯದಂತಿರುವವು, ನಾವು ಅಂದುಕೊಂಡಂತೆ ನಡೆಯುವವೂ ಸಹ ಇವೆ. ಅವು ಕರ್ಮಕ್ಕೆ ಅತೀತವಾದ ಜ್ಞಾನ ವಿಷಯಗಳು. ಪ್ರಪಂಚ ವಿಷಯಗಳೆಲ್ಲವೂ ಕರ್ಮ ಅಧೀನದಲ್ಲಿ ಇರುತ್ತವೆ. ಆದ್ದರಿಂದ**

**ಕರ್ಮ ಪ್ರಕಾರ ನಡೆಯುತ್ತವೆ. ದೈವಕ್ಕೆ ಸಂಬಂಧಿಸಿದ ಜ್ಞಾನ ವಿಷಯಗಳು ಕರ್ಮ ಅಧೀನದಲ್ಲಿ ಇರುವುದಿಲ್ಲ. ಜ್ಞಾನವಿಷಯಗಳಲ್ಲಿ ಮಾತ್ರ ಮನುಷ್ಯನಿಗೆ ಸ್ವತಂತ್ರತೆ ಇದೆ. ಏಕೆಂದರೆ ಅವು ಕರ್ಮಾಧೀನದಲ್ಲಿ ಇರುವುದಿಲ್ಲ. ಅವುಗಳಿಗೆ ಕರ್ಮ ಎನ್ನುವುದು ಇರುವುದಿಲ್ಲ.** ಆದ್ದರಿಂದ ಮನುಷ್ಯನ ಶ್ರದ್ಧೆಯನ್ನು ಅನುಸರಿಸಿ ಜ್ಞಾನವೊಂದರ ಕೆಲಸಗಳು ನಡೆಯುತ್ತವೆ. ಕರ್ಮ ಕೆಲಸಗಳ ಮೇಲೆ ಮನುಷ್ಯ ಎಷ್ಟು ಶ್ರದ್ಧೆ ಇಟ್ಟರೂ ನಡೆಯಬಹುದು, ನಡೆಯದೆ ಇರಬಹುದು. ಈ ವಿಷಯವನ್ನು ತಿಳಿದವರು ತಮ್ಮ ಅಧೀನದಲ್ಲಿ ಇಲ್ಲದವುಗಳ ಮೇಲೆ ಶ್ರದ್ಧೆ ಇಡದೇ, ತಮ್ಮ ಅಧೀನದಲ್ಲಿರುವ ಜ್ಞಾನದ ಮೇಲೆ ಶ್ರದ್ಧೆ ಇಟ್ಟು ತಿಳಿದುಕೊಳ್ಳುತ್ತಿದ್ದರು. ಅವರು ದೈವಜ್ಞಾನವನ್ನು ಎಷ್ಟು ಸಂಪಾದಿಸಿಕೊಳ್ಳಬೇಕೆಂದುಕೊಂಡರೆ ಅಷ್ಟು ಸಂಪಾದಿಸಿಕೊಳ್ಳುತ್ತಿದ್ದರು. ಆದ್ದರಿಂದ ಭಗವದ್ಗೀತೆಯಲ್ಲಿ ಸಹ ಭಗವಂತನು **"ಶ್ರದ್ಧಾವಾನ್ ಲಭತೇ ಜ್ಞಾನಮ್"** ಎಂದಿದ್ದಾನೆ.

ಇದೆಲ್ಲಾ ಏಕೆ ಹೇಳುತ್ತಿದ್ದೇನೆಂದರೆ ಚಿಕ್ಕ ವಯಸ್ಸಲ್ಲೇ ದೈವಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಒಳ್ಳೆ ಅವಕಾಶ ಇದೆ. ಈ ವಯಸ್ಸಲ್ಲಿ ನೀನು ಎಷ್ಟು ಶ್ರದ್ಧೆ ವಹಿಸಿದರೆ ಅಷ್ಟು ಜ್ಞಾನವನ್ನು ತಿಳಿದುಕೊಳ್ಳುತ್ತೀಯ. ನಿನ್ನ ಕೈಯಲ್ಲಿ ಇಲ್ಲದ ಪ್ರಪಂಚ ವಿಷಯಗಳನ್ನು ಬಿಟ್ಟು, ಜ್ಞಾನವನ್ನು ಸಂಪಾದಿಸಿಕೊಳ್ಳುವುದು ಒಳ್ಳೆಯದು. ಜ್ಞಾನ ತಿಳಿಯುವುದರಿಂದ ಪ್ರಪಂಚ ಸಂಬಂಧ ವಿಷಯಗಳು ಮನುಷ್ಯನನ್ನು ಹೆಚ್ಚಾಗಿ ಬಾಧಿಸಲಾರವು. ಈಗ ನಿನಗಿರುವ ಮನೋವ್ಯಥೆಗೆ ಜ್ಞಾನವೇ ಔಷಧವೆಂದುಕೋ. ಜ್ಞಾನದಿಂದ ಮನೋ ಉಲ್ಲಾಸ ಉಂಟಾಗಿ ಪ್ರಪಂಚ ಚಿಂತೆಗಳು ಸವೆದುಹೋಗುತ್ತವೆ. ಅವುಗಳನ್ನು ಅನುಭವಿಸುವ ಪ್ರಮಾಣ ಕಡಿಮೆಯಾಗುತ್ತದೆ. ಹಾಗೆ ಜ್ಞಾನ ತಿಳಿದುಕೊಳ್ಳುವುದಕ್ಕೆ ನಾವು ಎಲ್ಲ ವಿಧಗಳಲ್ಲಿ ಸಹಕಾರವನ್ನು ಕೊಡುತ್ತೇವೆ.

**ರಾಧೇಶ್ವರಿ :–** ನೀವು ಹೇಳಿರುವುದು ನನಗೆ ಚೆನ್ನಾಗಿ ಅರ್ಥವಾಗಿದೆ. ಪ್ರಪಂಚ ವಿಷಯಗಳು ನಮ್ಮ ಕೈಯಲ್ಲಿ ಇಲ್ಲ ಎನ್ನುವುದಕ್ಕೆ, ನನ್ನ ಜೀವನದಲ್ಲಿ ನನ್ನ ಇಷ್ಟವಿಲ್ಲದಂತೆ ನಡೆದ ಸಂಘಟನೆಗಳೇ ನಿದರ್ಶನ. ಎಲ್ಲಾ ಇದ್ದರೂ ಎಲ್ಲರನ್ನೂ

ಕಳೆದುಕೊಳ್ಳುವುದು ನಾನು ಅಂದುಕೊಂಡಂತೆ ನಡೆಯಲಿಲ್ಲ. ಈಗ ಎಲ್ಲಾ ಇದ್ದರೂ ಕೆಲವು ಹೊತ್ತು ತಿನ್ನಲು ತಿಂಡಿ ಸಹ ಇಲ್ಲದೆ ಹೋಗುವುದನ್ನು ನಾನು ಕೋರಿಕೊಳ್ಳದೇ ನಡೆದಿವೆ. ಹೀಗೆ ಲೆಕ್ಕಿಸಿ ನೋಡಿದರೆ ನೀವು ಹೇಳಿದಂತೆ ನನ್ನ ಜೀವನ ನನ್ನ ಕೈಯಲ್ಲಿ ಇಲ್ಲವೆಂದು ಚೆನ್ನಾಗಿ ಅರ್ಥವಾಗುತ್ತಿದೆ. ನನ್ನ ಇಷ್ಟದ ಪ್ರಕಾರ ನಡೆಯದ ಪ್ರಪಂಚ ವಿಷಯಗಳ ಶ್ರದ್ಧೆಯನ್ನು ಬಿಟ್ಟು ನೀವು ಹೇಳಿದ ಪ್ರಕಾರ ಜ್ಞಾನದ ಮೇಲೆ ಶ್ರದ್ಧೆಯನ್ನು ಬೆಳಸಿಕೊಳ್ಳುತ್ತೇನೆ. ನಿಮ್ಮಂತಹ ಉನ್ನತವಾದ ವ್ಯಕ್ತಿಗಳ ಹತ್ತಿರಕ್ಕೆ ನಾನು ಸೇರಿರುವುದಕ್ಕೆ ನನಗೂ ಸಹ ಬಹಳ ಸಂತೋಷ ಉಂಟಾಗುತ್ತಿದೆ. ನನಗೆ ನನ್ನ ಆಸ್ತಿಪಾಸ್ತಿಗಳು ಏನೂ ಬೇಡ ನನಗೆ ಜ್ಞಾನ ಲಭಿಸಿದರೆ ಅದೇ ನನಗೆ ದೊಡ್ಡ ಆಸ್ತಿ ಆಗುತ್ತದೆ.

**********************************

(ತಪಸ್ವಿ ಬಾಬಾ ಹತ್ತಿರದಿಂದ ಹೊರಟು ಹೋದ ವೆಂಕು ತಮ್ಮ ನಾಯಕನಾದ ಮುನೆಪ್ಪ ಹತ್ತಿರಕ್ಕೆ ಹೋಗಿ ಬಾಬಾರವರು ಹಾವಿಗೋಸ್ಕರ ಹುಡುಕಲು ಹೇಳಿದ ವಿಷಯವನ್ನು ಹೇಳಿದ್ದಾನೆ. ಬಾಬಾರವರು ಹೇಳಿದಂತೆ ಮಾಡುವುದು ಒಳ್ಳೆಯದೆಂದು ತಿಳಿದ ತಾಳೆಮರ ಮುನೆಪ್ಪ ತನ್ನ ಮನುಷ್ಯರನ್ನು ಕರೆದು ಬಾಬಾರವರು ಹೇಳಿದ ವಿಷಯವೆಲ್ಲವೂ ಅವರಿಗೆ ಹೇಳಿದ್ದಾನೆ. ಯಾರಿಗೂ ಅನುಮಾನ ಬಾರದಂತೆ ಮಾರುವೇಷಗಳು ಧರಿಸಿ ವಜ್ರಗಳಿರುವ ಹಾವಿಗೋಸ್ಕರ ಹುಡುಕಲು ಹೇಳಿದ್ದಾನೆ. ವಿಷಯವೆಲ್ಲಾ ತಿಳಿದುಕೊಂಡ ಮುನೆಪ್ಪ ಗುಂಪಿನ ಮನುಷ್ಯರು ಎರಡು ಗುಂಪುಗಳಾಗಿ ತಯಾರಾಗಿ ಹಾವಿನ ಬೇಟೆಗೆ ಹೊರಟು ಹೋಗಿದ್ದಾರೆ. ಮೊದಲನೆ ಗುಂಪಿನವರು ಹಾವು ತಪ್ಪಿಸಿಕೊಂಡ ಪ್ರಾಂತದಿಂದ ಒಂದು ಕಡೆಗೂ, ಎರಡನೆ ಗುಂಪು ಮತ್ತೊಂದು ಕಡೆಗೂ ಹುಡುಕಬೇಕೆಂದು ನಿರ್ಣಯಿಸಿಕೊಂಡರು. ಒಂದು ಗುಂಪಿಗೆ ವೆಂಕು ನಾಯಕನಾದಾಗ, ಮತ್ತೊಂದು ಗುಂಪಿಗೆ ನೂಕಾ ನಾಯಕನಾಗಿ ಇದ್ದಾರೆ. ಅವರ ಹತ್ತಿರ ನಾಯಿಗಳನ್ನು ಸಹ ಹಾವಿನ ಅನ್ವೇಷಣೆಗೋಸ್ಕರ ಇಟ್ಟುಕೊಂಡಿದ್ದಾರೆ. ಯಾರಿಗೂ ಅನುಮಾನ ಬಾರದಿರುವಂತೆ ಪ್ರತಿ ದಿನ ಮೊಲಗಳ ಬೇಟೆಗೆಂದು ಹೊರಟು ಹೋಗಿ ಹಾವನ್ನು ಹುಡುಕುತ್ತಿದ್ದರು. ಸಂಜೆವರೆಗು ಹಾವುಗಳ ಬೇಟೆ

ಮುಂದುವರೆಸುತ್ತಿದ್ದರು. ಅವರಿಗೆ ಚಿಕ್ಕ ಹಾವುಗಳು ಕಾಣಿಸಿದರೆ ಅವುಗಳ ತಂಟೆಗೆ ಹೋಗದಂತೆ ಕೇವಲ ಓಡಿಹೋದ ಹಾವಿನ ಉದ್ದ ಇರುವವುಗಳನ್ನೇ ಹಿಡಿದುಕೊಳ್ಳುತ್ತಿದ್ದರು. ಅವರ ಅನ್ವೇಷಣೆ ಕೇವಲ ನಾಗರಹಾವುಗಳು, ಆದ್ದರಿಂದ ಬೇರೆ ಜಾತಿ ಹಾವುಗಳನ್ನು ನೋಡಿದರೂ ಅವುಗಳ ತಂಟೆಗೆ ಹೋಗದಂತೆ, ತಮಗೆ ಬೇಕಾದ ಹಾವಿಗೋಸ್ಕರ ಹುಡುಕುತ್ತಿದ್ದರು. ಹಾವುಗಳನ್ನು ಸುಲಭವಾಗಿ ಹಿಡಿಯುವುದಕ್ಕೆ ಒಂದು ಅಂಗುಲ ಉದ್ದ, ಒಂದು ಅಂಗುಲ ಅಗಲ ಸೀಳಿರುವ ಒಂದು ಕವಲು ಕಟ್ಟಿಗೆಯನ್ನು ತಯಾರು ಮಾಡಿಕೊಂಡಿದ್ದಾರೆ. ಉದ್ದ ಇರುವ ಕಟ್ಟಿಗೆಗೆ ಒಂದು ಕೊನೆ ಸೀಳಿರುವುದರಿಂದ ಎಲ್ಲಾದರೂ ನಾಗರಹಾವು ಕಾಣಿಸಿದರೆ ಅದರ ತಲೆ ಹತ್ತಿರ ಸೀಳಿರುವ ಕಟ್ಟಿಗೆಯಿಂದ ಒತ್ತಿ ಹಿಡಿಯುತ್ತಿದ್ದರು. ಹಾಗೆ ಭೂಮಿಗೆ ಒತ್ತಿ ನುಸುಳದಂತೆ ಮಾಡಿ ಒಂದು ಗೇಣು (9 ಇಂಚುಗಳು) ಉದ್ದವಿರುವ ದಬ್ಬಳದಿಂದ ಹಾವಿನ ತಲೆಮೇಲೆ ಇಟ್ಟು ಸುಮಾರು ಮೂರು ಇಂಚುಗಳು ಭೂಮಿಯೊಳಗೆ ಇಳಿಯುವಂತೆ ಹೊಡೆಯುತ್ತಿದ್ದರು. ಹಾಗೆ ಹೊಡೆಯುವುದರಿಂದ ಹಾವಿನ ಮೇಲಿನ ತುಟಿ ಕೆಳಗಿನ ತುಟಿಗಳಿಂದ ದಬ್ಬಳ ಇಳಿದು ಹಾವಿನ ಬಾಯಿ ತೆರೆಯುವುದಕ್ಕೆ ಅವಕಾಶ ಇಲ್ಲದಂತೆ ಹೋಗುತ್ತದೆ. ಹಾಗೆ ದಬ್ಬಳವನ್ನು ಹೊಡೆದ ನಂತರ ಒತ್ತಿ ಹಿಡಿದ ಕವಲು ಕಟ್ಟಿಗೆಯನ್ನು ತೆಗೆದುಹಾಕಿ ದಬ್ಬಳವನ್ನು ಮೇಲಕ್ಕೆ ಎಳೆದರೆ ಭೂಮಿಯಿಂದ ದಬ್ಬಳ ಬರುತ್ತದೆ. ಆದರೆ ಹಾವಿನ ತಲೆಯಲ್ಲಿ ದಬ್ಬಳ ಇಳಿದಿರುವುದರಿಂದ ದಬ್ಬಳಕ್ಕೆ ತಲೆ ಅಂಟಿಕೊಂಡು ಹಾವು ಬಾಯಿ ತೆರೆಯದಂತೆ ಇರುತ್ತದೆ. ಆಗ ನಿರ್ಭಯವಾಗಿ ಯಾರಾದರೂ ಹಾವನ್ನು ಹಿಡಿದುಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಹಾಗೆ ಹಿಡಿದುಕೊಂಡ ಹಾವುಗಳನ್ನು ಸಾಯಂಕಾಲ ತಮ್ಮ ಗುಡಿಸಿಲಿಗೆ ತಂದು ಅವುಗಳ ಹೊಟ್ಟೆಯನ್ನು ಹರಿದು ನೋಡುತ್ತಿದ್ದರು. ಹೊಟ್ಟೆ ಕೆಳಗೆ ಚರ್ಮವನ್ನು ಸೀಳಿಸಿ ನೋಡಿದ ನಂತರ ಅವುಗಳ ಹೊಟ್ಟೆಯಲ್ಲಿ ವಜ್ರಗಳು ಇಲ್ಲದೇ ಹೋದರೆ ಆ ಹಾವುಗಳನ್ನು ಸಾಯಿಸುತ್ತಿದ್ದರು. ಹೀಗೆ ಅವರ ಅನ್ವೇಷಣೆಯಲ್ಲಿ ಎಷ್ಟೋ ಹಾವುಗಳು ಬಲಿಯಾಗಿಹೋಗಿವೆ.

ಹಾಗೆ ಅವರ ಹಾವುಗಳ ಬೇಟೆ ಸಾಗುತ್ತಿತ್ತು. ಹತ್ತು ದಿನಗಳಾದರೂ ತಪ್ಪಿಸಿಕೊಂಡ ಹಾವು ಕಾಣಿಸಲಿಲ್ಲ. ಒಂದು ದಿನ ವೆಂಕು ನಾಯಕತ್ವದಲ್ಲಿನ ಗುಂಪು

ಅನ್ವೇಷಿಸುತ್ತಾ ಒಂದು ಪೊದೆಯನ್ನು ಕೋಲಿನಿಂದ ಕದಲಿಸಿ ನೋಡಿದರು. ಆ ಪೊದೆಯಿಂದ ಒಂದು ನಾಗರಹಾವು ಹೊರಗೆ ಬಂದಿತು. ಆ ಪೊದೆಗೆ 20 ಅಡಿಗಳ ದೂರದಲ್ಲಿ ಮತ್ತೊಂದು ಪೊದೆ ಇತ್ತು. ಮೊದಲ ಪೊದೆಯಿಂದ ಬಂದಿರುವ ಹಾವನ್ನು ಹಿಡಿಯಬೇಕೆಂದು ಎಲ್ಲರೂ ಅದರ ಸುತ್ತಾ ಸೇರಿದರು. ಅಷ್ಟರಲ್ಲೆ ಎರಡನೆ ಪೊದೆಯಿಂದ ಮತ್ತೊಂದು ನಾಗರಹಾವು ಹೊರಗೆ ಬಂದಿದೆ. ಒಂದೇ ಸಲ ಹಾಗೆ ಎರಡು ಹಾವುಗಳು ಬರುವುದು ಅದೇ ಮೊದಲ ಸಲ ನಡೆದಿದೆ. ಆ ಎರಡು ಪೊದೆಗಳಿಂದ ಬಂದಿರುವ ಎರಡು ಹಾವುಗಳು ಒಂದೇ ಕಡೆಗೆ ಸೇರಿ, ಎರಡು ಹಾವುಗಳು ಎಡೆ ಬಿಚ್ಚಿ ನಿಂತಿವೆ. ಆಪತ್ತನ್ನು ಗ್ರಹಿಸಿದ ಆ ಹಾವುಗಳು ಧೈರ್ಯವಾಗಿ ಎದುರು ದಾಳಿ ಮಾಡುವುದಕ್ಕೆ ನಿಂತಿರುವುದನ್ನು ನೋಡಿದ ವೆಂಕು ಮನುಷ್ಯರು ಮುಂದಕ್ಕೆ ಹೋಗಲಿಲ್ಲ. ಆ ಎರಡು ಹಾವುಗಳು ತಪ್ಪಿಸಿಕೊಂಡು ಹೊದ ಹಾವಿನ ಅಳತೆಯಷ್ಟೇ ಇರುವುದರಿಂದ, ಅವುಗಳ ಹೊಟ್ಟೆಗಳು ಸ್ವಲ್ಪ ದಪ್ಪವಾಗಿ ಇರುವುದರಿಂದ, ಅದರಲ್ಲಿ ತಮ್ಮ ಹತ್ತಿರದಿಂದ ಹೋದ ಹಾವು ತಪ್ಪದೆ ಇರುತ್ತದೆಂದು ವೆಂಕು ಅಂದುಕೊಂಡಿದ್ದಾನೆ. ಹಾಗೆ ಅವುಗಳ ಮೇಲೆ ಅನುಮಾನ ಬಂದಿರುವುದರಿಂದ ಅವುಗಳನ್ನು ಹೇಗಾದರೂ ಹಿಡಿದುಕೊಳ್ಳಬೇಕೆಂದು ಮುಂದಕ್ಕೆ ಹೋಗಿದ್ದಾರೆ. ಅವರಲ್ಲಿ ಒಬ್ಬನು ಕೋಲಿನಿಂದ ಅವುಗಳ ತಲೆಯನ್ನು ಒತ್ತಿ ಹಿಡಿಯಬೇಕೆಂದು ನೋಡಿದ್ದಾನೆ. ಅಷ್ಟರಲ್ಲಿ ಗಂಡುಹಾವು ಬುಸುಗುಟ್ಟುತ್ತಾ ವಿಷವನ್ನು ಮುಂದಕ್ಕೆ ಹೋದ ವ್ಯಕ್ತಿ ಮೇಲೆ ಬೀಳುವಂತೆ ಮಾಡಿತು. ಹಾವು ಬುಸ್ಸೆಂದ ರಭಸಕ್ಕೆ ಚಿಮ್ಮಿದ ವಿಷ ಮುಂದಕ್ಕೆ ಹೋದವನ ಕಣ್ಣಲ್ಲಿ ಬಿದ್ದಿದೆ. ಕಣ್ಣಲ್ಲಿ ಬಿದ್ದಿರುವ ವಿಷ ಪ್ರಭಾವದಿಂದ ಕಣ್ಣು ಉರಿಯತೊಡಗಿದವು. ಹಾಗೆ ಗಂಡು ಹಾವು ವಿಷವನ್ನು ಚಿಮ್ಮಿಸಿರುವುದರಿಂದ ಮುಂದಕ್ಕೆ ಹೋದವರು ಸ್ವಲ್ಪ ಹಿಂದಕ್ಕೆ ಬಂದರು. ಆಗ ಹೆಣ್ಣು ಹಾವು ತಪ್ಪಿಸಿಕೊಂಡು ಪಕ್ಕದಲ್ಲಿರುವ ಪೊದೆಯೊಳಗೆ ಹೋಯಿತು. ಆಗ ಗಂಡು ಹಾವು ಒಂಟಿಯಾಗಿ ಹೋಗಿರುವುದರಿಂದ ಅದರ ಮೇಲೆ ಎಲ್ಲರೂ ಸೇರಿ ದಾಳಿಮಾಡಿ ಅದನ್ನು ಸಾಯಿಸಿದರು. ಅದರಲ್ಲೂ ಸಹ ವಜ್ರಗಳು ಇಲ್ಲವೆಂದು ತಿಳಿದುಹೋಯಿತು. ಈ ಸಲ ಅವರ ದೃಷ್ಠಿ ಎಲ್ಲಾ ಪೊದೆಯೊಳಗೆ ತಪ್ಪಿಸಿಕೊಂಡು ಓಡಿಹೋದ ಹಾವಿನ ಮೇಲೆಯೇ ಇದೆ. ಆ ಪೊದೆ ಸುತ್ತಾ ಸೇರಿ ಹಾವನ್ನು

ಹುಡುಕಲು ಆರಂಭಿಸಿದರು. ಅಷ್ಟರಲ್ಲಿ ಆ ಹಾವೂ ಸಹ ಹೊರಗೆ ಬಂದಿತು. ಅದನ್ನೂ ಸಹ ಎಲ್ಲರೂ ಸೇರಿ ಸಾಯಿಸುವುದು ನಡೆದಿದೆ. ನಂತರ ಎಷ್ಟೋ ಆಸೆಯಿಂದ ಅದರ ಹೊಟ್ಟೆಯನ್ನು ಸಹ ನೋಡಿದರು. ಆದರೆ ಅದರಲ್ಲಿ ಸಹ ವಜ್ರಗಳು ಸಿಗಲಿಲ್ಲ.

ಸಾಯಂಕಾಲಕ್ಕೆ ಕಣ್ಣಲ್ಲಿ ವಿಷ ಬಿದ್ದಿರುವ ವ್ಯಕ್ತಿಗೆ ಪೂರ್ತಿಯಾಗಿ ದೃಷ್ಠಿ ಹೋಯಿತು. ಹಾಗೆ ಕಣ್ಣು ದೃಷ್ಠಿ ಹೋಗಿರುವುದರಿಂದ ಎಲ್ಲರೂ ಭಯಪಟ್ಟರು. ಇನ್ನು ಹಾವುಗಳ ತಂಟೆಗೆ ಹೋಗಬಾರದೆಂದು ನಿರ್ಣಯಿಸಿಕೊಂಡು, ಹಿಂತಿರುಗಿ ತಮ್ಮ ನಾಯಕನ ಹತ್ತಿರಕ್ಕೆ ಹೋಗಿ ನಡೆದ ವಿಷಯವನ್ನು ತಿಳಿಸಿ ತಮ್ಮ ಭಯವನ್ನು ವ್ಯಕ್ತಪಡಿಸಿದರು. ಅವರ ಮಾತುಗಳನ್ನು ಕೇಳಿದ ಮುನೆಪ್ಪ ಇಲ್ಲಿಗೆ ಹೀಗೆ ಹುಡುಕುವ ಕೆಲಸವನ್ನು ನಿಲ್ಲಿಸಿ ಬೇರೊಂದು ಉಪಾಯವನ್ನು ಆಲೋಚಿಸುತ್ತೇನೆಂದು ಹೇಳಿದ್ದಾನೆ. ಆ ಹಾವನ್ನು ಹೇಗೆ ಹಿಡಿಯಬೇಕೋ ಅದು ಎಲ್ಲಿದೆಯೋ ಅರ್ಥವಾಗದ ವಿಷಯವನ್ನು ಮುನೆಪ್ಪ ತಾನೇ ಸ್ವತಃವಾಗಿ ತಪಸ್ವಿ ಬಾಬಾ ಹತ್ತಿರಕ್ಕೆ ಹೋಗಿ ಕೇಳಿ ಬರಬೇಕೆಂದುಕೊಂಡಿದ್ದಾನೆ. ಮುನೆಪ್ಪ ಅಂದುಕೊಂಡಂತೆ, ತಪಸ್ವಿಬಾಬಾರವರ ಹತ್ತಿರಕ್ಕೆ ಹೋಗಿ ಹಾವು ಎಲ್ಲಿದೆಯೋ ತಿಳಿಯದೆ ಅದನ್ನು ಹಿಡಿಯುವುದು ಸಾಧ್ಯವಾಗುವುದಿಲ್ಲವೆಂದು, ಅನುಮಾನದಿಂದ ಇಲ್ಲಿಗೆ ಬಹಳ ಹಾವುಗಳನ್ನು ಸಾಯಿಸಿ ನೋಡಿದ್ದೇವೆಂದು ಹಾಗೆ ಉಳಿದ ಹಾವುಗಳನ್ನು ನೋಡುವುದರಲ್ಲಿ ಅಪಾಯ ಉಂಟಾಗುತ್ತಿದೆಯೆಂದು, ತಮ್ಮ ಮನುಷ್ಯನಿಗೆ ಒಬ್ಬನಿಗೆ ವಿಷ ಕಣ್ಣಲ್ಲಿ ಬಿದ್ದು ಕಣ್ಣು ಹೋಗಿ ಕುರುಡನಾಗಿದ್ದಾನೆಂದು, ತಪ್ಪಿ ಹೋದ ಹಾವು ಎಲ್ಲಿದೆಯೋ ತಿಳಿದರೆ ಹಿಡಿಯಬಹುದೆಂದು ಅದನ್ನು ಕಂಡುಕೊಳ್ಳುವುದಕ್ಕೆ ನೀವೇ ಉಪಾಯವನ್ನು ಹೇಳಿರೆಂದು ಕೋರಿದ್ದಾನೆ. ಆತನ ಮಾತುಗಳನ್ನು ಕೇಳಿದ ಬಾಬಾರವರು ಯೋಚಿಸಿ ಹೀಗೆ ಹೇಳಿದ್ದಾನೆ.)

**ಬಾಬಾ :–** ಸರಿ, ನೀನು ಮೂರು ದಿನಗಳು ಇಲ್ಲೇ ಇರು. ಮೂರು ದಿನಗಳ ನಂತರ ನಾನೊಂದು ಪರಿಕರವನ್ನು ತರಿಸಿ ನಿನಗೆಕೊಡುತ್ತೇನೆ. ಅದು ಚಿಕ್ಕ ಬ್ಯಾಟರೀ ಸೆಲ್ಸ್‌ಗಳಿಂದ ಕೆಲಸ ಮಾಡುವ ಒಂದು ಚಿಕ್ಕ ಸೆನ್ಸಾರ್ ಯಂತ್ರ. ಆ ಯಂತ್ರ ಹತ್ತು

ಅಡಿಗಳ ದೂರದಲ್ಲಿರುವ ವಜ್ರಗಳನ್ನು ಗುರುತಿಸುತ್ತದೆ. ಆದ್ದರಿಂದ ಆ ಚಿಕ್ಕ ಯಂತ್ರದಿಂದ ವಜ್ರಗಳಿರುವ ಹಾವನ್ನು ಗುರುತಿಸಬಹುದು. ಅದು ವಜ್ರಗಳ ಸೆನ್ಸಾರ್ ಯಂತ್ರವಾಗಿರುವುದರಿಂದ, ವಜ್ರಗಳ ಹಾವು ನಿಮಗೆ ಮುವ್ವತ್ತು (30) ಅಡಿಗಳ ದೂರದಲ್ಲಿ ಇರುವಾಗ, ಈ ಯಂತ್ರದಲ್ಲಿ ಮುಳ್ಳು ಚಲಿಸಿ "ಘೀ" ಎನ್ನುವ ಶಬ್ದ ಬರುತ್ತದೆ. ಹಾವಿಗೆ ಹತ್ತಿರವಾಗಿ ಹೋಗುತ್ತಿದ್ದಂತೆ ಯಂತ್ರವೊಂದರ ಶಬ್ದ ಹೆಚ್ಚಾಗುತ್ತದೆ. ಆದ್ದರಿಂದ ಹಾವನ್ನು ಸುಲಭವಾಗಿ ಗುರುತಿಸಬಹುದು. ಈ ಯಂತ್ರ ಸಹಾಯದಿಂದಲೇ ನೀವು ಹಾವನ್ನು ಹಿಡಿದುಕೊಂಡು ವಜ್ರಗಳನ್ನು ತಂದು ಕೊಡಿ. (ಎಂದು ಹೇಳಿ ಮಾರುವೇಷದಲ್ಲಿರುವ ಮುನೆಪ್ಪನನ್ನು ಹೊರಗೆ ಕಳುಹಿಸಿದನು.)

********************************

**ರಾಜಯೋಗಾ :–** ನಿನ್ನದು ಚಿಕ್ಕವಯಸ್ಸಾದರೂ ಪ್ರಪಂಚ ಧನಕ್ಕಿಂತ ಜ್ಞಾನಧನವನ್ನೇ ದೊಡ್ಡದಾಗಿ ಗುರಿತಿಸಿದ್ದೀಯ. ಅದಕ್ಕೆ ನಮಗೆ ಸಂತೋಷ. ಪ್ರಪಂಚ ವಿಧಾನದಲ್ಲಿ ಮಾಡುವ ಕೆಲಸಗಳನ್ನು ಸಹ ನಾವು ಜ್ಞಾನವನ್ನು ಅನುಸರಿಸಿಯೇ ಮಾಡುತ್ತೇವೆ. ಪ್ರಪಂಚ ಕಾರ್ಯಗಳೆಲ್ಲವೂ ಕರ್ಮದಿಂದಲೇ ನಡೆದರೂ ಪುನಃ ಕರ್ಮ ಅಂಟದ ವಿಧವಾಗಿ ಕರ್ಮಯೋಗ ಪದ್ಧತಿ ಪ್ರಕಾರ ಮಾಡುತ್ತಿರುತ್ತೇವೆ. ನಿನ್ನ ತಂದೆ ತಾತರ ಆಸ್ತಿಗಳು ಸಹ ನಿನಗೆ ತಪ್ಪದೆ ಲಭಿಸುತ್ತವೆ. ಅವು ಲಭಿಸುವುದಕ್ಕೆ ನಿನಗೆ ನಾವು ಪೂರ್ತಿಯಾಗಿ ಸಹಕರಿಸುತ್ತೇವೆ.

**ರಾಧೇಶ್ವರಿ :–** ನನ್ನ ಸೋದರ ಮಾವ ಕುಡುಕ, ಕೆಡಕ. ಆತನಿಗೆ ಹಂತಕರೊಂದಿಗೆ ಸಂಬಂಧಗಳಿವೆ. ನಾನು ನಿಮ್ಮ ಹತ್ತಿರ ಇದ್ದೇನೆಂದು ಆತನಿಗೆ ತಿಳಿದರೆ ನನ್ನಿಂದ ನಿಮಗೇನಾದರೂ ಆಪತ್ತು ಉಂಟಾಗುತ್ತದೇನೋ ಎಂದು ನನಗೆ ಭಯವಾಗುತ್ತಿದೆ. ನೀವು ಆಶ್ರಮವಾಸಿಗಳು, ಸೌಮ್ಯವಾಗಿ ಇರುವವರು ಆತನು ಒಬ್ಬ ರೌಡಿ. ಆತನು ಯಾವುದಕ್ಕಾದರೂ ಹಿಂಜರಿಯುವುದಿಲ್ಲ. ಆದ್ದರಿಂದಲೆ ನಾನು ಸತ್ತುಹೋಗಬೇಕೆಂದುಕೊಂಡಿದ್ದೆ. ನನ್ನಿಂದ ಈ ಆಶ್ರಮದವರಿಗಾಗಲೀ, ಜ್ಞಾನಕ್ಕಾಗಲೀ ತೊಂದರೆಗಳು ಬಂದರೆ ನಾನು ನಿಮಗೂ ಸಹ ಕಷ್ಟಗಳು ತಂದಿಟ್ಟವಳಾಗುತ್ತೇನೆ.

**ರಾಜಯೋಗಾ :–** ಇಲ್ಲ, ನೀನು ಸಾಯಬಾರದು. ನಿನಗೆ ರಕ್ಷಣೆ ಕೊಡುವುದರಲ್ಲಿ ನಮಗೆ ಯಾವ ಕಷ್ಟಬಂದರೂ ಎದುರಿಸಬಲ್ಲೆವು. ಅಸಹಾಯಸ್ಥಿತಿಯಲ್ಲಿ ಮರಣವೇ ಶರಣ್ಯವೆನ್ನುವ ಸ್ಥಿತಿಯಲ್ಲಿರುವ ಸಾಟಿ ವ್ಯಕ್ತಿಗೆ ಸಹಾಯ ಮಾಡದಷ್ಟು ದೌರ್ಭಾಗ್ಯಸ್ಥಿತಿಯಲ್ಲಿ ನಾವು ಇಲ್ಲ. ನಿನಗೆ ತಪ್ಪದೆ ನಮ್ಮ ಸಹಾಯವಿರುತ್ತದೆ.

(ಸ್ವಾಮಿ ಮಾತನಾಡಿದ ಮಾತುಗಳನ್ನು ಕೇಳಿದ ರಾಘವನಿಗೆ ತನ್ನ ಶರೀರದಲ್ಲಿ ಹೊಸ ಉತ್ತೇಜನೆ ಬಂದು ಈ ವಿಧವಾಗಿ ಅಂದುಕೊಂಡಿದ್ದಾನೆ. "ಪುರುಷನಾದ ತನಗೇ ಸಮಾಜದಲ್ಲಿ ಬೇಸರವಾಗಿ ಅಡವಿಗೆ ಹೋದಂತೆ, ಸ್ತ್ರೀಯಾದ ರಾಧೇಶ್ವರಿಯೂ ಸಹ ಸಮಾಜದಲ್ಲಿನ ರಾಕ್ಷಸತ್ವಕ್ಕು, ಕ್ರೂರತ್ವಕ್ಕೂ ಬೇಸರಗೊಂಡು ಶರೀರವನ್ನೇ ಬಿಟ್ಟು ಹೋಗಬೇಕೆಂದುಕೊಂಡಿದ್ದಾಳೆ. ಈ ದಿನ ಆಕೆ ಮರಣವನ್ನು ಕೋರುವುದೂ, ಆ ದಿನ ನಾನು ಅರಣ್ಯವಾಸವನ್ನು ಕೋರುವುದೂ ನಮ್ಮಲ್ಲಿ ಧೈರ್ಯ ಇಲ್ಲದಿರುವುದರಿಂದಲೇ ಎಂದು ಅರ್ಥವಾಗುತ್ತಿದೆ. ನಮ್ಮಂತಹ ಅಧೈರ್ಯ ಇರುವವರನ್ನು ಈ ಲೋಕ ಓಡಿಸುತ್ತಲೇ ಇರುತ್ತದೆ. ಸಮಾಜಕ್ಕೆ ಹೆದರಿಹೋಗುವುದು ಒಳ್ಳೆಯದಲ್ಲ. ಈ ದುಷ್ಟ ಸಮಾಜಕ್ಕೆ ಭಯಪಡದಂತೆ ಎದುರಿಸಿ ನಿಲ್ಲುವುದರಲ್ಲೇ ದೊಡ್ಡತನವಿದೆಯೆಂದು ರಾಜಯೋಗಾನಂದ ಸ್ವಾಮಿ ಅವರ ಮಾತುಗಳಲ್ಲಿ ಅರ್ಥವಾಗುತ್ತಿದೆ. ಅಂತಹ ಸ್ವಾಮಿಯೇ ಆಪತ್ತಿನಲ್ಲಿರುವವರನ್ನು ಆದರಿಸುವುದಕ್ಕೆ ಎಂತಹ ಕಷ್ಟ ಬಂದರೂ ಎದುರಿಸಬಲ್ಲೆವೆಂದು ಹೇಳುತ್ತಿದ್ದರೆ, ನನ್ನಲ್ಲಿ ನಿದ್ರಾಣವಾಗಿರುವ ಧೈರ್ಯ ಹುಕ್ಕಿ ಹೊರಗೆ ಬಂದಿತು. ಇಂದಿನಿಂದ ನಾನು ಹಳೆ ರಾಘವನು ಅಲ್ಲ, ಹೊಸ ರಾಘವನಂತೆ ಇರುತ್ತೇನೆ. ಯಾರಿಗೆ ಎಂತಹ ಬುದ್ಧಿ ಹೇಳಬೇಕೋ ಹಾಗೇ ಹೇಳುತ್ತೇನೆ. ಆದರೂ ನಾನು ಅಂದುಕೊಳ್ಳುವ ಪದ್ಧತಿ ಜ್ಞಾನ ಮಾರ್ಗಕ್ಕೆ ಆತಂಕವೇನೋ! ಯಾವುದಕ್ಕೂ ಒಳ್ಳೆಯದು ಸ್ವಾಮಿಯವರನ್ನು ಕೇಳಿ ತಿಳಿದುಕೊಳ್ಳೋಣ" ಎಂದು ಅಂದುಕೊಂಡಿದ್ದಾನೆ.)

**ರಾಘವ :–** ಸ್ವಾಮೀ! ನೀವು ಮಾತನಾಡಿದ ಮಾತುಗಳು ನನಗೆ ಹೊಸ ಉತ್ತೇಜವನ್ನು ಕೊಟ್ಟಿವೆ. ಆದರೆ ಈ ಸಮಾಜದಲ್ಲಿ ನರರೂಪ ರಾಕ್ಷಸರನ್ನು ಅಡಗಿಸುವುದಕ್ಕೆ ಸ್ವಲ್ಪ ಹಿಂಸಾ ಮಾರ್ಗದಲ್ಲಿ ಹೋಗಬೇಕಾಗಿ ಬರುತ್ತದೇನೋ! ಆದ್ದರಿಂದ ಜ್ಞಾನಮಾರ್ಗ

ದಿಂದ ತಪ್ಪಿ ಹೋಗುತ್ತೇನೇನೋ ಎನ್ನುವ ಅನುಮಾನ ಬರುತ್ತಿದೆ. ಹಾಗೆಂದು ಪೂರ್ತಿಯಾಗಿ ಹಿಂಸಾ ಮಾರ್ಗವನ್ನು ಬಿಟ್ಟು ಅಹಿಂಸಾಮಾರ್ಗದಲ್ಲಿ ಹೋದರೆ, ಗಾಳಿಯಲ್ಲಿನ ಪಕ್ಷಿಗಳೂ, ಭೂಮಿ ಮೇಲಿರುವ ಇರುವೆಗಳು ಸಹ ಹೆದರಿಸುವಂತೆ ಇವೆ. ಹಿಂಸೆ ಇಲ್ಲದೇ ಹೋದರೆ ಜೀವನವೇ ಸಾಗುವುದಿಲ್ಲವೇನೋ ಎನಿಸುತ್ತದೆ. ಹಿಂಸೆ ಪಾಪವೆನ್ನುತ್ತಾರೆ ಕೆಲವರು, ಹಿಂಸೆ ಇಲ್ಲದೆ ನಮ್ಮನ್ನು ನಾವು ಸಹ ರಕ್ಷಿಸಿಕೊಳ್ಳಲಾರೆವು. ಪೂರ್ತಿಯಾಗಿ ಹಿಂಸೆಯನ್ನು ಬಿಟ್ಟು ಭೂಮಿಮೇಲೆ ಬದುಕಬಲ್ಲೆವಾ? ಕೆಲವರು ಪ್ರೀತಿಯಿಂದ ಯಾವುದನ್ನಾದರೂ ಸಾಧಿಸಬಹು ದೆಂದಿದ್ದಾರೆ ಅದು ನಿಜವಾ? ನಾವು ಪ್ರೀತಿಸಿದರೂ ಅದನ್ನು ಅರ್ಥ ಮಾಡಿಕೊಳ್ಳ ದವರು ಇರುವಾಗ ಅವರ ಲೆಕ್ಕದಲ್ಲಿ ಅದು ಪ್ರೀತಿಯೇ ಅಲ್ಲ ತಾನೆ! ನೀವೇ ಹೇಳಿ ಸ್ವಾಮೀ! ನನಗೆ ಉಂಟಾದ ಜೀವನ ಅನುಭವಗಳಿಂದ ನಾನು ಹಿಂಸಾ ಮಾರ್ಗವನ್ನು ಅನುಸರಿಸಬೇಕೋ ಅಥವಾ ಹಿಂಸೆ ಪಾಪವೆಂದು ಅಹಿಂಸಾಮಾರ್ಗದಲ್ಲಿ ಹೋಗಬೇಕೋ? ಹೇಳಿರಿ.

(ರಾಘವ ಮೆದುಳಿನಲ್ಲಿ ಬುದ್ಧಿವೊಂದರ ಯೋಚನೆ ಮಧ್ಯೆ ನಡೆಯುತ್ತಿರುವ ಘರ್ಷಣೆಯನ್ನು ಗ್ರಹಿಸಿದ ರಾಜಯೋಗಾನಂದಸ್ವಾಮಿ ಹೀಗೆ ಹೇಳಿದ್ದಾನೆ.)

**ರಾಜಯೋಗಾ :–** ಒಂದು ದಿನ ಇದೇ ರೀತಿ ಅರ್ಜುನನು ಕೃಷ್ಣನನ್ನು ಪ್ರಶ್ನಿಸಿದ್ದಾನೆ. ಆದಿನ ಕೃಷ್ಣನು ಹಿಂಸೆಯಿಂದ ಕೂಡಿಕೊಂಡ ಯುದ್ಧವೇ ಮಾಡೆಂದಿದ್ದಾನೆ. ಆದರೆ ಜ್ಞಾನವನ್ನು ತಲೆಯಲ್ಲಿಟ್ಟುಕೊಂಡು ಕರ್ಮಯೋಗಪದ್ಧತಿಯಲ್ಲಿ ಮಾಡೆಂದಿದ್ದಾನೆ. ಜ್ಞಾನವಿಲ್ಲದೆ ಅಜ್ಞಾನದಲ್ಲಿ ಯೋಗಪದ್ಧತಿ ಆಗದಂತೆ ಮಾಡೆಂದು ಹೇಳಲಿಲ್ಲ. **ನೀನು ಏನು ಮಾಡುತ್ತಿದ್ದೀಯ ಎನ್ನುವುದು ಮುಖ್ಯವಲ್ಲ, ಹೇಗೆ ಮಾಡುತ್ತಿದ್ದೀಯೆನ್ನುವುದು ಮುಖ್ಯ.** ಈ ಪ್ರಪಂಚದಲ್ಲಿ ಸಮಯಕ್ಕೆ ಸರಿಹೋಗುವ ಗುಣಗಳು ಬಳಸಿಕೊಂಡು ಕೆಲಸ ಮಾಡಿದರೂ ಪರವಾಗಿಲ್ಲ. ಆದರೆ ಅದು ಜ್ಞಾನಯುಕ್ತವಾಗಿ ಇರಬೇಕು. ಪ್ರಪಂಚದಲ್ಲಿ ಪೂರ್ತಿ ಪ್ರೇಮಭಾವನೆಯನ್ನು ತೋರಿಸಿದ ಮಹಾತ್ಮರನ್ನು ಸಹ ಈ ಮನುಷ್ಯರು ಹಿಂಸಿಸಿ ಪ್ರಾಣಗಳನ್ನು ಸಹ ತೆಗೆದಿದ್ದಾರೆ. ಎಷ್ಟೋ ಜನರನ್ನು ಸ್ವಸ್ತಪಡಿಸಿ, ಕುಷ್ಠ ರೋಗಿಗಳನ್ನು ಅಪ್ಪಿಕೊಂಡ

ಕರುಣಾಮಯನು ಎಂದು ಹೆಸರುವಾಸಿಯಾದ ಯೇಸನ್ನು ಆದಿನದ ಅಜ್ಞಾನ ಮನುಷ್ಯರು ಕುತಂತ್ರ ಮಾಡಿ ಕಾಲು ಕೈಗಳಿಗೆ ಮೊಳೆಗಳು ಹೊಡೆದು ಹಿಂಸಿಸಿ ಸಾಯಿಸಿದ್ದಾರೆ. ಅಹಿಂಸೆಯೇ ಪರಧರ್ಮವೆಂದು ಸಾರಿ ಹೇಳಿದ ಗಾಂಧೀಜಿಯನ್ನು ನಿರ್ಧಾಕ್ಷಿಣ್ಯವಾಗಿ ಬಂದೂಕಿನ ಗುಂಡುಗಳಿಗೆ ಬಲಿಕೊಟ್ಟಿದ್ದಾರೆ. ಆದ್ದರಿಂದ ಈ ಲೋಕದಲ್ಲಿ ಬದುಕಬೇಕೆಂದರೆ ಪೂರ್ತಿ ಅಹಿಂಸೆಯನ್ನು ಅನುಸರಿಸಿ ಬದುಕಲಾರೆವು. ತನ್ನನ್ನು ತಾನು ರಕ್ಷಿಸಿಕೊಳ್ಳುವು ದಕ್ಕಾದರೂ ಹಿಂಸೆಯನ್ನು ಮಾಡಬೇಕಾಗಿಬರುತ್ತದೆ.

**ರಾಘವ :–** ಬದುಕಬೇಕೆಂದರೆ ಸಮಯಾನುಕೂಲವಾಗಿ ಹಿಂಸೆಯೂ ಸಹ ಅವಶ್ಯಕವೇ ಎನ್ನುವ ಮಾತು ಅರ್ಥವಾಗಿದೆ. ಆದರೆ ಜ್ಞಾನದಿಂದ ಮಾಡಬೇಕು ಎಂದಿದ್ದೀರ. ಕರ್ಮಯೋಗ ಪದ್ಧತಿ ಪ್ರಕಾರ ಮಾಡಬೇಕು ಎಂದಿದ್ದೀರ. ಯೋಗಪದ್ಧತಿಯನ್ನು ಅನುಸರಿಸಿ ಮಾಡುವುದೆನ್ನುವುದು ನನಗೆ ಅರ್ಥವಾಗಲಿಲ್ಲ.

**ರಾಜಯೋಗಾ :–** ಯಾವನೋ ತಿಂದರೆ ನಾನು ತಿಂದಿದ್ದೇನೆಂದುಕೊಳ್ಳುವುದಿಲ್ಲ ಅಲ್ಲವೆ! ಹಾಗೇ ಯಾವನೋ ನಿದ್ರೆ ಮಾಡಿದರೆ ನಾನು ನಿದ್ರೆ ಮಾಡಿದ್ದೇನೆಂದು ಕೊಳ್ಳುವುದಿಲ್ಲ ಅಲ್ಲವೆ! ಒಂದು ವೇಳೆ ಬೇರೆಯವನು ಮಾಡಿದ ಕೆಲಸವನ್ನು ನಾನು ಮಾಡಿದ್ದೇನೆ ಎಂದುಕೊಳ್ಳುವುದು ಬುದ್ಧಿ ಇಲ್ಲದ ಕೆಲಸವೇ ಆಗುತ್ತದೆ ಅಲ್ಲವೆ! ಈಗ ಮನುಷ್ಯರೆಲ್ಲರೂ ಬುದ್ಧಿ ಇಲ್ಲದವರಂತೆ ಪ್ರವರ್ತಿಸುತ್ತಿದ್ದಾರೆ. ಹೇಗೆಂದರೆ ಶರೀರದಲ್ಲಿ ಜೀವಾತ್ಮ ನಿವಾಸಿಸುತ್ತಿದ್ದಾನೆ. ಶರೀರ ಒಟ್ಟು 24 ಭಾಗಗಳಾಗಿ ಇದೆ. ಜೀವಿಯು 25ನೆಯವನಾಗಿ ಇದ್ದಾನೆ. ಶರೀರದಲ್ಲಿ ಒಂದೊಂದು ಭಾಗ ಒಂದೊಂದು ಕೆಲಸವನ್ನು ಮಾಡುತ್ತಿವೆ. ಜೀವಿಯು ಶರೀರದಲ್ಲಿ ಕಷ್ಟಸುಖಗಳನ್ನು ಅನುಭವಿಸುವ ಕೆಲಸವನ್ನು ಮಾತ್ರ ಮಾಡುತ್ತಿದ್ದಾನೆ. ಬುದ್ಧಿ ಬೇರೆ, ಜೀವಿಯು ಬೇರೆ ಭಾಗಗಳಾಗಿ ಇದ್ದಾರೆ. ಬುದ್ಧಿ ಯೋಚಿಸುವ ಕೆಲಸವನ್ನು ಮಾಡುತ್ತದೆ. ಆದರೇ ಜೀವಿಯು ನಾನೇ ಯೋಚಿಸಿದ್ದೇನೆ ಎನ್ನುವುದು ತಪ್ಪು. ಜೀವಿಯು ತಾನು ಯೋಚಿಸದಿದ್ದರೂ ಬುದ್ಧಿ ಮಾಡಿದ ಕೆಲಸವನ್ನು ತಾನೇ ಮಾಡಿದಂತೆ ಹೇಳಿಕೊಳ್ಳುವುದು ಅಜ್ಞಾನವೇ ಆಗುತ್ತದೆ. ಅಜ್ಞಾನದಲ್ಲಿರುವ ಜೀವಿಗಳೆಲ್ಲರೂ ಶರೀರದಲ್ಲಿ ತಾವು ಮಾಡದ ಕೆಲಸಗಳೆಲ್ಲವನ್ನೂ ನಾವೇ ಮಾಡಿದ್ದೇವೆ ಎನ್ನುತ್ತಿದ್ದಾರೆ. ಹಿಂಸಾಕಾರ್ಯಗಳನ್ನು

ಶರೀರದಲ್ಲಿನ ಭಾಗಗಳು ಮಾಡಿದರೆ, ಯೋಗದಿಂದ ಕೂಡಿಕೊಂಡ ಜೀವಿಯು ನಾನು ಮಾಡಲಿಲ್ಲ ಎಂದುಕೊಳ್ಳುತ್ತಿದ್ದಾನೆ. ಜ್ಞಾನವಿಲ್ಲದ ಜೀವಿಯು ನಾನೇ ಮಾಡಿದ್ದೇನೆ ಎನ್ನುತ್ತಿದ್ದಾನೆ. ಈಗ ಅರ್ಥವಾಗಿದೆಯಾ?

**ರಾಘವ :–** ಚೆನ್ನಾಗಿ ಅರ್ಥವಾಗುವಂತೆ ಹೇಳಿದ್ದೀರ. ಒಬ್ಬರು ಮಾಡಿದರೆ ಅದನ್ನು ಮತ್ತೊಬ್ಬರು ಮಾಡಿದ್ದೇನೆನ್ನುವುದು ತಪ್ಪೇ. ಜೀವಿಯು ಆ ತಪ್ಪನ್ನು ತಿಳಿಯದೆ ಮಾಡುತ್ತಿದ್ದಾನಲ್ಲವೆ! ತಿಳಿದು ಮಾಡಿದರೆ ತಪ್ಪು ಎನ್ನಬಹುದು. ತಿಳಿಯದೆ ಮಾಡಿದರೆ ಪೊರಪಾಟು ಎನ್ನಬಹುದು. ಇಲ್ಲಿ ತಪ್ಪಿಗು ಪೊರಪಾಟಿಗೂ ವ್ಯತ್ಯಾಸವಿದೆ ಅಲ್ಲವೆ!

**ರಾಜಯೋಗಾ :–** ತಪ್ಪನ್ನೂ, ಪೊರಪಾಟನ್ನು ಬೇರೆ ಬೇರೆಯಾಗಿ ನೋಡಬೇಕೆಂದು ನೀನು ಹೇಳುತ್ತಿದ್ದೀಯ. ತಿಳಿದು ಮಾಡಿದರೂ, ತಿಳಿಯದೆ ಮಾಡಿದರೂ ತಪ್ಪು ತಪ್ಪೇ ಆಗುತ್ತದೆ. ಪೊರಪಾಟಿನಂತೆ ಲೆಕ್ಕಿಸಲ್ಪಡುವುದಿಲ್ಲವೆಂದು ನಾನು ಅನ್ನುತ್ತಿದ್ದೇನೆ. ಉದಾಹರಣೆಗೆ ಅಗ್ನಿಯನ್ನು ತಿಳಿದು ಮುಟ್ಟಿಕೊಂಡರೂ ಸುಡುತ್ತದೆ, ತಿಳಿಯದೆ ಪೊರಪಾಟಾಗಿ ಮುಟ್ಟಿಕೊಂಡರೂ ಸುಡುತ್ತದೆ.

**ರಾಘವ :–** ಅಗ್ನಿ ಸುಡುವುದಕ್ಕೆ, ತಪ್ಪು ಪೊರಪಾಟು ಎನ್ನುವ ಬೇಧ ಇಲ್ಲವೆಂದು ತಿಳಿಯುತ್ತಿದೆ. ಆದರೂ ದೇವರು ಸಹ ತಪ್ಪನ್ನೂ ಪೊರಪಾಟನ್ನೂ ಒಂದಾಗಿಯೇ ಲೆಕ್ಕಿಸಿಕೊಳ್ಳುವುದು ನ್ಯಾಯವಲ್ಲ ಅಲ್ಲವೆ! ಅನ್ಯಾಯವೇ ಆಗುತ್ತದಲ್ಲವೆ!

**ರಾಜಯೋಗಾ :–** ನೀನು ಚೆನ್ನಾಗಿ ನೆನಪಿಟ್ಟುಕೊಳ್ಳಬೇಕಾದ ವಿಷಯವೇನೆಂದರೆ! ದೇವರ ಕಾನೂನಿನಲ್ಲಿ ನ್ಯಾಯಅನ್ಯಾಯಗಳು ಇಲ್ಲ. ಅವುಗಳ ಸ್ಥಾನದಲ್ಲಿ ಧರ್ಮ, ಅಧರ್ಮ ಮಾತ್ರವೇ ಇವೆ. ನೀತಿ, ನ್ಯಾಯಗಳು ಲೋಕಸಂಬಂಧಗಳು, ಜ್ಞಾನ, ಧರ್ಮಗಳು ದೈವಸಂಬಂಧಗಳು. ದೇವರು ನಿರ್ಮಿಸಿದ ಶರೀರದಲ್ಲಿದ್ದು ದೇವರ ಕಾನೂನನ್ನು (ಧರ್ಮಗಳನ್ನು) ತಿಳಿದುಕೊಳ್ಳದಂತೆ ನನ್ನದು ಪೊರಪಾಟು ಎಂದರೆ ಹೇಗೆ? ಮುಖ್ಯವಾಗಿ ಈ ಪೊರಪಾಟು ಕೆಲಸಗಳಿಂದಲೆ ಮನುಷ್ಯನಿಗೆ ಪಾಪ ಪುಣ್ಯಗಳು ಅಂಟಿಕೊಳ್ಳುತ್ತಿವೆ. ಈ ವಿಷಯ ನನಗೆ ತಿಳಿಯದು ಎಂದು ಯಾರೂ ಅನ್ನದಂತೆ ದೇವರ ಕಾನೂನು ಗ್ರಂಥರೂಪದಲ್ಲಿ, ನಮ್ಮ ಮಧ್ಯದಲ್ಲಿ ಭಗವದ್ಗೀತೆ ರೂಪದಲ್ಲಿ ಇದ್ದರೂ, ಅದನ್ನು ನೋಡುವುದಕ್ಕೆ ನನಗೆ ತಾಳ್ಮೆ ಇಲ್ಲ, ನನಗೆ

ಸಮಯವಿಲ್ಲ, ನನಗೆ ಇಷ್ಟವಿಲ್ಲ ಎಂದು ಅನ್ನುತ್ತಾ ಎಲ್ಲಾ ತಪ್ಪುಗಳು ಮಾಡುತ್ತಾ ತಿಳಿಯದ ಪೊರಪಾಟುಗಳು ಎಂದರೆ ಹೇಗೆ? ಒಂದನ್ನಾದರೆ ಪೊರಪಾಟು ಎನ್ನಬಹುದು. ನೂರಕ್ಕೆ ನೂರು ತಪ್ಪುಗಳು ಮಾಡಿ ಪೊರಪಾಟುಗಳು ಎಂದರೆ ಹೇಗೆ? ಹಾಗೆ ಯಾರೂ ಅನ್ನದಂತೆ ಇರುವುದಕ್ಕೇ ಮನುಷ್ಯ ಹುಟ್ಟುವುದಕ್ಕಿಂತ ಮೊದಲೇ, ದೇವರು ತನ್ನ ಜ್ಞಾನವನ್ನು ಭೂಮಿಮೇಲೆ ಇಟ್ಟಿದ್ದಾನೆ. ಮನುಷ್ಯ ಮಾಡುವ ತಪ್ಪುಗಳನ್ನೂ, ಒಪ್ಪುಗಳನ್ನೂ ತಿಳಿಸುವ ನಿಮಿತ್ತ ದೇವರು ಸೃಷ್ಠಿ ಆದಿಯಲ್ಲೇ ತನ್ನ ಧರ್ಮಗಳನ್ನು ಸೂರ್ಯನ ಮುಖಾಂತರ ಭೂಮಿ ಮೇಲಕ್ಕೆ ಕಳುಹಿಸಿದ್ದಾನೆ. ದೇವರು ಅಷ್ಟು ಜಾಗ್ರತೆಯಿಂದ ನಾವು ಹುಟ್ಟುವುದಕ್ಕಿಂತ ಮೊದಲೇ ಕೆಲಸ ಕಲ್ಪಿಸಿಕೊಂಡು ನಮಗೋಸ್ಕರ ಜ್ಞಾನವನ್ನು ಹೇಳಿದರೆ, ನಾವು ಹುಟ್ಟಿದ ನಂತರ ದೇವರ ಜ್ಞಾನಕ್ಕೆ ಬೆಲೆಕೊಡದೇ ಹೋದರೆ, ನಾವು ದೇವರಿಗೇ ಬೆಲೆಕೊಡದವ ರಾಗುತ್ತೇವೆ.

**ರಾಘವ :–** ಭೂಮಿಮೇಲೆ ಕೆಲವರಿಗೆ ದೇವರ ಧರ್ಮಗಳು ಹೀಗೆ ಇವೆಯೆಂದು ಸಹ ತಿಳಿಯದಲ್ಲವೆ! ಅವರಿಗೆ ಈ ವಿಷಯ ಹೇಗೆ ತಿಳಿಯುತ್ತದೆ?

**ರಾಜಯೋಗಾ :–** ಭೂಮಿಮೇಲೆ ಪ್ರಭುತ್ವ ಕಾನೂನು ಇದ್ದಹಾಗೇ, ದೇವರ ಕಾನೂನು ಸಹ ಇದೆ. ಪ್ರಭುತ್ವ ಕಾನೂನಿನ ಪ್ರಕಾರ ಸಹ ಒಬ್ಬ ಮನುಷ್ಯ ತಾನು ಮಾಡದ ಹತ್ಯೆಯನ್ನು ಮಾಡಿದ್ದೇನೆ ಎಂದರೆ 302 ಸೆಕ್ಷನ್ ಪ್ರಕಾರ ಅವನಿಗೆ ಹತ್ಯಾ ನೇರದ ಶಿಕ್ಷೆಯನ್ನು ಖರಾರು ಮಾಡುತ್ತಾರೆ. ಜಡ್ಜಿಗೆ ಆ ವ್ಯಕ್ತಿ ಹತ್ಯೆ ಮಾಡಲಿಲ್ಲವೆಂದು ಮೊದಲೇ ತಿಳಿದರೂ, ಕೋರ್ಟಿನಲ್ಲಿ ಆತನು ನಾನೇ ಮಾಡಿದ್ದೇ ನೆಂದು ಹೇಳುವುದರಿಂದ, ಅವನನ್ನೇ ಶಿಕ್ಷಿಸಬೇಕಾದ ಕೆಲಸ ಏರ್ಪಟ್ಟಿದೆ. ಹಾಗೆಯೇ ಒಬ್ಬ ಮನುಷ್ಯ ತಾನು ಮಾಡದ ಕೆಲಸವನ್ನು ಮಾಡಿದ್ದೇನೆನ್ನುವುದರಿಂದ, ದೇವರ ಕಾನೂನಿನಲ್ಲಿನ ಸೆಕ್ಷನ್ 369 ಪ್ರಕಾರ ಶಿಕ್ಷೆ ಬೀಳುತ್ತದೆ. **ಪ್ರಪಂಚ ಪ್ರಭುತ್ವವೊಂದರ ಕಾನೂನಿನಲ್ಲಿ ಸೆಕ್ಷನ್‌ಗಳು ಎಷ್ಟೋ ಇರುವಾಗ, ದೇವರ ಕಾನೂನಿನಲ್ಲಿನ ಸೆಕ್ಷನ್‌ಗಳು ಮೂರೇ ಮೂರು ಇವೆ. ಒಂದು 369, ಎರಡನೆಯದು 666, ಮೂರನೆಯದು 963. ಇವುಗಳನ್ನು ತಿಳಿಯಬೇಕೆಂದರೆ ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಓದಬೇಕಾದ್ದೆ.**

ಈಗ ದೇವರ ಕಾನೂನಿನಲ್ಲಿನ ಸೆಕ್ಷನ್‌ಗಳನ್ನು ಕುರಿತು ಹೇಳಲಾರೆನು. ಮೊದಲು ಕಾನೂನು ತಿಳಿದುಕೊಂಡರೆ ನಂತರ ಸೆಕ್ಷನ್‌ಗಳು ತಿಳಿಯುತ್ತವೆ.

(ಅಲ್ಲೇ ಕೇಳುತ್ತಿರುವ ರಾಧೇಶ್ವರಿಗೆ ಸ್ವಾಮಿಯವರು ಹೇಳಿದ ಜ್ಞಾನ ಚೆನ್ನಾಗಿ ಅರ್ಥವಾಗಿದೆ. ಆದರೆ ಅಲ್ಲೇ ಇರುವ ಗಿರಿಜನರಿಗೆ ಸ್ವಲ್ಪವಾದರೂ ಅರ್ಥವಾಗಲಿಲ್ಲ. ನಂತರ ಗಿರಿಜನರು ಬಂದಿರುವ ವಿಷಯವನ್ನು ತಿಳಿದುಕೊಂಡ ರಾಜಯೋಗಾನಂದ ಸ್ವಾಮಿಯವರು ರಾಘವನನ್ನು ಅವರ ಹಿಂದೆ ಹೋಗಿಬಾ ಎಂದಿದ್ದಾನೆ. ಸ್ವಾಮಿ ಆಜ್ಞೆಯ ಪ್ರಕಾರ ರಾಘವ ಗಿರಿಜನರ ಹಿಂದೆ ಹೊರಟು ಅಡವಿಗೆ ಹೋಗಿದ್ದಾನೆ.)

**********************************

(ತಪಸ್ವಿ ಬಾಬಾ ಹತ್ತಿರ ಮೂರು ದಿನಗಳು ಕಾದುಕೊಂಡಿರುವ ಮುನೆಪ್ಪನಿಗೆ ನಾಲ್ಕನೆ ದಿನ ಬಾಬಾರವರ ಭೇಟಿ ಲಭಿಸಿತು. ಬಾಬಾರವರು ಕೊಟ್ಟಿರುವ ಸೆಲ್‌ಫೋನ್‌ನಂತಹ ಚಿಕ್ಕ ಮಿಷನ್ ತೆಗೆದುಕೊಂಡು ಬನಿಯನ್ ಜೇಬಿನಲ್ಲಿ ಇಟ್ಟುಕೊಂಡು ಹೊರಗೆ ಬಂದನು. ಹಾಗೆ ಹೊರಗೆ ಬಂದ ಮುನೆಪ್ಪನಿಗೆ ತಾನು ಊಹಿಸದ ರೀತಿಯಲ್ಲಿ ಪೊಲೀಸರು ಕಾಣಿಸಿದ್ದಾರೆ. ಪೊಲೀಸರು ಬಲೆಯೊಡ್ಡಿ ಮುನೆಪ್ಪಗೋಸ್ಕರವೇ ಕಾದುಕೊಂಡಿದ್ದಾರೆ. ಅದನ್ನು ಗ್ರಹಿಸಿದ ಮುನೆಪ್ಪ ತಪ್ಪಿಸಿ ಕೊಳ್ಳಬೇಕೆಂದುಕೊಂಡಿದ್ದಾನೆ, ಆದರೆ ಸಾಧ್ಯವಾಗಲಿಲ್ಲ. ದಿಕ್ಕುತೋಚದ ಸ್ಥಿತಿಯಲ್ಲಿ ಮುನೆಪ್ಪ ತನ್ನ ರಿವಾಲ್ವರ್‌ನನ್ನು ಹೊರಗೆ ತೆಗೆದು ಪೊಲೀಸ್ ಇನ್‌ಸ್ಪೆಕ್ಟರ್ ಕಾಲಿಗೆ ಗುರಿ ಇಟ್ಟು ಹೊಡೆದು, ಹಿಂತಿರುಗಿ ಬಾಬಾರವರ ಮಂದಿರದೊಳಗೇ ಓಡಿಹೋದನು. ರಿವಾಲ್ವರ್ ಹಾರಿದ ಶಬ್ದವನ್ನು ಕೇಳಿದ ತಪಸ್ವಿ ಬಾಬಾರವರು ಏನು ನಡೆದಿದೆಯೋ ಎನ್ನುವ ಗಾಬರಿಯಿಂದ ಹೊರಗೆ ಬಂದಿದ್ದಾನೆ. ಬಾಬಾರವರ ಮಂದಿರವನ್ನು ಪೊಲೀಸರು ಸುತ್ತುವರೆದು ಮುನೆಪ್ಪ ಓಡಿಹೋಗದಂತೆ ಬಂದೋಬಸ್ತು ಮಾಡಿದರು. ಅಷ್ಟರಲ್ಲಿ ಅಲ್ಲಿರುವ ಭಕ್ತರೆಲ್ಲರೂ ಗುಂಪು ಸೇರಿದರು. ಪೊಲೀಸರು ಬಾಬಾರವರ ಮಂದಿರದೊಳಗೆ ಒಂದೊಂದು ಕೊಠಡಿಯನ್ನು ಜಾಗ್ರತೆಯಿಂದ ಹುಡುಕಲು ಆರಂಭಿಸಿದರು. ತಪಸ್ವಿ ಬಾಬಾರವರ ಮಂದಿರ ರಹಸ್ಯವೆಲ್ಲವೂ ಮುನೆಪ್ಪನಿಗೆ ಚೆನ್ನಾಗಿ ಗೊತ್ತು. ಮುನೆಪ್ಪ ತಪ್ಪಿಸಿಕೊಳ್ಳುವುದಕ್ಕೆ ಬಾಬಾರವರ ಮಂದಿರದಲ್ಲಿ

ಎಲ್ಲಾ ಸೌಕರ್ಯಗಳು ಇವೆ. ಆದ್ದರಿಂದ ಮುನೆಪ್ಪ ಸಿಗುವುದಿಲ್ಲವೆಂದು ಬಾಬಾರವರಿಗೆ ತಿಳಿದಿತ್ತು. ಪೊಲೀಸರು ಮಾತ್ರ ಮಂದಿರವನ್ನು ಸುತ್ತುವರೆದು ಕಾವಲಿರುತ್ತಾ, ಕೆಲವರು ಮಂದಿರವೆಲ್ಲವೂ ಜಾಗ್ರತೆಯಿಂದ ಪರಿಶೀಲಿಸುತ್ತಿದ್ದಾರೆ. ವಿಶಾಲವಾದ ರಾಜಭವನದಂತಿರುವ ಬಾಬಾರವರ ಮಂದಿರವೆಲ್ಲವೂ ಹುಡುಕಿದ್ದಾರೆ. ಆದರೆ ಮುನೆಪ್ಪ ಕಾಣಿಸಲಿಲ್ಲ. ಬಾಬಾರವರ ಮಂದಿರದ ಮಧ್ಯದಲ್ಲಿ ಸ್ವಲ್ಪ ಮೈದಾನದಲ್ಲಿ ಸುಂದರವಾದ ಗಿಡಗಳಿಂದ ತುಂಬಿರುವ ವನವಿದೆ. ಅದರ ಮಧ್ಯದಲ್ಲಿ ಚಿಕ್ಕ ಬಾವಿಯೂ ಸಹ ಇದೆ. ಸುತ್ತಲೂ ಮಂದಿರವಿರುವಾಗ, ಮಂದಿರದಲ್ಲಿ ಇಲ್ಲದ ಮುನೆಪ್ಪ ಮಂದಿರದ ಮಧ್ಯದಲ್ಲಿರುವ ಉದ್ಯಾನವನದಲ್ಲಿ ಅಡಗಿಕೊಂಡಿರುತ್ತಾನೆಂದು ಪೊಲೀಸರು ನಿಶ್ಚಯಿಸಿಕೊಂಡರು. ಮುನೆಪ್ಪನನ್ನು ಶರಣಾಗು ಎಂದು ಮೈಕ್‌ನಲ್ಲಿ ಹೇಳಿದರು. ಹತ್ತು ನಿಮಿಷಗಳಲ್ಲಿ ಶರಣಾಗದಿದ್ದರೆ ಹುಡುಕಿ ಸುಟ್ಟುಹಾಕುತ್ತೇವೆಂದು ಸಹ ಹೇಳಿದ್ದಾರೆ. ಆದರೂ ಮುನೆಪ್ಪ ಹೊರಗೆ ಬರಲಿಲ್ಲ. ಲಾಭವಿಲ್ಲ ಎಂದುಕೊಂಡ ಯಸ್. ಪಿರವರು ಇನ್ನು ಹೆಚ್ಚಿನ ಪೊಲೀಸ್ ಬಳಗವನ್ನು ನಿಯಮಿಸಿ ಹುಡುಕಲಾರಂಭಿಸಿದರು. ಒಂದು ಅಡಿ ಜಾಗವನ್ನು ಸಹ ಬಿಡದೆ ಹುಡುಕಿದರೂ ಪೊಲೀಸರಿಗೆ ಮುನೆಪ್ಪ ಕಾಣಿಸದಂತೆ ಹೋಗುವುದು ಅವರಿಗೆ ಆಶ್ಚರ್ಯವಾಯಿತು. ಕೊನೆಗೆ ಉಳಿದಿರುವುದು, ವನದ ಮಧ್ಯದಲ್ಲಿರುವ ಬಾವಿ ಮಾತ್ರವೇ. ಆ ಬಾವಿಯೊಳಗೆ ಬಗ್ಗಿ ನೋಡಿದರು. ಸ್ವಲ್ಪ ಆಳದಲ್ಲಿ ನಿಶ್ಚಲವಾಗಿ ಕದಲದಂತೆ ನಿಂತಿರುವ ನೀರು, ಅದರಲ್ಲಿ ಮೇಲಿನಿಂದ ಬಗ್ಗಿ ನೋಡುವವರ ಪ್ರತಿಬಿಂಬ ಕಾಣಿಸುತ್ತಿದೆ. ಗಿಡಗಳಿಗೆ ನೀರು ಸರಬರಾಜುಗೋಸ್ಕರ ಜೋಡಿಸಿದ ಮೋಟರ್, ಅದರ ಪೈಪುಗಳು ನೀರಿನೊಳಗೆ ಇವೆ. ಅಷ್ಟೇ ಹೊರತು ಅಲ್ಲಿ ಏನೂ ಕಾಣಿಸಲಿಲ್ಲ. ಪೊಲೀಸರು ಎಷ್ಟು ಯೋಚಿಸಿದರೂ ಮುನೆಪ್ಪ ಎಲ್ಲಿ ತಪ್ಪಿಸಿಕೊಂಡಿದ್ದಾನೆನ್ನುವ ವಿಷಯ ಮಾತ್ರ ಅರ್ಥವಾಗಲಿಲ್ಲ. ಆಗ ಯಸ್.ಪಿರವರು ಬಾಬಾರವರ ಹತ್ತಿರಕ್ಕೆ ಬಂದು ಹೀಗೆ ಹೇಳಿದ್ದಾನೆ.)

**ಯಸ್.ಪಿ :–** ಸ್ವಾಮಿ! ಮುನೆಪ್ಪ ನಿಮ್ಮ ಮಂದಿರದೊಳಗೆ ಹೋಗಿ ಕಾಣಿಸಲಿಲ್ಲ. ನೀವೇನಾದರೂ ಹೇಳಬಲ್ಲಿರಾ?

**ಬಾಬಾ :–** ನನಗೂ ಸಹ ಆಶ್ಚರ್ಯವಾಗುತ್ತಿದೆ. ಆತನು ಇಲ್ಲೇ ಎಲ್ಲಾದರೂ ಅಡಗಿರುತ್ತಾನೆ. ಮತ್ತೊಂದು ಸಲ ಚೆನ್ನಾಗಿ ಹುಡುಕಿರಿ.

**ಯಸ್.ಪಿ :–** ನೀವು ಏನೂ ಅಂದುಕೊಳ್ಳದಿದ್ದರೆ ನಿಮ್ಮನ್ನು ಒಂದು ಮಾತು ಕೇಳುತ್ತೇನೆ.

**ಬಾಬಾ :–** ಅದರಲ್ಲಿ ತಪ್ಪೇನಿದೆ. ನಿಮಗೆ ಎಲ್ಲ ವಿಧಗಳಲ್ಲಿ ಸಹಕರಿಸುವುದೇ ನಮ್ಮ ಕೆಲಸ. ನಿಮಗೆ ಏನು ಬೇಕೋ ಕೇಳಿ.

**ಯಸ್.ಪಿ :–** ಈಗ ಓಡಿಹೋದ ಮನುಷ್ಯ ಒಬ್ಬ ಕಳ್ಳರ ಗುಂಪಿಗೆ ನಾಯಕನು. ಎಷ್ಟೋ ಅಪರಾದಗಳು ಆತನ ಮೇಲೆ ಇವೆ. ಆತನು ಏಕೆ ನಿಮ್ಮ ಮಂದಿರಕ್ಕೆ ಬಂದಿದ್ದಾನೆ.

(ಬಾಬಾರವರು ಮುಗುಳ್ನಗೆಯಿಂದ ನಕ್ಕು ಯಸ್.ಪಿ. ರವರ ಕಡೆ ನೋಡಿ ಹೀಗೆ ಹೇಳಿದ್ದಾನೆ.)

**ಬಾಬಾ :–** ಸಮಾಜದಲ್ಲಿ ಎಲ್ಲ ವಿಧಗಳ ಮನುಷ್ಯರು ನನ್ನ ಹತ್ತಿರಕ್ಕೆ ಬರುತ್ತಿರುತ್ತಾರೆ. ಅವರೆಲ್ಲರೂ ನನ್ನ ಮೇಲೆ ಭಕ್ತಿ (ವಿಶ್ವಾಸ)ದಿಂದಲೇ ಬರುತ್ತಾರೆ. ಅವರಲ್ಲಿ ನನ್ನ ಮೇಲಿರುವ ಭಕ್ತಿಯನ್ನೇ ನೋಡುತ್ತಿದ್ದೇನೆ. ಆದರೆ ಅವರು ಎಂತಹವರೆಂದು ನಾನೆಂದಿಗೂ ನೋಡಲಿಲ್ಲ. ಎಲ್ಲರಂತೆ ಆತನೂ ಸಹ ನನ್ನ ದರ್ಶನವನ್ನು ಕೋರಿದ್ದಾನೆ. ಅದೃಷ್ಟವಶಾತ್ತು ನನ್ನ ಕರೆ ಆತನಿಗೆ ಸಿಕ್ಕಿತು. ಆತನ ಸಮಸ್ಯೆಗಳು ಹೇಳಿಕೊಳ್ಳವುದಕ್ಕೆ ಬಂದಿದ್ದಾನೆ.

**ಯಸ್.ಪಿ :–** ಎಲ್ಲರಂತೆ ಎಂದರೆ ಹೇಗೆ?

**ಬಾಬಾ :–** ನಾವು ಹೊರಕ್ಕೆ ಎಲ್ಲರ ದರ್ಶನಾರ್ಥ ಬಂದಾಗ ಬಹಳ ಜನ ಅವರವರ ಸಮಸ್ಯೆಗಳನ್ನು ಪೇಪರ್ ಮೇಲೆ ಬರೆದುಕೊಂಡು ನನಗೆ ಕೊಡುತ್ತಿರುತ್ತಾರೆ. ಹತ್ತಿರ ಇರುವವರವು, ಕೈಗೆ ಸಿಕ್ಕಿರುವವು ಮಾತ್ರವೇ ನಾನು ತೆಗೆದುಕೊಂಡು ನನ್ನ ಮಂದಿರದೊಳಗೆ ಹೋದ ನಂತರ ಅವುಗಳನ್ನು ನಾನು ಮಾತ್ರವೇ ಓದುತ್ತೇನೆ. ಸಮಂಜಸವಾದ ಕೋರಿಕೆಗಳಿರುವ ಕೆಲವರನ್ನು ಕರೆದು ಮಾತನಾಡಿ ಕಳುಹಿ ಸುತ್ತಿರುತ್ತೇವೆ.

**ಯಸ್.ಪಿ :–** ಈಗ ಮಾಯವಾದವ್ಯಕ್ತಿ ಬರೆದುಕೊಟ್ಟ ಸಮಸ್ಯೆ ಏನೋ ಆ ಕಾಗದವನ್ನು ತೋರಿಸುತ್ತೀರಾ?

**ಬಾಬಾ :–** ಹಾಗೆ ಯಾವ ಕಾಗದವನ್ನು ತೋರಿಸುವುದಿಲ್ಲ. ಆ ಕಾಗದಗಳನ್ನು ಬಿಚ್ಚಿ ನೋಡುವುದು ನಾನೊಬ್ಬನೇ. ಎಷ್ಟೋ ವ್ಯಕ್ತಿಗತ ಸಮಸ್ಯೆಗಳೂ, ಕುಟುಂಬ ಸಮಸ್ಯೆಗಳು, ಆರೋಗ್ಯ ಸಮಸ್ಯೆಗಳು, ಕೊನೆಗೆ ಮಾನಾವಮಾನ ಸಮಸ್ಯೆಗಳು ಎಷ್ಟೋ ಇರುತ್ತವೆ. ನನ್ನನ್ನು ದೇವರಂತೆ ಭಾವಿಸಿಕೊಂಡು ಯಾವುದನ್ನೂ ಬಚ್ಚಿಟ್ಟುಕೊಳ್ಳದೆ ಎಲ್ಲ ಸಮಸ್ಯೆಗಳು ನನ್ನ ಬಳಿ ಹೇಳಿಕೊಂಡಿರುತ್ತಾರೆ. ಆದ್ದರಿಂದ ಅವುಗಳನ್ನು ಯಾರಿಗೂ ತೋರಿಸುವುದಿಲ್ಲ. ನಾನು ಮಾತ್ರ ನೋಡಿ ಅದರಲ್ಲಿ ಕೆಲವರನ್ನು ಮಾತ್ರ ಕರೆದು ಮಾತನಾಡಿ ಕಳುಹಿಸುವುದು ನಡೆಯುತ್ತದೆ. ಅವರು ಬರೆದುಕೊಂಡ ಕಾಗದಗಳನ್ನು ನಾನು ಓದಿದ ಕೂಡಲೇ ಸುಟ್ಟುಹಾಕುವುದು ಇಲ್ಲಿನ ಸಂಪ್ರದಾಯ. ಬರೆದುಕೊಂಡ ವಿಷಯಗಳು ಹೊರಗೆ ಹಬ್ಬಿದರೆ ಯಾರೂ ನನಗೆ ಅವರ ಸಮಸ್ಯೆಗಳು ಹೇಳಿಕೊಳ್ಳುವುದಿಲ್ಲ.

**ಯಸ್.ಪಿ :–** ಸ್ವಾಮೀ! ದಯವಿಟ್ಟು ನೀವು ನಮಗೆ ಸ್ವಲ್ಪವಾದರೂ ಸಹಕರಿಸಿರಿ. ಈಗ ಓಡಿಹೋದ ವ್ಯಕ್ತಿ ಏನು ಬರೆದಿದ್ದಾನೋ ಅದನ್ನಾದರೂ ಹೇಳಬಲ್ಲಿರಾ?

**ಬಾಬಾ :–** ಹೇಳಬಲ್ಲೆವು. ಅದೇನೂ ಮುಚ್ಚಿಡುವಂತಹ ಸಮಸ್ಯೆ ಅಲ್ಲ. ತನ್ನ ಹೆಂಡತಿಗೆ ರೋಗ ಬಂದಿದೆಯೆಂದೂ, ಆರು ತಿಂಗಳಿಂದ ಎಷ್ಟೋ ಜನ ಡಾಕ್ಟರ್‌ಗಳು ನೋಡಿದರೂ ವಾಸಿಯಾಗಲಿಲ್ಲವೆಂದು, ಅದಕ್ಕೆ ನಮ್ಮ ಕರುಣೆ ಅವಶ್ಯಕವೆಂದೂ, ನಮ್ಮ ಕೈ ವಿಭೂತಿಯಿಂದ ರೋಗ ವಾಸಿಯಾಗುತ್ತದೆನ್ನುವ ನಂಬಿಕೆ ಇದೆಯೆಂದು ಬರೆದಿದ್ದಾನೆ. ಆದ್ದರಿಂದ ಆತನಿಗೆ ವಿಭೂತಿ ಕೊಡುವುದಕ್ಕೇ ನಮ್ಮ ದರ್ಶನಕ್ಕೋಸ್ಕರ ಕರೆದಿದ್ದೇವೆ. ಆತನು ಬಂದು ಅದೇ ಸಮಸ್ಯೆ ಹೇಳಿಕೊಂಡಿದ್ದಾನೆ. ಆತನಿಗೆ ವಿಭೂತಿ ಕೊಟ್ಟು ಕಳುಹಿಸಿದ್ದೇವೆ. ನಂತರ ಹೊರಗೆ ಹೋಗಿದ್ದಾನೆ. ನಂತರ ಬಂದೂಕಿನ ಶಬ್ದ ಕೇಳಿಸಿತು. ಹೊರಗೆ ಯಾವುದೋ ಗಂದಲದ ಸಮಸ್ಯೆ ಏರ್ಪಟ್ಟಿದೆಯೆಂದು ಗಾಬರಿಯಿಂದ ನಾನು ಹೊರಗೆ ಬಂದಿದ್ದೇನೆ. ನಂತರ ವಿಷಯ ತಿಳಿಯಿತು.

(ಬಾಬಾರವರು ಯಾವುದನ್ನೂ ಎಸ್.ಪಿರವರಿಗೆ ಅವಕಾಶಕೊಡದಂತೆ ಬುದ್ಧಿವಂತಿಗೆಯಿಂದ ಮಾತನಾಡಿದನು. ಬಾಬಾರವರ ಮಾತುಗಳನ್ನು ಕೇಳಿದ ಎಸ್.ಪಿ ರವರಿಗೆ ಏನು ಮಾತನಾಡಬೇಕೋ ತೋಚಲಿಲ್ಲ. ಅಷ್ಟರಲ್ಲೇ ಬಾಬಾರವರೇ ಹೀಗೆ ಹೇಳಿದರು.)

**ಬಾಬಾ :–** ನೀವು ಇಂತಹ ಕಳ್ಳರನ್ನೂ, ಹಂತಕರನ್ನೂ ನಮ್ಮ ಮಂದಿರದವರೆಗೂ ಬರಲು ಬಿಡಬಾರದು. ಅಂತಹವರ ಮೇಲೆ ನಿಘಾವಹಿಸಿ ಹೊರಗೇ ಯಾವಾಗಲೋ ಬಂದಿಸಿರಬೇಕು. ನಮ್ಮ ಮಂದಿರದ ಹತ್ತಿರ ನೀವು ಇಷ್ಟು ಗೊಂದಲವನ್ನುಂಟು ಮಾಡುವುದರಿಂದ ನಮಗೂ ಮತ್ತು ನಮ್ಮ ಭಕ್ತರ ಮನೋಭಾವನೆಗಳಿಗೂ, ಮನಶ್ಶಾಂತಿಗೂ ಭಂಗವಾಗಿದೆ. ದೇವಾಲಯಗಳಿಗೆ ಎಲ್ಲ ವಿಧದವರು ಬಂದು ಕೋರಿಕೆಗಳು ಕೋರಿದಂತೆ, ನಮ್ಮ ಹತ್ತಿರಕ್ಕೂ ಸಹ ಎಲ್ಲ ವಿಧಗಳ ಮನುಷ್ಯರು ಅವರವರ ಕೋರಿಕೆಗಳ ನಿಮಿತ್ತ ಬರುತ್ತಿರುತ್ತಾರೆ. ಅವರು ಬರುವುದಕ್ಕೆ ನಾವು ಜವಾಬ್ದಾರರಲ್ಲ. ಈಗ ನಮ್ಮ ಆಶ್ರಮ ಪ್ರಾಂತದಲ್ಲಿ ನಡೆದ ಈ ಸಮಸ್ಯೆಗಳಿಗೆಲ್ಲ ನೀವೇ ಜವಾಬ್ದಾರರು. ನಮ್ಮ ಆಶ್ರಮ ಪ್ರಾಂತದಲ್ಲಿ ಪ್ರಶಾಂತತೆ ಇರಬೇಕು. ಆದರೆ ಗೊಂದಲ ಪರಿಸ್ಥಿತಿ ಇರಬಾರದು.

**ಎಸ್.ಪಿ :–** ಆ ಕಳ್ಳ ಇಲ್ಲಿಗೆ ಬರದಂತಿದ್ದರೆ ನಾವು ಇಲ್ಲಿಗೆ ಬರುತ್ತಿರಲಿಲ್ಲ.

**ಬಾಬಾ :–** ಅವನು ಕಳ್ಳನೋ, ರಾಜಾನೋ ನೀವು ಆಶ್ರಮದ ಹೊರಗೇ ಬಗೆಹರಿಸಿಕೊಳ್ಳಬೇಕು. ನಮ್ಮ ಆಶಯಗಳಿಗೆ ವಿರುದ್ಧವಾಗಿ ಇಲ್ಲಿ ಗೊಂದಲ ಏರ್ಪಡುವುದೇ ಅಲ್ಲದೆ ನೀವು ಅವನನ್ನು ಹಿಡಿದುಕೊಳ್ಳದೇ ಹೋಗಿದ್ದೀರ. ಅವನು ಇಲ್ಲೇ ಎಲ್ಲಾದರೂ ಅಡಗಿರುತ್ತಾನೆ. ಆ ಭಯ ಇಲ್ಲಿರುವ ನೂರಾರು ಭಕ್ತರ ಮನಸ್ಸಿನಲ್ಲಿ ನಿಂತಿರುತ್ತದೆ.

(ಕಳ್ಳ ಸಿಗಲಿಲ್ಲವೆಂದು ಬಾಧೆಪಡುತ್ತಿರುವ ಯಸ್.ಪಿರವರಿಗೆ ಹಿಡಿದು ಕೊಳ್ಳದಿರುವುದು ನಿಮ್ಮ ಅಸಮರ್ಥತೆ ಎಂದು ತಪಸ್ವಿಬಾಬಾರವರು ಹೇಳುವುದು ಮತ್ತಷ್ಟು ಬಾಧೆ ಆಯಿತು. ಬಾಬಾರವರಿಗೆ ಯಾವುದೋ ಒಂದು ಹೇಳಬೇಕಲ್ಲವೆ ಎಂದು ಹೀಗೆ ಹೇಳಿದ್ದಾನೆ.)

**ಯಸ್.ಪಿ :–** ಸ್ವಾಮೀ! ನೀವು ಯಾರು ಭಯಪಡಬೇಕಾದ ಕೆಲಸವಿಲ್ಲ. ನಮ್ಮ ಪೊಲೀಸರ ಬಂದೋಬಸ್ತುನಿಂದ ಇಲ್ಲೇ ಇರುತ್ತಾರೆ.

**ಬಾಬಾ :–** ಬೇಡಯ್ಯಾ! ಬೇಡ. ಹಾಗಿದ್ದರೆ ಇತ್ತ ಪೊಲೀಸರು ಗುಂಡು ಹಾರಿಸುತ್ತಾರೇನೋ ಎಂದು, ಅತ್ತ ಅವನು ಗುಂಡು ಹಾರಿಸುತ್ತಾನೋ ಎಂದು ನಮ್ಮ ಭಕ್ತರು ಭಯಪಡುತ್ತಾ ಅವರ ಮನಸ್ಸು ಹಾಳು ಮಾಡಿಕೊಳ್ಳುತ್ತಾರೆ. ನೀವು ಆಶ್ರಮದ ಹೊರಗೆ ಕಾವಲು ಇರಿ. ಒಳಗೆ ಮಾತ್ರ ಬೇಡ.

(ಅದಕ್ಕೆ ಎಸ್.ಪಿ ರವರು ಸರಿ ಎನ್ನುವಂತೆ ತಲೆಯಾಡಿಸಿ ಆಶ್ರಮದ ಹೊರಗೆ ಪೊಲೀಸರನ್ನು ಕಾವಲಿಟ್ಟು ಹೊರಟು ಹೋಗಿದ್ದಾನೆ. ತನ್ನ ಆಫೀಸ್‌ಗೆ ಹೋದ ಯಸ್.ಪಿರವರ ತಲೆಯಲ್ಲಿ ಅನೇಕ ಆಲೋಚನೆಗಳು ತರಂಗಗಳ ಹಾಗೆ ಬರುತ್ತಿವೆ. ಮುನೆಪ್ಪ ಬಾಬಾರವರ ಮಂದಿರದೊಳಗೇ ಮಾಯವಾಗುವುದು ಬಹಳ ವಿಚಿತ್ರ. ಹಾಗೆ ಮಾಯವಾಗುವುದಕ್ಕೆ ಮೊದಲೇ ಏನಾದರೂ ಏರ್ಪಾಟನ್ನು ಮಾಡಿರುತ್ತಾರೆನ್ನುವ ಯೋಚನೆ ಯಸ್. ಪಿರವರಿಗೆ ಬಂದಿದೆ. ಕೂಡಲೇ ವಯರ್‌ಲೆಸ್‌ನಿಂದ ಆಶ್ರಮದ ಹತ್ತಿರವಿರುವ ಇನ್‌ಸ್ಪೆಕ್ಟರ್‌ಗಳಿಗೆ ಆಶ್ರಮದೊಳಗೆ ಬರುವವರನ್ನು, ಹೋಗುವವರನ್ನು ಚೆಕ್‌ಮಾಡಿ ಕಳುಹಿಸಿರೆಂದು ಅಷ್ಟೇ ಅಲ್ಲದೆ ಮುನೆಪ್ಪ ಒಳಗೇ ಅಡಗಿದ್ದಾನೆಂದೂ, ಒಳಗಿನಿಂದ ಮುನೆಪ್ಪ ಹೊರಕ್ಕೆ ಮಾರುವೇಷ ದಲ್ಲಿ ಬರಬಹುದೆಂದೂ, ಜಾಗ್ರತೆಯಿಂದ ಕಾವಲಿರಬೇಕೆಂದು ಸಮಾಚಾರವನ್ನು ಕಳುಹಿಸಿದ್ದಾನೆ. ಹಾಗೇ ಪೊಲೀಸರು ಹುಷಾರಿನಿಂದ ಕಾವಲು ಕಾಯುತ್ತಿದ್ದಾರೆ.

ಹಿಡಿಯಲು ಹೋದ ಪೊಲೀಸರಿಂದ ತಪ್ಪಿಸಿಕೊಳ್ಳುವುದು ಮುನೆಪ್ಪನಿಗೆ ಗಂಡಾಂತರ ಕಳೆದಂತಾಯಿತು. ತಾನು ಬಾವಿಯಲ್ಲಿ ಅಡಗಿಕೊಂಡಂತೆ ಬಾಬಾಗೆ ಹೊರತು ಯಾರಿಗೂ ತಿಳಿಯದು. ಸ್ವಾಮಿ ತನ್ನನ್ನು ಹೊರಗೆ ಬರುವಂತೆ ಸಮಾಚಾರ ತಿಳಿಸುವವರೆಗು ಬಾವಿಯಿಂದ ಹೊರಗೆ ಬರಬಾರದೆಂದುಕೊಂಡಿದ್ದಾನೆ. ಬಾವಿಯಲ್ಲಿ ಪೂರ್ತಿ ಮುಳುಗಿ ನೀರಲ್ಲಿ ಇದ್ದರೂ ಉಸಿರಾಡುವಂತೆ ಮತ್ತು ಹೊರಗಿನ ಸಮಾಚಾರ ತಿಳಿಯುವಂತೆ ಆಕ್ಸಿಜನ್ ಪೈಪು, ವಾಟರ್‌ಪ್ರೂಫ್ ಫೋನ್ ಎರಡೂ ಇರುವ ಫೇಸ್‌ಮಾಸ್ಕ್ (ತಲೆಗೆ ಹಾಕಿಕೊಳ್ಳುವುದು) ನೀರಿನ ಮೋಟರ್‌ನಿಂದ

ಬರುವ ಪೈಪು ಮುಖಾಂತರ ಬಾವಿಯಲ್ಲಿ ಏರ್ಪಾಟನ್ನು ಮಾಡಿ ಇಟ್ಟಿರುವುದಕ್ಕೆ ಬಾಬಾರವರಿಗೆ ಮುನೆಪ್ಪ ಮನಸ್ಸಿನಲ್ಲೇ ಕೃತಜ್ಞತೆಗಳನ್ನು ಹೇಳಿಕೊಂಡನು. ರಾತ್ರಿ ಸಮಯದ ವರೆಗು ಮುನೆಪ್ಪ ಬಾವಿಯೊಳಗೆ ತಾಳ್ಮೆಯಿಂದ ಇದ್ದನು. ರಾತ್ರಿ ಹನ್ನೊಂದು ಗಂಟೆಗಳ ಸಮಯದಲ್ಲಿ ಮುನೆಪ್ಪ ಕಿವಿಗಳಿಗೆ ಹಾಕಿಕೊಂಡ ರಿಸೀವರ್‌ಗಳಿಂದ ತಪಸ್ವಿ ಬಾಬಾರವರ ಧ್ವನಿ ಕೇಳಿಸಿತು.)

**ಬಾಬಾ :–** ಹಲೋ! ಮುನೆಪ್ಪ

**ಮುನೆಪ್ಪ :–** ಹಲೋ! ಹೇಳಿ ಸ್ವಾಮಿ.

**ಬಾಬಾ :–** ಹೇಳುವುದೆಲ್ಲಾ ಜಾಗ್ರತೆಯಿಂದ ಕೇಳು. ನೀನು ಸರಿಯಾಗಿ ಹತ್ತು ನಿಮಿಷಗಳಿಗೆ ಹೊರಗೆ ಬಾ. ಹೊರಗೆ ಬಂದ ಕೂಡಲೇ ಬಾವಿ ಪಕ್ಕದಲ್ಲೇ ಬಿದ್ದಿರುವ ಟವಲಿಂದ ನೀರಿಲ್ಲದಂತೆ ಶರೀರವೆಲ್ಲಾ ಹೊರೆಸಿಕೋ. ನಿನ್ನ ಬಟ್ಟೆಗಳು ಬಿಟ್ಟು ನೀರು ಸೋರದಂತೆ ಹಿಂಡಿಕೋ. ಅಲ್ಲೇ ಇರುವ ಬೇರೆ ಬಟ್ಟೆಗಳು ಧರಿಸು. ನಿನ್ನ ಬಟ್ಟೆಗಳು ತೆಗೆದುಕೊಂಡು ಟವಲನ್ನು ಭುಜದ ಮೇಲೆ ಹಾಕಿಕೊಂಡು ಬಲಗಡೆ ಮಂದಿರದೊಳಗೆ ಪ್ರವೇಶಿಸು. ಮಂದಿರಕ್ಕೆ ಬಲಗಡೆಗೆ ಇರುವ ಹೊರಾಂಡ ಹತ್ತಿರ ಬ್ಯಾನೆಟ್ ಎತ್ತಿ ನಿಂತಿರುವ ಜೀಪ್ ಇರುತ್ತದೆ. ಜೀಪ್ ಕೆಳಗೆ ಡ್ರೈವರ್ ಮಲಗಿಕೊಂಡು ಏನೋ ರಿಪೇರಿ ಮಾಡಿದಂತಿರುತ್ತದೆ. ನೀನು ಆ ಜೀಪ್ ಹತ್ತಿರಕ್ಕೆ ಹೋಗಿ ಟವಲನ್ನು ತಲೆಗೆ ಸುತ್ತಿಕೊಂಡು ಇಂಜನ್‌ಗೆ ಬಲಗಡೆ ಮನುಷ್ಯ ಬಗ್ಗಿ ಕಾಲು ಮುಂದಕ್ಕೆ ಇಟ್ಟುಕೊಳ್ಳುವುದಕ್ಕೆ ಜಾಗ ಇದೆ. ಅಲ್ಲಿ ನೀನು ಮೊದಲು ಕುಳಿತುಕೊಂಡು ಕಾಲು ಮುಂದಕ್ಕೆ ಚಾಚಿ ಇಟ್ಟುಕೊಂಡು ಬಗ್ಗಿರು, ಅಷ್ಟರಲ್ಲಿ ನಿನ್ನನ್ನೇ ಗಮನಿಸುತ್ತಿರುವ ಡ್ರೈವರ್ ಬಂದು ಬ್ಯಾನೆಟ್‌ನ್ನು ಮುಚ್ಚಿ ಜೀಪನ್ನು ಸ್ಟಾರ್ಟ್ ಮಾಡಿ ಹೊರಟು ಹೋಗುತ್ತಾನೆ. ಆಶ್ರಮದ ಹೊರಗೆ ಪೊಲೀಸರು ಜೀಪನ್ನು ನಿಲ್ಲಿಸಿ ಚೆಕ್ ಮಾಡುತ್ತಾರೆ. ಅವರಿಗೆ ಇಂಜನ್ ಮುಂದೆ ಅನುಮಾನ ಬರುವುದಿಲ್ಲ. ಆದ್ದರಿಂದ ಅವರ ದೃಷ್ಠಿಯಿಂದ ನೀನು ತಪ್ಪಿಸಿಕೊಳ್ಳಬಹುದು. ಪೊಲೀಸರಿಗೆ ನಾನು ಹಾಕಿದ ಪ್ಲಾನ್ ಮೇಲೆ ಅನುಮಾನ ಬರುವುದಿಲ್ಲ. ಆದ್ದರಿಂದ ನೀನು ಸುಲಭವಾಗಿ ಹೊರ ಬೀಳಬಹುದು. ಅಲ್ಲಿಂದ ಸ್ವಲ್ಪ ದೂರದವರೆಗು ಹತ್ತು ನಿಮಿಷಗಳಲ್ಲಿ ಹೋಗಿ

ಜೀಪು ನಿಲ್ಲುತ್ತದೆ. ಡ್ರೈವರ್ ಬ್ಯಾನೆಟ್‌ಲಾಕ್‌ಕ್ಲಿಪ್‌ಗಳು ತೆಗೆದು ಬ್ಯಾನೆಟ್ ಎತ್ತುತ್ತಾನೆ. ಕೂಡಲೇ ನೀನು ಹೊರಗೆ ಬಂದು ಅಲ್ಲೇ ನಿಂತಿರುವ ಕಾರನ್ನು ಹತ್ತು. ಕಾರು ಹತ್ತುವುದಕ್ಕಿಂತ ಮೊದಲು ನಿನ್ನ ಹಿಂದೆ ಇರುವ ನಿನ್ನ ಬಟ್ಟೆಗಳು ರಸ್ತೆ ಪಕ್ಕದಲ್ಲಿ ಹಾಕಿ ಕಾರು ಹತ್ತಿ ಕುಳಿತ ಕೂಡಲೇ ಕಾರು ಹೊರಟುಹೋಗುತ್ತದೆ. ಆ ಕಾರು ನಿನ್ನ ಸ್ಥಾವರಕ್ಕೆ ಐದು ಕಿಲೋಮೀಟರ್‌ಗಳ ದೂರದಲ್ಲೇ ನಿಂತುಹೋಗುತ್ತದೆ. ಅಲ್ಲಿ ಇಳಿದ ಕೂಡಲೆ ಒಂದು ಮೋಟರ್ ಸೈಕಲ್ ಬಂದು ನಿಂತು ಲಿಫ್ಟು ಬೇಕಾ ಎನ್ನುತ್ತಾರೆ. ಹೌದು ಅನ್ನು, ಆಗ ಆ ಸೈಕಲ್ ಮೋಟರ್‌ನಿಂದ ಬಂದಿರುವ ವ್ಯಕ್ತಿ ಅದನ್ನು ನಿನಗೇ ಕೊಟ್ಟು ಕಾರಲ್ಲಿ ಹೋಗುತ್ತಾನೆ. ಆಗ ಹತ್ತಿರದಲ್ಲಿರುವ ನಿನ್ನ ಸ್ಥಾವರಕ್ಕೆ ಸುಲಭವಾಗಿ ಸೇರಿಹೋಗುತ್ತೀಯ. ನೀನು ಹೋದ ನಂತರ ನಿನಗೆ ಕೊಟ್ಟಿರುವ ಸೆನ್ಸಾರ್ ಸಹಾಯದಿಂದ ಹಾವಿನ ಅನ್ವೇಷಣೆ ಸಾಗಿಸಿರಿ. ಈಗ ನಿನ್ನನ್ನು ಪೊಲೀಸರು ಕಂಡುಕೊಂಡಿದ್ದಾರೆ. ಆದ್ದರಿಂದ ಇನ್ಮುಂದೆ ನೀನು ಇಲ್ಲಿಗೆ ಬರಬೇಡ. ಅವಶ್ಯವಿದ್ದರೆ ನಿನ್ನ ಅನುಚರರನ್ನು ಕಳುಹಿಸು. ಹೇಳುವುದೆಲ್ಲಾ ಅರ್ಥವಾಗಿದೆಯಾ.

**ಮುನೆಪ್ಪ :–** ಅರ್ಥವಾಗಿದೆ ಸ್ವಾಮಿ! ನೀವು ಹೇಳಿದಂತೆ ಎಲ್ಲಾ ನಡೆಯುತ್ತವೆ.

(ತಪಸ್ವಿ ಬಾಬಾರವರು ಹೇಳಿದಂತೆ ಮುನೆಪ್ಪ ಬಾವಿಯಿಂದ ಹೊರಗೆ ಬಂದು ಬಾಬಾರವರು ಹೇಳಿದಂತೆ ನೀರನ್ನು ಹೊರೆಸಿಕೊಂಡು, ತನ್ನ ಬಟ್ಟೆಗಳನ್ನು ಬಿಚ್ಚಿ ಹಿಂಡಿಕೊಂಡು ಅಲ್ಲೇ ಇರುವ ಬಟ್ಟೆಗಳನ್ನು ಧರಿಸಿ ಬಲಗಡೆ ಮಂದಿರದಿಂದ, ಬಲಗಡೆ ಹೊರಾಂಡದ ಹತ್ತಿರ ಇರುವ ಜೀಪಿನಲ್ಲಿ ಇಂಜನ್ ಪಕ್ಕದಲ್ಲಿ ಅಡಗಿ ಕುಳಿತುಕೊಂಡಿದ್ದಾನೆ. ಆ ಜೀಪು ಹೊರಟುಹೋಯಿತು. ಹೊರಗೆ ಪೊಲೀಸರು ನಿಲ್ಲಿಸಿ ತನಿಖೆ ಮಾಡುವುದಕ್ಕೆ ಪ್ರಾರಂಭಿಸಿ ಡ್ರೈವರ್‌ನನ್ನು ಹೀಗೆ ಪ್ರಶ್ನಿಸಿದರು.)

**ಪೊಲೀಸ್ :–** ಎಲ್ಲಿಗೆ ಹೋಗುತ್ತದೆ?

**ಡ್ರೈವರ್ :–** ಅರ್ಧಗಂಟೆ ಕೆಳಗೆ ಅಲ್ಲಸಾರ್ ಒಳಗೆ ಹೋಗಿದ್ದೇವೆ. ಆಗ ನೀವು ನೋಡಿದ್ದೀರಲ್ಲ! ನನ್ನ ಜೀಪ್‌ನಲ್ಲಿ ಬಂದಿರುವವರನ್ನು ಇಳಿಸಿ ಪುನಃ ಖಾಲಿಯಾಗಿ ಹೋಗುತ್ತಿದ್ದೇನೆ.

**ಪೋಲೀಸ್ :–** ಇದು ಅರ್ಧಗಂಟೆ ಕೆಳಗೆ ಬಂದಿರುವ ಗಾಡಿ ಅಲ್ಲವೆ! ಗುಂಟೂರಿನಿಂದ ಬಂದಿದ್ದೇವೆಂದು ಹೇಳಿದ್ದೀಯಲ್ಲ!

**ಡ್ರೈವರ್ :–** ಹೌದು ಸಾರ್! ಬಂದಿರುವವರು ತಿಂಗಳವರೆಗು ಇಲ್ಲೇ ಇರುತ್ತಾರೆ. ತಿಂಗಳ ನಂತರ ನಾನೇ ಬಂದು ಅವರನ್ನು ಕರೆದುಕೊಂಡು ಹೋಗುತ್ತೇನೆ. ಇದು ಬಾಡಿಗೆ ಗಾಡಿ ಆದ್ದರಿಂದ ಪುನಃ ಹೋಗುತ್ತಿದ್ದೇನೆ.

**ಪೋಲೀಸ್ :–** ಸರಿ ಹೋಗು.

**ಡ್ರೈವರ್ :–** ನಮಸ್ತೇ! ಬರ್ತೀನಿ ಸಾರ್.

(ಜೀಪು ಹೊರಟು ಹೋಯಿತು. ಪೊಲೀಸರ ಕಣ್ಣಿಂದ ತಪ್ಪಿಸಿ ಕೊಂಡಿರುವು ದಕ್ಕೆ ಮುನೆಪ್ಪ ಸಂತೋಷಿಸಿದನು. ಅಲ್ಲಿಂದ ಹತ್ತು ನಿಮಿಷಗಳು ಹೋಗುತ್ತಲೇ ಜೀಪು ನಿಂತಿತು. ಡ್ರೈವರ್ ಬ್ಯಾನೆಟ್ ಎತ್ತಿದನು. ಆಗ ಮುನೆಪ್ಪ ತನ್ನ ಬಟ್ಟೆಗಳನ್ನು ರಸ್ತೆ ಪಕ್ಕದಲ್ಲಿ ಹಾಕಿ ಪಕ್ಕದಲ್ಲೇ ನಿಂತಿರುವ ಕಾರಿನಲ್ಲಿ ಹತ್ತಿದನು. ಮುನೆಪ್ಪ ಹತ್ತಿದಕೂಡಲೆ ಕಾರು ಹೊರಟು ಹೋಯಿತು. ಬೆಳಗಾಗುವುದರೊಳಗೆ ಒಂದು ಕಡೆ ನಿಂತಿತು. ಮುನೆಪ್ಪ ಇಳಿದು ಮೂತ್ರವಿಸರ್ಜನೆ ಮಾಡುವುದರಲ್ಲೇ ಅಲ್ಲಿಗೆ ಒಂದು ಸೈಕಲ್‌ಮೋಟಾರ್ ಬಂದು ನಿಂತು ಲಿಫ್ಟು ಬೇಕಾ ಎಂದಿದ್ದಾನೆ. ಆಗ ಹೌದು ಎಂದನು ಮುನೆಪ್ಪ. ಕೂಡಲೇ ಮುನೆಪ್ಪನಿಗೆ ಗಾಡಿ ಕೊಟ್ಟು ಬಂದಿರುವ ವ್ಯಕ್ತಿ ಕಾರಲ್ಲಿ ಹೋದನು. ಮುನೆಪ್ಪ ಮೋಟರ್ ಸೈಕಲ್‌ನಲ್ಲಿ ಬೆಳಗಾಗುವ ಮೊದಲೇ ಸ್ಥಾವರವನ್ನು ಸೇರಿಕೊಂಡಿದ್ದಾನೆ.

ಆ ರಾತ್ರಿ ಬೆಳಗಿನ ಜಾವ ನಾಲ್ಕು ಗಂಟೆಗಳಿಗೆ ಯಸ್.ಪಿರವರ ಆದೇಶದ ಮೇರೆಗೆ ಮದ್ರಾಸ್ (ಚೆನ್ನೈ) ನಿಂದ ಪೊಲೀಸ್ ನಾಯಿಗಳು ಬಂದಿವೆ. ಬೆಳಗಾದ ನಂತರ ಆರುಗಂಟೆಗೇ ಯಸ್.ಪಿರವರು ನಾಯಿಗಳೊಂದಿಗೆ ಸಹ ಬಾಬಾರವರ ಆಶ್ರಮಕ್ಕೆ ಬಂದಿದ್ದಾನೆ. ಬಾಬಾರವರ ಅನುಮತಿ ತೆಗೆದುಕೊಂಡು ಮುನೆಪ್ಪ ಓಡಿಹೋದ ಹೆಜ್ಜೆಗಳ ವಾಸನೆಯನ್ನು ನಾಯಿಗಳಿಗೆ ತೋರಿಸಿದ್ದಾರೆ. ಆ ನಾಯಿಗಳು ವಾಸನೆ ನೋಡುತ್ತಾ ಮಂದಿರಕ್ಕೆ ನಂತರ ಒಳಗಿನ ವನದೊಳಗೆ ಹೋದವು. ಆದರೆ ಬಾವಿ ಹತ್ತಿರಕ್ಕೆ ಹೋಗದಂತೆ ತಿರುಗಿ ಹೊರಗೆ ಬಂದವು. ಬಲಗಡೆ

ಹೊರಾಂಡ ಹತ್ತಿರಕ್ಕೆ ಬಂದು ನಿಂತುಕೊಂಡವು. ಏನೂ ಅರ್ಥವಾಗದ ಪೊಲೀಸರು ನಾಯಿಗಳನ್ನು ಪುನಃ ವ್ಯಾನ್‌ನಲ್ಲಿ ತೆಗೆದುಕೊಂಡು ಹೋಗುತ್ತಿರುವಾಗ ಮುನೆಪ್ಪ ಬಟ್ಟೆಗಳು ಬಿದ್ದಿರುವ ಸ್ಥಳದ ಹತ್ತಿರಕ್ಕೆ ವ್ಯಾನ್ ಸೇರಿಕೊಳ್ಳುತ್ತಿದ್ದಂತೆ ನಾಯಿಗಳು ಬೊಗಳಿ ಕೆಳಗೆ ಇಳಿಯಬೇಕೆಂದು ನೋಡಿದವು. ಅದನ್ನು ಗ್ರಹಿಸಿದ ಪೊಲೀಸರು ಕೂಡಲೇ ವ್ಯಾನ್‌ನನ್ನು ನಿಲ್ಲಿಸಿ ನಾಯಿಗಳನ್ನು ಕೆಳಗೆ ಇಳಿಸಿದಾಗ, ಅವು ನೇರವಾಗಿ ಹೋಗಿ ರಸ್ತೆ  ಪಕ್ಕದಲ್ಲೇ ಮುನೆಪ್ಪ ಬಟ್ಟೆಗಳನ್ನು ಹಿಡಿದುಕೊಂಡವು. ಪೊಲೀಸರು ಆ ಬಟ್ಟೆಗಳನ್ನು ಸ್ವಾಧೀನ ಮಾಡಿಕೊಂಡು, ಅವು ತಾವು ಹಿಂಬಾಲಿಸಿದಾಗ ಮುನೆಪ್ಪ ಧರಿಸಿದ ಬಟ್ಟೆಗಳೆಂದು ನಿರ್ಧಾರಿಸಿಕೊಂಡಿದ್ದಾರೆ. ಇನ್‌ಸ್ಪೆಕ್ಟರ್ ಆ ಸಮಾಚಾರವನ್ನು ಯಸ್.ಪಿರವರಿಗೆ ತಿಳಿಸಿದ್ದಾನೆ. ಆದರೆ ಯಸ್.ಪಿರವರು ಮುನೆಪ್ಪ ಓಡಿಹೋದಂತೆ ನಂಬಲಿಲ್ಲ. ಆಗ ಇನ್‌ಸ್ಪೆಕ್ಟರ್‌ನೊಂದಿಗೆ ಹೀಗೆ ಹೇಳಿದ್ದಾನೆ.

**ಯಸ್.ಪಿ :–** ಮುನೆಪ್ಪ ಮಂದಿರದೊಳಗೆ ಓಡಿಹೋಗುವುದನ್ನು ಕಣ್ಣಾರೆ ನೋಡಿದ್ದೇವೆ. ಆತನು ಹೊರಬರುವುದಕ್ಕೆ ಅವಕಾಶವಿಲ್ಲದಂತೆ ಸುತ್ತಲೂ ಕಾವಲಿದ್ದೇವೆ. ಬಂದು ಹೋಗುವವರನ್ನು ತನಿಖೆ ಮಾಡುತ್ತಿದ್ದೇವೆ. ಆದರೆ ಬಟ್ಟೆಗಳು ಮಾತ್ರ ಹೊರಗೆ ಕಾಣಿಸುವುದು ಮುನೆಪ್ಪ ಓಡಿಹೋದಂತೆ ನಮ್ಮನ್ನು ನಂಬಿಸುವುದಕ್ಕೆ ಹಾಕಿದ ಪ್ಲಾನ್ ಹೊರತು ಬೇರೆ ಅಲ್ಲ.

**ಇನ್‌ಸ್ಪೆಕ್ಟರ್ :–** ಹಾಗೆನ್ನುತ್ತೀರಾ ಸಾರ್!

**ಯಸ್.ಪಿ :–** ಹೌದು. ಬಟ್ಟೆಗಳು ಸಹ ನಿಮ್ಮ ಅಜಾಗ್ರತೆಯಿಂದಲೇ ಹೊರಗೆ ಬಂದಿವೆ. ರಾತ್ರಿ ಅನುಮಾನಾಸ್ಪದ ವಾಹನ ಯಾವುದಾದರೂ ಹೊರಗೆ ಹೋಗಿದೆಯಾ?

**ಇನ್‌ಸ್ಪೆಕ್ಟರ್ :–** ರಾತ್ರಿ ಹನ್ನೊಂದು ಗಂಟೆಗಳ ಸಮಯದಲ್ಲಿ ಒಂದು ಜೀಪ್ ಹೋಗಿದೆ. ಅದನ್ನು ಚೆನ್ನಾಗಿ ಚೆಕ್ ಮಾಡಿ ಕಳುಹಿಸಿದ್ದೇವೆ. ಅದು ಅದಕ್ಕು ಮೊದಲೇ ಗುಂಟೂರಿನಿಂದ ಬಾಡಿಗೆಗೆ ಮನುಷ್ಯರನ್ನು ಕರೆದುಕೊಂಡು ಬಂದು ಬಿಟ್ಟು ಹೊರಟು ಹೋಗಿದೆ. ಅದು ಬಂದಾಗ ಹತ್ತು ಜನ ಭಕ್ತರೊಂದಿಗೆ ಬಂದಿದೆ.

ಹೋಗುವಾಗ ಖಾಲಿಯಾಗಿ ಹೋಗಿದೆ. ಅದು ಹತ್ತುವರೆ ಸಮಯದಲ್ಲಿ ಒಳಗೆ ಹೋಗಿದೆ. ಒಳಗೇ ಊಟಮಾಡಿದ ನಂತರ ಅದು ಖಾಲಿಯಾಗಿ ಹೋಯಿತು. ಬಂದ ಅರ್ಧಗಂಟೆಯೊಳಗೇ ಮತ್ತೆ ಹೊರಟು ಹೋಯಿತು. ಅದರಲ್ಲಿ ಡ್ರೈವರ್ ಹೊರತು ಯಾವ ಲಗೇಜು ಇರಲಿಲ್ಲ. ಜೀಪು ಖಾಲಿಯಾಗಿಯೇ ಹೋಗಿದೆ. ಅಷ್ಟು ಹೊರತು ರಾತ್ರಿ ಎಲ್ಲಾ ಯಾವುದೂ ಒಳಗೆ ಬರಲಿಲ್ಲ. ಹೊರಗು ಸಹ ಹೋಗಲಿಲ್ಲ.

**ಯಸ್.ಪಿ :–** ಹಾಗಾ! ಆದರೆ ಆ ಜೀಪ್‌ನಲ್ಲೇ ಮುನೆಪ್ಪನ ಬಟ್ಟೆಗಳು ರಹಸ್ಯವಾಗಿ ಹೋಗಿರುತ್ತವೆ. ಇದು ನಮ್ಮನ್ನು ತಪ್ಪುದಾರಿ ಹಿಡಿಸುವುದಕ್ಕೆ ಹಾಕಿದ ಪ್ಲಾನ್. ಮುನೆಪ್ಪ ಬಟ್ಟೆಗಳು ಹೊರಗೆ ಹೋದಷ್ಟು ಮಾತ್ರಕ್ಕೆ ಮುನೆಪ್ಪ ಹೊರಗೆ ಹೋಗಿದ್ದಾನೆಂದು ನಾವು ನಂಬಬಾರದು.

**ಇನ್‌ಸ್ಪೆಕ್ಟರ್ :–** ಈಗೇನು ಮಾಡಬೇಕು ಸಾರ್!

**ಯಸ್.ಪಿ :–** ನೀವು ತಪಸ್ವಿಬಾಬಾರವರ ಹತ್ತಿರಕ್ಕೆ ಹೋಗಿ ಮುನೆಪ್ಪ ಓಡಿಹೋದಂತೆ ಹೇಳಿ. ಅದರಿಂದ ನಾವು ಪೂರ್ತಿ ನಂಬಿದಂತೆ ಅವರಿಗೆ ತಿಳಿಯುತ್ತದೆ. ಕಾಯುವುದು ಸಹ ಎತ್ತಿ ಹಾಕಿ ರಹಸ್ಯವಾಗಿ ನಿಘಾ ಇಡಿ. ಕಾವಲು ಇಲ್ಲವೆಂದು ಮುನೆಪ್ಪ ಸುಲಭವಾಗಿ ಹೊರಗೆ ಬರಬಲ್ಲನು. ನಾವು ನಿಘಾ ಇಟ್ಟಿರುವಂತೆ ಆತನಿಗೆ ತಿಳಿಯದು. ಆದ್ದರಿಂದ ಸುಲಭವಾಗಿ ಸಿಗುತ್ತಾನೆ.

***********************************

(ರಾಘವ, ಯೋಗ, ಮೇಘ, ಚಕ್ರಿ ಮೊದಲಾದ ಗಿರಿಜನರು ಅಡವಿ ಮಾರ್ಗದಲ್ಲಿ ಪ್ರಯಾಣಿಸಿ ಕೊನೆಗೆ ತಮ್ಮ ಹಟ್ಟಿಯನ್ನು ಸೇರಿಕೊಂಡರು. ರಾಘವನನ್ನು ಕರೆದುಕೊಂಡು ಬಂದಿರುವುದಕ್ಕೆ ನಾಯಕ ಮಲ್ಲುದೊರೆ ಸಂತೋಷಪಟ್ಟನು. ಆ ದಿನ ರಾಘವ ವಿಶ್ರಾಂತಿ ತೆಗೆದುಕೊಂಡ ನಂತರ ಮರುದಿನ ಮಲ್ಲುದೊರೆ ರಾಘವನನ್ನು ಕರೆದು ಹೀಗೆ ಹೇಳಿದ್ದಾನೆ.)

**ಮಲ್ಲುದೊರೆ :–** ರಾಘವಾ! ನಿನ್ನನ್ನು ನೋಡಿದಾಗಿನಿಂದ ನಿನ್ನಲ್ಲಿ ಯಾವುದೋ ದೊಡ್ಡತನ ಇದೆಯೆಂದು ನನಗೆ ಅನಿಸುತ್ತಿದೆ. ನಿನ್ನನ್ನು ನೋಡಿದ್ದು ಒಂದು ದಿನವೇ ಆದರೂ, ಆ ದಿನದಿಂದ ನನ್ನ ಮನಸೆಲ್ಲಾ ನಿನ್ನ ಮೇಲೆಯೇ ಇದೆ. ಆದ್ದರಿಂದಲೇ ನಮ್ಮ ಮನುಷ್ಯರನ್ನು ನಿನಗೋಸ್ಕರ ಕಳುಹಿಸಿದ್ದೇನೆ. ಮುಖ್ಯವಾಗಿ ನಾನು ನಿನಗೆ ಒಂದು ವಿಷಯವನ್ನು ಹೇಳಬೇಕು. ನನಗೆ ಒಬ್ಬಳೇ ಒಬ್ಬಳು ಮಗಳಿದ್ದಾಳೆ. ನಾವು ಅಡವಿಯಲ್ಲಿದ್ದರೂ ಆಕೆಯನ್ನು ಪಟ್ಟಣದಲ್ಲಿ ಉನ್ನತ ವಿದ್ಯಾಭ್ಯಾಸವನ್ನೇ ಮಾಡಿಸಿದ್ದೇವೆ. ಆಕೆಗೆ ಯುಕ್ತವಯಸ್ಸು ಬಂದಿದೆ. ಆಕೆಯೂ ಸಹ ಬುದ್ಧಿವಂತಳು. ಆಕೆ ಓದಿರುವವಳು ನಮ್ಮ ಹಟ್ಟಿಯಲ್ಲಿರುವವರೆಲ್ಲರೂ ಓದು ಇಲ್ಲದವರೇ. ಚಿಕ್ಕಂದಿನಿಂದ ನಮ್ಮ ಹಟ್ಟಿಯವರೆಲ್ಲರೂ ಆಕೆಯನ್ನು ಪ್ರತ್ಯೇಕವಾಗಿ ಗೌರವವಾಗಿ ನೋಡುತ್ತಿದ್ದಾರೆ. ವಾಸ್ತವಕ್ಕೆ ನಮ್ಮ ಹಟ್ಟಿಯಲ್ಲಿ ಆಕೆಯನ್ನು ಮದುವೆ ಆಗುವವರು ಯಾರೂ ಇಲ್ಲ. ಆಕೆಯ ಮದುವೆಯ ವಿಷಯವು ನನಗೆ ಸಮಸ್ಯೆಯಾಗಿಯೇ ಇದೆ. ನಿನ್ನನ್ನು ನೋಡಿದ ನಂತರ ನನ್ನ ಮನಸ್ಸಿನಲ್ಲಿ ಒಂದು ಯೋಚನೆ ಬಂದಿದೆ. ಆಕೆಗೆ ಸರಿಯಾದ ವರನಾಗಿ ನಿನಗೆ ಎಲ್ಲಾ ಅರ್ಹತೆಗಳಿವೆ. ಇದು ನನ್ನ ಉದ್ದೇಶ ಮಾತ್ರವೇ. ನನ್ನ ಉದ್ದೇಶ ಒಳ್ಳೆಯದೋ ಕೆಟ್ಟದೋ ನನಗೆ ತಿಳಿಯದು. ನೀನು ಎಲ್ಲ ವಿಧಗಳಲ್ಲಿ ಯೋಚಿಸಿ ನಿನ್ನ ಉದ್ದೇಶ ನನಗೆ ತಿಳಿಸು. ಇದರಲ್ಲಿ ಯಾವ ಒತ್ತಾಯ ಇಲ್ಲ.

(ಮಲ್ಲುದೊರೆ ಹೇಳಿದ ಮಾತುಗಳನ್ನು ಕೇಳಿ ಎರಡು ನಿಮಿಷಗಳು ರಾಘವ ಯೋಚಿಸಿದ್ದಾನೆ. ತನಗೆ ಹುಡುಗಿಯನ್ನು ಕೊಡುವುದಕ್ಕೂ ಸಹ ನಿರಾಕರಿಸಿ ಅವಮಾನಪಾಲು ಮಾಡಿದ ಸಮಾಜಕ್ಕೆ ದೂರವಾಗಿ ಬಂದಿದ್ದೇನೆ. ಇಲ್ಲಿನವರು ಕಪಟ ಇಲ್ಲದ ಪ್ರಜೆಗಳು. ಅವರು ಗೌರವಿಸಿ ಮಗಳನ್ನು ಕೊಡುತ್ತೇನೆಂದರೆ ಅವರು ತೋರಿಸುವ ಮಮಕಾರಕ್ಕೆ ನಾನು ತಪ್ಪದೆ ಒಪ್ಪಿಕೊಳ್ಳಬೇಕಾಗಿದ್ದೆ ಎಂದುಕೊಂಡಿದ್ದಾನೆ. ನಂತರ ರಾಘವ ಮಲ್ಲು ದೊರೆಯೊಂದಿಗೆ ಹೀಗೆಂದಿದ್ದಾನೆ.)

**ರಾಘವ :–** ನೀವು ಹಿರಿಯರು. ನೀವು ಎಲ್ಲ ವಿಧಗಳಲ್ಲಿ ಒಳ್ಳೆಯದನ್ನೇ ಯೋಚಿಸಿರುತ್ತೀರ. ನೀವು ಅಷ್ಟಾಗಿ ಕೇಳಿದರೆ ನಾನು ಇಲ್ಲ ಎಂದು ಹೇಳಲಾರೆನು.

ನಿಮ್ಮ ಮಾತನ್ನು ಗೌರವಿಸುವುದು ನನ್ನ ಕರ್ತವ್ಯ. ಆದರೆ ನನ್ನದೊಂದು ಚಿಕ್ಕ ಮನವಿ. ಅದೇನೆಂದರೆ ನನಗೆ ಒಬ್ಬ ದೊಡ್ಡ ಗುರುವು ಲಭಿಸಿದ್ದಾನೆ. ಆತನೇ ರಾಜಯೋಗಾನಂದಸ್ವಾಮಿ. ನಾನೀಗ ಆತನ ಹತ್ತಿರದಿಂದಲೇ ಬಂದಿದ್ದೇನೆ. ಈ ವಿಷಯ ಆತನಿಗೆ ತಿಳಿಸಿ, ಆತನ ಆಶೀರ್ವಾದದಿಂದಲೇ ನೀವು ಹೇಳಿದಂತೆ ಮಾಡಿಕೊಳ್ಳುತ್ತೇನೆ. ಮೊದಲು ನಾವೆಲ್ಲರೂ ಹೋಗಿ ಸ್ವಾಮಿಯವರಿಗೆ ಈ ವಿಷಯವನ್ನು ತಿಳಿಸಬೇಕು. ಈ ವಿಷಯವನ್ನು ಸ್ವಾಮಿಯವರಿಗೆ ನಾನು ಹೇಳುವುದಕ್ಕಿಂತ ಹಿರಿಯರು ನೀವು ಹೇಳುವುದೇ ಒಳ್ಳೆಯದು.

(ರಾಘವ ಮಲ್ಲುದೊರೆ ಮಾತನ್ನು ಗೌರವಿಸಿ ಒಪ್ಪಿಕೊಳ್ಳುವುದರಿಂದ ಆ ಹಟ್ಟಿಯವರೆಲ್ಲರೂ ಸಂತೋಷಪಟ್ಟರು. ನಂತರ ಎಲ್ಲರೂ ಸೇರಿ ರಾಜಯೋಗಾನಂದ ಸ್ವಾಮಿಯವರಿಗೆ ವಿಷಯವನ್ನು ತಿಳಿಸುವುದಕ್ಕೆ ಹೊರಟುಹೋದರು.)

***********************************

(ರಾಜಯೋಗಾನಂದ ಸ್ವಾಮಿ ಆಶ್ರಮದಲ್ಲಿ ರಾಧೇಶ್ವರಿ ನಿತ್ಯ ಜ್ಞಾನವನ್ನು ತಿಳಿದುಕೊಳ್ಳುತ್ತಾ ಕಾಲ ಕಳೆಯುತ್ತಿದ್ದಳು. ರಾಜಯೋಗಾನಂದ ಸ್ವಾಮಿ ದೃಷ್ಟಿಯಲ್ಲಿ ರಾಧೇಶ್ವರಿಗೆ ಒಳ್ಳೆಯ ಸ್ಥಾನ ಏರ್ಪಟ್ಟಿದೆ. ಆಕೆ ಸ್ವಲ್ಪ ಕಾಲಕ್ಕೆ ದೊಡ್ಡ ಜ್ಞಾನ ಸಂಪನ್ನೆಯಾಗುತ್ತಾಳೆ ಅಂದುಕೊಂಡಿದ್ದಾನೆ. ಸ್ವಲ್ಪ ದಿನಗಳಿಗೆ ರಾಧೇಶ್ವರಿ ಸೋದರ ಮಾವನಿಗೆ, ರಾಧೇಶ್ವರಿ ರಾಜಯೋಗಾನಂದ ಸ್ವಾಮಿ ಹತ್ತಿರ ಇರುವಂತೆ ತಿಳಿಯಿತು. ಸ್ವಾಮಿಗಳು ಎಂದರೆ ಕಡಿಮೆ ಭಾವನೆ ಇರುವವನು ಆಕೆಯ ಸೋದರ ಮಾವ. ಆತನ ಹೆಸರು ಜಗನ್ನಾಥ್. ರಾಧೇಶ್ವರಿ ಚಿಕ್ಕಮ್ಮನ ಹೆಸರು ಕುಲ್ಲಾಯಮ್ಮ. ಒಂದು ದಿನ ಜಗನ್ನಾಥ್, ಕುಲ್ಲಾಯಮ್ಮ ಇಬ್ಬರು ರಾಜಯೋಗಾನಂದ ಸ್ವಾಮಿ ಆಶ್ರಮಕ್ಕೆ ಬಂದು ಸ್ವಾಮಿಯನ್ನು ಹೆದರಿಸಿ ರಾಧೇಶ್ವರಿಯನ್ನು ತೆಗೆದುಕೊಂಡು ಹೋಗಬೇಕೆಂದುಕೊಂಡಿದ್ದಾರೆ. ಒಂದು ದಿನ ಅವರು ಇಬ್ಬರೂ ಅವರೊಂದಿಗೆ ನಾಲ್ಕು ಜನ ರೌಡಿಗಳನ್ನು ಹಿಂದೆ ಕರೆದುಕೊಂಡು ರಾಜಯೋಗಾನಂದ ಸ್ವಾಮಿ ಹತ್ತಿರಕ್ಕೆ ಹೊರಟು ಬಂದರು. ಸ್ವಾಮಿಗಳು ಎಂದರೆ ಬಿಕ್ಷಕರಿಗೆ ಹೋಲಿಸಿಕೊಂಡ ಅವರು ಸ್ವಾಮಿಯನ್ನು ಹೆದರಿಸಾಗಲಿ, ಹೊಡೆದಾಗಲೀ ರಾಧೇಶ್ವರಿಯನ್ನು ತೆಗೆದುಕೊಂಡು

ಹೋಗಬೇಕೆಂದುಕೊಂಡಿದ್ದಾರೆ. ಒಂದು ದಿನ ಬೆಳಗ್ಗೆ ಒಂಬತ್ತು ಗಂಟೆಗಳಿಗೇ ನಾಲ್ಕು ಮಂದಿ ರೌಡಿಗಳೊಂದಿಗೆ ಬಂದ ಜಗನ್ನಾಥ್, ಕುಲ್ಲಾಯಮ್ಮ ಇಬ್ಬರೂ ಸ್ವಾಮಿ ವಿಷಯ ತಿಳಿಯದವರಾಗಿ ಅಲ್ಲಿರುವ ಸ್ವಾಮಿಯನ್ನು ಕುರಿತು ಅಗೌರವದಿಂದ ಮಾತನಾಡಿದರು. ಸ್ವಾಮಿಯವರು ರಾಧೇಶ್ವರಿ ಒಳಗೆ ಇರುವುದರಿಂದ ಅವರಿಗೆ ಈ ವಿಷಯ ತಿಳಿಯದು. ಅವರು ಗೌರವ ಇಲ್ಲದೆ ಮಾತನಾಡಿರುವುದಕ್ಕೆ ಆಶ್ರಮದಲ್ಲಿರುವ ಭಕ್ತರಿಗೆ ಅವರ ಮೇಲೆ ಕೋಪ ಬಂದಿತು. ಜಗನ್ನಾಥನನ್ನು, ಕುಲ್ಲಾಯಮ್ಮನನ್ನೂ, ಅವರೊಂದಿಗೆ ಬಂದಿರುವ ರೌಡಿಗಳನ್ನು, ಆರೂ ಜನರನ್ನು ಅಲ್ಲಿರುವ ಅರವತ್ತು ಜನ ಭಕ್ತರು ಎಲ್ಲರೂ ಒಂದು ಏಟನ್ನು ಹೊಡೆದರು. ಅವರನ್ನು ಚೆನ್ನಾಗಿ ಹೊಡೆಯುವುದೇ ಅಲ್ಲದೆ ಹಗ್ಗದಿಂದ ಅವರ ಕೈ ಕಾಲು ಕಟ್ಟಿಹಾಕಿದ್ದಾರೆ. ಅಲ್ಲಿಯವರೆಗು ಸ್ವಾಮಿಯನ್ನು ಸ್ವಾಮಿ ಭಕ್ತರನ್ನು ಕಡಿಮೆಯಾಗಿ ತಿಳಿದ ಅವರಿಗೆ ಸ್ವಾಮಿ ಭಕ್ತರು ಯಮಕಿಂಕರ ಹಾಗೆ ಕಾಣಿಸಿದರು. ಅಲ್ಲಿಯವರೆಗೂ ಎಲ್ಲೂ ಅವರು ಹೊದೆಗಳು ತಿಂದಿರಲಿಲ್ಲ. ಇಲ್ಲಿಗೆ ಬಂದು ಚೆನ್ನಾಗಿ ಹೊದೆಗಳು ತಿಂದರು. ಬಿಟ್ಟರೆ ಸಾಕು, ಎಂದಿಗೂ ಈ ಪ್ರಾಂತಕ್ಕೆ ಸಹ ಬರಬಾರದೆಂದು ಕೊಂಡಿದ್ದಾರೆ. ಸ್ವಾಮಿ ಒಳಗಿನಿಂದ ಹೊರಗೆ ಬಾರದೆ ಸ್ವಾಮಿಗೆ ಈ ವಿಷಯ ತಿಳಿಯದೇ, ಆ ಸಂಘಟನೆ ನಡೆದ ಹತ್ತು ನಿಮಿಷಗಳಿಗೇ ರಾಘವಾ, ರಾಘವನೊಂದಿಗೆ ಮಲ್ಲುದೊರೆ, ಯೋಗ, ಮೇಘ, ಚಕ್ರಿ ಮೊದಲಾದ ಮುಖ್ಯವಾದ ಗಿರಿಜನರೆಲ್ಲರೂ ಅಲ್ಲಿಗೆ ಬಂದರು. ಅಲ್ಲಿ ಆಗಲೇ ನಡೆದ ವಿಷಯವನ್ನು ತಿಳಿದುಕೊಂಡಿದ್ದಾರೆ. ಅಷ್ಟರಲ್ಲಿ ಸ್ವಾಮಿಯೂ ಸಹ ಹೊರಗೆ ಬಂದಿದ್ದಾನೆ. ಎಲ್ಲರನ್ನೂ ನೋಡಿದ್ದಾನೆ. ಅಲ್ಲಿ ಕಟ್ಟಿಹಾಕಿರುವವರನ್ನು ಸಹ ನೋಡಿದ್ದಾನೆ. ವಿಷಯವೆಲ್ಲಾ ಅರ್ಥವಾಯಿತು. ಜಗನ್ನಾಥ್, ಕುಲ್ಲಾಯಮ್ಮ ಇಬ್ಬರೂ ಸ್ವಾಮಿಯನ್ನು ನೋಡಿದರು. ಸ್ವಾಮಿ ಎಂದರೆ ಬಿಕ್ಷೆ ಬೇಡಿಕೊಂಡು ಬದುಕುವವನು ಎಂದು ಕಡಿಮೆ ಆಲೋಚನೆ ಅಲ್ಲಿಯವರೆಗು ಅವರಿಗೆ ಇತ್ತು. ಸ್ವಾಮಿ ಹೇಳುವುದಕ್ಕಿಂತ ಮೊದಲೆ ಹೊಡೆದು ಕಟ್ಟಿಹಾಕಿದ್ದಾರೆ. ಸ್ವಾಮಿ ಹೇಳಿದರೆ ಸಾಯಿಸುವುದಕ್ಕೂ ಸಹ ಅಲ್ಲಿರುವವರು ಹಿಂಜರಿಯುವುದಿಲ್ಲ ಎಂದುಕೊಂಡರು. ಅಷ್ಟರಲ್ಲಿ ಸ್ವಾಮಿ, ಅವರಿಗೆ ಕಟ್ಟಿರುವ ಹಗ್ಗಗಳನ್ನು ಬಿಚ್ಚಲು ಹೇಳಿದರು. ಆಗ ಅವರೊಂದಿಗೆ ಹೀಗೆ ಹೇಳಿದನು.)

**ರಾಜಯೋಗಾ :–** ನೀವು ಇಲ್ಲಿಗೆ ಏಕೆ ಬಂದಿದ್ದೀರ? ಬಂದಿರುವವರು ಸ್ವಾಮಿಯನ್ನು ಏಕೆ ದೂಷಿಸಿದ್ದೀರ?

**ಜಗನ್ನಾಥ್ :–** ನಮ್ಮ ಹುಡುಗಿ ಇದ್ದಾಳೆಂದು ತಿಳಿದು ಬಂದಿದ್ದೇವೆ. ನಮಗೆ ತಿಳಿಯದಂತೆ ಇಲ್ಲಿ ಇಟ್ಟುಕೊಳ್ಳುತ್ತೀರಾ, ಎಂದು ಸ್ವಲ್ಪ ತಪ್ಪಾಗಿಯೇ ಮಾತನಾಡಿದ್ದೇನೆ.

**ರಾಜಯೋಗಾ :–** ನಿಮಗೆ ತಿಳಿಯದಂತೆ ನಾವು ಮುಚ್ಚಿಡಬೇಕಾದ ಅವಶ್ಯ ನಮಗಿಲ್ಲ. ನಮಗೆ ರಾಧೇಶ್ವರಿ ನಿಮ್ಮ ವಿಷಯವೆಲ್ಲಾ ಹೇಳಿದ್ದಾಳೆ. ಇದಕ್ಕೂ ಮೊದಲು ನಿಮ್ಮ ಬೇಳೆಗಳು ಬೇಯುತ್ತಿದ್ದವು. ಆಗ ರಾಧೇಶ್ವರಿ ಒಂಟಿಯಾಗಿದ್ದಳು. ಈಗ ಆ ಹುಡುಗಿ ಒಂಟಿಯಲ್ಲ. ಆಕೆಗೆ ತಂದೆಯಂತೆ ನಾನಿದ್ದೇನೆ. ಇಂದಿನಿಂದ ರಾಧೇಶ್ವರಿ ವಿಷಯದಲ್ಲಿ ಎಲ್ಲಿ ಕೆಟ್ಟದಾಗಿ ಪ್ರವರ್ತಿಸಿದರೂ ನಾನು ನಿಮ್ಮ ವಿಷಯದಲ್ಲಿ ಸುಮ್ಮನಿರುವುದಿಲ್ಲವೆಂದು ಅರ್ಥಮಾಡಿಕೊಳ್ಳಿ. (ಅಷ್ಟರಲ್ಲಿ ರಾಧೇಶ್ವರಿ ಸಹ ಅಲ್ಲಿಗೆ ಬಂದಳು. ಅಲ್ಲಿರುವ ಪರಿಸ್ಥಿತಿಯನ್ನು ಎಲ್ಲಾ ಅರ್ಥಮಾಡಿಕೊಂಡು ಮೌನವಾಗಿ ನಿಂತಳು. ಅಲ್ಲಿರುವ ಗಿರಿಜನರು ಕಟ್ಟಿರುವ ಹಗ್ಗವನ್ನು ಬಿಚ್ಚಿದರು.)

**ಜಗನ್ನಾಥ್ :–** ನಾವು ಅನ್ಯಾಯವಾಗಿ ಇಲ್ಲಿಗೆ ಬರಲಿಲ್ಲ. ನಮ್ಮನ್ನು ಸುಮ್ಮನೇ ಹೊಡೆದಿದ್ದೀರ.

**ಕುಲ್ಲಾಯಮ್ಮ :–** ನಮ್ಮ ಹುಡುಗಿಯನ್ನು ಕಳುಹಿಸಿ ಕೊಡಿ. ನಾವು ಹೊಗುತ್ತೇವೆ.

(ಸ್ವಾಮಿಯವರು ಏನೂ ಮಾತನಾಡಲಿಲ್ಲ. ನೀವೇ ಮಾತನಾಡಿ ಎನ್ನುವಂತೆ ರಾಘವ ಕಡೆ ನೋಡಿ ಅಲ್ಲಿಂದ ಹೋದನು. ಆಗ ರಾಘವ ಅವರೊಂದಿಗೆ ಹೀಗೆ ಮಾತನಾಡಿದನು.)

**ರಾಘವ :–** ಈಗ ನಿಮ್ಮ ಉದ್ದೇಶ ಏನು?

**ಜಗನ್ನಾಥ್ :–** ನಮ್ಮ ಹುಡುಗಿಯನ್ನು ನಮ್ಮ ಹಿಂದೆ ಕಳುಹಿಸಿ.

(ಆಗ ಗಿರಿಜನರು ರಾಘವನನ್ನು ಮಾತನಾಡಬೇಡವೆಂದು ಹೇಳಿ ಅವರೊಂದಿಗೆ ನಾವು ಮಾತನಾಡುತ್ತೇವೆಂದು ಹೀಗೆ ಹೇಳಿದ್ದಾರೆ.)

**ಯೋಗ :–** ರಾಧೇಶ್ವರಿಯನ್ನು ಇಲ್ಲಿಗೆ ತಂದು ಸ್ವಾಮಿ ಹತ್ತಿರ ಇಟ್ಟಿರುವವರು

ನಾವೇ. ರಾಧೇಶ್ವರಿಗೆ ನಾವೆಲ್ಲಾ ಅಣ್ಣಂದಿರಾಗಿ ಇದ್ದೇವೆ. ಆಕೆ ನಿಮ್ಮ ವಿಷಯವೆಲ್ಲಾ ಹೇಳಿದ್ದಾಳೆ. ನೀವು ಆಕೆ ಆಸ್ತಿಗೋಸ್ಕರ ಎಷ್ಟೋ ಮೋಸಗಳು ಮಾಡುತ್ತಿದ್ದಂತೆ ನಮಗೆ ತಿಳಿದಿದೆ. ನಿಮ್ಮಿಂದ ರಾಧೇಶ್ವರಿಗೆ ಎಂತಹ ಕಷ್ಟ ಬಂದರೂ ಅದಕ್ಕೆ ಮುಂದೆ ನಿಂತು ಆ ಕಷ್ಟವನ್ನು ಇಲ್ಲದಂತೆ ಮಾಡುತ್ತೇವೆ. ಅಷ್ಟೇ ಅಲ್ಲ ನಂತರ ನಿಮ್ಮನ್ನು ಬದುಕಲು ಬಿಡುವುದಿಲ್ಲ.

**ಮೇಘ :–** ರಾಧೇಶ್ವರಿ ಮನೆಯಲ್ಲಿ ನೀವಿದ್ದಂತೆ, ಆ ಮನೆಯನ್ನು ನೀವು ಆಕ್ರಮಿಸಿಕೊಂಡಂತೆ ನಮಗೆ ತಿಳಿದಿದೆ. ಇಂದಿನಿಂದ ಮೂರು ದಿನಗಳೊಳಗೆ ಆ ಮನೆಯನ್ನು ನೀವು ಬಿಟ್ಟುಹೋಗಬೇಕು. ಇಲ್ಲದೇ ಹೋದರೆ ನೀವು ಎಷ್ಟು ಜನ ರೌಡೀಗಳನ್ನು ಇಟ್ಟುಕೊಂಡರೂ ನಿನ್ನನ್ನು ಮಾತ್ರ ಬಿಡುವುದಿಲ್ಲ. ರೌಡಿಗಳು ನಿನ್ನನ್ನು ಕಾಪಾಡುವುದಿಲ್ಲ, ಹುಷಾರ್.

**ಯೋಗ :–** ಇದು ಮೊದಲ ಸಲ ನೀನು ನಮ್ಮನ್ನು ನೋಡಿದ್ದೀಯ, ನಾವು ನಿಮ್ಮನ್ನು ನೋಡಿದ್ದೇವೆ. ಆದ್ದರಿಂದ ಈಗ ಮಾತುಗಳಿಂದಲೇ ಹೇಳಿ ಕಳುಹಿಸುತ್ತಿದ್ದೇವೆ. ಎರಡನೆ ಸಲ ನಾವು ನಿಮಗೆ ಕಾಣಿಸಿದರೆ ಮಾತನಾಡುವ ಪ್ರಸ್ತಾಪವೇ ಇರುವುದಿಲ್ಲ. ನೇರವಾಗಿ ಯಮಪುರಿಗೇ ಕಳುಹಿಸುತ್ತೇವೆ.

(ಅಲ್ಲಿಯವರೆಗೂ ಅಲ್ಲಿ ಯೋಗಾ, ಮೇಘಾ ಮಾತನಾಡಿದ ಮಾತುಗಳನ್ನು ಕೇಳಿದ ನಂತರ ರಾಧೇಶ್ವರಿಗೆ ಹೊಸ ಧೈರ್ಯ ಬಂದಿತು. ಅಲ್ಲಿಯವರೆಗು ಜಗನ್ನಾಥನನ್ನು ನೋಡಿದರೆ ಭಯಪಡುವ ರಾಧೇಶ್ವರಿ ಆಗ ಹೀಗೆ ಹೇಳಿದಳು.)

**ರಾಧೇಶ್ವರಿ :–** ಇಲ್ಲಿಯವರೆಗು ನೀವು ಎಷ್ಟೋ ಕೆಟ್ಟ ಕೆಲಸಗಳನ್ನು ಮಾಡಿದ್ದೀರ. ಕೊನೆಗೆ ನನ್ನನ್ನು ಸಾಯಿಸಬೇಕೆಂದು ನೋಡಿದ್ದೀರ. ಈಗ ಆ ಪ್ರಯತ್ನಗಳು ಏನೂ ಸಾಗುವುದಿಲ್ಲ. ಈಗ ನನಗೆ ದೇವರು ಕೊಟ್ಟಿರುವ ತಂದೆ, ಸೋದರರು ಸಿಕ್ಕಿದ್ದಾರೆ. ಇಂದಿಗಾದರೂ ಒಳ್ಳೆ ಬುದ್ಧಿ ತಂದುಕೊಂಡು ಬದುಕಿರಿ. ನನ್ನ ಅಣ್ಣನವರು ಹೇಳಿದಂತೆ ಮನೆಯನ್ನು, ಮನೆಯಲ್ಲಿನ ಸಾಮಾನುಗಳನ್ನು ಬಿಟ್ಟು ಹೋಗಿ. ಇಂದಿನಿಂದ ನನ್ನ ಆಸ್ತಿಗೂ ನಿಮಗೂ ಎಂತಹ ಸಂಬಂಧವೂ ಇರುವುದಿಲ್ಲ.

**ಮೇಘ :–** ನಿಮ್ಮೊಂದಿಗೆ ನಾವು ಹೆಚ್ಚಾಗಿ ಮಾತನಾಡುವುದಿಲ್ಲ. ಮೂರು ದಿನಗಳಲ್ಲಿ

ಎಲ್ಲ ಬಿಟ್ಟುಹೋಗಬೇಕು. ಇಲ್ಲವಾದರೆ ನಿಮ್ಮ ಕುತ್ತಿಗೆಗೆ ನೀವೇ ನೇಣು ಹಾಕಿಕೊಂಡಂತೆ. ಮೂರು ದಿನಗಳ ನಂತರ ನಿಮಗೆ ಸಾವೋ ಬದುಕೋ ನಿಮ್ಮ ಕೈಯಲ್ಲೇ ಇದೆ. ಮೊದಲು ಇಲ್ಲಿಂದ ಹೊರಟು ಹೋಗಿ.

(ಹಾಗೆ ಯೋಗಾ, ಮೇಘ ಗಟ್ಟಿಯಾಗಿ ಎಚ್ಚರಿಸಿ ಕಳುಹಿಸಿದರು. ಇವರು ಬಿಟ್ಟರೇ ಸಾಕು ಎಂದುಕೊಂಡ ಕುಲ್ಲಾಯಮ್ಮ, ಜಗನ್ನಾಥ ಇಬ್ಬರೂ ಭಯಪಟ್ಟು ಹೋದರು. ಅವರು ಹೋಗೆಂದರೇನೆ ಯಾವ ಮಾತ್ರ ತಡ ಮಾಡದಂತೆ ಅಲ್ಲಿಂದ ಹೊರಟು ಹೋದರು.)

**********************************

(ತಾಳೆಮರ ಮುನೆಪ್ಪ ಪೊಲೀಸರ ಬಾಲೆಯಿಂದ ತಪ್ಪಿಸಿಕೊಂಡು ಸುಲಭವಾಗಿ ತನ್ನ ಸ್ಥಾವರವನ್ನು ಸೇರಿಕೊಂಡ ನಂತರ ತನ್ನ ಗುಂಪಿನಲ್ಲಿನ ಮನುಷ್ಯರಿಗೆ ವಿಷಯವೆಲ್ಲಾ ಹೇಳಿ, ವಜ್ರಗಳನ್ನು ಕಂಡುಕೊಳ್ಳುವ ಸೆನ್ಸಾರ್ ಮಿಷನ್ ಕೊಟ್ಟು, ವಜ್ರಗಳಿರುವ ಹಾವನ್ನು ಹುಡುಕುವುದಕ್ಕೆ ಕಳುಹಿಸಿದನು. ಇದು ಸುಲಭವಾದ ಪದ್ಧತಿ ಎಂದುಕೊಂಡ ವೆಂಕು, ಸೆನ್ಸಾರ್ ತೆಗೆದುಕೊಂಡು ಮೊದಲು ಹಾವು ತಪ್ಪಿಹೋದ ಸ್ಥಳದಿಂದ ಹುಡುಕಬೇಕೆಂದುಕೊಂಡು ಅಲ್ಲಿಗೆ ಹೋಗಿದ್ದಾರೆ. ಆ ವಿಧವಾಗಿ ಹೋದ ಮುನೆಪ್ಪ ಮನುಷ್ಯರಿಗೆ ಒಂದು ದಿನ ಹಾವುಗಳನ್ನು ಹಿಡಿಯುವವನು ಕಾಣಿಸಿದನು. ಅವನ ಹತ್ತಿರ ಅನೇಕ ಹಾವುಗಳಿದ್ದವು. ಅವನು ಹಾವುಗಳನ್ನು ಹಿಡಿಯುವವನೇ ಅಲ್ಲದೇ ದೊಡ್ಡ ಮಾಂತ್ರಿಕನು. ಅವನ ಹೆಸರು ನಾಗೋತುಲ ನಾಗಭೂಷಣಮ್. ಮುನೆಪ್ಪ ಮನುಷ್ಯರು ನಾಗಭೂಷಣನೊಂದಿಗೆ ಮಾತನಾಡುತ್ತಾ ಅವರ ಹತ್ತಿರ ಇರುವ ಹಾವುಗಳ ಸಮೀಪಕ್ಕೆ ಹೋದರು. ಆತನ ಹತ್ತಿರವಿರುವ ಹಾವುಗಳ ಸಮೀಪಕ್ಕೆ ಹೋದ ಕೂಡಲೇ ವೆಂಕು ಹತ್ತುರವಿರುವ ಸೆನ್ಸಾರ್ ಸ್ವಲ್ಪ ಶಬ್ಧ ಮಾಡಲು ಪ್ರಾರಂಭಿಸಿತು. ಹಾಗೆ ಸೆನ್ಸಾರ್ ಶಬ್ದ ಮಾಡುವುದರಿಂದ ತಮಗೆ ಬೇಕಾದ ವಜ್ರಗಳ ಹಾವು ಅಲ್ಲಿದೆಯೆಂದು ವೆಂಕು ಗ್ರಹಿಸಿದನು. ಮುನೆಪ್ಪ ಮನುಷ್ಯರು ಆ ಹಾವನ್ನು ಹೇಗಾದರೂ ನಾಗಭೂಷಣ್ ಹತ್ತಿರದಿಂದ ಕದಿಯ ಬೇಕೆಂದುಕೊಂಡರು. ಹಾಗೆ ಮಾಡುವುದು ಒಂದೇ ಸಲ ಸಾಧ್ಯವಾಗುವುದಿಲ್ಲ.

ಆದ್ದರಿಂದ ಮೊದಲು ನಾಗೋತುಲ ನಾಗಭೂಷಣನೊಂದಿಗೆ ನಿಧಾನವಾಗಿ ಸ್ನೇಹ ಮಾಡಿದ್ದಾರೆ. ತಮಗೆ ಬೇಕಾದ ಹಾವಿನ ವಿಷಯವನ್ನು ತಿಳಿದುಕೊಳ್ಳುವುದಕ್ಕೆ ನಾಗಭೂಣನೊಂದಿಗೆ ಮಾತನಾಡುವುದಕ್ಕೆ ಪ್ರಾರಂಭಿಸಿದರು.)

**ವೆಂಕು :–** ನಿನ್ನ ಹತ್ತಿರ ಒಂದು ಎರಡು ಹಾವುಗಳು ಅಲ್ಲದೆ ನೂರು ಹಾವುಗಳವರೆಗು ಇವೆ ಅಲ್ಲವೆ! ಇವೆಲ್ಲಾ ಹೇಗೆ ಸಿಕ್ಕಿವೆ. ಹೇಗೆ ಹಿಡಿದಿದ್ದೀಯ. ಸಲ್ಪ ಹೇಳು ಕೇಳುತ್ತೇವೆ.

**ನಾಗಭೂಷಣ್ :–** ಇವೆಲ್ಲವನ್ನೂ ನನ್ನ ಹಿರೆ ಮಗ ಹಿಡಿದುಕೊಂಡಿದ್ದಾನೆ. ನಾನು ಇವುಗಳಲ್ಲಿ ಕೆಲವನ್ನು ಮಾತ್ರವೇ ಹಿಡಿದಿದ್ದೇನೆ.

**ನೂಕಾ :–** ಆದರೆ ನಿನ್ನ ಮಗನಿಗೂ ಸಹ ಹಾವುಗಳನ್ನು ಹಿಡಿಯುವ ವಿದ್ಯೆಯನ್ನು ಕಲಿಸಿದ್ದೀಯ. ಆತನು ನಿನ್ನ ಹತ್ತಿರ ಎಷ್ಟು ಕಾಲ ತರಭೇತಿ ಪಡೆದಿದ್ದಾನೆ.

**ನಾಗಭೂಷಣ್ :–** ನಾನು ಏನೂ ಕಲಿಸಲಿಲ್ಲ! ಅದು ಕಲಿಸಿದರೆ ಬರುವ ವಿದ್ಯೆ ಅಲ್ಲ. ಅದಕ್ಕೆ ಧೈರ್ಯವಿರಬೇಕು, ಅವನಿಗೆ ಧೈರ್ಯವಿದೆ. ಹಾವುಗಳನ್ನು ಹಿಡಿದುಕೊಳ್ಳುತ್ತಿದ್ದಾನೆ. ಈ ಕೆಲಸವೇ ಬೇಡ ಎಂದು ಹೇಳಿದರೂ ಅತನು ನನ್ನ ಮಾತು ಕೇಳಲಿಲ್ಲ.

**ವೆಂಕು :–** ಇವು ವಿಷ ಸರ್ಪಗಳು ಅಲ್ಲವೆ! ಹಾವುಗಳನ್ನು ಹಿಡಿಯುವುದರಲ್ಲಿ ಏನೂ ಪ್ರಮಾದವಿಲ್ಲವಾ? ಹಾವು ಕಚ್ಚಿದರೆ ಏನು ಮಾಡುತ್ತೀರ.

**ನಾಗಭೂಷಣ್ :–** ಇಲ್ಲದೇ ಏನು, ಹಾವುಗಳೇ ಪ್ರಮಾದಕರವಾದವು. ಒಂದು ವೇಳೆ ಪ್ರಮಾದವಶಾತ್ತು ಯಾವುದಾದರೂ ಹಾವು ಕಚ್ಚಿದರೆ, ಬಿಳಿ ಈಶ್ವರಿ ಬಳ್ಳಿಯ ಕಡ್ಡಿಯನ್ನು ಅರೆದು ನುಂಗುತ್ತೇವೆ. ಅದರಿಂದ ವಿಷ ಕೆಲಸಮಾಡದಂತೆ ಹೋಗುತ್ತದೆ.

**ನೂಕಾ :–** ನಿಮ್ಮ ಹತ್ತಿರ ಇರುವ ಹಾವುಗಳಿಗೆ ಹಲ್ಲುಗಳನ್ನು ಕಿತ್ತುಹಾಕುವುದಿಲ್ಲವಾ?

**ನಾಗಭೂಷಣ್ :–** ತಪ್ಪದೆ ಕಿತ್ತು ಹಾಕುತ್ತೇವೆ. ಇಲ್ಲಿರುವ ಹಾವುಗಳೆಲ್ಲವುಗಳಿಗು ಹಲ್ಲು (ಕೋರೆ) ಗಳು ಕಿತ್ತುಹಾಕಿದ್ದೇವೆ. ನಿನ್ನೆ ಹಿಡಿದಿರುವ ಹಾವಿಗೆ ಒಂದಕ್ಕೇ ಇನ್ನೂ ಹಲ್ಲುಗಳು ತೆಗೆಯಲಿಲ್ಲ. ಅದು ಒಂದೇ ವಿಷವಿರುವ ಹಾವು.

(ಮುನೆಪ್ಪ ಮನುಷ್ಯರು ಹಾವುಗಳೆಲ್ಲವನ್ನು ನೋಡಿ ತಮಗೆ ಬೇಕಾದ ಹಾವು ಯಾವುದೋ ಗುರುತಿಸಿಕೊಳ್ಳಬೇಕೆಂದುಕೊಂಡಿದ್ದಾರೆ. ಅದಕ್ಕೋಸ್ಕರ ನಾಗಭೂಷಣನೊಂದಿಗೆ ಒಳ್ಳೆಯದಾಗಿ ಮಾತನಾಡುತ್ತಾ ಹೀಗೆ ಕೇಳಿದ್ದಾನೆ.)

**ವೆಂಕು :–** ನಿನ್ನ ಹತ್ತಿರವಿರುವ ಹಾವುಗಳೆಲ್ಲವನ್ನೂ ಒಂದು ಸಲ ನೋಡಿ ಆನಂದಿಸಬೇಕೆಂದುಕೊಂಡಿದ್ದೇವೆ. ತೋರಿಸುತ್ತೀರಾ?

(ಅದಕ್ಕೆ ನಾಗಭೂಷಣ್ ಸರಿ ತೋರಿಸುತ್ತೇನೆಂದು ಹೇಳಿ ಆತನ ಹತ್ತಿರ ಇರುವ ಹಾವುಗಳೆಲ್ಲವನ್ನೂ ಒಂದೊಂದನ್ನು ತೋರಿಸುತ್ತಾ, ಅವುಗಳ ಹೆಸರನ್ನು ಸಹ ಹೇಳುತ್ತಾ, ಅವುಗಳ ವಿಷ ಪ್ರಭಾವವನ್ನೂ, ಆ ಜಾತಿ ಹೆಸರನ್ನೂ ಹೇಳುತ್ತಿದ್ದನು. ಮುನೆಪ್ಪ ಮನುಷ್ಯರು ನಾಗಭೂಷಣ್ ಇತರ ಜಾತಿಗಳ ಹಾವುಗಳನ್ನು ಕುರಿತು ಹೇಳುವಾಗ ಕೇಳುವಂತೆ ನಟಿಸುತ್ತಿದ್ದರು. ಕೇವಲ ನಾಗರಹಾವುಗಳನ್ನು ಕುರಿತು ತೋರಿಸಿ ಹೇಳುವಾಗ ಶ್ರದ್ಧೆಯಿಂದ ಕೇಳುತ್ತಿದ್ದರು. ನಾಗಭೂಷಣ ಕೊನೆಯದಾಗಿ ತೋರಿಸಿದ ನಾಗರಹಾವನ್ನು ಅವರು ಗುರುತಿಸಿದರು. ಅದು ಅವರ ಕೈಯಿಂದ ತಪ್ಪಿಸಿಕೊಂಡು ಓಡಿಹೋದ ಹಾವೆಂದು ತಿಳಿದುಕೊಂಡಿದ್ದಾರೆ.)

**ವೆಂಕು :–** ಈ ಹಾವನ್ನು ನಾವು ಹಿಡಿದುಕೊಂಡು ನೋಡಬಹುದಾ.

**ನಾಗಭೂಷಣ್ :–** ನಿನ್ನೆ ಹಿಡಿದ ಹಾವು ಎಂದು ಹೇಳಿದೆನಲ್ಲ ಅದೇ ಇದು. ಇದಕ್ಕೆ ಇನ್ನೂ ವಿಷ ಕೋರೆಗಳು ಕಿತ್ತಿಲ್ಲ. ಈಗ ಇದನ್ನು ನೀವು ಹಿಡಿದುಕೊಳ್ಳುವುದು ಪ್ರಮಾದ.

(ವಿಷಕೋರೆಗಳು ಕೀಳಲಿಲ್ಲ ಎಂದು ಹೇಳಿದ ಕೂಡಲೇ ಮುನೆಪ್ಪ ಮನುಷ್ಯರಿಗೆ ಸ್ವಲ್ಪ ಭಯವಾಯಿತು. ಇದಕ್ಕೂ ಮೊದಲು ಹಾವಿನ ಕಡಿತಕ್ಕೆ ಗುರಿಯಾಗಿದ್ದಾರೆ. ಆದ್ದರಿಂದ ನಾಗಭೂಷಣ ಅದರ ಕೋರೆಗಳು ಕೀಳುವವರೆಗು ಆ ಹಾವನ್ನು ಕದಿಯಬಾರದೆಂದುಕೊಂಡರು.)

**ನೂಕಾ :–** ಹಾವಿಗೆ ಕೋರೆಗಳು ಕೀಳುವುದನ್ನು ನಾವು ಯಾವಾಗಲೂ ನೋಡಲಿಲ್ಲ. ಹೇಗೆ ಕೀಳುತ್ತಾರೋ ನಾವು ನೋಡಬಹುದಾ?

**ನಾಗಭೂಷಣ್ :–** ಓ! ನೋಡಬಹುದು. ಸಮಯ ನೋಡಿಕೊಂಡು ಈದಿನವಾಗಲೀ ನಾಳೆಯಾಗಲಿ ಕೀಳುತ್ತೇನೆ. ಆಗ ನೋಡಬಹುದು.

(ಹುಡುಕಲು ಹೋದ ಬಳ್ಳಿ ಕಾಲಿಗೆ ತಾಕಿದಂತೆ, ತಾವು ಹುಡುಕುತ್ತಿರುವ ವಜ್ರಗಳ ಹಾವು ಕಾಣಿಸುವುದು ಮುನೆಪ್ಪ ಮನುಷ್ಯರಿಗೆ ಸಂತೋಷವಾಯಿತು. ಅದಕ್ಕೆ ಯಾವಾಗ ಕೋರೆಗಳು ಕಿತ್ತರೆ ಆಗ ಅದನ್ನು ಕದ್ದುಕೊಂಡು ಹೋಗಬೇಕೆಂದುಕೊಂಡಿದ್ದಾರೆ. ಆ ದಿನ ನಾಗಭೂಷಣನಿಗೆ ಸಮಯವಿಲ್ಲದ ಕಾರಣ ಆ ಹಾವಿಗೆ ಕೋರೆಗಳು ಕೀಳಲಿಲ್ಲ. ಎರಡನೆಯ ದಿನ ಕೀಳುತ್ತೇನೆಂದು ನಾಗಭೂಷಣ ಹೇಳಿದಾಗ, ನಾಳೆ ಬೆಳಗ್ಗೆ ಬರುತ್ತೇವೆಂದು ಮುನೆಪ್ಪ ಮನುಷ್ಯರು ನಾಗಭೂಷಣನಿಗೆ ಹೇಳಿ ಪಕ್ಕದ ಊರಿಗೆ ಹೋಗಿ ಹೋಟಲ್‌ನಲ್ಲಿ ಊಟ ಮಾಡಿ ಲಾಡ್ಜಿನಲ್ಲಿ ಮಲಗಿದ್ದಾರೆ.)

ನಾಗೋತುಲ ನಾಗಭೂಷಣ ಊಟ ಮಾಡಿದ ನಂತರ ಮಲಗಬೇಕೆಂದು ಮಂಚವನ್ನು ಹಾಕಿಕೊಳ್ಳುವ ಪ್ರಯತ್ನದಲ್ಲಿದ್ದನು. ಅದು ಒಂದು ಚಿಕ್ಕ ಹಳ್ಳಿ. ಆ ಊರು ಪಕ್ಕದಲ್ಲೇ ಅಡವಿ ಸಹ ಇದೆ. ಪಕ್ಕದಲ್ಲೇ ಇರುವ ಅಡವಿಯಲ್ಲಿನ ಹುಲಿ ಹಸಿವಿನಿಂದ ಆ ಹಳ್ಳಿಯೊಳಗೆ ಪ್ರವೇಶಿಸಿ, ಒಂದು ಮನೆಯಲ್ಲಿ ನುಗ್ಗಿ ಹಸುವನ್ನು ಹಿಡಿಯಲು ಹೋಯಿತು. ಆ ಹಸು ತಪ್ಪಿಸಿಕೊಂಡು ಓಡಿಹೋಗುತ್ತಾ ರಕ್ಷಣೆಗೋಸ್ಕರ ನಾಗಭೂಷಣ ಮನೆಯೊಳಗೆ ನುಗ್ಗಿತು. ಹಸುವನ್ನು ಹಿಂಬಾಲಿಸಿದ ಹುಲಿಯೂ ಸಹ ಆ ಮನೆಯೊಳಗೆ ಬಂದಿತು. ಹಸು, ಹುಲಿಯಿಂದ ತಪ್ಪಿಸಿಕೊಳ್ಳಬೇಕೆಂದು ಅತ್ತ ಇತ್ತ ಮನೆಯಲ್ಲಿ ಓಡುತ್ತಿರುವುದರಿಂದ ಹಾವುಗಳಿರುವ ಬುಟ್ಟಿಗಳೆಲ್ಲವು ಕೆಳಗೆ ಬಿದ್ದು ಹಾವುಗಳೆಲ್ಲವೂ ಚಲ್ಲಾಪಿಲ್ಲಿ ಆದವು. ಆಗ ನಾಗಭೂಷಣ ಮನೆಯಲ್ಲಿನ 20 ಅಡಿಗಳ ಉದ್ದವಿರುವ ಹೆಬ್ಬಾವು ಹುಲಿಯನ್ನು ಹಿಡಿದು ಸುತ್ತಿಕೊಂಡಿತು. ಹಸು ಮಾತ್ರ ಹೊರಗೆ ಓಡಿಹೋಯಿತು.

ಆಕಸ್ಮಿಕವಾಗಿ ನಡೆದ ಈ ಸಂಘಟನೆಯಿಂದ ಆ ಊರಿನ ಪ್ರಜೆಗಳೆಲ್ಲರೂ ನಾಗಭೂಷನ ಮನೆಹತ್ತಿರ ಬಂದಿದ್ದಾರೆ. ಹುಲಿ ಹೊರಗೆ ಬಾರದಂತೆ ಹೋಗುವುದು

ಹಾವುಗಳೆಲ್ಲವು ಇಷ್ಟಬಂದಂತೆ ಓಡಿಹೋಗುವುದು ಎಲ್ಲರೂ ನೋಡಿದ್ದಾರೆ. ಮನೆಯಲ್ಲಿರುವ ಹುಲಿ ಹೆಬ್ಬಾವು ಕೈಗೆ ಸಿಕ್ಕಿದಂತೆ ತಿಳಿದು ಎಲ್ಲರು ನಿಟ್ಟುಸಿರು ಬಿಟ್ಟರು. ಹೆಬ್ಬಾವು ತನ್ನ ಹಿಡಿತವನ್ನು ಬಿಡದಂತೆ ಹಿಡಿದುಕೊಂಡು ಹುಲಿಗೆ ಶ್ವಾಸ ಆಡದಂತೆ ಮಾಡಿ ಅದನ್ನು ಸಾಯಿಸಿ ನಿಧಾನವಾಗಿ ನುಂಗಲು ಆರಂಭಿಸಿತು. ಆ ಸಮಯದಲ್ಲಿ ವಜ್ರಗಳಿರುವ ಹಾವು ತಪ್ಪಿಸಿಕೊಂಡಿದೆಯೆಂದು ನಾಗಭೂಷಣನಿಗೆ ತಿಳಿಯದು. ಆ ಹಾವಿನಲ್ಲಿ ವಜ್ರಗಳಿರುವ ವಿಷಯವು ಸಹ ಆತನಿಗೆ ತಿಳಿಯದು. ಪಕ್ಕದ ಊರಲ್ಲಿ ಮಲಗಿಕೊಂಡ ಮುನೆಪ್ಪ ಮನುಷ್ಯರು ಮುಂಜಾನಿನಲ್ಲಿ ಎದ್ದು ದಿನ ನಿತ್ಯಗಳನ್ನು ಮುಗಿಸಿಕೊಂಡು ನಾಗಭೂಷಣನ ಹತ್ತಿರಕ್ಕೆ ಬಂದರು. ರಾತ್ರಿ ಅಲ್ಲಿ ನಡೆದ ವಿಷಯವೆಲ್ಲಾ ತಿಳಿದುಕೊಂಡರು. ವಿಷದ ಕೋರೆಗಳು ತೆಗೆಯಬೇಕೆಂದು ಕೊಂಡ ಹಾವೂ ಸಹ ಓಡಿಹೋಗಿದೆಯೆಂದು ಆಗಲೆ ನಾಗಭೂಷಣ ತಿಳಿದುಕೊಂಡು ಆ ವಿಷಯವನ್ನು ಮುನೆಪ್ಪ ಮನುಷ್ಯರಿಗೆ ಹೇಳಿದ್ದಾನೆ. ಆ ಹಾವು ಹೋದ ವಿಷಯ ತಿಳಿದು ಮುನೆಪ್ಪ ಮನುಷ್ಯರು ಬೆಪ್ಪರಾದರು. ಕೊನೆಗೆ ನಾಗಭೂಷಣನಿಗೆ ತಮ್ಮ ವಿಷಯ ಹೇಳಿದರು. ತಾವು ವಿಷದ ಕೋರೆಗಳು ತೆಗೆಯದ ಹಾವಿಗೋಸ್ಕರವೇ ಬಂದಿದ್ದೇವೆಂದು, ಅದನ್ನು ಹಿಡಿದುಕೊಟ್ಟರೆ ಹತ್ತು ಸಾವಿರ ಹಣಕೊಡುತ್ತೇ ವೆಂದಿದ್ದಾರೆ. ಆ ಹಾವಿಗೆ ಏಕೆ ಅಷ್ಟು ಪ್ರಾಧಾನ್ಯತೆ ಕೊಡುತ್ತಿದ್ದೀರೆಂದು ನಾಗಭೂಷಣ ಕೇಳಿದಾಗ! ಅದು ಮೊದಲು ನಮ್ಮ ಸರ್ಕಸ್‌ನಲ್ಲಿ ಕೆಲಸ ಮಾಡಿದ ಹಾವೆಂದು, ಅದಕ್ಕೆ ಎಷ್ಟೋ ವಿನೋದಗಳು ಮಾಡುವುದು ತಿಳಿದಿದೆಯೆಂದು, ಆದ್ದರಿಂದ ಆ ಹಾವು ಬೇಕೆಂದು ಹೇಳಿದ್ದಾರೆ. ಅದಕ್ಕೆ ನಾಗಭೂಷಣ ಹೀಗೆ ಹೇಳಿದ್ದಾನೆ.)

**ನಾಗಭೂಷಣ್ :-** ಒಂದುವೇಳೆ ಅದೇ ಹಾವು ಕಾಣಿಸಿದರೂ ಅದನ್ನು ನಾವು ಹೇಗೆ ಗುರುತಿಸಬಲ್ಲೆವು.

**ವೆಂಕು :-** ಆ ಚಿಂತೆ ನಿನಗೆ ಬೇಡ. ನಿನ್ನ ಹಿಂದೆ ನಾವಿರುತ್ತೇವೆ. ಅದನ್ನು ನಾವು ಗುರುತಿಸಬಲ್ಲೆವು. ಅದು ಸಿಗುವವರೆಗು ನಿನ್ನ ಖರ್ಚು ನಾವೇ ಭರಿಸುತ್ತೇವೆ. ಅದು ಸಿಕ್ಕಿದ ಕೂಡಲೇ ಹತ್ತು ಸಾವಿರ ರೂಪಾಯಿಗಳು ಕೊಡುತ್ತೇವೆ.

(ಅದು ಸರ್ಕಸ್ ಹಾವೇ ಎಂದು ನಂಬಿದ ನಾಗಭೂಷಣ ಅವರು ಹಣ ಕೊಡುತ್ತೇವೆಂದಿದ್ದಾರೆ ಆದ್ದರಿಂದ ಅದನ್ನು ಹೇಗಾದರೂ ಹಿಡಿದುಕೊಡಬೇಕೆಂದು ಕೊಂಡಿದ್ದಾನೆ. ಆಗ ಮುನೆಪ್ಪ ಮನುಷ್ಯರೊಂದಿಗೆ ಹೀಗೆ ಹೇಳಿದ್ದಾನೆ.)

**ನಾಗಭೂಷಣ್ :–** ನನ್ನ ಹತ್ತಿರ ಗಜಜ್ವಾಲಾಂಜನ ಇದೆ. ಆ ಅಂಜನದಲ್ಲಿ ನೋಡಿದರೆ ಆ ಹಾವು ಎಲ್ಲಿದೆಯೋ ತಿಳಿಯಬಲ್ಲದು. ಆ ಅಂಜನವನ್ನು ನೋಡಬೇಕೆಂದರೆ ಮೊದಲು ಅದಕ್ಕೆ ಪೂಜೆ ಮಾಡಬೇಕು. ಆ ಪೂಜೆಗೆ ಐದುನೂರು (500) ರೂಪಾಯಿಗಳು ಖರ್ಚಾಗುತ್ತದೆ. (ಆ ಮಾತನ್ನು ಕೇಳಿದ ಮುನೆಪ್ಪ ಮನುಷ್ಯರಿಗೆ ಸಂತೋಷವಾಯಿತು. ಹೋದ ಹಾವನ್ನು ಬೇಗ ಹಿಡಿದುಕೊಳ್ಳಬಹುದೆನ್ನುವ ಧೈರ್ಯ ಬಂದಿತು. ಕೂಡಲೇ 500 ಹಣವನ್ನು ನಾಗಭೂಷಣನಿಗೆ ಕೊಟ್ಟು ಪೂಜೆಯನ್ನು ಪ್ರಾರಂಭಿಸೆಂದಿದ್ದಾರೆ. ನಾಗಭೂಷಣ ಅಂಜನವನ್ನು ನೋಡುವುದಕ್ಕೆ ಬೇಕಾದ ಸಿದ್ಧತೆಗಳನ್ನೆಲ್ಲಾ ಮಾಡಿಕೊಂಡು, ಪೂಜೆ ಮುಗಿಸಿಕೊಂಡು ಮುನೆಪ್ಪ ಮನುಷ್ಯರಲ್ಲಿ ವೆಂಕೂನಿಂದಲೆ ಅಂಜನವನ್ನು ತೋರಿಸಬೇಕೆಂದುಕೊಂಡಿದ್ದಾನೆ. ವೆಂಕೂನನ್ನು ಪೂಜೆ ಮುಂದೆ ಕೂರಿಸಿ ಅಂಜನದ ಡಬ್ಬೀ ಮುಚ್ಚಳ ತೆಗೆದು ಕಣ್ಣರೆಪ್ಪೆ ಹೊಡೆಯದಂತೆ ಅಂಜನವನ್ನು ನೋಡೆಂದಿದ್ದಾನೆ. ವೆಂಕೂ ಅಂಜನವನ್ನು ನೋಡುತ್ತಿದ್ದಾನೆ.)

**********************************

(ರಾಜಯೋಗಾನಂದ ಸ್ವಾಮಿ ಆಶ್ರಮದ ಹತ್ತಿರಕ್ಕೆ ಬಂದು ಚೆನ್ನಾಗಿ ಹೊದೆಗಳು ತಿಂದು ಹೋದ ಜಗನ್ನಾಥ್ ಕುಲ್ಲಾಯಮ್ಮರವರು ಸ್ವಾಮಿಯವರು ಇರುವವರೆಗು ರಾಧೇಶ್ವರಿಯನ್ನು ಏನೂ ಮಾಡಲಾರೆವೆಂದು ಅಂದುಕೊಂಡಿದ್ದಾರೆ. ಒಂದು ಕಡೆ ತಮ್ಮಿಂದ ಏನೂ ಆಗುವುದಿಲ್ಲವೆಂದು ತಿಳಿದರೂ ತಮಗೆ ನಡೆದ ಅವಮಾನಕ್ಕೆ ಏನಾದರೂ ಒಂದು ಮಾಡಬೇಕೆಂದು, ಆಲೋಚಿಸಿ ಕೊನೆಗೆ ಒಂದು ನಿರ್ಣಯಕ್ಕೆ ಬಂದಿದ್ದಾರೆ. ಪ್ರತ್ಯಕ್ಷವಾಗಿ ತಾವು ಏನೂ ಮಾಡಲಾರೆವೆಂದು ಪರೋಕ್ಷವಾಗಿ ಏನಾದರೂ ಮಾಡಬಹುದೆಂದು, ದೊಡ್ಡ ಮಾಂತ್ರಿಕನಿಂದ ಮಾಟ–ಮಂತ್ರ ಮಾಡಿಸಬೇಕೆಂದುಕೊಂಡಿದ್ದಾನೆ. ಮಾಟ–ಮಂತ್ರಗಳನ್ನು ಮಾಡುವ

ಸಾಮರ್ಥ್ಯವಿರುವ ಮಂತ್ರಶಕ್ತಿ ಇರುವವನು ನಾಗೋತುಲ ನಾಗಭೂಷಣನು ಒಬ್ಬನೇ ಎಂದು ಯಾರೋ ಹೇಳಿರುವುದನ್ನು ಕೇಳಿ ನಾಗಭೂಷಣನ ಹತ್ತಿರಕ್ಕೆ ಹೋಗಿ ಹೇಗಾದರೂ ಆತನನ್ನು ಒಪ್ಪಿಸಿ ರಾಜಯೋಗಾನಂದಸ್ವಾಮಿಗೆ ಮಂತ್ರಶಕ್ತಿಯಿಂದ ಮಾಟ ಮಾಡಿಸಬೇಕೆಂದುಕೊಂಡಿದ್ದಾನೆ. ಹಾಗೆ ಯೋಚಿಸಿದ ಜಗನ್ನಾಥ್, ನಾಗಭೂಷಣನಿಗೋಸ್ಕರ ಹೊರಟು ಹೋಗಿದ್ದಾನೆ.)

**********************************

(ತಾನು ಗ್ರಂಥರೂಪದಲ್ಲಿ ಪ್ರಚಾರ ಮಾಡಿರುವ ಆತ್ಮಜ್ಞಾನವನ್ನು ಕುರಿತು ಪ್ರಜೆಗಳು ಏನೆಂದುಕೊಳ್ಳುತ್ತಿದ್ದಾರೋ ಸ್ವತಃವಾಗಿ ತಿಳಿದುಕೊಳ್ಳಬೇಕೆಂದುಕೊಂಡ ರಾಜಯೋಗಾನಂದ ಸ್ವಾಮಿ ಕೆಲವು ದಿನಗಳು, ಕೆಲವು ಊರುಗಳು ತಿರುಗಿ ಬರಬೇಕೆಂದುಕೊಂಡಿದ್ದಾನೆ. ನಂತರ ಹೊರಟು ಮೊದಲು ಮದ್ರಾಸ್ ನಗರವನ್ನು ಸೇರಿದ್ದಾನೆ. ಅಲ್ಲಿ ತನ್ನ ಗ್ರಂಥಗಳು ಓದಿದವರು ಎಷ್ಟೋ ಜನರಿದ್ದಾರೆಂದು ಸ್ವಾಮಿಗೆ ತಿಳಿದಿತ್ತು. ಅವರ ವಿಳಾಸಗಳು ಸ್ವಾಮಿ ಹತ್ತಿರ ಇವೆ. ಮೊದಲು ರಾಯಪೇಟೆ ಯಲ್ಲಿರುವ ರವಿ ಕುಮಾರ್ ಮನೆಗೆ ಹೋಗಿದ್ದಾನೆ. ನಾನು ಇಂತಹ ಊರಿನಿಂದ ಬಂದಿದ್ದೇನೆ. ನಾನು ರಾಜಯೋಗಾನಂದ ಸ್ವಾಮಿ ಶಿಷ್ಯನು. ಈ ಊರಲ್ಲಿ ಕೆಲವು ಸಾಮಾನುಗಳು ಬೇಕು. ಆಶ್ರಮದಲ್ಲಿ ಸ್ವಾಮಿಯವರ ಹತ್ತಿರ ನಿಮ್ಮ ವಿಳಾಸ ನೋಡಿ ಬಂದಿದ್ದೇನೆ. ನನಗೆ ಬೇಕಾದ ಸಾಮಾನು ಯಾವ ಬಜಾರಿನಲ್ಲಿ ಸಿಗುತ್ತದೋ ನನಗೆ ತಿಳಿಯದು. ಇಲ್ಲಿ ಬಜಾರು ವಿಷಯ ನಿಮಗೆ ತಿಳಿದಿರುತ್ತದೆ ಅಲ್ಲವೆ! ಆದ್ದರಿಂದ ಯಾವ ಬಜಾರಿನಲ್ಲಿ ಯಾವ ಸಾಮಾನು ಸಿಗುತ್ತದೋ ನಿಮ್ಮನ್ನು ಕೇಳಿ ತಿಳಿದುಕೊಳ್ಳುವುದಕ್ಕೆ ಬಂದಿದ್ದೇನೆಂದು ಸ್ವಾಮಿ ಪೂರ್ತಿ ಅಸತ್ಯ ಹೇಳಿದನು)

ಸ್ವಾಮಿಯವರ ಬೋಧನೆಗಳಿಗೆ ಪೂರ್ತಿ ಆಕರ್ಷಿತನಾದ ರವಿಕುಮಾರ್, ಬಂದವರು ರಾಜಯೋಗಾನಂದ ಸ್ವಾಮಿ ಎಂದು ಗುರುತಿಸಲಾರದೆ ಹೋಗಿದ್ದಾನೆ. ರಾಜಯೋಗಾನಂದ ಸ್ವಾಮಿ ಶಿಷ್ಯನೆಂದು ಹೇಳಿದಕೂಡಲೆ ರವಿಕುಮಾರ್ ಎಷ್ಟೋ ಆದರಣೆಯಿಂದ ಮಾತನಾಡಿಸಿದನು. ನಿಮಗೆ ಬೇಕಾದ ಸಾಮಾನು ಇಂತಹ

ಬಜಾರಿನಲ್ಲಿ ಸಿಗುತ್ತವೆಂದು, ಆ ಬಜಾರಿನ ಅಡ್ರಸ್ ಹೇಳಿದನು. ನಂತರ ಸ್ವಾಮಿ ರವಿಕುಮಾರ್‌ನ್ನು ಹೀಗೆ ಕೇಳಿದ್ದಾನೆ.

**ಸ್ವಾಮಿ :–** ಮೊದಲು ನೀವು ಹೇಗೆ ರಾಜಯೋಗಾನಂದ ಸ್ವಾಮಿಯವರ ಜ್ಞಾನವನ್ನು ತಿಳಿದುಕೊಂಡಿದ್ದೀರ.

**ರವಿಕುಮಾರ್ :–** ಮೊದಲು ನಾನು ಬಹಳ ಪುರಾಣಗಳನ್ನು ಓದಿದ್ದೇನೆ. ನಂತರ ಎಷ್ಟೋ ಸ್ವಾಮಿಗಳು ಬರೆದ ರಚನೆಗಳನ್ನು ಸಹ ಓದಿದ್ದೇನೆ. ಅವೆಲ್ಲವನ್ನು ಹೇಳುವುದು ಅವರ ಕರ್ತವ್ಯ, ಕೇಳುವುದು ನಮ್ಮ ಕರ್ತವ್ಯ ಎಂದುಕೊಂಡರೇ ಸರಿಹೋಗುತ್ತದೆ. ಆದರೆ ಅವುಗಳನ್ನು ಕುರಿತು ಆಲೋಚಿಸಿದರೆ ಎಲ್ಲಾ ಪ್ರಶ್ನೆಗಳಾಗಿಯೇ ಉಳಿಯುತ್ತವೆ. ಅವುಗಳಲ್ಲಿ ಅನುಮಾನವಿಲ್ಲದ ಜ್ಞಾನ ನನಗೆ ಕಾಣಿಸಲಿಲ್ಲ. ರಾಮಾಯಣದಲ್ಲಿ ರಾಮನನ್ನು ಆದರ್ಶವಾಗಿ ತೆಗೆದುಕೊ ಎನ್ನುತ್ತಾರೆ. ಬಹುಪತ್ನಿತ್ವ ಪಾಪವೆನ್ನುತ್ತಾರೆ. ರಾಮ ಏಕಪತ್ನೀ ವ್ರತನು. ಆತನಂತೆ ಇರಬೇಕೆನ್ನುತ್ತಾರೆ. ಭಾರತದೊಳಗೆ ಬಂದಾಗ ಬಹುಪತ್ನಿಯರಿರುವ ಕೃಷ್ಣನನ್ನು ಭಗವಂತನಾಗಿ ಹೇಳುತ್ತಾರೆ. ಅಲ್ಲಿ ಬಹು ಪತ್ನಿಯರು ಇರುವುದು ಪಾಪವಾದಾಗ, ಇಲ್ಲಿ ಬಹು ಪತ್ನಿಯರಿರುವ ಕೃಷ್ಣನನ್ನು ಭಗವಂತನೆಂದು ಏತಕ್ಕಾಗಿ ಕರೆಯುತ್ತಿದ್ದಾರೆಂದು ಪ್ರಶ್ನಿಸಿದರೆ ಹಿರಿಯರು ಹೇಳಿದ್ದನ್ನು ವಿಮರ್ಶಿಸಬಾರದೆನ್ನುತ್ತಾರೆ.

ಪೂಜೆಗಳ ವಿಷಯಕ್ಕೆ ಬಂದರೆ ಭಕ್ತಿ ಪರವಶದಿಂದ ಮಾಡುವ ಪೂಜೆಗಳೇ ಇಲ್ಲ. ಎಲ್ಲಾ ಅರ್ಥವಿಲ್ಲದ ಪೂಜೆಗಳೇ, ಈ ಪೂಜೆ ಏಕೆ? ಈ ಪೂಜೆಯಲ್ಲಿ ಈ ವಿಧಾನ ಏಕೆ? ಎಂದರೆ ಯಾರೂ ಹೇಳುವವರೇ ಇಲ್ಲ. ಹೇಗೆ ಹೇಳಿದ್ದರೆ ಹಾಗೆ ಮಾಡು ಎನ್ನುವವರೆ ಇದ್ದಾರೆ. ಇನ್ನು ಪುರಾಣ ವಿಷಯಗಳೊಳಗೆ ಬಂದರೆ ಎಲ್ಲಾ ಕಲ್ಪಿತ ಮಾತುಗಳೇ ಇರುತ್ತವೆ. ಒಟ್ಟಿನಲ್ಲಿ ಯಾವ ಜ್ಞಾನವನ್ನು ನೋಡಿದರೂ, ಯಾವ ಪುಸ್ತಕವನ್ನು ಓದಿದರೂ ಎಲ್ಲಾ ಸಂಶಯಗಳಿಂದ ಕೂಡಿಕೊಂಡಿರುವವೇ. ಈಗ ರಾಜಯೋಗಾನಂದ ಸ್ವಾಮಿಯವರು ಬರೆದ ಗ್ರಂಥಗಳಿಂದ ಎಲ್ಲ ಅನುಮಾನಗಳು ನುಚ್ಚು ನೂರಾಗುತ್ತಿವೆ. ಸ್ವಾಮಿಯವರ ರಚನೆಗಳಲ್ಲಿ ಎಲ್ಲಾ ಪ್ರಶ್ನೆಗಳಿಗು ಉತ್ತರಗಳಿರುತ್ತವೆ. ಬೇರೆ ಪುಸ್ತಕಗಳನ್ನು ಓದಿ ಅದರಲ್ಲಿನ ಅನುಮಾನಗಳು

ಬೆಳೆದುಹೋಗಿ, ಅವುಗಳಿಗೆ ಉತ್ತರಗಳಿಲ್ಲದೆ ಇನ್ನು ದೇವರೇ ಇಲ್ಲೆನ್ನುವ ನಾಸ್ತಿಕವಾದ ನನ್ನಲ್ಲಿ ಹುಟ್ಟಿದಾಗ ಸ್ವಾಮಿಯವರ ರಚನೆಗಳು ನನಗೆ ಸಿಕ್ಕಿವೆ. ಅವುಗಳಿಂದ ನಾನು ಸಂಪೂರ್ಣ ಜ್ಞಾನಿಯಾಗಿ ಬದಲಾಗಿದ್ದೇನೆ. ಯಾರು ಯಾವ ಪ್ರಶ್ನೆ ಕೇಳಿದರೂ ಉತ್ತರ ಹೇಳುವ ಸಾಮರ್ಥ್ಯದೊಳಗೆ ಬಂದಿದ್ದೇನೆ. ಸ್ವಾಮಿಯವರ ಜ್ಞಾನದಿಂದಲೇ ನನ್ನಲ್ಲಿ ಅಷ್ಟು ಬದಲಾವಣೆ ಬಂದಿದೆ. ಇಷ್ಟು ಜ್ಞಾನವನ್ನು ತಿಳಿಸಿದ ಸ್ವಾಮಿಯವರನ್ನು ನೋಡಬೇಕೆಂದಿದೆ, ಕೆಲವು ದಿನಗಳಲ್ಲಿ ತಪ್ಪದೆ ಬರುತ್ತೇನೆ. ನೀವು ಗುರುಗಳ ಹತ್ತಿರಕ್ಕೆ ಹೋದಾಗ ನನ್ನ ನಮಸ್ಕಾರಗಳು ತಿಳಿಸಿರಿ.

(ಸರಿ ಎಂದು ಹೇಳಿದ ಸ್ವಾಮಿ ತಾನು ಸ್ವಾಮಿಯ ಶಿಷ್ಯನಾಗಿಯೇ ನಟಿಸುತ್ತಾ ಅಲ್ಲಿಂದ ಹೊರಟು ಬಂದನು)

**********************************

(ತಾಳೆಮರ ಮುನೆಪ್ಪ ಮನುಷ್ಯರಲ್ಲಿ ಗಜಜ್ವಾಲಾಂಜನವನ್ನು ನೋಡುತ್ತಿರುವ ವೆಂಕೂಗೆ ವಜ್ರಗಳಿರುವ ನಾಗರ ಹಾವು ಕಾಣಿಸಿತು. ಅದನ್ನು ವೆಂಕೂ ಗುರುತು ಹಿಡಿದಿದ್ದಾನೆ. ಆದರೆ ಅದರ ಪಕ್ಕದಲ್ಲಿ ಮತ್ತೊಂದು ನಾಗರ ಹಾವು ಸಹ ಕಾಣಿಸಿತು. ವೆಂಕೂ ಅದೇ ವಿಷಯವನ್ನು ಪಕ್ಕದಲ್ಲೇ ಇರುವ ನಾಗಭೂಷಣನಿಗೆ ತಿಳಿಸಿದ್ದಾನೆ. ಅದಕ್ಕೆ ನಾಗಭೂಷಣ "ಅದು ಎಲ್ಲಿದೆಯೋ ಗುರುತುಹಿಡಿಯುತ್ತೀಯಾ" ಎಂದು ಕೇಳಿದ್ದಾನೆ. "ಗುರುತು ಹಿಡಿಯಲಾರೆನು" ಎಂದಿದ್ದಾನೆ ವೆಂಕು "ಹಾಗಾದರೆ ಈ ಹಾವಿರುವ ಸ್ಥಳವೂ, ಊರು ಯಾವುದೋ ತಿಳಿಸೆಂದು ಗಜಜ್ವಾಲ ದೇವಿಯನ್ನು ಮನಸ್ಸಿನಲ್ಲೇ ಕೇಳು" ಎಂದಿದ್ದಾನೆ ನಾಗಭೂಷಣ. ಆಗ ವೆಂಕೂ ತನ್ನ ಮನಸ್ಸಿನಲ್ಲೇ ಹಾವು ಯಾವ ಊರಲ್ಲಿ ಇದೆಯೋ, ಯಾವ ಪ್ರಾಂತದಲ್ಲಿ ಇದೆಯೋ ತಿಳಿಸೆಂದು ಕೋರಿದನು. ಹಾಗೆ ಕೇಳಿದ ನಂತರ ನಿಮಿಷಕ್ಕೆ ಅಂಜನದಲ್ಲಿ ಕೆಲವು ಅಕ್ಷರಗಳು ಕಾಣಿಸಿದವು. ಅವುಗಳನ್ನು ವೆಂಕೂ ನಿಧಾನವಾಗಿ ಓದಿದನು. "ಇಲ್ಲಿಗೆ 425 ಕಿಲೋಮೀಟರುಗಳ ದೂರದಲ್ಲಿ, ತೋಟಿಮರ್ರಿ ಎನ್ನುವ ಊರಿನ ಹೊರಗೆ, ಉತ್ತರದಲ್ಲಿ ಒಂದು ಮೈಲು ದೂರದಲ್ಲಿ ಈ ಹಾವು ಇದೆ." ಎನ್ನುವ ವಿಷಯವನ್ನು ವೆಂಕು ಓದಿದನು.

ತಪ್ಪಿಸಿಕೊಂಡು 24 ಗಂಟೆಗಳು ಸಹ ಪೂರ್ತಿಯಾಗದ ಮುನ್ನವೇ ಆ ಹಾವು 425 ಕಿಲೋಮೀಟರುಗಳ ದೂರ ಹೇಗೆ ಸೇರಿದೆಯೋ ಯಾರಿಗೂ ಅರ್ಥವಾಗಲಿಲ್ಲ. ನಾಗಭೂಷಣ ಆ ವಿಷಯವನ್ನು ಸಹ ಅಂಜನದಲ್ಲೇ ತಿಳಿದುಕೊಳ್ಳಬೇಕೆಂದು ಕೊಂಡಿದ್ದಾನೆ. ಹಾವು ಅಷ್ಟು ದೂರ ಹೇಗೆ ಸೇರಿದೆಯೋ ಮನಸ್ಸಿನಲ್ಲೇ ವೆಂಕೂನನ್ನು ಕೇಳೆಂದಿದ್ದಾನೆ. ವೆಂಕು ಹಾಗೇ ಅಂಜನದಲ್ಲಿ ಕೇಳಿದ್ದಾನೆ. ಒಂದು ಅರ್ಧ ನಿಮಿಷದ ನಂತರ ಹೀಗೆ ಕಾಣಿಸಲು ಆರಂಭಿಸಿತು. ಹಾವು ನಾಗಭೂಷಣ ಮನೆಯಿಂದ ಓಡಿಹೋಗುತ್ತಾ, ಆ ಊರಿಗೆ ಅರ್ಧಕಿಲೋ ಮೀಟರ್ ದೂರದಲ್ಲಿರುವ ನ್ಯಾಷನಲ್ ಹೈವೇ ರಸ್ತೆ ಹತ್ತಿರಕ್ಕೆ ಸೇರಿತು. ಆ ರಸ್ತೆಯ ಮೇಲೆ ಒಂದು ಕಡೆ ನಿಂತಿರುವ ಲಾರಿ ಕೆಳಗೆ ತೂರಿಹೋಗುತ್ತಾ ಹಿಂಬದಿಯ ಕೆಳಗಿನ ಭಾಗದಲ್ಲಿರುವ ಸ್ಟೆಪ್ನೀ ಕ್ಯಾರಿಯರ್‌ನಲ್ಲಿ ಟೈರಿನ ಮೇಲೆ ಚಿಕ್ಕ ಕಪ್ಪೆಯನ್ನು ನೋಡಿತು. ಹಾವು ಹಸಿವಿನಿಂದಿರುವುದರಿಂದ ಆ ಟೈರು ಮೇಲಕ್ಕೆ ಮೆಲ್ಲನೆ ಏರಿ, ಕಪ್ಪೆಯನ್ನು ಬಾಯಿಂದ ಹಿಡಿದುಕೊಂಡು ನುಂಗಲು ಆರಂಭಿಸಿತು. ಅಷ್ಟರಲ್ಲೇ ಡಬ್ಬ ತೆಗೆದು ಕೊಂಡು ಮಲಮೂತ್ರ ವಿಸರ್ಜನೆಗೆ ಹೋಗಿದ್ದ ಕ್ಲೀನರ್ ಬಂದು ರೈಟ್ ಹೇಳಿದನು. ಲಾರಿ ಸ್ಟಾರ್ಟಾಯಿತು. ಆ ಶಬ್ದಕ್ಕೆ ಹಾವಿಗೆ ಕಣ್ಣು ಕಾಣಿಸಲಿಲ್ಲ. ಅಲ್ಲೇ ಟೈರು ಮೇಲೆನೇ ಉಳಿಯಿತು. ಲಾರಿ ರಾತ್ರಿಯೆಲ್ಲಾ ಪ್ರಯಾಣಿಸಿತು. ಕೊನೆಗೆ ತೋಟಮರ್ರಿ ಗ್ರಾಮದ ಹತ್ತಿರ ಲಾರಿ ಇಂಜನ್ ಕೆಟ್ಟುಹೋಗಿ ಲಾರಿ ನಿಂತು ಹೋಯಿತು. ಕೂಡಲೇ ಹಾವು ಟೈರಿನ ಮೇಲಿಂದ ಇಳಿದುಹೋದಂತೆ ವೆಂಕೂಗೆ ತಿಳಿಯಿತು. ಆ ವಿಷಯವನ್ನೇ ನಾಗಭೂಷಣನಿಗೆ ತಿಳಿಸಿದನು.)

ವಜ್ರಗಳಿರುವ ಹಾವು ಪಕ್ಕದಲ್ಲೇ ಇರುವ ಮತ್ತೊಂದು ನಾಗರಹಾವು ಸಾಮಾನ್ಯವಾದ ಹಾವು ಅಲ್ಲವೆಂದು ಅವರಿಗೆ ತಿಳಿದಿಲ್ಲ. ಆ ಹಾವಿಗೆ ಗುಹೆಯಲ್ಲಿರುವ ಮಹಾತ್ಮನು ಶಕ್ತಿಯನ್ನು ಕೊಟ್ಟು ಕಳುಹಿಸಿದ್ದಾನೆ. ಮಹಾತ್ಮನ ಆದೇಶಾನುಸಾರ ಗುಹೆಯಿಂದ ಹೊರಗೆ ಬಂದಿರುವ ಹಾವು ತಮ್ಮನ್ನು ಅಂಜನದಲ್ಲಿ ನೋಡುತ್ತಿದ್ದಂತೆ ಗ್ರಹಿಸಿತು. ತಕ್ಷಣವೇ ಬಾಲದಿಂದ ಹೊಡೆದಿದೆ. ಆ ಏಟು ಇಲ್ಲಿ ಅಂಜನ ನೋಡುತ್ತಿರುವ ವೆಂಕೂಗೆ ತಾಕಿತು. ವೆಂಕೂ ಅಬ್ಬಾ ಎಂದು ಮುಖ ಜಾಡಿಸಿಕೊಂಡನು. ಹಾವು ಹೊಡೆದಿದೆಯೆಂದು ತಿಳಿದುಕೊಂಡ ನಾಗಭೂಷಣನಿಗೆ

ಆಶ್ಚರ್ಯವಾಯಿತು. ಅಂಜನವನ್ನು ಮುಚ್ಚಿಹಾಕಿದನು. ಪಿಶಾಚಿಗಳಾದ ಹಾವುಗಳೇ ಅಂಜನದಲ್ಲಿ ಹಾಗೆ ಹೊಡೆಯಬಲ್ಲವು. ಆದರೆ ಈ ಹಾವು ಹೇಗೆ ಹೊಡೆದಿದೆಯೆಂದು ನಾಗಭೂಷಣ ಯೋಚಿಸತೊಡಗಿದನು. ಮುನೆಪ್ಪ ಗುಂಪಿನವರು ಎರಡನೆ ಹಾವಿನ ಮೇಲೆ ನಿಘಾ ಇಡದೆ, ವಜ್ರಗಳಿರುವ ಹಾವನ್ನು ಹೇಗಾದರೂ ಹಿಡಿದುಕೊಳ್ಳಬೇಕೆನ್ನುವ ಛಲದಿಂದ ಕೂಡಲೇ ತೋಟಿಮರ್ರಿ ಊರಿಗೆ ಹೋಗಬೇಕೆಂದುಕೊಂಡಿದ್ದಾರೆ. ಆದರೆ ನಾಗಭೂಷಣ ಮಾಂತ್ರಿಕನಾದ್ದರಿಂದ ಎರಡನೆ ಹಾವನ್ನು ಕುರಿತು ಆಲೋಚಿಸತೊಡಗಿದನು. ಹಾವಿಗೆ ದೊಡ್ಡ ಶಕ್ತಿ ಇದ್ದರೆ ಹೊರತು ಹಾಗೆ ಹೊಡೆಯಲಾರದೆಂದು ತಿಳಿದ ನಾಗಭೂಷಣನಿಗೆ ಒಳಗೆ ಸ್ವಲ್ಪ ಭಯವಿದ್ದರೂ, ಮುನೆಪ್ಪ ಮನುಷ್ಯರ ಒತ್ತಾಯದ ಮೇರೆಗೆ ಸರಿ ಹೋಗೋಣ ಎಂದಿದ್ದಾನೆ. ಮುನೆಪ್ಪ ಮನುಷ್ಯರು ಬಾಡಿಗೆ ಕಾರನ್ನು ತರುವುದಕ್ಕೆ ಹೋಗಿದ್ದಾರೆ. ಅಷ್ಟರಲ್ಲಿ ಜಗನ್ನಾಥ ಅಲ್ಲಿಗೆ ಬಂದಿದ್ದಾನೆ. ಜಗನ್ನಾಥ ಹಿಂದೆ ಬಂದಿರುವ ಮನುಷ್ಯ ನಾಗಭೂಷಣನನ್ನು ಪರಿಚಯ ಮಾಡಿದ್ದಾನೆ. ಆಗ ಜಗನ್ನಾಥ ನಾಗಭೂಷಣ ನೊಂದಿಗೆ ಹೀಗೆ ಹೇಳಿದ್ದಾನೆ.

**ಜಗನ್ನಾಥ :–** ನಿನ್ನಿಂದ ಮುಖ್ಯವಾದ ಕೆಲಸ ಆಗಬೇಕಾಗಿದೆ. ವಿಷಯವೆಲ್ಲಾ ಊರಿಗೆ ಹೋದ ನಂತರ ಹೇಳುತ್ತೇನೆ. ಈಗ ತಕ್ಷಣ ನನ್ನ ಹಿಂದೆ ಬರಬೇಕು.

**ನಾಗಭೂಷಣ್ :–** ಇಲ್ಲ. ನನಗೆ ಈಗ ಬೇರೆ ಕೆಲಸ ಇದೆ ಬರಲಾರೆನು.

**ಜಗನ್ನಾಥ :–** ನೀನು ಈಗಲೇ ಬರಬೇಕು. ಮುಖ್ಯವಾದ ಕೆಲಸ, ಲಕ್ಷ ರೂಪಾಯಿಗಳು ಕೊಡುತ್ತೇನೆ.

**ನಾಗಭೂಷಣ್ :–** ಇಲ್ಲ, ಸಾಧ್ಯವಾಗುವುದಿಲ್ಲ. ನಾನು ಈಗ ಮುಖ್ಯವಾದ ಕೆಲಸದ ಮೇಲೆ ಹೋಗುತ್ತಿದ್ದೇನೆ. ಈಗ ಹೋಗದೇ ಹೋದರೆ ನಮಗೆ ಸಿಗುವುದು ಸ್ಥಳ ಬದಲಾಗಿಹೋಗುತ್ತದೆ. ಅದು ಸ್ಥಳ ಬದಲಾಯಿಸುವುದಕ್ಕಿಂತ ಮೊದಲೆ ಅಲ್ಲಿಗೆ ಹೋಗಬೇಕು.

(ಅಷ್ಟರಲ್ಲಿ ಮುನೆಪ್ಪ ಮನುಷ್ಯರು ಬಾಡಿಗೆ ಜೀಪು ತೆಗೆದುಕೊಂಡು ಬಂದರು. ಜಗನ್ನಾಥನ ಮಾತುಗಳು ಕೇಳಿ "ನೀನ್ಯಾರಯ್ಯಾ ಪಾನಕದಲ್ಲಿ ಕಡ್ಡಿಯಂತೆ?

ನಾಗಭೂಷಣ ನಿನ್ನ ಹಿಂದೆ ಬರುವುದಿಲ್ಲ ನಮ್ಮ ಹಿಂದೆ ಬರುತ್ತಾನೆ. ನೀನು ಬಂದ ದಾರಿಯಲ್ಲೇ ಹೋಗು" ಎಂದಿದ್ದಾನೆ. ಅವರ ಮಾತುಗಳನ್ನು ಕೇಳಿ ಜಗನ್ನಾಥನಿಗೆ ಕೋಪ ಬಂದು ಹೀಗೆ ಹೇಳಿದನು.)

**ಜಗನ್ನಾಥ :–** ಏನೋ, ಬಂದ ದಾರಿಯಲ್ಲೇ ಹೋಗು! ಎಂದು ಮರ್ಯಾದೆ ಇಲ್ಲದೆ ಮಾತನಾಡುತ್ತೀಯಾ! ನೀವು ಯಾರೋ ಹೊಸಬರಂತೆ ಇದ್ದೀರ. ನನ್ನ ಕಥೆ ನಿಮಗೆ ತಿಳಿಯದೆಂದುಕೊಳ್ಳುತ್ತೇನೆ, ಹುಷಾರ್! ಮರ್ಯಾದೆಯಿಂದ ಮಾತನಾಡಿರಿ.

**ವೆಂಕು :–** ಎಲ್ಯೆ ನಾವು ನಿನ್ನ ಅಪ್ಪನಂತಹವರಿಗೆ ಅಂಗೈಯಲ್ಲಿ ನೀರು ಕುಡಿಸಿದವರು. ನಮ್ಮ ಕೆಲಸಕ್ಕೆ ಅಡ್ಡ ಬಂದಿರುವುದೇ ಅಲ್ಲದೆ, ನಮ್ಮನ್ನೇ ಹುಷಾರ್ ಎನ್ನುತ್ತೀಯಾ. ನಿನ್ನ ಹತ್ತಿರ ಹಣ ಇದೆಯೆಂದು ದೊಡ್ಡ ಸಾಹುಕಾರನೆಂದುಕೊಂಡಿದ್ದೀಯೇನೊ, ನಿನ್ನನ್ನು ಸಹ ಕೊಳ್ಳುವ ಸಾಮರ್ಥ್ಯ ನಮಗಿದೆ ನೀನೇ ನಮಗೆ ಮರ್ಯಾದೆ ಕೊಟ್ಟು ಮಾತನಾಡು.

(ಅಷ್ಟರಲ್ಲಿ ನಾಗಭೂಷಣ ಜೋಕ್ಯ ಮಾಡಿಕೊಂಡು ಜಗನ್ನಾಥನಿಗೆ ಸಮಾಧಾನ ಹೇಳಿದನು. "ಇವರು ಸರ್ಕಸ್ ಮನುಷ್ಯರು, ಇವರನ್ನು ಹತ್ತಿರ ಮಾಡಿಕೊಳ್ಳಬೇಕು. ದೂರ ಮಾಡಿಕೊಳ್ಳಬಾರದು. ಇವರಲ್ಲಿ ದೊಡ್ಡ ಭಾರವನ್ನು ಎತ್ತುವ ಪೈಲ್‌ವಾನ್‌ಗಳು ಸಹ ಇದ್ದಾರೆ. ಇವರೊಂದಿಗೆ ಹೆಚ್ಚಾಗಿ ಮಾತನಾಡಬಾರದು" ಎಂದು ನಿಧಾನವಾಗಿ ಹೇಳಿದ್ದಾನೆ. ಮರೆಯಿಂದ ನಾಗಭೂಷಣ ಹೇಳಿದ ಮಾತುಗಳನ್ನು ಕೇಳಿ ಜಗನ್ನಾಥನು ತಗ್ಗಿ ಹೋದನು. ಮುನೆಪ್ಪ ಮನುಷ್ಯರಿಗೆ ಕ್ಷಮಾಪಣೆ ಹೇಳಿ ಹೊಂದಿಕೊಂಡು ಹೋದನು. ನಂತರ ಹತ್ತು ದಿನಗಳಿಗೆ ತನ್ನೊಂದಿಗೆ ಬೇಟಿಯಾಗಲು ನಾಗಭೂಷಣ ಜಗನ್ನಾಥನಿಗೆ ಹೇಳಿ ಮುನೆಪ್ಪ ಮನುಷ್ಯರೊಂದಿಗೆ ಹೊರಟು ಹೋದನು.)

*********************************

(ರಾಜಯೋಗಾನಂದ ಸ್ವಾಮಿ ತನ್ನ ಜ್ಞಾನ ಪ್ರಜೆಗಳಲ್ಲಿ ಯಾವ ಬದಲಾವಣೆ ತಂದಿದೆಯೋ ನೋಡಬೇಕೆಂದು ಆಶ್ರಮ ಬಿಟ್ಟು ಹೋಗುವಾಗ, ಪುನಃ ತಾನು ಬರುವವರೆಗು ರಾಘವನನ್ನು, ಗಿರಿಜನರನ್ನು ಆಶ್ರಮದಲ್ಲೇ ಇರುವಂತೆ ನಿಯಮಿಸಿ ಹೋಗಿದ್ದಾನೆ. ಆದ್ದರಿಂದ ರಾಘವ ಮತ್ತು ಗಿರಿಜನರು ಆಶ್ರಮದಲ್ಲೇ ಇದ್ದಾರೆ. ರಾಘವ ತನ್ನ ವಿಷಯವನ್ನು ಕೂಡ ಸ್ವಾಮಿಗೆ ಇನ್ನೂ ಹೇಳಲಿಲ್ಲ. ಆದ್ದರಿಂದ ಸ್ವಾಮಿ ಬಂದ ನಂತರವೇ ಆತನಿಗೆ ವಿಷಯವನ್ನು ಹೇಳಬೇಕೆಂದುಕೊಂಡಿದ್ದಾರೆ. ಸ್ವಾಮಿ ಬರುವುದಕ್ಕಾಗಿ ದಾರಿ ಕಾಯುತ್ತಾ ಕಾಲ ಕಳೆಯುತ್ತಿದ್ದರು. ಒಂದು ದಿನ ದಾರಿಯಲ್ಲಿ ಹೋಗುವ ಪ್ರಯಾಣಿಕರು, ಅವರ ಹಿಂದೆ ತಂದುಕೊಂಡ ಅನ್ನವನ್ನು ತಿನ್ನುವುದಕ್ಕೆ, ಕುಡಿಯುವ ನೀರಿಗೋಸ್ಕರ ಆಶ್ರಮಕ್ಕೆ ಬಂದರು. ಆಶ್ರಮ, ದಾರಿಗೆ ಸ್ವಲ್ಪ ದೂರದಲ್ಲಿ ಇರುವುದರಿಂದ ಆಗಾಗ ಕುಡಿಯುವ ನೀರಿಗೋಸ್ಕರ ಯಾರಾದರೂ ಬರುತ್ತಿರುತ್ತಾರೆ. ಆರು ಜನ ಬಂದಿದ್ದಾರೆ. ಎಲ್ಲರೂ ಅನ್ನ ತಿನ್ನುವುದಕ್ಕೆ ಕುಳಿತು ಕೊಂಡಿದ್ದಾರೆ. ಆದರೆ ಒಬ್ಬನು ಮಾತ್ರ ಅನ್ನದ ಮುಂದೆ ಕುಳಿತುಕೊಂಡು ಅನ್ನವನ್ನು ತಿನ್ನದೆ ಪುನಃ ಎದ್ದು ಪಕ್ಕದಲ್ಲಿ ಕುಳಿತುಕೊಂಡಿದ್ದಾನೆ. ಉಳಿದ ಐದು ಜನ ಭೋಜನ ಮಾಡಿದರು. ಪಕ್ಕದಲ್ಲಿ ಕುಳಿತುಕೊಂಡವನು ಹೊಟ್ಟೆನೋವಿನಿಂದ ಬಾಧೆಪಡುತ್ತಿದ್ದರೆ ಉಳಿದವರು ಅವನನ್ನು ಸಮಾಧಾನಪಡಿಸುತ್ತಿದ್ದರು. ಅವರನ್ನು ನೋಡಿದ ರಾಘವ ಯಾವುದೋ ಹೊಟ್ಟೆನೋವು ಬಿಡು ಎಂದುಕೊಂಡನು. ಸ್ವಲ್ಪ ಹೊತ್ತಿಗೆ ಅವನ ಹೊಟ್ಟೆ ದಪ್ಪ ಆಗುವುದಕ್ಕೆ ಶುರುವಾಯಿತು. ಮೊದಲು ಸಾಧಾರಣವಾಗಿ ಇದ್ದ ಹೊಟ್ಟೆ ಸ್ವಲ್ಪ ಹೊತ್ತಿಗೇ ಹಾಗೆ ಇನ್ನಷ್ಟು ದಪ್ಪ ಆಗುವುದು ರಾಘವನಿಗೆ ವಿಚಿತ್ರವಾಗಿ ಕಾಣಿಸಿತು. ಆಗ ರಾಘವ ಅವರಲ್ಲಿ ಒಬ್ಬರನ್ನು ಹೀಗೆ ಕೇಳಿದನು.)

**ರಾಘವ :–** ಆತನು ಅನ್ನವನ್ನೂ ಸಹ ತಿಂದಿಲ್ಲ. ಹಸಿದ ಹೊಟ್ಟೆಯಿಂದ ಇರುವವನಿಗೆ ಹೊಟ್ಟೆನೋವು ಏನು? ಇನ್ನು ವಿಚಿತ್ರವಾಗಿ ಹೊಟ್ಟೆ ಉಬ್ಬುವುದೇನು? ಇದು ಯಾವ ರೋಗ.

**ಪ್ರಯಾಣಿಕನು :–** ಇದು ರೋಗವಲ್ಲಯ್ಯಾ ತಂದೆ! ಇದು ದೆವ್ವ, ನಮ್ಮ ಕರ್ಮದಂತೆ ಬಂದು ಸೇರಿದೆ. ಮೂರು ಸಂವತ್ಸರಗಳಿಂದ ಬಾಧೆ ಇಡುತ್ತಿದೆ. ಯಾರೂ ವಾಸಿ

ಮಾಡಲಾರದೆ ಹೋಗಿದ್ದಾರೆ. ಈಗ ಈ ಪಕ್ಕದ ಊರಿಗೆ ಮಳಯಾಲ ಮಾಂತ್ರಿಕನು ಬಂದಿದ್ದಾನಂತೆ, ಆತನು ಎಂತಹ ದೆವ್ವವನ್ನಾದರೂ ಬಿಡಿಸಿ ಕಾಪಾಡುತ್ತಾನಂತೆ, ಆದ್ದರಿಂದ ಆತನ ಹತ್ತಿರಕ್ಕೆ ಹೋಗುತ್ತಿದ್ದೇವೆ. ಆದರೆ ಹೊರಟಾಗಿನಿಂದ ಈ ಬಾಧೆ ಮಾತುಮಾತಿಗೂ ಬರುತ್ತಿದೆ. ಈಗ ನೋಡಿದ್ದೀರಲ್ಲ ಅನ್ನವನ್ನು ಸಹ ತಿನ್ನಲು ಬಿಡಲಿಲ್ಲ.

**ರಾಘವ :–** ಇದು ದೆವ್ವದಿಂದ ಬಂದಿರುವ ಬಾಧೆ ಎಂದು ನಿಮಗೆ ಹೇಗೆ ತಿಳಿದಿದೆ. ಹೊಟ್ಟೆಯಲ್ಲಿ ಯಾವುದಾದರೂ ರೋಗದಿಂದ ಹೀಗೆ ಆಗಬಹುದಲ್ಲವೆ!

**ಪ್ರಯಾಣಿಕರು :–** ಇಲ್ಲಯ್ಯಾ ತಂದೆ, ಇದು ನಿಜಕ್ಕೂ ದೆವ್ವವೇ. ನಾವೂ ಸಹ ಮೊದಲು ನಿಮ್ಮಂತೇ ಅಂದುಕೊಂಡಿದ್ದೆವು. ಆದರೆ ಈತನಲ್ಲಿರುವ ದೆವ್ವವೇ ಆತನ ಮೈಮೇಲೆ ಬಂದು ಮಾತನಾಡಿದೆ. ಅಂದಿನಿಂದ ಇದು ರೋಗವಲ್ಲ ದೆವ್ವ ಎಂದು ತಿಳಿದಿದೆ.

(ದೆವ್ವಗಳ ವಿಷಯಗಳು ತಿಳಿಯದ ರಾಘವನಿಗೆ ಅವರ ಮಾತುಗಳು ವಿಚಿತ್ರವಾಗಿ ತೋಚಿದವು. ಹೊಸ ವಿಷಯಗಳಲ್ಲಿ ಸತ್ಯವೆಷ್ಟು, ಅಸತ್ಯವೆಷ್ಟು ಎಂದು ತಿಳಿದುಕೊಳ್ಳುವ ರಾಘವ ಅದರ ವಿಷಯವನ್ನು ಪೂರ್ತಿಯಾಗಿ ತಿಳಿದುಕೊಳ್ಳಬೇಕೆಂದುಕೊಂಡಿದ್ದಾನೆ.)

**ರಾಘವ :–** ಹೀಗೆ ದೆವ್ವದ ಬಾಧೆ ನಿಮ್ಮೊಬ್ಬರಿಗೇನಾ ಅಥವಾ ನಿಮ್ಮಂತೆ ಬಾಧೆಪಡುವವರು ಇನ್ನೂ ಇದ್ದಾರಾ?

**ಪ್ರಯಾಣಿಕನು :–** ಏಕೆ ಇಲ್ಲ, ಬಹಳ ಜನ ಇದ್ದಾರೆ. ಎಷ್ಟೋ ವಿಧಗಳಲ್ಲಿ ಬಾಧೆಪಡುತ್ತಿದ್ದಾರೆ. ಇಂತಹ ಬಾಧೆಗಳು ಡಾಕ್ಟರ್‌ಗಳಿಗು, ಔಷಧಗಳಿಗು ವಾಸಿಯಾಗುವುದಿಲ್ಲ. ಇವುಗಳನ್ನು ಭೂತವೈದ್ಯರು ಮಾತ್ರ ವಾಸಿ ಮಾಡಬೇಕು. ಆ ಭೂತ ವೈದ್ಯರು ಎಲ್ಲೋ ಒಂದು ಕಡೆ ಇರುತ್ತಾರೆ. ಆದರೂ ಅವರು ಅದಕ್ಕೆ, ಇದಕ್ಕೆ ಎಂದು ಹಣವನ್ನು ಕಸಿಯುತ್ತಾರೆ. ಆದರೆ ದೆವ್ವ ಮಾತ್ರ ಹೋಗುವುದಿಲ್ಲ. ಒಬ್ಬ ಭೂತವೈದ್ಯನ ಕೈಯಲ್ಲಿ ಒಂದು ದೆವ್ವ ಹೋದರೆ, ಹತ್ತು ದೆವ್ವಗಳು ಹೋಗದಂತೆ ಮೊಂಡುತನಕ್ಕೆ ಬೀಳುತ್ತವೆ. ಇಲ್ಲಿಗೆ ನಾವು ಬಹಳ ಜನ ಭೂತವೈದ್ಯರ ಹತ್ತಿರಕ್ಕೆ

ಹೋಗಿದ್ದೇವೆ. ಹಣ ಹೋಗಿವೆ ಆದರೆ ನಮ್ಮ ಬಾಧೆ ಹೋಗಲಿಲ್ಲ. ಏನಯ್ಯಾ ಹೋಗಲಿಲ್ಲವಲ್ಲ ಎಂದರೆ ನಾವು ಮಾಡುವುದು ಮಾಡಿದ್ದೇವೆ ಎನ್ನುತ್ತಾರೆ. ಯಾವ ದೇವರಿಗೆ ಕೈ ಮುಗಿದರೂ, ಎಷ್ಟು ಮುಡುಪು ಕಟ್ಟಿದರೂ ನಮ್ಮ ಬಾಧೆ ತೀರಲಿಲ್ಲ. ಎಲ್ಲಿ ವೈದ್ಯನಿದ್ದಾನೆಂದರೆ ಅಲ್ಲಿಗೆ ಹೋಗುತ್ತಿದ್ದೇವೆ. ನಮ್ಮ ಕರ್ಮವನ್ನು ಯಾವ ಮಹಾನುಭಾವನು ಬಗೆಹರಿಸುತ್ತಾನೋ, ಇರುವುದು ಒಬ್ಬನೇ ಮಗ ಮದುವೆ ಆಗಿ ಒಂದು ತಿಂಗಳು ಕೂಡ ಆಗದೇ ಈ ಬಾಧೆ ತಗಲುಕೊಂಡಿದೆ. ಅವನು ಹೆಂಡತಿಯೊಂದಿಗೆ ಸಂಸಾರವನ್ನು ಸಹ ಮಾಡಲಾರದಂತಿದ್ದಾನೆ. ಇಲ್ಲಿರುವ ವೈದ್ಯರೆಲ್ಲರು ನೋಡಿದ್ದಾರೆ, ಕೇರಳದಿಂದ ಯಾರೋ ವೈದ್ಯನು ಬಂದಿದ್ದಾನೆಂದು ಕೇಳಿ ಹೋಗುತ್ತಿದ್ದೇವೆ. ಹೊರಟಾಗಿನಿಂದ ಊಟ ಸಹ ಮಾಡಲಿಲ್ಲ. ಅವನನ್ನು ನೋಡಿದರೆ ನಮಗೆ ಅಳು ಬರುತ್ತಿದೆ.

(ಅವರನ್ನು ನೋಡಿ ಅವರ ಬಾಧೆಯನ್ನು ಅರ್ಥ ಮಾಡಿಕೊಂಡಿದ್ದಾನೆ. ಆದರೆ ಅದು ದೆವ್ವದಿಂದ ಉಂಟಾಗುವ ಬಾಧೆಯೆಂದು ರಾಘವನಿಗೆ ನಂಬಿಕೆ ಇಲ್ಲ. ಆದ್ದರಿಂದ ಅದು ರೋಗವೇ ಆಗಿರುತ್ತದೆಂದುಕೊಂಡಿದ್ದಾನೆ. ತನಗೆ ತಿಳಿದ ಮೂಲಿಕೆಗಳಿಂದ ಹೊಟ್ಟೆನೋವನ್ನು ನಿವಾರಣೆ ಮಾಡಬಹುದೆಂದುಕೊಂಡಿದ್ದಾನೆ. ಆದರೆ ಆ ಮೂಲಿಕೆಗಳು ಇಲ್ಲಿ ಸಿಗುವುದಿಲ್ಲ. ಅವುಗಳಿಗೋಸ್ಕರ ತನ್ನಹಿಂದೆ ಬಂದಿರುವವರನ್ನು ಅಡವಿಗೆ ಕಳುಹಿಸಿ ಅವುಗಳನ್ನು ತರಿಸಿಕೊಳ್ಳಬೇಕೆಂದು ಕೊಂಡಿದ್ದಾನೆ. ಆದರೆ ಅಷ್ಟು ಅವಧಿ ಇಲ್ಲ. ಆಗ ಏನೋ ಒಂದು ಮಾಡಿ ಅವನಿಗೆ ಹೊಟ್ಟೆನೋವನ್ನು ತಗ್ಗಿಸಬೇಕೆಂದುಕೊಂಡಿದ್ದಾನೆ. ಕೈಯಿಂದ ಹೊಟ್ಟೆಯನ್ನು ಒತ್ತುವುದರಿಂದ ಸ್ವಲ್ಪ ನೋವನ್ನು ಕಡಿಮೆ ಮಾಡಬಹುದೆಂದುಕೊಂಡು, ಹೊಟ್ಟೆ ನೋವು ಇರುವವನ ಹತ್ತಿರಕ್ಕೆ ಹೋಗಿ ನಿನ್ನ ಹೊಟ್ಟೆನೋವು ಎಲ್ಲಿದೆ, ಇಲ್ಲೇನಾ ಎಂದು ಆತನ ಹೊಟ್ಟೆ ಮೇಲೆ ತನ್ನ ಕೈಬೆರಳನ್ನು ಇಟ್ಟು ಕೇಳಿದ್ದಾನೆ. ರಾಘವ ಕೈ ಇಟ್ಟಿರುವ ಕಡೆ ಆತನಿಗೆ ಹೊಟ್ಟೆನೋವು ಇತ್ತು. ಆದರೆ ರಾಘವ ತನ್ನ ಕೈ ಬೆರಳನ್ನು ಹೊಟ್ಟೆ ಮೇಲೆ ಇಟ್ಟ ಕೂಡಲೆ ಆತನಿಗೆ ನೋವು ಇಲ್ಲದಂತೆ ಹೋಯಿತು. ಕೂಡಲೆ ಆ ವ್ಯಕ್ತಿಯಲ್ಲಿ ಬದಲಾವಣೆ ಬಂದಿದೆ. ಆತನು ನನಗೆ ಹೊಟ್ಟೆನೋವು ಹೋಗಿದೆಯೆಂದು ಸಂತೋಷವಾಗಿ ಹೇಳಿದ್ದಾನೆ. ಆತನು ಹಾಗೆ ಹೇಳುವುದರಲ್ಲಿ

ಆತನ ಹಿಂದೆ ಬಂದಿರುವ ಅವರು ಸಂತೋಷಪಟ್ಟರು. ಆತನ ಮಾತು ಕೇಳಿದ ರಾಘವನಿಗೆ ಆಶ್ಚರ್ಯವಾಯಿತು. ಆತನು ನಿಜ ಹೇಳುತ್ತಿದ್ದಾನಾ, ಸುಳ್ಳು ಹೇಳುತ್ತಿದ್ದಾನಾ ಎನ್ನುವ ಅನುಮಾನ ಬಂದಿತು. ತಾನು ಏನೂ ಮಾಡದೇ ಆತನ ಹೊಟ್ಟೆನೋವು ಹೇಗೆ ಹೋಗಿದೆ ಎಂದು ಅನುಮಾನ ಏರ್ಪಟ್ಟಿತು. ಅಲ್ಲಿಯವರೆಗು ಹೊಟ್ಟೆನೋವಿನಿಂದ ಬಾಧೆಪಡುತ್ತಿರುವ ಅವರ ಮನುಷ್ಯ ಒಂದೇ ಬಾರಿ ರಾಘವನಿಂದ ಹೊಟ್ಟೆನೋವು ಇಲ್ಲದಂತೆ  ಹೋಗುವುದು ಅವರಿಗೆ ಆಶ್ಚರ್ಯವಾಗಿದೆ.

ರಾಘವನಿಗೆ ಮಾತ್ರ ಆತನ ಮಾತಿನಮೇಲೆ ನಂಬಿಕೆ ಉಂಟಾಗಲಿಲ್ಲ. ನಾನು ಏನೂ ಮಾಡಲಿಲ್ಲ ಅಲ್ಲವೆ! ನೋವು ಎಲ್ಲಿದೆಯೆಂದು ಕೈಯನ್ನು ಇಟ್ಟಿದ್ದೇನೆ. ಅಷ್ಟು ಮಾತ್ರಕ್ಕೇ ಎಲ್ಲಾ ನೋವು ಹೋಗಿದೆ ಎನ್ನುತ್ತಾನಲ್ಲ, ಇವನು ಏನೋ ನಟನೆ ಮಾಡುತ್ತಿದ್ದಾನೆ ಎಂದುಕೊಂಡನು. ಆದರೂ ಇವರೊಂದಿಗೆ ನನಗೇಕೆ ಚರ್ಚೆ ಎಂದುಕೊಂಡು "ಚೆನ್ನಾಗಾಗಿದೆ ಅಲ್ಲವೆ! ಇನ್ನು ಹೋಗಿ ಬನ್ನಿ" ಎಂದನು. ರಾಘವ ಮಾತು ಕೇಳಿದವರು ಹೀಗೆ ಅಂದಿದ್ದಾರೆ. "ಇಷ್ಟು ಸುಲಭವಾಗಿ ಇಲ್ಲಿಯವರೆಗು ಯಾರೂ ಈ ನೋವನ್ನು ಇಲ್ಲದಂತೆ ಮಾಡಲಿಲ್ಲ. ಈ ನೋವು ಪ್ರತಿ ದಿನ ಬರುತ್ತದೆ. ಎರಡು ದಿನಗಳು ಇಲ್ಲೇ ಇದ್ದು ಇನ್ನು ಆ ನೋವು ಬಾರದಂತೆ ವೈದ್ಯವನ್ನು ಮಾಡಿಸಿಕೊಂಡು ಹೋಗುತ್ತೇವೆ. ನೀವು ಎಷ್ಟು ಕೇಳಿದರೆ ಅಷ್ಟು ಹಣ ಕೊಡುತ್ತೇವೆ. ನಮಗೆ ಪೂರ್ತಿ ವಾಸಿಮಾಡಿ ಕಳುಹಿಸಿ" ಅವರ ಮಾತನ್ನು ಕೇಳಿದ ರಾಘವ ಇವರನ್ನು ಚೆನ್ನಾಗಿ ಹಚ್ಚಿಕೊಂಡಂತಾಯಿತೆ ಎಂದುಕೊಂಡನು. ಇವನೇನೊ ನೋವು ಎಂದು ನಟನೆ ಮಾಡುತ್ತಿದ್ದಾನೆ. ಅವರೇನೋ ದೆವ್ವದ ಬಾಧೆ ಎಂದುಕೊಳ್ಳುತ್ತಿದ್ದಾರೆ. ನನ್ನನ್ನೇನೋ ದೊಡ್ಡ ವೈದ್ಯನೆಂದು ಅಂದುಕೊಂಡಿದ್ದಾರೆ. ಇವನು ನಾಳೆ ಪುನಃ ನೋವು ಬಂದಿದೆಯೆಂದರೆ ನಾನೇನು ಮಾಡಬೇಕು. ಇರುವ ಮರ್ಯಾದೆ ಸ್ವಲ್ಪ ಹೋಗುತ್ತದೆ. ಆದ್ದರಿಂದ ಇವರನ್ನು ಇಲ್ಲಿಂದ ಕಳುಹಿಸುವುದು ಒಳ್ಳೆಯದೆಂದುಕೊಂಡು ಹೀಗೆ ಹೇಳಿದನು.)

**ರಾಘವ :–** ನಾನು ಕೈ ಇಟ್ಟನಂತರ ಆ ನೋವು ಹೇಗೆ ಬರುತ್ತದೆ. ನಾಳೆ

ಬರುವುದಿಲ್ಲ, ನಾಡಿದ್ದು ಬರುವುದಿಲ್ಲ. ಸುಮ್ಮನೆ ಇಲ್ಲಿ ಏಕೆ ಇರಬೇಕು. ನೀವು ಹೋಗಬಹುದು.

**ಪ್ರಯಾಣಿಕನು :–** ಇಲ್ಲಯ್ಯಾ ತಂದೆ, ಒಂದು ದಿನವಾದರೂ ನಿನ್ನ ಹತ್ತಿರ ಇದ್ದರೆ ಚೆನ್ನಾಗಿರುತ್ತದೆಂದುಕೊಂಡಿದ್ದೇವೆ.

**ರಾಘವ :–** ಇಲ್ಲಿ ನಿಷ್ಟೆಯಿಂದ ಪೂಜೆಗಳು ನಡೆಯುತ್ತಿವೆ. ಪೂಜೆ ಮಾಡುವ ಸಮಯದಲ್ಲಿ ಇಲ್ಲಿ ಹೊಸಬರು ಯಾರೂ ಇರಬಾರದು. ಆದ್ದರಿಂದ ಹೋಗಲು ಹೇಳುತ್ತಿದ್ದೇನೆ. ತಿಂಗಳವರೆಗು ಹೊಸಬರು ಯಾರೂ ಇಲ್ಲಿರಬಾರದು.

**ಪ್ರಯಾಣಿಕನು :–** ಇವನಿಗೆ ನೋವು ಬಂದರೆ ನಾವು ಎಲ್ಲಿಗೆ ಹೋಗಬೇಕು? ತಿಂಗಳವರೆಗು ಬರಬಾರದೆಂದರೆ ಹೇಗೆ?

**ರಾಘವ :–** ನಾನು ಇನ್ನು ಮುಂದೆ ಬರುವುದಿಲ್ಲವೆಂದು ಹೇಳಿದ್ದೀನಲ್ಲ, ಅದು ಬರುತ್ತದೆಂದು ನೀವೇಕೆ ಅಂದುಕೊಳ್ಳಬೇಕು? ನನ್ನ ಮಾತಿನ ಮೇಲೆ ನಂಬಿಕೆ ಇಟ್ಟುಕೊಂಡು ಹೋಗಿ. ಅದು ಇನ್ನು ಬರುವುದಿಲ್ಲ. (ರಾಘವ ಮಾತು ಕೇಳಿದ ಅವರು ಅದು ಬಾರದೆ ಹೋದರೆ ಅದಕ್ಕಿಂತ ಸಂತೋಷವೇನಿದೆ ಎಂದುಕೊಂಡು ಅಲ್ಲಿಂದ ಹೋದರು.)

**********************************

(ರಾಜಯೋಗಾನಂದ ಸ್ವಾಮಿ ಪ್ರಜೆಗಳ ಮಧ್ಯದಲ್ಲಿ ಅಲೆಯುತ್ತಾ ತನ್ನ ಜ್ಞಾನದ ಮೇಲೆ ಪ್ರಜೆಗಳಿಗೆ ಅವಗಾಹನೆ ಹೇಗೆ ಇದೆಯೋ ತಿಳಿದುಕೊಳ್ಳುವುದಕ್ಕೆ ಮತ್ತೊಬ್ಬ ಭಕ್ತನ ಮನೆಗೆ ಹೋಗಿದ್ದಾನೆ. ತಾನು ರಾಜಯೋಗಾನಂದ ಸ್ವಾಮಿ ಶಿಷ್ಯನೆಂದು ತಿಳಿಸಿ, ಸ್ವಾಮಿಯವರು "ಈ ಗ್ರಂಥವನ್ನು ನಿಮಗೆ ಕೊಡಲು ಹೇಳಿದ್ದಾನೆ. ಈ ದಾರಿಯಲ್ಲೇ ಹೋಗುತ್ತಿದ್ದೇನೆ ಆದ್ದರಿಂದ ಕೊಡಬೇಕೆಂದು ತಂದಿದ್ದೇನೆ". ಎಂದು ತಾನು ರಚಿಸಿದ ಒಂದು ಗ್ರಂಥವನ್ನು ಆ ಭಕ್ತನಿಗೆ ಕೊಟ್ಟಿದ್ದಾನೆ. ಆ ಭಕ್ತನು ಸಹ ಗ್ರಂಥಗಳ ಮುಖಾಂತರ ಪರಿಚಯವೇ. ಆದ್ದರಿಂದ ಬಂದಿರುವ

ವ್ಯಕ್ತಿ ರಾಜಯೋಗಾನಂದ ಸ್ವಾಮಿಯೇ ಎಂದು ತಿಳಿದುಕೊಳ್ಳಲಾರದೆ ಹೋಗಿದ್ದಾನೆ. ಗ್ರಂಥವನ್ನು ತೆಗೆದುಕೊಂಡ ಆ ಭಕ್ತನು ಸ್ವಾಮಿಯೊಂದಿಗೆ ಹೀಗೆ ಹೇಳಿದ್ದಾನೆ.)

**ಭಕ್ತನು :–** ಸ್ವಾಮಿಯವರು ಎಷ್ಟೋ ಆಪ್ಯಾಯತೆಯಿಂದ ಈ ಗ್ರಂಥವನ್ನು ಕಳುಹಿಸಿದ್ದಾನೆ. ಬಹಳ ಸಂತೋಷ ಸ್ವಾಮಿಯವರಿಗೆ ನನ್ನ ನಮಸ್ಕಾರಗಳು ತಿಳಿಸಿರಿ. ನೀವು ಆಶ್ರಮಕ್ಕೆ ಗುರುಗಳ ಹತ್ತಿರಕ್ಕೆ ಆಗಾಗ ಹೋಗುತ್ತಿರುತ್ತೀರಾ?

**ಸ್ವಾಮಿ :–** ಹೌದು ವಾರಕ್ಕೆ ಎರಡು ಸಲ ಹೋಗುತ್ತಿರುತ್ತೇವೆ. ಅಲ್ಲಿ ಗುರುಗಳು ಹೇಳುವ ಜ್ಞಾನವನ್ನು ಶ್ರದ್ಧೆಯಿಂದ ಕೇಳುತ್ತಿರುತ್ತೇವೆ.

**ಭಕ್ತನು :–** ಹಾಗಾ ನೀವೆಷ್ಟೋ ಅದೃಷ್ಟವಂತರು. ಹತ್ತಿರ ಇದ್ದು ಗುರುಗಳ ಮುಖಾಂತರ ಜ್ಞಾನವನ್ನು ಕೇಳುತ್ತಿದ್ದೀರ. ನಾವು ಬಹಳ ದೂರದಲ್ಲಿ ಇದ್ದೇವೆ. ಇಲ್ಲಿಯವರೆಗು ಗುರುಗಳನ್ನು ನೋಡುವುದಕ್ಕೂ ನಮಗಾಗಲಿಲ್ಲ. ಆತನ ಗ್ರಂಥಗಳ ಮುಖಾಂತರ ತಿಳಿಸಿದ ಸಮಾಚಾರವನ್ನು ಓದಿ ಎಷ್ಟೋ ಜ್ಞಾನವನ್ನು ತಿಳಿದುಕೊಂಡಿದ್ದೇವೆ. ಮೊದಲು ನಮ್ಮಲ್ಲಿ ಎಷ್ಟೋ ಅಜ್ಞಾನವಿತ್ತು. ನಾವು ಇತರರು ಬರೆದ ಕೆಲವು ಆಧ್ಯಾತ್ಮಿಕ ಪುಸ್ತಕಗಳನ್ನು ಓದಿ ನಾವು ಎಷ್ಟೋ ದೊಡ್ಡ ಜ್ಞಾನಿಗಳೆಂದುಕೊಳ್ಳುತ್ತಿದ್ದೆವು. ನಂತರ ಅದೃಷ್ಟವಶಾತ್ತು ಸ್ವಾಮಿಯವರು ಬರೆದ ಗ್ರಂಥವೊಂದು ಓದಿದ್ದೇನೆ. ಆ ಗ್ರಂಥದಲ್ಲಿ ಎಷ್ಟೋ ನನಗೆ ತಿಳಿಯದ ಜ್ಞಾನ ವಿಷಯಗಳನ್ನು ತಿಳಿದುಕೊಂಡ ನಂತರ ಅಲ್ಲಿಯವರೆಗು ನನ್ನಲ್ಲಿ ಎಷ್ಟು ಅಜ್ಞಾನವಿತ್ತೋ ಆಗ ಅರ್ಥವಾಯಿತು. ಅಲ್ಲಿಯವರೆಗು ನಾನು ದೊಡ್ಡ ಜ್ಞಾನಿಯೆಂದುಕೊಳ್ಳುತ್ತಿದ್ದೆನು. ಸ್ವಾಮಿಯವರ ಗ್ರಂಥದಿಂದಲೆ ನನಗೆ ಎಷ್ಟೋ ವಿಷಯಗಳು ತಿಳಿಯವೆಂದು, ನಾನು ತಿಳಿದುಕೊಳ್ಳಬೇಕಾಗಿರುವುದು ಬಹಳ ಇದೆಯೆಂದು ಆಗ ಅರ್ಥವಾಯಿತು. ಅಂದಿನಿಂದ ಸ್ವಾಮಿ ಬರೆದ ಗ್ರಂಥಗಳನ್ನು ಓದುತ್ತಿದ್ದೇನೆ. ಈದಿನ ಸ್ವಾಮಿ ರಚನೆಗಳಿಂದ ನಾನು ಸ್ವಲ್ಪ ಜ್ಞಾನಿಯಾಗಿ ಬದಲಾಗಿದ್ದೇನೆಂದು ತೃಪ್ತಿಯಾಗಿದೆ.

**ಸ್ವಾಮಿ :–** ಹಾಗಾ! ನೀವು ಸ್ವಾಮಿಯವರ ರಚನೆಗಳಿಂದ ನಿಮಗೆ ತಿಳಿಯದ ವಿಷಯಗಳು ಯಾವನ್ನು ಗ್ರಹಿಸಿದ್ದೀರಾ?

**ಭಕ್ತನು :–** ಒಂದು ವಿಷಯವೇನು, ಎಷ್ಟೋ ಲೆಕ್ಕವಿಲ್ಲದಷ್ಟು ವಿಷಯಗಳನ್ನು ತಿಳಿದುಕೊಂಡಿದ್ದೇನೆ. ಮೊದಲು ನಾನೊಬ್ಬ ಭಕ್ತನಾಗಿ ದೈವಾರಾಧನೆ ಮಾಡುತ್ತಿದ್ದೆನು. ವಿಭೂತಿ ಧರಿಸುತ್ತಿದ್ದೆನು, ತೆಂಗಿನ ಕಾಯಿಯನ್ನು ಹೊಡೆಯುತ್ತಿದ್ದೆನು, ಗೋವಿಂದಾ ಎಂದು ಕಂಠಬಿಚ್ಚಿ ಕೂಗುತ್ತಿದ್ದೆನು. ಆ ದಿನ ನಾನು ಮಾಡುವುದು ನಿಜವಾದ ಭಕ್ತಿ ಎಂದುಕೊಳ್ಳುತ್ತಿದ್ದೆನು. ಆದರೆ ಸ್ವಾಮಿಯವರು ತನ್ನ ಗ್ರಂಥದಲ್ಲಿ ನೀನು ಯಾವ ಅರ್ಥದಿಂದ ಗೋವಿಂದಾ ಎನ್ನುತ್ತಿದ್ದೀಯಾ? ಯಾವ ಅರ್ಥದಿಂದ ವಿಭೂತಿ ಧರಿಸುತ್ತಿದ್ದೀಯ, ಎಂದು ಎಲ್ಲವನ್ನೂ ಪ್ರಶ್ನಿಸಿದಾಗ ನಾನು ಮಾಡುವ ಪ್ರತಿ ಕೆಲಸ ಅರ್ಥವಿಲ್ಲದ್ದೆಂದು ಆಗ ತಿಳಿಯಿತು. ಪಕ್ಕದಲ್ಲಿರುವವರನ್ನು ನೋಡಿ ಮಾಡುತ್ತಿದ್ದೇನೆ ಹೊರತು, ಇದು ಇಂತಹ ಅರ್ಥದಿಂದ ಕೂಡಿಕೊಂಡು ಇದೆಯೆಂದು ತಿಳಿದು ಮಾಡುತ್ತಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಅಷ್ಟೋ ಇಷ್ಟೋ ಭಕ್ತಿ ಇರುವವರು ಎಂದುಕೊಂಡವರೆಲ್ಲರೂ ಕುರಿಗಳು ದಾಟಿದಂತೆ ಒಬ್ಬರನ್ನು ನೋಡಿ ಒಬ್ಬರು ಮಾಡುವುದು ಹೊರತು ಬೇರೆ ಇನ್ನ್ಯಾವ ಅರ್ಥ ತಿಳಿಯದೆಂದುಕೊಂಡಿದ್ದೇನೆ. ಇಂತಹ ಸಮಯದಲ್ಲಿ ಎಲ್ಲವುಗಳಿಗೂ ಪ್ರಶ್ನೆ ಉತ್ತರಗಳು ಎರಡೂ ಆತನೇ ಹೇಳುತ್ತಾ, ಯಾರಿಗೂ ತಿಳಿಯದ ವಿಷಯಗಳೆಲ್ಲವೂ ಗ್ರಂಥರೂಪದಲ್ಲಿ ವಿವರಿಸಿದ್ದಾನೆ. ಈಗ ಪೂಜೆ ಎಂದರೆ ಏನೋ ಅವುಗಳ ಆಚರಣೆಗಳ ಅರ್ಥವೇನೋ ಪೂರ್ತಿ ತಿಳಿದಿದೆ. ಒಂದು ದಿನ ತಿಳಿಯದೆ ಎಷ್ಟು ಅಜ್ಞಾನದಲ್ಲಿ ಇದ್ದೆನೋ, ಈದಿನ ತಿಳಿದು ಎಷ್ಟು ಜ್ಞಾನದಲ್ಲಿ ಇದ್ದೇನೋ ನನಗೇ ಅರ್ಥವಾಗಿದೆ. ಈದಿನ ಬಹಳ ಜನ ಮಾಡುವ ಪೂಜೆಗಳ ಹಿಂದೆ ಕೋರಿಕೆಯೇ ಮುಖ್ಯವಾದ ವಿಷಯವಾಗಿ ಇದೆ. ಒಂದು ಸಮಯದಲ್ಲಿ ನಾನು ಸಹ ಯಾವ ಪೂಜೆ ಮಾಡಿದರೂ ಯಾವುದೋ ಒಂದು ಕೋರಿಕೆಯಿಂದಲೇ ಮಾಡುತ್ತಿದ್ದೆನು. ಕೈ ಎತ್ತಿ ನಮಸ್ಕರಿಸುತ್ತಿದ್ದೇವೆಂದರೆ ಆ ನಮಸ್ಕಾರ ದೇವರನ್ನು ಯಾವುದೋ ಒಂದು ಕೋರಿಕೆ ಕೋರುವ ನಿಮಿತ್ತವೇ ಇರುತ್ತದೆ. ಆದರೆ ನಾವು ಮಾಡುವ ಪೂಜೆಗಳ ಹಿಂದೆ ದೈವಸನ್ನಿಧಿಯನ್ನು ಸೇರುವ ಅರ್ಥವೆಷ್ಟೋ ಇದೆಯೆಂದು, ಪ್ರತಿ ಪೂಜೆ ಎಷ್ಟೋ ಅರ್ಥದಿಂದ ಕೂಡಿಕೊಂಡಿದೆಯೆಂದು ಈ ದಿನ ಸ್ವಾಮಿಯವರ ರಚನೆಗಳಿಂದ ತಿಳಿದಿದೆ. ಸ್ವಾಮಿಯವರು ಪೂಜಾ ವಿಧಾನಗಳಿಂದ ದೊಡ್ಡ ಯೋಗ ವಿಧಾನಗಳವರೆಗು

ದೊಡ್ಡ ಅರ್ಥ ಹೇಳಿದ್ದಾರೆ. ಯಾವುದು ಏನಾದರೂ ಸ್ವಾಮಿಯವರ ಕೃಷಿ ನಮ್ಮಂತಹವರನ್ನು ಎಷ್ಟೋ ಜನರನ್ನು ಬದಲಾಯಿಸಿ ಸಫಲೀಕೃತವಾಗಿದೆ.

(ತನ್ನ ರಚನೆಗಳು ಕೆಲವರ ಮೇಲೆ ಎಷ್ಟು ಪ್ರಭಾವವನ್ನು ಬೀರಿವೆಯೋ, ಎಂತಹ ಬದಲಾವಣೆ ತಂದಿವೆಯೊ ರಾಜಯೋಗಾನಂದ ಸ್ವಾಮಿ ಸ್ವತಃವಾಗಿ ಗಮನಿಸಿದ್ದಾನೆ. ಆತನಿಂದ ಇನ್ನೂ ಸ್ವಲ್ಪ ಸಮಾಚಾರವನ್ನು ತಿಳಿದುಕೊಳ್ಳುವುದಕ್ಕಾಗಿ ಹೀಗೆ ಹೇಳಿದ್ದಾನೆ.)

**ರಾಜಯೋಗಾ :–** ದೇಶದಲ್ಲಿ ಎಷ್ಟೋ ಭಕ್ತಿ ಇರುವವರಿದ್ದಾರೆ. ಅವರೆಲ್ಲರೂ ಬಹುಶ ನೀನು ಹೇಳಿದಹಾಗೆ ಯಾವುದೋ ಒಂದು ಪದ್ಧತಿಯಲ್ಲಿ ಮಾಡುವವರೇ, ಆದರೆ ನಿಜವಾಗಿ ಅವರಿಗೆ ಅರ್ಥ ತಿಳಿದಿರುವುದಿಲ್ಲ. ಅಂತಹವರು ಸ್ವಾಮಿ ಗ್ರಂಥಗಳನ್ನು ಓದುವುದರಿಂದ ಅವರಲ್ಲಿ ಸಹ ಬದಲಾವಣೆ ಬಂದು ಸಂಪೂರ್ಣ ಜ್ಞಾನಿಗಳಾಗಿ ಬದಲಾಗಿರುತ್ತಾರಾ?

**ಭಕ್ತನು :–** ಸತ್ಯವನ್ನು ತಿಳಿದುಕೊಳ್ಳಬೇಕೆನ್ನುವ ದೃಷ್ಠಿಯಿಂದ ಯಾರು ಓದಿದರೂ ತಪ್ಪದೆ ಬದಲಾಗುತ್ತಾರೆ. ಮೂರ್ಖವಾಗಿ ಮೊಂಡುವಾದನೆ ಮಾಡುವವರು ಎಂದಿಗೂ ಬದಲಾಗುವುದಿಲ್ಲ. ಅವರಿಗೆ ತಿಳಿದುಕೊಳ್ಳಬೇಕೆನ್ನುವುದು ಸಹ ಇರುವುದಿಲ್ಲ. ತಮಗೆ ಎಲ್ಲಾ ತಿಳಿದಿದೆ ಎನ್ನುವ ಉದ್ದೇಶದಲ್ಲಿ ಇರುತ್ತಾರೆ. ಮುಖ್ಯವಾಗಿ ಸ್ವಾಮಿಯವರ ರಚನೆಗಳು ಸುಮಾರು 40 ಸಂವತ್ಸರಗಳ ವಯಸ್ಸಿನೊಳಗಿರುವವರೆಲ್ಲರನ್ನೂ ಬದಲಾಯಿಸಿವೆ. ಅದಕ್ಕಿಂತ ಹೆಚ್ಚಿನ ವಯುಸ್ಸಿರುವವರು ಕಡಿಮೆಯಾಗಿ ಬದಲಾಗಿದ್ದಾರೆ.

**ರಾಜಯೋಗಾ :–** ಅದೇನು, ವಯಸ್ಸು ಕಳೆದ ವೃದ್ಧರಿಗೇ ಜ್ಞಾನ ಚೆನ್ನಾಗಿ ಅರ್ಥವಾಗಿರುತ್ತದೆಂದುಕೊಳ್ಳುತ್ತೇನೆ. ಮತ್ತೆ ನೀನೇನೊ ಚಿಕ್ಕ ವಯಸ್ಸಿನವರಿಗೇ ಹೆಚ್ಚಾಗಿ ಹಿಡಿಸಿದೆ ಎನ್ನುತ್ತಿದ್ದೀರ. ಅದರಲ್ಲಿರುವ ವಿಶೇಷವೇನು?

**ಭಕ್ತನು :–** ಚಿಕ್ಕ ವಯಸ್ಸಿನಲ್ಲಿ ಇರುವವರು ತಮಗೆ ಎಲ್ಲಾ ವಿಷಯಗಳು ತಿಳಿಯವು. ತಿಳಿಯದ ವಿಷಯಗಳನ್ನು ತಿಳಿದುಕೊಳ್ಳಬೇಕೆಂದು ಇರುತ್ತಾರೆ. ಇನ್ನು ದೊಡ್ಡ

ವಯಸ್ಸಿನವರೇನೊ ನಮಗೆ ಎಲ್ಲಾ ಗೊತ್ತು, ನಾವು ತಿಳಿದುಕೊಳ್ಳಬೇಕಾಗಿರುವುದು ಏನೂ ಇಲ್ಲ ಎನ್ನುವ ಉದ್ದೇಶದಲ್ಲಿ ಇರುತ್ತಾರೆ. ಚಿಕ್ಕ ವಯಸ್ಸಿನವರು ಕಲ್ಪಿತ ಕಥೆಗಳನ್ನೂ, ಪುರಾಣ ಗಾಥೆಗಳನ್ನು ಓದಿರುವುದಿಲ್ಲ. ಆದ್ದರಿಂದ ಅವರ ಮನಸ್ಸಿನಲ್ಲಿ ಏನೂ ಇರುವುದಿಲ್ಲ. ಆದ್ದರಿಂದ ಸ್ವಾಮಿಯವರ ಜ್ಞಾನ ಸ್ವಚ್ಛವಾಗಿ ಅವರ ಮನಸ್ಸಿಗೆ ಅಂಟಿಕೊಳ್ಳುತ್ತದೆ. ಇನ್ನು ಮುದುಕರಾದರೆ ಅವರು ಪುರಾಣಗಾಥೆಗಳು ಓದಿರುತ್ತಾರೆ. ಎಷ್ಟೋ ಕಲ್ಪಿತ ಕಥೆಗಳನ್ನು ಕಾಲಕ್ಷೇಪಕ್ಕೋಸ್ಕರ ಕೇಳಿರುತ್ತಾರೆ. ಅವು ಅವರ ಮನಸ್ಸಿನಲ್ಲಿ ಅಂಟಿಕೊಂಡಿರುತ್ತವೆ. ಅಂತಹವರಿಗೆ ಸತ್ಯವಾದ ವಿಷಯಗಳು ತಿಳಿದರೂ ಅದಕ್ಕೂ ಮೊದಲು ಅವರ ಮನದಲ್ಲಿರುವ ವಿಷಯಗಳಿಗಿಂತ ಇವು ರುಚಿಸುವುದಿಲ್ಲ. ಹಾಗಿರುವಾಗ ಸತ್ಯವಾದ ವಿಷಯಗಳನ್ನೇ ಹೇಳನೆಮಾಡಿ ಮಾತನಾಡುತ್ತಾರೆ. ಆದರೆ ನಮಗೆ ಮೊದಲು ತಿಳಿದವುಗಳಿಗೂ ಇವುಗಳಿಗೂ ಏನೂ ವ್ಯತ್ಯಾಸ ಎಂದು ಯೋಚಿಸುವುದಿಲ್ಲ. ಅವರಿಗೆ ಮೊದಲು ತಿಳಿದ ಅಸತ್ಯಗಳನ್ನು ಬಿಡಲಾರೆರು, ಸತ್ಯವನ್ನು ಗ್ರಹಿಸಲಾರರು. ಸ್ವಲ್ಪ ಜ್ಞಾನ ತಿಳಿದಿದೆಯೆಂದೂ, ಕೆಲವರಲ್ಲಿ ಹೆಸರಿರುವ ನಾವಾ ಇತರರು ಹೇಳಿರುವುದನ್ನು ತಿಳಿದುಕೊಳ್ಳಬೇಕಾಗಿರುವುದು ಎಂದು ಗರ್ವವೂ ಸಹ ಇರುತ್ತದೆ. ಆದ್ದರಿಂದ ವೃದ್ಧರಿಗಿಂತ ಯುವಕರಿಗೇ ಹೆಚ್ಚಾಗಿ ಸ್ವಾಮಿಯವರ ಜ್ಞಾನ ಅಂಟಿಕೊಂಡಿದೆಯೆಂದು ಅಂದುಕೊಳ್ಳುತ್ತಿದ್ದೇನೆ.

**ಸ್ವಾಮಿ :–** ನೀವು ಊಹಿಸಿ ಹೇಳುತ್ತಿದ್ದೀರಾ, ಅಥವಾ ಯಾವುದಾದರೂ ಅನುಭವದಿಂದ ಹೇಳುತ್ತಿದ್ದೀರ?

**ಭಕ್ತನು :–** ಕೆಲವು ಅನುಭವಗಳಿಂದಲೇ ಹೇಳುತ್ತಿದ್ದೇನೆ. ಸ್ವಾಮಿಯವರ ಗ್ರಂಥಗಳನ್ನು ನಾನು ಓದಿದನಂತರ ಕೆಲವು ಜನ ವೃದ್ಧರಿಗೆ ನೀವು ಓದಿರಿ ಎಂದು ಕೊಟ್ಟಿದ್ದೇನೆ. ಆದರೆ ಅವರು ಅವುಗಳಿಂದ ಗ್ರಹಿಸಿರುವುದು ಏನೂ ಇಲ್ಲ. ಅವರು ವಿಮರ್ಶೆಗಳು ಮಾಡುವುದು ಹೊರತು ಅವರಿಗೆ ಲಾಭ ಬಂದಿರುವುದೇನೂ ಇಲ್ಲ.

**ರಾಜಯೋಗಾ :–** ಹೊಗಳಿಕೆಗಳಿಗಿಂತ ವಿಮರ್ಶೆಗಳನ್ನೇ ಹೆಚ್ಚಾಗಿ ಸ್ವೀಕರಿಸಬೇಕು. ಇನ್ನೊಬ್ಬರ ವಿಮರ್ಶೆಗಳಿಂದ ನಮ್ಮಲ್ಲಿನ ತಪ್ಪುಗಳನ್ನು ಸರಿ ಮಾಡಿಕೊಳ್ಳಬಹುದೆಂದು

ಸ್ವಾಮಿಯವರು ಬಹಳ ಸಲ ಹೇಳಿದ್ದಾರೆ. ಹಾಗಿರುವಾಗ ವಿಮರ್ಶೆಗಳನ್ನು ಶೇಖರಿಸಿ ಸ್ವಾಮಿಯವರಿಗೆ ತಿಳಿಸಬಹುದಲ್ಲವೆ!

**ಭಕ್ತನು :–** ಸ್ವಾಮಿಯವರ ಉದ್ದೇಶ ಒಳ್ಳೆಯದೆ. ಇವರು ಮಾಡುವ ವಿಮರ್ಶೆಗಳು ಯಾವಾದರೆ ಇವೆಯೊ ಅವು ವಿಮರ್ಶೆಗಳ ಪದ್ಧತಿಯಲ್ಲಿ ಇಲ್ಲ. ಅಸೂಯೆಯಿಂದ ಮಾತನಾಡುವ ಮಾತುಗಳು ಹೊರತು ಅವು ವಿಮರ್ಶೆಗಳು ಅಲ್ಲ. ತಲೆ ಬಾಲ ಇಲ್ಲದ ಆ ಮಾತುಗಳನ್ನು ಸ್ವಾಮಿಯವರಿಗೆ ಹೇಳುವುದಕ್ಕಿಂತ ಸುಮ್ಮನಿರುವುದು ಒಳ್ಳೆಯದು.

**ರಾಜಯೋಗಾ :–** ಸ್ವಾಮಿಯವರನ್ನು ವಿಮರ್ಶಿಸಿದ ಅಂತಹ ವಿಮರ್ಶೆಗಳು ಯಾವಾದರೂ ನಿಮ್ಮ ಅನುಭವದಲ್ಲಿ ಇವೆಯಾ?

**ಭಕ್ತನು :–** ಇವೆ. ಅದರಲ್ಲಿ ಮುಖ್ಯವಾದದ್ದನ್ನು ಕುರಿತು ಹೇಳುತ್ತೇನೆ ಕೇಳು. ಗುಂತಕಲ್ಲಿನಲ್ಲಿ ಹಿಂದೂ ಪರಿಷತ್ ಆಫೀಸಿನಲ್ಲಿ ನಡೆದ ವಿಷಯವಿದು. ಅಲ್ಲಿ ನಾನು, ಸ್ವಾಮಿಯವರು ಬರೆದ ಜ್ಞಾನ ಬಹಳ ಪ್ರತ್ಯೇಕವಾಗಿದೆಯೆಂದು, ಆತನು ನಮ್ಮ ಮತದಲ್ಲಿ ಹುಟ್ಟಿರುವುದಕ್ಕೆ ನಾವೆಲ್ಲರೂ ಹೆಮ್ಮೆಪಡಬೇಕಾದ ವಿಷಯವೆಂದು ಹೇಳಿದ್ದೇನೆ. ಆಗ ಅಲ್ಲಿರುವ ಹಿಂದೂಪರಿಷತ್ ಸದಸ್ಯನು ಮತ್ತು ಕಮ್ಮ ಕುಲಕ್ಕೆ ಸೇರಿದ ರಮೇಷ್‌ಚೌದರಿಗೂ ನನಗೂ ಸಂಭಾಷಣೆ ನಡೆದಿದೆ.

**ರಮೇಶ್ :–** ರಾಜಯೋಗಾನಂದ ಸ್ವಾಮಿ ಹಿಂದೂ ಅಲ್ಲ ಕ್ರೈಸ್ತನು. ಆತನು ಹಿಂದೂಗಳ ಮುಸುಗಿನಲ್ಲಿ ಕ್ರೈಸ್ತ ಮತವನ್ನು ಕುರಿತು ಬೋಧಿಸುತ್ತಿದ್ದಾನೆ.

**ನಾನು :–** ಅಷ್ಟು ಮೂರ್ಖವಾಗಿ ಮಾತನಾಡಿದ ಆ ವ್ಯಕ್ತಿಯನ್ನು ನೋಡಿ, ಅಷ್ಟಕ್ಕೂ ಈತನು ಮನುಷ್ಯನೇನಾ ಎಂದು ಅನುಮಾನ ಬಂದಿದೆ. ಮನುಷ್ಯನೇ ಆದರೆ ಅಷ್ಟು ಮೂರ್ಖವಾಗಿ ಹೇಗೆ ಮಾತನಾಡುತ್ತಿದ್ದಾನೆಂದು ಏಕೆ ಹಾಗೆ ಹೇಳುತ್ತಿದ್ದೀಯೆಂದು ಕೇಳಿದ್ದೇನೆ.

**ರಮೇಶ್ :–** ಆತನು ಸೃಷ್ಟಿಕರ್ತ ಕೋಡ್ 963 ಎನ್ನುವ ಒಂದು ಪುಸ್ತಕವನ್ನು ಬರೆದಿದ್ದಾನೆ. ಅದು ಕ್ರೈಸ್ತ ಸಂಬಂಧವಾದದ್ದು.

**ನಾನು :–** ಆ ಪುಸ್ತಕವನ್ನು ನಾನು ಓದಿದ್ದೇನೆ. ನೀನು ಓದಿದ್ದೀಯಾ? ಓದದೇ ಮಾತನಾಡುತ್ತಿದ್ದೀಯಾ?

**ರಮೇಶ್ :–** ಅಂತಹ ಪುಸ್ತಕಗಳನ್ನು ನಾನು ಓದುವುದಿಲ್ಲ. ಅದು ನಮ್ಮ ಮತಕ್ಕೆ ವಿರುದ್ಧವಾದದ್ದು.

**ನಾನು :–** ನೀನು ಓದದೆ ಹಿಂದೂ ಮತಕ್ಕೆ ವಿರುದ್ಧವಾದುದೆಂದು ಹೇಗೆ ಹೇಳುತ್ತಿದ್ದೀಯಾ?

**ರಮೇಶ್ :–** ಸೃಷ್ಠಿಕರ್ತ ಎನ್ನುವ ಪದವನ್ನು ಕ್ರೈಸ್ತರೇ ಬಳಸುತ್ತಾರೆ.

**ನಾನು :–** ಸೃಷ್ಠಿಕರ್ತ ಎನ್ನುವ ಪದ ಪ್ರಪಂಚ ಹುಟ್ಟಿದಾಗಿನಿಂದ ಇದೆ. ಸೃಷ್ಠಿಕರ್ತ ಎನ್ನುವ ಪದವನ್ನು ಪೂರ್ವದಲ್ಲಿ ಎಷ್ಟೋ ಜನ ಎಷ್ಟೋ ಸಂದರ್ಭಗಳಲ್ಲಿ ಹೇಳಿದ್ದಾರೆ. ಅಂತಹ ಪದವನ್ನು ಚರಿತ್ರೆ ತಿಳಿಯದ ನೀವು ನಮ್ಮದಲ್ಲ ಕ್ರೈಸ್ತರದು ಎನ್ನುತ್ತೀಯಾ? ಅನಾದಿಯಿಂದಿರುವ ಸೃಷ್ಠಿಕರ್ತ ಎನ್ನುವ ಪದವನ್ನು ನಿನ್ನೆ ಮೊನ್ನೆ ಬಂದಿರುವ ಕ್ರೈಸ್ತ ಮತಕ್ಕೆ ನೀನೇನಾದರೂ ಲೀಜಿಗೆ ಕೊಟ್ಟಿದ್ದೀಯಾ? ಈ ಮಾತನ್ನು ನೀನು ಹಿಂದೂವಾಗಿದ್ದು ಮಾತನಾಡುವುದೇ ವಿಚಿತ್ರ.

**ರಮೇಶ್ :–** ನಿನಗೆ ಆತನ ವಿಷಯ ಅರ್ಥವಾಗಲಿಲ್ಲ. ಭಗವದ್ಗೀತೆಯನ್ನು ಅಡ್ಡ ಇಟ್ಟುಕೊಂಡು ಹಿಂದೂಗಳನ್ನು ಕ್ರೈಸ್ತರನ್ನಾಗಿ ಬದಲಾಯಿಸುತ್ತಿದ್ದಾನೆ.

**ನಾನು :–** ನನ್ನ ಅನುಭವದಿಂದ ಹೇಳುತ್ತಿದ್ದೇನೆ. ಹಿಂದೂಗಳು ಬೈಬಲ್ ಓದುವವರಿದ್ದಾರೆ. ಆದರೆ ಕ್ರೈಸ್ತರು ಎಂದಿಗೂ ಅವರ ಬೈಬಲ್‌ನ್ನು ಬಿಟ್ಟು ಬೇರೆ ಪುಸ್ತಕವನ್ನು ಮುಟ್ಟಿಕೊಳ್ಳುವುದಿಲ್ಲ. ಕ್ರೈಸ್ತನು ಅವರ ಬೈಬಲ್‌ನಲ್ಲಿನ ವಿಷಯಗಳು ಹೇಳಿ ಕ್ರೈಸ್ತ ಮತದೊಳಗೆ ಬದಲಾಯಿಸುತ್ತಿದ್ದಾರೆಂದರೆ ಅರ್ಥವಿದೆ. ಆದರೆ ಭಗವದ್ಗೀತೆಯನ್ನು ಅಡ್ಡ ಇಟ್ಟುಕೊಂಡು ಕ್ರೈಸ್ತರಾಗಿ ಬದಲಾಯಿಸುವುದು ಇಲ್ಲಿಯವರೆಗೂ ಎಲ್ಲೂ ನಡೆಯಲಿಲ್ಲ. ಯಾವ ಕ್ರೈಸ್ತನಾದರೂ ಇಲ್ಲಿಯವರೆಗು ಭಗವದ್ಗೀತೆಯನ್ನು ಮುಟ್ಟಿಕೊಳ್ಳುವುದು ನಾನು ನೋಡಲಿಲ್ಲ. ಭಗವದ್ಗೀತೆಯನ್ನು ಅಡ್ಡ ಇಟ್ಟುಕೊಂಡು ಕ್ರೈಸ್ತವನ್ನು ಹೇಳುತ್ತಿದ್ದಾನೆನ್ನುವುದಕ್ಕೆ ನಿನ್ನ ಹತ್ತಿರ ಏನಾದರೂ ಆಧಾರವಿದೆಯಾ?

**ರಮೇಶ್ :–** ನಿನಗೆ ಅರ್ಥ ಆಗಲಿಲ್ಲ ಅಂಕಲ್, ಆತನು ನಮ್ಮ ಭಗವದ್ಗೀತೆಯಲ್ಲಿ ಇಲ್ಲದ್ದನ್ನು ಸೃಷ್ಟಿಕರ್ತ ಕೋಡ್ 963 ಎಂದು ಪುರುಷೋತ್ತಮ ಪ್ರಾಪ್ತಿಯೋಗ 16,17 ಶ್ಲೋಕಗಳು ಎಂದು ಬರೆದಿದ್ದಾನೆ. ಅಂತಹ ನಂಬರ್ ನಮ್ಮ ಗೀತೆಯಲ್ಲಿ ಇಲ್ಲ. ಇದಕ್ಕೆ ಏನನ್ನುತ್ತೀಯಾ?

**ನಾನು :–** ನಿನಗೆ ಬುದ್ಧಿ ಕಡಿಮೆ ಎನ್ನುತ್ತೇನೆ. ಇನ್ನೂ ಹೇಳಿದರೆ ನೀನು ಹಿಂದುವೇ ಅಲ್ಲ ಎನ್ನುತ್ತೇನೆ. ನನಗೆ 70 ಸಂವತ್ಸರಗಳ ವಯಸ್ಸು. ನಾನು ಇಲ್ಲಿಯವರೆಗೂ ಎಷ್ಟೋ ಭಗವದ್ಗೀತೆಗಳು ಓದಿದ್ದೇನೆ. ಸ್ವಾಮಿಯವರು ಬರೆದ ಭಗವದ್ಗೀತೆಯನ್ನು ಸಹ ಓದಿದ್ದೇನೆ. ನಮ್ಮ ದೇಶದಲ್ಲಿ ಬರೆಯಲಾಗಿರುವ ಮುನ್ನೂರ ಇಪ್ಪತ್ತು (320) ಭಗವದ್ಗೀತೆಗಳನ್ನು ಮೀರಿದ ಜ್ಞಾನವನ್ನು ಸ್ವಾಮಿ ಬರೆದ ಗೀತೆ ತಿಳಿಸಿದೆ. ಈ ಮಾತನ್ನು ನಾನು ಒಬ್ಬನೇ ಅಲ್ಲ, ಆತನು ಬರೆದ ಗೀತೆಯನ್ನು ಓದಿದ ಪ್ರತಿಒಬ್ಬನೂ ಹೇಳುವ ಮಾತು ಇದು. ನಿನಗೆ ಜ್ಞಾನ ಎಂದರೆ ಏನೋ ತಿಳಿದಿಲ್ಲ. ಅಷ್ಟು ದೊಡ್ಡ ಸ್ವಾಮಿಯನ್ನೇ ನೀನು ಅಜ್ಞಾನದಿಂದ ಮಾತನಾಡಿದರೆ ಹೇಗೆ? ನೀನು, ನಾನು ಹಿಂದೂ ಎಂದು ಹೇಳಿಕೊಳ್ಳುತ್ತಾ ಈದಿನ ಯಾರಿಗೂ ತಿಳಿಯದ ಹಿಂದೂ ಧರ್ಮಗಳನ್ನು ತಿಳಿಸುವ ಸ್ವಾಮಿಯನ್ನು ವಿಮರ್ಶಿಸಿ ಮಾತನಾಡುವುದು ಒಬ್ಬ ಹಿಂದೂವಾಗಿ ನಿನಗೆ ತಕ್ಕ ಕೆಲಸವೇನಾ? ಆತನು ಸೃಷ್ಟಿಕರ್ತ ಕೋಡ್ 963 ಎಂದು ಬರೆದು ಅದಕ್ಕೆ ಮೂಲವನ್ನು ಭಗವದ್ಗೀತೆಯಲ್ಲಿ ವಿವರವಾಗಿ ತೋರಿಸಿದ್ದಾನೆ. ನೀನು ಆ ಪುಸ್ತಕವನ್ನು ಓದಿದ್ದರೆ ನಿನಗೆ ಅರ್ಥವಾಗುತ್ತಿತ್ತು. ಒಬ್ಬ ಕ್ರೈಸ್ತ ಗುರುವು ಸೃಷ್ಟಿಕರ್ತ ಕೋಡ್ 666 ಎನ್ನುವ ಪುಸ್ತಕವನ್ನು ಬರೆದರೆ ಹಿಂದೂಗಳೆಂದು ಹೆಸರು ಇಟ್ಟುಕೊಂಡವರು ಯಾರು ಅದನ್ನು ಖಂಡಿಸಲಿಲ್ಲ. ಸ್ವಾಮಿಯವರು ಸ್ಪಂದಿಸಿ ಸೃಷ್ಟಿಕರ್ತ ನಿಮಗೊಬ್ಬರಿಗೇ ಅಲ್ಲ. ನಿಮ್ಮ ಮತ ಹುಟ್ಟುವುದಕ್ಕಿಂತ ಮೊದಲಿನಿಂದ ಇರುವವನು ಸೃಷ್ಟಿಕರ್ತ ಎಂದು ಹೇಳಿ ಅವರು ಬರೆದಿರುವುದಕ್ಕೆ ವಿರುದ್ಧವಾಗಿ ಸೃಷ್ಟಿಕರ್ತ ಕೋಡ್ 963 ಎಂದು ಬರೆದಿದ್ದಾನೆ. ನೀವು ಮಾಡಲಾರದ ಕೆಲಸವನ್ನು ಆತನು ಮಾಡಿದ್ದಾನೆ. ಅಷ್ಟೇ ಅಲ್ಲದೆ ಬೈಬಲ್‌ನಲ್ಲಿ ಆದಿಕಾಂಡ ಅಸತ್ಯಗಳ ಹುತ್ತ ಎಂದು ಅದೇ ಪುಸ್ತಕದಲ್ಲಿ ಬರೆದಿದ್ದಾನೆ. ಇಲ್ಲಿಯವರೆಗು ನಾವು ಹಿಂದೂಗಳು ಎಂದು ಹೆಸರು ಇಟ್ಟುಕೊಂಡ ವ್ಯಕ್ತಿಗಳಾಗಲೀ, ಸಂಸ್ಥೆಗಳಾಗಲೀ

ಆದಿಕಾಂಡ ಅಸತ್ಯಗಳ ಹುತ್ತ ಎಂದು ಯಾರಾದರೂ ಅಂದಿದ್ದಾರಾ? ಹಾಗೆ ಎನ್ನುವುದಕ್ಕೆ ನಿಮಗೆ ಧೈರ್ಯ ಇಲ್ಲದಿದ್ದರೂ, ಧೈರ್ಯವಾಗಿ ಹೇಳಿದ ಸ್ವಾಮೀಜಿಯನ್ನು ಕ್ರೈಸ್ತನೆಂದು ಹೇಗೆ ಹೇಳುತ್ತಿದ್ದಾರೆ. ನಾನು ಎಷ್ಟು ದಿನಗಳು ಬದುಕಿದರೂ ಫರವಾಗಿಲ್ಲ ನನ್ನ ಜ್ಞಾನ ಚಿರಸ್ಥಾಯಿಯಾಗಿ ಇರಬೇಕೆಂದು ಇತರ ಮತಗಳನ್ನು ಸಹ ಲೆಕ್ಕಮಾಡದಂತೆ ಇರುವುದು ಇದ್ದಂತೆ ಹೇಳುತ್ತಿದ್ದಾನೆ. ನೀವು ಹಿಂದೂ ಸಂಸ್ಥಗಳೆಂದು ಹೆಸರು ಇಟ್ಟುಕೊಂಡು ರಾಜಕೀಯ ಲಾಭ ಹೊಂದಬೇಕೆಂದು ನೋಡುತ್ತಿದ್ದೀರ. ನಾನು ಹೇಳುತ್ತಿರುವುದು ನಿಜವೋ ಅಲ್ಲವೋ ನೀನೇ ಹೇಳು.

**ರಮೇಷ್ :–** ನೀನೆಷ್ಟಾದರೂ ಹೇಳಿ ಅಂಕಲ್. ಆತನು ನಮ್ಮ ಮತವೊಂದರ ಹೆಸರೇ ಬದಲಾಯಿಸಿದ್ದಾನೆ. ನಮ್ಮದು ಹಿಂದೂಮತವೆಂದು ಮೊದಲಿನಿಂದ ಹೇಳಿಕೊಳ್ಳುತ್ತಿದ್ದೇವಲ್ಲ! ಅಂತಹದ್ದನ್ನು ಆತನು ಇಂದೂಮತವೆಂದು ಹೇಳುತ್ತಿದ್ದಾನೆ. ಅಷ್ಟೇ ಅಲ್ಲದೆ ನಮ್ಮದು ಮತವಲ್ಲ ಪಥ ಎನ್ನುತ್ತಿದ್ದಾನೆ.

**ನಾನು :–** ನಮ್ಮದು ಮತವಲ್ಲ ಪಥ ಎಂದು ಜವಹರ್‌ಲಾಲ್ ನೆಹ್ರೂ ಸಹ ಹೇಳಿದ್ದಾನೆ. ವಿವೇಕಾನಂದನು ಸಹ ಹೇಳಿದ್ದಾನೆ. ವಿವೇಕಾನಂದನು, ನೆಹ್ರೂ ಎಂದಾಗ ತಪ್ಪಾಗದಿರುವುದು ಈತನು ಎಂದಾಗ ತಪ್ಪಾಗಿದೆಯಾ! ಹಿಂದೂ ಎನ್ನುವ ಪದವನ್ನು ಇಂದೂ ಎಂದು ಹೇಳಿದ್ದಾನೆ ಎನ್ನುತ್ತಿದ್ದೀಯ. ಹಾಗೆ ಏಕೆ ಅನ್ನಬೇಕೋ **"ಇಂದೂ ಸಂಪ್ರದಾಯಗಳು"** ಎನ್ನುವ ಗ್ರಂಥದಲ್ಲಿ ವಿವರವಾಗಿ ಹೇಳಿದ್ದಾನಲ್ಲವೆ! ಅದನ್ನು ನೀನು ನೋಡಿದ್ದೀಯ ನೋಡದೇ ಮಾತನಾಡಿದರೆ ಒಳ್ಳೆಯದಾ? ಇಂದೂ ಎನ್ನುವ ಶಬ್ದ ಮೊದಲು ಇರುತ್ತಿತ್ತೆಂದು ಕಾಲಕ್ರಮೇಣ ಹಿಂದೂವಾಗಿ ಬದಲಾಗಿದೆಯೆಂದು ಸಹ ಹೇಳಿದ್ದಾರಲ್ಲವೆ! ಮೊದಲು ನೀನು ಆತನು ಬರೆದ ಗ್ರಂಥಗಳನ್ನು ಓದು. ನಿನ್ನ ಬುದ್ಧಿ ಎಂತಹದೋ ಆತನ ಜ್ಞಾನ ಎಂತಹದೋ ತಿಳಿಯುತ್ತದೆ. ನಾನು ರೆಡ್ಡಿ, ಸ್ವಾಮಿ ಚೌದರಿ, ನಾನು ಆತನ ಹಿರಿಮೆಯನ್ನು ಕುರಿತು ಹೇಳುತ್ತಿದ್ದೇನೆ. ನೀನು ಚೌದರಿಯಾಗಿ ಸ್ವಲ್ಪವಾದರೂ ಅಭಿಮಾನ ಸಹ ಇಲ್ಲದಂತೆ ಆತನನ್ನು ಕುರಿತು ಏನೂ ತಿಳಿಯದಂತೆ ಮಾತನಾಡುವುದು ಹೇಗಿದೆಯೋ

ನೋಡಿಕೋ. ನಾನು ಕೊನೆಯದಾಗಿ ಒಂದು ಮಾತನ್ನು ಹೇಳುತ್ತಿದ್ದೇನೆ. ನಿಮ್ಮ ಚೌದರಿ ಕುಲದಲ್ಲಿ ಇಲ್ಲಿಯವರೆಗು ಇಲ್ಲದ "ವಜ್ರ" ಹುಟ್ಟಿದೆಯೆಂದುಕೋ. ಆತನು ನಮ್ಮ ದೇಶದಲ್ಲಿ ಹುಟ್ಟಿದ ಸಾಟಿಯಿಲ್ಲದ ಜ್ಞಾನಿ, ತಿರುಗಿಲ್ಲದ ಯೋಗಿ ಎಂದುಕೋ.

**ರಮೇಶ್ :–** ಆತನನ್ನು ಹಾಗೆ ಹೋಲಿಸಿಕೊಳ್ಳುವುದಕ್ಕೆ ಆತನೇನಾದರೂ, ವಿವೇಕಾನಂದನಾ ಅಥವಾ ವೀರಬ್ರಹ್ಮಯ್ಯನವರಾ?

**ನಾನು :–** ಸರಿ ಈಗ ನೀನಂದ ಮಾತಿನ ಹತ್ತಿರಕ್ಕೇ ಬರುತ್ತೇನೆ. ರಾಜಯೋಗಾನಂದ ವಿವೇಕಾನಂದ ಅಲ್ಲ, ವೀರಬ್ರಹ್ಮಯ್ಯನೂ ಅಲ್ಲ. ಸ್ವತಃ ವೀರಬ್ರಹ್ಮಯ್ಯನವರೇ ನಾಲ್ಕು ನೂರು ವರ್ಷಗಳ ಕೆಳಗೆ ಬರೆದ ಕಾಲಜ್ಞಾನದಲ್ಲಿ **"ಪ್ರಬೋಧಾಶ್ರಮ ಉನ್ನತವಾದ ಜ್ಞಾನ ಇರುವುದೆಂದು** ಬರೆಯುವುದೇ ಅಲ್ಲದೆ, **ಪ್ರಬೋಧಾಶ್ರಮದವರು ಶಯನಾಧಿಪತಿ ಗುಣ ಹೊಂದಿದ್ದಾರೆಂದು"** ಬರೆದಿದ್ದಾನೆ. **ಶಯನಾಧಿಪತಿಯಾದ ಆನಂದಗುರುವೇ ನನಗೂ ನಿಮಗೂ ಗುರುವು** ಎಂದು ಸಹ ಬರೆದಿದ್ದಾನೆ. ಸ್ವತಃ ಬ್ರಹ್ಮಯ್ಯನವರೇ ರಾಜಯೋಗಾನಂದನನ್ನು ತನ್ನ ಗುರುವಾಗಿ ಹೇಳಿಕೊಂಡಾಗ, ಈತನು ಬ್ರಹ್ಮಯ್ಯನವರೆಂದು ನಾನು ಹೇಗೆ ಹೇಳಬಲ್ಲೆನು. ಇನ್ನು ಹಿಂದೂಮತದಲ್ಲಿ ವಿವೇಕಾನಂದನನ್ನು ನೀನು ದೊಡ್ಡದಾಗಿ ಹೇಳಿಕೊಂಡರೂ ರಾಜಯೋಗಾ ನಂದಸ್ವಾಮಿ ವಿವೇಕಾನಂದನಿಗೆ ಸಮಾನನಲ್ಲವೆಂದು ನಾನೂ ಸಹ ಹೇಳುತ್ತಿದ್ದೇನೆ. ಏಕೆಂದರೆ ವಿವೇಕಾನಂದನ ಹಾಗೆ ಯೇಸು ಪ್ರಭುವನ್ನು ನಮಸ್ಕರಿಸುತ್ತೇನೆಂದು ರಾಜಯೋಗಾನಂದ ಯಾವಾಗಲೂ ಹೇಳಲಿಲ್ಲ. ರಾಜಯೋಗಾನಂದ ಇಂದೂ ಧರ್ಮಗಳನ್ನು ಬೋಧಿಸುತ್ತಿರುವಾಗ ಈತನನ್ನು ನೀವು ಕ್ರೈಸ್ತಮತ ಪ್ರಚಾರಕರೆಂದಾಗ 1896 ದಿನಾಂಕ ಡಿಸೆಂಬರ್ 25 ಕ್ರಿಸ್‌ಮಸ್ ದಿನದಂದು ವಾಟಿಕನ್ ಸಿಟಿನಲ್ಲಿ ಪೀಟರ್ಸ್ ಚರ್ಚಿನಲ್ಲಿ ಪ್ರಭು ಪ್ರಾರ್ಥನೆಯಲ್ಲಿ ಪಾಲ್ಗೊಂಡ ವಿವೇಕಾನಂದನನ್ನು ಕ್ರೈಸ್ತನು ಅನ್ನಬೇಕಾ? ಅಸೂಯೆಯಿಂದ ಮಾತನಾಡದೆ ಒಂದು ವಿಷಯವನ್ನು ಯೋಚಿಸೋಣ. ಸ್ವಾಮಿ ವಿವೇಕಾನಂದ ಸಮಗ್ರ, ಸಪ್ರಾಮಾಣಿಕ ಜೀವನಗಾಥ 2ನೇ ಭಾಗದಲ್ಲಿ 17ನೇ ಪುಟದಲ್ಲಿ ಎರಡನೆ ಪೇರಾದಲ್ಲಿ ಸ್ವತಃ ವಿವೇಕಾನಂದನು ಹೇಳಿದ ಮಾತುಗಳು ಹೀಗೆ ಇವೆ. "ನಾನೂ ಸಹ ಪಾಲಸ್ತೀನಾದಲ್ಲಿ ಕ್ರಿಸ್ತನೊಂದಿಗೆ

ಸೇರಿ ಜೀವಿಸಿದ್ದರೇ ಆತನ ಪಾದಗಳನ್ನು ಕಣ್ಣೀರಿನಿಂದಲ್ಲ, ನನ್ನ ಹೃದಯ ರಕ್ತದಿಂದ ತೊಳೆಯುತ್ತಿದ್ದೆ" ಪ್ರಭು ಪಾದಗಳನ್ನು ತನ್ನ ರಕ್ತದಿಂದ ತೊಳೆಯುತ್ತಿದ್ದೇನೆಂದು ವಿವೇಕಾನಂದನು ಅಂದಿದ್ದಾನಲ್ಲ! ಆದರೇ ಆತನು ಕ್ರೈಸ್ತ ಮತವನ್ನು ಪ್ರಚಾರ ಮಾಡಿದಂತೇನಾ? ರಾಜಯೋಗಾನಂದ ಒಬ್ಬ ದೇವರಿಗೆ ಹೊರತು ಯಾರಿಗೂ ಕೈಮುಗಿಯುತ್ತೇನೆಂದಿಲ್ಲವಲ್ಲ! ಯಾರನ್ನೂ ಪ್ರಾರ್ಥನೆ ಮಾಡಲಿಲ್ಲವಲ್ಲ! ಹಾಗಿರುವಾಗ ವಿವೇಕಾನಂದನನ್ನು ದೊಡ್ಡ ಹಿಂದುವೆಂದು ಹೇಳಿಕೊಳ್ಳುವುದು, ರಾಜಯೋಗಾ ನಂದನನ್ನು ಕ್ರೈಸ್ತ ಪ್ರಚಾರಕನೆನ್ನುವುದರಲ್ಲಿ ಅರ್ಥ ಏನಾದರೂ ಇದೆಯಾ? ಹೇಳು ರಮೇಷ್ ನನ್ನ ಮಾತಿಗೆ ಉತ್ತರ ಹೇಳು. ಸುಮ್ಮನೆ ಬಾಯಿದೆಯೆಂದು ಮಾತನಾಡಿದರೆ ಅದರ ಹಿಂದೆ ಎಷ್ಟು ಪಾಪ ಬರುತ್ತದೊ ನಿಮಗೆ ಅರ್ಥವಾಗಲಿಲ್ಲ. ನೀನು ಈಗ ರಾಜಯೋಗಾನಂದನನ್ನು  ವಿವೇಕಾನಂದನಾ, ವೀರಬ್ರಹ್ಮಯ್ಯನವರಾ ಎಂದಿದ್ದೀ ಯಲ್ಲವೆ! ಅಂತಹವನಲ್ಲ ಎಂದು ನಾನು ಹೇಳಿದ್ದೇನೆ ನನ್ನ ಉತ್ತರ ಅರ್ಥ ವಾಗಿದೆಯಾ.

(ಈ ವಿಧವಾಗಿ ಆ ಭಕ್ತನು ಸ್ವಾಮಿಯನ್ನು ಕುರಿತು ತನ್ನಲ್ಲಿ ಅಡಗಿರುವ ಅಭಿಮಾನವೆಲ್ಲವನ್ನು ಪ್ರಸ್ತಾವಿಸಿದಂತಾಗಿದೆ. ಆಗ ಸ್ವಾಮಿ ಹೀಗೆಂದಿದ್ದಾನೆ.)

**ಸ್ವಾಮಿ :–** ನೀವು ಸ್ವಾಮಿ ಕುಲವನ್ನು ಕುರಿತು ಹೇಳಿದ್ದೀರ. ಸ್ವಾಮಿ ಅವರು ಕುಲಕ್ಕೆ ಬೆಲೆಯನ್ನು ಕೊಡುವುದಿಲ್ಲ. ಎಲ್ಲಾ ಕುಲಗಳನ್ನು ಸಮಾನವಾಗಿ ನೋಡುತ್ತಾನೆ. ಆತನ ಮಾತುಗಳಲ್ಲಿ ಹೇಳುವುದೇ ಅಲ್ಲದೆ ಆತನು ಇತರ ಕುಲದಲ್ಲಿ ಮದುವೆ ಮಾಡಿಕೊಂಡಿದ್ದಾನೆ. ತಾನು ಯಾರಿಗು ಮದುವೆ ಮಾಡಿದರೂ ಕುಲಾಂತರ ವಿವಾಹಗಳೇ ಮಾಡುತ್ತಿದ್ದಾನೆ. ನೀವು ಕುಲ ಎಂದುಕೊಂಡರೂ ಆತನಲ್ಲಿ ಕುಲಗಳ ಅಭಿಮಾನ ಇಲ್ಲ.

**ಭಕ್ತನು :–** ಅವನು ಎಲ್ಲಾ ಅಜ್ಞಾನದಿಂದಲೇ ಮಾತನಾಡುತ್ತಿದ್ದಾನೆ. ಆದ್ದರಿಂದ ಅಜ್ಞಾನಿಗೆ ಅಜ್ಞಾನದಿಂದಲೇ ಹೇಳಬೇಕೆಂದು ಹಾಗೆ ಹೇಳಿದ್ದೇನೆ.

(ನಂತರ ಸ್ವಾಮಿ ತನ್ನ ಪರ್ಯಟನೆಯಲ್ಲಿ ಮತ್ತೊಂದು ಕಡೆಗೆ ಹೋಗಬೇಕೆಂದು ಹೊರಟು ಹೋಗಿದ್ದಾನೆ)

**********************************

(ಗಜಜ್ವಾಲಾಂಜನವನ್ನು ನೋಡಿದ ನಂತರ ಮುನೆಪ್ಪ ಗುಂಪಿನೊಂದಿಗೆ ನಾಗಭೂಷಣ ಸಹ ಹೊರಟು ಹೋಗಿ ತೋಟಮರ್ರಿ ಎನ್ನುವ ಗ್ರಾಮ ಪ್ರಾಂತಕ್ಕೆ ಸೇರಿಕೊಂಡಿದ್ದಾರೆ. ಅಲ್ಲಿ ಹಾವನ್ನು ಅನ್ವೇಷಿಸತೊಡಗಿದರು. ಕೊನೆಗೆ ಆ ಗ್ರಾಮಕ್ಕೆ ಒಂದು ಮೈಲು ದೂರದಲ್ಲಿರುವ ದೊಡ್ಡ ಆಲದ ಮರದ ಹತ್ತಿರ ಆ ಹಾವು ಇದ್ದಂತೆ ಗ್ರಹಿಸಿದ್ದಾರೆ. ಎಲ್ಲರೂ ಅಲ್ಲಿಗೆ ಹೊರಟು ಹೋಗಿದ್ದಾರೆ. ಅಲ್ಲಿಗೆ ಹೋಗಿ ನೋಡಿದಾಗ ಅಲ್ಲೊಂದು ವಿಶಾಲವಾದ ಆಲದಮರ ಇದೆ. ಆಲದ ಮರ ಕೊಂಬೆಗಳಿಗೆ ಬೇರುಗಳು ಇಳಿದು ಭಯಂಕರವಾಗಿದೆ ಆ ವೃಕ್ಷ. ಆ ವೃಕ್ಷವೊಂದರ ಬುಡವನ್ನು ನೋಡಿದರೆ ದೊಡ್ಡ ರಂಧ್ರ ಇದ್ದು ರಾಕ್ಷಸ ಗುಹೆಯಂತೆ ಕಾಣಿಸುತ್ತಿದೆ. ವಿಶಾಲವಾದ ಬುಡಕ್ಕೆ ಐದು ಅಡಿಗಳ ಎತ್ತರ, ಮೂರು ಅಡಿಗಳ ಅಗಲವಾಗಿ ಕಾಣಿಸುತ್ತಿರುವ ಆ ರಂಧ್ರ ಮಧ್ಯದಲ್ಲಿ ಭೂಮಿಯೊಳಗೂ ಸಹ ಸ್ವಲ್ಪ ಆಳವಿದ್ದು ಕತ್ತಲು ಕಾಣಿಸುತ್ತಿದೆ. ಆ ಮರ ಬಹಳ ಪುರಾತನವಾದದ್ದು. ಈ ಮರವನ್ನನುಸರಿಸಿ ಆ ಊರಿಗೆ ತೊರ್ರಿಮರ್ರಿ ಎಂದು ಹೆಸರು ಇಟ್ಟಿದ್ದಾರೆ. ಆ ಹೆಸರು ಕಾಲಕ್ರಮದಲ್ಲಿ ತೋಟಮರ್ರಿಯಾಗಿ ಬದಲಾಗಿದೆ. ಆ ಮಹಾವೃಕ್ಷ ಕೊಂಬೆಗಳ ಬೇರುಗಳು ಭೂಮಿಯೊಳಗೆ  ಇಳಿದು ಕೆಲವು ಎಕರೆಗಳ ವಿಸ್ತೀರ್ಣದಲ್ಲಿ ವ್ಯಾಪಿಸಿದೆ. ಹೊರಟುಹೋದವರೆಲ್ಲರೂ ಆ ಮರದ ಕೆಳಗೆ ಹೋಗಿದ್ದಾರೆ. ಸೂರ್ಯರಶ್ಮಿ ಕೆಳಗೆ ಬೀಳದ ಆ ಮರದ ನೆರಳಲ್ಲಿ ನಿಂತಿರುವ ಮುನೆಪ್ಪ ಗುಂಪಿನ ಮನುಷ್ಯರಿಗೆ ಮಾಂತ್ರಿಕನ ಮಾಯಾ ಸ್ಥಳದೊಳಗೆ ಹೋದಂತಾಯಿತು. ಅಲ್ಲಿ ಸ್ವಲ್ಪ ಭಯವಾದರೂ ಧೈರ್ಯತಂದುಕೊಂಡು ಮರದಕೊಂಬೆಗಳ ಕಡೆ ಮೇಲಕ್ಕೆ ನೋಡಿದರು. ಆ ಮರದ ಕೊಂಬೆಗಳಲ್ಲಿ ಎಷ್ಟೋ ಸಾವಿರ ಪಕ್ಷಿಗಳು, ಅನೇಕ ಜಾತಿ ಪಕ್ಷಿಗಳು ನಿವಾಸ ಏರ್ಪಡಿಸಿಕೊಂಡಿವೆ. ಆ ಮರದಕೆಳಗೆ ಇದು ಹಗಲಾ ಇಲ್ಲವೆ ಸಂಧ್ಯಾಸಮಯವಾ ಎನ್ನುವಂತೆ ಬೆಳಕು ಕಡಿಮೆ ಇರುವ ನೆರಳು ಆಕ್ರಮಿಸಿ ಭಯಾನಕವಾಗಿ ಕಾಣಿಸುತ್ತಿದೆ.

ಮರದ ಕೆಳಗೆ ಅಲ್ಲಲ್ಲಿ ಎತ್ತರವಾಗಿ ಬೆಳೆದ ಹುತ್ತಗಳು ಕೆಲವು ಇವೆ. ಅಲ್ಲಿಗೆ ಸ್ಮಶಾನ ಹತ್ತಿರದಲ್ಲಿರುವುದರಿಂದ ನರಿಗಳು, ಹೈನಾಗಳು ತಂದುಕೊಂಡ ಶವಗಳ ಬುರುಡೆಗಳು, ಕೈ ಮೂಳೆಗಳು ಅಲ್ಲಲ್ಲಿ ಕಾಣಿಸುತ್ತಿವೆ. ಎಂದಿಗೂ ಯಾರೂ ಆ ಮರದ ಸಮೀಪಕ್ಕಾಗಲೀ, ಮರದಕೆಳಕ್ಕಾಗಲೀ ಬಂದಿರುವ ಸೂಚನೆಗಳು ಇಲ್ಲ. ಪ್ರಜೆಗಳು ಯಾರೂ ಆ ಮರದ ಆಸುಪಾಸಿಗೆ ಬಾರದಂತೆ ಹೋಗುವುದಕ್ಕೆ ಒಂದು ಬಲವಾದ ಕಾರಣವಿದೆ. ಅದು ಏನೆಂದರೆ! ಆ ಮರದ ಹತ್ತಿರಕ್ಕೆ ಹೋಗಿ ಅದರ ಕೊಂಬೆಗಳನ್ನು ಮುರಿದವನಿಗೆ ಶರೀರದಲ್ಲಿನ ಅವಯವಗಳು ನಿರ್ಬಲವಾಗಿ ಚೈತನ್ಯ ಇಲ್ಲದಂತಾಗುತ್ತವೆ. ಕನಿಷ್ಟ ಆ ಮರದ ಕೆಳಗೆ ಹೋಗಿಬಂದಷ್ಟು ಮಾತ್ರಕ್ಕೆ ಆತನಿಗೆ ಏನೋ ಒಂದು ವಿಚಿತ್ರ ರೋಗಬಂದು, ಯಾವ ಔಷಧಿಗೂ ವಾಸಿಯಾಗದೆ ಹೋಗುವುದು ನಡೆಯುತ್ತಿದೆ. ಇಂತಹ ವಿಚಿತ್ರ ಸಂಘಟನೆಗಳಿಗೆ ಹೆದರಿದ ಪ್ರಜೆಗಳು, ಆ ವೃಕ್ಷವೊಂದರ ಆಸುಪಾಸಿಗೂ ಸಹ ಹೋಗುತ್ತಿರಲಿಲ್ಲ. ಮನುಷ್ಯರು ಯಾರೂ ಅಲ್ಲಿಗೆ ಬಾರದಂತಿರುವುದರಿಂದ ಆ ಸ್ಥಳ ಪಕ್ಷಿಗಳಿಗು, ಹಾವುಗಳಿಗು, ಚಿಕ್ಕ ಚಿಕ್ಕ ಮೃಗಗಳಿಗು ನಿವಾಸವಾಗಿದೆ. ಅಲ್ಲಿಗೆ ಹೋದ ಮುನೆಪ್ಪ ಮನುಷ್ಯರಿಗು, ನಾಗಭೂಷಣನಿಗೂ ಹುತ್ತಗಳ ಪಕ್ಕದಲ್ಲಿ ನರಿಗಳು ತೋಡಿರುವ ರಂಧ್ರಗಳು ಕಾಣಿಸಿದವು. ಮರದ ಬುಡದ ಹತ್ತಿರಕ್ಕೆ ಹೋಗಿ ಕತ್ತಲಾಗಿರುವ ಮರದ ರಂಧ್ರದೊಳಗೆ ಟಾರ್ಚಲೈಟ್ ಹಚ್ಚಿ ನೋಡಿದರು. ಭೂಮಿಗೆ ನಾಲ್ಕು ಅಡಿಗಳ ಆಳದಲ್ಲಿರುವ ಆ ರಂಧ್ರದಲ್ಲಿ ಒಂದು ಹೈನಾ ಮಲಗಿರುವಂತೆ ಕಾಣಿಸಿತು. ಮುನೆಪ್ಪ ಗುಂಪಿನ ಮನುಷ್ಯರು ಒಬ್ಬರ ಮುಖವನ್ನು ಒಬ್ಬರು ನೋಡಿಕೊಂಡಿದ್ದಾರೆ. ಅವರ ಹತ್ತಿರ ರಿವಾಲ್ವರ್‌ಗಳು ಇನ್ನು ಕೆಲವು ಆಯುಧಗಳಿವೆ. ಆದ್ದರಿಂದ ಅವರು ಧೈರ್ಯದಿಂದ ಇದ್ದಾರೆ. ಎಂತಹ ಪರಿಸ್ಥಿತಿಯನ್ನಾದರೂ ಎದುರಿಸಬಲ್ಲೆವು ಎನ್ನುವ ಧೀರತೆ ಅವರಿಗಿದೆ. ಅವರ ಮನಸ್ಸಿನಲ್ಲಿ ಅವರಿಗೆ ಬೇಕಾಗಿರುವ ಹಾವಿನ ಯೋಚನೆ ಹೊರತು ಏನೂ ಇಲ್ಲ. ಆ ವಿಷಯವನ್ನು ಕುರಿತು ನಾಗಭೂಷಣನನ್ನು ಹೀಗೆ ಕೇಳಿದ್ದಾರೆ.)

**ವೆಂಕೂ :–** ನಮಗೆ ಬೇಕಾಗಿರುವ ಹಾವು ಎಲ್ಲಿದೆ? ಅದನ್ನು ಹೇಗೆ ನಾವು ಕಂಡುಕೊಳ್ಳಬಹುದು.

**ನಾಗಭೂಷಣ :–** ನಾವು ಅಂಜನದಿಂದಲೇ ಆ ಹಾವನ್ನು ಕಂಡುಕೊಳ್ಳಬೇಕು. ಆದರೆ ಇಲ್ಲಿ ಅಂಜನವನ್ನು ನೋಡುವುದು ಅಷ್ಟು ಸುಲಭವಾಗಿ ನನಗೆ ಕಾಣಿಸುತ್ತಿಲ್ಲ. ಇಲ್ಲಿಗೆ ಮನುಷ್ಯರು ಯಾರೂ ಬಂದಂತೆ ಕಾಣಿಸುತ್ತಿಲ್ಲ. ಮೊದಲು ಈ ಮರವನ್ನು ಕುರಿತು, ಈ ಪ್ರಾಂತವನ್ನು ಕುರಿತು ತಿಳಿದುಕೊಳ್ಳುವುದು ಒಳ್ಳೆಯದು. ಆದ್ದರಿಂದ ಹತ್ತಿರದಲ್ಲಿರುವ ತೋಟಮರ್ರಿ ಗ್ರಾಮದೊಳಗೆ ಹೋಗಿ ನಾನು ಈ ಮರದ ವಿಷಯವನ್ನು ತಿಳಿದುಕೊಂಡು ಬರುತ್ತೇನೆ. ನೀವು ಅಲ್ಲಿಯವರೆಗು ಇಲ್ಲೇ ಆಗಲೀ, ಅಥವಾ ಪಕ್ಕದಲ್ಲಾಗಲೀ ಇರಿ.

**ವೆಂಕೂ :–** ನಾವು ಇಲ್ಲೇ ಇರುತ್ತೇವೆ. ನೀನುಹೋಗಿ ಬೇಗ ತಿಳಿದುಕೊಂಡು ಬಾ.

(ಹಾಗೇ ಆಗಲೆಂದು ನಾಗಭೂಷಣ ಅಲ್ಲಿಂದ ಹೋದನು. ನಾಗಭೂಷಣ ಹೋಗಿ ಸ್ವಲ್ಪ ಸಮಯ ಕಳೆಯಿತು. ಮುನೆಪ್ಪ ಮನುಷ್ಯರು ಜೀಪಿನಲ್ಲಿ ಕೆಲವರು ಕುಳಿತುಕೊಂಡಿದ್ದಾರೆ. ಜೀಪು ಪಕ್ಕದಲ್ಲಿ ರಗ್ಗು ಹಾಸಿಕೊಂಡು ಕೆಲವರು ಕುಳಿತುಕೊಂಡು ಬಿಸ್ಕೆಟ್ಟನ್ನು ತಿನ್ನುತ್ತಿದ್ದಾರೆ. ಅಷ್ಟರಲ್ಲಿ ಯಾರೋ ಓಡಿಸಿದಂತೆ ಪಕ್ಷಿಗಳೆಲ್ಲವೂ ಒಂದೇ ಸಲ ಹೆದರಿ ಕೊಂಬೆಗಳ ಮೇಲಿಂದ ಹಾರಿದವು. ಹಾಗೆ ಹಾರಿದ ರೀತಿಯನ್ನು ನೋಡಿ ಮುನೆಪ್ಪ ಮನುಷ್ಯರಿಗೆ ಭಯ ಆಶ್ಚರ್ಯ ಎರಡೂ ಉಂಟಾದವು. ಏಕೆ ಧಿಡೀರನೆ ಎದ್ದಿವೆಯೊ ಎಂದು ಅಚ್ಚರಿಗೊಂಡು ಪುನಃ ಅವರ ಕೆಲಸದಲ್ಲಿ ಲಗ್ನವಾದರು. ಅಷ್ಟರಲ್ಲಿ ಮರದಲ್ಲಿನ ಗೂಬೆ ಹೆದರಿಸುತ್ತಾ ಮೂಲ್ಗಿತು. ಗೂಬೆಯು ಮೂಲ್ಗುವುದನ್ನು ಎಷ್ಟೋ ಬಾರಿ, ಎಷ್ಟೋ ಕಡೆ ಅವರು ಕೇಳಿದ್ದಾರೆ. ಆದ್ದರಿಂದ ಅದನ್ನು ಕುರಿತು ಅವರು ತಲೆ ಕೆಡಿಸಿಕೊಳ್ಳಲಿಲ್ಲ. ಅವರು ಒಬ್ಬರ ಮುಖ ಒಬ್ಬರು ನೋಡಿಕೊಂಡು ಇಲ್ಲಿ ಎಲ್ಲಾ ಭಯಪಡುವಂತೆ ಇವೆ. ಅದಕ್ಕೇ ಇಲ್ಲಿಗೆ ಯಾರೂ ಬರುತ್ತಿಲ್ಲವೆಂದುಕೊಳ್ಳುತ್ತೇನೆ, ಎಂದು ಅಂದುಕೊಳ್ಳುತ್ತಾ ಮಾತನಾಡಿಕೊಳ್ಳುತ್ತಿದ್ದಾರೆ. ಅಷ್ಟರಲ್ಲಿ ಸಂಧ್ಯವೇಳೆ ಆಗತೊಡಗಿತು. ಮರದ ಕೆಳಗೆ ಬೆಳಕು ತಗ್ಗಿ ಹೋಗಲು ಆರಂಭಿಸಿತು. ನಾಗಭೂಷಣ ಇನ್ನೂ ಬರಲಿಲ್ಲವೇ ಎಂದು ಅವರು ಊರಿನ ಕಡೆ ನೋಡುತ್ತಿದ್ದಾರೆ.

ಅಷ್ಟರಲ್ಲಿ ಮರದಮೇಲಿಂದ ಏನೋ ಧಪ್ಪೆಂದು ಬಿದ್ದ ಶಬ್ದವಾಯಿತು. ಎಲ್ಲರೂ ಆ ಕಡೆ ತಿರುಗಿ ನೋಡಿದರು. ಒಂದೇ ಸಲ ಎಲ್ಲರೂ ಭಯಪಟ್ಟರು. ಎಲ್ಲರಿಗೂ ಬೆವರಿಳಿಯಿತು. ಅವರಿಗೆ ಐದು ಅಥವಾ ಆರು ಗಜಗಳ ದೂರದಲ್ಲಿ ಮೇಲಿಂದ ಒಂದು ಅಸ್ಥಿಪಂಜರ ಬಿದ್ದಿದೆ. ಅದು ಮನುಷ್ಯನ ಅಸ್ಥಿಪಂಜರ. ಅದು ಪೂರ್ತಿ ಮೂಳೆಗಳ ರೂಪದಲ್ಲಿ ಇರದೆ, ಅದರ ಮೂಳೆಗಳಿಗೆ ಅಲ್ಲಲ್ಲಿ ಇನ್ನೂ ಕೆಲವು ಮಾಂಸದ ಖಂಡಗಳು ಅಂಟಿಕೊಂಡು ಹಸಿದಾಗಿ ಇದೆ. ಭಯವನ್ನು ಹುಟ್ಟಿಸುವ ಆ ಅಸ್ಥಿಪಂಜರವನ್ನು ನೋಡಿದಕೂಡಲೇ ಮುನೆಪ್ಪ ಮನುಷ್ಯರು ಭಯಪಟ್ಟರು. ಅವರು ಆ ಭಯದಿಂದ ಎಚ್ಚೆತ್ತುಕೊಳ್ಳದ ಮೊದಲೆ ಆ ಅಸ್ಥಿಪಂಜರ ಕದಲಿ ಎದ್ದುಕುಳಿತುಕೊಂಡಿತು. ಆ ದೃಶ್ಯವನ್ನು ನೋಡಿದವರು ಎಲ್ಲರು ಕೆಲವು ಹೆಜ್ಜೆಗಳು ಹಿಂದಕ್ಕೆ ಹಾಕಿ ಆಕಡೆ ನೋಡುತ್ತಿದ್ದಾರೆ. ಕುಳಿತು ಕೊಂಡಿರುವ ಅಸ್ಥಿಪಂಜರ ನಿಧಾನವಾಗಿ ಕದಲಿ ಎದ್ದು ನಿಂತಿತು. ಅದು ನಿಂತಕೂಡಲೆ ಮುನೆಪ್ಪ ಮನುಷ್ಯರಲ್ಲಿ ಭಯ ಇನ್ನೂ ಹೆಚ್ಚಾಯಿತು. ಅಷ್ಟರಲ್ಲಿ ನಿಧಾನವಾಗಿ ಎರಡು ಕಾಲುಗಳನ್ನು ನೆಲದ ಮೇಲೆ ಎಳೆಯುತ್ತಾ ಆ ಅಸ್ಥಿಪಂಜರ ಸ್ವಲ್ಪ ಸ್ವಲ್ಪ ಮುಂದಕ್ಕೆ ಬರತೊಡಗಿತು. ಕೂಡಲೇ ಅವರು ಕಾಲಿಗೆ ಬುದ್ಧಿ ಹೇಳಿದರು. ಅವರ ಓಟ ನಾನು ಮೊದಲಾ ನೀನು ಮೊದಲಾ ಎನ್ನುವಂತಿದೆ. ಎರಡು ಫರ್ಲಾಂಗ್ ದೂರ ಹೋಗುವವರೆಗು ಅವರು ಹಿಂತಿರುಗಿ ನೋಡಲಿಲ್ಲ. ಅವರಿಗೆ ಎಂದೂ ಇಂತಹ ಅನುಭವ ಎದುರಾಗಲಿಲ್ಲ. ಆದ್ದರಿಂದ ಪೂರ್ತಿ ಭಯಪಟ್ಟು ಹೋದರು. ಎರಡು ಫರ್ಲಾಂಗ್ ಹಾಗೆ ಓಡಿದ ನಂತರ ವೆಂಕು ಧೈರ್ಯಮಾಡಿ ಹಿಂತಿರುಗಿ ನೋಡಿ ನಿಂತನು. ನಂತರ ಎಲ್ಲರೂ ನಿಂತುಕೊಂಡರು. ಅವರಿಗೆ ಅಲ್ಲಿಂದ ಏನೂ ಕಾಣಿಸಲಿಲ್ಲ. ಎರಡು ನಿಮಿಷಗಳು ನಿಂತ ನಂತರ ಅವರಲ್ಲಿ ಅವರು ಹೀಗೆ ಮಾತನಾಡಿಕೊಂಡರು.)

**ಒಬ್ಬನು :–** ನಾವು ಓಡದಂತೆ ಎಲ್ಲರೂ ಸೇರಿ ಅಲ್ಲೇ ಇದ್ದಿದ್ದರೆ ಚೆನ್ನಾಗಿರುತ್ತಿತ್ತು. ಏನು ನಡೆಯುತ್ತಿತ್ತೋ ನೋಡುತ್ತಿದ್ದೆವು.

**ಎರಡನೆಯವನು :–** ಅಲ್ಲೇ ಇದ್ದಿದ್ದರೇ ಚೆನ್ನಾಗಿರುತ್ತಿತ್ತೆಂದು ಈಗ ಅನ್ನುತ್ತಿದ್ದೀಯ. ಅಲ್ಲಿದ್ದರೇ ಚೆನ್ನಾಗಿರುವುದಿಲ್ಲವೆಂದೇ ನೀನು ಓಡಿರುವುದು. ಏನು ನಡೆಯುತ್ತಿತ್ತೋ

ನೋಡುತ್ತಿದ್ದವೆಂದು ಅನ್ನುತ್ತೀಯ. ಏನು ನಡೆಯುತ್ತಿತ್ತೊ ಅಲ್ಲೇ ತಿಳಿದಿದೆ ಅಲ್ಲವೆ! ಅದು ನೇರವಾಗಿ ನಮ್ಮಮೇಲೆ ಬರುವುದು ನಡೆದಿದೆ ಅಲ್ಲವೆ!

**ಮೂರನೆಯವನು :–** ಬದುಕಿರುವ ಮನುಷ್ಯರಿಗೇ ಭಯಪಡದವರು ಸತ್ತಿರುವ ಮನುಷ್ಯನನ್ನು ನೋಡಿ ಭಯಪಡುವುದು ಏಕೆ?

**ನಾಲ್ಕನೆಯವನು :–** ಆದರೇ ನೀನು ಅಲ್ಲೇ ಇರದಂತೆ ಏಕೆ ಓಡಿದ್ದೀಯ?

**ಮೂರನೆಯವನು :–** ನೀವೆಲ್ಲರೂ ಓಡುತ್ತಿದ್ದರೆ ನಾನೂ ಓಡಿದ್ದೇನೆ. ಅಷ್ಟೇ ಹೊರತು ಅದಕ್ಕೆ ನಾನು ಭಯಪಡಲಿಲ್ಲ.

**ನಾಲ್ಕನೆಯವನು :–** ಆದರೆ ನಾವೇನಾ ಭಯಪಡುವುದು. ಎಲ್ಲರೂ ಸೇರಿ ಹೋಗೋಣ ನಡೆಯಿರಿ ಅದರ ಕಥೆ ನೋಡೋಣ.

**ವೆಂಕು :–** ಬೇಡ. ಮೂರ್ಖವಾಗಿ ಪ್ರವರ್ತಿಸಬಾರದು. ಎಲ್ಲರು ಇಲ್ಲೇ ಇರೋಣ. ಅದೇನೋ ಪಿಶಾಚಿಗಳ ನಿಲಯವಾದಂತಿದೆ. ನಾಗಭೂಷಣ ಬರುವವರೆಗು ಇಲ್ಲೇ ಇರೋಣ. ಆತುರವೇಕೆ.

(ಹಾಗೆ ವೆಂಕೂ ಮಾತುಗಳನ್ನು ಕೇಳಿ ಎಲ್ಲರೂ ಅಲ್ಲೇ ಇದ್ದಾರೆ. ಹತ್ತು ನಿಮಿಷಗಳ ನಂತರ ನಾಗಭೂಷಣನು ಬಂದಿದ್ದಾನೆ. ವೆಂಕೂ ಉಳಿದವರು ಅಲ್ಲಿರುವುದನ್ನು ನೋಡಿ ಇದೇನು ಇಲ್ಲಿದ್ದೀರೆಂದು ಕೇಳಿದ್ದಾನೆ. ಅವರು ನಡೆದ ವಿಷಯವೆಲ್ಲಾ ಹೇಳಿದರು. ಆ ವಿಷಯವನ್ನು ಕೇಳಿದ ನಾಗಭೂಷಣನಿಗೆ ಏನೂ ಅರ್ಥವಾಗಲಿಲ್ಲ. ನೀನೇನು ತಿಳಿದುಕೊಂಡು ಬಂದಿದ್ದೀಯೆಂದು ವೆಂಕು ನಾಗಭೂಷಣನನ್ನು ಕೇಳಿದ್ದಾನೆ. ಆಗ ನಾಗಭೂಷಣ ವೆಂಕು ಕಡೆ ನೋಡಿ "ಈ ಮರದ ಹತ್ತಿರಕ್ಕೆ ಯಾರೂ ಬರುವುದಿಲ್ಲವಂತೆ, ಒಂದು ವೇಳೆ ಬಂದರೆ ಬಂದವನಿಗೆ ಯಾವುದೊ ಒಂದು ವ್ಯಾಧಿಬಂದು ಬಾಧೆಬೀಳುತ್ತಾರೆಂದು ನಮ್ಮನ್ನು ಸಹ ಅಲ್ಲಿಗೆ ಹೋಗಬೇಡವೆಂದು ಗ್ರಾಮಸ್ಥರು ಹೇಳುತ್ತಿದ್ದಾರೆ. ಅಷ್ಟೇ ಅಲ್ಲದೆ ಆ ಮರದ ಕೊಂಬೆಗಳನ್ನು ಮುರಿದವರಿಗೆ ಶರೀರದಲ್ಲಿ ಅವಯವಗಳು ಕೆಲಸ ಮಾಡದಂತೆ ಚೈತನ್ಯ ಇಲ್ಲದಂತಾಗುತ್ತವಂತೆ" ಎಂದು ಹೇಳಿದ್ದಾನೆ.

ಗ್ರಾಮಸ್ಥರು ಹೇಳಿದ ವಿಷಯಗಳನ್ನೂ, ಈಗ ಮುನೆಪ್ಪ ಮನುಷ್ಯರ ಮುಂದೆ ನಡೆದ ಸಂಘಟನೆಗಳನ್ನು ನೋಡಿದರೆ ಇಲ್ಲೇನೋ ತಿಳಿಯದ ರಹಸ್ಯವಿದ್ದಂತೆ ನಾಗಭೂಷಣನಿಗೆ ಅರ್ಥವಾಗಿದೆ. ಆ ರಹಸ್ಯವನ್ನು ತಿಳಿದುಕೊಂಡು, ಆ ವೃಕ್ಷದ ಹತ್ತಿರಕ್ಕೆ ಹೋಗಿ, ಆ ಹಾವನ್ನು ಹಿಡಿದುಕೊಳ್ಳಬೇಕೆಂದರೆ ತನಗೆ ತಿಳಿದ ಉಪಾಯ ಒಂದೇ ಇದೆ. ಅದು ಏನೆಂದರೆ "ಕುಟ್ಟಿ ಸೈತಾನ್" ಎನ್ನುವ ಒಂದು ಶಕ್ತಿಯನ್ನು ಒಬ್ಬ ಮನುಷ್ಯನೊಳಗೆ ಆವರಿಸುವಂತೆ ಮಾಡಿ ಅದರಿಂದ ಆ ಮರದ ರಹಸ್ಯವನ್ನು ತಿಳಿದುಕೊಳ್ಳಬೇಕೆಂದುಕೊಂಡಿದ್ದಾನೆ. ಆ ವಿಷಯವನ್ನೇ ಮುನೆಪ್ಪ ಮನುಷ್ಯರಿಗೆ ಹೇಳಿದ್ದಾನೆ. ಮರವೊಂದರ ರಹಸ್ಯವನ್ನು ತಿಳಿದುಕೊಂಡು ಹಾವನ್ನು ಹಿಡಿಯಬೇಕೆಂದರೆ, ಕುಳ್ಳಸೈತಾನ್ ಹೊರತು ಮತ್ತೊಂದು ದಿಕ್ಕಿಲ್ಲವೆಂದು ಮಾಂತ್ರಿಕನಾದ ನಾಗಭೂಷಣ ತಿಳಿಸಿದ್ದಾನೆ. "ಎಷ್ಟು ಖರ್ಚಾದರೂ ಪರವಾಗಿಲ್ಲ ಮೊದಲು ಕುಟ್ಟಿ ಸೈತಾನ್‌ನ್ನು ಕರೆದು ಆ ವಿಷಯವೇನೋ ತಿಳಿದುಕೊ" ಮತ್ತೆ ಹೇಳಿದರು ಮುನೆಪ್ಪ ಮನುಷ್ಯರು.

ನಾಗಭೂಷಣ ಸ್ಮಶಾನದಲ್ಲಿ ಪೂಜೆ ಮಾಡಬೇಕೆಂದರೆ ಅದಕ್ಕೆ ಬೇಕಾದ ಸಾಮಾಗ್ರಿ ಮೊದಲಾದ ಏರ್ಪಾಟುಗಳು ಮಾಡಿದ್ದಾರೆ. ಮಾರನೆ ದಿನ ರಾತ್ರಿ ಕುಟ್ಟಿ ಸೈತಾನ್ ಪೂಜೆ ಪ್ರಾರಂಭ ಮಾಡಬೇಕೆಂದುಕೊಂಡಿದ್ದಾರೆ. ನಾಗಭೂಷಣ ಮುನೆಪ್ಪ ಮನುಷ್ಯರನ್ನು ತನಗೆ ರಕ್ಷಣೆಯಾಗಿ ಇಟ್ಟುಕೊಂಡು ಪೂಜೆ ಮಾಡಬೇಕೆಂದು ಕೊಂಡಿದ್ದಾನೆ. ಕುಟ್ಟಿ ಸೈತಾನ್ ಬರುವ ಮುನ್ನ ಬಹಳ ಭಯಂಕರವಾದ ಶಬ್ದಗಳು ಏರ್ಪಡುತ್ತವೆ. ಆದರೆ ಅವುಗಳಿಗೆ ಭಯಪಡಬಾರದೆಂದು ಮುನೆಪ್ಪ ಮನುಷ್ಯರಿಗೆ ನಾಗಭೂಷಣ ಮೊದಲೇ ಹೇಳಿದ್ದಾನೆ. ಕೆಲವು ಭಯಂಕರ ಶಬ್ದಗಳ ನಂತರ ಕುಟ್ಟಿ ಸೈತಾನ್ ಛಾಯೆಯಂತೆ ಪ್ರತ್ಯಕ್ಷವಾಗುತ್ತದೆ. ಆಗ ಒಬ್ಬ ಮನುಷ್ಯನೊಳಗೆ ಅದನ್ನು ಆವರಿಸುವಂತೆ ಮಾಡುತ್ತೇನೆ. ಆಗ ಆ ಮನುಷ್ಯನಿಗೆ ಬಿಸಿ ರಕ್ತದಿಂದ ಬೆರೆಸಿದ ಅನ್ನವನ್ನು ಇಡಬೇಕು. ಹಾಗೆ ಇಟ್ಟ ನಂತರ ಅದು ಶಾಂತಿಸಿ ನಾವು ಕೇಳಿದ ವಿಷಯಗಳೆಲ್ಲವನ್ನೂ ಹೇಳಬಲ್ಲದೆಂದು ನಾಗಭೂಷಣ ತಿಳಿಸಿ ಆಹ್ವಾನೆಗೆ ತಕ್ಕ ಮನುಷ್ಯನನ್ನು ಮುನೆಪ್ಪ ಮನುಷ್ಯರಲ್ಲೇ ಒಬ್ಬರನ್ನು ಏರ್ಪಾಟು ಮಾಡಿ ಇಟ್ಟುಕೊಂಡಿದ್ದಾನೆ.

ಮರುದಿನ ಮಧ್ಯರಾತ್ರಿಯಿಂದ ಪ್ರಾರಂಭವಾದ ಪೂಜೆ ಗಂಟೆಹೊತ್ತು ಸಾಗಿತು. ಅಲ್ಲಿಯವರೆಗು ಭಯಾನಕ ವಾತಾವರಣದ ಮಧ್ಯ ಸ್ಮಶಾನದಲ್ಲಿ ಇಲ್ಲದ ಧೈರ್ಯವನ್ನು ತಂದುಕೊಂಡು ಮುನೆಪ್ಪ ಮನುಷ್ಯರು ಜಾಗ್ರತೆಯಿಂದಿ ಇದ್ದಾರೆ. ಸ್ವಲ್ಪ ಹೊತ್ತಿಗೆ ಅವರಿಗೆ ಸ್ವಲ್ಪ ದೂರದಲ್ಲಿ ಭಯಂಕರವಾದ ಚಿತ್ರವಿಚಿತ್ರ ಶಬ್ದಗಳು ಕೇಳಿಸಲಾರಂಭಿಸಿದವು. ಮೊದಲೇ ಈ ವಿಷಯವನ್ನು ನಾಗಭೂಷಣ ಹೇಳಿರುವುದರಿಂದ ಆ ಶಬ್ದಗಳಿಗೆ ಯಾರೂ ಹೆದರಲಿಲ್ಲ. ಪ್ರಾಣಿಗಳ ಕೂಗುಗಳು, ಹುಲಿಗಳ ಘರ್ಜನೆಗಳು ಸಹ ಕೇಳಿಸಿವೆ. ಹಾಗೆ ನಡೆದ ಸ್ವಲ್ಪ ಹೊತ್ತಿಗೆ "ಢಾಂ" ಎನ್ನುವ ಶಬ್ದ ಕಣ್ಣುಗಳು ಮಿಂಚುವಂತೆ ಬೆಳಕು ಕಂಡು ಕೇಳಿಸಿತು. ಎಲ್ಲರೂ ಆ ಕಡೆ ನೋಡಿದರು. ಅವರ ಮುಂದೆ ಉರಿಯುತ್ತಿರುವ ಅಗ್ನಿ ಬೆಳಕಿನಲ್ಲಿ ಛಾಯೆಯಂತೆ ಒಂದು ಮೊಳ ಉದ್ದ ಇರುವ ಕುಬ್ಜ (ಕುಳ್ಳವ್ಯಕ್ತಿ) ಆಕಾರ ಕಾಣಿಸಿತು. ಆ ಆಕಾರವನ್ನು ಗಮನಿಸಿದ ಮಾಂತ್ರಿಕನಾದ ನಾಗಭೂಷಣ ಪೂಜೆ ಹತ್ತಿರ ಕುಳಿತುಕೊಂಡ ಮನುಷ್ಯನೊಳಗೆ ಸೇರೆಂದು ಅದನ್ನು ಆಜ್ಞಾಪಿಸಿದನು. ಕೂಡಲೇ ಆ ಆಕಾರ ಕಾಣಿಸದಂತೆ ಹೋಗಿ ಎದುರಿಗೆ ಕುಳಿತುಕೊಂಡ ಮನುಷ್ಯನೊಳಗೆ ಸೇರಿಹೋಯಿತು. ಆಗ ಆ ಮನುಷ್ಯ ಊಗುವುದಕ್ಕೆ ಪ್ರಾರಂಭಿಸಿದನು. ಕೂಡಲೇ ಬಿಸಿ ರಕ್ತವನ್ನು ಕಲಿಸಿದ ಅನ್ನವನ್ನು ಆತನ ಹತ್ತಿರ ಇಡಲು ನಾಗಭೂಷಣ ಹೇಳಿದ್ದಾನೆ. ಬಿಸಿ ರಕ್ತಕ್ಕೋಸ್ಕರ ಸಿದ್ಧವಾಗಿ ಇಟ್ಟುಕೊಂಡ ಕೋಳಿ ಹುಂಜವನ್ನು ಅವರು ಕುತ್ತಿಗೆ ಕೊಯ್ಯುವುದಕ್ಕೆ ಪ್ರಯತ್ನಿಸಿದರು. ಆಗ ಆ ಕೋಳಿ ಹುಂಜ ಪುಕ್ಕೆಗಳು ಜೋರಾಗಿ ಅಲ್ಲಾಡಿಸಿ ಅವರ ಕೈಯಿಂದ ತಪ್ಪಿಸಿಕೊಂಡಿದೆ. ಅದನ್ನು ಹಿಡಿಕೊಳ್ಳುವುದಕ್ಕೆ ಕೆಲವರು ಪ್ರಯತ್ನಿಸಿದಾಗ ಅದು ಅವರಿಗೆ ಸಿಗದಂತೆ ಕತ್ತಲೊಳಗೆ ಓಡಿಹೋಗಿದೆ.

ಅಷ್ಟರಲ್ಲಿ ಮನುಷ್ಯನೊಳಗೆ ಆವರಿಸಿದ ಕುಟ್ಟಿಸೈತಾನ್ ಕಣ್ಣು ತೆರೆಯಿತು. ಕಣ್ಣು ತೆರೆದ ಕೂಡಲೇ ತನಗೆ ಆಹಾರ ಇಲ್ಲದಿರುವುದರಿಂದ ಅಲ್ಲಿರುವ ಮನುಷ್ಯರ ಬಿಸಿ ರಕ್ತವನ್ನು ಕುಡಿಯಬೇಕೆಂದು ಮೇಲಕ್ಕೆ ಎದ್ದಿತು. ಇದೆಲ್ಲಾ ಗಮನಿಸಿದ ನಾಗಭೂಷಣ ಸಹ ಭಯಪಟ್ಟನು. ಆ ಸಮಯದಲ್ಲಿ ಅದನ್ನು ಯಾರೇ ಆಗಲಿ, ಯಾವ ಮಂತ್ರವಾಗಲೀ ತಡೆಯುವುದಿಲ್ಲವೆಂದು ನಾಗಭೂಷಣನಿಗೆ ಚೆನ್ನಾಗಿ ತಿಳಿದಿತ್ತು. ಕುಟ್ಟಿ ಸೈತಾನ್ ಆವರಿಸಿದ ಮನುಷ್ಯನನ್ನು ಗಟ್ಟಿಯಾಗಿ ಹಿಡಿದುಕೊಳ್ಳಲು

ಮುನೆಪ್ಪ ಮನುಷ್ಯರಿಗೆ ಹೇಳಿದ್ದಾನೆ. ಆಗ ಕುಟ್ಟಿಸೈತಾನ್ ಆವರಿಸಿದ ಮನುಷ್ಯನನ್ನು ಹಿಡಿದುಕೊಳ್ಳುವುದಕ್ಕೆ ಮುನೆಪ್ಪ ಮನುಷ್ಯರು ಪ್ರಯತ್ನಿಸಿದರು. ಆದರೂ ಫಲವಿಲ್ಲದಂತಾಯಿತು. ಅವರು ಪ್ರಮಾದವನ್ನು ಕೋರಿ ತಂದುಕೊಂಡಂತಾಯಿತು. ಎಷ್ಟು ಜನ ಹಿಡಿದರೂ ಎಲ್ಲರನ್ನೂ ಬಿಡಿಸಿಕೊಳ್ಳುತ್ತಿತ್ತು. ಕುಟ್ಟಿ ಸೈತಾನ್ ಆವರಿಸಿದ ಮನುಷ್ಯ ಹಿಡಿದುಕೊಂಡವರನ್ನು ಕೊಡವಿದರೆ ಅವರು ಗಾಳಿಯಲ್ಲಿ ತೇಲಾಡಿ ಕೆಳಗೆ ಬೀಳುತ್ತಿದ್ದಾರೆ. ಬಲವಾದ ಮನುಷ್ಯರನ್ನು ಸಹ ಎತ್ತಿ ಬಿಸಾಡುವುದನ್ನು ನೋಡಿ ಅವರೆಲ್ಲಾ ಹೆದರಿದರು. ಕುಟ್ಟಿಸೈತಾನ್ ಆವರಿಸಿದ ಮನುಷ್ಯನ ಮುಖ ಭಯಂಕರವಾಗಿ ಬದಲಾಗಿಹೋಗಿದೆ. ಕಾಳಿಕಾದೇವಿಯಂತೆ ನಾಲಿಗೆಯನ್ನು ಹೊರಗೆ ಇಟ್ಟಿದ್ದಾನೆ. ಆ ಮನುಷ್ಯನ ಶರೀರದಲ್ಲಿ ಎಷ್ಟೋ ಪಟ್ಟು ಹೆಚ್ಚಿನ ಬಲ ಬಂದು ಸೇರಿದೆ. ಮುನೆಪ್ಪ ಮನುಷ್ಯರಿಗೆ ಏನೆಂದು ದಿಕ್ಕುತೋಚದ ಸ್ಥಿತಿಯಲ್ಲಿ ಎಲ್ಲರೂ ಬಂದು ನಾಗಭೂಷಣ ಹಿಂದೆ ಸೇರಿದ್ದಾರೆ. ಆ ಸೈತಾನ್ ಕೈಯಲ್ಲಿ ತಮ್ಮ ಸಾವು ತಪ್ಪಲ್ಲ ಎಂದುಕೊಂಡರು. ಒಂದು ಚಿಕ್ಕ ತಪ್ಪಿಗೆ ಎಷ್ಟು ಕೆಲಸ ನಡೆದಿದೆ ಎನ್ನುವ ಚಿಂತೆ ನಾಗಭೂಷಣನಲ್ಲಿ ಸಹ ಬಂದಿತು. ಅವರೆಲ್ಲರಲ್ಲಿ ಬಲ ಇಲ್ಲದಂತಾಯಿತು, ಅವರು ಕದಲದಂತೆ ಹಾಗೆ ನಿಂತುಹೋದರು. ಕುಟ್ಟಿಸಾತಾನ್ ಒಂದೊಂದು ಹೆಜ್ಜೆ ಅವರ ಕಡೆ ಹಾಕತೊಡಗಿತು.

ಆಗ ನಾಗಭೂಷಣನಿಗೆ ಒಂದು ಯೋಚನೆ ಬಂದಿತು. ಕೂಡಲೇ ಪಕ್ಕದಲ್ಲೇ ಇರುವ ಚಾಕು ತೆಗೆದುಕೊಂಡು, ತನ್ನ ಕೈಯನ್ನು ಕೊಯ್ದುಕೊಂಡು, ರಕ್ತಸೋರುವಂತೆ ಮಾಡಿ, ಆ ರಕ್ತವನ್ನು ಪಕ್ಕದಲ್ಲಿರುವ ನೈವೇದ್ಯದ ಅನ್ನದೊಳಗೆ ಬೆರೆಸಿ ಕುಳ್ಳಸೈತಾನ್ ಮುಂದಕ್ಕೆ ತಳ್ಳಿದನು. ತಕ್ಷಣವೆ ಕುಳ್ಳಸೈತಾನ್ ಆ ನೈವೇದ್ಯವನ್ನು ತಿಂದು ಸ್ವಲ್ಪ ಹೊತ್ತಿಗೆ ಶಾಂತವಾಯಿತು. ನಂತರ ಏನು ಮಾಡಬೇಕೊ ತಿಳಿದಿರುವ ನಾಗಭೂಷಣ ಮಂತ್ರಿಸಿದ ತೆಂಗಿನಕಾಯನ್ನು ಅದರ ಮುಂದೆ ಹೊಡೆದನು. ಆಗದು ಭಯಪಡುತ್ತಾ "ಯಾರು ನನ್ನ ಅಧಿಕಾರಿ ನನ್ನನ್ನೇಕೆ ಕರೆದಿದ್ದೀರ" ಎಂದಿತು. ಆ ಮಾತಿಗೆ ಉತ್ತರವಾಗಿ ನಾಗಭೂಷಣ "ನಾನೇ ನಿನ್ನ ಅಧಿಕಾರಿ, ನಾನೇ ಕರೆದಿದ್ದೇನೆ" ಎಂದನು. "ನನ್ನನ್ನು ಏಕೆ ಕರೆದಿದ್ದೀರ ನನ್ನಿಂದ ನಿಮಗೆ ಯಾವ ಕೆಲಸವಾಗಬೇಕು" ಎಂದು ಕುಟ್ಟಿಸೈತಾನ್ ಕೇಳಿತು. ಆ ಮಾತು ಕೇಳಿದ ನಾಗಭೂಷಣ ಕುಳ್ಳಸೈತಾನ್

ಪೂರ್ತಿ ತನ್ನ ಅಧೀನದೊಳಗೆ ಬಂದಿದೆಯೆಂದು ತಿಳಿದುಕೊಂಡು, ನಿರ್ಭಯದಿಂದ ಅದರೊಂದಿಗೆ ಹೀಗೆ ಹೇಳಿದನು. “ನನಗೆ ಇಲ್ಲಿರುವ ಆಲದಮರದ ವಿಷಯ ತಿಳಿಯಬೇಕು, ನಂತರ ನಾವು ಹುಡುಕುತ್ತಾ ಬಂದಿರುವ ಸರ್ಕಸ್ ಹಾವು ಬೇಕು, ಅದಕ್ಕೆ ಜೊತೆಯಾಗಿರುವ ಹಾವಿನ ವಿಷಯ ಸಹ ನಮಗೆ ತಿಳಿಯಬೇಕು. ಅದಕ್ಕೇ ನಿನ್ನನ್ನು ಕರೆದಿದ್ದೇವೆ. ಆ ಮಾತು ಕೇಳಿದ ಕುಟ್ಟಿಸೈತಾನ್ ಸ್ವಲ್ಪ ಹೊತ್ತು ಕಣ್ಣುಮುಚ್ಚಿಕೊಂಡು ನಂತರ ಕಣ್ಣು ತೆರೆದು ಹೀಗೆ ಹೇಳಲು ಆರಂಭಿಸಿತು.

ಆ ಆಲದಮರದಲ್ಲಿ ಕಾಟೇರಿ ಎನ್ನುವ ಪಿಶಾಚಿ ನಿವಾಸವಿದೆ. ಆ ಮರದ ಹತ್ತಿರಕ್ಕೆ ಯಾರು ಹೋದರೂ, ಅವರ ಶರೀರದಲ್ಲಿ ಸೇರಿ ನರಗಳಲ್ಲಿ ಒತ್ತಡವನ್ನುಂಟು ಮಾಡಿ ಅವರಿಗೆ ವಾಸಿಯಾಗದ ರೋಗವನ್ನು ಬರುವಂತೆ ಮಾಡುತ್ತಿದೆ. ಒಂದುವೇಳೆ ಆ ಮರದ ಕೊಂಬೆಗಳನ್ನು ಯಾರಾದರೂ ಮುರಿದರೆ, ಅವನಿಗೆ ಶರೀರದಲ್ಲಿ ಬಲವಿಲ್ಲದಂತೆ ಮಾಡಿ, ಅವಯವಗಳನ್ನು ಕುಗ್ಗುವಂತೆ ಮಾಡುತ್ತಿದೆ. ನಿನ್ನೆ ನಿಮ್ಮವರು ಅಲ್ಲಿರುವಾಗ ಪ್ರಾಣಿಗಳನ್ನು ತಂದುಕೊಂಡು ತಿಂದು ಬಿಟ್ಟಿರುವ ಹಸಿ ಕಳೆಬರ ಮೇಲಿಂದ ಕೆಳಗೆ ಬಿದ್ದಿದೆ. ಆ ಕಳೆಬರವನ್ನು ಮರದ ಮೇಲಕ್ಕೆ ಸೇರಿಸಿರುವುದೂ, ಮರದಮೇಲಿನಿಂದ ಕೆಳಗೆ ಹಾಕಿರುವುದು ಆ ಕಾಟೇರಿ ಪಿಶಾಚಿಯೇ. ಕೆಳಗೆ ಬಿದ್ದಿರುವ ಅಸ್ಥಿಪಂಜರವನ್ನು ಕೂರಿಸಿರುವುದು, ನಂತರ ನಿಲ್ಲುವಂತೆ ಮಾಡಿರುವುದು, ಆ ನಂತರ ಮುಂದಕ್ಕೆ ಬರುವಂತೆ ಆ ಕಾಟೇರಿಯೇ ಮಾಡಿದೆ. ಆ ಮರದ ಹತ್ತಿರಕ್ಕೆ ಯಾರೂ ಬಾರದಂತಿರುವುದಕ್ಕೆ ಕಾಟೇರಿಯೇ ಹಾಗೆ ಮಾಡುತ್ತಿದೆ. ಅದಕ್ಕೂ ಮೀರಿ ಆ ಮರದಲ್ಲಿ ಯಾವ ರಹಸ್ಯವೂ ಇಲ್ಲ. ನಂತರ ನೀವು ಸರ್ಕಸ್ ಹಾವನ್ನು ಬೇಕೆಂದಿದ್ದೀರ. ನಿಮಗೆ ಬೇಕಾಗಿರುವ ಸರ್ಕಸ್ ಹಾವು ಯಾವುದೂ ಅಲ್ಲಿಲ್ಲ.

ಆ ಮಾತುಗಳನ್ನು ಕೇಳಿದ ನಾಗಭೂಷಣ “ಆ ಹಾವು ಅಲ್ಲೇ ಇರುವಂತೆ ನಾವು ಅಂಜನದಲ್ಲಿ ನೋಡಿದ್ದೇವೆ. ಅದಕ್ಕಾಗಿಯೇ ನಾವು ಮುಖ್ಯವಾಗಿ ಇಲ್ಲಿಗೆ ಬಂದಿದ್ದೇವೆ. ಅದರ ವಿಷಯ ನೀನು ತಪ್ಪದೇ ಹೇಳಬೇಕು” ಎಂದನು. “ತಪ್ಪದೆ ಹೇಳುತ್ತೇನೆ ಮತ್ತೆ ನನಗೆ ಆಹಾರ” ಎಂದು ಕುಟ್ಟಿಸೈತಾನ್ ಕೇಳಿತು. ಸ್ವಲ್ಪ ಹೊತ್ತಿಗೆ ಒಂದು ಸಲ ಕೋಳಿ ಮೊಟ್ಟೆಗಳನ್ನು ಆಹಾರವಾಗಿ ಇಡಬೇಕೆಂದು ತಿಳಿದ

ನಾಗಭೂಷಣ ಕೂಡಲೇ ಐದು ಕೋಳಿಮೊಟ್ಟೆಗಳನ್ನು ಅದರ ಮುಂದೆ ಇಟ್ಟನು. ಕೂಡಲೇ ಅದು ಅವುಗಳನ್ನು ತಿಂದು ಹೀಗೆ ಹೇಳುವುದನ್ನು ಪ್ರಾರಂಭಿಸಿತು. "ನೀವು ಬಂದಿರುವುದು ಸರ್ಕಸ್ ಹಾವಿಗೋಸ್ಕರವಲ್ಲ. ನೀವು ಯಾವ ಹಾವಿಗೋಸ್ಕರ ಬಂದಿದ್ದೀರೊ ಆ ಹಾವು ಸರ್ಕಸ್ ಹಾವಲ್ಲ. ಅದಕ್ಕೆ ಯಾವ ಸರ್ಕಸ್ ವಿದ್ಯೆಗಳೂ ಬರುವುದಿಲ್ಲ. ಆ ಹಾವಿನ ಹೊಟ್ಟೆಯಲ್ಲಿ ವಜ್ರಗಳಿವೆ. ಆ ವಜ್ರಗಳಿಗೋಸ್ಕರ ಹಾವನ್ನು ಹಿಡಿದುಕೊಳ್ಳಬೇಕೆಂದು ಬಂದಿದ್ದೀರ." ಆ ಮಾತು ಕೇಳಿದ ನಾಗಭೂಷಣನಿಗೆ ಏನೂ ಅರ್ಥವಾಗದೆ ಮುನೆಪ್ಪ ಮನುಷ್ಯರ ಕಡೆ ನೋಡಿದ್ದಾನೆ. "ಹೌದು ನಿಜವೇ ನಿನಗೆ ಅಸತ್ಯವನ್ನು ಹೇಳಿದ್ದೇವೆ. ಅದರಲ್ಲಿ ವಜ್ರಗಳೇ ಇವೆ. ಆ ವಿಷಯ ಯಾರಿಗೂ ತಿಳಿಯಬಾರದು. ಆದ್ದರಿಂದ ಸರ್ಕಸ್ ಹಾವೆಂದು ನಿನಗೆ ಹೇಳಿದ್ದೇವೆ. ನೀವು ಕೇಳಿದ ಹಣಕ್ಕಿಂತ ಎರಡುಪಟ್ಟು ಹೆಚ್ಚಿಗೆ ಕೊಡುತ್ತೇವೆ. ನಮಗೆ ಆ ಹಾವು ಬೇಕು. ಅದು ನಮ್ಮಕೈಯಿಂದ ತಪ್ಪಿಸಿಕೊಂಡು ಓಡಿಹೋಗಿ ಬಂದಿದೆ." ಎಂದನು ವೆಂಕು.

ಆಗ ನಾಗಭೂಷಣನಿಗೆ ಅವರೊಂದಿಗೆ ಮಾತನಾಡುವುದಕ್ಕೆ ಸಮಯವೇ ಇಲ್ಲ. ಆದ್ದರಿಂದ ಕೂಡಲೇ ಕುಟ್ಟಿಸೈತಾನ್ ಕಡೆ ತಿರುಗಿ "ಆ ಹಾವು ನಮಗೆ ಬೇಕು. ಅದು ಎಲ್ಲಿದೆ." ಎಂದಿದ್ದಾನೆ. ಅದಕ್ಕೆ ಉತ್ತರವಾಗಿ ಅದು ಹೀಗೆ ಹೇಳಿತು. "ಆ ಹಾವು ಆಲದಮರದ ಕೆಳಗೆ ದೊಡ್ಡ ಬೇರಿನ ಪಕ್ಕದಲ್ಲಿರುವ ಹುತ್ತದಲ್ಲಿದೆ. ಅದು ಒಂದೇ ಅಲ್ಲದೆ ಅದಕ್ಕೆ ಜೊತೆಯಾಗಿ ಮತ್ತೊಂದು ಹಾವು ಸಹ ಇದೆ. ಜೊತೆಗಿರುವ ಹಾವು ಸಾಮಾನ್ಯವಾದುದ್ದಲ್ಲ. ಯಾವುದೋ ದೈವ ಶಕ್ತಿ ಅದರಲ್ಲಿ ಒಳಗೊಂಡಿದೆ. ಆ ಹಾವು ಅದರ ಪಕ್ಕದಲ್ಲಿರುವವರೆಗು ಆ ವಜ್ರಗಳ ಹಾವು ನಿಮಗೆ ಸಿಗುವುದಿಲ್ಲ. ಆ ಹಾವೇ ನೀವು ಅಂಜನ ನೋಡುತ್ತಿರುವಾಗ ಬಾಲದಿಂದ ಹೊಡೆದಿದೆ." ಆ ಮಾತುಗಳು ಕೇಳಿದ ನಾಗಭೂಷಣನಿಗೆ ಏನೂ ಅರ್ಥವಾಗಲಿಲ್ಲ. ಹಾವಿನಲ್ಲಿ ವಜ್ರಗಳಿವೆಯೆನ್ನುತ್ತಿದ್ದೀರ. ಪಕ್ಕದಲ್ಲಿರುವ ಹಾವೇನೊ ಶಕ್ತಿ ಇರುವ ಹಾವು. ಇದೇನು ರಗಳೆ, ನಿಧಾನವಾಗಿ ಆ ಕೆಲಸವನ್ನು ಬಿಟ್ಟು ಮನೆಗೆ ಹೋಗುವುದು ಒಳ್ಳೆಯದೆಂದು ತಿಳಿದ ನಾಗಭೂಷಣ ನಾನು ಕರೆದಾಗ ಬಾಯೆಂದು ಕುಟ್ಟಿಸೈತಾನ್‌ಗೆ ಹೇಳಿ ಅದರ ಮೇಲೆ ನೀರನ್ನು ಮಂತ್ರಿಸಿ ಚೆಲ್ಲಿದನು. ಹಾಗೇ ಆಗಲಿ ಎಂದು

ಹೇಳಿ ಅದು ಮನುಷ್ಯನಲ್ಲಿ ಅಡಗಿಹೋಯಿತು. ಸ್ವಲ್ಪ ಹೊತ್ತಿಗೆ ಮನುಷ್ಯ ಎಚ್ಚರವಾದನು. ಆಗ ನಾಗಭೂಷಣ ಮುನೆಪ್ಪ ಮನುಷ್ಯರೊಂದಿಗೆ ಈ ರೀತಿ ಹೇಳಿದನು.)

**ನಾಗಭೂಷಣ :–** ನೋಡ್ರೀ! ಇದೇನೋ ನನಗೆ ಅರ್ಥವಾಗದ ವಿಷಯದಂತಿದೆ. ಮರದ ಕೆಳಗೆ ಕಾಟೇರಿ ಪಿಶಾಚಿ ಬರಲು ಬಿಡುವುದಿಲ್ಲ. ಆದರೂ ನಾವು ಅಲ್ಲಿಗೆ ಹೋಗಿದ್ದೇವೆಂದರೆ, ಅಲ್ಲಿ ಅದಕ್ಕೆ ಮತ್ತೊಂದು ಹಾವು ಜೊತೆಯಾಗಿದೆ. ಆ ಜೊತೆಗಿರುವ ಹಾವು ದೊಡ್ಡ ಶಕ್ತಿ ಇರುವುದಂತೆ. ಆದ್ದರಿಂದ ಇದು ನನ್ನಕೈಲಾಗದ ಕೆಲಸ. ಈ ಕೆಲಸಕ್ಕೆ ನೀವು ಯಾರನ್ನಾದರೂ ಇಟ್ಟುಕೊಳ್ಳಿ.

**ವೆಂಕೂ :–** ಈಗ ನಿನಗೆ ಹಾವಿನ ರಹಸ್ಯವೆಲ್ಲಾ ತಿಳಿದುಹೋಗಿದೆ. ನಮ್ಮ ವಿಷಯ ತಿಳಿದ ನಂತರ ನಿನ್ನನ್ನು ಬಿಟ್ಟರೆ ನಮಗೇ ಮುಪ್ಪು. ಆದ್ದರಿಂದ ನಿನ್ನನ್ನು ನಾವು ಬಿಡುವುದಿಲ್ಲ. ನೀನು ಹೇಗಾದರೂ ಯಾವ ವಿಧದಲ್ಲಾದರೂ ಆ ಹಾವನ್ನು ಹಿಡಿದುಕೊಡಬೇಕು. ಅದಕ್ಕೆ ನಿನಗೆ ಬೇಕಾದಷ್ಟು ಹಣವನ್ನು ತೆಗೆದುಕೊ. ನಿನಗೆ ಸಹಾಯಮಾಡುವುದಕ್ಕೆ ನಾವೆಲ್ಲಾ ಇದ್ದೇವೆ. ನೀನು ಹಾಗೆ ಒಪ್ಪಿಕೊಳ್ಳದೇ ಹೋದರೆ, ನಿನ್ನನ್ನು ಮನೆಗೆ ಹೋಗಲು ಬಿಡುವುದಿಲ್ಲ. ಹಾವಿನ ರಹಸ್ಯ ತಿಳಿದ ನಂತರ ಯಾರಾದರೂ ನಮ್ಮೊಂದಿಗೇ ಇರಬೇಕು. ನೀನು ಒಪ್ಪಿಕೊಳ್ಳದೇ ಹೋದರೆ ನಿನ್ನನ್ನು ಸಾಯಿಸುವುದೊಂದೇ ಹೊರತು ನಮಗೆ ಬೇರೆ ದಾರಿ ಇಲ್ಲ.

**ನೂಕಾ :–** ನಾವು ಯಾರಾಗಿರುವುದು ನಿನಗೆ ಪೂರ್ತಿಯಾಗಿ ತಿಳಿದಿಲ್ಲ. ನಾವು ಅಸಮಾನ್ಯವಾದ ಕಳ್ಳರು. ನಾವು ಅಂದುಕೊಂಡ ಕೆಲಸವನ್ನು ಹೇಗಾದರೂ ಸಾಧಿಸಬಲ್ಲೆವು. ನೀನು ಈ ಕೆಲಸವನ್ನು ಮಾಡಿಕೊಟ್ಟರೇ ನಮಗೆ ಮಿತ್ರನಾಗುತ್ತೀಯ. ನಿನಗೆ ಯಾವ ಸಹಾಯವನ್ನಾದರೂ ಮಾಡುತ್ತೇವೆ. ಇಲ್ಲದೇ ಹೋದರೆ ನೀನು ನಮಗೆ ಶತ್ರು ಆಗುತ್ತೀಯ. ಆಗ ನಿನ್ನ ಕಡೆ ನಾವು ಕಠಿಣವಾಗಿ ಪ್ರವರ್ತಿಸಬೇಕಾಗಿರುತ್ತದೆ. ಚೆನ್ನಾಗಿ ಆಲೋಚನೆಮಾಡು.

(ಅವರ ಮಾತುಗಳನ್ನು ಕೇಳಿದ ನಾಗಭೂಷಣನಿಗೆ ಮುಂದೆ ಬಾವಿ ಹಿಂದೆ ಕೆರೆ ಎನ್ನುವಂತಾಯಿತು. ಅವರ ಮಾತುಗಳನ್ನು ಕೇಳದೇ ಹೋದರೆ

ಹೇಗಾದರೂ ನನ್ನನ್ನು ಬಿಡುವುದಿಲ್ಲವೆಂದು ಗ್ರಹಿಸಿದ ನಾಗಭೂಷಣನು ವಿಧಿಯಿಲ್ಲದ ಪರಿಸ್ಥಿತಿಯಲ್ಲಿ ಸರಿಯೆಂದು ಹಾವನ್ನು ಹಿಡಿದು ಕೊಡುವುದಕ್ಕೆ ಒಪ್ಪಿಕೊಂಡಿದ್ದಾನೆ. ಹಾಗೆ ಒಪ್ಪಿಕೊಂಡಿರುವುದಕ್ಕೆ ಸಂತೋಷಿಸಿದ ವೆಂಕು ನಾಗಭೂಷಣನೊಂದಿಗೆ ಹೀಗೆ ಹೇಳಿದ್ದಾನೆ.)

**ವೆಂಕು :–** ನಾವು ಯಾರಾಗಿರುವುದು, ನಮಗೆ ಬೇಕಾದ ಹಾವಿನಲ್ಲಿ ವಜ್ರಗಳಿರುವುದು ಯಾರಿಗೂ ತಿಳಿಯಬಾರದು. ಆ ರಹಸ್ಯವನ್ನು ಕಾಪಾಡಬೇಕಾದ ಜವಾಬ್ದಾರಿ ನಿನ್ನದೇ. ನಿನಗೆ ತಿಳಿದ ಈ ರಹಸ್ಯ ಹೊರಗೆ ತಿಳಿದರೆ ನಮಗೆ ಪ್ರಮಾದ ಬರುತ್ತದೆ. ಆಗ ನಿನ್ನನ್ನು ಬದುಕಲು ಬಿಡುವುದಿಲ್ಲ. ಆದ್ದರಿಂದ ಇಂದಿನಿಂದ ನೀನು ಜಾಗ್ರತೆಯಿಂದಿರು.

(ವೆಂಕು ಮಾತುಗಳನ್ನು ಕೇಳಿದ ನಾಗಭೂಷಣ ತನ್ನ ಮನಸ್ಸಿನಲ್ಲಿ ಹೀಗೆ ಯೋಚಿಸತೊಡಗಿದನು. ಇವರೊಂದಿಗೆ ಸ್ನೇಹ ಮಾಡಿ ಕೊಳ್ಳಿಯಿಂದ ತಲೆ ಕೆರೆದುಕೊಂಡಂತಾಗಿದೆ. ಹಾವನ್ನು ಹಿಡಿದುಕೊಡದೇ ಹೋದರೆ ಸಾಯಿಸುತ್ತೇವೆ ಎನ್ನುತ್ತಾರೆ. ಹಾವನ್ನು ಹಿಡಿದು ಇವರ ಪೀಡೆಯನ್ನು ಬಿಡಿಸಿಕೊಳ್ಳೋಣ ವೆಂದುಕೊಂಡರೆ, ಅದೇನೋ ಕಾಟೇರಿ ಪಿಶಾಚಿ ಮರದ ಹತ್ತಿರಕ್ಕೆ ಬರಲು ಬಿಡುವುದಿಲ್ಲವಂತೆ. ದೊಡ್ಡ ಸಮಸ್ಯೆಯಲ್ಲಿ ಸಿಲುಕಿಕೊಂಡಿದ್ದೇನೆ. ಹೇಗಾದರೂ ನನ್ನ ಮಂತ್ರ ಬಲವೆಲ್ಲಾ ಉಪಯೋಗಿಸಿ ಇವರಿಗೆ ಆ ಹಾವನ್ನು ಹಿಡಿದು ಕೊಟ್ಟು ಇವರಿಂದ ದೂರ ಆಗಬೇಕು. ಇಲ್ಲದೇ ಹೋದರೆ ಇವರು ನನ್ನನ್ನು ಸಾಯಿಸು ವಂತಿದ್ದಾರೆ, ಎಂದುಕೊಂಡು ವೆಂಕೂನೊಂದಿಗೆ ಹೀಗೆ ಹೇಳಿದ್ದಾನೆ.)

**ನಾಗಭೂಷಣ :–** ನಿಮ್ಮ ಕೆಲಸವನ್ನು ನಾನು ಕಷ್ಟಪಟ್ಟು ಮಾಡಿಕೊಡುತ್ತೇನೆ. ನನಗೆ ಬೇಕಾದ ಸಹಾಯವನ್ನು ನೀವು ಆಗಾಗ ಮಾಡುತ್ತಿರಬೇಕು.

**ವೆಂಕು :–** ನಿನಗೆ ಯಾವ ಸಹಾಯವನ್ನಾದರೂ ಮಾಡುತ್ತೇವೆ. ನಿನಗೆ ಯಾವಾಗಾದರೂ ಹಣಬೇಕಾದರೆ ಕೊಡುತ್ತೇವೆ. ನಿನ್ನನ್ನು ನಮ್ಮ ನಾಯಕನಿಗೂ ಸಹ ಪರಿಚಯ ಮಾಡಿಸುತ್ತೇವೆ.

(ತಪ್ಪದ ಕೆಲಸ ಎಂದುಕೊಂಡ ನಾಗಭೂಷಣ ಕಾಟೇರಿ ಪಿಶಾಚಿಯನ್ನು ಹೇಗೆ ಸ್ವಾಧೀನ ಮಾಡಿಕೊಳ್ಳಬೇಕು? ವಜ್ರಗಳ ಹಾವು ಪಕ್ಕದಲ್ಲೇ ಇರುವ ಹಾವನ್ನು ಹೇಗೆ ತೊಲಗಿಸಬೇಕು? ವಜ್ರಗಳಿರುವ ಹಾವನ್ನು ಹೇಗೆ ಹಿಡಿಯಬೇಕು? ಎನ್ನುವ ಯೋಚನೆಗಳನ್ನು ಮಾಡುವುದಕ್ಕೆ ಆರಂಭಿಸಿದನು. ಆಗ ಸಮಯ ರಾತ್ರಿ ಎರಡು ಗಂಟೆಗಳಾಗಿವೆ. ನಾಗಭೂಷಣ ಮತ್ತು ಮುನೆಪ್ಪ ಮನುಷ್ಯರೆಲ್ಲರೂ ಸ್ಮಶಾನದಿಂದ ಹೊರಗೆ ಬಂದಿದ್ದಾರೆ. ಸ್ಮಶಾನಕ್ಕೆ ಸ್ವಲ್ಪ ದೂರದಲ್ಲಿ ಆಲದ ಮರದ ಕಡೆ ಇರುವ ಬಯಲು ಪ್ರಾಂತದಲ್ಲಿ ಮುನೆಪ್ಪ ಮನುಷ್ಯರು ಮಲಗಿಕೊಂಡಿದ್ದಾರೆ. ಒಬ್ಬನು ಮಾತ್ರ ನಾಗಭೂಷಣನ ಮೇಲೆ ನಿಘಾ ಇಟ್ಟು ಎಚ್ಚರದಿಂದಿದ್ದಾನೆ. ನಾಗಭೂಷಣನಿಗೆ ನಿದ್ರೆ ಬರಲಿಲ್ಲ. ಮೊದಲು ಏನು ಮಾಡಬೇಕು? ಹೇಗೆ ಮಾಡಬೇಕು? ಎನ್ನುವ ಯೋಚನೆಗಳಲ್ಲಿ ಮುಳುಗಿದ್ದಾನೆ. ಆ ಸಮಯದಲ್ಲಿ ತೋಟಮರ್ರಿಯಿಂದ ಬರುವ ದಾರಿಯಲ್ಲಿ ಒಂದು ಆಕಾರ ಬರುತ್ತಿರುವುದು ಕಾಣಿಸಿತು. ಆ ದಿನ ಅಮಾವಾಸ್ಯೆ ಆದ್ದರಿಂದ ಸರಿಯಾಗಿ ಕಾಣಿಸುತ್ತಿಲ್ಲ. ಮೊದಲು ಆ ಆಕಾರವನ್ನು ಗಮನಿಸಿದ ನಾಗಭೂಷಣ ತನ್ನೊಂದಿಗೆ ಎಚ್ಚರದಿಂದಿರುವ ಮನುಷ್ಯನಿಗೂ ಸಹ ತೋರಿಸಿದ್ದಾನೆ. ಅವರಿಬ್ಬರೂ ನೋಡುತ್ತಿದ್ದಂತೆ ಆ ಆಕಾರ ಆಲದ ಮರದ ಕಡೆ ಹೋಗತೊಡಗಿತು. ನಾಗಭೂಷಣ ಇನ್ನೂ ಇಬ್ಬರನ್ನು ನಿದ್ರೆಯಿಂದ ಎಬ್ಬಿಸಿ ನಾಲ್ವರೂ ಸೇರಿ ಆ ಆಕಾರದ ಹಿಂದೆ ಹೋಗಿದ್ದಾರೆ. ಆ ಆಕಾರ ಸರಾಸರಿ ಆಲದ ಮರದ ಕೆಳಗೆ ಹೋಯಿತು. ಆ ಸಮಯದಲ್ಲಿ ಅಷ್ಟು ಭಯಂಕರವಾದ ಮರದಕೆಳಗೆ ಯಾರು ಹೋಗುತ್ತಾರೆ ಎಂದು ಯೋಚಿಸುತ್ತಿದ್ದಂತೆ ಮರದ ಕೆಳಗೆ ಹೋಗಿರುವ ಆಕಾರ ಬೆಂಕಿಕಡ್ಡಿಯನ್ನು ಗೀಚಿ ಬೀಡಿಯನ್ನು ಹಚ್ಚಿಕೊಂಡಿತು. ಆಗ ಬೆಂಕಿಕಡ್ಡಿ ಬೆಳಕಿನಲ್ಲಿ ಅಲ್ಲಿಯವರೆಗು ನೋಡಿದ ಆಕಾರ ವೊಂದರ ಮುಖ ಕಾಣಿಸಿತು. ಆಗ ಅಲ್ಲಿಗೆ ಬಂದಿರುವುದು ಒಬ್ಬ ಮುದುಕನೆಂದು ಅವರಿಗೆ ತಿಳಿಯಿತು.

ಆ ಮುದುಕನು ತಿಂಗಳಿಗೊಮ್ಮೆ ಅಮಾವಾಸ್ಯೆ ದಿನದಂದು, ರಾತ್ರಿ ಎರಡು ಗಂಟೆ ಸಮಯದಲ್ಲಿ ಆ ಮರದ ಕೆಳಗೆ ಬಂದು ಹೋಗುತ್ತಿದ್ದನು. ಆ ಮರದ ಹತ್ತಿರವಿರುವ ಕಾಟೇರಿ ಪಿಶಾಚಿಗೆ ಇಷ್ಟವಾದ ಪಾಯಸವನ್ನು, ಮಂಡಕ್ಕಿಯನ್ನು ತನ್ನಹಿಂದೆ ತಂದು ಕಾಟೇರಿಗೆ ಸಮರ್ಪಿಸಿ ಹೋಗುತ್ತಿದ್ದನು. ಆ ಮುದುಕನಿಗೆ

ಕಾಟೇರಿ ವಶವಾಗಿತ್ತು. ಅದು ಮುದುಕನ ಆದೇಶಾನುಸಾರ ಕೆಲಸ ಮಾಡುತ್ತಿತ್ತು, ಅದಕ್ಕೆ ಬೇಕಾಗಿರುವ ಆಹಾರವನ್ನು ತಿಂಗಳಿಗೊಮ್ಮೆ ಅಮಾವಾಸ್ಯೆ ದಿನದಂದು ಆತನು ತಂದಿಟ್ಟು ಹೋಗುತ್ತಿದ್ದನು. ಆ ವಿಧವಾಗಿ ಪಾಯಸವನ್ನು, ಮಂಡಕ್ಕಿಯನ್ನು ತಂದಿರುವ ಮುದುಕನು ಮರದಕೆಳಗೆ ಹೋದ ನಂತರ ಏನು ನಡೆಯುತ್ತದೋ ಎಂದು ನಾಗಭೂಷಣ ಮುನೆಪ್ಪ ಮನುಷ್ಯರು ನೋಡುತ್ತಿದ್ದರು. ಮೊದಲು ದೀಪವನ್ನು ಹಚ್ಚಿ ಇಟ್ಟಿರುವ ಮುದುಕನು ತನ್ನ ಚೀಲದಲ್ಲಿಂದ ಮಂಡಕ್ಕಿ, ಪಾಯಸವನ್ನು ಹೊರಗೆ ತೆಗೆದಿಟ್ಟು ಆ ಪಾತ್ರೆಗಳ ಸುತ್ತಲೂ ಗೆರೆ ಗೀಚಿ ಇದ್ಲಿ ಪುಡಿಯನ್ನು ಆ ಗೆರೆಸುತ್ತಾ ಹಾಕಿದ್ದಾನೆ. ತನ್ನ ಶರೀರದ ಮೇಲೆ ನೂಲಿನ ಎಳೆ ಸಹ ಇಲ್ಲದಂತೆ ತನ್ನ ಬಟ್ಟೆಗಳೆಲ್ಲವನ್ನೂ ತೆಗೆದು ನಗ್ನವಾಗಿ ಕುಳಿತುಕೊಂಡಿದ್ದಾನೆ. ಯಾವೋ ಮಂತ್ರಗಳು ಓದಲು ಆರಂಭಿಸಿದನು. ಹತ್ತು ನಿಮಿಷಗಳ ನಂತರ ಸುಂಟರಗಾಳಿ ಮರದ ಕೆಳಗೆ ತಿರುಗಲು ಆರಂಭಿಸಿತು. ಅದನ್ನು ನೋಡಿದ ನಾಗಭೂಷಣ ಉಳಿದವರೂ ಆಶ್ಚರ್ಯಪಟ್ಟಿದ್ದಾರೆ. ಸುಂಟರಗಾಳಿ ಸಾಧಾರಣವಾಗಿ ಹಗಲುಹೊತ್ತು ಬರುತ್ತದೆ, ಆದರೆ ರಾತ್ರಿಹೊತ್ತು ಬರುವುದು ಎಲ್ಲೂ ನಡೆಯಲಿಲ್ಲ. ಆದರೆ ಅಲ್ಲಿ ಸುಂಟರಗಾಳಿ ಬರುವುದು ಯಾವುದೋ ಮಂತ್ರಪ್ರಭಾವವೇ ಎಂದುಕೊಂಡಿದ್ದಾರೆ. ಅವರು ನೋಡುತ್ತಿದ್ದಂತೇ ಆ ಸುಂಟರಗಾಳಿ ಮುದುಕನು ಇಟ್ಟಿರುವ ಪಾತ್ರೆಗಳ ಹತ್ತಿರಕ್ಕೆ ಬಂದಿದೆ. ಪಾತ್ರೆಗಳ ಮೇಲೆ ಗಾಳಿ ತಿರುಗುತ್ತಿದೆ. ಪಾತ್ರೆಗಳು ಗಾಳಿಗೆ ನಡುಗುತ್ತಾ ಕದಲುತ್ತಿವೆ. ಆದರೆ ಸ್ವಲ್ಪ ಪಕ್ಕದಲ್ಲಿರುವ ದೀಪದ ಮೇಲೆ ಗಾಳಿಹೋಗಲಿಲ್ಲ. ಪಕ್ಕದಲ್ಲೇ ಸುಂಟರಗಾಳಿ ಇದ್ದರೂ ದೀಪ ನಂದಿಹೋಗಲಿಲ್ಲ. ಸ್ವಲ್ಪ ಹೊತ್ತಿಗೆ ಗಾಳಿ ಇಲ್ಲದಂತೆ ಹೋಯಿತು. ಆ ಮುದುಕನು ತನ್ನ ಮುಂದಿರುವ ಖಾಲಿ ಪಾತ್ರೆಗಳನ್ನು ತೆಗೆದುಕೊಂಡನು. ಸುಂಟರಗಾಳಿ ಪಾತ್ರೆಗಳ ಮೇಲೆ ತಿರುಗುವುದೂ, ಆ ಪಾತ್ರೆಗಳು ಖಾಲಿ ಆಗುವುದೂ ನಾಗಭೂಷಣನಿಗೆ ಆಶ್ಚರ್ಯವೆನಿಸಿತು. ಅದೆಲ್ಲವನ್ನೂ ನೋಡಿದ ನಂತರ ಆ ಮುದುಕನು ಸಾಮಾನ್ಯನಲ್ಲವೆಂದು ಅವರಂದುಕೊಂಡರು. ಮುದುಕನು ಹಿಂತಿರುಗಿ ಹೋಗುತ್ತಿದ್ದಾನೆ. ಆಗ ಆ ವಿಶಾಲವಾದ ಮರದ ಕೆಳಗೆ ಒಂದು ಕಡೆ ಕತ್ತಲಲ್ಲಿ ಜೀಪ್ ನಿಂತಿರುವುದನ್ನು ನೋಡಿದ್ದಾನೆ. ಇದು ಯಾರದು? ಇಲ್ಲೇಕೆ ಇದೆಯೆಂದುಕೊಳ್ಳುತ್ತಾ ಜೀಪು ಸಮೀಪಕ್ಕೆ

ಹೋಗಿ ನೋಡತೊಡಗಿದನು. ಅಷ್ಟರಲ್ಲಿ ನಾಗಭೂಷಣ ಆತನ ಹಿಂದಿರುವ ಮನುಷ್ಯರು ನಿಧಾನವಾಗಿ ಆ ಮುದುಕನ ಹತ್ತಿರಕ್ಕೆ ಹೋಗಿದ್ದಾರೆ. ಹಾಗೆ ಬಂದಿರುವ ಅವರನ್ನು ನೋಡಿ ಆತನು ಹೀಗೆ ಕೇಳಿದ್ದಾನೆ.)

**ಮುದುಕನು :–** ನೀವು ಯಾರು? ಇಲ್ಲಿ ಏಕಿದ್ದೀರ (ಮುದುಕನು ಕೇಳಿರುವ ಪ್ರಶ್ನೆಗೆ ಏನು ಉತ್ತರ ಹೇಳಬೇಕೋ ತಿಳಿಯದೆ ತಡವರಿಸುತ್ತಾ ಹೀಗೆ ಉತ್ತರಿಸಿದ್ದಾರೆ.)

**ನಾಗಭೂಷಣ :–** ನಾವು ಯಾತ್ರಿಕರು. ನಮ್ಮ ಊರು ಬಹಳ ದೂರದಲ್ಲಿ ಇದೆ.

**ಮುದುಕನು :–** ನಿಮ್ಮ ಊರು ದೂರ ಇದ್ದರೇನು, ಹತ್ತಿರ ಇದ್ದರೇನು. ನೀವು ಇಲ್ಲಿ ಏಕಿದ್ದೀರ? ಏನು ಮಾಡುತ್ತಿದ್ದೀರ?

**ನಾಗಭೂಷಣ :–** ಏನೂ ಇಲ್ಲ. ನಮಗೆ ವೈದ್ಯಕ್ಕೆ ಬೇಕಾಗಿರುವ ಬಳ್ಳಿ ಈ ಪ್ರಾಂತದಲ್ಲಿ ಇದೆಯೆಂದು ಕೇಳಿ ಇಲ್ಲಿಗೆ ಬಂದು ಇಳಿದಿದ್ದೇವೆ.

(ಉಪಾಯದಿಂದ ಸಮಾಧಾನ ಹೇಳಿದ್ದಾನೆ ನಾಗಭೂಷಣ. ಆ ಮಾತು ಕೇಳಿದ ಮುದುಕನು ಅನುಮಾನದಿಂದ ಅವರಕಡೆ ನೋಡಿ ಹೀಗೆ ಕೇಳಿದ್ದಾನೆ.)

**ಮುದುಕನು :–** ಏನೂ ಒಂದು ಸಲ ಯಾತ್ರಿಕರೆಂದಿದ್ದೀರ. ಎರಡನೆ ಸಲ ವೈದ್ಯಕ್ಕಾಗಿ ಬಳ್ಳಿ ಬೇಕೆನ್ನುತ್ತಿದ್ದೀರ. ಅಷ್ಟಕ್ಕೂ ನೀವು ಯಾರು? ಇರುವುದಿದ್ದಂತೆ ಹೇಳಿ.

**ನಾಗಭೂಷಣ :–** ಇವರು ಯಾತ್ರಿಕರೇ, ನಾನು ಮಾಂತ್ರಿಕನು. ಬಳ್ಳಿ ನನಗೆ ಬೇಕು.

**ಮುದುಕನು :–** ನೀನು ಏನು ಹೇಳುತ್ತಿದ್ದೀಯೋ ನನಗೆ ಅರ್ಥವಾಗಲಿಲ್ಲ. ಒಂದು ಸಲ ಯಾತ್ರಿಕರೆಂದು, ಮತ್ತೊಂದು ಸಲ ಮಾಂತ್ರಿಕರೆಂದು ಹೇಳುತ್ತಿದ್ದೀಯ. ನೀನು ಮಾಂತ್ರಿಕನಾದರೆ ನಿನ್ನ ಹಿಂದೆ ಇರುವವರು ಯಾತ್ರಿಕರು ಹೇಗೆ ಆಗಿದ್ದಾರೆ. ನೀನು ಏನೋ ಮರೆ ಮಾಚಿ ಹೇಳುತ್ತಿದ್ದೀಯ. ನೀವು ಯಾತ್ರಿಕರಾದರೂ, ಮಾಂತ್ರಿಕರಾದರೂ ಯಾರಾದರೂ ಪರವಾಗಿಲ್ಲ. ಆ ವಿಷಯ ನನಗೆ ಬೇಕಾಗಿಲ್ಲ. ಆದರೆ ಈ ರಾತ್ರಿ ಸಮಯ ಈ ಪ್ರದೇಶದಲ್ಲಿ ಇರಬಾರದು. ಇದು ಬಹಳ ಪ್ರಮಾದಕರವಾದ ಸ್ಥಳ. ಮೊದಲು ಇಲ್ಲಿಂದ ಹೊರಟು ಹೋಗಿ.

(ಎಂದು ಎಚ್ಚರಿಸಿ ಹೇಳಿದನು. ಆ ಮುದುಕನೊಂದಿಗೆ ಸ್ನೇಹ ಮಾಡುವುದು ಒಳ್ಳೆಯದೆಂದು ತಿಳಿದ ನಾಗಭೂಷಣ ಆತನೊಂದಿಗೆ ಹೀಗೆ ಹೇಳಿದ್ದಾನೆ.)

**ನಾಗಭೂಷಣ :–** ಅಯ್ಯಾ! ನಿಮ್ಮೊಂದಿಗೆ ನಾನು ಸ್ವಲ್ಪ ಮಾತನಾಡಬೇಕು. ದಯವಿಟ್ಟು ನೀವು ನಮಗೆ ಸ್ವಲ್ಪ ಸಹಾಯವನ್ನು ಮಾಡಬೇಕು.

**ಮುದುಕನು :–** ಇಷ್ಟು ರಾತ್ರಿ ಸಮಯದಲ್ಲಿ ಕಾಣಿಸಿ ಏನೇನೋ ಮಾತನಾಡುತ್ತಿದ್ದೀಯ. ನಿಜ ಹೇಳು ನೀವ್ಯಾರೋ ತಿಳಿದರೆ ಸಹಾಯಮಾಡುತ್ತೇನೆ.

(ಆಗ ಮುನೆಪ್ಪ ಮನುಷ್ಯರು ಹೇಳಿದಂತೆ ನಾಗಭೂಷಣ ಸಹ ನಾವು ಸರ್ಕಸ್ ಕಂಪೆನಿಯ ಮನುಷ್ಯರೆಂದೂ, ತಾನು ಸರ್ಕಸ್‌ನಲ್ಲಿ ಮ್ಯಾಜಿಕ್ ಮಾಡುವ ವನೆಂದು ಉಳಿದವರೆಲ್ಲರೂ ಸಹ ಸರ್ಕಸ್‌ನಲ್ಲಿ ಕೆಲಸಮಾಡುವವರೇ ಎಂದು, ತಮ್ಮ ಹತ್ತಿರ ಸರ್ಕಸ್‌ನಲ್ಲಿ ಕೆಲಸ ಮಾಡುವ ಹಾವು ತಪ್ಪಿಸಿಕೊಂಡು ಬಂದಿದೆಯೆಂದು, ಅದು ಈ ಮರದ ಹತ್ತಿರ ಸೇರಿದೆಯೆಂದೂ, ಅದಕ್ಕಾಗಿಯೇ ನಾವು ಬಂದಿದ್ದೇವೆಂದು ಹೇಳಿದ್ದಾನೆ.)

**ಮುದುಕನು :–** ಅದಕ್ಕೆ ನನ್ನ ಸಹಾಯ ಏಕೆ?

**ನಾಗಭೂಷಣ :–** ನೀನು ಎಲ್ಲಾ ವಿದ್ಯೆಗಳು ತಿಳಿದವನಂತೆ ಇದ್ದೀಯಾ. ನೀನು ಸ್ವಲ್ಪ ದಯೆಮಾಡಿ ಆ ಹಾವನ್ನು ನಮಗೆ ಹಿಡಿದು ಕೊಡಬೇಕು. ಅದಕ್ಕೆ ನಿನಗೆ ಅಷ್ಟೋ ಇಷ್ಟೋ ಹಣ ಕೊಡಬಲ್ಲೆವು.

**ಮುದುಕನು :–** ಸರಿ ಹಾಗೇ ಮಾಡುತ್ತೇನೆ. ಆದರೆ ಹಾವುಗಳು ಹಿಡಿಯುವುದು ಮಾತ್ರ ನನಗೆ ತಿಳಿಯದು. ಆ ಹಾವನ್ನು ನೀವೇ ಹಿಡಿದುಕೊಳ್ಳಬೇಕು. ನಾನು ಮಾಡುವ ಸಹಾಯ ಒಂದೇ ಇದೆ. ಅದು ಏನೆಂದರೆ ಈ ಮರದ ಕೆಳಗೆ ಯಾರೂ ಬರಲಾರರು. ಬಂದರೆ ಅವರಿಗೆ ರೋಗಗಳು ಬರುತ್ತವೆ. ಹಾಗೆ ಆಗದೆ ನೀವು ಅಲ್ಲಿಗೆ ಬಂದರೂ ರೋಗಗಳು ಬಾರದಂತೆ ಮಾಡಬಲ್ಲೆನು. ಇಲ್ಲಿ ಎಷ್ಟೋ ದೆವ್ವಗಳು, ಪಿಶಾಚಿಗಳು ನಿವಾಸಿಸುತ್ತಿವೆ. ನೀವು ಇಲ್ಲಿಗೆ ಬಂದಾಗ ಅವುಗಳ ಬಾಧೆಯನ್ನು ಇಲ್ಲದಂತೆ ಮಾಡಬಲ್ಲೆನು. ಅದಕ್ಕೆ ಅಷ್ಟೋ ಇಷ್ಟೋ ನನಗೆ ಕೊಡಬೇಕಾಗಿರುತ್ತದೆ.

**ನಾಗಭೂಷಣ :–** ಸರಿ ಹಾಗೇ ಕೊಡುತ್ತೇವೆ.

**ಮುದುಕನು :–** ಆದರೆ ನೀವು ಇಲ್ಲಿಂದ ಸ್ವಲ್ಪ ದೂರ ಹೋಗಿ ಇರಿ. ನಾನು ಮನೆಗೆಹೋಗಿ ಬೆಳಗ್ಗೆ ಎಂಟು ಗಂಟೆಗೆ ಬರುತ್ತೇನೆ. ಆಗ ನನ್ನ ಸಹಾಯದಿಂದ ನೀವು ಹಾವನ್ನು ಹಿಡಿದುಕೊಳ್ಳಬಹುದು.

(ಹಾಗೇ ಆಗಲೆಂದು ಎಲ್ಲರೂ ಅಲ್ಲಿಂದ ಹೊರಟು ಹೋದರು.)

(ಎಂಟು ಗಂಟೆಗೆ ಬರುತ್ತೇನೆಂದು ಮಾಂತ್ರಿಕ ಮುದುಕನಿಗಾಗಿ ಮುನೆಪ್ಪ ಮನುಷ್ಯರು, ನಾಗೋತುಲ ನಾಗಭೂಷಣ ಕಾದು ನೋಡುತ್ತಿದ್ದಾರೆ. ಒಂಬತ್ತು ಗಂಟೆಗೆ ಮುದುಕನು ಬಂದಿದ್ದಾನೆ. ಸ್ವಲ್ಪ ತಡವಾಗಿ ಬಂದಿರುವ ಮುದುಕನು ಬರುತ್ತಲೇ ನಾಗಭೂಷಣನ ಹಣೆಯಮೇಲೆ ಇಟ್ಟುಕೊಂಡಿರುವ ಅರ್ಧ ಚಂದ್ರಾಕಾರವಿರುವ ಬೊಟ್ಟನ್ನು ನೋಡಿದನು. ಅದು ಕಪ್ಪನೆಯ ಕಾಡಿಗೆಯಿಂದ ಇಟ್ಟಿರುವುದರಿಂದ ಅದರ ಮೇಲೆ ಮುದುಕನಿಗೆ ಅನುಮಾನ ಬಂದಿತು. ಎದುರಿಗಿರುವ ಮನುಷ್ಯನನ್ನು ವಶಪಡಿಸಿಕೊಳ್ಳುವುದಕ್ಕೆ ಮತ್ತು ಎದುರಿಗಿರುವವನಲ್ಲಿರುವ ಶಕ್ತಿಯನ್ನು ಪಡೆದುಕೊಳ್ಳುವುದಕ್ಕೆ ಇಂತಹ ಕಾಡಿಗೆಯ ಬೊಟ್ಟನ್ನು ಮಾಂತ್ರಿಕರು ಇಟ್ಟುಕೊಳ್ಳುತ್ತಾರೆಂದು ತಿಳಿದ ಮುದುಕನು ಹೀಗೆ ಹೇಳಿದ್ದಾನೆ.)

**ಮುದುಕನು :–** ಏನೋ! ನನ್ನ ಮುಂದೆಯೇ ನೀನು ಕಾಡಿಗೆಯ ಬೊಟ್ಟು ಇಟ್ಟುಕೊಳ್ಳುತ್ತೀಯಾ, ಮೊದಲು ಆ ಬೊಟ್ಟನ್ನು ಅಳಿಸು (ಎಂದು ಕೋಪದಿಂದ ಹೇಳಿದನು.)

(ಆ ಮಾತು ಕೇಳಿದ ನಾಗಭೂಷಣ ಮುದುಕ ತನ್ನ ಕಾಡಿಗೆಯನ್ನು ಕಂಡುಕೊಂಡಿದಿದ್ದಾನೆಂದು ತಿಳಿದು ಸ್ವಲ್ಪ ಸಮಾಧಾನ ಪಡಿಸಬೇಕೆಂದು ಹೀಗೆ ಪ್ರತ್ಯುತ್ತರಿಸುತ್ತಿದ್ದಾನೆ.)

**ನಾಗಭೂಷಣ :–** ಈ ಬೊಟ್ಟು ನಿನಗೇನು ಆತಂಕವಾಗುವುದಿಲ್ಲ. ನನ್ನ ಪದ್ಧತಿ ಪ್ರಕಾರವೇ ನಾನು ಇಟ್ಟುಕೊಂಡಿದ್ದೇನೆ.

(ಆದರೆ ಮುದುಕನು ಆ ಬೊಟ್ಟನ್ನು ಹೊರಸಬೇಕೆಂದು ಹಟಹಿಡಿದನು. ಹೊರಸುವುದು ತನ್ನ ಮಂತ್ರಶಕ್ತಿಗೇ ಅವಮಾನವೆಂದು ತಿಳಿದ ನಾಗಭೂಷಣ ನಾನು ಹೊರಸುವುದಿಲ್ಲವೆಂದು, ಆ ವೃದ್ಧನ ಮಾತನ್ನು ನಿರಾಕರಿಸಿದನು. ಹಾಗೆ ನಿರಾಕರಿಸುವುದರಿಂದ ನಾಗಭೂಷಣನ ಮಂತ್ರಶಕ್ತಿಯನ್ನು ತನ್ನ ಮಂತ್ರಶಕ್ತಿಗಿಂತ ದೊಡ್ಡದಾಗಿ ವೃದ್ಧನು ಒಪ್ಪಿಕೊಂಡಂತಾಗುತ್ತದೆ. ಆ ವಿಷಯ ತಿಳಿದ ವೃದ್ಧನು ಇವನಿಗಿಂತ ಮಂತ್ರಶಕ್ತಿಯಲ್ಲಿ ನಾನೇ ದೊಡ್ಡವನು, ನನಗಿಂತ ಇವನು ದೊಡ್ಡವನಲ್ಲ. ನಾನು ಸುಮ್ಮನಿದ್ದರೆ ಅವನನ್ನೇ ನಾನು ದೊಡ್ಡದಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ಹೇಗಾದರೂ ಆತನ ಬೊಟ್ಟನ್ನು ಹೊರಸುವಂತೆ ಮಾಡಬೇಕೆಂದು ಆ ವೃದ್ಧನು ಹೀಗೆ ಹೇಳಿದ್ದಾನೆ.)

**ಮುದುಕನು :–** ನಾಗಭೂಷಣ! ನೀನು ಹಾಗೆ ಬೊಟ್ಟಿಡುವುದರಿಂದ ಮಂತ್ರವಿದ್ಯೆಯಲ್ಲಿ ಮಂತ್ರಯೋಗಗಳಲ್ಲಿರುವ ಅರ್ಥ ನನಗೆ ತಿಳಿಯದೆಂದುಕೊಂಡಿದ್ದೀಯ? ನೀನು ಇಟ್ಟುಕೊಂಡ ಬೊಟ್ಟು ಎದುರಿಗಿರುವವನನ್ನು ವಶ ಮಾಡಿಕೊಳ್ಳುವುದಕ್ಕೆ, ಎದುರಿಗಿರುವವನ ಮಂತ್ರಗಳು ತನ್ನ ಮೇಲೆ ಕೆಲಸ ಮಾಡದಂತಿರುವುದಕ್ಕೂ, ಮತ್ತು ಎದುರಿಗಿರುವವನ ಶಕ್ತಿಯನ್ನು ತನ್ನೊಳಗೆ ಸೆಳೆದುಕೊಂಡು ಎದುರಿಗಿರುವ ವನನ್ನು ತನಗಿಂತ ಕಡಿಮೆ ಶಕ್ತಿ ಇರುವವನನ್ನಾಗಿ ಮಾಡುವುದಕ್ಕೆಂದು ನನಗೆ ತಿಳಿಯದೆಂದುಕೊಂಡಿದ್ದೀಯ! ನಾನು ಒಬ್ಬ ಮಾಂತ್ರಿಕನಾಗಿ, ಅದರಲ್ಲಿ ಕಾಟೇರಿ ಉಪಾಸಕನಾಗಿ ನಿನ್ನನ್ನು ನನ್ನ ಮುಂದೆ ಬೊಟ್ಟು ಇಟ್ಟುಕೊಳ್ಳಲು ಬಿಟ್ಟರೇ, ನನಗೂ ನನ್ನ ಮಂತ್ರಶಕ್ತಿಗೂ ಕೀಳರಿಮೆ. ಆದ್ದರಿಂದ ನೀನು ಕೂಡಲೇ ಹೊರಸಿ ನನಗೆ ಶರಣಾಗುತ್ತೀಯಾ ಇಲ್ಲವೆ ನನ್ನೊಂದಿಗೆ ಪೋಟಿಗೆ ಬಂದು ನಿನ್ನ ಶಕ್ತಿ ಎಂತಹುದೋ ನಿರೂಪಿಸಿಕೊಳ್ಳುತ್ತೀಯಾ.

(ಅವರ ಮಾತುಗಳನ್ನು ಕೇಳುತ್ತಿರುವ ಮುನೆಪ್ಪ ಮನುಷ್ಯರಿಗೆ ನಮ್ಮ ಕೆಲಸ ಆಗದಂತೆ ಮಧ್ಯದಲ್ಲಿ ಈ ಬೊಟ್ಟಿನ ಕಿಟುಕು ಏನಪ್ಪಾ ದೇವರೇ, ಎಂದುಕೊಂಡು ನಾಗಭೂಷಣನಿಗೆ ಈ ರೀತಿ ಹೇಳಿದರು.)

**ವೆಂಕೂ :–** ಅಯ್ಯಾ! ನಾಗಭೂಣರವರೆ, ಆ ಬೊಟ್ಟನ್ನು ಕುರಿತು ಏಕಷ್ಟು ರಾದ್ಧಾಂತ? ಅದನ್ನು ಹೊರಸಿ ಆತನಿಂದ ನಮ್ಮ ಕೆಲಸವನ್ನು ಮಾಡಿಸಿಕೊಳ್ಳುವುದು ಒಳ್ಳೆಯದಲ್ಲವೆ!

**ನಾಗಭೂಷಣ:–** ನಾನು ಹಾಗೆ ಹೊರಸುವುದಿಲ್ಲ. ಇದು ನಮ್ಮ ಗುರುಗಳ ಆಜ್ಞೆ, ನಮ್ಮ ಗುರುವು ಕಲಿಸಿದ ವಿದ್ಯೆ ಎಲ್ಲದಕ್ಕಿಂತ ದೊಡ್ಡದು. ನಾನು ಇದನ್ನು ಹೊರಸಿದರೆ ನನಗೂ, ನನ್ನ ಗುರುಗಳಿಗೂ ಅವಮಾನವಾಗುತ್ತದೆ. ನೀವು ಎಷ್ಟು ಜನ ಹೇಳಿದರೂ, ಏನು ಹೇಳಿದರೂ ನಿಮ್ಮ ಮಾತನ್ನು ಕೇಳುವುದಿಲ್ಲ, ನಾನು ನನ್ನ ಬೊಟ್ಟನ್ನು ಹೊರಸುವುದಿಲ್ಲ. ನಾನು ಬೊಟ್ಟನ್ನು ಹೊರಸಿದರೇ ನನ್ನ ತಲೆಯನ್ನು ನಾನೇ ಕತ್ತರಿಸಿಕೊಂಡಂತಾಗುತ್ತದೆ.

(ನಾಗಭೂಷಣ ಪ್ರತ್ಯುತ್ತರಿಸಿದ ಮಾತುಗಳಿಗೂ, ಹಠಮಾರಿತನಕ್ಕೂ ಮುನೆಪ್ಪ ಮನುಷ್ಯರಿಗೆ ಕೋಪ ಬಂದಿತು. ಆಗ ಹೀಗೆ ಹೇಳಿದರು.)

**ನೂಕಾ :–** ನಿನ್ನ ಹಠಮಾರಿತನಕ್ಕೆ ಇದು ಸಮಯವಲ್ಲ. ನಿನ್ನ ಮೊಂಡುತನವನ್ನು ಬಿಟ್ಟು ಈ ಹಿರಿಯನ ಮಾತನ್ನು ಕೇಳು. ಇಲ್ಲದೇ ಹೋದರೆ ನಮ್ಮ ಕೆಲಸ ಕೆಟ್ಟುಹೋಗುತ್ತದೆ. ನೀನು ಮೊಂಡನಾಗಿ ಇದ್ದರೆ ಚೆನ್ನಾಗಿರುವುದಿಲ್ಲ.

**ನಾಗಭೂಷಣ :–** ನೀವು ಇಲ್ಲಿಯವರೆಗೂ ಹೆದರಿಸಿದಂತೆಲ್ಲಾ ಹೆದರಿದ್ದೇನೆ. ಆದರೆ ಈಗ ಹೆದರುವುದಿಲ್ಲ. ಅಸಲಿಗೆ ನಿಮಗೂ ನನಗೂ ಏನು ಸಂಬಂಧ. ನಿಮಗೋಸ್ಕರ ಇಲ್ಲಿಯವರೆಗು ಅಸತ್ಯವನ್ನು ಹೇಳಿ ನಾನೂ ಸಹ ಸರ್ಕಸ್‌ನವನೆಂದು ಹೇಳಿದ್ದೇನೆ. ನಿಜಕ್ಕೆ ನೀವು ಸರ್ಕಸ್‌ನವರಾ? ಆ ಹಾವು ಸರ್ಕಸ್ ಹಾವಾ? ನಿಮ್ಮ ಸ್ವಾರ್ಥಕ್ಕೋಸ್ಕರ ನನ್ನನ್ನು ಸಹ ಆಡಿಸಬೇಕೆಂದುಕೊಳ್ಳುವುದು ನಿಮ್ಮ ತಪ್ಪು. ಏನೋ ಹೋಗಲಿ ಎಂದು ಇಲ್ಲಿಯವರೆಗೂ ನಿಮ್ಮ ಮಾತು ಕೇಳಿದ್ದೇನೆ. ಇನ್ನು ನಿಮ್ಮ ಮಾತನ್ನು ಕೇಳುವುದಿಲ್ಲ. ಇಂದಿನಿಂದ ನಿಮ್ಮ ದಾರಿ ನಿಮ್ಮದು, ನನ್ನ ದಾರಿ ನನ್ನದು.

(ನಾಗಭೂಷಣ ಮಾತನಾಡಿದ ಮಾತುಗಳನ್ನು ಕೇಳಿಸಿಕೊಂಡ ಮುನೆಪ್ಪ ಮನುಷ್ಯರಿಗೆ ಆತನ ಮೇಲೆ ಪೂರ್ತಿ ಕೋಪ ಬಂದಿದೆ. ಆ ಮಾತುಗಳನ್ನು ಕೇಳಿದ ಮುದುಕನಿಗೆ ಇದೇನು ಹೊಸ ನಾಟಕ? ಇಲ್ಲಿಯವರೆಗು ಎಲ್ಲರೂ

ಸರ್ಕಸ್‌ನವರೇ ಎಂದಿದ್ದೀರ. ಈಗೇನೋ ಸರ್ಕಸ್‌ರವರು ನೀವೂ ಅಲ್ಲ, ನಾನೂ ಅಲ್ಲ ಎನ್ನುತ್ತಿದ್ದೀರ. ಈ ಸರ್ಕಸ್‌ನ್ನು ನೀವು ಏಕೆ ಬಳಸಿಕೊಂಡಿದ್ದೀರ. ನಿಜಕ್ಕೆ ಈ ಆರು ಜನ ಯಾರು? ಈ ಮಾಂತ್ರಿಕನು ಯಾರು? ಹೀಗೆ ಮುದುಕನಿಗೆ ಅನೇಕ ಪ್ರಶ್ನೆಗಳು ಬಂದಿವೆ. ನಂತರ ಇವರು ಈ ಮಾಂತ್ರಿಕನಿಂದ ಕೆಲಸ ಮಾಡಿಸಿ ಕೊಳ್ಳುವುದಕ್ಕೆ ಮಾಂತ್ರಿಕನನ್ನು ಕರೆದುಕೊಂಡು ಬಂದಿದ್ದಾರೆಂದು ಅರ್ಥವಾಯಿತು. ಆಗ ವೃದ್ಧನು ಮುನೆಪ್ಪ ಮನುಷ್ಯರೊಂದಿಗೆ ಹೀಗೆ ಹೇಳಿದ್ದಾನೆ.)

**ಮುದುಕನು :–** ನಿಮಗೆ ನಾನು ಸಹಾಯವನ್ನು ಮಾಡುತ್ತೇನೆ. ಇವನೊಂದಿಗೆ ನಿಮಗೆ ಕೆಲಸವಿಲ್ಲ.

**ವೆಂಕು :–** ಎಲೈ ನಾಗಭೂಷಣ, ನೀನು ನಮ್ಮ ರಹಸ್ಯಗಳನ್ನು ತಿಳಿದುಕೊಂಡು ಹೊರಬಂದು ಬದುಕುತ್ತೇನೆಂದುಕೊಂಡಿದ್ದೀಯಾ. ನಿನ್ನ ಸಾವು ನಮ್ಮ ಕೈಯಲ್ಲಿದೆ.

**ಮುದುಕನು :–** ಅದು ನಿಮಗೆ ಬೇಡ, ಅವನನ್ನು ನನಗೆ ಬಿಟ್ಟುಬಿಡಿ. ಅವನು ಬೊಟ್ಟು ಅಳಸಿ ನನಗೆ ಶರಣಾಗುತ್ತಾನೋ ಇಲ್ಲವೆ ನನ್ನ ಕೈಯಲ್ಲಿ ಸಾಯುತ್ತಾನೊ ನೋಡುತ್ತೇನೆ.

**ನಾಗಭೂಷಣ :–** ನೀವೆಷ್ಟೋ ನಿಮ್ಮ ಸಾಮರ್ಥ್ಯವೆಷ್ಟೋ ತಿಳಿಯದೆ ನನ್ನೊಂದಿಗೆ ವಾದಕ್ಕೆ ಇಳಿದಿದ್ದೀರ. ನನ್ನನ್ನು ನೀವೇನೂ ಮಾಡಲಾರೆರು. ನನ್ನೊಂದಿಗೆ ಪೋಟೀ ಬಿದ್ದು ನಿಮ್ಮ ಸಾವನ್ನು ನೀವೇ ತಂದುಕೊಂಡಿದ್ದೀರ. ನನ್ನೊಂದಿಗೆ ಮೋಡಿ (ಮಂತ್ರಗಳ ಪೋಟಿ) ಇಟ್ಟುಕೊಳ್ಳುವುದಕ್ಕೆ ನಿನಗೆ ಧೈರ್ಯವಿದೆಯಾ ಮುದುಕಾ? ಓಹೋ ನೀವು ಮುನೆಪ್ಪ ಮನುಷ್ಯರಲ್ಲವೆ! ನನ್ನ ಮಂತ್ರ ಪ್ರಯೋಗಗಳಿಗೆ ಸಹಿಸಿಕೊಂಡು ಪ್ರಪಂಚದಲ್ಲಿ ಬದುಕುವ ಸಾಮರ್ಥ್ಯ ನಿಮಗಿದೆಯಾ! ಏನೋ ಹೋಗಲಿ ಎಂದು ನಿಮ್ಮ ಮಾತುಗಳನ್ನು ಕೇಳಿದರೆ, ನನ್ನನ್ನು ಇಷ್ಟು ಕಡಿಮೆಯವನಾಗಿ ನೋಡುತ್ತೀರಾ.

(ಮುನೆಪ್ಪ ಮನುಷ್ಯರಿಗೆ ಕಥೆ ಅಡ್ಡ ತಿರಿಗಿರುವುದಕ್ಕೆ ಏನೂ ತೋಚಲಿಲ್ಲ. ಅಷ್ಟರಲ್ಲಿ ಮುದುಕನು ಹೀಗೆ ಮಾತನಾಡಿದನು.)

**ಮುದುಕನು :–** ನಿನಗೆ ಗರ್ವ ಬಹಳ ಇದೆ. ನಿನ್ನೊಂದಿಗೆ ಮೋಡಿಗೆ ನಾನು ಸಿದ್ಧ. ಈಗಲೇ ಪೊಲೀಸ್ ಸ್ಟೇಷನ್‍ಗೆ ಹೋಗಿ ನಮ್ಮ ಮೋಡಿಯಲ್ಲಿ ಯಾರು ಸತ್ತುಹೋದರೂ, ಅದು ಹತ್ಯೆ ಅಲ್ಲವೆಂದು ಮೋಡಿ ಪತ್ರವನ್ನು ಬರೆಸಿಕೊಳ್ಳೋಣ. ಹೋಗೋಣ ಬಾ.

(ಸರಿ ಎಂದಿದ್ದಾನೆ ನಾಗಭೂಷಣ. ಮುನೆಪ್ಪ ಮನುಷ್ಯರ ಕಡೆ ನೋಡಿದ ಮುದುಕನು ನೀವು ನಿಧಾನವಾಗಿರಿ. ಇವನನ್ನು ಕೊನೆಗಾಣಿಸಿ ನಿಮಗೆ ಹಾವನ್ನು ನಾನು ಹಿಡಿದುಕೊಡುತ್ತೇನೆಂದು ಹೇಳಿದಾಗ, ಅದಕ್ಕೆ ಮುನೆಪ್ಪ ಮನುಷ್ಯರು ಸರಿ ಎಂದು ಒಪ್ಪಿಕೊಂಡಿದ್ದಾರೆ.)

*********************************

(ರಾಜಯೋಗಾನಂದ ಸ್ವಾಮಿ ತನ್ನ ಪರ್ಯಟನೆಯಲ್ಲಿ ಭಾಗವಾಗಿ ತನ್ನ ಹತ್ತಿರ ಇರುವ ಅಡ್ರಸ್ ಪ್ರಕಾರ ಮುಕ್ತೇಶ್ವರ ಎನ್ನುವ ಊರಿಗೆ ಹೋಗಿದ್ದಾನೆ. ಅಲ್ಲಿ ತನ್ನ ಪುಸ್ತಕಗಳನ್ನು ತರಿಸಿಕೊಂಡು ಓದಿದ ರಾಮ್‍ದೇವ್ ಎನ್ನುವ ಭಕ್ತನ ಮನೆಗೆ ಹೋಗಿ, ಅಲ್ಲಿಯೂ ಸಹ ಸ್ವಾಮಿಯವರು ಕೊಡಲು ಹೇಳಿದ್ದಾರೆಂದು ಒಂದು ಗ್ರಂಥವನ್ನು ಕೊಟ್ಟು, ಇದಕ್ಕೂ ಮೊದಲು ಓದಿದ ಸ್ವಾಮಿ ರಚನೆಗಳನ್ನು ಕುರಿತು ಕೇಳಿದ್ದಾನೆ. ಅದಕ್ಕೆ ರಾಮ್‍ದೇವ್, ಸ್ವಾಮಿ ರಚನೆಗಳನ್ನು ಕುರಿತು ಬಹಳ ಅಮೋಘವಾದ ಜ್ಞಾನವೆಂದು ಹೇಳಿದ್ದಾನೆ. ನಾವು 30 ವರ್ಷಗಳಿಂದ ತಿಳಿದುಕೊಂಡ ಜ್ಞಾನಕ್ಕಿಂತ ಮೀರಿದ್ದನ್ನು, ಸ್ವಾಮಿ ಗ್ರಂಥಗಳಿಂದ ಮೂರು ತಿಂಗಳಲ್ಲೇ ತಿಳಿದುಕೊಂಡಿದ್ದೇವೆ. ಈ ಜ್ಞಾನದ ಹತ್ತಿರ, ನಾವು ಇಲ್ಲಿಯವರೆಗು ಇಷ್ಟು ಸಂವತ್ಸರಗಳಿಂದ ತಿಳಿದುಕೊಂಡ ಜ್ಞಾನ, ಪ್ರಯೋಜನವಿಲ್ಲದ್ದೆಂದು ತಿಳಿಯಿತು. ಸ್ವಾಮಿಯವರ ಜ್ಞಾನದಿಂದ ಯಾರು ಯಾವ ಪ್ರಶ್ನೆ ಕೇಳಿದರೂ ಅದಕ್ಕೆ ಉತ್ತರವನ್ನು ಹೇಳಬಹುದು. ಅಷ್ಟೇ ಅಲ್ಲದೆ ಸ್ವಾಮಿಯವರ ಜ್ಞಾನ ಯಾವ ಮತದವರಿಗಾದರೂ ಸರಿಯಾದ ಉತ್ತರವನ್ನು ಹೇಳಬಲ್ಲದು. ಹೀಗೆ ಹೇಳಿಕೊಳ್ಳುತ್ತಾ ಹೋದರೆ ಹೇಳುವುದಕ್ಕೆ ಮಾತುಗಳು ಸಾಲುವುದಿಲ್ಲ ಆದ್ದರಿಂದ ಒಂದೇ ಮಾತಿನಲ್ಲೇ ಹೇಳಬೇಕೆಂದರೆ, ಆತನ ಜ್ಞಾನ ಇಡೀ ಭೂಮಂಡಲದಲ್ಲೇ ದೊಡ್ಡ ಜ್ಞಾನವೆನ್ನಬಹುದು.

ಈ ದಿನ ಹಿಂದೂ ಸಂಘದವರು ಹಿಂದೂ ಮತ ಕ್ಷೀಣಿಸಿ ಇತರ ಮತಗಳು ಅಭಿವೃದ್ದಿ ಆಗುತ್ತಿವೆಯೆನ್ನುವದರಮೇಲೆ ದೊಡ್ಡ ಬಹಿರಂಗ ಸಭೆ ಮಾಡುತ್ತಿದ್ದಾರೆ. ಅದರಲ್ಲಿ ಭಾಗವಹಿಸುವುದಕ್ಕೂ ಉಪನ್ಯಸಿಸುವುದಕ್ಕೂ ನನಗೆ ಆಹ್ವಾನ ಬಂದಿದೆ. ನಾವು ಅಲ್ಲಿಗೆ ಹೋಗಿ ಬರೋಣ ಎಂದು ಸ್ವಾಮಿಯವರನ್ನು ಸಹ ಆ ಸಭೆಗೆ ಕರೆದುಕೊಂಡು ಹೋಗುವುದು ನಡೆದಿದೆ. ಅಲ್ಲಿ ಸಭೆಯಲ್ಲಿ ರಾಮ್‌ದೇವ್‌ನನ್ನು ಮಾತನಾಡೆಂದಿದ್ದಾರೆ. ರಾಮ್‌ದೇವ್ ವೇದಿಕೆ ಮೇಲೆ ಹೋಗಿ ನಾನು ಮಾತನಾಡುವುದು ನಿಮಗೆ ತಿಳಿದಿದೆ ಆದ್ದರಿಂದ ನನ್ನ ಮಾತುಗಳಿಗಿಂತ ದೊಡ್ಡದಾಗಿ ರಾಜಯೋಗಾನಂದಸ್ವಾಮಿ ಬಳಿಯಿಂದ ಬಂದಿರುವ ವ್ಯಕ್ತಿ ಹೇಳಬಲ್ಲನು. ಆತನ ಮಾತುಗಳನ್ನು ಕೇಳೋಣ ಎಂದು ಅಲ್ಲಿ ಮಾತನಾಡುವ ಅವಕಾಶವನ್ನು ರಾಜಯೋಗಾನಂದ ಸ್ವಾಮಿಯವರಿಗೆ ಕೊಟ್ಟಿದ್ದಾರೆ. ಆದರೆ ಅಲ್ಲಿಗೆ ಬಂದಿರುವುದು ಸ್ವಾಮಿ ಎಂದು ಯಾರಿಗೂ ತಿಳಿದಿಲ್ಲ. ಬಂದಿರುವ ಅವಕಾಶ ಸ್ವಾಮಿ ತೆಗೆದುಕೊಂಡು ವೇದಿಕೆ ಮೇಲೆ ಹೋಗಿ ಹೇಳಲು ಆರಂಭಿಸಿದನು.)

"ಇಲ್ಲಿ ಸಮಾವೇಶವಾದ ಎಲ್ಲರಿಗೂ ವಂದನೆಗಳು. ಈಗ ಇಲ್ಲಿ ನಡೆಯುತ್ತಿರುವ ಸಮಾವೇಶದಲ್ಲಿ ಕೆಲವರು ಮುಖ್ಯಸ್ತರು ಮಾತನಾಡಿದ್ದಾರೆ. ಒಟ್ಟಿನಲ್ಲಿ ಎಲ್ಲಾ ಕ್ರೈಸ್ತರು ತಮ್ಮ ಮತವನ್ನು ಅಭಿವೃದ್ಧಿ ಮಾಡಿಕೊಳ್ಳುವುದಕ್ಕೆ ಹಿಂದೂಗಳನ್ನು ಕ್ರೈಸ್ತರನ್ನಾಗಿ ಬದಲಾಯಿಸುತ್ತಿದ್ದಾರೆಂದು ಹೇಳಿದ್ದಾರೆ. ಹಾಗೆ ಹಿಂದೂಗಳು ಕ್ರೈಸ್ತರಾಗಿ ಬದಲಾಗದಂತಿರಬೇಕೆಂದರೆ, ಕ್ರೈಸ್ತರನ್ನು ಮತ ಪ್ರಚಾರ ಮಾಡದಂತೆ ನೋಡಬೇಕೆಂದುಕೊಂಡಿದ್ದಾರೆ. ಅವರು ಹಿಂದೂಗಳನ್ನು ಪ್ರಲೋಭವಿಡದಂತೆ ನೋಡಬೇಕೆಂದಿದ್ದಾರೆ. ಹಾಗೆ ನೋಡುವುದಕ್ಕೆ ಕ್ರೈಸ್ತರ ಮೇಲೆ ಅನೇಕ ಕಡೆ ಹಿಂದೂ ಪರಿರಕ್ಷಣ ಸಂಘದವರು ದಾಳಿಗಳು ಮಾಡಿ, ಅವರ ಪ್ರಚಾರವನ್ನು ನಿಲ್ಲಿಸಿದ ಸಂಘಟನೆಗಳು ಇವೆ. ಕ್ರೈಸ್ತರು ಅವರ ಮತವನ್ನು ಅಭಿವೃದ್ಧಿ ಮಾಡಿಕೊಳ್ಳುವುದಕ್ಕೆ ಬಹಳ ಅವಸ್ಥೆಗಳು ಬೀಳುತ್ತಿರುವುದು ವಾಸ್ತವವೇ. ಕಳೆದ ಐವತ್ತು ವರ್ಷಗಳಲ್ಲಿ ನೂರಕ್ಕೆ ಮೂವತ್ತು ಜನ ಹಿಂದೂಗಳು ಕ್ರೈಸ್ತರಾಗಿ ಬದಲಾಗಿದ್ದಾರೆ. ಅದೇ ಅಳತೆಯಿಂದಲೇ ಇಂದಿಗೂ ಬದಲಾಗುತ್ತಲೇ ಇದ್ದಾರೆ. ಹೀಗೇ ಇನ್ನೂ ಐವತ್ತು ಸಂವತ್ಸರಗಳು ಕಳೆದರೆ ಭಾರತದೇಶದಲ್ಲಿ ನೂರಕ್ಕೆ ಅರವತ್ತು

ಮಂದಿ ಕ್ರೈಸ್ತರೇ ಇರುತ್ತಾರೆ. ಹಿಂದೂಮತವನ್ನು ಕಾಪಾಡಬೇಕೆನ್ನುವ ಹಿಂದೂ ಸಂಘಗಳು ಅನೇಕವು ಗತದಲ್ಲಿ ಸಹ ಕೆಲಸ ಮಾಡಿವೆ. ಈಗಲೂ ಸಹ ಕೆಲಸ ಮಾಡುತ್ತಿವೆ. ಕ್ರೈಸ್ತರ ಪ್ರಚಾರಗಳಿಗೆ ಅಡ್ಡಿಪಡಿಸುತ್ತಲೇ ಇದ್ದಾರೆ. ಆದರೂ ಹಿಂದೂಗಳು ಕ್ರೈಸ್ತರಾಗಿ ಬದಲಾಗುತ್ತಲೇ ಇದ್ದಾರೆ.

"ಕೆಲವು ಹಿಂದೂ ಸಂಘಗಳು, ಕ್ರೈಸ್ತರು ಹಿಂದೂಗಳನ್ನು ಪ್ರಲೋಭ ಪಡಿಸುತ್ತಿದ್ದಾರೆಂದು ಹೇಳುತ್ತಿವೆ. ಪ್ರಲೋಭಗಳಿಗೆ ಆಸೆಪಟ್ಟು ಮತ ಬದಲಾಯಿಸಿ ಕೊಂಡವರು ನೂರಕ್ಕೆ ಐದು ಮಂದಿ ಸಹ ಇಲ್ಲ. ಕೂಳಿಗೂ ಬಟ್ಟೆಗೂ ಇಲ್ಲದ ಹಿಂದೂಗಳು ಯಾರಾದರೂ ಅವರ ಪ್ರಲೋಭಗಳಿಗೆ ಮತ ಬದಲಾಯಿ ಸಿರಬಹುದೆಂದುಕೊಳ್ಳುತ್ತೇವೆ. ನೂರಕ್ಕೆ 25 ಮಂದಿ ಬದುಕುವ ಸಾಮರ್ಥ್ಯವಿರುವ ಕುಟುಂಬಗಳು ಆ ಮತದೊಳಗೆ ಏಕೆ ಹೋಗಿವೆ ಎಂದು ಪ್ರಶ್ನಿಸಿಕೊಳ್ಳಬೇಕಾದ ಅವಶ್ಯವಿದೆ. ಒಂದು ಊರಿನಲ್ಲಿ ನೂರು ದೇವಾಲಯಗಳಿದ್ದರೇ ಹತ್ತು ಚರ್ಚಿಗಳು ಇರುತ್ತವೆ. ನಮ್ಮ ಹಿಂದೂ ಮತದಲ್ಲಿ ಆಧ್ಯಾತ್ಮಿಕ ವಿದ್ಯೆಗೆ ಸಂಬಂಧಿಸಿರುವವು ನೂರು ಗ್ರಂಥಗಳಿದ್ದರೇ ಅವರದು ಒಂದೇ ಒಂದು ಗ್ರಂಥವಿದೆ. ಹಿಂದೂಮತದಲ್ಲಿ ಕೋಟ್ಯಾದಿ ದೇವತೆಗಳಿದ್ದರೆ ಅವರ ಮತದಲ್ಲಿ ಕೇವಲ ಒಬ್ಬನೇ ದೇವರಿದ್ದಾನೆ. ಗುಡಿಗಳಲ್ಲೂ, ಗ್ರಂಥಗಳಲ್ಲೂ, ದೇವತೆಗಳಲ್ಲೂ ಎಲ್ಲದರಲ್ಲೂ ಸಂಖ್ಯಾಬಲ ಹೆಚ್ಚಾಗಿರುವ ಈ ಮತವನ್ನು ಬಿಟ್ಟು ಸಂಖ್ಯಾ ಬಲವಿಲ್ಲದ, ಆ ಮತದೊಳಗೆ ಯಾವುದಕ್ಕಾಗಿ ಹೋಗಿದ್ದಾರೆ? ಎಂದು ಪ್ರಶ್ನಿಸಿಕೊಳ್ಳಬೇಕಾದ ಅವಶ್ಯವಿದೆ. ಇಲ್ಲಿಯವರೆಗೂ ಹೇಳಿದವರೆಲ್ಲಾ ಹಿಂದೂಗಳು ಕ್ರೈಸ್ತರಾಗಿ ಬದಲಾಗುತ್ತಿದ್ದಾರೆ. ಹಾಗೆ ಮತ ಮಾರ್ಪಾಟುಗಳು ನಡೆಯದಂತೆ ನೋಡಬೇಕೆಂದು ಹೇಳಿದ್ದಾರೆ. ಆದರೆ ಬದಲಾದವರು ಯಾವ ಕಾರಣದಿಂದ ಬದಲಾಗಿದ್ದಾರೆ. ಹಾಗೇ ಬದಲಾಗುವವರೂ ಸಹ ಇದ್ದಾರೆ. ಅವರು ಯಾವ ಕಾರಣದಿಂದ ಬದಲಾಗುತ್ತಾರೆ ಎಂದು ಆ ಕಾರಣಗಳನ್ನು ಹುಡುಕಿ ತೋರಿಸಲಿಲ್ಲ. ಒಂದು ಹಿಂದೂ ಕುಟುಂಬ ಕ್ರೈಸ್ತಮತವನ್ನು ತೆಗೆದುಕೊಂಡಿದೆಯೆಂದು, ಆ ಏರಿಯಾದಲ್ಲಿರುವ ಫಾದರ್‌ನ್ನೋ, ಫಾಸ್ಟರ್‌ನ್ನೋ ಹೊಡೆದರೂ ಹೆದರಿಸಿದರೂ ಏನೂ ಪ್ರಯೋಜನವಿಲ್ಲ. ಅಂತಹ

ದಾಳಿಗಳಿಂದ, ಬೆದರಿಕೆಗಳಿಂದ ಮತ ಮಾರ್ಪಾಟುಗಳು ನಿಲ್ಲಲಿಲ್ಲ. ಇನ್ನೂ ಹೆಚ್ಚಾಗಿಯೇ ನಡೆಯುತ್ತಿವೆ. ಹಿಂದೂ ಸಂಘಗಳು ಎಷ್ಟು ವಿಧಗಳಲ್ಲಿ ಮತ ಮಾರ್ಪಾಟುಗಳನ್ನು ನಿವಾರಿಸಬೇಕೆಂದುಕೊಂಡರೂ, ಏಕೆ ನಿವಾರಿಸದಂತೆ ಹೋಗುತ್ತಿದ್ದೇವೆಂದರೆ, ಅದಕ್ಕೆ ಒಂದೇ ಒಂದು ಕಾರಣ ಇದೆ. ಹಿಂದೂಮತದಲ್ಲಿನ ಹಿಂದೂಗಳಿಗೆ ದೈವಜ್ಞಾನ ಯಾವುದೋ ತಿಳಿದಿಲ್ಲ. ಇಂದಿಗೂ ಹಿಂದೂಗಳ ಪವಿತ್ರ ಗ್ರಂಥಯಾವುದೋ ಶೇ.ಐವತ್ತರಷ್ಟು ಜನರಿಗೆ ತಿಳಿದಿಲ್ಲ. ಇಂದಿಗೂ ಭಗವದ್ಗೀತೆ ಫೋಟೋವನ್ನು ಮನೆಯಲ್ಲಿ ಇಟ್ಟುಕೊಳ್ಳಬಾರದು, ಅದು ಇದ್ದರೇ ಎಲ್ಲಾ ಜಗಳಗಳೇ ಬರುತ್ತವೆ. ಅದನ್ನು ತೆಗೆದುಕೊಂಡು ಹೋಗಿ ದೇವಾಲಯದಲ್ಲಿ ಇಡು. ಇಲ್ಲದೇ ಹೋದರೆ ನದಿಯಲ್ಲಿ ಹಾಕೆಂದು ಹೇಳುವವರಿದ್ದಾರೆ. ಇಂದಿಗೂ ಭಗವದ್ಗೀತೆ ಪುಸ್ತಕವನ್ನು ಓದಬಾರದು, ಓದಿದರೇ ಎಲ್ಲಾ ಕಷ್ಟಗಳೇ ಬರುತ್ತವೆಂದು ಹೇಳುವವರಿದ್ದಾರೆ. ಈ ವಿಧವಾಗಿ ಆಧ್ಯಾತ್ಮಿಕ ವಿದ್ಯೆಗೂ ದೈವಜ್ಞಾನಕ್ಕೂ ಹಿಂದೂಗಳು ಪೂರ್ತಿ ದೂರವಾಗಿ, ಜ್ಞಾನವೆಂದರೇ ಏನೋ ತಿಳಿಯದ ಸ್ಥಿತಿಯಲ್ಲಿ ಇರುವಾಗ "ನಮ್ಮ ಗ್ರಂಥದಲ್ಲಿ ಜ್ಞಾನವಿದೆ. ನಮ್ಮ ದೇವರು ನಿಮ್ಮನ್ನು ಕರೆಯುತ್ತಿದ್ದಾನೆ" ಎಂದು ಹೇಳುವ ಮಾತುಗಳನ್ನೇ ಹಿಂದೂ ಕೇಳಬೇಕಾಗಿ ಬಂದಿದೆ. ಹಾಗೆ ಕೇಳಿದ ನಂತರ ಆ ಮತದೊಳಗೆ ಹೋಗುವುದು ನಡೆದಿದೆ. ದೈವಜ್ಞಾನವಿಲ್ಲದ ಹಿಂದೂಗಳು ಒಬ್ಬೊಬ್ಬರು ಕ್ರೈಸ್ತರಾಗಿ ಬದಲಾಗುವುದಕ್ಕೆ ಆರಂಭಿಸಿದ್ದಾರೆ. ಹಿಂದೂಮತದಲ್ಲಿ ದೇವಾಲಯಗಳಿವೆ, ಆದರೆ ಅದರಲ್ಲಿನ ದೈವತ್ವ ತಿಳಿದಿಲ್ಲ. ಹಿಂದೂ ಮತದಲ್ಲಿ ದೈವ ಗ್ರಂಥಗಳಿವೆ ಆದರೆ ಅದರಲ್ಲಿನ ಜ್ಞಾನ ತಿಳಿದಿಲ್ಲ. ಹಿಂದೂಮತದಲ್ಲಿ ದೇವರುಗಳಿದ್ದಾರೆ ಆದರೆ ಯಾರು ದೊಡ್ಡ ದೇವರೋ ತಿಳಿದಿಲ್ಲ. ಹೀಗೆ ಏನೂ ತಿಳಿಯದ ಸ್ಥಿತಿಯಲ್ಲೇ ಹಿಂದೂ ತನ್ನ ಇಷ್ಟದಿಂದಲೇ ಕ್ರೈಸ್ತನಾಗಿ ಬದಲಾಗುತ್ತಿದ್ದಾನೆ. ಆದರೆ ಯಾರ ಬಲವಂತದಿಂದಲೂ ಕ್ರೈಸ್ತನಾಗಿ ಬದಲಾಗಲಿಲ್ಲವೆಂದು ತಿಳಿಯುತ್ತಿದೆ. ಕ್ರೈಸ್ತರ ಬೋಧನೆಗಳಿಂದ, ಅವರ ಪ್ರಚಾರದಿಂದ ಹಿಂದೂಗಳು ಕ್ರೈಸ್ತರಾಗಿ ಬದಲಾಗಿದ್ದಾರೆನ್ನುವುದಕ್ಕಿಂತ, ಹಿಂದೂಗಳಲ್ಲಿನ ಕೆಲವರು, ಹಿಂದೂಗಳನ್ನು ಜ್ಞಾನ ಮಾರ್ಗದ ಕಡೆ ಹೋಗದಂತೆ ಮಾಡುವುದರಿಂದ, ಹಿಂದೂತ್ವದಲ್ಲಿ ಇಲ್ಲದ ಜ್ಞಾನ ಕ್ರೈಸ್ತದಲ್ಲಿ ಸಿಗುತ್ತದೆಂದು ಹಿಂದೂಗಳು ಕ್ರೈಸ್ತರಾಗಿ ಬದಲಾಗುತ್ತಿದ್ದಾರೆಂದು

ಹೇಳಬಹುದು. ನಾನು ಹೇಳಿರುವುದನ್ನು ತಿಳುವಳಿಕೆಯುಳ್ಳವರು ಅರ್ಥ ಮಾಡಿಕೊಳ್ಳುತ್ತೀರೆಂದು ಆಶಿಸುತ್ತಾ ಮುಗಿಸುತ್ತಿದ್ದೇನೆ" ಎಂದನು.

ಆ ಸಭೆಯಲ್ಲಿನವರೆಲ್ಲರೂ ಸ್ವಾಮಿಯವರು ಹೇಳಿದ ಮಾತುಗಳನ್ನು ಸಮರ್ಥಿಸಿದ್ದಾರೆ. ರಾಮ್‌ದೇವ್ ಸ್ವಾಮಿಯನ್ನು ಚೆನ್ನಾಗಿ ಹೇಳಿದ್ದಾರೆಂದು ಹೊಗಳಿದ್ದಾನೆ. ನಂತರ ಸ್ವಾಮಿ ಆಶ್ರಮಕ್ಕೆ ಬರಬೇಕೆಂದು ಹೊರಟಿದ್ದಾನೆ. ಈ ವಿಧವಾಗಿ ರಾಜಯೋಗಾನಂದ ಸ್ವಾಮಿ ತನ್ನ ಪರ್ಯಟನೆಯನ್ನು ಮುಗಿಸಿಕೊಂಡು ಪುನಃ ಆಶ್ರಮಕ್ಕೆ ಬಂದಿದ್ದಾನೆ. ಆಶ್ರಮದಲ್ಲಿರುವ ರಾಘವ, ಗಿರಿಜನರು, ಮಲ್ಲುದೊರೆ, ರಾಧೇಶ್ವರಿ ಎಲ್ಲರೂ ಸ್ವಾಮಿ ಬಂದಿರುವುದಕ್ಕೆ ಸಂತೋಷಪಟ್ಟರು. ಸ್ವಾಮಿಯವರು ಮರುದಿನ ತನ್ನ ಪರ್ಯಟನೆಯಲ್ಲಿನ ಮುಖ್ಯವಿಷಯಗಳೆಲ್ಲವನ್ನೂ ಅಲ್ಲಿರುವವರಿಗೆ ಬೋಧಿಸಿದನು. ರಾಘವ ತನ್ನ ಮನಸ್ಸಿನಲ್ಲಿನ ವಿಷಯವನ್ನು ಹೇಳಬೇಕೆಂದು ಸಮಯಕ್ಕಾಗಿ ನೋಡಿ ಸ್ವಾಮಿ ವಿಶ್ರಾಂತಿಯಿಂದಿರುವಾಗ ಹಟ್ಟಿಯವರನ್ನೆಲ್ಲಾ ಪರಿಚಯ ಮಾಡಿಸಿ ಮಲ್ಲುದೊರೆ ಬಂದಿರುವ ವಿಷಯವನ್ನು ಸಹ ಹೇಳಿದನು. ಅದಕ್ಕೆ ಸ್ವಾಮಿ ಹೀಗೆ ಹೇಳಿದ್ದಾನೆ.)

**ರಾಜಯೋಗಾನಂದ :–** ಜೀವನದಲ್ಲಿ ನಡೆಯುವ ಪ್ರತಿ ಸಂಘಟನೆ, ಮೊದಲೇ ಕರ್ಮಪತ್ರ ಪಟ್ಟಿಯಲ್ಲಿ ಬರೆದಿಡಲಾಗಿರುತ್ತದೆ. ಆ ಕರ್ಮ ಪ್ರಕಾರವೇ ಎಲ್ಲಾ ನಡೆಯುತ್ತವೆ. ಹಾಗೇ ನಿನ್ನ ಜೀವನದಲ್ಲಿ ಮದುವೆ ನಡೆಯುವ ಸಮಯ ಕರ್ಮ ಪ್ರಕಾರ ಬಂದಿರುತ್ತದೆ. ಆದರೆ ಒಂದು ವಿಷಯ ನಿನ್ನ ಜಾತಕ ನಿನಗೆ ತಿಳಿಯದಲ್ಲವೆ! ನಿನಗೆ ತಿಳಿಯದಿದ್ದರೂ, ನಿನ್ನ ಜಾತಕ ಸ್ವಲ್ಪ ಪ್ರತ್ಯೇಕತೆ ಹೊಂದಿದೆ. ನಿನ್ನ ಜನ್ಮ ಲಗ್ನಕ್ಕೆ ಏಳನೇ ಸ್ಥಾನದಲ್ಲಿ ರಾಹು ಇರುವುದರಿಂದ ನಿನ್ನ ಜೀವನದಲ್ಲಿ ಎರಡು ವಿವಾಹಗಳು ನಡೆಯುತ್ತವೆಂದು ತಿಳಿಯುತ್ತಿದೆ. ನಿನಗೆ ಎರಡನೆ ವಿವಾಹ ಕೂಡಾ ಭವಿಷ್ಯತ್ ಕಾಲದಲ್ಲಿ ನಡೆಯಬಹುದು. ಈ ವಿಷಯ ನಿನಗಾಗಲೀ, ನಿನಗೆ ಮಗಳನ್ನು ಕೊಡುವ ಮಲ್ಲುದೊರೆಗಾಗಲಿ ತಿಳಿದಿಲ್ಲ. ನೀವು ಇಬ್ಬರೂ ಈ ರಾತ್ರಿಗೆ ಆ ವಿಷಯವನ್ನು ಚರ್ಚಿಸಿಕೊಂಡು, ನಾಳೆ ಬೆಳಗ್ಗೆ ನನಗೆ ಮಲ್ಲುದೊರೆ ಉದ್ದೇಶವನ್ನು ತಿಳಿಸು. ಆತನಿಗಷ್ಟೇ ಅಲ್ಲ ನಿನ್ನ ಜಾತಕದಲ್ಲಿ ಇರುವ ವಿಷಯ ನಿನಗೇ ತಿಳಿಯುವುದು ಒಳ್ಳೆಯದು.

(ರಾಜಯೋಗಾನಂದ ಸ್ವಾಮಿ ಹೇಳಿರುವುದು ನೂರಕ್ಕೆ ನೂರು ಪಾಲು ಸತ್ಯವಾಗಿರುತ್ತದೆಂದು ವಿಶ್ವಾಸಿಸಿದ ರಾಘವ ಮಲ್ಲುದೊರೆಯೊಂದಿಗೆ ಆ ರಾತ್ರಿ ಚರ್ಚಿಸಿದನು. ರಾಘವ ಆ ವಿಷಯವನ್ನು ಕುರಿತು ಸ್ವಲ್ಪ ತಬ್ಬಿಬ್ಬಾಗಿ ಯೋಚಿಸಿದರೂ ಮಲ್ಲುದೊರೆ ಸ್ವಲ್ಪವಾದರೂ ಅದನ್ನು ಕುರಿತು ಆಲೋಚಿಸಲಿಲ್ಲ. ಬೆಳಗ್ಗೆ ಒಂಬತ್ತು ಗಂಟೆಗಳಿಗೆ ರಾಜಯೋಗಾನಂದಸ್ವಾಮಿ ಸಮಾವೇಶದೊಳಗೆ ಬಂದಾಗ ರಾಘವನನ್ನು ಹೀಗೆ ಕೇಳಿದ್ದಾನೆ.)

**ರಾಜಯೋಗಾನಂದ :–** ರಾಘವಾ ನಿನಗೆ ಎರಡು ಮದುವೆಗಳು ನಡೆಯುತ್ತವೆಂದು ನಿನ್ನ ಜಾತಕ ಹೇಳುತ್ತಿದೆಯಲ್ಲ! ಈ ದಿನ ಮಲ್ಲುದೊರೆ ಮಗಳನ್ನು ಕೊಡುವು ದಕ್ಕಾಗಲೀ, ನೀನು ಮಾಡಿಕೊಳ್ಳುವುದಕ್ಕಾಗಲೀ ಅಡಚಣೆಗಳು ಏನೂ ಇಲ್ಲವಲ್ಲ!

**ರಾಘವ :–** ಕರ್ಮದಲ್ಲಿ ನಡೆಯಬೇಕಾಗಿರುವುದು ಇರುವಾಗ ನಾವು ತಪ್ಪಿಸಿ ಕೊಳ್ಳುವುದಕ್ಕೆ ಅವಕಾಶವಿಲ್ಲ! ಈಗ ಮಲ್ಲುದೊರೆ ಮಗಳನ್ನು ಮಾಡಿಕೊಳ್ಳದೇ ಹೋದರೂ, ನಂತರ ಯಾರನ್ನು ಮಾಡಿಕೊಂಡರೂ, ಎರಡು ಮದುವೆಗಳು ತಪ್ಪುವುದಿಲ್ಲವಲ್ಲ ಸ್ವಾಮಿ!

**ರಾಜಯೋಗಾನಂದ :–** ಎರಡು ಮದುವೆಗಳು ಎಂದರೆ ಹೆಂಡತಿ ಸತ್ತುಹೋದ ನಂತರ ಎರಡನೆ ಮದುವೆ ಮಾಡಿಕೊಳ್ಳುವವರೂ ಸಹ ಇದ್ದಾರೆ. ಅವರಿಗೂ ಸಹ ಎರಡು ಮದುವೆಗಳು ಆದಂತೇ. ನಿನಗೆ ಹಾಗೆ ಅಲ್ಲ, ನಿನ್ನ ಜಾತಕದಲ್ಲಿ ಇಬ್ಬರು ಹೆಂಡತಿಯರೊಂದಿಗೆ ಸಂಸಾರ ಮಾಡಬೇಕಾಗಿದೆ. ಒಬ್ಬ ಹೆಂಡತಿ ಇದ್ದಂತೇ, ಎರಡನೆ ಹೆಂಡತಿಯನ್ನು ಸಹ ಮಾಡಿಕೊಳ್ಳಬೇಕು. ಇದು ನಿನಗೆ ಹೇಳುವುದಕ್ಕಿಂತ ಮಲ್ಲುದೊರೆಗೆ ಹೇಳುವುದು ಒಳ್ಳೆಯದು.

**ಮಲ್ಲುದೊರೆ :–** ಎಲ್ಲಾ ತಿಳಿದವರು ನೀವು ಹೇಳಿದ ನಂತರ ನಡೆಯದಿರುವುದು ಯಾವುದೂ ಇರುವುದಿಲ್ಲ. ನನ್ನ ವಿಷಯಕ್ಕೆ ಬಂದರೆ ಇಬ್ಬರು ಹೆಂಡತಿಯರೊಂದಿಗೆ ರಾಘವ ಸಂಸಾರ ಮಾಡುವುದು ಸಂತೋಷವೇ. ಈಗ ನನ್ನ ಮಗಳನ್ನು ಕೊಡುವುದಕ್ಕೆ ನನಗೆ ಯಾವ ಅನುಮಾನ ಇಲ್ಲ. ನಮ್ಮ ಹಟ್ಟಿಯಲ್ಲಿ ಇಬ್ಬರು ಹೆಂಡತಿಯರೊಂದಿಗೆ

ಸಂಸಾರ ಮಾಡುವುದು ಶುಭ ಸೂಚಕವಾಗಿ ಭಾವಿಸುತ್ತೇವೆ. ಆದ್ದರಿಂದ ರಾಘವ ಎರಡನೆ ಮದುವೆ ಮಾಡಿಕೊಂಡರೂ ನಾನು ಹತ್ತಿರ ಇದ್ದು ಮಾಡುತ್ತೇನೆ.

( ಆಗ ರಾಜಯೋಗಾನಂದ ಸ್ವಾಮಿ ರಾಘವನನ್ನು ಮದುವೆ ಮಾಡಿಕೊ ಎಂದು ಹೇಳಿದಾಗ! ರಾಘವ ಆಶ್ರಮದಲ್ಲೇ ಸ್ವಾಮಿ ಸಮಕ್ಷದಲ್ಲೇ ತನ್ನ ಮದುವೆ ನಡೆಯುವಂತೆ ಮಾಡೆಂದಿದ್ದಾನೆ. ಆ ವಿಷಯವನ್ನು ಕುರಿತು ಸ್ವಾಮಿ ಮಲ್ಲುದೊರೆಯನ್ನು ಕೇಳಿದಾಗ ಮಲ್ಲುದೊರೆ ಒಪ್ಪಿಕೊಂಡನು. ಮಲ್ಲುದೊರೆ ಗಿರಿಜನರು ಸಂತೋಷದಿಂದ ತಮ್ಮ ಹಟ್ಟಿಗೆ ಹೋದರು. ರಾಘವ ಮದುವೆಗೆ ಒಂದು ತಿಂಗಳ ಅವಧಿ ಇರುವುದರಿಂದ ಯಾರ ಏರ್ಪಾಟುಗಳು ಅವರು ಮಾಡಿಕೊಳ್ಳುತ್ತಿದ್ದರು. ಒಂದು ದಿನ ರಾಜಯೋಗಾನಂದಸ್ವಾಮಿ ಬಿಡುವಿನಿಂದ ಇರುವಾಗ ರಾಘವ ಒಂದು ವಿಷಯವನ್ನು ಸ್ವಾಮಿಯೊಂದಿಗೆ ಕೇಳಿದನು.)

**ರಾಘವ :–** ನೀವು ಆಶ್ರಮದಲ್ಲಿ ಇಲ್ಲದಂತೆ ಪರ್ಯಟನೆಯಲ್ಲಿ ಇರುವಾಗ ದಾರಿಯಲ್ಲಿ ಹೋಗುವ ಪ್ರಯಾಣಿಕರು ಕುಡಿಯುವ ನೀರಿಗಾಗಿ ಬಂದಿದ್ದಾರೆ. ಇಲ್ಲೇ ಊಟ ಮಾಡಿದ್ದಾರೆ. ಅವರಲ್ಲಿ ಒಬ್ಬ ಯುವಕನು ಊಟವನ್ನು ತಿನ್ನದೇ ಹೊಟ್ಟೆನೋವಿನಿಂದ ಬಾಧೆ ಬೀಳುತ್ತಿದ್ದನು. ಆತನನ್ನು ಗಮನಿಸಿದ ನಾನು ಈ ಯುವಕನು ಏಕೆ ಬಾಧೆ ಬೀಳುತ್ತಿದ್ದಾನೆಂದು ಕೇಳಿದೆ. ಆಗ ಉಳಿದವರು ಆತನನ್ನು ದೆವ್ವ ಬಾಧಿಸುತ್ತಿದೆಯೆಂದು ಹೇಳಿದರು. ಆದರೆ ಆ ವಿಷಯವನ್ನು ನಾನು ನಂಬಲಿಲ್ಲ. ಆತನಿಗೆ ಯಾವುದೋ ರೋಗವಿದೆಯೆಂದು, ನನಗೆ ತಿಳಿದ ಚಿಕಿತ್ಸೆ ಮಾಡಬೇಕೆಂದು, ಹೊಟ್ಟೆಯ ಮೇಲೆ ಕೈಯ್ಯನ್ನು ಇಟ್ಟಿದ್ದೇನೆ. ಆ ಸಮಯಕ್ಕೆ ನಾನು ಯಾವ ಚಿಕಿತ್ಸೆ ಆರಂಭಿಸಲಿಲ್ಲ. ಆದರೆ ಯಾವ ಚಿಕಿತ್ಸೆಯನ್ನು ಮಾಡದೇ ಕೈ ತಾಕಿದ ಕೂಡಲೇ ಆತನ ನೋವು ಕೂಡಲೇ ಹೋಗಿದೆ. ಅದು ಹೇಗೆ ಹೋಗಿದೆಯೋ ನನಗೆ ತಿಳಿದಿಲ್ಲ. ನಾನು ಕೈ ಇಡುವುದರಿಂದಲೇ ಹೋಗಿದೆ ಎಂದು ಅವರು ಹೇಳಿದ್ದಾರೆ. ಆದರೆ ನನಗೆ ಆ ವಿಷಯ ಸ್ವಲ್ಪವೂ ಅರ್ಥವಾಗಲಿಲ್ಲ. ಆಗ ಅಲ್ಲಿ ನನಗೆ ತಿಳಿಯದ ವಿಷಯವೇನೋ ಇದೆಯೆಂದು, ಅದನ್ನು ನೀವೇ ಹೇಳಬಲ್ಲಿರೆಂದು ತಿಳಿದುಕೊಂಡಿದ್ದೇನೆ.

**ರಾಜಯೋಗಾನಂದ :–** ಅದು ನಂಬಲಾರದ್ದೇನೂ ಅಲ್ಲ. ದೆವ್ವಗಳೂ ಇವೆ,

ಮನುಷ್ಯರಿಗೆ ಅವುಗಳ ಬಾಧೆಗಳೂ ಇವೆ. ಆ ಬಾಧೆ ಹೇಗೆ ಹೋಗಿದೆ ಎನ್ನುವ ವಿಷಯ ನಿನಗೆ ತಿಳಿಯಬೇಕಲ್ಲವೆ! ನಿನಗೆ ತಿಳಿಯದಿದ್ದರೂ, ನೀನು ಯಾವ ಚಿಕಿತ್ಸೆಯನ್ನು ಮಾಡದಿದ್ದರೂ, ಆ ಬಾಧೆ ನಿನ್ನ ಕೈ ಸ್ಪರ್ಶದಿಂದಲೇ ಹೋಗಿದೆಯೆನ್ನುವುದು ವಾಸ್ತವ. ಆ ವಾಸ್ತವದಲ್ಲಿನ ವಿವರ ನಿನಗೆ ಬೇಕೆಂದರೆ ಅದನ್ನು ನಾನು ಹೇಳಬಹುದು. ಆದರೆ ನಾನು ಹೇಳುವುದಕ್ಕಿಂತ ಆ ದಿನ ಯುವಕನ ಶರೀರವನ್ನು ಬಾಧಿಸುತ್ತಿರುವ ದೆವ್ವ ಹೇಳಿದರೇ ಇನ್ನೂ ಚೆನ್ನಾಗಿರುತ್ತದೆ. ಅವರ ಅಡ್ರಸ್ ನಿನಗೆ ತಿಳಿದಿದ್ದರೇ ಅವರಿಗೆ ತಿಳಿಸಿ ಇಲ್ಲಿಗೆ ಬರಲು ಹೇಳು. ಅವರು ಬಂದ ನಂತರ ಆ ಸಮಯದಲ್ಲಿ ಆ ಬಾಧೆ ಆ ವ್ಯಕ್ತಿಗೆ ಏಕೆ ಬಂದಿರುವುದು, ಹೇಗೆ ಹೋಗಿರುವುದು ಎಲ್ಲಾ ವಿವರವಾಗಿ ತಿಳಿಯಬಲ್ಲವು.

(ರಾಜಯೋಗಾನಂದ ಸ್ವಾಮಿ ಹೇಳಿದಂತೆ ಆ ದಿನ ಬಂದಿರುವವರನ್ನು ರಾಘವ ಕರೆಕಳಿಸಿದನು. ಅವರು ಎರಡನೆ ದಿನ ಅಲ್ಲಿಗೆ ಬಂದಿದ್ದಾರೆ. ಮೊದಲು ಬಂದವರೆಲ್ಲರೂ ಆ ಯುವಕನೊಂದಿಗೆ ಸಹ ಬಂದಿದ್ದಾರೆ.)

***********************************

(ನಾಗೋತುಲ ನಾಗಭೂಷಣ, ಮುದುಕನು (ಮಂತ್ರಗಳ ಮಲ್ಲಯ್ಯತಾತ) ಪೊಲೀಸ್ ಅಧಿಕಾರಿಗಳ ಹತ್ತಿರಕ್ಕೆ ಹೋಗಿ ತಾವು ಮೋಡಿ ಪ್ರದರ್ಶನ ಮಾಡುತ್ತಿದ್ದೇವೆಂದು, ತಮ್ಮ ಪ್ರದರ್ಶನಕ್ಕೆ ಅನುಮತಿಯನ್ನು ತೆಗೆದುಕೊಂಡಿದ್ದಾರೆ. ಅಷ್ಟೇ ಅಲ್ಲದೆ ಆ ಮೋಡಿ ಪ್ರದರ್ಶನ ಪ್ರಜೆಗಳ ವಿನೋದಕ್ಕಾಗಿ ಮಾಡುವುದೆಂದು, ಒಂದುವೇಳೆ ಆ ಪ್ರದರ್ಶನದಲ್ಲಿ ಯಾರಿಗಾದರೂ ಗಾಯಗಳಾದರೂ ಇಲ್ಲವೆ ಸತ್ತುಹೋದರೂ ಅದಕ್ಕೆ ತಾವು ಜವಾಬ್ದಾರರಲ್ಲವೆಂದು ಮೊದಲೇ ಬರೆಯಿಸಿ ಬಂದಿದ್ದಾರೆ. ಮಲ್ಲಯ್ಯ ತಾತ ಇಟ್ಟಿರುವ ಮೋಡಿಯನ್ನು ನಾಗಭೂಷಣ ಎತ್ತಿಹಾಕುತ್ತೇನೆಂದು ಡಂಗೂರ ಹಾಕಿಸಿದನು. ಆ ಮೋಡಿಯನ್ನು ನೋಡುವುದಕ್ಕೆ ಸುತ್ತಮುತ್ತ ಹಳ್ಳಿಗಳಲ್ಲಿನ ಜನರೆಲ್ಲರೂ ಬಂದಿದ್ದಾರೆ. ಮೋಡಿ ಎಂದರೆ ಹೇಗಿರುತ್ತದೊ ಬಹಳ ಜನರಿಗೆ ತಿಳಿಯದು. ಆದ್ದರಿಂದ ಕೆಲವು ಸಾವಿರ ಜನ ತೋಟಮರ್ರಿ ಗ್ರಾಮಕ್ಕೆ ಸೇರಿಕೊಂಡಿದ್ದಾರೆ. ಭಾನುವಾರ ದಿನದಂದು ಮೋಡಿ ಇಡುವುದಕ್ಕೆ

ಬೇಕಾಗಿರುವ ಸದುಪಾಯಗಳೆಲ್ಲವನ್ನು ಮುದುಕನು ಮುಗಿಸಿಕೊಂಡಿದ್ದಾನೆ. ಶನಿವಾರ ರಾತ್ರಿಯೇ ತಯಾರು ಮಾಡಿಟ್ಟಿರುವ ಮೋಡಿಸ್ಥಳ ನೋಡುವವರಿಗೆ ವಿಚಿತ್ರವಾಗಿ ಕಾಣಿಸಿತು. ಊರಿನ ಮಧ್ಯದಲ್ಲಿ ಇರುವ ಬಯಲಿನಲ್ಲಿ ಹತ್ತು ಅಡಿಗಳ ಚತುರಸ್ರಾಕಾರ ಸ್ಥಳದಲ್ಲಿ ಸುತ್ತಾ ರಂಗೋಲಿ ಹಾಕಿ, ಮಧ್ಯ ಸ್ಥಳ ಸಗಣಿಯಿಂದ ಸಾರಿಸಿಡಲಾಗಿದೆ. ಹತ್ತು ಅಡಿಗಳ ಉದ್ದ, ಅಗಲ ಇರುವ ಚತುರಸ್ರಾಕಾರದ ಸುತ್ತಾ ಅರ್ಧ ಅಡಿ ಅಗಲದಿಂದ ಕಪ್ಪು, ಕೆಂಪು, ಬಿಳಿ ಬಣ್ಣಗಳಿಂದ ರಂಗೋಲಿ ಹಾಕಲ್ಪಟ್ಟಿವೆ. ಮಧ್ಯ ಸ್ಥಳ ಶುಭ್ರವಾಗಿ ಸಾರಿಸಲಾಗಿದೆ. ಈ ವಿಧವಾಗಿ ತಯಾರು ಮಾಡಲಾಗಿರುವ ಚತುರಸ್ರ ಸ್ಥಳಗಳು ಐದು ಕಾಣಿಸಿವೆ. ಪ್ರತಿ ಚತುರಸ್ರ ಆವರಣದಲ್ಲೂ ನಾಲ್ಕು ಮೂಲೆಗಳಲ್ಲಿ ನಾಲ್ಕು ಹಸಿ ತೆಂಗಿನಕಾಯಿಗಳನ್ನು ಹರಿಶಿನ, ಕುಂಕುಮ ಹಚ್ಚಿ ಅಲಂಕಾರ ಮಾಡಿ ಇಟ್ಟಿದ್ದಾರೆ. ಆ ವಿಧವಾಗಿ ಅಲಂಕರಿಸಿದ ಮೊದಲ ಆವರಣದ ಮಧ್ಯದಲ್ಲಿ ಒಂದು ಕಸದ ಪೊರಕೆಯನ್ನು ಇಟ್ಟಿದ್ದಾರೆ. ಹಾಗೇ ಎರಡನೆ ಆವರಣದ ಮಧ್ಯದಲ್ಲಿ ಉದ್ದವಾದ ಚಾಕುವನ್ನು ಇಟ್ಟಿದ್ದಾರೆ. ಮೂರನೆ ಚತುರಸ್ರದ ಆವರಣ ಮಧ್ಯದಲ್ಲಿ ಮಣ್ಣಿನ ತಟ್ಟೆಯಲ್ಲಿ (ಮಣ್ಣಿನಿಂದ ಮಾಡಲಾಗಿರುವ ತಟ್ಟೆಯಲ್ಲಿ) ನಿಂಬೆಹಣ್ಣನ್ನು ಇಟ್ಟಿದ್ದಾರೆ. ನಾಲ್ಕನೆ ಆವರಣದ ಮಧ್ಯದಲ್ಲಿ ಬಟ್ಟೆಗಳಿಂದ ತಯಾರಿಸಿದ ಮೂರು ಅಡಿಗಳ ಎತ್ತರವಿರುವ ಗೊಂಬೆಯನ್ನು ನಿಲ್ಲಿಸಿದ್ದಾರೆ. ಐದನೆ ಚತುರಸ್ರದ ಆವರಣದ ಮಧ್ಯದಲ್ಲಿ ಹತ್ತು ಸೇರು ಅಕ್ಕಿಯನ್ನು ರಾಶಿಹಾಕಿ, ಆ ಕುಪ್ಪೆ ಮೇಲೆ ರೂಪಾಯಿ ನಾಣ್ಯವನ್ನು ಇಟ್ಟಿದ್ದಾರೆ.

ಮೊದಲನೆ ರಂಗೋಲಿಗೂ, ಎರಡನೆ ರಂಗೋಲಿಗು ಮಧ್ಯದಲ್ಲಿ ಅಂತರ ನಾಲ್ಕು (4) ಅಡಿಗಳಿದೆ. ಎರಡನೆ ರಂಗೋಲಿಗೂ, ಮೂರನೆ ರಂಗೋಲಿಗೂ ಮಧ್ಯದಲ್ಲಿ ಅಂತರ ಎಂಟು (8) ಅಡಿಗಳಿದೆ. ಮೂರನೆಯದಕ್ಕೂ ನಾಲ್ಕನೆಯದಕ್ಕೂ ಮಧ್ಯ ಅಂತರ ಹನ್ನೆರಡು (12) ಅಡಿಗಳಿದೆ. ಹಾಗೇ ನಾಲ್ಕನೇ ರಂಗೋಲಿಗೂ, ಐದನೆ ರಂಗೋಲಿಗೂ ಮಧ್ಯ ಅಂತರ ಹದಿನಾರು (16) ಅಡಿಗಳು ಇದೆ. ಮೊದಲನೆ ರಂಗೋಲಿಗೆ ಮುವ್ವತ್ತು (30) ಅಡಿಗಳ ಮುಂದೆ ಹತ್ತು ಅಡಿಗಳ ಎತ್ತರ, ಆರು ಅಡಿಗಳ ಅಗಲ ಇರುವ ಮುಖ ದ್ವಾರ ಕಟ್ಟಿಗೆಯಿಂದ ಮಾಡಲಾಗಿದೆ. ಆ ದ್ವಾರಕ್ಕೆ ಎರಡೂಕಡೆ ತೆಂಗಿನ ಗರಿಗಳಿಂದ ಅಲಂಕಾರ ಮಾಡಲಾಗಿದೆ. ಆ ದ್ವಾರದ ಮೇಲೆ

ಆಕಾಶಮೋಡಿ ಎಂದು ದೊಡ್ಡ ಅಕ್ಷರಗಳಿಂದ ಬರೆಯಲಾಗಿರುವ ಬೋರ್ಡು ಇದೆ. ಆ ಬೋರ್ಡು ಕೆಳಗಿನ ಭಾಗದಲ್ಲಿ ಮಾವಿನ ಎಲೆಗಳಿಂದ ಅಲಂಕರಿಸಿದ ತೋರಣಗಳು ಇವೆ. ಮಾವಿನ ಎಲೆ ತೋರಣದ ಕೆಳಗೆ ಒಂದು ಮಣ್ಣಿನ ಕೊಡವನ್ನು ತಲೆಕೆಳಗಾಗಿ ಮಾಡಿನೇತಾಕಿದ್ದಾರೆ. ಅಗರಬತ್ತಿಗಳ ವಾಸನೆ ಆ ಪ್ರಾಂತವೆಲ್ಲಾ ತುಂಬಿಕೊಂಡಿದೆ.

ಕೆಲವು ಸಾವಿರ ಮಂದಿ ಸೇರಿರುವ ಕಡೆ ಯಾವ ಅಹಿತಕರ ಸಂಘಟನೆಗಳು ನಡೆಯದಂತೆ ಪೊಲೀಸ್ ಬಂದೋಬಸ್ತು ಸಹ ಮಾಡಲಾಗಿದೆ. ಮಾಂತ್ರಿಕ ವೃದ್ಧನು ಮಂತ್ರಗಳ ಮಲ್ಲಯ್ಯ ತಾತ ಹೊಸ ಬಟ್ಟೆಗಳನ್ನು ಧರಿಸಿ, ಕೈಗೆ ಇತ್ತಾಳೆ ಬೆಳ್ಳಿ ಕಡಗಗಳು ಧರಿಸಿ ಕೈಯಲ್ಲಿ ಚಾಟಿ ಇಟ್ಟುಕೊಂಡು, ಹಣೆಯ ಮೇಲೆ ವಿಶಾಲವಾದ ಬೊಟ್ಟು ಇಟ್ಟುಕೊಂಡು ಅಲ್ಲಿಗೆ ಬಂದಿದ್ದಾನೆ. ಅಲ್ಲಿಗೆ ಬಂದ ಮಲ್ಲಯ್ಯ ತಾತನನ್ನು ನೋಡಿ ಆತನ ಅನುಚರರು ಚಪ್ಪಾಳೆ ಹೊಡೆದರು. ನಂತರ ನಿಮಿಷಕ್ಕೆ ನಾಗೋತುಲ ನಾಗಭೂಷಣ ಸಹ ಅಲ್ಲಿಗೆ ಬಂದಿದ್ದಾನೆ. ನಾಗಭೂಷಣ ಪಂಚೆ ಕಟ್ಟಿ ಮೇಲೆ ಅಂಗಿ ಧರಿಸದಂತೆ ಬಂದಿದ್ದಾನೆ. ಅಂಗಿ ಇಲ್ಲದ ಕಾರಣ ಆತನ ಸೊಂಟಕ್ಕಿರುವ ಉಡುದಾರ ಕಾಣಿಸುತ್ತಿದೆ. ಆ ಉಡುದಾರಕ್ಕೆ ಕಟ್ಟಿರುವ ವಿವಿಧ ತಾಯತಗಳು ಕಾಣಿಸುತ್ತಿವೆ. ನಾಗಭೂಷಣ ಬಂದ ನಂತರ ಮಲ್ಲಯ್ಯ ತಾತ ಅಲ್ಲಿರುವ ಚಿಕ್ಕ ವೇದಿಕೆಯನ್ನು ಹತ್ತಿ ಭೀಕರದಿಂದ ಹೀಗೆ ಹೇಳಿದನು.)

**ಮಲ್ಲಯ್ಯ :-** ಇಲ್ಲಿಗೆ ಬಂದಿರುವ ಜನರೆಲ್ಲರಿಗೂ ನನ್ನ ನಮಸ್ಕಾರಗಳು. ಈಗ ಇಲ್ಲಿ ನನಗೂ, ನಾಗಭೂಷಣನಿಗೂ ಮೋಡಿ ನಡೆಯುತ್ತದೆ. ಮೊಡಿ ಎಂದರೆ ಏನೋ ಬಹಳ ಜನರಿಗೆ ತಿಳಿಯದೆಂದುಕೊಳ್ಳುತ್ತೇನೆ. ಇದು ಒಂದು ರೀತಿಯಲ್ಲಿ ನಮ್ಮಲ್ಲಿರುವ ಮಂತ್ರಶಕ್ತಿಗಳ ಸ್ಪರ್ಧೆ ಎಂದು ತಿಳಿಸುತ್ತಿದ್ದೇವೆ. ಈ ಮೋಡೀಯಿಂದ ಯಾರು ದೊಡ್ಡ ಮಾಂತ್ರಿಕರೋ ತಿಳಿದುಹೋಗುತ್ತದೆ. ನನಗೂ, ನಾಗಭೂಷಣನಿಗೂ ಮಧ್ಯ ನಾನು ದೊಡ್ಡವನು ಎಂದರೆ, ಅಲ್ಲ ನಾನೇ ದೊಡ್ಡವನೆನ್ನುವ ತಗಾದೆ ಬಂದಿದೆ. ಆದ್ದರಿಂದ ಯಾರು ದೊಡ್ಡವರಾಗಿರುವುದು ತಿಳಿದುಹೋಗಬೇಕೆಂದು ಈ ಮೋಡಿಯನ್ನು ಇಟ್ಟುಕೊಂಡಿದ್ದೇವೆ. ನಾನು ಇಟ್ಟಿರುವ ಈ ಮೋಡಿಯನ್ನು

ನಾಗಭೂಷಣ ಎತ್ತಿಹಾಕುತ್ತೇನೆಂದು ಸವಾಲು ಮಾಡಿದ್ದಾನೆ. ಹಾಗೆ ಆತನು ಎತ್ತಿ ಹಾಕುವುದಾದರೇ, ನಿಮ್ಮ ಎಲ್ಲರ ಸಮಕ್ಷಮದಲ್ಲಿ ಆತನಿಗಿಂತ ಮಂತ್ರ ವಿದ್ಯೆಯಲ್ಲಿ ನಾನು ಚಿಕ್ಕವನೆಂದು ಒಪ್ಪಿಕೊಂಡು, ಇಂದಿನಿಂದ ಆತನು ಹೇಳಿದ ಕೆಲಸಗಳು ಮಾಡುವುದಕ್ಕೆ ಸಿದ್ಧವಾಗಿ ಇರುತ್ತೇನೆ. ನಾಗಭೂಷಣ ಈ ಮೋಡಿಯನ್ನು ತೆಗೆಯಲಾರದೆ ಹೋದರೆ ಆತನು ನನಗಿಂತ ಕಡಿಮೆಯವನೆಂದು ಒಪ್ಪಿಕೊಂಡು, ಆತನು ನಾನು ಕೋರಿದಾಗ ನನ್ನ ಕೆಲಸಗಳು ಮಾಡಬೇಕೆಂದು ಒಪ್ಪಂದ ಮಾಡಿಕೊಂಡಿದ್ದೇವೆ.

ಈಗ ಇಲ್ಲಿ ನಿಮಗೆ ಕಾಣಿಸುವಂತೆ ಮೋಡಿಗೆ ಮುಖ ದ್ವಾರವಿದೆ. ಆ ಮುಖ ದ್ವಾರದ ಮೇಲೆ ಒಂದು ಮಣ್ಣಿನ ಕೊಡ ತಲೆಕೆಳಗಾಗಿ ನೇತಾಕಲಾಗಿದೆ. ಸ್ಪರ್ಧೆದಾರನಾದ ನಾಗಭೂಷಣ ಮೊದಲು ಆ ಕೊಡವನ್ನು ಹೊಡೆದು ಮುಖದ್ವಾರದಿಂದ ಮೋಡಿಯೊಳಗೆ ಬರಬೇಕಾಗಿರುತ್ತದೆ. ನಂತರ ಸುತ್ತಾ ರಂಗೋಲಿ ಹಾಕಲಾಗಿದ್ದು, ಮಧ್ಯದಲ್ಲಿ ಸಗಣಿಯಿಂದ ಸಾರಿಸಿ ಪೂಜೆ ಮಾಡಿ ಇಟ್ಟಿರುವ ಐದು ಸ್ಥಳಗಳು ಇವೆ. ಅದರಲ್ಲಿ ಮೊದಲ ಚದರದಲ್ಲಿ ಪೊರಕೆ ಕಾಣಿಸುತ್ತಿದೆ. ಆ ಪೊರಕೆಯನ್ನು ನಾಗಭೂಷಣ ತೆಗೆದು ಹೊರಗೆ ಬಿಸಾಡಬೇಕು, ಅದರ ನಂತರ ಇರುವ ಎರಡನೆ ಚದರದಲ್ಲಿ ಮಧ್ಯದಲ್ಲಿ ನಿಲ್ಲಿಸಿರುವ ಚಾಕು ಇದೆ. ಅದನ್ನು ಸಹ ನಾಗಭೂಷಣ ತೆಗೆದು ಹೊರಗೆ ಹಾಕಬೇಕು. ಹಾಗೇ ಮೂರನೆ ಚದರದ ಸ್ಥಳದಲ್ಲಿ ಒಂದು ನಿಂಬೆಹಣ್ಣು ಇದೆ. ಅದನ್ನು ತೆಗೆದು ಹೊರಗೆ ಹಾಕಬೇಕು. ಅದರ ನಂತರ ನಾಲ್ಕನೇ ರಂಗೋಲಿಯಲ್ಲಿ ಮೂರು ಅಡಿಗಳ ಎತ್ತರವಿರುವ ಬಟ್ಟೆಯ ಗೊಂಬೆಯನ್ನು ತೆಗೆದು, ಆ ರಂಗೋಲಿ ಹೊರಗೆ ಹಾಕಬೇಕು. ಕೊನೆಯಲ್ಲಿರುವ ಐದನೆ ಚದರದಲ್ಲಿ ಅಕ್ಕಿಯ ಕುಪ್ಪೆ ಮೇಲೆ ರೂಪಾಯಿ ನಾಣ್ಯವಿದೆ. ಅದನ್ನು ತೆಗೆದುಕೊಂಡು ಬಂದು ಈ ವೇದಿಕೆ ಮೇಲೆ ಎಲ್ಲರಿಗೂ ತೋರಿಸಬೇಕು. ಹಾಗೆ ಎಲ್ಲ ಕೆಲಸಗಳು ಮಾಡುವುದಾದರೇ, ಆಗ ಆತನು ಈ ಮೋಡಿಯನ್ನು ಎತ್ತಿಹಾಕಿ ಗೆದ್ದವನಾಗುತ್ತಾನೆ. ಇದೇನು ದೊಡ್ಡ ಕೆಲಸ ಎಂದು ಎಲ್ಲರೂ ಅಂದುಕೊಳ್ಳಬಹುದು. ಆದರೆ ಇದು ಅಷ್ಟು ಸುಲಭವಾದ ಕೆಲಸವಲ್ಲ. ಇಲ್ಲಿಯವರೆಗೂ ನಾನು ಹೇಳಿದ ವಸ್ತುಗಳನ್ನು ತೆಗೆದುಹಾಕಬೇಕೆಂದು ನಾಗಭೂಷಣ ಪ್ರಯತ್ನಿಸಿದರೇ, ನಾನು ನನ್ನ

# ಆಕಾಶ ಮೋಡಿ




**ಚಿತ್ರ – 1**

**ಮಧ್ಯದೂರ**
**30 ಅಡಿಗಳು**



**ಚಿತ್ರ – 2**

**ಮಧ್ಯದೂರ**
**4 ಅಡಿಗಳು**



**ಚಿತ್ರ – 3**

**ಚಿತ್ರ–3, ಚಿತ್ರ–4 ⇊ ಮಧ್ಯದೂರ 8 ಅಡಿಗಳು**

**ಚಿತ್ರ – 4**





**ಮಧ್ಯದೂರ 12 ಅಡಿಗಳು**

**ಚಿತ್ರ – 5**





**ಮಧ್ಯದೂರ 16 ಅಡಿಗಳು**

**ಚಿತ್ರ – 6**



ವಿದ್ಯೆಯಿಂದ ಆತನು ಅವುಗಳನ್ನು ತೆಗೆಯದಂತೆ ಮಾಡುತ್ತಿರುತ್ತೇನೆ. ಈ ಮೋಡೀಯನ್ನು ತೆಗೆಯುವುದರಲ್ಲಿ ಆತನಿಗಾಗಲೀ, ತೆಗೆಯದಂತೆ ಮಾಡುವುದರಲ್ಲಿ ನನಗಾಗಲೀ ಯಾವ ಪ್ರಮಾದವಾದರೂ ಸಂಭವಿಸಬಹುದು. ಅದಕ್ಕೇ ನಾವು ಸಮ್ಮತಿಸುವ ಈ ಮೋಡಿ ಪ್ರದರ್ಶನ ಇಟ್ಟುಕೊಂಡಿದ್ದೇವೆಂದು ತಿಳಿಸುತ್ತಿದ್ದೇನೆ.

(ಎಂದು ಹೇಳಿ ನಮಸ್ಕಾರ ಮಾಡಿ ಮಂತ್ರಗಳ ಮಲ್ಲಯ್ಯ ತಾತ ವೇದಿಕೆ ಇಳಿದು ಬಂದಿದ್ದಾನೆ. ಕೂಡಲೇ ನಾಗಭೂಷಣ ವೇದಿಕೆಯನ್ನು ಹತ್ತಿ ಹೀಗೆ ಹೇಳಿದ್ದಾನೆ.)

**ನಾಗಭೂಷಣ :–** ಮೋಡಿಯನ್ನು ಎತ್ತಿ ಹಾಕುವುದು ಬಹಳ ಕಷ್ಟವಾದ ಕೆಲಸ ಮತ್ತು ಪ್ರಮಾದಕರವಾದ ಕೆಲಸ ಎಂದು ಸಹ ಹೇಳಬಹುದು. ಆದರೂ ನೀವು ನೋಡುತ್ತಿದ್ದಂತೆ ಈ ಮೋಡಿಯನ್ನು ಎತ್ತಿ ಹಾಕುತ್ತೇನೆನ್ನುವ ನಂಬಿಕೆ ನನಗಿದೆ. ಅದಕ್ಕೆ ನಿಮ್ಮ ಎಲ್ಲರ ಆಶೀರ್ವಾದ ಬೇಕೆಂದು ಕೋರುತ್ತಿದ್ದೇನೆ.

(ಎಂದು ಎಲ್ಲರಿಗೂ ನಮಸ್ಕರಿಸಿದ್ದಾನೆ. ಆಗ ಎಲ್ಲರೂ ಚಪ್ಪಾಳೆ ಹೊಡೆದಿದ್ದಾರೆ. ಚಪ್ಪಾಳೆ ಕೇಳಿದ ನಾಗಭೂಷಣ ಹೆಚ್ಚಿನ ಉತ್ಸಾಹದಿಂದ ಮೋಡಿ ಮುಖ ದ್ವಾರದ ಮುಂಭಾಗಕ್ಕೆ ಬಂದಿದ್ದಾನೆ. ಮುಖ ದ್ವಾರಕ್ಕೆ ಹತ್ತು ಅಡಿಗಳ ದೂರದಲ್ಲಿ ಒಂದು ಕೋಲನ್ನು ಕೈಯಲ್ಲಿ ಹಿಡಿದುಕೊಂಡು ನಿಂತು, ಏನೋ ಮಂತ್ರವನ್ನು ಜಪಿಸುತ್ತಾ, ಒಂದು ನಿಮಿಷದ ನಂತರ ಇದ್ದಕ್ಕಿದ್ದಂತೆ ಓಡಿಬಂದು ಕೊಡವನ್ನು ಹೊಡೆದು ಮುಖ ದ್ವಾರವನ್ನು ದಾಟಬೇಕೆಂದು ಪ್ರಯತ್ನಿಸಿದ್ದಾನೆ. ಓಡಲು ಪ್ರಾರಂಭಿಸಿದ ಕೂಡಲೇ ಮುದುಕನು ಹರಿಶಿನ ಬೆರೆಸಿದ ಅಕ್ಕಿಯನ್ನು ಕೊಡದಮೇಲೆ ಚೆಲ್ಲಿದನು. ಹಾಗೆ ಚಲ್ಲಿದ ಕೂಡಲೇ ಮೇಲೆ ತಲೆಕೆಳಗಾಗಿ ನೇತಾಕಿರುವ ಕೊಡದಿಂದ ಜೇನು ಹುಳಗಳು ಒಂದೇಸಲ ಹೊರಗೆ ಬರುವುದಕ್ಕೆ ಪ್ರಾರಂಭಿಸಿದವು. ಸುಮಾರು ನೂರು ಸಾವಿರ ಜೇನುಹುಳಗಳು ಬಂದು ನಾಗಭೂಷಣನನ್ನು ಸುತ್ತುವರೆದು ಗಡಿಬಿಡಿ ಮಾಡಿದವು. ಕೊಡ ಎಲ್ಲಿರುವುದೂ ಸಹ ಕಾಣಿಸದಂತೆ ಮುಖದಮೇಲೆ ಕಚ್ಚಲು ಪ್ರಾರಂಭಿಸಿದವು. ದಟ್ಟವಾದ ಹೊಗೆ ಮೇಘಗಳಂತೆ ಹಬ್ಬಿಕೊಂಡ ನೊಣಗಳ ಗುಂಪಿನಲ್ಲಿ ಅಲ್ಲಿ ನೋಡುವವರಿಗೂ ಸಹ ದ್ವಾರವೂ

ಕಾಣಿಸಲಿಲ್ಲ, ಕೊಡವೂ ಕಾಣಿಸಲಿಲ್ಲ. ಜೇನು ಹುಳಗಳ ದಾಳಿಗೆ ನಾಗಭೂಷಣ ಸಹಿಸಲಾರದೆ ಹಿಂದಕ್ಕೆ ಓಡಿದನು. ಇದೆಲ್ಲಾ ನೋಡುತ್ತಿರುವವರಿಗೆ ಆ ದೃಶ್ಯ ಮಹಾ ಅದ್ಭುತವಾಗಿ ಕಾಣಿಸಿತು. ನಾಗಭೂಷಣ 40 ಅಡಿಗಳ ದೂರದೊಳಗೆ ಹೋಗಿ ನಿಂತನು. ಆಗ ಜೇನು ಹುಳಗಳೆಲ್ಲವೂ ಕೊಡದೊಳಗೆ ಹೋದವು. ಹೊರಗೆ ಒಂದೂ ಸಹ ಕಾಣಿಸಲಿಲ್ಲ. ಕೆಲವು ಸಾವಿರ ಲಕ್ಷಗಳಲ್ಲಿ ಕಾಣಿಸಿದ ಜೇನುಹುಳಗಳು ಎಲ್ಲ ಆ ಕೊಡದೊಳಗೆ ಹೇಗೆ ಹಿಡಿಸಿದವೋ ಅರ್ಥವಾಗಲಿಲ್ಲ. ವಾಸ್ತವವಾಗಿ ಯೋಚಿಸಿದರೆ ಆ ನೊಣಗಳಿಗೆ ಆ ಕೊಡದೊಳಗಿನ ಜಾಗಾ ಸಾಲುವುದಿಲ್ಲ. ಆದರೂ ಆ ಕೊಡದೊಳಗೆ ಎಲ್ಲಾ ತೂರಿಹೋಗುವುದು ನೋಡುತ್ತಿರುವವರಿಗೆಲ್ಲಾ ಆಶ್ಚರ್ಯವನ್ನು ಉಂಟುಮಾಡಿತು. ಮೊದಲು ದ್ವಾರದ ಬಳಿಯೇ ನಾಗಭೂಷಣನಿಗೆ ಮಲ್ಲಯ್ಯ ತಾತನ ಮಂತ್ರಬಲವೇನೋ ಅರ್ಥವಾಯಿತು. ಎರಡನೆ ಸಲ ನಾಗಭೂಷಣ ದ್ವಾರದ ಹತ್ತಿರಕ್ಕೆ ಬಂದಿದ್ದಾನೆ. ದ್ವಾರಕ್ಕೆ ಆರು ಅಡಿಗಳ ದೂರದಲ್ಲಿ ಬರುತ್ತಲೇ ಎರಡನೆ ಬಾರಿ ಸಹ ಜೇನುಹುಳಗಳು ದಾಳಿ ಮಾಡುವುದೂ ಆತನು ಹಿಂದಕ್ಕೆ ಹೋಗುವುದೂ ನಡೆದಿದೆ. ಹೀಗೆ ಮುಖ ದ್ವಾರದ ಹತ್ತಿರವೇ ನಾಗಭೂಷಣನಿಗೆ ಕಹಿ ಅನುಭವ ಎದುರಾಯಿತು. ಎರಡನೆ ಸಲ ಹಿಂದಕ್ಕೆ ಹೋದ ನಾಗಭೂಷಣ ಸ್ವಲ್ಪ ಯೋಚಿಸಿ ತನ್ನ ಸೊಂಟಕ್ಕೆ ಇರುವ ತಾಯತಗಳಲ್ಲಿ ಒಂದನ್ನು ತೆಗೆದುಕೊಂಡು ಒಂದು ಪ್ಲೇಟ್ ಮೇಲೆ ಇಟ್ಟು ಅದರ ಮೇಲೆ ಮರಳನ್ನು ಹಾಕಿದ್ದಾನೆ. ಆ ರೀತಿ ತಾಯತವನ್ನು ಕಾಣಿಸದಂತೆ ಆ ಪ್ಲೇಟ್‌ನಲ್ಲಿ ಮರಳನ್ನು ಹಾಕಿ, ಆ ಪ್ಲೇಟ್ ಎಡಕೈಯಲ್ಲಿ ಇಟ್ಟುಕೊಂಡು ಕೋಲನ್ನು ಸೊಂಟದಲ್ಲಿ ಇಟ್ಟುಕೊಂಡು, ಬಲಕೈಯಿಂದ ಕೊಡದ ಮೇಲೆ ಮರಳನ್ನು ಚೆಲ್ಲುತ್ತಾ ಬಂದಿದ್ದಾನೆ. ಆತನು ಮರಳನ್ನು ಕೊಡದ ಮೇಲೆ ಚೆಲ್ಲುತ್ತಾ ದ್ವಾರದ ಮಧ್ಯದಲ್ಲಿ ಬಂದು ನಿಂತಿದ್ದಾನೆ. ಆಗ ಕೊಡದೊಳಗಿನಿಂದ ಒಂದು ನೊಣವೂ ಸಹ ಹೊರಗೆ ಬರಲಿಲ್ಲ. ನಾಗಭೂಷಣ ಕೂಡಲೇ ತನ್ನ ಸೊಂಟದಲ್ಲಿ ಇಟ್ಟುಕೊಂಡ ಕೋಲಿನಿಂದ ಕೊಡವನ್ನು ಹೊಡೆದನು. ಆ ರೀತಿ ಕೊಡವನ್ನು ಹೊಡೆದು ದ್ವಾರವನ್ನು ದಾಟಿ ಮೊದಲನೆ ರಂಗೋಲಿ ಹತ್ತಿರಕ್ಕೆ ಹೋಗಿದ್ದಾನೆ. ದ್ವಾರದ ಹತ್ತಿರವಿರುವ ಕೊಡವನ್ನು ಹೊಡೆದಾಗ ಕೊಡ ಚೂರು ಚೂರಾಗಿ ಹೊಡೆದುಹೋಯಿತು. ಆದರೆ ಒಂದು

ಜೇನುಹುಳವೂ ಸಹ ಕೊಡದಲ್ಲಿ ಕಾಣಿಸಲಿಲ್ಲ. ಕೊಡದಿಂದ ಜೇನುಹುಳಗಳು ಬರುವುದು, ಪುನಃ ಕೊಡದೊಳಗೆ ಹೋಗುವುದು ನೋಡಿದ ಪ್ರಜೆಗಳು ಹೊಡೆದುಹೋದ ಕೊಡದಲ್ಲಿ ಒಂದು ನೊಣವೂ ಸಹ ಕಾಣಿಸದಂತೆ ಹೋಗುವುದು ದೊಡ್ಡ ವಿಚಿತ್ರವಾಗಿ ತೋಚಿತು. ಅದೇ ಕೆಲಸದಂತೆ ನೋಡಬೇಕೆಂದು ಬಂದಿರುವ ಕೆಲವರು ಹೇತುವಾದಿಗಳಿಗೆ, ನಾಸ್ತಿಕವಾದಿಗಳಿಗೆ ಅದು ಹೇಗೆ ನಡೆದಿದೆಯೋ ಅರ್ಥವಾಗಲಿಲ್ಲ. ಆ ಕೆಲಸದಿಂದ ಮಂತ್ರಗಳ ಮೇಲೆ ನಂಬಿಕೆ ಇಲ್ಲದವರು ಸಹ ಅದನ್ನು ನೋಡಿ ಹೌಹಾರಿದರು. ಆ ಮೋಡಿಯನ್ನು ನೋಡುವುದಕ್ಕೆ ಕಲೆಕ್ಟರ್, ಎಸ್.ಪಿರವರು ಸಹ ಬಂದಿದ್ದಾರೆ. ಜೇನುಹುಳಗಳ ಪ್ರಯೋಗವನ್ನು ನೋಡಿದ ಅವರು ಒಬ್ಬರ ಮುಖವನ್ನು ಒಬ್ಬರು ನೋಡಿಕೊಂಡಿದ್ದಾರೆ. ಮೋಡಿ ಎಂದರೇ ಏನೋ ತಿಳಿಯದವರು ಮೋಡಿ ಇಷ್ಟು ಅದ್ಭುತವಾಗಿ ಇರುತ್ತದಾ ಎಂದು ಕೊಂಡಿದ್ದಾರೆ.

ಬಹುಕಷ್ಟದಿಂದ ಮುಖ ದ್ವಾರವನ್ನು ದಾಟಿದ ನಾಗಭೂಷಣ ಮೊದಲ ರಂಗೋಲಿನ ಹತ್ತಿರಕ್ಕೆ ಬಂದಿದ್ದಾನೆ. ಮೊದಲ ಚದರದ ಸ್ಥಳದಲ್ಲಿ ಮಧ್ಯದಲ್ಲಿ ಒಂದು ಕಸದ ಪೊರಕೆ ಇದೆ. ಆ ಪೊರಕೆಗೆ ಮಲ್ಲಯ್ಯ ತಾತ ತನ್ನ ಹತ್ತಿರವಿರುವ ಕಾಡಿಗೆಯನ್ನು ಸ್ವಲ್ಪ ಹಚ್ಚಿ ಹೊರಗೆ ಹೋಗಿ ಇನ್ನು ಬಾ ಎಂದು ನಾಗಭೂಷಣನಿಗೆ ಸನ್ನೆ ಮಾಡಿದನು. ಆಗ ನಾಗಭೂಷಣ ಮಂತ್ರೋಚ್ಚಾಟನೆ ಮಾಡುತ್ತಾ ರಂಗೋಲಿಯೊಳಗೆ ಪ್ರವೇಶಿಸಿ ಪೊರಕೆಯನ್ನು ತೆಗೆಯಲು ಹೋಗಿದ್ದಾನೆ. ಕೂಡಲೇ ಆ ಪೊರಕೆ ಗಾಳಿಯೊಳಗೆ ಮೇಲಕ್ಕೆ ಎದ್ದಿತು. ನಾಗಭೂಷಣನ ಕೈಗೆ ಸಿಗದಂತೆ ಹಿಂದೆ ಬೆನ್ನಿನ ಮೇಲೆ ಹೊಡೆಯಲು ಆರಂಭಿಸಿತು. ಆ ಪೊರಕೆಯ ಏಟಿಗೆ ತಾಳಲಾರದೆ ನಾಗಭೂಷಣ ರಂಗೋಲಿ ಹೊರಗೆ ಓಡಿದನು. ಆತನು ಹೊರಗೆ ಹೋಗುತ್ತಲೇ ಆ ಕಸದಪೊರಕೆಯು ಪುನಃ ತನ್ನ ಮೊದಲ ಸ್ಥಾನದಲ್ಲಿ ಹೋಗಿ ನಿಂತಿತು. ತನ್ನ ಸೊಂಟಕ್ಕಿರುವ ತಾಯತವನ್ನು ಒಂದನ್ನು ಕೈಯಿಂದ ಹಿಡಿದುಕೊಂಡು ಎರಡನೆ ಸಲ ಒಳಗೆ ಹೋಗಿದ್ದಾನೆ. ಆಗಲೂ ಸಹ ಆ ಪೊರಕೆ ಮೇಲಕ್ಕೆ ಎದ್ದು ಆತನನ್ನು ಹೊಡೆಯಲು ಆರಂಭಿಸಿತು. ಅದು ಹೊಡೆಯುವುದರಿಂದ ನಾಗಭೂಷಣ ಕೈ ಅಡ್ಡ ಇಟ್ಟಿದ್ದಾನೆ. ಆಗ ಪೊರಕೆ ಕೈಮೇಲೆ ಹೊಡೆಯಿತು. ಆ ಏಟಿಗೆ ಕೈಯ್ಯಲ್ಲಿರುವ

ತಾಯತ ಕೆಳಗೆ ಬಿದ್ದಿತು. ಎರಡನೆ ಬಾರಿ ಕೂಡ ನಾಗಭೂಷಣ ಹಿಂತಿರುಗಿ ಹೊರಗೆ ಬಂದಿದ್ದಾನೆ. ಪ್ರಾಣವಿಲ್ಲದ ಸಾಧಾರಣ ಪೊರಕೆ ಹಾಗೆ ಹೊಡೆಯುವುದನ್ನು ನೋಡಿ ಅಲ್ಲಿ ಇರುವವರೆಲ್ಲರೂ ಆಶ್ಚರ್ಯಚಕಿತರಾದರು. ಮಂತ್ರಗಳಿಗೆ ಮಾವಿನ ಕಾಯಿಗಳು ಬೀಳುವುದಿಲ್ಲ ಎನ್ನುವ ಮಾತು ಅಲ್ಲಲ್ಲಿ ಕೇಳಿದವರು ಸಹ ಈ ದೃಶ್ಯವನ್ನು ನೋಡಿ ಮಂತ್ರಗಳಿಗೆ ಮಾವಿನಕಾಯೇ ಅಲ್ಲ ತುಂಬೆಕಾಯಿಗಳು ಸಹ ಬೀಳುವಂತಿವೆ ಎಂದು ಅಂದುಕೊಂಡಿದ್ದಾರೆ. ಇನ್ನೂ ಅಲ್ಲಿ ಏನು ವಿಚಿತ್ರ ನಡೆಯುತ್ತದೋ ಎಂದು ಶ್ರದ್ಧೆಯಿಂದ ನೋಡುತ್ತಿದ್ದಾರೆ.

ಎರಡನೆ ಸಲ ಸಹ ಹಿಂದಕ್ಕೆ ಬಂದಿರುವ ನಾಗಭೂಷಣ ಅದಕ್ಕೆ ಪರಿಹಾರವನ್ನು ಯೋಚಿಸುತ್ತಾ ನಿಂತಿದ್ದಾನೆ. ತಾನು ಕಲಿತಿರುವ ವಿದ್ಯೆಗಳೆಲ್ಲವನ್ನೂ ಜ್ಞಪ್ತಿ ಮಾಡಿಕೊಂಡು ಕೋಳಿಯನ್ನು ತರಿಸಿ, ಅದರ ಬಾಲ ಪುಕ್ಕಗಳನ್ನು ಕಿತ್ತು ಆ ಪುಕ್ಕಗಳನ್ನು ಕೈಯ್ಯಲ್ಲಿ ಹಿಡಿದುಕೊಂಡು ಮುಂದಕ್ಕೆ ಹೋಗಿದ್ದಾನೆ. ಮೊದಲಿನಂತೆಯೇ ಆ ಪೊರಕೆ ಮೇಲಕ್ಕೆ ಎದ್ದು ಹೊಡೆಯಲು ಆರಂಭಿಸಿತು. ಮೂರನೆ ಸಲ ಕೂಡ ತನ್ನ ಯೋಚನೆ ಫಲಿಸದೆ ಒದೆ ತಿಂದು ಹಿಂದಕ್ಕೆ ಬಂದನು. ಆಗ ಮುದುಕನು ನಗುವುದಕ್ಕೆ ಆರಂಭಿಸಿದನು. ಆ ವಿಧವಾಗಿ ಐದು ಸಲ ಮಾತ್ರವೇ ಪ್ರಯತ್ನ ಮಾಡಬೇಕು. ಐದು ಸಲ ಆಗದೇ ಹೋದರೆ ಆರನೆ ಸಲ ಮಾಡಬಾರದು. ಐದು ಸಲ ಕೈಲಾಗವವರು ಸೋತುಹೋದಂತೆ ಒಪ್ಪಿಕೊಳ್ಳಬೇಕು. ಮೂರು ಸಲ ವಿಫಲವಾದ ನಾಗಭೂಷಣನಿಗೆ ಇನ್ನು ಎರಡು ಸಲ ಕೂಡ ಕೈಲಾಗುವುದಿಲ್ಲವೆಂದು ಮುದುಕನು ನಗಾಡಿದನು. ಅಲ್ಲಿ ನೋಡುವವರು ಸಹ ಆ ಪೊರಕೆಯನ್ನು ತೆಗೆಯಲಾರನೆಂದು ಅಂದುಕೊಂಡರು. ಆಗ ನಾಗಭೂಷಣನ ಮೆದುಳಿನಲ್ಲಿ ಒಂದು ಆಲೋಚನೆ ಹೊಳೆಯಿತು. ಕೂಡಲೇ ಆತನು ಬೇವಿನ ಕೊಂಬೆಗಳನ್ನು ತರಿಸಿಕೊಂಡು ಸೊಂಟದ ಸುತ್ತಾ ಕಟ್ಟಿಕೊಂಡು, ಕೆಲವು ಕೊಂಬೆಗಳನ್ನು ಕೈಯ್ಯಲ್ಲಿ ಹಿಡಿದುಕೊಂಡು ನಾಲ್ಕನೆ ಸಲ ಒಳಗೆ ಹೋಗಿ ಪೊರಕೆಯನ್ನು ತೆಗೆಯಲು ಹೋದನು. ನಾಲ್ಕನೆ ಬಾರಿ ಕೂಡ ಪೊರಕೆ ಮೇಲಕ್ಕೆ ಎದ್ದು ಬಂದಿತು. ಅದು ಹೊಡೆಯಲು ಬಂದಾಗ ಬೇವಿನ ಕೊಂಬೆಗಳಿಂದ ನಾಗಭೂಷಣನು ಸಹ ಅದನ್ನು ಹೊಡೆದಿದ್ದಾನೆ. ಬೇವಿನೆಲೆ ಏಟು ಪೊರಕೆಗೆ ತಾಕಿದ ಕೂಡಲೆ ಪೊರಕೆ ಕೆಳಗೆ ಬಿದ್ದಿತು. ಕೂಡಲೇ

ಅದನ್ನು ತೆಗೆದುಕೊಂಡು ಹೊರಗೆ ಬೀಸಿ ಜೋರಾಗಿ ಕೇಕೆ ಹಾಕಿದನು. ನೋಡುತ್ತಿದ್ದವರು ಚಪ್ಪಾಳೆ ತಟ್ಟಿದರು.

ಇನ್ನು ಎರಡನೆ ರಂಗೋಲಿಯೊಳಗೆ ಹೋಗಬೇಕಾದ ನಾಗೋತುಲ ನಾಗಭೂಷಣ ಮುದುಕನಾದ ಮಂತ್ರಗಳ ಮಲ್ಲಯ್ಯ ತಾತನೊಂದಿಗೆ ನಾನು ತಯಾರಾಗಿದ್ದೇನೆ ಎಂದನು. ಮುದುಕನು ತನ್ನ ಕೈಯ್ಯಲ್ಲಿನ ಅಕ್ಷತೆಗಳನ್ನು ಎರಡನೆ ಚದರದಲ್ಲಿ ಚಾಕುವಿನಮೇಲೆ ಚೆಲ್ಲಿ ಇನ್ನು ಬಾ ಎಂದು ಸನ್ನೆ ಮಾಡಿದನು. ನಾಗಭೂಷಣನು ತನ್ನ ಸೊಂಟಕ್ಕಿರುವ ತಾಯತಗಳನ್ನು ಎಲ್ಲವನ್ನು ತಾಕಿ ಮಂತ್ರಗಳನ್ನು ಓದುತ್ತಾ ಮುಂದಿರುವ ರಂಗೋಲಿಯೊಳಗೆ ಬಂದಿದ್ದಾನೆ. ಆಗ ಆ ರಂಗೋಲಿಯಲ್ಲಿರುವ ಚಾಕು ವೃತ್ತಾಕಾರದಲ್ಲಿ ಚಕ್ರದಂತೆ ವೇಗವಾಗಿ ತಿರುಗುವುದಕ್ಕೆ ಆರಂಭಿಸಿತು. ಅದಕ್ಕಾಗಿ ಕೈ ಮುಂದಕ್ಕೆ ಇಟ್ಟರೇ ಕೈ ಕತ್ತರಿಸಿ ಹೋಗುತ್ತದೆಂಬ ಭಯ ಆತನಿಗೆ ಏರ್ಪಟ್ಟಿತು. ನೋಡುವವರು ಏನು ನಡೆಯುತ್ತದೋ ಎಂದು ನೋಡುತ್ತಿದ್ದಾರೆ. ನಾಗಭೂಷಣ ಒಂದು ಕೋಲನ್ನು ತೆಗೆದುಕೊಂಡು ಬಂದು ಚಾಕುವಿಗೆ ಅಡ್ಡ ಇಟ್ಟರೆ ಆ ಕೋಲನ್ನು ಎರಡು ಭಾಗಗಳಾಗಿ ಚಾಕು ಕತ್ತರಿಸಿತು. ಮಲ್ಲಯ್ಯ ತಾತ ಆ ಚದರ ರಂಗೋಲಿ ಹೊರಗೆ ಮಂತ್ರಿಸುತ್ತಾ ನಿಂತಿದ್ದಾನೆ. ನಾಗಭೂಷಣ ಮುಂದಕ್ಕೆ ಹೋದರೆ ಚಾಕು ಕತ್ತರಿಸುತ್ತದೆಂದು ತಿಳಿದು ಮುಂದಕ್ಕೆ ಹೋಗದಂತೆ, ತಾನೂ ಸಹ ಭೇತಾಳ ಮಂತ್ರವನ್ನು ಮಂತ್ರಿಸಿ ಮುದುಕನ ಕಡೆ ನೋಡಿದ್ದಾನೆ. ಆಗ ಕಣ್ಣಿಗೆ ಕಾಣಿಸದ ಭೇತಾಳನು ಮುದುಕನನ್ನು ತಳ್ಳಲಾರಂಭಿಸಿದನು. ಮಂತ್ರಗಳನ್ನು ಓದುತ್ತಿದ್ದ ಮಲ್ಲಯ್ಯ ತಾತ ಕೆಳಗೆ ಬಿದ್ದಿದ್ದಾನೆ. ಕೆಳಗೆ ಬಿದ್ದವನು ಯಾರೋ ಉರುಳಿಸಿದಂತೆ ನೂರು ಅಡಿಗಳ ದೂರ ಉರುಳುತ್ತಾ ಹೋದನು. ಅಷ್ಟರಲ್ಲಿ ನಾಗಭೂಷಣ ಒಂದು ಕೋಳಿಯನ್ನು ತಂದು ಚಾಕುವಿಗೆ ಅಡ್ಡ ಇಟ್ಟನು. ಕೋಳಿ ಕತ್ತರಿಸಿ ಅದರ ರಕ್ತ ಚಾಕುವಿಗೆ ಹತ್ತಿತು. ಆಗ ಚಾಕುವಿನ ವೇಗ ಕಡಿಮೆಯಾಗಿ ನಿಧಾನವಾಗಿ ತಿರುಗುತ್ತಿದೆ. ನಿಧಾನವಾಗಿ ತಿರುಗುವ ಚಾಕುವನ್ನು ಸುಲಭವಾಗಿ ಹಿಡಿದುಕೊಳ್ಳಬಹುದೆಂದು ನಾಗಭೂಷಣ ಅಂದುಕೊಂಡಿದ್ದಾನೆ. ಆ ರೀತಿ ವೇಗ ತಗ್ಗಿದ ಚಾಕುವನ್ನು ಸುಲಭವಾಗಿ ಹಿಡಿದುಕೊಳ್ಳುತ್ತಾನೆಂದು ತಿಳಿದ ಮಲ್ಲಯ್ಯತಾತ ಕೂಡಲೇ ಎದ್ದು ಬಂದು, ತನ್ನ ಹತ್ತಿರವಿರುವ ಚೀಲದಿಂದ ಯಾವುದೋ ಎಲೆಯನ್ನು

ತೆಗೆದು ಮಂತ್ರಿಸಿ ರಂಗೋಲಿಯೊಳಗೆ ಚೆಲ್ಲಿದನು. ಹಾಗೆ ಚಲ್ಲಲಾದ ಎಲೆಗಳೆಲ್ಲವೂ ಚೇಳುಗಳಾಗಿ ಬದಲಾಗಿ ರಂಗೋಲಿಯ ತುಂಬಾ ನಿಂತವು. ನಾಗಭೂಷಣ ಚೇಳುಗಳನ್ನು ಲೆಕ್ಕಿಸದೆ ರಂಗೋಲಿಯೊಳಗೆ ಹೆಜ್ಜೆ ಇಟ್ಟಕೂಡಲೇ ಆತನಿಗೆ ಹತ್ತಿರವಾಗಿರುವ ಒಂದು ಚೇಳು ಓಡಿ ಬಂದು ನಾಗಭೂಷಣನ ಕಾಲಿಗೆ ಕಚ್ಚಿತು. ಚೇಳು ಕಚ್ಚುತ್ತಿದ್ದಂತೆ ಬೆಂಕಿ ಕೆಂಡ ಸುಟ್ಟಂತಾಗಿದೆ. ಕೂಡಲೇ ಆತನು ರಂಗೋಲಿ ಹೊರಗೆ ಹೋಗಿ ಚೇಳಿನ ವಿಷಕ್ಕೆ ಬಾಧೆಪಡುತ್ತಾ ಕೆಳಗೆ ಕುಳಿತನು. ಅದು ವಿಪರೀತವಾದ ಬಾಧೆ ಇದೆ. ಆ ಬಾಧೆಯನ್ನು ನಿವಾರಿಸಿಕೊಳ್ಳುವುದಕ್ಕೆ ವಿಷನಿವಾರಣ ಮಂತ್ರವನ್ನು ಮಂತ್ರಿಸಿಕೊಂಡು ಬಾಧೆಯನ್ನು ನಿವಾರಿಸಿಕೊಂಡು ಎದ್ದು ಮುಂದಕ್ಕೆ ಹೋದನು. ಅಲ್ಲಿರುವ ಚೇಳುಗಳು ನೋಡುವುದಕ್ಕೆ ತಯಾರಾಗಿರುವವಲ್ಲ. ಎಲ್ಲಾ ವಿಷ ತುಂಬಿಕೊಂಡಿರುವ ಚೇಳುಗಳೆಂದು ತಿಳಿದುಹೋಯಿತು. ಆದ್ದರಿಂದ ಅದಕ್ಕೆ ಮೇಲ್ಗೈಯಾಗಿ ನಾಗಭೂಷಣನು ಭೂಮಿಮೇಲೆ ಒಂದು ತ್ರಿಕೋನ ಆಕಾರವನ್ನು ಗೀಚಿ ಅದರಲ್ಲಿ ಬೀಜಾಕ್ಷರಗಳನ್ನು ಬರೆದು ಮಂತ್ರಿಸಿದಾಗ, ತಕ್ಷಣವೇ ಆಕಾಶದಿಂದ ಪಕ್ಷಿಗಳ ಗುಂಪು ಬಂದು ಚೇಳುಗಳನ್ನೆಲ್ಲಾ ಎತ್ತಿಕೊಂಡು ಹೋಗಿವೆ. ಅದು ಪ್ರೇಕ್ಷಕರಿಗೆ ವಿಚಿತ್ರವಾಗಿ ಕಾಣಿಸಿತು. ಆಗ ನಿಧಾನವಾಗಿ ತಿರುಗುತ್ತಿರುವ ಚಾಕುವನ್ನು ನಾಗಭೂಷಣ ಸುಲಭವಾಗಿ ಹಿಡಿದು ಹೊರಗೆ ಹಾಕಿದ್ದಾನೆ.

ಎರಡು ರಂಗೋಲಿಗಳನ್ನು ಜಯಿಸಿದ ನಾಗಭೂಷಣ ಮೂರನೆ ರಂಗೋಲಿಯೊಳಗಿನ ನಿಂಬೆಹಣ್ಣನ್ನು ತೆಗೆಯುವುದಕ್ಕೆ ನಾನು ಸಿದ್ಧವೆಂದಿದ್ದಾನೆ. ಆಗ ಮಂತ್ರಗಳ ಮಲ್ಲಯ್ಯ ತಾತ ಮೂರನೆ ರಂಗೋಲಿ ಸುತ್ತಾ ತಿರಿಗಿ ಬಂದು, ಒಂದು ಚಾಟಿ ಕೈಯ್ಯಲ್ಲಿ ಹಿಡಿದುಕೊಂಡು ದೂರವಾಗಿ ನಿಂತು ಇನ್ನು ಪ್ರಾರಂಭಿಸೆಂದು ಹೇಳಿದ್ದಾನೆ. ಆಗ ನಾಗಭೂಷಣ ನಿಂಬೆಹಣ್ಣು ಇರುವ ರಂಗೋಲಿಯೊಳಗೆ ಬಂದನು. ಪಕ್ಕದಲ್ಲಿ ನಿಂತಿರುವ ಮುದುಕನು ತನ್ನ ಚಾಟಿಯನ್ನು ಗಾಳಿಯೊಳಗೆ ಹೊಡೆದಂತೆ ಬೀಸಿದನು. ದೂರವಾಗಿ ಗಾಳಿಯಲ್ಲಿ ಹೊಡೆದ ಚಾಟಿಯ ಏಟು ನಾಗಭೂಷಣನಿಗೆ ತಾಕಿ ಶರೀರಕ್ಕೆ ಬರೆ ಬಿದ್ದಿತು. ಆ ರೀತಿ ಮುದುಕನು ಗಾಳಿಯಲ್ಲಿ ಹೊಡೆಯುತ್ತಿರುವಾಗ ರಂಗೋಲಿಯೊಳಗಿನ ನಾಗಭೂಷಣನಿಗೆ ಆ ಹೊದೆಗಳು ತಾಕುತ್ತಲೇ ಇವೆ. ಅವುಗಳನ್ನು ಲೆಕ್ಕ ಮಾಡದೇ ಆತನು ನಿಂಬೆಹಣ್ಣನ್ನು ತೆಗೆಯಲು ಹೋಗಿದ್ದಾನೆ.

ಆದರೆ ಆ ನಿಂಬೆಹಣ್ಣು ಆಕಾಶದೊಳಗೆ ಹಾರಿಹೋಯಿತು. ಅದು ಮೇಲಕ್ಕೆ ಹೋದಾಗ ಕೆಳಗೆ ಚಾಟಿ ಏಟಿಗೆ ತಾಳಲಾರದೆ ನಾಗಭೂಷಣ ರಂಗೋಲಿ ಹೊರಗೆ ಬಂದಿದ್ದಾನೆ. ಹೊರಗೆ ಬಂದಿರುವ ನಾಗಭೂಷಣ ತಾನೂ ಸಹ ಯಾವುದೋ ಮಂತ್ರೋಚ್ಛಾಟನೆ ಮಾಡಿದಾಗ ಮುದುಕನ ಚಾಟಿ ಚೂರುಚೂರಾಗಿ ಸಿಡಿದುಹೋಯಿತು. ಆಕಾಶದೊಳಗೆ ಹಾರಿಹೋದ ನಿಂಬೆಹಣ್ಣು ಪುನಃ ಕೆಳಗೆ ಬಂದು ಮುಗುಟಿ (ಮಣ್ಣಿನ ತಟ್ಟೆ) ಯಲ್ಲಿ ನಿಂತುಹೋಯಿತು. ಆಗ ಪುನಃ ನಾಗಭೂಷಣ ರಂಗೋಲಿಯೊಳಗೆ ಹೋದನು. ಆಗ ಮಲ್ಲಯ್ಯ ತಾತ ನನ್ನ ಆಕಾಶಮೋಡಿ ಫಲಿಸಲಿ ಎಂದ ಕೂಡಲೇ ನಿಂಬೆಹಣ್ಣು ಮೇಲಕ್ಕೆ ಹಾರಿಹೋಯಿತು. ಕಾಣಿಸದಂತೆ ಆಕಾಶದೊಳಗೆ ಹಾರಿಹೋದ ನಿಂಬೆಹಣ್ಣನ್ನು ಹೇಗೆ ಬರುವಂತೆ ಮಾಡಬೇಕೊ ನಾಗಭೂಷಣನಿಗೆ ತಿಳಿಯದೆ ಮೇಲಕ್ಕೆ ನೋಡುತ್ತಾ ನಿಂತುಹೋದನು. ಭೂಮಿ ಮೇಲೆ ಎಲ್ಲಾ ಮೋಡಿಗಳನ್ನು ನೋಡಿದ ನಾಗಭೂಷಣನಿಗೆ ಆಕಾಶಮೋಡಿ ವಿಧಾನ ಏನೂ ಅರ್ಥವಾಗಲಿಲ್ಲ. ಆದ್ದರಿಂದ ರಂಗೋಲಿ ಒಳಗಿನಿಂದ ಹೊರಗೆ ಬಂದಿದ್ದಾನೆ. ಆತನು ಹೊರಗೆ ಬಂದ ಕೂಡಲೇ ನಿಂಬೆಹಣ್ಣು ಪುನಃ ಬಂದು ಮುಗುಟಿಯಲ್ಲಿ ನಿಂತಿತು. ಮೂರನೆ ಸಲ ಪ್ರಯತ್ನಿಸಬೇಕೆಂದುಕೊಂಡ ನಾಗ ಭೂಷಣನಿಗೆ ಒಂದು ಆಲೋಚನೆ ಬಂದಿತು. ಈ ಸಲ ನಿಂಬೆಹಣ್ಣು ಆಕಾಶದೊಳಗೆ ಹಾರಿದ ಕೂಡಲೇ ಕೆಳಗೆ ಮುಗುಟಿಯನ್ನು ತೆಗೆದುಹಾಕಬೇ ಕೆಂದುಕೊಂಡಿದ್ದಾನೆ. ಆತನು ಮೂರನೆ ಸಲ ರಂಗೋಲಿಯೊಳಗೆ ಹೋದನು. ಆಗಲೂ ಸಹ ಮೊದಲಿನಂತೆ ನಿಂಬೆಹಣ್ಣು ಮೇಲಕ್ಕೆ ಹಾರಿಹೋಯಿತು. ಆರೀತಿ ಅದು ಮೇಲಕ್ಕೆ ಹೋದ ಕೂಡಲೇ ಅಲ್ಲಿರುವ ಮುಗುಟಿಯನ್ನು ತೆಗೆದುಕೊಂಡು ಹೊರಗೆ ಬಂದಿದ್ದಾನೆ. ನಾಗಭೂಷಣ ಹೊರಗೆ ಬಂದಕೂಡಲೇ ನಿಂಬೆಕಾಯಿ ಕೆಳಗೆ ಬಂದು ನೆಲದ ಮೇಲೆ ನಿಂತಿತು. ನಾಲ್ಕನೆ ಸಲ ಆತನು ರಂಗೋಲಿಯೊಳಗೆ ಹೋದ ನಿಂಬೆಹಣ್ಣು ಮೇಲಕ್ಕೆ ಹಾರಿಹೋಗಲಿಲ್ಲ. ಅದರ ರಹಸ್ಯವೆಲ್ಲಾ ಮುಗುಟಿಯಲ್ಲೇ ಇದೆಯೆಂದುಕೊಂಡ ನಾಗಭೂಷಣ ನಿಂಬೆಹಣ್ಣನ್ನು ಹೊರಗೆ ಹಾಕಿದ್ದಾನೆ. ಆಗ ಅಲ್ಲಿರುವವರೆಲ್ಲಾ ಚಪ್ಪಾಳೆ ಹೊಡೆದರು. ನಾಗಭೂಷಣ ಬುದ್ಧಿವಂತಿಗೆಯಿಂದ ಕೆಲಸ ಮಾಡಿದ್ದಾನೆಂದು ಎಲ್ಲರೂ ಅಂದುಕೊಂಡಿದ್ದಾರೆ.

ನಾಲ್ಕನೆ ರಂಗೋಲಿಯೊಳಗೆ ಹೋಗುವುದಕ್ಕೆ ನಾನು ಸಿದ್ಧ ಎಂದು ನಾಗಭೂಷಣ ಹೇಳಿದ್ದಾನೆ. ಮಲ್ಲಯ್ಯ ತಾತ ಪ್ರಯತ್ನಿಸೆಂದು ಹೇಳಿ ರಂಗೋಲಿ ಪಕ್ಕದಲ್ಲಿ ಕುಳಿತುಕೊಂಡು ಕಾಟೇರಿ, ಮಂತ್ರವನ್ನು ಓದಲಾರಂಭಿಸಿದನು. ಆ ವೃದ್ಧನಿಗೆ ವಶದಲ್ಲಿರುವ ಕಾಟೇರಿ ಮಲ್ಲಯ್ಯ ತನ್ನ ಮಂತ್ರವನ್ನು ಓದಿದ ಕೂಡಲೇ ಆಲದ ಮರದ ಹತ್ತಿರದಿಂದ ಒಂದು ಕ್ಷಣದಲ್ಲಿ ಅಲ್ಲಿಗೆ ಬಂದು, ನಾಲ್ಕನೆ ರಂಗೋಲಿಯೊಳಗಿರುವ ಬಟ್ಟೆ ಗೊಂಬೆಯೊಳಗೆ ಆವರಿಸಿತು. ಇನ್ನು ಆರಂಭಿಸೆಂದು ಮಲ್ಲಯ್ಯ ತಾತ ಹೇಳಿದಾಗ ನಾಗಭೂಷಣ ರಂಗೋಲಿಯೊಳಗೆ ಬಂದು ಗೊಂಬೆಯನ್ನು ಹಿಡಿಯಲು ಹೋದನು. ಆ ಗೊಂಬೆ ಕೈಚಾಚಿ ಒಂದು ಏಟು ಹೊಡೆಯಿತು. ಆ ಏಟಿಗೆ ನಾಗಭೂಷಣನ ಕಣ್ಣು ತಿರುಗಿ ರಂಗೋಲಿನ ಹೊರಗೆ ಬಿದ್ದನು. ಕೆಳಗೆ ಬಿದ್ದ ನಾಗಭೂಷಣ ಪ್ರಜ್ಞೆ ತಪ್ಪಿದನು. ಅದು ಗಮನಿಸಿದವರು ನೀರು ತಂದು ಮುಖದ ಮೇಲೆಹಾಕಿದಾಗ ಆತನಿಗೆ ಪ್ರಜ್ಞೆ ಬಂದಿತು. ಪ್ರಜ್ಞೆ ಬಂದ ನಂತರ ಕೆಲವಾರು ಮಂತ್ರಗಳನ್ನು ಓದುತ್ತಾ ರಂಗೋಲಿಯೊಳಗೆ ಬಂದ ಕೂಡಲೇ ಗೊಂಬೆಯಲ್ಲಿ ಸೇರಿಕೊಂಡ ಕಾಟೇರಿ ಪುನಃ ಒಂದು ಏಟು ಹೊಡೆಯಿತು. ಆ ಏಟಿಗೆ ನಾಗಭೂಷಣ ಮೂಳೆಗಳು ಮುರಿದಂತಾದವು. ಬಾಯಿಂದ ರಕ್ತ ಹೊರಗೆ ಬಂದಿತು. ಕಾಲಿನ ಕೆಳಗೆ ಭೂಮಿ ಕಂಪಿಸಿದಂತಾಯಿತು. ಎರಡನೆ ಸಲ ಕೂಡಾ ಕೆಳಗೆ ಬಿದ್ದನು. ಏಳುವುದಕ್ಕೆ ತನ್ನ ಶರೀರದಲ್ಲಿ ಶಕ್ತಿ ಇಲ್ಲ. ಇನ್ನು ನನ್ನ ಕೈಲಾಗುವುದಿಲ್ಲ ಎಂದುಕೊಂಡ ಆತನು ಬಹಳ ಕಷ್ಟದಮೇಲೆ ಮೇಲಕ್ಕೆ ಎದ್ದು ಭೈರವಮಂತ್ರವನ್ನು ಉಪಯೋಗಿಸಿದನು. ಭೈರವಮಂತ್ರ ಪ್ರಯೋಗದಿಂದ ಗೊಂಬೆ ಕದಲದೆ ಒಂದು ಕಡೆ ನಿಂತುಹೋಯಿತು. ಅದೇ ಸಮಯವೆಂದುಕೊಂಡ ನಾಗಭೂಷಣ ರಂಗೋಲಿಯೊಳಗೆ ಹೋಗಿ ಗೊಂಬೆಯನ್ನು ಹಿಡಿದುಕೊಂಡಿದ್ದಾನೆ. ಆಗ ಅದು ಆತನನ್ನು ಏನೂ ಮಾಡಲಿಲ್ಲ. ಆಗ ನಾಗಭೂಷಣನಿಗೆ ಸ್ವಲ್ಪ ಧೈರ್ಯ ಬಂದಿತು. ಗೊಂಬೆಯನ್ನು ಎತ್ತಿ ಹೊರಗೆ ಹಾಕಬೇಕೆಂದುಕೊಂಡಿದ್ದಾನೆ. ಆದರೆ ಗೊಂಬೆ ಮಾತ್ರ ಕದಲಲಿಲ್ಲ.

ಅಷ್ಟರಲ್ಲಿ ಹೊರಗಿರುವ ಮಲ್ಲಯ್ಯ ತಾತ "ಕಾಟೇರೀ ನಿನ್ನ ಬಲ ಏನೋ ಈಗಲೇ ತೋರಿಸು, ನನ್ನ ಮಂತ್ರಬಲ ಎಂತಹದೋ ನಿರೂಪಿಸು" ಎಂದನು. ಆ

ಮಾತನ್ನು ಕೇಳಿದ ಗೊಂಬೆ ನಾಗಭೂಷಣನನ್ನು ಬಿಡಿಸಿಕೊಂಡಿತು, ಅದು ಬಿಡಿಸಿಕೊಂಡಿರುವುದಕ್ಕೆ ತಾನು ಬಿಸಾಡಿದ ಹಾಗೆ ದೂರದಲ್ಲಿ ಬಿದ್ದನು. ದೂರದಲ್ಲಿ ಬಿದ್ದ ಆತನು ನೀಶ್ಶಕ್ತಿಯಿಂದ ತೆಪ್ಪಗೆ ಮೇಲಕ್ಕೆದ್ದು ಈ ಸಲ ಭೈರವಮಂತ್ರವನ್ನು ಮತ್ತು ಭೇತಾಳ ಮಂತ್ರವನ್ನು ಜಪಿಸುತ್ತಾ ಗೊಂಬೆಯಮೇಲೆ ಮರಳನ್ನು ಹಾಕಿ, ರಂಗೋಲಿಯೊಳಗೆ ಬಂದು ಗೊಂಬೆಯನ್ನು ಹಿಡಿದುಕೊಳ್ಳಬೇಕೆಂದುಕೊಂಡನು. ಆತನ ಮಂತ್ರಬಲದಿಂದ ಭೈರವನು, ಭೇತಾಳನು ಇಬ್ಬರೂ ಬಂದರೂ ಕಾಟೇರಿಯನ್ನು ಏನೂ ಮಾಡಲಾರದೆ ಹೋದರು. ಮುದುಕನು ಮಂತ್ರಿಸಿದ ಮಂತ್ರಕ್ಕೆ ಅವರು ಕಟ್ಟುಬಿದ್ದರು. ನಾಲ್ಕನೆ ಸಲ ರಂಗೋಲಿಯೊಳಗೆ ಬಂದು ತನ್ನನ್ನು ಹಿಡಿಯಲು ಹೋದ ನಾಗಭೂಷಣನನ್ನು ಕಾಟೇರಿಶಕ್ತಿ ಮತ್ತೊಂದು ಏಟು ಹೊಡೆಯಿತು. ಆ ಏಟಿಗೆ ಆತನು ಕಿರುಚುತ್ತಾ ಹೊರಬಂದು ಇನ್ನು ಹೆಚ್ಚಿನ ಕೋಪದಿಂದ ಎದ್ದು ನಿಂತು ತನ್ನ ಸೊಂಟಕ್ಕೆ ಇರುವ ಉಡುದಾರವನ್ನು ಕಿತ್ತು, ಕೈಯ್ಯಲ್ಲಿ ಹಿಡಿದುಕೊಂಡು, ಆ ದಾರಕ್ಕೆ ಇರುವ ತಾಯತಗಳೆಲ್ಲವನ್ನೂ ತೋರಿಸುತ್ತಾ ನಾಗಭೈರವ ಮಂತ್ರವನ್ನು ಓದಿ ಮುದುಕನ ಮೇಲೆ ಪ್ರಯೋಗಿಸಿದನು. ಆಗ ಮಲ್ಲಯ್ಯ ತಾತನ ಶರೀರವೆಲ್ಲಾ ಉರಿಗಳು ಬಂದವು. ಹಾವು ಸುತ್ತಿಕೊಂಡಂತೆ ಶರೀರವೆಲ್ಲಾ ನುಲಿಯುತ್ತಾ ಹೋಗತೊಡಗಿದನು. ಹಾವು ಕಚ್ಚಿದವನಿಗೆ ಬಾಯಲ್ಲಿ ನೊರೆ ಬಂದಂತೆ ನೊರೆಬಂದು ಜ್ಞಾಪಕ ಕಳೆದುಕೊಂಡನು. ಇದೇ ಸಮಯವೆಂದು ತಿಳಿದ ನಾಗಭೂಷಣನು ಯಾವ್ಯಾವೋ ಮಂತ್ರಗಳು ಓದುತ್ತಾ ರಂಗೋಲಿಯೊಳಗೆ ಹೋಗಿ ಗೊಂಬೆಯನ್ನು ಹಿಡಿಯಲು ಯತ್ನಿಸಿದನು. ಆ ಗೊಂಬೆ ಈ ಸಲ ಜೋರಾಗಿ ಹೊಡೆಯಿತು. ಆ ಏಟಿಗೆ ಮುಲುಗುತ್ತಾ ಹೊರಗೆ ಬಿದ್ದು ಜ್ಞಾಪಕವನ್ನು ಕಳೆದುಕೊಂಡನು. ಇತ್ತ ಮುದುಕನು, ಅತ್ತ ನಾಗಭೂಷಣ ಇಬ್ಬರೂ ಜ್ಞಾಪಕವನ್ನು ಕಳೆದುಕೊಂಡಿದ್ದಾರೆಂದು ತಿಳಿದ ಪ್ರಜೆಗಳು ವೈದ್ಯರನ್ನು ಕರೆತಂದು ತೋರಿಸಿದರು. ಇಬ್ಬರೂ ಅರ್ಧಗಂಟೆ ನಂತರ ಜ್ಞಾಪಕದೊಳಗೆ ಬಂದಿದ್ದಾರೆ. ಆಗ ಯಾರು ಗೆದ್ದಿರುವುದೂ ಅರ್ಥವಾಗದೇ ನಿಮ್ಮಲ್ಲಿ ಯಾರು ಗೆದ್ದೀರ ಎಂದು ಪ್ರಜೆಗಳು ಕೇಳಿದ್ದಾರೆ. ಆಗ ಮಲ್ಲಯ್ಯ ತಾತ ವೇದಿಕೆಯನ್ನು ಹತ್ತಿ "ಐದು ಸಲ ಪ್ರಯತ್ನಿಸಿ ಕೊನೆಗೆ ಗೊಂಬೆಯನ್ನು ತೆಗೆಯದೆ ನಿರ್ಬಲವಾಗಿ ಹೊರಬಂದ ನಾಗಭೂಷಣ ಸೋತುಹೋಗಿದ್ದಾನೆ. ನಾಲ್ಕನೆ ಸಲ

ಗೊಂಬೆಯನ್ನು ಹೊರಗೆ ತೆಗೆದು ಕೊನೆಯಲ್ಲಿರುವ ಐದನೇ ರಂಗೋಲಿಯೊಳಗಿನ ರೂಪಾಯನ್ನು ಹೊರಗೆ ತಂದಾಗಲೇ ಗೆದ್ದಂತಾಗುತ್ತದೆ. ನಾಗಭೂಷಣ ನಾಲ್ಕನೆ ರಂಗೋಲಿಯೊಳಗೆ ಕೈಲಾಗದವನಾಗಿ ನಿಶ್ಶಕ್ತನಾಗಿ ಹೋದನು. ಗೊಂಬೆಯನ್ನು ಹೊರಗೆ ತೆಗೆಯಲಿಲ್ಲ. ಆದ್ದರಿಂದ ಆತನು ಸೋತುಹೋದಂತೆ ಎಂದು" ಹೇಳಿದಾಗ, ನಾಗಭೂಷಣನು ಸಹ ವೇದಿಕೆಯನ್ನು ಹತ್ತಿ "ನಾನೊಬ್ಬ ದೊಡ್ಡ ಮಾಂತ್ರಿಕನೆಂದು, ನನಗಿಂತ ಮೀರಿದವನಿಲ್ಲವೆಂದುಕೊಂಡ ನನ್ನ ಗರ್ವವೆಲ್ಲ ಈ ದಿನ ನುಚ್ಚುನೂರಾಯಿತು. ಮಂತ್ರವಿದ್ಯೆಯಲ್ಲಿ ಈ ವೃದ್ಧನ ಕೈಯ್ಯಲ್ಲಿ ನಾನು ಪೂರ್ತಿಯಾಗಿ ಸೋತುಹೋಗಿದ್ದೇನೆಂದು ಒಪ್ಪಿಕೊಳ್ಳುತ್ತಿದ್ದೇನೆ. ಇಂತಹ ಮೋಡಿಯನ್ನು ನಾನೆಂದೂ ನೋಡಲಿಲ್ಲ. ಕದಲದ ವಸ್ತುಗಳಿಗೆ ಕದಲಿಕೆಯನ್ನು ಕೈಗೂಡಿಸಿ, ಅವುಗಳಿಂದ ತಂತು ನಡೆಸಿದ ಈ ಮಲ್ಲಯ್ಯ ತಾತನನ್ನು ಹೊಗಳದಂತೆ ಇರಲಾರೆನು." ಎಂದನು. ಆಗ ಜನರೆಲ್ಲರೂ ಚಪ್ಪಾಳೆ ಹೊಡೆದರು.

ಅಷ್ಟರಲ್ಲಿ ಮಲ್ಲಯ್ಯ ತಾತ ಮಾತನಾಡುತ್ತಾ "ನಿಮ್ಮೆಲ್ಲರ ನಡುವೆ ನಾಗಭೂಷಣ ನನ್ನನ್ನು ದೊಡ್ಡದಾಗಿ ಹೇಳುವುದು ನನಗೆ ಎಷ್ಟೋ ಸಂತೋಷವಾಗಿ ಇದೆ. ಪ್ರಾಣಕ್ಕೆ ಅಪಾಯ ಬಂದರೂ ಕೊನೆಯ ಪ್ರಯತ್ನದವರೆಗು ಸಾಗುವುದು ಮೋಡಿ. ಇದರಲ್ಲಿ ಒಂದೊಂದು ಸಲ ಮರಣವಾದರೂ ಸಂಭವಿಸಬಹುದು. ಅಂತಹ ಸ್ಥಿತಿ ನಮಗೆ ಏರ್ಪಟ್ಟಾಗ ನೀವು ಚಿಕಿತ್ಸೆಯನ್ನು ಮಾಡಿ ಕಾಪಾಡಿದ್ದಕ್ಕೆ ನಿಮಗೆ ಎಷ್ಟೋ ಋಣದಲ್ಲಿದ್ದೇವೆ. ಇದು ಆಕಾಶ ಮೋಡಿ, ಈ ಮೋಡಿಯಲ್ಲಿ ಮೊದಲ ನಾಲ್ಕು ರಂಗೋಲಿಗಳನ್ನು ದಾಟಿ ಬಂದರೂ, ಐದನೆ ರಂಗೋಲಿಯಲ್ಲಿ ಗೆದ್ದು ರೂಪಾಯನ್ನು ಹೊರಗೆ ತರಲಾರರು. ಐದನೆ ರಂಗೋಲಿಯಲ್ಲಿ ಪ್ರವೇಶಿಸಿದ ಎಂತಹ ಮಾಂತ್ರಿಕನಿಗಾದರೂ ಕಣ್ಣು ಕಾಣಿಸುವುದಿಲ್ಲ. ತಲೆ ಹೊಡೆದುಹೋಗುವಷ್ಟು ಶಬ್ದ ಅವನಿಗೆ ಕೇಳಿಸುತ್ತಿರುತ್ತದೆ. ಆ ಶಬ್ಧಕ್ಕೆ ಯಾರೂ ಒಳಗೆ ಇರಲಾರರು. ಕೆಳಗೆ ಕಾಲುಗಳು ಮಂಜು ಗಡ್ಡೆಯ ಮೇಲೆ ಊರಿದಂತಿರುತ್ತದೆ. ಶರೀರದಲ್ಲಿ ಶೂಲಗಳಿಂದ ಚುಚ್ಚಿದಂತಾಗುತ್ತದೆ. ರೂಪಾಯಿ ನಾಣ್ಯ ಆಕಾಶದೊಳಗೆ ಹೋಗುತ್ತದೆ. ಆಗ ಅಕ್ಕಿ ನೂರು ಮೈಲಿ ವೇಗದಿಂದ ಬಂದು ಮುಖಕ್ಕೆ ಹೊಡೆದುಕೊಳ್ಳುತ್ತಿರುತ್ತವೆ. ಹೇಳಬೇಕೆಂದರೆ ಒಟ್ಟಿನಲ್ಲಿ ಈ ಆಕಾಶಮೋಡಿ ಬಹಳ ಕಷ್ಟವಾದದ್ದು. ಆದರೂ

ಒಂದು ದ್ವಾರ ಮೂರು ರಂಗೋಲಿಗಳನ್ನು ದಾಟಿ ಬಂದಿರುವ ನಾಗಭೂಷಣ ಸೋತುಹೋದರೂ ಆತನು ದೊಡ್ಡವನೇ ಎಂದು ಹೇಳಬಲ್ಲೆನು" ಎಂದನು. ಎಲ್ಲರ ಸಮಕ್ಷಮದಲ್ಲಿ ಇಬ್ಬರೂ ಅಪ್ಪಿಕೊಂಡರು. ಪ್ರಜೆಗಳೆಲ್ಲರೂ ಮಾಂತ್ರಿಕರನ್ನು ಇಬ್ಬರನ್ನೂ ಹೊಗಳುತ್ತಿರುವಾಗ, ಮುನೆಪ್ಪ ಮನುಷ್ಯರು ನಿಧಾನವಾಗಿ ಅವರ ಪಕ್ಕಕ್ಕೆ ಸೇರಿ "ನಿಮ್ಮ ಕೆಲಸ ಮುಗಿದಿದೆ ಅಲ್ಲವೆ! ಇನ್ನು ನಮ್ಮ ಕೆಲಸ ನೋಡಿ." ಎಂದು ಜ್ಞಾಪಕ ಮಾಡಿದರು. ಇಬ್ಬರು ಮಾಂತ್ರಿಕರು ಜೊತೆಯಾಗಿರುವುದರಿಂದ ತಮ್ಮ ಕೆಲಸ ಸುಲಭವಾಗಿ ಮುಗಿಯುತ್ತದೆಂದುಕೊಂಡರು.

**********************************

(ಹೊಟ್ಟೆ ನೋವಿನಿಂದ ಆ ದಿನ ಬಂದಿರುವ ಯುವಕನನ್ನು ರಾಜಯೋಗಾ ನಂದ ಸ್ವಾಮಿಗೆ ರಾಘವ ತೋರಿಸಿದ್ದಾನೆ. ರಾಜಯೋಗಾನಂದ ಸ್ವಾಮಿ ಆ ಯುವಕನನ್ನು ಕರೆದು ತನ್ನ ಮುಂದೆ ಕುಳಿತುಕೊಳ್ಳಲು ಎಂದು ಹೇಳಿದನು. ಸ್ವಾಮಿ ಹೇಳಿದಂತೆ ಆ ಯುವಕನು ಸ್ವಾಮಿ ಮುಂದೆ ಸ್ವಾಮಿಗೆ ಎದುರುಗಡೆ ಕುಳಿತುಕೊಂಡಿದ್ದಾನೆ. ಆಗ ರಾಜಯೋಗಾನಂದ ಸ್ವಾಮಿ ಆತನ ಕಡೆ ನೋಡುತ್ತಾ ಆತನ ಒಳಗಿರುವ ಗ್ರಹ ಯಾರೋ ಹೊರಗೆ ಬಾ ಎಂದು ಹೇಳಿದನು. ಸ್ವಾಮಿ ಆ ಮಾತು ಹೇಳಿದ ಕೂಡಲೇ ಆ ಯುವಕನಿಗೆ ಶ್ವಾಸವು ಹೆಚ್ಚಾಗತೊಡಗಿತು. ನಂತರ ಆತನಿಗೆ ಪ್ರಜ್ಞೆ ಇಲ್ಲದಂತಾಯಿತು. ಒಳಗಿರುವ ಗ್ರಹ ಹೊರಗೆ ಬಂದು ಮಾತನಾಡುವುದಕ್ಕೆ ಪ್ರಾರಂಭಿಸಿತು.)

**ದೆವ್ವ :–** ನನ್ನನ್ನು ಏಕೆ ಕರೆದಿದ್ದೀರಾ?

**ಸ್ವಾಮಿ :–** ನಿನ್ನೊಂದಿಗೆ ಮಾತನಾಡುವ ಅವಶ್ಯವಿದ್ದು ಕರೆದಿದ್ದೇವೆ. ನೀನು ಯಾರೋ ಹೇಳು. ಈ ಮನುಷ್ಯನಲ್ಲಿ ಏಕಿದ್ದೀಯಾ ಹೇಳು.

**ದೆವ್ವ :–** ನೀವು ಕೇಳಿದರೆ ನಾನು ಹೇಳಬೇಕಾ! ನಾನು ಹೇಳುವುದಿಲ್ಲ. ನಿನಗೆ ಇಷ್ಟ ಬಂದ ಕೆಲಸ ಮಾಡಿಕೊ.

**ಸ್ವಾಮಿ :–** ನಾನ್ಯಾರೋ ನಿನಗೆ ತಿಳಿಯದೆ ಹಾಗೆ ಮಾತನಾಡುತ್ತಿದ್ದೀಯ. ಒಂದುಸಲ ನನ್ನ ಕಡೆ ನೋಡು ನಾನ್ಯಾರೋ ತಿಳಿಯುತ್ತದೆ.

(ಆಗ ಆ ಗ್ರಹ ತಲೆ ಎತ್ತಿ ಸ್ವಾಮಿ ಮುಖದ ಕಡೆ ನೋಡಿತು. ಕೂಡಲೇ ತಲೆ ತಗ್ಗಿಸಿಕೊಂಡು ನೋಡಲಾರೆನೆಂದು ಹೇಳಿತು.)

**ಸ್ವಾಮಿ :–** ಈಗ ಹೇಳು. ನೀನು ಎಷ್ಟು ಕಾಲದಿಂದ ಈತನ ಶರೀರದಲ್ಲಿ ಇದ್ದೀಯ? ಏಕೆ ಬಂದಿದ್ದೀಯ.

**ದೆವ್ವ :–** ನಾನೊಬ್ಬ ಸ್ತ್ರೀ, ನನ್ನ ಹೆಸರು ಸತ್ಯವತಿ. ನಾನು ಬದುಕಿರುವಾಗ ಒಬ್ಬ ವ್ಯಕ್ತಿ ಕೈಯ್ಯಲ್ಲಿ ಮೋಸಹೋಗಿ, ವಿವಾಹವಾಗದೇ ಗರ್ಭವತಿಯಾಗಿ ಸಮಾಜದಲ್ಲಿ ಬದುಕಲಾರದೆ, ಆತ್ಮಹತ್ಯೆ ಮಾಡಿಕೊಂಡು ಸತ್ತುಹೋದವಳು. ಸತ್ತುಹೋಗುವುದಕ್ಕಿಂತ ಮೊದಲು ಜೀವನವನ್ನು ಕುರಿತು ಎಷ್ಟೋ ಕನಸುಗಳು ಕಂಡ ನಾನು ಈ ವಿಧವಾಗಿ ಸೂಕ್ಷ್ಮರೂಪದಲ್ಲಿ ದೆವ್ವವಾಗಿ ಬದುಕಬೇಕಾಯಿತು. ನನ್ನಂತೆ ಯಾರೂ ಹೀಗಾಗಬಾರದೆಂಬುದೆ ನನ್ನ ಉದ್ದೇಶ. ಈಗ ನಿಮ್ಮ ಮುಂದಿರುವ ಯುವಕನು ಸಹ ಒಬ್ಬ ಯುವತಿಯನ್ನು ಮೋಸ ಮಾಡಿ, ಎಷ್ಟೋ ಸಿಹಿ ಯಾದ ಮಾತುಗಳನ್ನು ಹೇಳಿ, ಆಕೆಯನ್ನು ತನ್ನ ಹಿಂದೆ ದೂರ ಪ್ರಾಂತಕ್ಕೆ ತೆಗೆದುಕೊಂಡು ಹೋಗಿ, ಆಕೆಯನ್ನು ಒಂಟಿಯಾಗಿ ಬಿಟ್ಟು ಬಂದಿದ್ದಾನೆ. ಆ ನಿರ್ಭಾಗ್ಯಳು ಹೊಸ ಪ್ರಾಂತದಲ್ಲಿ ದಿಕ್ಕು ತಿಳಿಯದ ಸ್ಥಿತಿಯಲ್ಲಿ ಬಾಧೆಪಡುತ್ತಿರುವಾಗ, ನಾನು ಗ್ರಹಿಸಿ ಆಕೆ ಶರೀರದಲ್ಲಿ ಸೇರಿ, ಇಂತಹ ಒಂದು ಆಶ್ರಮಕ್ಕೆ ತೆಗೆದುಕೊಂಡುಹೋಗಿ, ಅಲ್ಲಿರುವ ಸ್ವಾಮಿನಿಯಾದ ಮಾತಾಜೀ ಹತ್ತಿರ ಬಿಟ್ಟು ಬಂದಿದ್ದೇನೆ. ಆಕೆ ಮಾತಾಜೀ ಹತ್ತಿರ ಶಿಷ್ಯಳಂತೆ ಉಳಿದಿದ್ದಾಳೆ. ಆಕೆಯನ್ನು ಮೋಸ ಮಾಡಿದ ವ್ಯಕ್ತಿಯನ್ನು ಆಕೆಯಿಂದ ತಿಳಿದುಕೊಂಡು, ಅಲ್ಲಿಂದ ಈತನ ಹತ್ತಿರಕ್ಕೆ ಬಂದಿದ್ದೇನೆ. ಈತನು ಹಣವಿರುವ ಕುಟುಂಬದ ಹೆಣ್ಣನ್ನು ಹೆಚ್ಚಿನ ವರದಕ್ಷಿಣೆ ತೆಗೆದುಕೊಂಡು ವಿವಾಹ ಮಾಡಿಕೊಂಡಿದ್ದಾನೆ. ಆದರೆ ಆತನ ಹೆಂಡತಿ ಯೊಂದಿಗೆ ಒಂದು ದಿನವೂ ಸಹ ಕಳೆಯಲಿಲ್ಲ. ಆಕೆ ಇಂದಿಗೂ ಕನ್ಯೆ ಆಗಿಯೇ ಇದ್ದಾಳೆ.

ಒಂದು ಸಮಯದಲ್ಲಿ ನಾನು ಕೆಟ್ಟುಹೋದವಳಾಗಿ ಬದುಕುವ ಧೈರ್ಯವಿಲ್ಲದೆ ಸತ್ತುಹೋಗಿದ್ದೇನೆ. ಸತ್ತುಹೋದರೆ ಇನ್ನು ನಾನು ಈ ಲೋಕದಲ್ಲಿ ಇಲ್ಲದಂತೆ ಹೋಗುತ್ತೇನೆನ್ನುವ ಉದ್ದೇಶದಿಂದ ಸತ್ತುಹೋಗಿದ್ದೇನೆ. ಆದರೆ

ಸತ್ತುಹೋಗಿರುವುದು ಬಾಹ್ಯ ಶರೀರವೊಂದೇ ಎಂದು ಸತ್ತುಹೋದನಂತರ ತಿಳಿಯಿತು. ನಾನು, ನಾನಾಗಿಯೇ ಉಳಿದಿದ್ದೇನೆ. ಕಾಣಿಸದ ರೂಪದಲ್ಲಿ ಅಲೆಯುತ್ತಿರುವ ನಾನು, ನನ್ನನ್ನು ಮೋಸ ಮಾಡಿದ ವ್ಯಕ್ತಿ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ಕೊಂಡಿದ್ದೇನೆ. ಆದರೆ ಆತನು ಆ ಸಮಯಕ್ಕೆ ನನ್ನನ್ನು ಕುರಿತು ಮನಸ್ಸಿನಲ್ಲಿ ಬಾಧೆಪಡುತ್ತಿರುವವನಾಗಿ ಜೀವನದ ಮೇಲೆ ಜಿಗುಪ್ಸೆಗೊಂಡು ಬದಲಾಗಿದ್ದಾನೆ. ಕೊನೆಗೆ ಆತನು ದೈವಜ್ಞಾನವನ್ನು ತಿಳಿದುಕೊಳ್ಳುತ್ತಾ ಜೀವನವನ್ನು ಕಳೆಯುತ್ತಿದ್ದಾನೆ. ಆದ್ದರಿಂದ ಆತನ ಮೇಲೆ ನನಗೆ ಕೋಪ ಕಡಿಮೆ ಆಯಿತು. ಆತನನ್ನು ಏನೂ ಮಾಡಲಾರದೇ ನನ್ನಂತೆ ಯಾರೂ ಬಾಧೆಪಡಬಾರದೆನ್ನುವ ಉದ್ದೇಶದಲ್ಲಿರುವ ನನಗೆ ಈ ದ್ರೋಹಿ ಕಾಣಿಸಿದ್ದಾನೆ. ಈತನು ಮಾಡಿದ ತಪ್ಪಿಗೆ ಶಿಕ್ಷೆಯಾಗಿ ಇವನಿಗೆ ಮದುವೆಯಾದರೂ ಇವನ ಹೆಂಡತಿಗೆ ದೂರವಾಗಿ ಇರುವಂತೆ ಮಾಡಿದ್ದೇನೆ. ಎಂದಿಗಾದರೂ ಇವನು ತನ್ನ ಮೊದಲ ಯುವತಿಯನ್ನು ಸೇರಬೇಕೆನ್ನುವುದು ನನ್ನ ಉದ್ದೇಶ.

ಇಲ್ಲಿಯವರೆಗೂ ಈತನಿಗಿರುವ ರೋಗವನ್ನನುಸರಿಸಿ ಎಷ್ಟೋ ಮಂದಿ ಭೂತವೈದ್ಯರು ಸಹ ಚಿಕಿತ್ಸೆ ಮಾಡಿದ್ದಾರೆ. ಆದರೆ ಪ್ರಯೋಜನವಿಲ್ಲ. ಕೆಲವರು ಮಾಂತ್ರಿಕರು ನನ್ನನ್ನು ಬಿಡಿಸಬೇಕೆಂದು ನೋಡಿದ್ದಾರೆ. ಅವರಿಂದ ಆಗಲಿಲ್ಲ. ನನ್ನ ಉದ್ದೇಶ ಬಲದ ಮುಂದೆ ಅವರ ಮಂತ್ರ ಬಲ ಏನೂ ಮಾಡಲಾರದೇ ಹೋಯಿತು. ನನ್ನ ಭಾವನೆಯನ್ನು ಅರ್ಥ ಮಾಡಿಕೊಳ್ಳುವ ವಿಶಾಲ ಹೃದಯ ಅವರಿಗಿರುವುದಿಲ್ಲ. ಆದ್ದರಿಂದ ಅವರಿಗೆ ಯಾರಿಗೂ ಈ ವಿಷಯ ಇಲ್ಲಿಯವರೆಗೂ ಹೇಳಲಿಲ್ಲ. ಈತನು ಮೋಸ ಮಾಡಿದ ಯುವತಿಯನ್ನು ಈತನೊಂದಿಗೆ ಸೇರುವಂತೆ ಬಾಹ್ಯವಾಗಿ ನಿಮ್ಮಂತಹವರ ಸಹಾಯದಿಂದಲೇ ನಡೆಯಬೇಕು. ಈಗ ಆ ಯುವತಿಯನ್ನು ಸೇರುವಂತೆ ನೀವು ಈತನಿಂದ ಒಪ್ಪಿಸಿಕೊಂಡರೇ, ನಾನು ಈತನ ಶರೀರದಿಂದ ಹೊರಗೆ ಹೋಗುತ್ತೇನೆ. ಇನ್ನು ನಿಮ್ಮ ಉದ್ದೇಶವೇನೋ ನೀವೇ ಹೇಳಿ.

(ಆ ಗ್ರಹ ಹೇಳಿದ ಮಾತುಗಳನ್ನು ಕೇಳಿ ಅಲ್ಲಿರುವವರೆಲ್ಲರೂ ಆಶ್ಚರ್ಯಪಟ್ಟರು. ಮುಖ್ಯವಾಗಿ ಆತನ ಹಿಂದೆ ಬಂದಿರುವವರಿಗೆ ಈ ವಿಷಯ ತಿಳಿದಿಲ್ಲ. ರಾಘವ ಎಷ್ಟೋ ಆಸಕ್ತಿಯಿಂದ ಈ ವಿಷಯವನ್ನು ಕೇಳಿದ್ದಾನೆ. ರಾಜಯೋಗಾನಂದ ಸ್ವಾಮಿ ಆ ಗ್ರಹ ಹೇಳಿದ ಮಾತುಗಳಲ್ಲಿ ನಿಜವಿದೆಯೆಂದು ಗ್ರಹಿಸಿ ಆ ಯುವಕನಲ್ಲಿರುವ ಆಕೆಯೊಂದಿಗೆ ಹೀಗೆ ಹೇಳಿದನು.)

**ರಾಜಯೋಗಾನಂದ :–** ಸರಿ ನೀನು ಹೇಳಿರುವುದೆಲ್ಲಾ ಕೇಳಿದ್ದೇನೆ. ಆತನೇನು ಹೇಳುತ್ತಾನೋ ಆತನನ್ನೇ ಕೇಳುತ್ತೇನೆ. ಆತನೊಂದಿಗೆ ನಾನು ಮಾತನಾಡಬೇಕೆಂದರೆ ನೀನು ಒಳಗೆ ಹೋಗಬೇಕಲ್ಲವೆ! ಆದ್ದರಿಂದ ನೀನು ಅಡಗಿಹೋಗು. ನಂತರ ನಾನು ಕರೆದಾಗ ಹೊರಗೆ ಬಾ. ಆಗ ಈತನ ವಿಷಯ ನಿನಗೆ ತಿಳಿಸುತ್ತೇನೆ.

(ಸ್ವಾಮಿ ಮಾತು ಕೇಳಿದ ಆ ಗ್ರಹ ಸರಿಯೆಂದು ಒಳಕ್ಕೆ ಅಡಗಿಹೋಯಿತು. ಆ ಯುವಕನಿಗೆ ಎಚ್ಚರ ಬಂದಿತು. ಆಗ ಆತನನ್ನು ಸ್ವಾಮಿ ಕೇಳಿದನು.)

**ರಾಜಯೋಗಾನಂದ :–** ಏನಯ್ಯಾ! ನೀನು ನಿನ್ನ ಮದುವೆಗಿಂತ ಮೊದಲು ಒಬ್ಬ ಹುಡುಗಿಯೊಂದಿಗೆ ಸಂಬಂಧ ಇಟ್ಟುಕೊಂಡು, ಆಕೆಯನ್ನು ಮೋಸ ಮಾಡಿರುವುದೇ ಅಲ್ಲದೆ ದೂರವಾಗಿ ಬಿಟ್ಟು ಬಂದ ಮಾತು ನಿಜವೇ ಅಲ್ಲವೆ!

(ಆ ಮಾತು ಕೇಳಿದ ಆತನು ಒಂದು ಸಲ ಬೆಚ್ಚಿಬಿದ್ದಂತಾಯಿತು. ನಿಮಗೆ ಹೇಗೆ ಈ ವಿಷಯ ತಿಳಿಯಿತೆಂದು ಅನುಮಾನದಿಂದ ಸ್ವಾಮಿ ಕಡೆ ನೋಡಿದ್ದಾನೆ.)

**ರಾಜಯೋಗಾನಂದ** :– ಎಲ್ಲ ವಿಷಯಗಳೂ ನಮಗೆ ಗೊತ್ತು. ನೀನು ಮಾಡಿದ ಮೋಸ ನೀನೇ ಹೇಳಿದರೇ, ನಿನಗೆ ರೋಗ ಹೋಗುವ ಉಪಾಯವನ್ನು ನಾವು ಹೇಳುತ್ತೇವೆ.

(ಬಚ್ಚಿಟ್ಟಿರುವ ಗುಟ್ಟೆಲ್ಲಾ ಇವರಿಗೆ ತಿಳಿದುಹೋಗಿದೆಯೆಂದು ಆ ಯುವಕನಿಗೆ ಅರ್ಥವಾಯಿತು. ತಮ್ಮ ಬಂಧುಗಳ ಕಡೆ ನೋಡಿ ತಲೆ ತಗ್ಗಿಸಿಕೊಂಡನು. ಇನ್ನು ಬಚ್ಚಿಟ್ಟರೇ ಲಾಭವಿಲ್ಲವೆಂದು ನೀವು ಹೇಳಿರುವುದು ನಿಜವೇ ಎಂದು ತನ್ನ ತಪ್ಪನ್ನು ಒಪ್ಪಿಕೊಂಡಿದ್ದಾನೆ.)

**ರಾಜಯೋಗಾನಂದ :–** ನೀನು ಬಿಟ್ಟುಬಂದಿರುವ ಹುಡುಗಿಯನ್ನು ಪುನಃ ಕರೆತಂದು ಆಕೆಯನ್ನು ಗೌರವದಿಂದ ವಿವಾಹ ಮಾಡಿಕೊಂಡು, ಆಕೆಯೊಂದಿಗೆ ನೀನು ಸಂಸಾರ ಮಾಡುವುದಾದರೇ, ನಿನಗಿರುವ ರೋಗ ಹೋಗುತ್ತದೆ ಇಲ್ಲದೆ ಹೋದರೆ ನಿನಗೆ ಈ ರೋಗ ಹೋಗುವುದಿಲ್ಲ.

**ಯುವಕನು :–** ನನಗೀಗ ಮದುವೆಯಾಗಿದೆಯಲ್ಲ!

**ರಾಜಯೋಗಾನಂದ :–** ಆದ್ದರಿಂದ ನೀನು, ನಿನ್ನ ಹೆಂಡತಿ ಯೊಂದಿಗೆ ಈ ವಿಷಯವೆಲ್ಲಾ ಹೇಳಿ ಆಕೆಯನ್ನು ಒಪ್ಪಿಸಿಕೊಂಡು, ನೀನು ಮೋಸ ಮಾಡಿದ ಯುವತಿಯನ್ನು ಪುನಃ ತಂದುಕೊಳ್ಳಬೇಕು. ಹಾಗಾಗದಿದ್ದರೇ ಈಗ ನಿನಗೆ ಹಿಡಿದಿರುವ ದೆವ್ವ ನಿನ್ನ ಹೆಂಡತಿಯೊಂದಿಗೆ ಸಂಸಾರ ಮಾಡಲು ಬಿಡುವುದಿಲ್ಲ ಗೊತ್ತಾ?

(ಸ್ವಾಮಿ ಮಾತುಗಳು ಕೇಳಿದ ಆತನು ಮಾಡುವುದೇನೂ ಇಲ್ಲವೆಂದು ತನ್ನ ರಹಸ್ಯವೆಲ್ಲಾ ಎಲ್ಲರಿಗೂ ತಿಳಿದುಹೋಗಿದೆಯೆಂದು, ತನ್ನ ಹೆಂಡತಿಗೂ ಸಹ ತಿಳಿದುಹೋ ಗುತ್ತದೆಂದು, ಅದಕ್ಕಿಂತ ಮೊದಲು ತಾನೇ ಆಕೆಗೆ ವಿಷಯವೆಲ್ಲಾ ಹೇಳುವುದು ಒಳ್ಳೆಯದೆಂದುಕೊಂಡನು. ಆದ್ದರಿಂದ ನೀವು ಹೇಳಿದಂತೆ ನನ್ನ ಹೆಂಡತಿಗೆ ಹೇಳಿ ಹೇಗಾದರೂ ಹೇಳಿಕೊಳ್ಳುತ್ತೇನೆಂದು ಒಪ್ಪಿಕೊಂಡನು. ಆಗ ಸ್ವಾಮಿ ಒಳಗಿರುವ ಗ್ರಹವನ್ನು ಕರೆದು ಹೀಗೆ ಹೇಳಿದನು.)

**ರಾಜಯೋಗಾನಂದ :–** ಆತನಿಂದ ನೀನು ಹೇಳಿರುವ ವಿಷಯವನ್ನು ಒಪ್ಪಿಸಿದ್ದೇನೆ. ನೀನು ದೆವ್ವದಂತೆ ಬದಲಾಗಿಯೂ ಸಹ ಒಳ್ಳೆಯ ಕೆಲಸ ಮಾಡುತ್ತಿರುವುದಕ್ಕೆ ನಮಗೆ ಸಂತೋಷವಾಗಿ ಇದೆ. ಈತನು ಆ ಯುವತಿಯನ್ನು ಪುನಃ ತಂದುಕೊಳ್ಳುವವರೆಗು ಈತನಲ್ಲೇ ಇದ್ದು, ನಿನ್ನ ಆಸೆಯು ಈಡೇರಿದ ನಂತರ ನೀನು ಕಾಲವನ್ನು ವೃಥಾ ಕಳೆಯದೆ ಆತ್ಮಜ್ಞಾನವನ್ನು ತಿಳಿದುಕೊ. ಜ್ಞಾನ ತಿಳಿಯದ ಜೀವನ ವ್ಯರ್ಥ.

(ಸ್ವಾಮಿಯವರ ಮಾತುಗಳನ್ನು ಕೇಳಿದ ಆಕೆ ಕಣ್ಣೀರನ್ನು ಹಾಕುತ್ತಾ ಹೀಗೆ ಹೇಳಿದ್ದಾಳೆ.)

**ದೆವ್ವ :–** ನಾನು ಶರೀರದಿಂದ ಬದುಕಿದ್ದರೇ ಈಗ ನೀವು ಹೇಳಿದ ಮಾತುಗಳನ್ನು ಕೇಳುತ್ತಿರಲಿಲ್ಲವೇನೋ. ಸತ್ತು ದೆವ್ವ ಆಗಿದ್ದೇನೆ. ಆದ್ದರಿಂದ ನೀವು ಹೇಳುವ ಮಾತುಗಳೊಂದರ ಬೆಲೆಯನ್ನು ಗ್ರಹಿಸುತ್ತಿದ್ದೇನೆ. ತೆರೆ ಮೇಲೆ ಗೊಂಬೆಗಳನ್ನು ನೋಡಿದಂತೆ ಪಕ್ಕದಿಂದ ಬದುಕಿರುವ ಮನುಷ್ಯರನ್ನು ನೋಡಿ ಅವರಲ್ಲಿ ಏನು ಲೋಪವಿದೆಯೋ ಗ್ರಹಿಸಿಕೊಳ್ಳುತ್ತಿದ್ದೇನೆ. ಜ್ಞಾನವೆಂದರೇ ಏನೋ, ಅದರ ಬೆಲೆ ಏನೋ ಈ ಬದುಕಿದ ಮನುಷ್ಯರಿಗಿಂತ ದೆವ್ವವಾಗಿರುವ ನನಗೇ ಚೆನ್ನಾಗಿ ತಿಳಿಯುತ್ತದೆ. ಆದ್ದರಿಂದ ನೀವು ಹೇಳಿದ ಮಾತುಗಳನ್ನು ತಪ್ಪದೆ ಕೇಳಿ ಜ್ಞಾನವನ್ನು ತಿಳಿದುಕೊಳ್ಳುತ್ತೇನೆ. ಅಷ್ಟೇ ಅಲ್ಲ ನನ್ನನ್ನು ದೆವ್ವವೆಂದು ಎಷ್ಟೋ ಜನ ಅಸಹಿಸಿ ಕೊಂಡಿದ್ದಾರೆ, ಹೊಡೆದಿದ್ದಾರೆ, ಬೈದಿದ್ದಾರೆ, ನಾನಾ ಹಿಂಸೆಗಳನ್ನು ಕೊಟ್ಟಿದ್ದಾರೆ, ಹೀನವಾಗಿ ಮಾತನಾಡಿದ್ದಾರೆ. ಸತ್ತುಹೋದರೂ ನಾನೂ ಮನುಷ್ಯಳೇ ಎಂದು ಅವರು ಗುರುತಿಸದೆ ಯಾವುದೋ ಪೀಡೆಯಂತೆ ತಿಳಿದಿದ್ದಾರೆ. ಮನುಷ್ಯರೊಂದಿಗೆ ಸಂಬಂಧವಿಲ್ಲದೆ ಯಾವುದೋ ಪಿಶಾಚಿಯಾಗಿ ಭಾವಿಸಿ ಮಾತನಾಡಿದ್ದಾರೆ. ಈಗ ನೀವು ಮಾತನಾಡಿದಂತೆ, ನನ್ನನ್ನು ಒಬ್ಬ ಮನುಷ್ಯಳಾಗಿ ಭಾವಿಸಿ ಯಾರೂ ಮಾತನಾಡಲಿಲ್ಲ. ನೀವು ನನ್ನನ್ನು ಗೌರವದಿಂದ ಮಾತನಾಡಿಸಿ, ನನ್ನ ಕಾರ್ಯವನ್ನು ಮೆಚ್ಚಿಕೊಂಡು, ನಂತರ ನನ್ನ ಕರ್ತವ್ಯವನ್ನು ನೆನಪು ಮಾಡಿದ್ದೀರ. ನನ್ನ ಜನ್ಮಕ್ಕೆ ಸಾರ್ಥಕತೆ ಕೈಗೂಡಿಸುವ ಮಾರ್ಗದಲ್ಲಿ ನಡೆಯಬೇಕೆಂದಿದ್ದೀರ. ಅದಕ್ಕೆ ನಾನು ಧನ್ಯಳು, ಆದರೆ ಜ್ಞಾನವೆಂದರೇ ಏನೂ ತಿಳಿಯದಂತೆ ಚಿಕ್ಕಂದಿನಿಂದ ಅಜ್ಞಾನ ವಾತಾವರಣದಲ್ಲಿ ಬೆಳೆದಿದ್ದೇನೆ. ತಾಯಿತಂದೆಯರಾದ ಹಿರಿಯರು ಸಹ ಎಂದಿಗೂ ದೈವಜ್ಞಾನವನ್ನು ಕುರಿತು ಹೇಳುವುದಾಗಲೀ ಇಲ್ಲವೆ ಅವರು ಮಾತನಾಡಿಕೊಳ್ಳುವು ದಾಗಲೀ ನಡೆಯಲಿಲ್ಲ. ಆದ್ದರಿಂದ ಜ್ಞಾನವೆನ್ನುವ ವಿಷಯ ಸ್ವಲ್ಪವೂ ತಿಳಿಯದ ನಾನು, ಹೇಗೆ ಜ್ಞಾನವನ್ನು ತಿಳಿದುಕೊಳ್ಳಬೇಕೊ ನನಗೆ ತಿಳಿದಿಲ್ಲ. ಅದಕ್ಕೆ ಮಾರ್ಗ ನೀವೇ ಹೇಳಬೇಕೆಂದು ಕೋರುತ್ತಿದ್ದೇನೆ.

**ರಾಜಯೋಗಾ :–** ಸರಿ! ನಿನಗೆ ಜ್ಞಾನವನ್ನು ತಿಳಿಯುವುದಕ್ಕೆ ನಾವು ಮಾರ್ಗ ದರ್ಶಕರಾಗಿ ಇರುತ್ತೇವೆ. ಇಂದಿಗಾದರೂ ನೀನು ಸಂತೋಷಿಸಿ ನಿನ್ನ ಕಾರ್ಯ

ಈಡೇರಿದ ನಂತರ ಪುನಃ ಇಲ್ಲಿಗೆ ಬಂದು ಇಲ್ಲೇ ಇದ್ದು, ಜ್ಞಾನವನ್ನು ಸಂಪೂರ್ಣ ವಾಗಿ ತಿಳಿದುಕೊಂಡು ಪವಿತ್ರಳಾಗಿ ಬದಲಾಗು.

**ದೆವ್ವ :–** ಸ್ವಾಮಿ ನನಗೆ ಚಿಕ್ಕದೊಂದು ಅನುಮಾನ ನನಗೆ ಶರೀರವಿಲ್ಲ ಅಲ್ಲವೆ! ನನ್ನ ಸಂಶಯಗಳನ್ನು ಕುರಿತು ನಿಮ್ಮನ್ನು ಹೇಗೆ ಕೇಳಬಲ್ಲೆನು?

**ರಾಜಯೋಗಾ :–** ಈ ವಿಷಯದಲ್ಲಿ ನೀನು ಚಿಂತೆ ಮಾಡಬೇಕಾದ ಅವಶ್ಯಕವಿಲ್ಲ. ನೀನು ಈಗಿದ್ದಂತೇ ಇರುತ್ತಾ ಜ್ಞಾನವನ್ನು ಕೇಳಬಹುದು. ಯಾವುದಾದರೂ ಅರ್ಥವಾಗದ ವಿಷಯವನ್ನು ಕೇಳಬೇಕಾಗಿ ಬಂದಾಗ, ನಾನು ಹೇಳಿದ ಶರೀರದಲ್ಲಿ ಸೇರಿ ಆ ಶರೀರದಿಂದ ನೀನು ನಿನ್ನ ಪ್ರಶ್ನೆಯನ್ನು ಕೇಳಿ ತಿಳಿದುಕೊಳ್ಳಬಹುದು.

**ದೆವ್ವ :–** ಧನ್ಯಳು ಸ್ವಾಮೀ! ಈದಿನ ನನಗೆ ಎಷ್ಟೋ ಸಂತೋಷವಾಗಿ ಇದೆ.

**ರಾಜಯೋಗಾ :–** ಇಲ್ಲೊಂದು ವಿಷಯವನ್ನು ಕೇಳುತ್ತೇನೆ, ಅದಕ್ಕೆ ನೀನು ಉತ್ತರ ಹೇಳಬೇಕು. ಗತದಲ್ಲಿ ಈತನಿಗೆ ಹೊಟ್ಟೆನೋವು ಬಂದಾಗ ದಾರಿಯಲ್ಲಿ ಹೋಗುತ್ತಾ ಇಲ್ಲಿಗೆ ಬಂದಿದ್ದಾರಂತೆ. ಆಗ ನಮ್ಮ ರಾಘವ ಈತನ ಹೊಟ್ಟೆಯ ಮೇಲೆ ಕೈಯ್ಯನ್ನಿಟ್ಟಾಗ, ನೋವು ಸ್ವಲ್ಪವೂ ಇಲ್ಲದೆ ಹೋಗಿದೆಯಂತೆ. ನಾನು ಏನೂ ಮಾಡಲಿಲ್ಲ ನೋವು ಹೇಗೆ ಹೋಗಿದೆ ಎನ್ನುವ ಅನುಮಾನ ರಾಘವನಿಗೆ ಇದೆ. ಆ ದಿನ ಏನು ನಡೆದಿದೆಯೋ ನೀನೇ ಹೇಳಿದರೆ ರಾಘವನಿಗೆ ಅರ್ಥವಾಗುತ್ತದೆ.

**ದೆವ್ವ :–** ಆ ದಿನ ಇವರೆಲ್ಲರೂ ಮಾಂತ್ರಿಕನ ಬಳಿಗೆ ಹೋಗಬೇಕೆಂದು ನಿರ್ಣ ಯಿಸಿಕೊಂಡಿದ್ದಾರೆ. ಆ ಮಾಂತ್ರಿಕನು ಕೇರಳದಿಂದ ಬಂದಿದ್ದಾನೆಂದು, ಆತನು ಬಹಳ ದೊಡ್ಡ ಮಳಯಾಳ ಮಾಂತ್ರಿಕನೆಂದು ಇವರು ಹೇಳುತ್ತಿರುವುದರಿಂದ ನನಗೆ ಕೋಪ ಬಂದು, ಈ ಯುವಕನನ್ನು ಇನ್ನೂ ಬಾಧಿಸಲು ಪ್ರಾರಂಭಿಸಿದೆನು. ಇವರೆಲ್ಲರೂ ಅನ್ನ ತಿನ್ನುವುದಕ್ಕೆ ಕುಡಿಯುವ ನೀರಿಗಾಗಿ ಇಲ್ಲಿ ಆಶ್ರಮದೊಳಗೆ ಬಂದಿದ್ದಾರೆ. ಆಗ ಈತನನ್ನು ನಾನು ಊಟಮಾಡಲು ಸಹ ಬಿಡಲಿಲ್ಲ. ಈತನ ಬಾಧೆಯನ್ನು ನೋಡಿದ ನಿಮ್ಮ ಆಶ್ರಮವಾಸಿ ರಾಘವ ಈತನಿಗಿರುವುದು ರೋಗವೆಂದುಕೊಂಡಿದ್ದಾನೆ. ಈತನಿಗೆ ಯಾವುದೋ ಒಂದು ವಿಧವಾಗಿ

ಹೊಟ್ಟೆನೋವನ್ನು ತಗ್ಗಿಸಬೇಕೆಂದುಕೊಂಡಿದ್ದಾನೆ. ಹೊಟ್ಟೆಯನ್ನು ಒತ್ತುವುದರಿಂದ ಸ್ವಲ್ಪ ನೋವು ಕಾಣಿಸದಂತೆ ಹೋಗುತ್ತದೆಂದು ಆತನು ಹೊಟ್ಟೆಯನ್ನು ಒತ್ತುವುದಕ್ಕಾಗಿ ಕೈಯ್ಯನ್ನು ಹೊಟ್ಟೆಯ ಮೇಲೆ ಇಟ್ಟಿದ್ದಾನೆ. ಆಗ ಆತನು ಸಾಧಾರಣ ಮನುಷ್ಯನಲ್ಲವೆಂದು, ಆತನಲ್ಲಿ ಸ್ವಲ್ಪ ಜ್ಞಾನಶಕ್ತಿ ಇದೆಯೆಂದು, ಆತನ ಸ್ಪರ್ಷದಿಂದ ನನಗೆ ತಿಳಿದ ಕೂಡಲೇ ನೋವಿಲ್ಲದಂತೆ ಮಾಡಿದ್ದೇನೆ. ನೋವು ಕಾಣಿಸದಂತೆ ಹೋಗುವುದು ರಾಘವನಿಗೆ ಅರ್ಥವಾಗದೇ ಹೋದರೂ, ಇವರು ಮಾತ್ರ ಈ ಪೀಡೆ ಇಲ್ಲಿಗೆ ತೊಲಗಿತೆಂದುಕೊಂಡಿದ್ದಾರೆ. ಅಂದಿನಿಂದ ನಾನು ಹೊಟ್ಟೆಯನ್ನು ನೋಯಿಸದೆ ಈತನ ಶರೀರದಲ್ಲೇ ಇದ್ದೇನೆ. ಈಗ ನೀವು ಕರೆದರೆ ಬಂದಿದ್ದೇನೆ. ಅದು ಆ ದಿನ ನಡೆದಿದೆ.

**ರಾಜಯೋಗಾ :–** ಸರಿ ನೀನು ಈಗ ಹೋಗಿ, ನಂತರ ಸ್ವಲ್ಪ ಕಾಲಕ್ಕೆ ಬಂದು ನನಗೆ ತಿಳಿಸು.

(ಆಗ ಸತ್ಯವತಿ ಎನ್ನುವ ದೆವ್ವ ಆ ಯುವಕನ ಶರೀರದೊಳಗೆ ಅಡಗಿಹೋಯಿತು. ಯುವಕನಿಗೆ ಪ್ರಜ್ಞೆ ಬಂದಿತು. ಸ್ವಾಮಿ, ಅವರನ್ನೆಲ್ಲರನ್ನು ಹೋಗಿಬಾ ಎಂದನು. ಸ್ವಾಮಿಗೆ ನಮಸ್ಕಾರಗಳು ತಿಳಿಸಿ ಎಲ್ಲರೂ ಹೊರಟು ಹೋದರು. ಅಲ್ಲಿಯವರೆಗು ರಾಘವ ಅಲ್ಲಿ ನಡೆದ ವಿಷಯವೆಲ್ಲವನ್ನೂ ಶ್ರದ್ಧೆಯಿಂದ ಕೇಳಿದ್ದಾನೆ. ಅವರು ಹೋದ ನಂತರ ಸ್ವಾಮಿಯೊಂದಿಗೆ ಹೀಗೆ ಹೇಳಿದ್ದಾನೆ.)

**ರಾಘವ :–** ಆ ದಿನ ಸತ್ಯವತಿ ಹೇಳಿದಂತೇ ನಡೆಯಿತು. ಆದರೆ ನನ್ನಲ್ಲಿ ಇರುವ ಶಕ್ತಿ ಏನೋ ನನಗೆ ತಿಳಿದಿಲ್ಲ. ಅದು ಆಕೆಗೆ ಹೇಗೆ ತಿಳಿಯಿತೋ ಸಹ ಗೊತ್ತಿಲ್ಲ. ನನ್ನ ಜಾತಕ ಚಕ್ರವನ್ನು ತಿಳಿದವರು ನನ್ನಲ್ಲಿರುವ ಶಕ್ತಿ ಏನೋ ನಿಮಗೆ ತಿಳಿದಿರುತ್ತದೆಂದುಕೊಳ್ಳುತ್ತೇನೆ.

**ರಾಜಯೋಗಾ :–** ಸತ್ಯವತಿಗೆ ತಿಳಿದಾಗ ನನಗೇಕೆ ತಿಳಿದಿಲ್ಲ? ನಿನಗೇ ಅಲ್ಲ ಈಗ ನೀನು ಮದುವೆಯಾಗುತ್ತಿರುವ ದುಂದುಭಿಗೂ ಸಹ ಸ್ವಲ್ಪ ಶಕ್ತಿ ಇದೆ. ಇದೆಲ್ಲಾ ನಂತರ ಸಮಯಬಂದಾಗ ತಿಳಿಸುತ್ತೇನೆ. ಈಗ ನಿನ್ನ ವಿವಾಹ ಹತ್ತಿರಕ್ಕೆ ಬಂದಿದೆ ಆ ಕೆಲಸಗಳನ್ನು ನೋಡಿಕೊಳ್ಳಿ.

(ರಾಜಯೋಗಾನಂದ ಆಶ್ರಮದಲ್ಲಿ ಹಟ್ಟಿಯಿಂದ ಗಿರಿಜನರೆಲ್ಲರೂ ಬಂದಾಗ ಸ್ವಾಮಿ ಸಮಕ್ಷಮದಲ್ಲಿ ರಾಘವ ಮದುವೆ ನಡೆಯಿತು. ರಾಘವನೊಂದಿಗೆ ತನ್ನ ಮಗಳ ಮದುವೆಯನ್ನು ಹತ್ತಿರವಿದ್ದು ನಡೆಸುವುದು ಮಲ್ಲುದೊರೆಗೆ ಸಂತೋಷವಾಯಿತು. ಉಳಿದ ಹಟ್ಟಿಯ ಮನುಷ್ಯರೆಲ್ಲರೂ ಮದುವೆ ಮುಗಿದ ನಂತರ ತಮ್ಮ ಹಟ್ಟಿಗೆ ಹೋದರು. ಮಲ್ಲುದೊರೆ, ಯೋಗ, ಮೇಘ, ಚಕ್ರಿ ಮತ್ತೆ ಕೆಲವರು ಮುಖ್ಯವಾದ ಹೆಂಗಸರು ಗಂಡಸರು ಒಂದು ತಿಂಗಳು ದುಂದುಭಿಗೆ ಜೊತೆಯಾಗಿ ಇರಬೇಕೆಂದುಕೊಂಡಿದ್ದಾರೆ.)

***********************************

(ನಾಗೋತುಲ ನಾಗಭೂಷಣ, ಮಾಂತ್ರಿಕ ಮಲ್ಲಯ್ಯ ತಾತ, ತಾಳೆಮರ ಮುನೆಪ್ಪ ಮನುಷ್ಯರು ಎಲ್ಲರೂ ಸೇರಿ ಆಲದಮರದ ಹತ್ತಿರಕ್ಕೆ ಹೋದರು. ಅಲ್ಲಿ ಹಾವುಗಳು ಎಲ್ಲಿವೆಯೋ ಎಂದು ತಿಳಿದುಕೊಳ್ಳುವುದಕ್ಕೆ ಅವರಹತ್ತಿರವಿರುವ ಅಂಜನದಲ್ಲಿ ನೋಡಿದರು. ಅಂಜನದಲ್ಲಿ ಅವರಿಗೆ ಹಾವುಗಳು ಕಾಣಿಸಲಿಲ್ಲ. ಆಲದ ಮರದ ಕೆಳಗಿನಿಂದ ಎಲ್ಲಿಗಾದರೂ ಹೋದರೂ ಅವು ಎಲ್ಲಿರುವುದು, ಎಷ್ಟು ದೂರದಲ್ಲಿರುವುದು ಅಂಜನದಲ್ಲಿ ತಿಳಿಯುತ್ತದೆ. ಆದರೆ ಹಾವುಗಳ ಸುಳಿವೇ ಅಂಜನದಲ್ಲಿ ಕಾಣಿಸದೆ ಹೋಗಿರುವುದೇನೆಂದು ನಾಗಭೂಷಣನಿಗೆ ಅರ್ಥವಾಗದೆ ವೃದ್ಧನಾದ ಮಲ್ಲಯ್ಯನನ್ನು ಹೀಗೆ ಕೇಳಿದ್ದಾನೆ.)

**ನಾಗಭೂಷಣ :–** ಮಲ್ಲಯ್ಯ ತಾತಾ! ಅಂಜನದಲ್ಲಿ ಹಾವುಗಳು ಎಲ್ಲಿದ್ದರೂ ಕಾಣಿಸಬೇಕಲ್ಲವೆ! ಏಕೆ ಕಾಣಿಸಲಿಲ್ಲ?

**ಮಲ್ಲಯ್ಯ :–** ಅಂಜನದಲ್ಲಿ ಎಲ್ಲಿದ್ದರೂ ಕಾಣಿಸಬೇಕು. ಹಾಗೆ ಕಾಣಿಸಲಿಲ್ಲವೆಂದರೇ ಅದಕ್ಕೆ ಒಂದು ಕಾರಣ ಇರುತ್ತದೆ. ಮಂತ್ರಶಕ್ತಿ, ಅಂಜನಶಕ್ತಿಗಿಂತ ಮಿಗಿಲಾದ ಶಕ್ತಿ ಸಮೀಪದಲ್ಲಿ ಹಾವುಗಳಿದ್ದರೇ ಅಲ್ಲಿಗೆ ಅಂಜನ ಹರಡುವುದಿಲ್ಲ. ಅಲ್ಲಿರುವುದನ್ನಾಗಲೀ, ಆ ಪ್ರಾಂತವನ್ನಾಗಲೀ ತೋರಿಸಲಿಲ್ಲ. ಮಂತ್ರಶಕ್ತಿಗಳು ಸಹ ಅಲ್ಲಿ ಕೆಲಸ ಮಾಡುವುದಿಲ್ಲ. ಅಂತಹ ಕಡೆ ಹಾವುಗಳಿದ್ದರೇ ಅವು ಕಾಣಿಸುವುದಿಲ್ಲ.

(ಮಲ್ಲಯ್ಯ ತಾತನ ಮಾತುಗಳು ಕೇಳಿದ ಮುನೆಪ್ಪ ಮನುಷ್ಯರಿಗೆ ತಲೆಮೇಲೆ ಗುಂಡು ಹಾರಿಸಿದಂತಾಯಿತು. ಹೇಗಾದರೂ ಹಾವನ್ನು ಹಿಡಿದುಕೊಡಬೇಕೆಂದು ನಾಗಭೂಷಣನನ್ನು, ಮಲ್ಲಯ್ಯನನ್ನು ಅವರು ವಿನಂತಿಸಿಕೊಂಡು ಕೇಳಿದರು. "ಅದು ಎಲ್ಲಿರುವುದೋ ತಿಳಿದರೇ ತಾನೆ ನಾವು ಹಿಡಿದುಕೊಡುವುದು." ಎಂದು ಮಲ್ಲಯ್ಯ ಹೇಳಿದನು. ಮುನೆಪ್ಪ ಮನುಷ್ಯರಿಗೆ ಏನೂ ಅರ್ಥವಾಗದೇ ತಮ್ಮ ನಾಯಕನಿಗೆ ಆ ವಿಷಯ ಹೇಗೆ ಹೇಳಬೇಕೋ ತಿಳಿಯದೆ ನೀವೇ ಈ ವಿಷಯವನ್ನು ನಮ್ಮ ನಾಯಕನಿಗೆ ಹೇಳಿರಿ ಎಂದು ಕೇಳಿದ್ದಾರೆ. ಸರಿ ಎಂದು ಒಪ್ಪಿಕೊಂಡ ನಾಗಭೂಷಣ, ಮಲ್ಲಯ್ಯ ಎಲ್ಲರೂ ಮುನೆಪ್ಪ ಹತ್ತಿರಕ್ಕೆ ಹೋದರು. ಮುನೆಪ್ಪ ಅಡವಿಯಲ್ಲಿ ನಿವಾಸ ಏರ್ಪಡಿಸಿಕೊಂಡಿರುವುದರಿಂದ ಎಲ್ಲರೂ ಸುಲಭವಾಗಿಯೇ ಅಲ್ಲಿಗೆ ಸೇರಿದ್ದಾರೆ. ಬಾಬಾ ಮಂದಿರದ ಹತ್ತಿರ ಪೊಲೀಸರು ಹಿಂಬಾಲಿಸಿದಾಗಿನಿಂದ ಮುನೆಪ್ಪ ಪೊಲೀಸರಿಗೆ ಸಿಗದಂತೆ ಅಡವಿಯಲ್ಲಿ ನಿವಾಸ ಮಾಡಿಕೊಂಡಿದ್ದಾನೆ. ಜನರ ಮಧ್ಯದಲ್ಲಿ ಆದರೆ ಮುನೆಪ್ಪ ಹತ್ತಿರಕ್ಕೆ ಹೋಗಬೇಕೆಂದರೆ ಬಹಳ ಕಷ್ಟ. ಅಡವಿಯಲ್ಲಿ ಇರುವುದರಿಂದ ಮುನೆಪ್ಪನನ್ನು ಸುಲಭವಾಗಿ ಭೇಟಿಮಾಡಿದ್ದಾರೆ. ಮುನೆಪ್ಪನಿಗೆ ನಾಗಭೂಷಣ, ಮಲ್ಲಯ್ಯ ತಾತನನ್ನು ಪರಿಚಯ ಮಾಡಿಸಿದರು. ನಂತರ ವೆಂಕು, ನೂಕಾ ಆ ಇಬ್ಬರ ಮಾಂತ್ರಿಕರಿಂದಲೇ ಹಾವುಗಳು ಅಂಜನವೊಂದರ ಕಣ್ಣಿಗೂ ಸಹ ಕಾಣಿಸುತ್ತಿಲ್ಲವೆಂದು ಹೇಳಿಸಿದ್ದಾರೆ. ಅಂಜನಕ್ಕೂ ಸಹ ಏಕೆ ಕಾಣಿಸುವುದಿಲ್ಲವೋ, ಅದಕ್ಕೆ ಇರುವ ಕಾರಣವನ್ನು ಸಹ ಹೇಳಿದ್ದಾರೆ. ಅದನ್ನು ಕೇಳಿದ ಮುನೆಪ್ಪನಿಗೆ ಏನೂ ತೋಚದೆ ಆ ವಿಷಯವನ್ನು ತಪಸ್ವಿ ಬಾಬಾರವರಿಗೆ ತಿಳಿಸಬೇಕೆಂದು ಕೊಂಡಿದ್ದಾನೆ. ಆಗ ಆ ವಿಷಯ ತಪಸ್ವಿ ಬಾಬಾರವರಿಗೆ ತಿಳಿಸುವುದಕ್ಕೆ ಪ್ರತ್ಯೇಕವಾಗಿ ಏರ್ಪಡಿಸಿಕೊಂಡ ಗುಡಿಸಿಲಿನೊಳಗೆ ಹೋಗಿದ್ದಾನೆ. ಪೊಲೀಸರ ದೃಷ್ಠಿ ತಪಸ್ವಿ ಬಾಬಾ ಆಶ್ರಮದ ಹತ್ತಿರ ಮುನೆಪ್ಪನ ಮೇಲೆ ಬಿದ್ದಾಗಿನಿಂದಲೂ ಮುನೆಪ್ಪ ಬಾಬಾರವರೊಂದಿಗೆ ವಯರ್‌ಲೆಸ್‌ನಿಂದ ಸಂಬಂಧ ಇಟ್ಟುಕೊಂಡಿದ್ದಾನೆ.

ಮೊದಲು ನಿರ್ಣಯಿಸಿಕೊಂಡ ಪ್ರಕಾರ ಪ್ರತಿ ವಾರ ವಯರ್‌ಲೆಸ್ ಫ್ರೀಕ್ವೆನ್ಸೀ ಬದಲಾಯಿಸಿ ಅವರ ಮಾತುಗಳು ಯಾವ ಪೊಲೀಸ್ ವಯರ್‌ಲೆಸ್ ಸೆಟ್ಸ್‌ನಲ್ಲಿ ಸಿಲುಕಿಕೊಳ್ಳದಂತೆ ಜಾಗ್ರತೆಯಿಂದ ಮಾತನಾಡುತ್ತಿದ್ದರು. ಮುನೆಪ್ಪ ತನ್ನ ಗುಡಿಸಿಲಿನಲ್ಲಿ

ಅಳವಡಿಸಿಕೊಂಡಿರುವ ವಯರ್‌ಲೆಸ್ ಸೆಟ್ ಆನ್‌ಮಾಡಿ, ಫ್ರೀಕ್ವೆನ್ಸೀ ಹೊಂದಿಸಿ ಸಿಗ್ನಲ್ ಕಳುಹಿಸಿದ್ದಾನೆ. ತಪಸ್ವಿ ಬಾಬಾರವರ ಪ್ರತ್ಯೇಕ ಕೊಠಡಿಯಲ್ಲಿ ಒಂದು ಟೇಬಲ್‌ಗೆ ಕೆಳಭಾಗದಲ್ಲಿ ಅಳವಡಿಸಿದ ಸ್ಪೀಕರ್‌ನಿಂದ ಬರುತ್ತಿರುವ ಸಿಗ್ನಲ್ಸ್‌ನ್ನು ಬಾಬಾರವರು ಕೇಳಿದ್ದಾರೆ. ಆ ಸಿಗ್ನಲ್ಸ್ ಕೂಡಾ ಬಾಬಾರವರ ಕೊಠಡಿಯಲ್ಲಿ ಫ್ಯಾನ್ ತಿರುಗುತ್ತಿರುವಾಗ ಮಾತ್ರ ಶಬ್ಧವಾಗುತ್ತವೆ. ಫ್ಯಾನ್ ಆಫ್ ಮಾಡಿದರೆ ಸ್ಪೀಕರ್‌ನಿಂದ ಶಬ್ಧ ಬರುವುದಿಲ್ಲ, ಹಾಗೇ ವಯರ್‌ಲೆಸ್‌ಸೆಟ್ ಕೆಲಸಮಾಡುವುದಿಲ್ಲ. ಆ ಕೊಠಡಿಯನ್ನು ಪೊಲೀಸ್ ಆಫೀಸರ್‌ಗಳು ಚೆಕ್ ಮಾಡಿದಾಗ ಫ್ಯಾನ್ ಆಫ್‌ಮಾಡಲಾಗಿತ್ತು, ಆದ್ದರಿಂದ ಯಾರೂ ಆ ಸೆಟ್‌ನ್ನು ಗುರುತಿಸದಂತೆ ಹೋಗಿದ್ದಾರೆ. ಹಾಗೆ ರಹಸ್ಯವಾಗಿರುವ ಸೆಟ್‌ನಿಂದ ಬಂದಿರುವ ಸಿಗ್ನಲ್ಸ್ ಕೇಳಿಸಿಕೊಂಡ ಬಾಬಾ ಕೂಡಲೇ ಪೆನ್‌ನಂತಹ ಮೈಕನ್ನು ತೆಗೆದುಕೊಂಡು “ಹಲೋ ತ್ರೀವನ್! ಟೂವನ್ ಹಿಯರ್ ಸಮಾಚಾರ ಏನು ಓವರ್” ಎಂದನು. ಆಗ ಮುನೆಪ್ಪ “ಹಲೋ ಟೂವನ್! ನಮ್ಮವರು ತಿರುಗಿ ಬಂದಿದ್ದಾರೆ. ಅವರಿಗೆ ಇಬ್ಬರು ಮಾಂತ್ರಿಕರು ಸಹಾಯ ಮಾಡಿದರೂ ಕೆಲಸ ಆಗಲಿಲ್ಲ. ಆ ಹಾವಿನೊಂದಿಗೆ ಮತ್ತೊಂದು ಹಾವೂ ಸಹ ಇದೆಯಂತೆ. ಆ ಎರಡು ಹಾವುಗಳೂ ಸುಳಿವು ತಿಳಿಯದಂತೆ ಹೋಗಿವೆ. ಮಂತ್ರಿಕರು ಅಂಜನವನ್ನು ಸಹ ಹಾಕಿ ನೋಡಿದ್ದಾರಂತೆ. ಆದರೂ ಅಂಜನಕ್ಕೂ ಸಹ ಕಾಣಿಸಲಿಲ್ಲವಂತೆ. ನಮ್ಮವರಿಗೆ ಏನೂ ತೋಚದೆ ಮಾಂತ್ರಿಕರನ್ನು ಸಹ ಕರೆದುಕೊಂಡು ಬಂದಿದ್ದಾರೆ. ನನಗೆ ಏನೂ ಅರ್ಥವಾಗಲಿಲ್ಲ ಓವರ್” ಎಂದನು. ಆಗ ಬಾಬಾರವರು “ಹಲೋ ತ್ರೀವನ್! ಅದು ಎಲ್ಲಿರುವುದು ಹೇಳಬಲ್ಲೆನು. ಅಲ್ಲಿಯವರೆಗು ಆ ಮಾಂತ್ರಿಕರಿಗೆ ತಲಾ ಹತ್ತು ಸಾವಿರ ಕೊಟ್ಟು ನಿನ್ನ ಹತ್ತಿರವೇ ಇಟ್ಟುಕೋ. ನಾಳೆ ನಾನು ಮೆಸೇಜ್ ಕಳುಹಿಸುತ್ತೇನೆ. ಸೆಟ್ ಆಫ್ ಓವರ್” ಎಂದು ತಪಸ್ವಿ ಬಾಬಾರವರು ಸೆಟ್ ಆಫ್ ಮಾಡಿದ್ದಾರೆ. ಈ ವಿಷಯ ಯಾರು ಮಾತನಾಡುತ್ತಿರುವುದು ತಿಳಿಯುವಂತೆ ಮುನೆಪ್ಪ ಹೆಸರು ‘3,1 ಎಂದು, ಬಾಬಾರವರ ಹೆಸರು ‘2, 1’ ಎಂದು ಗುರುತಿನಿಂದ ಮಾತನಾಡಿದ್ದಾರೆ. ಮುನೆಪ್ಪ ನಾಗಭೂಷಣನಿಗೂ ಮಲ್ಲಯ್ಯನಿಗೂ ಇಬ್ಬರಿಗೂ ತಲಾ ಹತ್ತುಸಾವಿರ ಕೊಟ್ಟು ಹತ್ತು ದಿನಗಳು ತನ್ನ ಹತ್ತಿರವೇ ಇರಲು ಹೇಳಿದ್ದಾನೆ. ಮಾಂತ್ರಿಕರಿಬ್ಬರೂ ಎಂದೂ

ಅಷ್ಟು ಹಣವನ್ನು ನೋಡಿರಲಿಲ್ಲ. ಆದ್ದರಿಂದ ಅವರಿಗೆ ಸಂತೋಷವಾಯಿತು. ಮುನೆಪ್ಪ ಹೇಳಿದಂತೆ ಇರುತ್ತೇವೆಂದು ಒಪ್ಪಿಕೊಂಡು ಅಲ್ಲೇ ಇದ್ದಾರೆ.

ವಯರ್‌ಲೆಸ್ ಸೆಟ್ ಆಫ್ ಮಾಡಿದ ತಪಸ್ವಿ ಬಾಬಾರವರು ಸ್ವಲ್ಪ ಹೊತ್ತು ಯೋಚಿಸಿ ತನ್ನ ಅಧೀನದಲ್ಲಿರುವ ಸೂಕ್ಷ್ಮ ರೂಪಗಳನ್ನು ಕರೆದು ಹಾವುಗಳ ವಿವರ ಬೇಕೆಂದು, ಅವು ಎಲ್ಲಿರುವುದೂ ತಿಳಿಸಬೇಕೆಂದು, ಅದಕ್ಕಾಗಿ ಇಷ್ಟುಕಾಲ ತನ್ನನ್ನು ಬಿಡದಂತೆ ಇರುವವರಿಗೆ, ಈ ಪ್ರಾಂತವನ್ನು ಬಿಟ್ಟು ಹೋಗುವುದಕ್ಕೆ ಅನುಮತಿ ಕೊಡುತ್ತಿದ್ದೇನೆಂದು, 24 ಗಂಟೆಗಳೊಳಗೆ ಹಾವುಗಳನ್ನು ಅನ್ವೇಷಿಸಿ ಪುನಃ ಬಂದು ಅವುಗಳ ವಿಷಯವನ್ನು ತಿಳಿಸಬೇಕೆಂದು ಆದೇಶಿಸಿದನು.

ಆ ಸೂಕ್ಷ್ಮ ರೂಪಗಳು ತನ್ನ ಹತ್ತಿರ ಇಲ್ಲದಿದ್ದರೇ ತಾನು ಸಾಧಾರಣ ಮನುಷ್ಯನೇ ಎಂದು, ಅವು ಇರುವವರೆಗೇ ತನಗೆ ಪ್ರತ್ಯೇಕತೆ ಇದೆಯೆಂದು ತಿಳಿದಿರುವ ಬಾಬಾ ಅವುಗಳನ್ನು ಎಂದೂ ಹೊರಗೆ ಕಳುಹಿಸಲಿಲ್ಲ. ಕೊನೆಗೆ ಆ ದಿನ ಯಾವ ದಾರಿ ಇಲ್ಲದೆ, ಅವುಗಳನ್ನು ಹೊರಗೆ ಕಳಸದೇ ಹೋದರೆ ವಜ್ರಗಳ ವಿಷಯ ತಿಳಿಯದಂತೆ ಹೋಗುತ್ತದೆಂದು, ಅನ್ಯಮಾರ್ಗವಿಲ್ಲದೆ ತನಗೆ ಇಷ್ಟ ಇಲ್ಲದಿದ್ದರೂ ಆ ವಿಧವಾಗಿ ಆದೇಶಿಸಿ ಕಳುಹಿಸಬೇಕಾಯಿತು. ಬಾಬಾರವರ ಹತ್ತಿರ ಸೂಕ್ಷ್ಮರೂಪದಲ್ಲಿರುವ ಶಕ್ತಿಗಳಿಗೆ ಕಣ್ಣು ಇಲ್ಲ. ಆದರೆ ನೋಟವಿದೆ. ಆದ್ದರಿಂದ ಕಣ್ಣಿನ ಪರಿಮಿತಿಯನ್ನು ಮೀರಿದ ಸೂಕ್ಷ್ಮಗಳು ಹೆಚ್ಚಿನ ದೂರ ನೋಡಬಲ್ಲವು. ಬಾಬಾರವರ ಆದೇಶ ತೆಗೆದುಕೊಂಡ ಸೂಕ್ಷ್ಮ ಶರೀರಗಳು ಆಶ್ರಮವನ್ನು ಬಿಟ್ಟು ಹೊರಗೆ ಬಂದು ಒಂದೊಂದು ಸಲ ಹತ್ತು ಮೈಲು ದೂರದವರೆಗು ನೋಡುತ್ತಾ ಹೋಗುತ್ತಿವೆ. ಹಾಗೆ ನೋಡುತ್ತಾ ಹೋಗುತ್ತಿರುವ ಸೂಕ್ಷ್ಮಗಳಿಗೆ ರಾಜಯೋಗಾನಂದ ಸ್ವಾಮಿ ಆಶ್ರಮ ಆವರಣದಲ್ಲಿ ಆ ಎರಡು ಹಾವುಗಳು ಕಾಣಿಸಿವೆ. ವಜ್ರಗಳಿರುವ ಹಾವನ್ನು ಎರಡನೆ ಹಾವು ತನ್ನ ಹಿಂದೆ ಕರೆದುಕೊಂಡು ಹೋಗಿ ಅಲ್ಲಿಗೆ ಸೇರಿದಂತೆ ತಿಳಿದುಕೊಂಡ ಆ ಸೂಕ್ಷ್ಮಗಳು ಕೂಡಲೇ ಹಿಂತಿರುಗಿ ತಪಸ್ವಿಬಾಬಾರವರ ಆಶ್ರಮವನ್ನು ಸೇರಿ, ಇರುವ ವಿಷಯವನ್ನು ಬಾಬಾರವರಿಗೆ ತಿಳಿಸಿದವು. ಅಷ್ಟೇ ಅಲ್ಲ ಆ ಆಶ್ರಮ ದೊಡ್ಡ ಜ್ಞಾನಶಕ್ತಿಯಿಂದ ಕೂಡಿಕೊಂಡಿದೆಯೆಂದು ಸಹ ತಿಳಿಸಿವೆ.

ಆ ವಿಷಯವನ್ನು ತಿಳಿದುಕೊಂಡ ತಪಸ್ವಿಬಾಬಾರವರು ಕೂಡಲೇ ವಯರ್‌ಲೆಸ್ ಸೆಟ್‌ನಿಂದ ತಾಳೆಮರ ಮುನೆಪ್ಪನಿಗೆ ಸಮಾಚಾರವನ್ನು ಕಳುಹಿಸಿದ್ದಾನೆ. ಹಾವುಗಳು ರಾಜಯೋಗಾನಂದ ಆಶ್ರಮ ಆವರಣದಲ್ಲಿ ಇವೆಯೆಂದು, ಅದು ದಿವ್ಯವಾದ ಜ್ಞಾನಶಕ್ತಿಗೆ ನಿಲಯವಾದ ಪ್ರಾಂತವೆಂದು, ಆದ್ದರಿಂದಲೇ ಮಾಂತ್ರಿಕರ ಅಂಜನಗಳು ಅಲ್ಲಿನ ದೃಶ್ಯವನ್ನೂ ತೋರಿಸಲಾರದೆ ಹೋಗಿವೆಯೆಂದು, ನೀವು ಅಲ್ಲಿಗೆ ಹುಷಾರಾಗಿ ಹೋಗಿ ಹಾವುಗಳನ್ನು ತರಬೇಕೆಂದು ಮುನೆಪ್ಪನಿಗೆ ಹೇಳಿದ್ದಾನೆ. ಮುನೆಪ್ಪ ಹಾಗೇ ಆಗಲೆಂದು ಹೇಳಿ ಆ ವಿಷಯವನ್ನು ತನ್ನ ಮನುಷ್ಯರಿಗೆ ತಿಳಿಸಿ, ರಾಜಯೋಗಾನಂದ ಸ್ವಾಮಿ ಆಶ್ರಮದ ಪ್ರತ್ಯೇಕತೆಯನ್ನು ಸಹ ತಿಳಿಸಿ, ಜಾಗ್ರತೆಯಿಂದ ಹೋಗಿ ಬರಲು ತಿಳಿಸಿದ್ದಾನೆ ರಾಜಯೋಗಾನಂದ ಸ್ವಾಮಿ ಆಶ್ರಮ ಐದು ಎಕರೆಗಳ ಆವರಣದಲ್ಲಿದೆ. ಆದ್ದರಿಂದ ಹಗಲು ಹೋಗುವುದಕ್ಕಾಗುವುದಿಲ್ಲವೆಂದು ಗ್ರಹಿಸಿದ ಮುನೆಪ್ಪ ಮನುಷ್ಯರು, ರಾತ್ರಿ ಸಮಯದಲ್ಲಿ ಯಾರೂ ನೋಡದಂತೆ ಆ ಆವರಣದಲ್ಲಿ ಪ್ರವೇಶಿಸಿ ಹಾವನ್ನು ಹುಡುಕ ತೊಡಗಿದರು. ಮುನೆಪ್ಪ ಮನುಷ್ಯರು ಆ ರಾತ್ರಿ ಬಂದಿದ್ದಾರೆಂದು ಗ್ರಹಿಸಿದ ಎರಡನೆ ಹಾವು, ಹೊರಗೆ ಮಲಗಿದ್ದ ಗಿರಿಜನರನ್ನು ನಿದ್ರೆಯಿಂದ ಎಬ್ಬಿಸಬೇಕೆಂದುಕೊಂಡು ಅವರ ಹತ್ತಿರಕ್ಕೆ ಸೇರಿ ಯೋಗನನ್ನು ಬಾಲದಿಂದ ಹೊಡೆಯಿತು. ಆ ಏಟಿಗೆ ನಿದ್ರೆಯಿಂದ ಎದ್ದ ಯೋಗ ತಮ್ಮ ಆವರಣದಲ್ಲಿ ಯಾರೋ ಇದ್ದಂತೆ ಗಮನಿಸಿ, ಉಳಿದವರನ್ನು ಸಹ ಎಬ್ಬಿಸಿದನು. ಎಂಟು ಮಂದಿ ಗಿರಿಜನರು ಎದ್ದ ನಂತರ ತಮ್ಮ ಆವರಣದಲ್ಲಿ ಇರುವವರನ್ನು ಜಗನ್ನಾಥ ಮನುಷ್ಯರೆಂದುಕೊಂಡಿದ್ದಾರೆ. ಒಂದು ಸಲ ತಮ್ಮ ಕೈಯ್ಯಲ್ಲಿ ಒದೆ ತಿಂದು ಹೋದ ಜಗನ್ನಾಥ ರಾತ್ರಿಹೊತ್ತು ತಮ್ಮ ಮೇಲೆ ದಾಳಿ ಮಾಡುವುದಕ್ಕೆ ಮನುಷ್ಯರನ್ನು ಕಳುಹಿಸಿದ್ದಾನೆಂದು ತಿಳಿದುಕೊಂಡಿದ್ದಾರೆ. ಈ ಸಲ ಅವರಿಗೆ ಚೆನ್ನಾಗಿ ಬುದ್ಧಿ ಹೇಳಬೇಕೆಂದುಕೊಂಡಿದ್ದಾರೆ. ಆದ್ದರಿಂದ ಅವರನ್ನು ಬಂಧಿಸುವುದಕ್ಕೆ ಅವರಿಗೆ ತಿಳಿಯದಂತೆ ಅವರ ಸಮೀಪಕ್ಕೆ ಸೇರಿದ್ದಾರೆ.

ತಮಗೆ ತಿಳಿಯದಂತೆ ಮರೆಯಲ್ಲಿ ತಮ್ಮ ಸಮೀಪಕ್ಕೆ ಬಂದ ಗಿರಿಜನರನ್ನು ನೋಡಿದ ಮುನೆಪ್ಪ ಮನುಷ್ಯರು ಅಲ್ಲಿಂದ ಮೊದಲು ತಪ್ಪಿಸಿಕೊಂಡು ಹೋಗಬೇ ಕೆಂದುಕೊಂಡು ಓಡಿಹೋಗುವುದಕ್ಕೆ ಪ್ರಯತ್ನಿಸಿದ್ದಾರೆ. ಆದರೆ ಅವರು

ಓಡಿಹೋಗದಂತೆ ಅಡ್ಡಗಟ್ಟಿ ಅವರನ್ನು ಗಿರಿಜನರು ಹಿಡಿದುಕೊಂಡಿದ್ದಾರೆ. ಹಾಗೆ ಕತ್ತಲಲ್ಲಿ ಹಿಡಿದುಕೊಂಡ ನಂತರ ಅವರನ್ನು ಆಶ್ರಮದ ಹತ್ತಿರ ಬೆಳಕಿನೆಡೆಗೆ ಎಳೆದುಕೊಂಡು ಬಂದಿದ್ದಾರೆ. ಬೆಳಕಿನಲ್ಲಿ ಅವರ ಮುಖಗಳು ಕಾಣಿಸಿದವು. ಒಂದು ದಿನ ರೈಲ್ವೇ ಕಟ್ಟೆ ಹತ್ತಿರ ನಿಂಬೆ ತೋಟದಲ್ಲಿ ಸೂಟ್‌ಕೇಸ್‌ಗೋಸ್ಕರ ತಮ್ಮೊಂದಿಗೆ ಹೋರಾಡಿ ನಂತರ ಹಾವು ಕಡಿತಕ್ಕೆ ಗುರಿಯಾದವರೆಂದು ಗಿರಿಜನರು ಗುರುತಿಸಿದ್ದಾರೆ. ಮುನೆಪ್ಪ ಮನುಷ್ಯರು ಸಹ ಗಿರಿಜನರನ್ನು ಗುರುತಿಸಿದ್ದಾರೆ. ಗಿರಿಜನರು ತಮ್ಮ ಮನಸ್ಸಿನಲ್ಲಿ ಮುನೆಪ್ಪ ಮನುಷ್ಯರು ಇಲ್ಲೇಕೆ ಬಂದಿದ್ದಾರೆಂದು ಅಂದುಕೊಂಡಾಗ, ಮುನೆಪ್ಪ ಮನುಷ್ಯರು ಗಿರಿಜನರು ಇಲ್ಲೇಕೆ ಇದ್ದಾರೆಂದು ಅಂದುಕೊಂಡಿದ್ದಾರೆ. ಅಷ್ಟರಲ್ಲಿ ರಾಘವ ಅಲ್ಲಿಗೆ ಬಂದನು. ಸಿಕ್ಕಿರುವವರು ಯಾರಾಗಿರುವುದು ತಿಳಿದುಕೊಳ್ಳ ಬೇಕೆಂದು ಯಾರು ನೀವೆಂದು ಮುನೆಪ್ಪ ಮುಷ್ಯರನ್ನು ಕೇಳಿದ್ದಾನೆ. ಮುನೆಪ್ಪ ಮನುಷ್ಯರಿಗೆ ಏನು ಹೇಳಬೇಕೊ ತಿಳಿಯಲಿಲ್ಲ. ಅವರು ಮೌನವಾಗಿ ಉಳಿದರು. ಆಗ ಯೋಗ, ಮೇಘ ಇದಕ್ಕೂ ಮೊದಲು ನಾವು ನಿನಗೋಸ್ಕರ ಹುಡುಕಲು ಬಂದಾಗಲೇ ಇವರನ್ನು ನೋಡಿದ್ದೇವೆಂದು ಹೇಳುತ್ತಾ, ಆಗ ಅವರೊಂದಿಗೆ ಘರ್ಷಣೆ ನಡೆದ ವಿಷಯವೂ, ಹಾವಿನ ವಿಷಯವೂ, ಅದು ಕಚ್ಚಿದ ವಿಷಯವೂ, ಅರಳಿ ಮರದ ಎಲೆಗಳಿಂದ ವಿಷ ಪ್ರಮಾದದಿಂದ ಅವರನ್ನು ರಕ್ಷಿಸಿದ ವಿಷಯವೂ ಎಲ್ಲಾ ಹೇಳಿದ್ದಾರೆ.

ಎಲ್ಲಾ ಕೇಳಿದ ರಾಘವನಿಗೆ ಅವರ ವಿಷಯ ವಿಚಿತ್ರವಾಗಿ ತೋಚಿತು. ಅಷ್ಟರಲ್ಲಿ ಅಲ್ಲಿಗೆ ರಾಜಯೋಗಾನಂದಸ್ವಾಮಿ ಸಹ ಬಂದಿದ್ದಾನೆ. ಸ್ವಾಮಿಗೆ ರಾಘವ ತನಗೆ ಗಿರಿಜನರು ಹೇಳಿದ ವಿಷಯವೆಲ್ಲಾ ಹೇಳಿದನು. ರಾಜಯೋಗಾನಂದ ಸ್ವಾಮಿ ಎಲ್ಲಾ ಕೇಳಿದ ನಂತರ ಮುನೆಪ್ಪ ಮನುಷ್ಯರನ್ನು ಇಲ್ಲಿಗೆ ಏಕೆ ಬಂದಿದ್ದೀರೆಂದು ಕೇಳಿದ್ದಾನೆ. ಆಗ ವೆಂಕು ಮಾತನಾಡುತ್ತಾ ನಾವು ಮೊಲಗಳ ಬೇಟೆಗೆ ಬಂದಿದ್ದೇವೆ. ಒಂದು ಮೊಲ ಕಾಣಿಸಿತು. ಅದು ಸಿಗದಂತೆ ಓಡುತ್ತಾ ನಿಮ್ಮ ಆವರಣದೊಳಗೆ ಬಂದಿದೆ. ಅದರ ಹಿಂದೆ ಓಡುತ್ತಾ ಬಂದ ನಾವು ಮೊಲಕ್ಕಾಗಿ ಹುಡುಕುತ್ತಿರುವಾಗ ನಿಮ್ಮವರು ಬಂದು ನಮ್ಮನ್ನು ಕಳ್ಳರೆಂದುಕೊಂಡು ಹಿಡಿದುಕೊಂಡಿದ್ದಾರೆ ಎಂದು ಉತ್ತರಿಸಿದ್ದಾನೆ. ಅವರ ಮಾತುಗಳು ಕೇಳಿದ ರಾಘವ ಹೀಗೆ ಹೇಳಿದ್ದಾನೆ.)

**ರಾಘವ :–** "ಒಂದು ಸಲ ಸೂಟ್‌ಕೇಸ್‌ನಲ್ಲಿ ಹಾವನ್ನು ಇಟ್ಟು ಹೋರಾಡಿದ ನೀವು, ಮೊಲಗಳ ಬೇಟೆಗೆ ಬಂದಿದ್ದೇವೆಂದರೇ ನಾವು ಹೇಗೆ ನಂಬಬೇಕು? ಆ ದಿನ ನಮ್ಮವರಿಂದ ನಿಮ್ಮ ಹಾವು ಹೋಗಿದೆಯೆಂದು ನೀವು ದ್ವೇಷದಿಂದ ಈಗ ನಮ್ಮವರ ಮೇಲೆ ಸೇಡು ತೀರಿಸಿಕೊಳ್ಳುವುದಕ್ಕೆ ಬಂದಿರುತ್ತೀರಿ. ಆ ದಿನ ಪ್ರಾಣವನ್ನು ಒತ್ತೆ ಇಟ್ಟು ಹಾವನ್ನು ಹಿಡಿದುಕೊಳ್ಳಬೇಕೆಂದು ಪ್ರಯತ್ನಿಸಿದ ನೀವು ನಮ್ಮವರಿರುವ ಈ ಕಡೆಗೇ ಬಂದಿದ್ದೀರೆಂದರೇ ಇದರಲ್ಲಿ ಏನೋ ಆಂತರ್ಯವಿರುತ್ತದೆ. ಅಸಲಾದ ವಿಷಯವನ್ನು ಮರೆಮಾಚಿ ನಮಗೆ ನೆಪಗಳನ್ನು ಹೇಳುತ್ತಿದ್ದೀರ. ನಿಜ ಹೇಳದೇ ಹೋದರೆ ನಿಮ್ಮನ್ನು ಬಿಡುವುದಿಲ್ಲ."

**ವೆಂಕು :–** ಹೇಳುವುದಕ್ಕೆ ನಮ್ಮ ಹತ್ತಿರ ಏನೂ ಇಲ್ಲ. ನಾವು ಹಾವುಗಳನ್ನು, ಮೊಲಗಳನ್ನು ಹಿಡಿದುಕೊಳ್ಳುತ್ತಾ ಇರುತ್ತೇವೆ. ಚರ್ಮಗಳಿಗೋಸ್ಕರ ಹಾವುಗಳನ್ನೂ, ಮಾಂಸಕ್ಕಾಗಿ ಮೊಲಗಳನ್ನು ಹಿಡಿದುಕೊಳ್ಳುತ್ತೇವೆ. ಈಗ ಮೊಲವನ್ನು ಹಿಂಬಾಲಿಸಿ ನಿಮ್ಮ ಆವರಣದೊಳಗೆ ಬಂದಿದ್ದೀವಿ. ಅಷ್ಟೇ ಹೊರತು ಬೇರೆ ಉದ್ದೇಶ ನಮಗೆ ಇಲ್ಲ. ನಾವು ಏನನ್ನು ಕಳ್ಳತನ ಮಾಡಲಿಲ್ಲ.

**ರಾಜಯೋಗಾನಂದ :–** ನಮ್ಮ ಆಶ್ರಮ ಬಯಲು ಪ್ರಾಂತದಲ್ಲಿ ಇದೆ. ಇಲ್ಲಿ ಮರಗಳ ಪೊದೆಗಳೂ ಇಲ್ಲ, ಕಲ್ಲಿನ ಕುಪ್ಪೆಗಳು ಇಲ್ಲ. ಹಾಗಿರುವಾಗ ಈ ಪ್ರಾಂತದಲ್ಲಿ ಮೊಲಗಳನ್ನು ಬೇಟೆಯಾಡುವುದೇನು? ಮೊಲಗಳಾಗಲೀ, ಹಾವುಗಳಾಗಲೀ ಗಿಡಗಳ ಪೊದೆಗಳೂ, ಕಲ್ಲಿನ ದಿಬ್ಬಗಳು ಇರುವ ಕಡೆ ಇರಬಹುದು. ಅವುಗಳಿಗೆ ನಿವಾಸ ಯೋಗ್ಯವಲ್ಲದ ಈ ಪ್ರಾಂತದಲ್ಲಿ ಏಕಿರುತ್ತವೆ?

**ವೆಂಕು :–** ನಿಮ್ಮ ಆಶ್ರಮ ಬಯಲು ಪ್ರಾಂತದಲ್ಲಿ ಇರುವ ಮಾತು ವಾಸ್ತವವೇ. ಆದರೆ ಇಲ್ಲಿ ಹಸಿ ಹುಲ್ಲು ಹೆಚ್ಚಾಗಿ ಇದೆ. ಆದ್ದರಿಂದ ಮೊಲಗಳು ಹುಲ್ಲಿಗಾಗಿ ದೂರದಿಂದ ಬರಬಹುದು. ಹಾವುಗಳೂ ಸಹ ಇರಬಹುದು. ನಾವು ಇಲ್ಲಿ ಹಾವುಗಳನ್ನು ನೋಡಿದ್ದೇವೆ. ನೀವು ಅನುಮತಿ ಕೊಟ್ಟರೇ ಹಾವುಗಳನ್ನು ಸಹ ಹಿಡಿದು ತೋರಿಸಬಲ್ಲೆವು. ಹಾಗಾದರೂ ನಂಬುತ್ತೀರಲ್ಲವೆ!

**ರಾಜಯೋಗಾ :–** ನಮ್ಮ ಆಶ್ರಮ ಪ್ರಾಂತದಲ್ಲಿ ಹಾವುಗಳಿದ್ದರೂ ನಮಗೆ ಭಯವಿಲ್ಲ. ಆದರೆ ನಾವು ಇಲ್ಲ ಎಂದರೆ ನೀವು ಇವೆ ಹಿಡಿದು ತೋರಿಸಬಲ್ಲೆವೆಂದು ಹೇಳುತ್ತಿದ್ದೀರ. ಇದ್ದರೆ ಹಿಡಿದು ತೋರಿಸಿರಿ.

(ವೆಂಕು ಬುದ್ಧಿವಂತಿಕೆಯನ್ನುಪಯೋಗಿಸಿ ಸುಲಭವಾಗಿ ಹಾವನ್ನು ಹಿಡಿದುಕೊಳ್ಳಬಹುದೆಂದು ಹಾಕಿದ ಉಪಾಯವನ್ನು ಸ್ವಾಮಿ ಒಪ್ಪಿಕೊಂಡಿರುವು ದರಿಂದ ಸರಿಹೋಗಿದೆ. ಇನ್ನು ಎಲ್ಲರ ಎದುರಿಗೆ ಹಾವನ್ನು ಹಿಡಿದುಕೊಂಡು ತೋರಿಸಿ ಅದನ್ನು ತೆಗೆದುಕೊಂಡು ಸುಲಭವಾಗಿ ಹೋಗಬಹುದೆಂದುಕೊಂಡಿದ್ದಾನೆ. ಕೂಡಲೇ ಹಾವನ್ನು ಹುಡುಕಲಾರಂಭಿಸಿದರು. ಗಿರಿಜನರು ಸಹ ಅವರನ್ನು ಅನುಸರಿಸುತ್ತಿದ್ದಾರೆ. ಅಲ್ಲಿನ ಪರಿಸ್ಥಿತಿಯನ್ನು ಗ್ರಹಿಸಿದ ಎರಡನೆ ಹಾವು ಯೋಚಿಸಿ ಸಮಯಾನುಕೂಲವಾಗಿ ತನ್ನ ಬಾಯನ್ನು ದೊಡ್ಡದಾಗಿ ತೆರೆಯಿತು. ಆಗ ಬಾಯೊಳಗೆ ಮೇಲಿನ ತುಟಿಗೆ ಅಂಟಿಕೊಂಡಿರುವ ಮಾಣಿಕ್ಯವೊಂದರ ಕಾಂತಿ ಬಿಳಿ ಟ್ಯೂಬ್‌ಲೈಟ್ ಕಾಂತಿಯ ಹಾಗೆ ಹೆಚ್ಚಿನ ಪ್ರಕಾಶದಿಂದ ಕಾಣಿಸಿತು. ಆ ಕಾಂತಿಯನ್ನು ದೂರದಿಂದ ಎಲ್ಲರೂ ನೋಡಿದರು. ಆ ಹಾವು ಬಾಯಿ ತೆರೆದು ಪುನಃ ಮುಚ್ಚಿಕೊಳ್ಳುವುದರಿಂದ ಕತ್ತಲು ಏರ್ಪಟ್ಟಿತು. ಇದ್ದಕ್ಕಿದ್ದಂತೆ ಹಾಗೆ ಕಾಂತಿ ಕಾಣಿಸಿ ಪುನಃ ಮಾಯವಾಗಿ ಹೋಗುವುದು ಮುನೆಪ್ಪ ಮನುಷ್ಯರಿಗೆ ಏನೂ ಅರ್ಥವಾಗಲಿಲ್ಲ. ಅವರಲ್ಲಿರುವ ನಾಗಭೂಷಣನಿಗೆ ಹಾವುಗಳ ವಿಷಯ ತಿಳಿದರೂ ಮಣಿ ಹಾವುಗಳ ವಿಷಯ ತಿಳಿದಿಲ್ಲ. ಗಿರಿಜನರು ಮಾತ್ರ ಅದು ಹಾವೊಂದರ ಮಣಿ ಬೆಳಕಾಗಿರುತ್ತದೆಂದು ಕೊಂಡರು. ಆದರೆ ಅದೇ ಎಂದು ದೃಢಪಡಿಸಿಕೊಳ್ಳದೆ ಹೋಗಿದ್ದಾರೆ. ರಾಘವನಿಗೆ ತಾನು ಗುಹೆಯಲ್ಲಿ ನೋಡಿದ ಜ್ಞಾಪಕ ಬಂದಿತು. ಇನ್ನು ರಾಜಯೋಗಾನಂದಸ್ವಾಮಿ ತಾನೂ ಸಹ ದೂರದಿಂದ ಬೆಳಕನ್ನು ನೋಡಿದವನಾಗಿ ಅದು ಹಾವಿನೊಂದರ ಮಾಣಿಕ್ಯ ಕಾಂತಿಯೇ ಎಂದು, ಆ ಹಾವನ್ನು ಹಿಡಿದುಕೊಳ್ಳುವುದಕ್ಕೇ ಇವರು ಕಳ್ಳರಾಗಿ ಬಂದಿದ್ದಾರೆಂದು ಅಂದುಕೊಂಡನು.

ತಲೆಯಲ್ಲಿ ಮಾಣಿಕ್ಯವಿರುವ ಹಾವು, ಹೊಟ್ಟೆಯಲ್ಲಿ ವಜ್ರಗಳಿರುವ ಹಾವನ್ನು ಕರೆದುಕೊಂಡು ಹಾವಿಗೋಸ್ಕರ ಹುಡುಕುತ್ತಿರುವ ಮುನೆಪ್ಪ ಮನುಷ್ಯರ ಕಡೆಗೇ

ಬಂದಿತು. ವಜ್ರಗಳ ಹಾವು ಹತ್ತು ಅಡಿಗಳ ದೂರದಲ್ಲಿದ್ದಂತೆಯೇ ಮುನೆಪ್ಪ ಮನುಷ್ಯರ ಹತ್ತಿರವಿದ್ದ ಸೆನ್ಸಾರ್ ಕೂಗಲಾರಂಭಿಸಿತು. ಆ ಶಬ್ದವನ್ನು ಕೇಳಿದ ವೆಂಕೂಗೆ ಸಂತೋಷವಾಯಿತು ಅವರ ಹತ್ತಿರವಿರುವ ಟಾರ್ಚ್‌ಲೈಟ್‌ಗಳನ್ನು ಹಾಕಿ ನೋಡಿದರು. ಅವರಿಗೆ ಹತ್ತಿರದಲ್ಲಿ ಬಂದಿರುವ ಮಾಣಿಕ್ಯ ಹಾವು ವಜ್ರಗಳ ಹಾವನ್ನು ಬಿಟ್ಟು ಲೈಟ್ ಬೆಳಗುವುದಕ್ಕಿಂತ ಮೊದಲೇ ಪಕ್ಕಕ್ಕೆ ಹೋಯಿತು. ವಜ್ರಗಳ ಹಾವು ಸಿಗಬೇಕೆಂದೇ ಅದು ಹಾಗೆ ಮಾಡಿತು. ಅಲ್ಲಿಯವರೆಗು ಅವರಿಗೆ ದೊರೆಯದಂತೆ ತಪ್ಪಿಸಿದ ಮಾಣಿಕ್ಯಹಾವು ಇಲ್ಲಿ ಅದೇ ಕೆಲಸದಂತೆ ದೊರೆಯುವಂತೆ ಮಾಡಿ ಅದು ಕಾಣಿಸದಂತೆ ಹೋಯಿತು. ಟಾರ್ಚ್‌ಲೈಟ್‌ಗಳ ಬೆಳಕಿನಲ್ಲಿ ವಜ್ರಗಳಿರುವ ಹಾವು ಕಾಣಿಸಿತು. ಆಗ ನಾಗಭೂಷಣ ಆ ಹಾವನ್ನು ಸುಲಭವಾಗಿ ಹಿಡಿದುಕೊಂಡಿದ್ದಾನೆ. ಅದಕ್ಕಾಗಿ ಅನೇಕ ಕಷ್ಟಗಳು ಅನುಭವಿಸಿದ ನಂತರ ಆ ಹಾವು ಸಿಗುವುದು ಮುನೆಪ್ಪ ಮನುಷ್ಯರಿಗೆ ಸಂತೋಷವಾಯಿತು. ಹಾವಿನೊಳಗೆ ವಜ್ರಗಳಿರುವ ವಿಷಯ ರಾಘವನಿಗಾಗಲೀ, ಸ್ವಾಮಿಗಾಗಲೀ ಯಾರಿಗೂ ತಿಳಿದಿಲ್ಲ. ಆದ್ದರಿಂದ ಅದನ್ನು ಅವರಿಗೆ ತೋರಿಸಿ ಸುಲಭವಾಗಿ ತೆಗೆದುಕೊಂಡು ಹೋಗಬಹುದೆಂದುಕೊಂಡ ವೆಂಕು ಆ ಹಾವನ್ನು ರಾಜಯೋಗಾನಂದ ಸ್ವಾಮಿಗೆ ತೋರಿಸಿ ಹೀಗೆ ಹೇಳಿದನು.)

**ವೆಂಕು :–** ನೋಡಿ! ಇಲ್ಲಿ ಹಾವುಗಳು ಸಹ ಇರುವುದಿಲ್ಲವೆಂದಿದ್ದೀರ. ಹಾವನ್ನು ಹಿಡಿದುಕೊಂಡಿದ್ದೇವೆ. ಈಗಾದರೂ ನಾವು ಕಳ್ಳರಲ್ಲವೆಂದು ತಿಳಿಯಿತಲ್ಲವೆ!

(ಅದಕ್ಕೂ ಮೊದಲೇ ಮಾಣಿಕ್ಯದ ಬೆಳಕನ್ನು ನೋಡಿದ ಸ್ವಾಮಿ ಅವರು ಹಿಡಿದಿರುವುದು ಮಾಣಿಕ್ಯವಿರುವ ಹಾವೇ ಎಂದು ಅಂದುಕೊಂಡಿದ್ದಾನೆ. ಅವರು ಅದರ ಭೇಟೆಗೆ ಬಂದಿದ್ದಾರೆಂದು ತಿಳಿದ ಸ್ವಾಮಿ ಹೀಗೆ ಹೇಳಿದನು.)

**ರಾಜಯೋಗಾನಂದ :–** ನೀವು ಹಿಡಿದಿರುವುದು ಸಾಮಾನ್ಯವಾದ ಹಾವಲ್ಲ. ಅದರಲ್ಲಿ ಬೆಲೆ ಬಾಳುವ ವಸ್ತು ಇದೆ. ಆದ್ದರಿಂದ ಅದಕ್ಕಾಗಿಯೇ ನೀವು ಹೊಂಚು ಹಾಕಿ ಬಂದಿದ್ದೀರ. ನಮ್ಮ ಹತ್ತಿರ ಯಾವುದೋ ನೆಪಗಳನ್ನು ಹೇಳಿ ಕೊನೆಗೆ ಆ ಹಾವನ್ನು ಹಿಡಿದುಕೊಂಡಿದ್ದೀರ. ಅಷ್ಟೇ ಅಲ್ಲವೆ!

(ಆ ಮಾತುಗಳನ್ನು ಕೇಳಿದ ಮುನೆಪ್ಪ ಮನುಷ್ಯರು ಬೆಚ್ಚಿಬಿದ್ದರು. ಕಥೆ ಪುನಃ ಹಿಂತಿರುಗಿತೆಂದು ಅಂದುಕೊಂಡರು. ನಮ್ಮ ವಿಷಯ ಈತನಿಗೆ ಹೇಗೆ ತಿಳಿಯಿತೆಂದು ಅಂದುಕೊಂಡಿದ್ದಾರೆ. ಇವರಿಗೆ ಎಲ್ಲಾ ತಿಳಿದುಹೋಯಿತೆಂದುಕೊಂಡು, ಇನ್ನು ಏನು ಹೇಳಿದರೂ ಪ್ರಯೋಜನವಿಲ್ಲವೆಂದು, ಅಲ್ಲಿಂದ ತಪ್ಪಿಸಿಕೊಂಡು ಹೋಗಬೇಕೆಂದುಕೊಂಡು ಹೀಗೆ ಹೇಳಿದನು.)

**ವೆಂಕು :–** ಹೌದು ನೀವಂದಹಾಗೆ ಈ ಹಾವಿನ ಹೊಟ್ಟೆಯಲ್ಲಿ ಬೆಲೆಯುಳ್ಳ ವಜ್ರಗಳಿವೆ. ಇದಕ್ಕಾಗಿಯೇ ನಾವು ಬಂದಿದ್ದೇವೆ. ನಮ್ಮ ಕೆಲಸ ನೆರವೇರಿತು. ಈ ವಿಷಯವನ್ನು ಎಲ್ಲಾದರೂ ಹೇಳಿದರೇ ನಿಮ್ಮ ಪ್ರಾಣಗಳು ಉಳಿಯುವುದಿಲ್ಲ ಹುಷಾರ್.

(ಎಂದು ಹೊರಟು ಹೋಗಲು ಪ್ರಯತ್ನಿಸಿದರು. ಸ್ವಾಮಿ ಮಾತುಗಳು, ಅವರ ಮಾತುಗಳು ಕೇಳಿದ ರಾಘವನಿಗೆ ಏನೂ ಅರ್ಥವಾಗಲಿಲ್ಲ. ಹಾವಿನಲ್ಲಿ ವಜ್ರಗಳೇನು? ಸ್ವಾಮಿ ಅವುಗಳನ್ನು ಹೇಗೆ ಕಂಡುಹಿಡಿದಿದ್ದಾರೆ? ಎಂದು ರಾಘವ ಆಲೋಚಿಸತೊಡಗಿದನು. ವೆಂಕು ಮಾತುಗಳನ್ನು ಕೇಳಿದ ಸ್ವಾಮಿ, ನಾನು ಹಾವಿನ ತಲೆಯಲ್ಲಿ ಮಾಣಿಕ್ಯವಿದೆಯೆಂದುಕೊಂಡರೇ, ಇವನು ಹಾವಿನ ಹೊಟ್ಟೆಯಲ್ಲಿ ವಜ್ರಗಳೆನ್ನುತ್ತಿದ್ದಾನೆ. ಅಷ್ಟೇ ಅಲ್ಲದೆ ನಮ್ಮನ್ನೇ ಬೆದರಿಸಿ ನಿಮ್ಮ ಪ್ರಾಣಗಳು ಉಳಿಯುವುದಿಲ್ಲ ಎನ್ನುತ್ತಿದ್ದಾನೆ. ಇವರನ್ನು ಬಿಡಬಾರದೆಂದುಕೊಂಡು ಇವರೆಲ್ಲರನ್ನೂ ಬಿಡದಂತೆ ಕಟ್ಟಿಹಾಕಿರೆಂದು ತನ್ನವರಿಗೆ ಹೇಳಿದ್ದಾನೆ. ಆ ಮಾತುಗಳು ಕೇಳುತ್ತಲೇ ಗಿರಿಜನರೂ, ರಾಘವಾ, ಆಶ್ರಮವಾಸಿಗಳು ಎಲ್ಲರೂ ಸೇರಿ ಸ್ವಲ್ಪ ಹೊತ್ತು ಅವರೊಂದಿಗೆ ಹೋರಾಡಿ ಕೊನೆಗೆ ಅವರೆಲ್ಲರನ್ನೂ ಬಂಧಿಸಿದರು. ಅವರಹತ್ತಿರ ಬುಟ್ಟಿಯಲ್ಲಿರುವ ಹಾವನ್ನು ಕೂಡಾ ಬುಟ್ಟಿಯೊಂದಿಗೆ ಸಹ ಕಸಿದುಕೊಂಡಿದ್ದಾರೆ. ತಾವು ಊಹಿಸದ ವಿಧವಾಗಿ ನಡೆದಿರುವುದರಿಂದ ಚಿಂತಿಸಿದ ಮುನೆಪ್ಪ ಮನುಷ್ಯರು ತಮ್ಮ ನಾಯಕನಿಗೆ ಈ ವಿಷಯ ಹೇಗೆ ತಿಳಿಯುತ್ತದೆಂದುಕೊಂಡರು.

ಆ ವಿಚಿತ್ರ ಸಂಘಟನೆಗೆ ಆಶ್ರಮದಲ್ಲಿರುವ ದುಂದುಭಿ, ರಾಧೇಶ್ವರಿ ಮೊದಲಾದವರೆಲ್ಲರೂ ಆಶ್ಚರ್ಯಪಟ್ಟರು. ರಾಘವನ ಹೆಂಡತಿಯಾದ ದುಂದುಭಿ ಯಾವ ಹಾವನ್ನಾದರೂ ತನ್ನ ಕೈಯೊಳಗೆ ತೆಗೆದುಕೊಳ್ಳುತ್ತಾಳೆ. ಹಾವುಗಳು ಆಕೆಯನ್ನು

ಕಚ್ಚುವುದಿಲ್ಲ. ಯಾವ ಹಾವಾದರೂ ಸಂತೋಷವಾಗಿ ಆಕೆ ಕೈಯ್ಯಲ್ಲಿ ಆಡಿಕೊಳ್ಳುತ್ತದೆ. ಹಾವುಗಳೊಂದಿಗೆ ಆಕೆ ಚಿಕ್ಕಂದಿನಿಂದಲೂ ಸ್ನೇಹ ಮಾಡುತ್ತಿದ್ದಳು. ಆದ್ದರಿಂದ ಆಕೆ ಬುಟ್ಟಿಯೊಳಗಿನ ಹಾವನ್ನು ಹೊರಗೆ ತೆಗೆದಿದ್ದಾಳೆ. ರಾಜಯೋಗಾನಂದ ಸ್ವಾಮಿ ಹತ್ತಿರಕ್ಕೆ ತಂದು, ಸ್ವಾಮಿಗೆ ಅದನ್ನು ತೋರಿಸಿದ್ದಾಳೆ. ಮುನೆಪ್ಪ ಮನುಷ್ಯರನ್ನು ಒಂದು ಕೊಠಡಿಯಲ್ಲಿ ಬಂಧಿಸಿಟ್ಟಿರುವುದರಿಂದ ನಂತರ ಏನು ನಡೆಯುತ್ತಿರುವುದು ಅವರಿಗೆ ತಿಳಿದಿಲ್ಲ. ದುಂದುಭಿ ತನ್ನ ಹತ್ತಿರಕ್ಕೆ ತಂದಿರುವ ಹಾವನ್ನು ನೋಡಿದ ಸ್ವಾಮಿ ಹೀಗೆ ಹೇಳುತ್ತಾನೆ.)

**ರಾಜಯೋಗಾನಂದ :–** ಇದು ತಲೆಯಲ್ಲಿ ಮಾಣಿಕ್ಯವಿರುವ ಹಾವು. ಈ ಹಾವು ರಾತ್ರಿ ಬಾಯಿ ತೆರೆದಿರುವುದರಿಂದ ಅದರ ಕಾಂತಿಯನ್ನು ಗ್ರಹಿಸಿದ್ದೇನೆ. ಇವರು ಈ ಹಾವಿಗೋಸ್ಕರವೇ ಬಂದಿರುತ್ತಾರೆಂದು ಆಗಲೇ ಅಂದುಕೊಂಡಿದ್ದೇನೆ. ಆದರೆ ಅವರು ನಮ್ಮನ್ನು ಮೋಸ ಮಾಡುವುದಕ್ಕೆ ವಜ್ರಗಳೆಂದು ಅಸತ್ಯ ಹೇಳಿ ಹೆದರಿಸಿ ತಪ್ಪಿಸಿಕೊಂಡು ಹೋಗಬೇಕೆಂದುಕೊಂಡಿದ್ದಾರೆ.

(ಆ ಮಾತುಗಳನ್ನು ಕೇಳಿದ ರಾಘವ ಸ್ವಲ್ಪ ಜ್ಞಾಪಕ ತಂದುಕೊಂಡು ಹೀಗೆ ಹೇಳಿದ್ದಾನೆ.)

**ರಾಘವ :–** ಮಾಣಿಕ್ಯದ ಬೆಳಕನ್ನು ನಾನೂ ಸಹ ಒಂದುಸಲ ಭೂಗರ್ಭ ಗುಹೆಯಲ್ಲಿ ನೋಡಿದ್ದೇನೆ. ರಾತ್ರಿ ನೋಡಿದ ಬೆಳಕೂ ಸಹ ಹಾಗೇ ಇದೆ. ಆ ಕಾಂತಿ ಮಾಣಿಕ್ಯದ್ದೇ ಆಗಿರಬಹುದು.

**ದುಂದುಭಿ :–** ಇದು ನೀವಂದುಕೊಂಡಂತೆ ಮಾಣಿಕ್ಯವಿರುವ ಹಾವು ಅಲ್ಲ. ಇದರ ಬಾಯಲ್ಲಿ ಮಾಣಿಕ್ಯವಿಲ್ಲ.

(ಎಂದು ದುಂದುಭಿ ಹಾವಿನ ಬಾಯನ್ನು ತೆರೆದು ತೋರಿಸಿದಳು. ಹಾವಿನ ಬಾಯಲ್ಲಿ ಮಾಣಿಕ್ಯವಿಲ್ಲ. ಆಗ ಮುನೆಪ್ಪ ಮನುಷ್ಯರು ಹೇಳಿದ ವಿಷಯವನ್ನು ದುಂದುಭಿಗೆ ಹೇಳಿದ್ದಾನೆ. ಆಗ ಆಕೆ ಹಾವನ್ನೆಲ್ಲವನ್ನೂ ಪರೀಕ್ಷಿಸಿ ಅದರ ಹೊಟ್ಟೆ ಭಾಗದಲ್ಲಿ ಚರ್ಮದ ಕೆಳಗೆ ವಜ್ರಗಳಿವೆಯೆಂದು ಗ್ರಹಿಸಿ, ಆ ವಿಷಯವನ್ನು ಸ್ವಾಮಿ

ಅವರಿಗೆ ತಿಳಿಸಿದಳು. ಅದನ್ನು, ರಾಘವ, ಸ್ವಾಮಿ ಇಬ್ಬರೂ ಪರಿಶೀಲಿಸಿ ನಿಜವೇ ಎಂದು ತಿಳಿದುಕೊಂಡರು. ನಂತರ ಹಾವನ್ನು ಹಿಡಿಯಲು ಬಂದವರ್ಯಾರೋ ತಿಳಿದುಕೊಳ್ಳಬೇಕೆಂದುಕೊಂಡಿದ್ದಾರೆ. ದುಂದುಭಿ, ಸ್ವಾಮಿ ಸಲಹೆ ಮೇರೆಗೆ ಹಾವಿನ ಚರ್ಮದ ಕೆಳಗಿನಿಂದ ಹತ್ತು ವಜ್ರಗಳನ್ನು ಹೊರಗೆ ತೆಗೆದು ಭದ್ರವಾಗಿಟ್ಟಳು. ಹಾವನ್ನು ತನ್ನ ಹತ್ತಿರವೇ ಇಟ್ಟುಕೊಂಡಳು. ಇದೆಲ್ಲವೂ ಮರೆಯಿಂದ ಗ್ರಹಿಸುತ್ತಿರುವ ಮಾಣಿಕ್ಯಹಾವು ತನ್ನ ಧ್ಯೇಯ ಈಡೇರಿದಂತೆ ತಿಳಿದು, ಅಲ್ಲಿಂದ ಹೊರಟು ಹೋಗಿ ಭೂಗರ್ಭ ಗುಹೆಯೊಳಗೆ ಸೇರಿತು. ಮಾಣಿಕ್ಯ ಹಾವು ಇಷ್ಟು ಪಾತ್ರ ನಿರ್ವಹಿಸಿದೆ ಎಂದು ರಾಘವನಿಗಾಗಲೀ, ಸ್ವಾಮಿಗಾಗಲೀ ತಿಳಿದಿಲ್ಲ. ಅವಶ್ಯಕಬಂದಾಗ ಈ ಹಾವು ಹೊರಗೆ ಬರುತ್ತದೆ ಎಂದು ಗುಹೆಯಲ್ಲಿ ಮಹಾತ್ಮನು ರಾಘವನಿಗೆ ಹೇಳಿದ ಮಾತು ನೆರವೇರಿತು.)

**********************************

(ತಮ್ಮ ಮನುಷ್ಯರಿಂದ ಸಮಾಚಾರವೂ ಇಲ್ಲ, ಅವರು ಬರಲೂ ಇಲ್ಲ ಎಂದು ಯೋಚಿಸುತ್ತಿರುವ ಮುನೆಪ್ಪ ತನ್ನ ಮನುಷ್ಯರಲ್ಲಿ ಒಬ್ಬನನ್ನು ವೆಂಕು ಗುಂಪು ಏಕೆ ಬರಲಿಲ್ಲವೋ ಸಮಾಚಾರವನ್ನು ಶೇಖರಿಸಿ ತಿಳಿಸೆಂದು ಕಳುಹಿಸಿದ್ದಾನೆ. ಹಾಗೆ ಹೊರಟು ಹೋದವನು ವೈದ್ಯನಹಾಗೆ ವೇಷ ಹಾಕಿ ಕೆಲವು ಎಲೆಗಳನ್ನೂ, ಮೂಲಿಕೆಗಳನ್ನೂ ತನ್ನ ಭುಜಕ್ಕೆ ತಗುಲಿಸಿಕೊಂಡ ಚೀಲದಲ್ಲಿ ಹಾಕಿಕೊಂಡು, ಮುನೆಪ್ಪ ಹೇಳಿದ ಪ್ರಾಂತಕ್ಕೆ ಸೇರಿಕೊಂಡು, ಕಾಲು ನೋವುಗಳಿಗೂ, ಹೊಟ್ಟೆನೋವುಗಳಿಗೂ, ವಾಯಿ ನೋವಿಗೂ, ಮೂರ್ಛೆಗಳಿಗೂ ಪತ್ಯವಿಲ್ಲದೇ ಔಷಧಿ ಕೊಡುತ್ತೇವೆಂದು ಹೇಳುತ್ತಾ ಆ ಪ್ರಾಂತದಲ್ಲಿ ಅಲೆಯುತ್ತಾ ರಾಜಯೋಗಾನಂದ ಆಶ್ರಮದೊಳಗೆ ಪ್ರವೇಶಿಸಿದ್ದಾನೆ. ಅಲ್ಲಿರುವ ಗಿರಿಜನರಿಗೆ ತಾನು ವೈದ್ಯನೆಂದು ಹೇಳಿ, ವನ ಮೂಲಿಕೆಗಳಿಂದ ಚಿಕಿತ್ಸೆ ಪತ್ಯ ಇಲ್ಲದಂತೆ ಮಾಡುತ್ತೇನೆಂದು ಹೇಳಿದನು. ತನ್ನೊಂದಿಗೆ ಮಾತನಾಡಿರುವುದು ಅಡವಿಯಲ್ಲಿ ನಿವಾಸಿಸುವವರೆಂದು, ಅವರಿಗೆ ವನ ಮೂಲಿಕೆಗಳನ್ನು ಕುರಿತು ಚೆನ್ನಾಗಿ ತಿಳಿದಿದೆಯೆಂದು ಇವನಿಗೆ ಗೊತ್ತಿಲ್ಲ. ಆಗ ಅವರು ನಿನ್ನ ಹತ್ತಿರ ಯಾವ

ಮೂಲಿಕೆಗಳಿವೆಯೆಂದು ಕೇಳಿದರು. ಅದಕ್ಕೆ ಅವನು "ನನ್ನ ಹತ್ತಿರ ಗ್ರಂಥಿ, ಅಶ್ವಗ್ರಂಥಿ, ರಸ ಗ್ರಂಥಿ, ಬ್ರಹ್ಮದಂಡಿ, ಯಮದಂಡಿ, ಬಿಳಿ ಈಶ್ವರಿ, ಕಪ್ಪು ಈಶ್ವರಿ, ಸ್ತ್ರೀ ರತ್ನ, ಪುರುಷರತ್ನ, ಜಾಜಿ, ಜಾಪತ್ರಿ, ಮಧುರ, ಅತಿಮಧುರ, ಪುನುಗುಕೊಪ್ಪು, ಕಣಿತಿ ಮೂಲಮು ಎಷ್ಟೋ ಇವೆ." ಎಂದು ಏಕಧಾಟಿಯಾಗಿ ಹೇಳಿದ್ದಾನೆ. ಅವನು ಹೇಳಿದ ಮಾತಿನ ರೀತಿಯನ್ನು ನೋಡಿದರೆ ಯಾರಾದರೂ ಅವನನ್ನು ನಿಜವಾದ ವೈದ್ಯನೆಂದು ಒಪ್ಪಿಕೊಳ್ಳದೇ ತಪ್ಪುವುದಿಲ್ಲ. ಅವನ ಮಾತುಗಳು ಕೇಳಿದ ಗಿರಿಜನರು ಒಬ್ಬರ ಮುಖ ಒಬ್ಬರು ನೋಡಿಕೊಂಡು ಬ್ರಹ್ಮದಂಡಿ ಇದೆ, ಆದರೆ ಯಮದಂಡಿ ಎಲ್ಲೂ ಇಲ್ಲವೇ! ಎಂದುಕೊಂಡು ಹೀಗೆ ಹೇಳುತ್ತಾರೆ.)

**ಯೋಗ :–** ನಾವೂ ಸಹ ಎಷ್ಟೋ ಮೂಲಿಕೆಗಳನ್ನು ನೋಡಿದ್ದೇವೆ, ಆದರೆ ಬ್ರಹ್ಮದಂಡಿ ಇದೆ ಆದರೆ ಯಮದಂಡಿಯನ್ನು ಎಲ್ಲೂ ನೋಡಲಿಲ್ಲ. ನಿಜವಾಗಿ ಆ ಮೂಲಿಕೆ ಇದೆಯಾ? ಅದು ಯಾವುದಕ್ಕೆ ಕೆಲಸ ಮಾಡುತ್ತದೆ?

**ವೈದ್ಯನು :–** ಆ! ಇದೆ, ಏಕಿಲ್ಲ? ಅದು ಹಿಮಾಲಯಗಳಲ್ಲಿ ಸಿಗುತ್ತದೆ. ಕಷ್ಟಪಟ್ಟು ತಂದಿದ್ದೇನೆ. ಆ ಮೂಲಿಕೆಯನ್ನು ಉಪಯೋಗಿಸಿ ಮನುಷ್ಯನಲ್ಲಿ ನಿಜವನ್ನು ಹೇಳಿಸಬಹುದು. ರಹಸ್ಯವಾಗಿ ಬಚ್ಚಿಟ್ಟುಕೊಂಡಿರುವ ವಿಷಯಗಳೆಲ್ಲವೂ ಹೊರಗೆ ಬೀಳುತ್ತವೆ. ಅದನ್ನು ಉಪಯೋಗಿಸಿದರೇ ಯಾರೂ ಅಸತ್ಯವನ್ನು ಹೇಳಲಾರರು.

**ಯೋಗ :–** ನಮ್ಮ ಹತ್ತಿರ ನಿಜ ಹೇಳದವರಿದ್ದಾರೆ. ಅವರಿಂದ ನಿಜ ಹೇಳಿಸುತ್ತೀಯಾ?

**ವೈದ್ಯನು :–** ಓ! ಹೇಳಿಸುತ್ತೇನೆ. ಮೊದಲು ಅವರನ್ನು ತೋರಿಸಿ. ಅವರನ್ನು ಮಲಗಿಸಿ, ಅವರ ಎದೆಮೇಲೆ ಯಮದಂಡಿ ಮೂಲಿಕೆಯನ್ನು ಇಟ್ಟರೇ ಅವರಿಗೆ ತಿಳಿಯದಂತೇ ತಪ್ಪದೆ ಇದ್ದದ್ದು ಇದ್ದಂತೆಯೇ ಹೇಳುತ್ತಾರೆ.

(ಆದರೆ ಅವರನ್ನು ನಿನಗೆ ತೋರಿಸುತ್ತೇವೆ ಬಾ, ಎಂದು ಗಿರಿಜನರು ಅವನನ್ನು ಕರೆದುಕೊಂಡು ಹೋಗಿ ತಾವು ಬಂಧಿಸಿರುವವರನ್ನು ತೋರಿಸಿದ್ದಾರೆ. ಅವರನ್ನು ನೋಡಿದ ಕೂಡಲೇ ವೈದ್ಯನು ತಮ್ಮ ಮನುಷ್ಯರು ಬಂಧಿಸಲ್ಪಟ್ಟಿದ್ದಾರೆಂದು ಅರ್ಥ ಮಾಡಿಕೊಂಡಿದ್ದಾನೆ. ಆ ವೈದ್ಯನನ್ನು ನೋಡಿದ ಮುನೆಪ್ಪ ಮನುಷ್ಯರು

ತಮ್ಮ ಮನುಷ್ಯ ಮಾರುವೇಷದಲ್ಲಿ ಬಂದಿದ್ದಾನೆಂದು ಗ್ರಹಿಸಿದ್ದಾರೆ. ಗಿರಿಜನರಿಗೆ ತಿಳಿಯದಂತೆ ನೀವು ಭಯಪಡಬೇಡಿರೆನ್ನುವಂತೆ ಸನ್ನೆ ಮಾಡಿದನು. "ಇವರೇನಾ ನಿಜ ಹೇಳದವರು, ನನ್ನ ಮೂಲಿಕೆಯನ್ನು ಉಪಯೋಗಿಸಿ ಇವರಿಂದ ನಿಜ ಹೇಳಿಸುತ್ತೇನೆ" ಎಂದು ಹೊರಗೆ ಬಂದು "ಮೂಲಿಕೆಗೆ ಸ್ವಲ್ಪ ಹಂದಿ ರಕ್ತವನ್ನು ಹಚ್ಚಿ ಉಪಯೋಗಿಸಬೇಕು. ನಾನು ಹೋಗಿ ಹಂದಿ ರಕ್ತವನ್ನು ತಂದುಕೊಳ್ಳುತ್ತೇನೆ." ಎಂದು ಹೇಳಿ ಮೆಲ್ಲನೆ ಅಲ್ಲಿಂದ ಹೊರಟುಹೋದನು. ಆ ದಿನ ಸಾಯಂಕಾಲ ದವರೆಗು ಕಾದುಕೊಂಡರೂ ಆ ವೈದ್ಯನು ಮತ್ತೆ ಬರಲಿಲ್ಲ. ಇನ್ನು ಅವನು ಬರುವುದಿಲ್ಲವೆಂದು ನಿಶ್ಚಯಿಸಿಕೊಂಡು, ವೈದ್ಯನು ಬಂದಿರುವುದೂ, ಅವನು ಹೇಳಿರುವುದೂ, ಅವನು ಹೋಗಿರುವುದೂ ಅವನು ಪುನಃ ಬಾರದಂತಿರುವುದೂ, ಎಲ್ಲಾ ವಿಷಯಗಳು ರಾಘವನಿಗೆ ಯೋಗ ಹೇಳಿದ್ದಾನೆ. ಯೋಗ ಮಾತುಗಳನ್ನು ಕೇಳಿದ ರಾಘವನಿಗೆ ವೈದ್ಯನಾಗಿ ಬಂದಿರುವುದು ಸಹ ಇವರ ಮನುಷ್ಯನೇ ಆಗಿರುತ್ತಾನೆ, ಇವರ ಸುಳಿವು ತಿಳಿದುಕೊಳ್ಳುವುದಕ್ಕೇ ಬಂದಿರುತ್ತಾನೆಂದು ಅಂದುಕೊಂಡಿದ್ದಾನೆ. ಆ ವಿಷಯವನ್ನೇ ರಾಘವ ಗಿರಿಜನರಿಗೆ ತಿಳಿಸಿದಾಗ ಅವರು ಆಶ್ಚರ್ಯಪಟ್ಟರು.

ವೈದ್ಯನ ವೇಷದಲ್ಲಿ ಹೋಗಿ ಬಂದ ಅವನಿಂದ ತಮ್ಮ ಮನುಷ್ಯರ ವಿಷಯವನ್ನು ತಿಳಿದುಕೊಂಡ ಮುನೆಪ್ಪ, ಆ ಸಮಾಚಾರವನ್ನು ತಪಸ್ವಿಬಾಬಾರವರಿಗೆ ವಯರ್‌ಲೆಸ್‌ನಲ್ಲಿ ತಿಳಿಸಿದ್ದಾನೆ. ನಂತರ ಬಾಬಾರವರು ಹೇಳಿದ ಪ್ರಕಾರ ತನಗೆ ಪರಿಚಯವಿರುವ ಗಿರಿಜನರಿಂದ, ಮೊಲಗಳ ಭೇಟೆಗೆ ಹೋದ ತಮ್ಮ ಗಿರಿಜನರನ್ನು ರಾಜಯೋಗಾನಂದ ಸ್ವಾಮಿ ಬಂಧಿಸಿದ್ದಾನೆಂದು ಪೊಲೀಸ್ ಸ್ಟೇಷನ್‌ನಲ್ಲಿ ಕೇಸು ಬರೆಯಿಸುವಂತೆ ಮಾಡಿದ್ದಾನೆ. ಕೇಸ್ ಬರೆದುಕೊಂಡ ಸರ್ಕಲ್ ಇನ್‌ಸ್ಪೆಕ್ಟರ್ ಬಾಲಪ್ಪ ಪೊಲೀಸರನ್ನು ಹಿಂದೆ ಇಟ್ಟುಕೊಂಡು ರಾಜಯೋಗಾನಂದ ಸ್ವಾಮಿ ಆಶ್ರಮಕ್ಕೆ ಬಂದಿದ್ದಾನೆ. ಆಶ್ರಮದಲ್ಲಿ ರಾಜಯೋಗಾನಂದ ಸ್ವಾಮಿ ಕುರ್ಚಿಯಲ್ಲಿ ಕುಳಿತುಕೊಂಡು ಇದ್ದಾನೆ. ರಾಘವ ಚಾಪೆಮೇಲೆ ಕೆಳಗೆ ಕುಳಿತುಕೊಂಡಿದ್ದಾನೆ. ಗಿರಿಜನರು ಸಹ ರಾಘವ ಪಕ್ಕದಲ್ಲೇ ಇದ್ದಾರೆ. ಆಶ್ರಮ ಆವರಣದೊಳಗೆ ಬಂದ

ಇನ್‌ಸ್ಪೆಕ್ಟರ್ ಬಾಲಪ್ಪನಿಗೆ ರಾಘವ ಎದ್ದು ಎದುರು ಹೋದನು. ಆತನನ್ನು ಸಮೀಪಿಸಿದ ರಾಘವ ಹೀಗೆ ಕೇಳಿದ್ದಾನೆ.)

**ರಾಘವ :–** ಯಾರು ಬೇಕಾಗಿತ್ರೀ ನಿಮಗೆ?

**ಇನ್‌ಸ್ಪೆಕ್ಟರ್ :–** (ರಾಘವನನ್ನು ಗುಡಾಯಿಸಿ ನೋಡುತ್ತಾ) ಯಾವನೋ ಇಲ್ಲಿ ಸ್ವಾಮಿ?

(ಆ ಮಾತಿಗೆ ರಾಘವ ಬೆಚ್ಚಿಬಿದ್ದನು. ರಾಜಯೋಗಾನಂದ ಸ್ವಾಮಿ ಆ ಮಾತು ಕೇಳಿ ಕಣ್ಣುಬ್ಬು ಮೇಲಕೆತ್ತಿ ಬಂದಿರುವ ಆ ವ್ಯಕ್ತಿ ಕಡೆ ನೋಡಿದ್ದಾನೆ. ರಾಘವ ಏನು ಮಾತನಾಡದಂತೆ, ರಾಜಯೋಗಾನಂದ ಸ್ವಾಮಿ ಕಡೆ ಕೈ ತೋರಿಸಿದ್ದಾನೆ. ಇನ್‌ಸ್ಪೆಕ್ಟರ್ ಸ್ವಾಮಿ ಕಡೆ ಬಂದು ಸ್ವಾಮಿ ಕುಳಿತುಕೊಂಡಿರುವುದನ್ನು ನೋಡಿ "ಏಯ್ ಮೊದಲು ಎದ್ದು ನಿಂತುಕೋ" ಎಂದನು. ಸ್ವಾಮಿ ಮೌನವಾಗಿ ಆತನ ಕಡೆ ನೋಡಿದನು. ಆದರೆ ಮೇಲೇಳಲಿಲ್ಲ. ಅದು ನೋಡಿ ಸಿಟ್ಟಿಗೆದ್ದ ಇನ್‌ಸ್ಪೆಕ್ಟರ್ ಹೆಚ್ಚಿನ ಸ್ವರದಿಂದ "ಏನು ಕೇಳಿಸಲಿಲ್ಲವಾ" ಎಂದನು. ಆ ಮಾತಿಗೆ ಕೂಡಲೇ ರಾಘವ ಹೀಗೆ ಮಾತನಾಡಿದ್ದಾನೆ.)

**ರಾಘವ :–** ನಿಲ್ಲಯ್ಯಾ ನಿಲ್ಲು, ಏಕೆ ಸಿಟ್ಟಿಗೆದ್ದು ಮಾತನಾಡುತ್ತಿದ್ದೀಯ. ಸ್ವಲ್ಪ ನಿಧಾನವಾಗಿ ಮಾತನಾಡು.

**ಇನ್‌ಸ್ಪೆಕ್ಟರ್ :–** ಏನೋ ನಿಮ್ಮೊಂದಿಗೆ ತಗ್ಗಿ ಮಾತನಾಡುವುದು? ನಿಮ್ಮಂತಹ ಕಳ್ಳಸ್ವಾಮಿಗಳನ್ನು ಬಹಳ ಜನರನ್ನು ನೋಡಿದ್ದೇನೆ, ಸ್ವಾಮಿಗಳೆಂದು ಹೆಸರು ಇಟ್ಟುಕೊಂಡು ಮಾದಕ ಪದಾರ್ಥಗಳನ್ನು ಮಾರುತ್ತೀರಾ? ಅದನ್ನು ನೋಡಿದವರನ್ನು ನಿಮ್ಮ ಗುಟ್ಟು ಹೊರಬೀಳದಂತೆ ಬಚ್ಚಿಡುತ್ತೀರಾ, ಮೇಲಾಗಿ ನನ್ನನ್ನೇ ತಗ್ಗಿ ಮಾತನಾಡೆನ್ನುತ್ತೀರಾ?

(ಎಂದು ರಾಘವನ ಅಂಗಿ ಹಿಡಿದು ಎಳೆದು ಹೊಡೆಯುವುದಕ್ಕೆ ಕೈಯ್ಯನ್ನು ಮೇಲಕ್ಕೆತ್ತಿದನು. ಅದೆಲ್ಲಾ ನೋಡುತ್ತಿರುವ ದುಂದುಭಿ, ರಾಧೇಶ್ವರಿ ಓಡುತ್ತಾ ಅಲ್ಲಿಗೆ ಬಂದರು. ಆ ಸಂಘಟನೆಯನ್ನು ನೋಡಿದ ಗಿರಿಜನರು ಎಲ್ಲರೂ ರಾಘವ ಹತ್ತಿರಕ್ಕೆ ಬಂದು ನಿಂತಿದ್ದಾರೆ. ಅದೆಲ್ಲಾ ನೋಡಿದ ಸ್ವಾಮಿ ಹೀಗೆ ಹೇಳಿದ್ದಾನೆ.)

**ರಾಜಯೋಗಾನಂದ :–** ಪೋಲೀಸ್ ಉದ್ಯೋಗ ಮನುಷ್ಯರನ್ನು ಹೊಡೆಯುವ ಲೈಸೆನ್ಸ್ ಎಂದುಕೊಳ್ಳಬೇಡ. ಮೊದಲು ಆತನ ಷರ್ಟು ಬಿಟ್ಟು ನನ್ನೊಂದಿಗೆ ಮಾತನಾಡು.

(ಸ್ವಾಮಿಕಡೆ ನೋಡಿದ ಇನ್‌ಸ್ಪೆಕ್ಟರ್ ಬಾಲಪ್ಪ ಕೂಡಲೇ ರಾಘವ ಷರ್ಟನ್ನು ಬಿಟ್ಟು ಸ್ವಾಮಿ ಕಡೆ ತಿರುಗಿದನು. ಆಗ ಸ್ವಾಮಿ ಹೀಗೆ ಹೇಳಿದ್ದಾನೆ.)

**ರಾಜಯೋಗಾನಂದ :–** ನೋಡಯ್ಯಾ! ಹುಟ್ಟಿನಿಂದ ಎಲ್ಲರೂ ಮನುಷ್ಯರೇ ಆದರೂ, ನಿನ್ನ ಮೈಮೇಲೆ ಖಾಕೀಡ್ರಸ್ಸು, ತಲೆಮೇಲೆ ಟೋಪೀ ಇಟ್ಟುಕೊಂಡಷ್ಟು ಮಾತ್ರಕ್ಕೆ ನೀನು ಒಬ್ಬ ಮನುಷ್ಯನೆನ್ನುವ ಸತ್ಯವನ್ನು ಮರೆಯಬೇಡ. ತಾಯಿ ಹಾಲು ಕುಡಿಯದೇ, ಮನುಷ್ಯರ ಮಮತೆ ಹಂಚಿಕೊಳ್ಳದೇ ಯಾವ ವ್ಯಕ್ತಿ ಭೂಮಿಮೇಲೆ ಇರುವುದಿಲ್ಲ. ಹುಟ್ಟಿದಾಗ ಇಲ್ಲದ ಈ ಡ್ರಸ್ಸು, ಟೋಪೀ ಈಗ ಬಂದಷ್ಟು ಮಾತ್ರಕ್ಕೆ ನಾನು ಒಬ್ಬ ಮನುಷ್ಯನೆಂದು ಮರೆತುಹೋಗಿ ಅಮಾನುಷವಾಗಿ ಪ್ರವರ್ತಿಸುವುದು ಒಳ್ಳೆಯದಲ್ಲ. ನೀನು ಬಂದ ಕೆಲಸವೇನೋ ಹೇಳು.

**ಇನ್‌ಸ್ಪೆಕ್ಟರ್ :–** ಏನು ನೀತಿ ವಾಕ್ಯಗಳು ಹೇಳುತ್ತಿದ್ದೀಯ? ನಿನ್ನ ಹುದ್ದೆ ಏನೋ, ನನ್ನ ಹುದ್ದೆ ಏನೋ ತಿಳಿದಿದೆಯಾ?

**ರಾಜಯೋಗಾನಂದ :–** ನಾನು ಹೇಳುವುದು ನೀತಿಗಳು ಅಲ್ಲ, ಜ್ಞಾನ, ನನ್ನ ಹುದ್ದೆ ತಿಳಿದಿದೆಯಾ ಎಂದು ಕೇಳುತ್ತಿದ್ದೀಯ. ನಿನಗೆ ಎದುರುಗಡೆ ಒಂದು ಬೋರ್ಡು ಬರೆದು ಇಟ್ಟಿದ್ದೇವೆ. ಅದರಲ್ಲಿ **"ನಿನ್ನ ಘನತೆ, ನಿನ್ನ ಹಿರಿಮೆ, ನಿನ್ನ ಬಲ, ನಿನ್ನ ಧನ, ನಿನ್ನ ಪದವಿ, ನಿನ್ನ ಉದ್ಯೋಗ ಮಧ್ಯದಲ್ಲಿ ಬಂದು ಮಧ್ಯದಲ್ಲಿ ಹೋಗುವವೇ. ಕೊನೆಗೆ ನಿನ್ನ ಶರೀರವೂ ಸಹ ನಿನ್ನ ಮಾತು ಕೇಳದ ದಿನ ಒಂದಿದೆ ಜಾಗ್ರತೆ!"** ಎಂದು ಬರೆದು ಇಟ್ಟಿದ್ದೇವೆ. ನೀನು ಒಬ್ಬ ಉದ್ಯೋಗಿ. ನಾನು ಒಬ್ಬ ಯೋಗಿ. ವಿವರವಾಗಿ ಹೇಳಿದರೆ ನೀನು ಖಾಲಿ ಯೋಗಿ, ನಾನು ತುಂಬಿದ ಯೋಗಿ, ಎಲ್ಲ ವಿಧದಲ್ಲಿ ನಿನಗಿಂತ ನಾನೇ ಹಿರಿಯನು. ನನ್ನ ಹುದ್ದೆ ಏನೋ ಹೇಳಿದರೇ ನಿನಗೆ ಹೊಸ ಬಾಷೆ ಕೇಳಿದಂತಿರುತ್ತದೆ. ನಿನ್ನ ಹುದ್ದೆ ವಿಷಯಕ್ಕೆ

ಬಂದರೆ ನೀನು ಒಬ್ಬ ಸಣ್ಣ ಉದ್ಯೋಗಿ. ನಿನಗಿಂತ ಎಷ್ಟೋ ದೊಡ್ಡ ಹುದ್ದೆಗಳು ಇರುವವರಿದ್ದಾರೆ. ಅವರಿಗೆ ನೀನು ಸೆಲ್ಯೂಟ್ ಮಾಡಬೇಕಾದ್ದೆ. ನನ್ನದು ಅಂತಹ ಉದ್ಯೋಗವಲ್ಲ. ನನ್ನ ಹುದ್ದೆಗೆ ನಿನಗಿಂತ ಹಿರಿಯರೂ ಸಹ ನನ್ನನ್ನು ಗೌರವಿಸುತ್ತಾರೆ. ನೀನು ಸ್ವಲ್ಪ ಮಟ್ಟಿಗೆ ಓದುಕೊಂಡು, ಎಷ್ಟೋ ಪರದಾಡಿ ಅವನ ಕಾಲು, ಇವನ ಕಾಲು ಹಿಡಿದುಕೊಂಡು ಪ್ರಯತ್ನ ಮಾಡಿದ್ದರೇ ನಿನಗೆ ಈ ಉದ್ಯೋಗ ಬಂದಿದೆ. ನಾನು ಒಬ್ಬ ಯೋಗಿ, ಮಾನವತಾ ಮಾರ್ಗದಿಂದ ಪಕ್ಕದ ದಾರಿಗೆ ಹೆಜ್ಜೆಹಾಕುವವರನ್ನು, ನೀವು ಹಾಕುತ್ತಿರುವುದು ತಪ್ಪು ಹೆಜ್ಜೆ ಎಂದು ತಿಳಿಸಿ ಒಳ್ಳೆಯದಾಗಿ ನಡೆಸುವುದು ನನ್ನ ಕರ್ತವ್ಯ. ನೀನು ತಪ್ಪು ಮಾಡಿದವರ್ಯಾರೋ ತಿಳಿದುಕೊಂಡು ಆಧಾರಗಳೊಂದಿಗೆ ಸಹ ಅವರನ್ನು ಕಾನೂನಿಗೆ ಒಪ್ಪಿಸುವುದು ನಿಮ್ಮ ಜವಾಬ್ದಾರಿ. ಹಾಗಲ್ಲದೆ, ತಪ್ಪು ಮಾಡಿದವರ್ಯಾರೋ ತಿಳುದುಕೊಳ್ಳದಂತೆ, ತಪ್ಪು ಮಾಡಿದಂತೆ ಆಧಾರಗಳು ಇಲ್ಲದೆ, ತಪ್ಪಿತಸ್ಥನಂತೆ ಲೆಕ್ಕಿಸಿ ಮಾತನಾಡುವುದು ಕಾನೂನು ವಿರುದ್ಧ. ನೀನು ಸಭ್ಯತೆಯಿಂದ ಮಾತನಾಡದಂತೆ ನೀನ್ಯಾರೋ ಎಂದು, ಸ್ವಾಮಿ ಯಾರೋ ಎಂದು ಅನ್ನುತ್ತಾ ಬಂದಿದ್ದೀಯ. ನಿನ್ನ ಓದನ್ನು ಯಾವ ಶಾಲೆಯಲ್ಲಿ ಕಲೆತಿದ್ದೀಯ? ಮೇಲಾಗಿ ಮಾಧಕ ಪದಾರ್ಥಗಳನ್ನು ಮಾರುವ ಕಳ್ಳ ಸ್ವಾಮಿಗಳೆಂದು ದೂಷಿಸುತ್ತಾ, ಅಧಿಕಾರದ ಮದವೇರಿ ರಾಘವ ಮೇಲೆ ಕೈ ಎತ್ತುತ್ತೀಯಾ?

**ಇನ್‌ಸ್ಪೆಕ್ಟರ್** :- ಏಯ್ ಮರ್ಯಾದೆಯಿಂದ ಮಾತನಾಡು. ನೀನ್ಯಾರು ನನ್ನನ್ನು ದಂಡಿಸುವುದಕ್ಕೆ, ನನ್ನ ಮೇಲಿನ ಅಧಿಕಾರಿಯಾ?

**ರಾಘವ** :- ಇನ್‌ಸ್ಪೆಕ್ಟರ್.... ಈಗಲಾದರೂ ನಿನ್ನ ತಪ್ಪನ್ನು ನೀನು ತಿಳಿದುಕೋ? ಹಿತ ಬೋಧಿಸುವ ಸ್ವಾಮಿಯನ್ನು ಮತ್ತೊಂದು ಸಲ ಏಯ್ ಎಂದು ಕರೆದರೆ, ನಿನ್ನ ಶರೀರದಲ್ಲಿ ರಕ್ತ ನಿನ್ನ ನಾಡಿಗಳಲ್ಲಿ ಪ್ರವಹಿಸುವುದಿಲ್ಲ. ನಿನ್ನ ಅಧಿಕಾರಗಳು ಕಳಚಿಹೋಗುತ್ತವೆ. ನಾನೊಬ್ಬ ಅಧಿಕಾರಿ ಎಂದು, ನಿನ್ನ ಹಿಂದೆ ಡಿಪಾರ್ಟ್‌ಮೆಂಟ್ ಬಲವೆಷ್ಟೋ ಇದೆಯೆಂದು, ನಿಮ್ಮ ಬಲದ ಮುಂದೆ ನಾವೆಷ್ಟು ಎಂದುಕೊಂಡಿದ್ದೀ ಯೇನೋ! ಹೋಗುವ ಪ್ರಾಣವನ್ನು ಡಿಪಾರ್ಟುಮೆಂಟ್ ಆಗಲೀ, ಕಾನೂನಾಗಲೀ

ನಿಲ್ಲುಸುವುದಿಲ್ಲ. ನೀನು ಸತ್ತರೇ ನಿನ್ನ ಡಿಪಾರ್ಟುಮೆಂಟ್ ನಿನ್ನ ಹೆಂಡತಿಗೆ ಪಿಂಚಣಿ ಕೊಡಬಲ್ಲದೇನೋ ಆದರೆ ಗಂಡನನ್ನು ಕೊಡುವುದಿಲ್ಲ. ನೀನು ಇಲ್ಲಿಗೆ ಬಂದಿರುವುದು ಯಾರು ಅಪರಾಧಿಗಳೆಂದು ತಿಳಿದುಕೊಂಡು, ಅವರು ಬಗ್ಗದೇ ಹೋದರೆ ನೀನು ದಂಡಿಸಿ ಆದರೂ ಕಾನೂನಿಗೆ ಒಪ್ಪಿಸಬಹುದು. ಯಾರು ಅಪರಾಧಿಗಳೆಂದು ತಿಳಿಯದೇ ನಿನ್ನ ಇಷ್ಟಬಂದಂತೆ ಮಾತನಾಡಿದರೇ, ಸುಮ್ಮನಿರುವುದಕ್ಕೆ ಇಲ್ಲಿ ಪ್ರಾಣಿಗಳು ಇಲ್ಲ. ಮಾನಾವಮಾನಗಳು ತಿಳಿದ ಮನುಷ್ಯರಿದ್ದೇವೆ. ನಮ್ಮ ಮಾನಕ್ಕು ಅಭಿಮಾನಕ್ಕು ಲೋಪ ಏರ್ಪಟ್ಟಾಗ, ಸ್ವಾಮಿ ಗೌರವವನ್ನು ಭಂಗ ಪಡಿಸಿದಾಗ ನಾವು ಬದುಕಿ ಪ್ರಯೋಜನವಿಲ್ಲ. ನಿನ್ನನ್ನು ಸಾಯಿಸಿ ಆ ತಪ್ಪನ್ನು ನಾವು ಧೈರ್ಯದಿಂದ ಒಪ್ಪಿಕೊಳ್ಳುತ್ತೇವೆ.

(ಎಂದು ಅಲ್ಲಿರುವವರೆಲ್ಲರೂ ಆವೇಶದಿಂದ ಆಯುಧಗಳು ತೆಗೆದುಕೊಂಡರೆ, ಆ ಇನ್‌ಸ್ಪೆಕ್ಟರ್‌ನನ್ನು ಏನು ಮಾಡುತ್ತಾರೋ ಎನ್ನುವ ಸಮಯದಲ್ಲಿ ಅಲ್ಲೇ ಇರುವ ಪೋಲೀಸರು ಮುಂದೆ ಬಂದು, ಸ್ವಾಮಿಯನ್ನು ಹಾಗೆ ಮಾತನಾಡುವುದು ಇನ್‌ಸ್ಪೆಕ್ಟರ್‌ದು ತಪ್ಪು. ನೀವು ಶಾಂತಿಸಿರೆಂದು ಸಮಾಧಾನ ಪಡಿಸುವುದಕ್ಕೆ ಪ್ರಯತ್ನಿಸಿದರು. ಆಗ ಸ್ವಾಮಿ ತಮ್ಮವರನ್ನು ಸುಮ್ಮನಿರಿ ಎಂದು ಹೇಳಿದನು. ಆಗ ಎಲ್ಲರೂ ಸುಮ್ಮನೆ ಇದ್ದರು. ಈತನೊಂದಿಗೆ ನಾನು ಮಾತನಾಡುತ್ತೇನೆ ನೀವು ಆವೇಶಪಡಬೇಡಿ ಎಂದು ಹೇಳಿ ಸ್ವಾಮಿ ಮಾತನಾಡಲು ಆರಂಭಿಸಿದನು.)

**ರಾಜಯೋಗಾನಂದ :-** ನಾನು ಒಳ್ಳೆಯದನ್ನು ಹೇಳಿದರೇ ಕೇಳಿಸಿಕೊಳ್ಳದಂತೆ ನೀನ್ಯಾರು ನನ್ನ ಮೇಲೆ ಅಧಿಕಾರಿನಾ? ಎಂದಿದ್ದೀಯ. ನಾನ್ಯಾರಾಗಿರುವುದು ಮೊದಲೇ ಹೇಳಿದ್ದೇನೆ. ಅದು ಕೇಳಿಯೂ ಸಹ ನೀನು ಯಾರು ಎಂದಿರುವುದಕ್ಕೆ ನಾನ್ಯಾರಾಗಿರುವುದು ನಿನಗೆ ಚೆನ್ನಾಗಿ ಅರ್ಥವಾಗುವಂತೆ ಹೇಳುತ್ತೇನೆ ಕೇಳು. ನಾನು ನಿನ್ನ ಪ್ರತಿ ವಿಷಯವನ್ನು ತಿಳಿದವನು. ನಿನ್ನ ಮದುವೆ ಸಮಯದಲ್ಲಿ ಹತ್ತು ಲಕ್ಷ ವರದಕ್ಷಿಣೆಯಲ್ಲಿ ಹತ್ತು ಸಾವಿರ ಕಡಿಮೆ ಇದ್ದರೇ ಹತ್ತು ಸಾವಿರ ಕೊಡುವವರೆಗು ತಾಳಿ ಕಟ್ಟುವುದಿಲ್ಲವೆಂದು ಹೆದರಿಸಿ, ಹತ್ತು ಸಾವಿರ ಕೂಡ

ಮದುವೆಯಲ್ಲಿ ವಸೂಲಿ ಮಾಡಿದವನು. ನೀನು ಒಬ್ಬ ರೈತ ಕುಟುಂಬದಿಂದ ಬಂದಿದ್ದರೂ ಸಹ ಒಬ್ಬ ಬಡ ರೈತ ತನ್ನ ಬಡಕಲು ಎತ್ತುಗಳೊಂದಿಗೆ ಧಾನ್ಯದ ಚೀಲಗಳನ್ನು ಮಾರುವುದಕ್ಕೆ ಟೌನಿಗೆ ಬಂದಾಗ, ರಸ್ತೆಗೆ ಅಡ್ಡ ಇಲ್ಲದಂತೆ ಅಂಗಡಿ ಮುಂದೆ ಬಂಡಿಯನ್ನು ನಿಲ್ಲಿಸಿಕೊಂಡು ಚೀಲಗಳನ್ನು ಇಳಿಸುವಾಗ, ನೀನು ಮೋಟಾರ್ ಸೈಕಲ್ ಮೇಲೆ ಬಂದು ನಿನ್ನ ಅಧಿಕಾರ ದರ್ಪವನ್ನು ತೋರಿಸಿ ಆ ರೈತನನ್ನು ಅನವಶ್ಯಕವಾಗಿ ಹೊಡೆದಾಗ ಆತನು ಕಾಲು ಮುರಿದು ಆಸ್ಪತ್ರೆಯಲ್ಲಿ ಸೇರಿದ್ದಾನೆ. ನಾಯಿಗಳ ಸಹಾಯದಿಂದ ಹುಲಿಯನ್ನು ಹಿಡಿಯಬಹುದು. ಅದನ್ನು ಎಲ್ಲರೂ ಪ್ರಶಂಸಿಸುತ್ತಾರೆ. ಆದರೆ ಹುಲಿ ಸಹಾಯದಿಂದ ನಾಯಿಯನ್ನು ಹಿಡಿಯಬಾರದು. ಅದನ್ನು ಯಾರೂ ಒಪ್ಪಿಕೊಳ್ಳುವುದಿಲ್ಲ. ಸ್ಮಗ್ಲರ್‌ಗಳನ್ನೂ, ಅಕ್ರಮ ರವಾನೆ ಮಾಡುವವರನ್ನೂ, ಕಳ್ಳರನ್ನೂ, ರೌಡಿಗಳನ್ನು ತಡೆಗಟ್ಟಿ ಪ್ರಜೆಗಳಿಗೆ ಒಳ್ಳೆಯದನ್ನು ಮಾಡು. ಆಗ ಎಲ್ಲರೂ ನಿನ್ನನ್ನು ಹೊಗಳುತ್ತಾರೆ. ಹಾಗಲ್ಲದೆ ಹಣಕ್ಕಾಗಿ ಒಳ್ಳೆಯವರನ್ನು ಕೆಟ್ಟವರಾಗಿ ಆರೋಪಿಸಿ, ಕಳ್ಳರು ಆಗದವರನ್ನು ಕಳ್ಳರಾಗಿ, ಸಾತ್ವಿಕರನ್ನು ರೌಡಿಗಳಾಗಿ ವರ್ಣಿಸಿ ದುರ್ಮಾರ್ಗರನ್ನು ಕಾಪಾಡಬೇಕೆಂದುಕೊಂಡರೇ ಯಾರೂ ನಿನ್ನನ್ನು ಹೊಗಳುವುದಿಲ್ಲ. ಎಲ್ಲರೂ ನಿನ್ನನ್ನು ಕೆಟ್ಟವನು ಎನ್ನುತ್ತಾರೆ.

ನೀನು ನಿನ್ನ ಉದ್ಯೋಗಕ್ಕೆ ತಕ್ಕಂತೆ ಒಂದೂ ಸಹ ಒಳ್ಳೆಯ ಕೆಲಸ ಮಾಡಲಿಲ್ಲ. ನೀನು ಮಾಡಿದ ನೀತಿಗೆಟ್ಟ ಕೆಲಸಗಳು ಎಷ್ಟೋ ಇವೆ. ನೀನು ಯಾರು ನನಗೆ ನೀತಿ ವಾಕ್ಯಗಳು ಹೇಳುವುದಕ್ಕೆ, ನನ್ನ ಮೇಲಿನ ಆಫೀಸರಾ? ಎಂದು ಕೇಳಿದ್ದೀಯಲ್ಲವೆ! ಈಗ ನೀನು ಇಲ್ಲಿಗೆ ಬಂದು ಪ್ರವರ್ತಿಸಿದ ವಿಷಯವನ್ನು ನಿಮ್ಮ ಡಿ.ಐ.ಜಿ ಗೂ, ಡಿ.ಜಿ.ಪಿ ಗೂ, ಹೋಮ್ ಮಂತ್ರಿಗೂ ತಿಳಿಸಿ, ನಿನ್ನ ಇಷ್ಟಬಂದಂತೆ ಹೊಡೆಯುವುದಕ್ಕೂ, ದುರಹಂಕಾರದಿಂದ ಪ್ರವರ್ತಿಸುವುದಕ್ಕೂ ಸ್ವೇಚ್ಛೆಯನ್ನು ಯಾವ ರಾಜ್ಯಾಂಗ ಕೊಟ್ಟಿದೆಯೋ ಕೇಳುತ್ತೇವೆ. ಒಂದು ಆಶ್ರಮದೊಳಗೆ ಬಂದು, ಗುರುಗಳ ಹತ್ತಿರ ಕೆಟ್ಟದಾಗಿ ಮಾತನಾಡುವುದು, ಬುದ್ಧಿಮಾತು ಹೇಳುವವರ ಹತ್ತಿರ ರೊಚ್ಚಿಗೆದ್ದು ಕೈ ಮಾಡಿಕೊಳ್ಳುವುದು ಕಾನೂನು ಬದ್ದವಾ? ಎಂದು ಕೋರ್ಟಿನಲ್ಲಿ ಕೇಸು ಇಡುತ್ತೇವೆ.

ನಾವು ಎಷ್ಟೋ ತಾಳ್ಮೆಯಿಂದ ಇಲ್ಲಿಯವರೆಗು ಮಾತನಾಡಿದ್ದೇವೆ. ನೀನು ಒಬ್ಬ ಉದ್ಯೋಗಿ. ನಿನ್ನ ಕೆಳಗಿರುವವನು ನಿನಗೆ ಸಲ್ಯೂಟ್ ಹೊಡೆದರೂ, ನೀನು ನಿನ್ನ ಮೇಲಿನ ಉದ್ಯೋಗಿಗೆ ಸೆಲ್ಯೂಟ್ ಮಾಡಬೇಕಾದ್ದೇ. ಇನ್ನು ನಾವು ಯಾರಿಗೂ ನಮಸ್ಕರಿಸುವುದಿಲ್ಲ. ನಮ್ಮನ್ನೇ ಎಲ್ಲರೂ ಗೌರವದಿಂದ ನಮಸ್ಕರಿಸುತ್ತಾರೆ. ನಮ್ಮ ಜ್ಞಾನವನ್ನು ತಿಳಿದುಕೊಂಡು ಮಾನವತ್ವದಲ್ಲಿ ಬದಲಾವಣೆ ಹೊಂದಿ, ಎರಡನೆ ಜನ್ಮದಂತೆ ಬದಲಾವಣೆ ಹೊಂದಿದ ನಮ್ಮ ಮಾನಸಪುತ್ರರು ಎಷ್ಟೋ ಜನ ಇದ್ದಾರೆ. ಅವರು ನಮ್ಮ ಬೆಲೆ ತಿಳಿದವರಾಗಿ ನಮಗಾಗಿ ಪ್ರಾಣ ಕೊಡುವುದಕ್ಕಾದರೂ ಸಂಸಿದ್ಧವೇ. ನನ್ನನ್ನು ನೀನು ಅಸಭ್ಯವಾಗಿ ಮಾತನಾಡಿದ ಮಾತುಗಳಿಗೆ ನಿನ್ನ ಹಿಂದಿರುವವರಿಗೆ ಯಾರಿಗೂ ಹೆದರದೇ ನಿನ್ನನ್ನು ಏನಾದರೂ ಮಾಡಬಲ್ಲರು. ಆದರೆ ನಿನಗೆ ಉದ್ಯೋಗ ಇರುವವರೆಗೇ ನಿನ್ನ ಹಿಂದೆ ನಿನ್ನ ಡಿಪಾರ್ಟ್‌ಮೆಂಟ್ ಇರುತ್ತದೆ. ಆಕಡೆ ನಿನ್ನ ಗೋಳು ಕೇಳುವವರಿರುವುದಿಲ್ಲ. ನಿನ್ನ ಉದ್ಯೋಗ ಹೋದ ನಂತರ ರೋಡಿನಲ್ಲಿ ಕಸಗೂಡಿಸುವವನೂ ಸಹ ನಿನಗೆ ನಮಸ್ಕರಿಸುವುದಿಲ್ಲ. ಆದರೆ ನಮಗೆ ಈದಿನ ಇರುವ ಮರ್ಯಾದೆ ಎಂದಿಗೂ ಇರುತ್ತದೆ.

ಅಷ್ಟೇ ಅಲ್ಲದೆ ಪ್ರತಿ ಕೆಲಸದ ಹಿಂದೆ ಕಾಣಿಸದಂತಿರುವ ಪಾಪ, ಪುಣ್ಯ ಎನ್ನುವವು ನಿನಗೆ ತಿಳಿಯವು. ಈಗಾಗಲೇ ನಿನ್ನ ಪಾಪ ನಿನ್ನ ಕರ್ಮಚಕ್ರದಲ್ಲಿ ತುಂಬಿಹೋಗಿದೆ. ಈ ಪೊಲೀಸ್ ಉದ್ಯೋಗ ನಿನಗೆ ಹತ್ತು ಜನ್ಮಗಳಿಗೆ ಸರಿಹೋಗುವ ಪಾಪವನ್ನು ತಂದಿಟ್ಟಿದೆ. ಇಂದಿಗಾದರೂ ಕಣ್ಣುತೆರೆದು ಜ್ಞಾನವೆಂದರೇ ಏನೋ ತಿಳಿದುಕೋ. ನಿನ್ನ ಹುಟ್ಟುವಿಕೆ ಮತ್ತು ಸಾವಿನ ರಹಸ್ಯ ತಿಳಿದುಕೋ. ಹಾಗಲ್ಲದೆ ಹುಟ್ಟಿದ್ದೇನೆ, ಡ್ಯೂಟೀ ಮಾಡಿದ್ದೇನೆ ಎಂದರೇ ಆ ಕೆಲಸಗಳು ಹುತ್ತದಲ್ಲಿನ ಇರುವೆಗಳು ಸಹ ಮಾಡುತ್ತಿವೆ. ಈಗ ನೀನು ಗಿರಿಜನರ ಹತ್ತಿರ ಹತ್ತು ಸಾವಿರ ಹಣ ತೆಗೆದುಕೊಂಡು ಅವರು ಕೊಟ್ಟಿರುವ ರಿಪೋರ್ಟಿನಿಂದ ನನ್ನನ್ನು ಅವಮಾನಿಸಬೇಕೆಂದು ಬಂದಿದ್ದೀಯ. ನಿನ್ನ ಹಿಂದೆ ಯಾರ ಪ್ರೋತ್ಸಾಹ ಬಲವಿದೆಯೆಂದು ನನಗೆ ಗೊತ್ತು. ನಮ್ಮ ಹತ್ತಿರ ಇರುವ ವಜ್ರಗಳ ಕಳ್ಳರಿಗಾಗಿ ಬಂದಿದ್ದೀಯ. ವಾಸ್ತವಕ್ಕೆ ವಜ್ರಗಳ ವಿಷಯ ನಿನಗೂ ಸಹ ತಿಳಿಯದು. ಅವರನ್ನು ನಮ್ಮ ನಿರ್ಬಂಧದಿಂದ ಬಿಡಿಸಿ ನಮ್ಮನ್ನು ಅವಮಾನಿಸಬೇಕೆಂದು ಬಂದಿದ್ದೀಯ. ಆದರೆ ಅವರು ನಮ್ಮ ಹತ್ತಿರ

ಏಕೆ ಸಿಲುಕಿಕೊಂಡಿದ್ದಾರೋ ನಿನಗೆ ತಿಳಿಯದು. ನಿನ್ನೆಯ ದಿನ ವೈದ್ಯನಂತೆ ಬಂದುಹೋದ ವ್ಯಕ್ತಿ ಸಹ ಯಾರೋ ನಮಗೆ ಗೊತ್ತು.

**ಇನ್ಸ್ಪೆಕ್ಟರ್ :–** ನೀವು ಎಲ್ಲಾ ತಿಳಿದವರು, ಹಾಗೆ ಅವರನ್ನು ಬಂಧಿಸುವುದು ಅಪರಾಧ ಆಗುತ್ತದೆ.

**ರಾಜಯೋಗಾನಂದ :–** ಒಬ್ಬ ದೇಶ ಪೌರನಾಗಿ ತಪ್ಪಿತಸ್ಥರನ್ನು ಕಾನೂನಿಗೆ ಒಪ್ಪಿಸುವುದು ನನ್ನ ಜವಾಬ್ದಾರಿ. ಅವರ ಹಿಂದೆ ಇರುವ ಅಸಲಾದ ತಪ್ಪಿತಸ್ಥರು ಹೊರಬರುವುದಕ್ಕೇ ನಾವು ಅವರನ್ನು ಬಂಧಿಸಿದ್ದೇವೆ. ಒಂದು ವಿಧವಾಗಿ ನೀವು ಮಾಡಲಾರದ ಕೆಲಸವನ್ನು ನಾವು ಮಾಡಿದ್ದೇವೆ.

**ಇನ್ಸ್ಪೆಕ್ಟರ್ :–** ನೀವು ಎಲ್ಲಾ ವಿಷಯಗಳನ್ನು ಹೇಳುತ್ತಿದ್ದೀರ. ಹಾಗಿರುವಾಗ ಅಸಲು ತಪ್ಪಿತಸ್ಥರು ಯಾರೋ ಸಹ ನಿಮಗೆ ತಿಳಿದಿರುತ್ತದೆಂದುಕೊಳ್ಳುತ್ತೇನೆ.

**ರಾಜಯೋಗಾನಂದ :–** ನನಗೆ ಗೊತ್ತು ಆದರೆ ನೀನು ನನ್ನ ಮಾತನ್ನು ನಂಬುತ್ತೀಯಾ? ಆಧಾರ ಬೇಕೆನ್ನುತ್ತೀಯ. ಆಧಾರವನ್ನು ಕಾನೂನಿಗೆ ತೋರಿಸುವು ದಕ್ಕಾಗಿ ಅವರನ್ನು ನಮ್ಮ ಹತ್ತಿರ ಬಂಧಿಸಿದ್ದೇವೆ.

**ಇನ್ಸ್ಪೆಕ್ಟರ್ :–** ನೀವು ಇದಕ್ಕೂ ಮೊದಲು ಮಾತನಾಡುತ್ತಾ ನಿಮ್ಮ ಹತ್ತಿರ ಬಂಧಿಸಲಾಗಿರುವವರು ವಜ್ರಗಳ ಕಳ್ಳರೆಂದು ಹೇಳಿದ್ದೀರ. ಅವು ಯಾವ ವಜ್ರಗಳು?

**ರಾಜಯೋಗಾನಂದ :–** ನಮ್ಮ ದೇಶದಲ್ಲಿ ಪ್ರಖ್ಯಾತ ದೇವಾಲಯಗಳಲ್ಲಿ ಪೂರ್ವದ ರಾಜರು ಬಚ್ಚಿಟ್ಟಿರುವ ವಜ್ರಗಳನ್ನು ಕಳ್ಳತನ ಮಾಡಿ ಅವುಗಳನ್ನು ಪೊಲೀಸ್‌ನವರು ಕಂಡುಹಿಡಿಯದಂತೆ ಬುದ್ಧಿವಂತಿಕೆಯಿಂದ ಹಾವಿನ ಹೊಟ್ಟೆಯಲ್ಲಿ ಇಟ್ಟು, ಬೇರೊಂದು ಸ್ಥಳಕ್ಕೆ ಬದಲಾಯಿಸುವ ಪ್ರಯತ್ನದಲ್ಲಿ ಆ ಹಾವು ನಮ್ಮ ಹತ್ತಿರಕ್ಕೆ ಬಂದು ಸೇರಿದೆ. ಆ ಹಾವಿಗೋಸ್ಕರ ಬಂದು ಸಿಕ್ಕಿದವರೇ ನಮ್ಮ ಅಧೀನದಲ್ಲಿ ಇರುವವರು. ಈಗಾದರೂ ಅರ್ಥವಾಯಿತಾ? ಯಾರು ಕಳ್ಳರೋ! ನೀವೇನೋ ನಮ್ಮನ್ನು ಕಳ್ಳರಿಗಿಂತ ಹೀನವಾಗಿ ಮಾತನಾಡುತ್ತಾ ಬಂದಿದ್ದೀಯ.

**ಇನ್ಸ್ಪೆಕ್ಟರ್ :–** ಹಾಗೆ ಸಿಕ್ಕಿರುವ ವಜ್ರಗಳನ್ನು ನೀವು ಸರ್ಕಾರಕ್ಕೆ ಒಪ್ಪಿಸದಿರುವುದು ಅಪರಾಧವಾಗುತ್ತದೆ.

**ರಾಜಯೋಗಾನಂದ :–** ಆ ವಜ್ರಗಳು ಇಂತಹ ದೇವಾಲಯದೊಳಗಿನವೆಂದು ತಿಳಿದಾಗಲೇ ಅಲ್ಲವೆ ನಮ್ಮದು ಅಪರಾಧವಾಗುತ್ತದೆ. ಮೇಲಾಗಿ ಅವು ಭೂಮಿಯಲ್ಲಿ ಸಿಕ್ಕಿರುವ ವಜ್ರಗಳು ಅಲ್ಲ. ಆದ್ದರಿಂದ ನಮ್ಮದು ಅಪರಾಧವೆಂದು ನೀವು ನಿರೂಪಿಸಲಾರೆರು.

**ಇನ್‌ಸ್ಪೆಕ್ಟರ್ :–** ನೀವೇ ಹೇಳಿದ್ದೀರಲ್ಲವೆ! ಹೆಸರು ಗಳಿಸಿದ ದೇವಾಲಯ ದೊಳಗಿನವೆಂದು.

**ರಾಜಯೋಗಾನಂದ :–** ಆ ದೇವಾಲಯ ಯಾವುದೆಂದು ನೀವು ತಿಳಿದುಕೊಳ್ಳಬೇಕು. ಆಗ ನಾವು ನಿಮಗೆ ಒಪ್ಪಿಸುತ್ತೇವೆ. ಅದು ಯಾವ ದೇವಾಲಯವೋ ಗುರುತಿಸದವರೆಗೂ ಅವು ನಮ್ಮ ಹತ್ತಿರವೇ ಇರುತ್ತವೆ. ಅವು ದೇವಾಲಯದೊಳಗಿನ ದೇವರ ಆಸ್ತಿ.

**ಇನ್‌ಸ್ಪೆಕ್ಟರ್ :–** ದೇವಾಲಯ ವಜ್ರಗಳ ಕಥೆ ಬಿಟ್ಟು ನಿಮ್ಮ ಹತ್ತಿರವಿರುವ ಮನುಷ್ಯರನ್ನು ಕುರಿತು ರಿಪೋರ್ಟು ಬಂದಿದೆ ಅಲ್ಲವೆ! ಅದನ್ನು ಕುರಿತು ನೀವೇನನ್ನುತ್ತೀರ?

**ರಾಜಯೋಗಾನಂದ :–** ನಿಮ್ಮ ರಿಪೋರ್ಟಿನಲ್ಲಿ ನಾವು ಗಿರಿಜನರನ್ನು ಬಂಧಿ ಸಿದ್ದೇವೆಂದು ಬರೆದುಕೊಂಡಿದ್ದೀರಲ್ಲವೆ! ನಮ್ಮ ಹತ್ತಿರವಿರುವವರು ಗಿರಿಜನರಾದರೆ ಅಲ್ಲವೆ! ಅವರು ಗಿರಿಜನರೇ ಅಲ್ಲ. ಅವರು ಗಿರಿಜನರಾದರೇ ಅಲ್ಲ. ನೀನು ಬಿಡಿಸಿಕೊಂಡು ಹೋಗಬೇಕೆಂದುಕೊಂಡರೇ ಅವರ ಹೆಸರುಗಳೊಂದಿಗೆ ಅವರದ್ದು ಇಂತಹ ಊರು ಸ್ವಂತ ಊರೆಂದು ನಿವಾಸ ದೃಢೀಕರಣ ಪತ್ರವನ್ನು ತೆಗೆದುಕೊಂಡು ಬಾ ಆಗ ಬಿಡುತ್ತೇವೆ.

**ಇನ್‌ಸ್ಪೆಕ್ಟರ್ :–** ಅದು ಅಲ್ಲ ಸ್ವಾಮೀ! ಅಲ್ಲಿಯವರೆಗಾದರೂ ಅವರು ನಮ್ಮ ಅಧೀನದಲ್ಲಿ ಇರಬೇಕು. ನಿಮ್ಮ ಅಧೀನದಲ್ಲಿ ಇರಬಾರದು.

**ರಾಜಯೋಗಾನಂದ :–** ನೀವು ಹಿಡಿದುಕೊಂಡಿದ್ದರೇ ನಿಮ್ಮ ಅಧೀನದಲ್ಲಿರಬೇಕಾದ್ದೇ. ನಾವು ಹಿಡಿದುಕೊಂಡಿದ್ದೇವೆ ಅಲ್ಲವೆ! ಅವರು ನಮ್ಮ ಅಧೀನದಲ್ಲಿ ಇರುತ್ತಾರೆ. ನೀವು ಕರೆದುಕೊಂಡು ಹೋಗಿ ಅವರನ್ನು ಬಿಟ್ಟುಹಾಕಬಹುದಲ್ಲವೇ!

**ಇನ್‌ಸ್ಪೆಕ್ಟರ್ :–** ನಿಮ್ಮ ಹತ್ತಿರ ಇರುವುದು ಕಾನೂನು ಒಪ್ಪಿಕೊಳ್ಳುವುದಿಲ್ಲ ಸ್ವಾಮೀ.

**ರಾಜಯೋಗಾನಂದ :–** (ಯೋಗಾಕಡೆ ನೋಡಿ) ನೀನು ಹೇಳುವವರು ನಮ್ಮ ಬಳಿ ಇದ್ದರೆ ಕಾನೂನು ಒಪ್ಪಿಕೊಳ್ಳುವುದಿಲ್ಲ. ನೀನು ಹೇಳುವವರೇ ನಮ್ಮ ಹತ್ತಿರ ಇಲ್ಲದಿರುವಾಗ ನಾವು ಕಾನೂನಿಗೆ ವಿರುದ್ಧವಾಗಿ ನಡೆದವರಲ್ಲ ಅಲ್ಲವೆ! ಒಂದುವೇಳೆ ನಮ್ಮ ಹತ್ತಿರ ಗಿರಿಜನರೇ ಇದ್ದರೇ ಅದಕ್ಕೆ ಅವರು ಗಿರಿಜನರೆನ್ನುವ ಆಧಾರವನ್ನು ತೋರಿಸಿ ಕರೆದುಕೊಂಡು ಹೋಗೆಂದು ಹೇಳುತ್ತಿದ್ದೇವಲ್ಲ! ಹಾಗೆ ಧೃಢೀಕರಣ ಪತ್ರಗಳನ್ನು ನೀನು ತೆಗೆದುಕೊಂಡು ಬಾರದೇ ಹೋದರೆ ನಾನು ಹೋಗುವುದಕ್ಕಿಂತ ಮೊದಲೇ ಗಂಟೆ ಕೆಳಗೇ ಅವರನ್ನು ಬಿಟ್ಟುಹಾಕಿದ್ದಾರೆಂದು ಬರೆದುಕೋ. ವಾಸ್ತವಕ್ಕೆ ಅವರು ಯಾರೂ ನಮ್ಮ ಹತ್ತಿರ ಇಲ್ಲ.

**ಇನ್‌ಸ್ಪೆಕ್ಟರ್ :–** ನಾನು ಒಂದು ಸಲ ನೋಡಬಹುದಾ.

**ರಾಜಯೋಗಾನಂದ :–** ನೀನು ಬಂದು ಮಾತನಾಡಿದ ರೀತಿಯನ್ನು ಅನುಸರಿಸಿ ಇಲ್ಲಿಯವರೆಗು ನಿನಗೆ ತಕ್ಕಂತೆ ಮಾತನಾಡಿದ್ದೇವೆ. ಈಗ ಮಾತನಾಡುವುದೇನೆಂದರೇ ನೀನು ಇಲ್ಲಿ ಆಶ್ರಮವೆಲ್ಲಾ ನೋಡಿಕೊಂಡರೂ ಅವರು ಯಾರೂ ಇಲ್ಲಿ ಇಲ್ಲವೆಂದು ನಿನಗೇ ಅರ್ಥವಾಗುತ್ತದೆ. ನೀವು ಗಿರಿಜನರು ಎಂದರೇ ಅವರನ್ನು ನಾವು ಬಂಧಿಸಿದರೂ ಸರಿಯಾದ ಧೃಢೀಕರಣ ಪತ್ರಗಳೊಂದಿಗೆ ಬರಲು ತಿಳಿಸಿದ್ದೇವೆ. ನಾವು ಯಾವ ಗಿರಿಜನರನ್ನೂ ಬಂಧಿಸಲಿಲ್ಲ. ಆದ್ದರಿಂದ ನಾವು ಭಯಪಡಬೇಕಾದ ಅಗತ್ಯವಿಲ್ಲ.

**ಇನ್‌ಸ್ಪೆಕ್ಟರ್ :–** ನೀವು ಇಲ್ಲಿಯವರೆಗು ವಜ್ರಗಳ ಕಳ್ಳರನ್ನು ಬಂಧಿಸಿದ್ದೇವೆ ಎಂದಿದ್ದೀರಲ್ಲ!

**ರಾಜಯೋಗಾನಂದ :–** ಹೌದು, ಎಂದಿದ್ದೇನೆ. ನಾವು ಬಂಧಿಸಿರುವುದು ವಜ್ರಗಳ ಕಳ್ಳರನ್ನೇ, ಈಗಲೂ ಸಹ ಅದೇ ಹೇಳುತ್ತಿದ್ದೇವಲ್ಲ! ನೀನು ಕೇಳುತ್ತಿರುವುದು ಗಿರಿಜನರನ್ನು. ಅದೂ ನಮ್ಮ ಆಶ್ರಮದಲ್ಲಿ ಬಂಧಿಸಿದ್ದೇವೆಂದು ಕೇಳುತ್ತಿದ್ದೀಯ. ನಮ್ಮ ಆಶ್ರಮದಲ್ಲಿ ನೀನು ಹೇಳುತ್ತಿರುವವರನ್ನು ಬಂಧಿಸಲಿಲ್ಲ ಎಂದು ಹೇಳುತ್ತಿದ್ದೇವೆ.

ನಾವು ಬಂಧಿಸಿರುವುದು ವಜ್ರಗಳ ಕಳ್ಳರೆನ್ನುವವರನ್ನು ಸಹ ಆಶ್ರಮದಲ್ಲಿ ಬಂಧಿಸಿದ್ದೇವೆಂದು ಹೇಳಲಿಲ್ಲವೇ! ಈಗಲೂ ಸಹ ಆಶ್ರಮದಲ್ಲಿ ಬಂದೀಯಾಗಿರುವವರು ಯಾರೂ ಇಲ್ಲವೆಂದು ಹೇಳುತ್ತಿದ್ದೇವೆ. ನನ್ನ ಮಾತಿನ ಮೇಲೆ ನಂಬಿಕೆ ಇಲ್ಲದೇ ಹೋದರೇ ನೀನು ಆಶ್ರಮವೆಲ್ಲಾ ಒಂದು ಸಲ ನೋಡಿ ಯಾರಾದರೂ ನಮ್ಮ ಹತ್ತಿರ ಬಂಧೀಗಳಾಗಿ ಇರುವುದೂ ಇಲ್ಲದಿರುವುದೂ ನಿರ್ಧಾರಿಸಿಕೊಂಡು ಹೋಗು.

(ಆಗ ಇನ್‌ಸ್ಪೆಕ್ಟರ್ ಮತ್ತು ಆತನೊಂದಿಗೆ ಬಂದಿರುವ ಪೊಲೀಸರು ಸ್ವಾಮಿಯೇ ಸ್ವತಃವಾಗಿ ಹೇಳುವುದರಿಂದ ಆಶ್ರಮದಲ್ಲಿ ಎಲ್ಲ ಕೊಠಡಿಗಳನ್ನು ಜರಡಿ ಹಿಡಿದಂತೆ ಹುಡುಕಿದ್ದಾರೆ. ಇಂತಹ ಕೊಠಡಿಯಲ್ಲೇ ಬಂಧಿಸಿದ್ದಾರೆಂದು ರಿಪೋರ್ಟಿನಲ್ಲಿ ಬರೆದ ಕೊಠಡಿಯಲ್ಲೂ ಸಹ ನೋಡಿದ್ದಾನೆ. ಅಲ್ಲಿ ಯಾರೂ ಇಲ್ಲ. ಅವರು ಅಷ್ಟೊಂದು ಹೇಳಿ ಕಳುಹಿಸಿದ್ದಾರೆ. ಇಲ್ಲಿ ನೋಡಿದರೆ ಯಾರೂ ಇಲ್ಲವೆಂದು ಅಂದುಕೊಂಡ ಇನ್‌ಸ್ಪೆಕ್ಟರ್ ಏನೂ ತೋಚದೆ ಸ್ವಾಮಿಗೆ ನಮಸ್ಕಾರವನ್ನು ಹೇಳಿ ಅಲ್ಲಿಂದ ಹೊರಟು ಹೋದನು. ಸ್ಟೇಷನ್‌ಗೆ ಹೋದ ನಂತರ ರಿಪೋರ್ಟು ಕೊಟ್ಟಿರುವ ಗಿರಿಜನರು ಬಂದರು. ಅವರನ್ನು ನೋಡಿ ಇನ್‌ಸ್ಪೆಕ್ಟರ್ ಹೀಗೆ ಎಂದನು.)

**ಇನ್‌ಸ್ಪೆಕ್ಟರ್ :–** ಏನಯ್ಯಾ ಇದು? ನನ್ನನ್ನು ಇಕ್ಕಟ್ಟಿನಲ್ಲಿಡುವ ಕೇಸಿನಂತೆ ಇದೆ. ಅಲ್ಲಿಗೆ ಹೋದರೇ ಅವರು ಬೆದರಿಸಿದರೇ ಭಯಪಡುವ ಮನುಷ್ಯರಲ್ಲ. ನೀವೇನೋ ನಮ್ಮ ಗಿರಿಜನರು ಬಂದೀ ಆಗಿದ್ದಾರೆಂದು ಹೇಳುತ್ತಿದ್ದೀರ. ಅವರೇನೋ ವಜ್ರಗಳು, ಕಳ್ಳರು ಎನ್ನುತ್ತಾರೆ. ಅಲ್ಲಿ ನೋಡಿದರೇ ಯಾರೂ ಇಲ್ಲ. ನನ್ನ ತಲೆ ಕೆಟ್ಟುಹೋಗಿದೆ. ನಿಜಕ್ಕೆ ಏನು ನಡೆದಿರುವುದು ಇರುವುದು ಇದ್ದಂತೆ ಹೇಳಿ.

**ಗಿರಿಜನರು :–** ನಿಜ ಹೇಳುವುದಾದರೇ ನಿನಗೇಕೆ ಹತ್ತುಸಾವಿರ ಕೊಡುತ್ತೇವೆ? ನಮ್ಮವರನ್ನು ಹೇಗಾದರೂ ಬಿಡಿಸು.

**ಇನ್‌ಸ್ಪೆಕ್ಟರ್ :–** ನನ್ನಿಂದ ಆಗುವುದಿಲ್ಲ. ನಿಮ್ಮದು ಅಂತ್ಯಸಿದಂತಹ ವ್ಯವಹಾರದಂತಿದೆ. ಅಲ್ಲಿಗೆ ಹೋಗಿ ಎಲ್ಲಾ ಹುಡುಕಿದರೂ ನೀವು ಹೇಳಿದ ಒಬ್ಬ ಮನುಷ್ಯನೂ ಸಹ

ಇಲ್ಲ. ಅವರೇನೋ ಯಾವುದೂ ಅಂತ್ಯ ಸಿಗದಂತೆ ಮಾತನಾಡಿ ನನ್ನನ್ನೇ ವೆದರಿಸಿ ಕಳುಹಿಸಿದ್ದಾರೆ. ನೀವೇನೋ ಅಸಲು ವಿಷಯ ಹೇಳದಂತಿದ್ದೀರ. ಈ ಕೇಸಿನಲ್ಲಿ ನಾನೇನೂ ಮಾಡಲಾರೆ.

**ಗಿರಿಜನರು :–** ಅಲ್ಲಿ ಯಾರೂ ಇಲ್ಲದಂತಿರುವುದೇನು? ಈ ದಿನ ಬೆಳಗ್ಗೆ ನಮ್ಮ ಮನುಷ್ಯ ಹೋಗಿ ನೋಡಿಬಂದ ನಂತರವೇ ನಿನಗೆ ಹೇಳಿದ್ದೇವೆ. ನಮ್ಮವರು ಅಲ್ಲೇ ಇದ್ದಾರೆ. ಇನ್ನೂ ಇಪ್ಪತ್ತು (20) ಸಾವಿರ ಹಣ ಕೊಡುತ್ತೇವೆ ನಮ್ಮವರನ್ನು ಅಲ್ಲಿಂದ ಹೊರಗೆ ಕರೆದುಕೊಂಡು ಬಾ.

(ಇನ್‌ಸ್ಪೆಕ್ಟರ್ ಬಾಲಪ್ಪನಿಗೆ ಏನೂ ಅರ್ಥವಾಗಲಿಲ್ಲ. ಇವರೇನೋ ಮತ್ತಷ್ಟು ಹಣ ಕೊಡುತ್ತೇವೆನ್ನುತ್ತಿದ್ದಾರೆ. ಅಲ್ಲೇನೋ ಯಾರೂ ಇಲ್ಲ. ಇವರು ನಿಜ ಹೇಳುವುದಿಲ್ಲ. ಅವರು ಏನೂ ಅರ್ಥವಾಗದಂತೆ, ನಾವು ಮನುಷ್ಯರನ್ನು ಹಿಡಿದುಕೊಂಡಿದ್ದೇವೆನ್ನುತ್ತಾರೆ. ಆದರೆ ಅವರು ಗಿರಿಜನರು ಅಲ್ಲ ಎನ್ನುತ್ತಾರೆ. ನಮ್ಮ ಅಧೀನದಲ್ಲಿ ಇದ್ದಾರೆ ಎನ್ನುತ್ತಾರೆ. ಇಲ್ಲಿ ಅಲ್ಲ ಎನ್ನುತ್ತಾರೆ. ಎಂದು ಗೊಂದಲ ಪಡುತ್ತಿದ್ದಾನೆ. ಅಲ್ಲಿಗೆ ಹೋಗಿ ದುರಹಂಕಾರದಿಂದ ಮಾತನಾಡಿರುವುದು ತನ್ನದು ಬಹಳ ತಪ್ಪೆಂದು ತನ್ನ ಮನಸ್ಸಿನಲ್ಲಿ ಅಂದುಕೊಂಡನು. ರಾಜಯೋಗಾನಂದ ಆಶ್ರಮದಲ್ಲಿ ಸ್ವಾಮಿ ಇನ್‌ಸ್ಪೆಕ್ಟರ್‌ನೊಂದಿಗೆ ಮಾತನಾಡುತ್ತಾ ಯೋಗ ಕಡೆ ನೋಡಿದಾಗ ಯೋಗ ಸ್ವಾಮಿ ಉದ್ದೇಶವನ್ನು ಗ್ರಹಿಸಿದವನಾಗಿ ಅಲ್ಲಿಂದ ಮುನೆಪ್ಪ ಮನುಷ್ಯರಿರುವ ಕೊಠಡಿಯೊಳಗೆ ಹೋಗಿ ಕಟ್ಟಿಹಾಕಲ್ಪಟ್ಟಿರುವವರ ತಲೆಗಳ ಮೇಲೆ ಮುತ್ತುಗದ ಬದನಿಕೆಯನ್ನು ತಾಕಿಸಿದ್ದಾನೆ. ಆಗ ಅವರು ಕಾಣಿಸದಂತೆ ಅಲ್ಲೇ ಇದ್ದಾರೆ. ತಾವು ಯಾರಿಗೂ ಕಾಣಿಸುತ್ತಿಲ್ಲವೆಂದು ಅದೃಶ್ಯವಾಗಿದ್ದೇವೆಂದು ಅವರಿಗೆ ತಿಳಿಯದು. ಇನ್‌ಸ್ಪೆಕ್ಟರ್ ತಮ್ಮ ಕೊಠಡಿ ಬಾಗಿಲು ತೆಗೆದು ನೋಡಿದಾಗ ಅವರು ಕರೆದರೂ ಇನ್‌ಸ್ಪೆಕ್ಟರ್‌ಗೆ ತಿಳಿಯಲಿಲ್ಲ. ಹಾಗೆ ಅಲ್ಲಿ ಇನ್‌ಸ್ಪೆಕ್ಟರ್ ತಮ್ಮನ್ನು ನೋಡಿಯೂ ಸಹ ಸುಮ್ಮನೇ ಹೋಗುವುದು ಅವರಿಗೆ ಏನೂ ಅರ್ಥವಾಗಲಿಲ್ಲ.)

**********************************

(ಗಿರಿಜನರು ತಮ್ಮ ಮಾತನ್ನು ಇನ್‌ಸ್ಪೆಕ್ಟರ್ ಕೇಳಿ ಸರಿಯಾಗಿ ಕೆಲಸ ಮಾಡಲಿಲ್ಲವೆಂದು ಆಶ್ರಮಕ್ಕೆ ಹೋಗಿ ಬಂದು ಅಲ್ಲಿ ಯಾರೂ ಇಲ್ಲವೆನ್ನುತ್ತಿದ್ದಾನೆಂದು, ಹಣ ಎಷ್ಟು ಕೊಟ್ಟರೂ ನಿಮ್ಮ ಕೆಲಸ ಮಾಡುತ್ತಾನೆಂಬ ನಂಬಿಕೆ ಇಲ್ಲವೆಂದು ಮುನೆಪ್ಪನಿಗೆ ಗಿರಿಜನರು ವಿಷಯವೆಲ್ಲಾ ಹೇಳಿದ್ದಾರೆ. ಇನ್‌ಸ್ಪೆಕ್ಟರ್ ವಿಷಯವನ್ನು ಕೇಳಿದ ಮುನೆಪ್ಪ ಕಥೆ ಎಲ್ಲಾ ಅಡ್ಡ ತಿರುಗಿದೆಯೆಂದು, ನಂತರ ವಿವರಕ್ಕಾಗಿ ಮುನೆಪ್ಪ ತಪಸ್ವಿ ಬಾಬಾನನ್ನು ವಯರ್‌ಲೆಸ್‌ನಿಂದ ಸಂಪರ್ಕಿಸಿದನು. ವಿಷಯವನ್ನು ತಿಳಿದುಕೊಂಡ ಬಾಬಾರವರು ಸ್ಪಂದಿಸಿ ವಜ್ರಗಳ ವಿಷಯ ಹೊರಬಿದ್ದು ರಟ್ಟಾಗಿ ಹೋಗುತ್ತದೆಂದು, ಬಳ್ಳಿ ಎಳೆದರೆ ಮರವೆಲ್ಲಾ ಕದುಲುವಂತಿದೆಯೆಂದು ಯೋಚಿಸಿ ವಜ್ರಗಳು ಹೋದರೂ ಫರವಾಗಿಲ್ಲ. ಈ ವಿಷಯ ಪೋಲೀಸ್‌ರವರಿಗೆ ತಿಳಿಯಬಾರದೆಂದು, ನಿಮ್ಮವರನ್ನು ಕುರಿತು ಏನೂ ಆಲೋಚಿಸಬೇಡ. ರಾಜಯೋಗಾನಂದ ಸ್ವಾಮಿ ನಂತರ ಏನು ಮಾಡಲಿ ಸಜ್ಜಾಗುತ್ತಾರೋ ನೋಡಿ ನಂತರ ಆಲೋಚಿಸೋಣ ಎಂದು ಹೇಳಿದಾಗ, ಮುನೆಪ್ಪ ಹಾಗೇ ಆಗಲೆಂದು ಹೇಳಿದನು. ಮುನೆಪ್ಪ ಆ ವಿಷಯವನ್ನು ಅಷ್ಟಕ್ಕೇ ನಿಲ್ಲಿಸುವುದಕ್ಕೆ ಯೋಚಿಸಿ ತಮ್ಮ ಹತ್ತಿರವಿರುವ ಗಿರಿಜನರನ್ನು ಪುನಃ ಇನ್‌ಸ್ಪೆಕ್ಟರ್ ಹತ್ತಿರಕ್ಕೆ ಹೋಗಿ ಮಾತನಾಡಲು ಹೇಳಿ ಅಲ್ಲಿ ಮಾತನಾಡಬೇಕಾದ ವಿಷಯವೆಲ್ಲಾ ಹೇಳಿ ಕಳುಹಿಸಿದ್ದಾನೆ.

ಗಿರಿಜನರು ಇನ್‌ಸ್ಪೆಕ್ಟರ್ ಹತ್ತಿರಕ್ಕೆ ಹೋಗಿ ಸ್ವಾಮಿ ಆಶ್ರಮದಲ್ಲಿ ಬಂಧೀಗಳಾಗಿದ್ದಾರೆಂದುಕೊಂಡ ನಮ್ಮವರು ಬಂದಿದ್ದಾರೆ. ನಮ್ಮವರು ಬೇಟೆ ಕೆಲಸದ ಮೇಲೆ ದೂರ ಪ್ರಾಂತಕ್ಕೆ ಹೋಗಿ ಬಂದಿದ್ದಾರಂತೆ. ನಮ್ಮವರು ಬರಲಿಲ್ಲವೆಂದು ನಾವು ಅಂದುಕೊಳ್ಳುತ್ತಿದ್ದರೇ ಯಾರೋ ನಮಗಾಗದವರು ನಿಮ್ಮವರನ್ನು ಆಶ್ರಮದಲ್ಲಿ ಬಂಧಿಸಿದ್ದಾರೆಂದು ಹೇಳಿದ್ದಾರೆ. ಆ ವಿಷಯವನ್ನು ನಾವು ನಿಮ್ಮೊಂದಿಗೆ ಹೇಳುವುದು, ನೀವು ಅಲ್ಲಿಗೆ ಹೋಗಿ ಬರುವುದು ಒಟ್ಟಿನಲ್ಲಿ ನಮ್ಮದೇ ತಪ್ಪು ಎಂದು ಹೇಳಿದ್ದಾರೆ. ಆಶ್ರಮದಲ್ಲಿ ಯಾರೂ ಕಾಣಿಸಲಿಲ್ಲ ಆದ್ದರಿಂದ ಗಿರಿಜನರು ಹೇಳುವುದು ನಿಜವೇ ಎಂದು, ಅವರು ತಪ್ಪು ಹೇಳಿದ್ದಾರೆಂದು ಇನ್‌ಸ್ಪೆಕ್ಟರ್ ಸಹ ಅಂದುಕೊಂಡನು. ಆ ವಿಷಯ ಪೋಲೀಸ್ ಸ್ಟೇಷನ್‌ನಲ್ಲಿ ಅಲ್ಲಿಗೆ ಮುಗಿದು ಹೋಯಿತು. ಇನ್‌ಸ್ಪೆಕ್ಟರ್ ಎರಡನೆ ದಿನ ರಾಜಯೋಗಾನಂದ ಸ್ವಾಮಿ ಹತ್ತಿರಕ್ಕೆ

ಹೋಗಿ ತನ್ನನ್ನು ಕ್ಷಮಿಸಿರೆಂದು ಯಾರೋ ಕೊಟ್ಟಿರುವ ತಪ್ಪು ಸಮಾಚಾರದಿಂದ ನಾವು ಇಲ್ಲಿಗೆ ಬರುವುದು ನಡೆದಿದೆ ಎಂದು ತನ್ನ ತಪ್ಪಿಗೆ ಕ್ಷಮಾಪಣೆ ಕೋರಿ ಬಂದನು.

ರಾಜಯೋಗಾನಂದ ಸ್ವಾಮಿ ಮಲ್ಲುದೊರೆಗೆ ಸಮಾಚಾರವನ್ನು ಕಳುಹಿಸಿ ತನ್ನ ಹತ್ತಿರಕ್ಕೆ ಬರುವಂತೆ ಮಾಡಿಕೊಂಡು ನಡೆದ ವಿಷಯವೆಲ್ಲಾ ಮಲ್ಲುದೊರೆಗೆ ಹೇಳಿ ವಜ್ರಗಳನ್ನು ಜಾಗ್ರತೆಯಿಂದ ತನ್ನ ಸಂರಕ್ಷಣೆಯಲ್ಲಿ ಇಟ್ಟಿಕೊಳ್ಳಲು ಹೇಳಿ ಒಂದು ಒಳ್ಳೆಯ ದಿನ ನೋಡಿ ತೆಗೆದುಕೊಂಡು ಹೋಗೆಂದಿದ್ದಾನೆ. ನಂತರ ಮುನೆಪ್ಪ ಮನುಷ್ಯರ ಹತ್ತಿರಕ್ಕೆ ಹೋಗಿ ಅವರೊಂದಿಗೆ ಸ್ನೇಹಪೂರ್ವಕವಾಗಿ ಮಾತನಾಡುತ್ತಾ "ನಿಮ್ಮನ್ನು ದೋಷಿಗಳಾಗಿ ನಾವು ಲೆಕ್ಕಿಸುತ್ತಿಲ್ಲ. ನೀವು ಬದುಕುವುದಕ್ಕಾಗಿ ಯಾವುದೋ ಒಂದು ಕೆಲಸವನ್ನು ಮಾಡಬೇಕೆಂದು ಮಾಡುತ್ತಿದ್ದೀರ ಹೊರತು ಇದರಲ್ಲಿ ನಿಮ್ಮ ತಪ್ಪು ಏನೂ ಇಲ್ಲ. ಯಾರೋ ಎಲ್ಲೋ ಕುಳಿತುಕೊಂಡು ಅವರ ಲಾಭಕ್ಕಾಗಿ ನಿಮ್ಮನ್ನು ಆಡಿಸುತ್ತಾ ಇರುತ್ತಾರೆ. ನಿಜವಾದ ದೋಷಿಗಳು ನಿಮ್ಮ ಹಿಂದೆ ಇರುವವರೇ ಹೊರತು ನೀವಲ್ಲ. ಇಂದಿಗೂ ನೀವು ಈ ವಿಷಯದಲ್ಲಿ ಬಹಳ ಕಷ್ಟ ಅನುಭವಿಸಿದಂತಿದ್ದೀರ. ಈಗ ನಿಮ್ಮನ್ನು ಬಿಡಿಸಲು ಯಾರೂ ಬರುವುದಿಲ್ಲ. ಈ ವಿಷಯ ಹೊರಗೆ ತಿಳಿಯುತ್ತದೆಂದು ಕೆಲವು ದಿನಗಳು ಸುಮ್ಮನೆ ಇರುವುದು ಒಳ್ಳೆಯದೆಂದು ಅಂದುಕೊಂಡಿದ್ದಾರೆ. ನಿಮ್ಮದು ಇದರಲ್ಲಿ ಯಾವ ತಪ್ಪು ಇಲ್ಲದಿರುವುದರಿಂದ ನಾವು ನಿಮ್ಮನ್ನು ಬಿಡಬೇಕೆಂದುಕೊಂಡಿದ್ದೇವೆ. ಇಂದಿಗಾದರೂ ಸ್ವಾಮಿ ಎಂತಹವನೋ ನೀವು ಅರ್ಥ ಮಾಡಿಕೊಳ್ಳುತ್ತೀರೆಂದುಕೊಳ್ಳುತ್ತೇನೆ. ಎಂದು ಸ್ವಾಮಿ ಹೇಳಿದಾಗ ಎಲ್ಲರೂ ಸ್ವಾಮಿಗೆ ನಮಸ್ಕರಿಸಿ "ಸ್ವಾಮಿ ನಾವು ಹೊಟ್ಟೆಪಾಡಿಗಾಗಿ ತಪ್ಪು ಕೆಲಸಗಳು ಮಾಡುತ್ತಿರುವುದು ವಾಸ್ತವವೇ, ನೀವು ಎಷ್ಟೋ ಉದಾರ ಸ್ವಭಾವವಿರುವವರು ನಾವು ತಪ್ಪು ಮಾಡಿದರೂ, ನಮ್ಮದು ತಪ್ಪಲ್ಲ ನಿಮ್ಮನ್ನು ನಡೆಸುತ್ತಿರುವವರದು ತಪ್ಪೆಂದಿದ್ದೀರ. ಆ ಮಾತು ನಮ್ಮನ್ನು ಎಷ್ಟೋ ಸಂತೋಷಪಡಿಸಿತು. ನಿಮ್ಮನ್ನು ಎಂದಿಗೂ ಮರೆತುಹೋಗುವುದಿಲ್ಲ" ಎಂದು ಅಲ್ಲಿಂದ ಹೋದರು.

ಆ ಗುಂಪಿನಲ್ಲಿ ಹಣದ ಆಸೆಗೆ ಬಂದಿರುವ ಮಾಂತ್ರಿಕ ವೃದ್ಧನು, ನಾಗಭೂಷಣ ಇಬ್ಬರು ಅವರಿಂದ ಹೊರಬಿದ್ದು ಹೋಗಬೇಕೆಂದುಕೊಂಡಿದ್ದಾರೆ. ಎಲ್ಲರೂ ಸೇರಿ ಅಡವಿಯಲ್ಲಿ ರಹಸ್ಯವಾಗಿರುವ ಮುನೆಪ್ಪನ ಹತ್ತಿರಕ್ಕೆ ಬಂದಿದ್ದಾರೆ. ಮುನೆಪ್ಪ ಹತ್ತಿರಕ್ಕೆ ಹೋದ ನಂತರ ಇಬ್ಬರು ಮಾಂತ್ರಿಕರು ತಮ್ಮ ಉದ್ದೇಶವನ್ನು ತಿಳಿಸಿದಾಗ ಮುನೆಪ್ಪ ಸಮ್ಮತಿಸಿ ಒಂದು ಕಂಡೀಷನ್ ಮೇಲೆ ಬಿಡುತ್ತೇವೆಂದು ಹೇಳಿದನು. ಆ ನಿಬಂಧನದಲ್ಲಿ ಇಲ್ಲಿಯವರೆಗು ಇಲ್ಲಿ ನೋಡಿದ ವಿಷಯಗಳಾಗಲೀ, ಕೇಳಿದ ವಿಷಯಗಳಾಗಲೀ ಹೊರಗೆ ಎಲ್ಲೂ ಹೇಳಬಾರದು. ಯಾವಾಗಾದರೂ ಕೆಲಸ ಇದ್ದಾಗ ಕರೆದ ಕೂಡಲೇ ಬರಬೇಕು ಎಂದು ಹೇಳಿದರು. ಅದಕ್ಕೆ ನಾಗಭೂಷಣ, ಮಲ್ಲಯ್ಯ ತಾತ ಇಬ್ಬರೂ ಒಪ್ಪಿಕೊಂಡಿದ್ದಾರೆ. ಆ ನಿಬಂಧನೆಗೆ ಒಪ್ಪಿಕೊಂಡಿರುವುದಕ್ಕೆ ಅವರಿಗೆ ಮತ್ತಷ್ಟು ಹಣವನ್ನು ಕೊಟ್ಟು ಕಳುಹಿಸಿದ್ದಾನೆ)

**********************************

(ತಾಳೆಮರ ಮುನೆಪ್ಪನ ಮನುಷ್ಯರು ಬಿಡುಗಡೆ ಆಗಿ ಬಂದಿದ್ದಾರೆಂದು ತಿಳಿದುಕೊಂಡ ತಪಸ್ವಿ ಬಾಬಾ ಸಂತೋಷಪಟ್ಟು, ಬುದ್ಧಿ ಇಲ್ಲದವರಂತೆ ಪ್ರವರ್ತಿಸಿ ಎಲ್ಲೂ ಸಿಕ್ಕಿಹಾಕಿಕೊಳ್ಳದೇ ಮುನೆಪ್ಪನನ್ನು ಎಚ್ಚರಿಸಿ ಮತ್ತೊಂದು ಕೆಲಸವನ್ನು ತಿಳಿಸುವುದಕ್ಕಾಗಿ ವಯರ್‌ಲೆಸ್‌ನಲ್ಲಿ ಹೀಗೆ ಹೇಳಿದ್ದಾನೆ.)

**ತಪಸ್ವಿಬಾಬಾ :–** ಹಲೋ 31 (ಮುನೆಪ್ಪಾ) ಇಲ್ಲಿಯವರೆಗು ನೀನು ಬುದ್ಧಿ ಕಡಿಮೆಯವರಾಗಿ ಪ್ರವರ್ತಿಸಿ ಯಾವ ಕೆಲಸವನ್ನು ಸರಿಯಾಗಿ ಮಾಡಲಿಲ್ಲ. ನಿನ್ನಿಂದ ಅಪಾರವಾದ ನಷ್ಟ ಏರ್ಪಟ್ಟಿದೆ. ಕೋಟ್ಯಾಂತರ ರೂಪಾಯಿಗಳು ಬೆಲೆಬಾಳುವ ವಜ್ರಗಳನ್ನು ಕೈ ಜಾರಿ ಬಿಟ್ಟುಕೊಂಡಿದ್ದೇವೆ. ಅವು ಯಾರಿಗೆ ಸಿಗಬಾರದೋ ಅವರಿಗೇ ಸಿಕ್ಕಿವೆ. ಅವರು ಪುನಃ ಆ ವಜ್ರಗಳನ್ನು ದೇವಾಲಯಕ್ಕೇ ಸೇರಿಸುತ್ತಾರೆ. ಅವು ಎಂದಿನಂತೆಯೇ ದೇವಾಲಯದಲ್ಲಿ ಭದ್ರವಾಗಿ ಇಡಲಾಗುತ್ತವೆ. ಹಾಗೆ ಕಥೆ ಪುನಃ ಮೊದಲಿಗೆ ಬರುವುದೇ ಅಲ್ಲದೆ, ಅವುಗಳಿಗೆ ಭದ್ರತೆಯೂ ಸಹ ಹೆಚ್ಚಾಗುತ್ತದೆ. ಮೊದಲಿನಂತೆ ಅವುಗಳನ್ನು ನಾವು ಕಬಳಿಸಲಾರೆವು. ಅಷ್ಟೇ ಅಲ್ಲದೆ ಆ ವಜ್ರಗಳ ಮೇಲೆ ಆಸೆ ಉಂಟಾಗಿ ಅವುಗಳನ್ನು ಹೇಗಾದರೂ ತನ್ನ ಹಸ್ತಗತ ಮಾಡಿಕೊಳ್ಳ

ಬೇಕೆಂದುಕೊಂಡ ವ್ಯಕ್ತಿ ಮತ್ತೊಬ್ಬನಿದ್ದಾನೆ. ಆತನೇ ಜಠಾಜೂಟಸ್ವಾಮಿ. ಈ ಸಲ ಅವನು ನಮಗಿಂತ ತೀಕ್ಷಣವಾಗಿ ಇದ್ದು, ನಮ್ಮ ಕೈಗೆ ಸಿಗದಂತೆ ಅವುಗಳನ್ನು ಎತ್ತಾಕಿಕೊಂಡು ಹೋಗುವ ಪ್ರಮಾದವಿದೆ. ಈಗ ಕಳೆದಿರುವುದು ಚಿಕ್ಕ ಗಂಡಾಂತರವೇ. ಜಠಾಜೂಟಸ್ವಾಮಿ ಎನ್ನುವ ಹೆಸರಿನಿಂದ ಚಲಾವಣೆ ಆಗುತ್ತಾ, ವಿಶೇಷ ಪ್ರಜೆಗಳ ಭಕ್ತಿ ವಿಶ್ವಾಸಗಳಿಗೆ ಪಾತ್ರನಾಗಿ, ಆಲಯದಲ್ಲೇ ನಿವಾಸ ಏರ್ಪಡಿಸಿಕೊಂಡು ವಜ್ರಗಳನ್ನು ಕದಿಯಬೇಕೆಂದುಕೊಂಡ ಅವನಿಂದ ನಾವು ಕದಿಯುವುದು ಬಹಳ ಕಷ್ಟ. ಆದರೂ ನಾವು ಅವನಿಗಿಂತ ಚುರುಕಾಗಿ ಇದ್ದು, ಆ ವಜ್ರಗಳನ್ನು ಹೇಗಾದರೂ ದಕ್ಕಿಸಿಕೊಳ್ಳಬೇಕು. ಏನನ್ನುತ್ತೀಯ ಹೇಳು? ಓವರ್!

**ಮುನೆಪ್ಪ :–** ಹಲೋ 21 (ತಪಸ್ವಿಬಾಬಾ) ನಿಮ್ಮ ಮಾತೇ ನಮ್ಮ ಮಾತು. ನಿಮ್ಮ ನಿರ್ಣಯವೇ ನಮ್ಮ ನಿರ್ಣಯ, ನೀವು ಹೇಗೆ ಹೇಳಿದರೆ ಹಾಗೇ ಮಾಡುತ್ತೇವೆ. ನೀವು ಅಷ್ಟಾಗಿ ಹೇಳುತ್ತಿರುವ ಆ ಜಠಾಜೂಟಸ್ವಾಮಿ ಯಾರೋ, ಏನು ಮಾಡುತ್ತಿರುತ್ತಾನೋ ಆತನ ವಿವರವೆಲ್ಲಾ ತಿಳಿಸಬೇಕೆಂದು ಕೋರುತ್ತಿದ್ದೇನೆ ಓವರ್.

**ತಪಸ್ವಿಬಾಬಾ :–** ಹಲೋ 31, ಜಠಾಜೂಟಸ್ವಾಮಿ ವೇಷದಲ್ಲಿ ಇರುವವನು ದೊಡ್ಡ ಮಾಂತ್ರಿಕನು. ಅವನು ಸಂಪಾದಿಸಿದ ಮಂತ್ರಶಕ್ತಿಯಿಂದ ನಡೆಯುವ ಕೆಲಸಗಳೆಲ್ಲವೂ ದೊಡ್ಡ ಮಹಿಮೆಗಳೆಂದು ತಿಳಿದ ಪ್ರಜೆಗಳು, ಆತನ ಮೇಲೆ ವಿಶೇಷವಾದ ಭಕ್ತಿ ಶ್ರದ್ಧೆಗಳು ತೋರಿಸುತ್ತಿದ್ದಾರೆ. ಆತನ ಮಹಿಮೆಗಳ ಮೇಲೆ ಯಾರಿಗೂ ಅನುಮಾನ ಬಾರದಂತೆ ಆತನವೆಲ್ಲಾ ದೈವೀಕಗಳೇ ಎನ್ನುವಂತೆ ಆತನ ಪ್ರವರ್ತನೆ, ಮಹಿಮೆಗಳು ಇವೆ. ಆತನು ಮಳಯಾಳ ದೇಶಕ್ಕೆ ಸಂಬಂಧಿಸಿದವನು. ಮಾಂತ್ರಿಕ ವಿದ್ಯೆಗಳಿಗೆ ಮಳಯಾಳ ದೇಶ ತವರು ಮನೆ ಇದ್ದಂತೆ. ಆದ್ದರಿಂದ ಅವುಗಳ ವಿವರ ತಿಳಿದವನಾಗಿ ಚಿಲ್ಲರೆ ಮಂತ್ರಗಳ ಸಹವಾಸಕ್ಕೆ ಹೋಗದಂತೆ, ದೊಡ್ಡ ಮಂತ್ರವನ್ನು ಆರಿಸಿಕೊಂಡು ಅದರ ಪ್ರಕಾರ ಸಾಧನೆ ಮಾಡಿದ್ದಾನೆ. ಆ ಸಾಧನೆ 12 ಸಂವತ್ಸರಗಳು ಸ್ಮಶಾನದಲ್ಲಿ ಮಾಡಿದ್ದಾನೆ. 12 ಸಂವತ್ಸರಗಳು ಒಂದು ಹೊತ್ತು ಭೋಜನದಿಂದ ತೀವ್ರವಾದ ಜಪ ಮಾಡುವುದರಿಂದ ಸ್ಮಶಾನವಾಟಿಕೆಯಲ್ಲಿ ರುದ್ರಗಣಗಳಾದ ಭೂತ, ಪ್ರೇತ, ಪಿಶಾಚಿಗಳು ಎಲ್ಲಾ ಆತನ ವಶವಾಗಿವೆ. ಹಾಗೆ ವಶವಾಗಿರುವುದರಿಂದ ಆತನ

ಹೆಸರಿನ ಮೇಲಾಗಲೀ, ಆತನ ಫೋಟೋ ಇಟ್ಟುಕೊಂಡಾಗಲೀ ಭಜನೆಯನ್ನು ಮಾಡಿದರೆ, ಭಜನೆ ನಡೆಯುವಾಗ, ಆ ಪ್ರಾಂತದ ಭೂತ, ಪ್ರೇತ, ಪಿಶಾಚಿ ಗಣಗಳು ಅಲ್ಲಿ ಭಜನೆಯಲ್ಲಿರುವ ಕೆಲವರ ಶರೀರಗಳಲ್ಲಿ ಸೇರಿ ಆನಂದದಿಂದ ಕುಣಿದು ಕುಪ್ಪಳಿಸುವುದೂ, ನಾಟ್ಯವಾಡುವುದೂ, ಉರುಳುವುದೂ ಮೊದಲಾದವು ಮಾಡುತ್ತವೆ. ಆ ವಿಧವಾಗಿ ಯಾರ ಭಜನೆಯಲ್ಲೂ ನಡೆಯದೆ, ಒಬ್ಬ ಜಟಾಜೂಟ ಸ್ವಾಮಿಯವರ ಭಜನೆಯಲ್ಲಿಯೇ ನಡೆಯುವುದರಿಂದ ಆ ಸ್ವಾಮಿಯನ್ನು ನಿಜವಾಗಿ ದೊಡ್ಡ ದೈವಶಕ್ತಿ ಇರುವವನೆಂದು, ಕೈಲಾಸದಿಂದ ಇಳಿದುಬಂದ ಶಿವನಾಗಿ ಭಾವಿಸಿ ಶಿವನೇ ಹೀಗೆ ಹುಟ್ಟಿದ್ದಾನೆಂದು ತಿಳಿದುಕೊಳ್ಳುತ್ತಿರುವರು. ಆತನ ತಲೆಮೇಲೆ ಕೂದಲೆಲ್ಲವೂ ಸೇರಿಸಿ ಒಂದೇ ಜಡೆಯಾಗಿ ಏರ್ಪಟ್ಟಿರುವುದರಿಂದ ಆತನಿಗೆ ಜಟಾಜೂಟ ಸ್ವಾಮಿ ಎಂದು ಹೆಸರು ಬಂದಿದೆ. ಅಷ್ಟೇ ಅಲ್ಲದೆ ಆತನು ಕೌಪೀನ (ಗೋಸಿ) ಧರಿಸಿ, ಜಿಂಕೆ ಚರ್ಮ ಸೊಂಟಕ್ಕೆ ಕಟ್ಟಿ, ತ್ರಿಶೂಲ ಕೈಯಲ್ಲಿಟ್ಟು ಕೊಂಡಿರುತ್ತಾನೆ. ಆ ವೇಷದಲ್ಲಿ ಆತನು ದೊಡ್ಡವನೆನ್ನುವಂತೆ ಕಾಣಿಸುತ್ತಿರುವನು. ಆತನ ಎದುರಿಗಾಗಲೀ, ಆತನ ಚಿತ್ರಪಟದ ಎದುರಾಗಲೀ ಭಜನೆ ಮಾಡುವವರು ಕೆಲವರು ತಮಗೆ ತಿಳಿಯದೇ ಆಡುತ್ತಿರುವರು. ಆಗ ಅವರಿಗೆ ಸ್ವಲ್ಪವೂ ಜ್ಞಾಪಕ ಇರುವುದಿಲ್ಲ. ಅವರಲ್ಲಿ ಸೇರಿ ಆಡಿರುವವು ಭೂತ, ಪ್ರೇತ, ಪಿಶಾಚಿಗಳೆಂದು ಯಾರಿಗೂ ತಿಳಿದಿಲ್ಲ.

ಆದ್ದರಿಂದ ಜಟಾಜೂಟಸ್ವಾಮಿ ಹೆಸರುಗಳಿಸಿದವನಾಗಿ ಆಗಾಗ ಪರ್ಯ ಟನೆಗಳನ್ನು ಮಾಡುತ್ತಾ, ದೇವಾಲಯಗಳಲ್ಲಿ ಮೊಕ್ಕಾಂ ಹೂಡುತ್ತಾ ಇರುತ್ತಾನೆ. ಈಗ ಭುವನೇಶ್ವರಿ ಆಲಯದಲ್ಲೇ ಇದ್ದಾನೆ. ವಜ್ರಗಳನ್ನು ಕದಿಯಬೇಕೆಂದು ಆ ಆಲಯಕ್ಕೆ ಹೋಗಿದ್ದಾನೆ. ಆತನಿಗಿಂತ ಮೊದಲು ಅಲ್ಲಿಂದ ಆ ವಜ್ರಗಳನ್ನು ನಾವು ಕದ್ದಿದ್ದೇವೆಂದು ಆತನಿಗೆ ತಿಳಿದಿಲ್ಲ. ಆದ್ದರಿಂದ ಆತನು ಅಲ್ಲೇ ಇದ್ದು ವಜ್ರಗಳಿಗಾಗಿ ಯೋಜನೆ ಹಾಕುತ್ತಿದ್ದಾನೆ. ಈಗ ರಾಜಯೋಗಾನಂದ ಪುನಃ ಭುವನೇಶ್ವರಿ ದೇವಾಲಯದಲ್ಲಿ ಆ ವಜ್ರಗಳನ್ನಿಟ್ಟರೇ ಅವುಗಳನ್ನು ನಮಗಿಂತ ಮೊದಲು ಆ ಜಟಾಜೂಟ ಸ್ವಾಮಿ ಕದಿಯಬಹುದು. ಆದ್ದರಿಂದ ನಾವು, ನಮ್ಮ ಮನುಷ್ಯರನ್ನು ಆತನ ಭಕ್ತರಾಗಿ ಇರುವಂತೆ ನಟಿಸುತ್ತಾ ಆತನ ಪ್ರತಿ ಚರ್ಯವನ್ನು

ಗಮನಿಸಿ ಆಗಿಂದಾಗಲೇ ನಮಗೆ ತಿಳಿಸುವಂತೆ ಮಾಡಬೇಕು. ಧನವೆಂದರೆ ಆಸೆ ಇಲ್ಲದ ಮನುಷ್ಯ ರಾಜಯೋಗಾನಂದ. ಆತನು ವಜ್ರಗಳನ್ನು ತನ್ನ ಹತ್ತಿರ ಇಟ್ಟುಕೊಳ್ಳದೇ ಪುನಃ ಭುವನೇಶ್ವರಿ ಆಲಯಕ್ಕೇ ಸೇರಿಸುತ್ತಾನೆ. ಆದ್ದರಿಂದ ದೇವಾಲಯದ ಮೇಲೆ, ಜಟಾಜೂಟಸ್ವಾಮಿ ಮೇಲೆ ನಿಘಾ ಇಡಿ. ಈ ಸಲ ಜಾಗ್ರತೆಯಿಂದ ಪ್ರವರ್ತಿಸಿರಿ. ಇಲ್ಲಿಯವರೆಗು ನಮಗೆ ಸಹಕರಿಸಿದ ಮಾಂತ್ರಿಕರ ಮೇಲೆಯೂ ಸಹ ನಿಘಾ ಇಡಿ. ಅವರು ಎಲ್ಲಾದರೂ ನಮ್ಮ ವಿಷಯ ಹೊರಗೆ ತಿಳಿಸಿದರೆ ಅವರನ್ನು ಸಾಯಿಸಿಬಿಡಿ. ಮುಖ್ಯವಾಗಿ ನಮ್ಮ ವಿಷಯ ಹೊರಗೆ ಬರಬಾರದು, ಓವರ್.

**ಮುನೆಪ್ಪ :–** ಹಾಗೇ ಆಗಲಿ 21 ಅಗತ್ಯವಿರುವಾಗ ಮತ್ತೆ ತಿಳಿಸುತ್ತೇನೆ, ಓವರ್.!

(ಆಗ ಮುನೆಪ್ಪ ತನ್ನವರೆಲ್ಲರನ್ನು ಕರೆದು, ಜಟಾಜೂಟ ಸ್ವಾಮಿಯವರ ವಿಷಯವೆಲ್ಲಾ ತಿಳಿಸಿ, ಇನ್ನು ಬುದ್ಧಿವಂತಿಕೆಯಿಂದ ಪ್ರವರ್ತಿಸಬೇಕೆಂದು ಹೇಳಿ, ನಿಘಾವಹಿಸಲು ಭುವನೇಶ್ವರಿ ದೇವಾಲಯಕ್ಕೆ ಇಬ್ಬರು ಮನುಷ್ಯರನ್ನು ಹೋಗಲು ಹೇಳಿ ಮುಂದಿನ ಕಾರ್ಯಾಚರಣೆಯನ್ನು ಕುರಿತು ಯೋಚಿಸುತ್ತಾ, ಹಾಗೇ ನಿದ್ರೆಯೊಳಗೆ ಹೋದನು. ಬೆಳಗ್ಗೆ ಎದ್ದು ದಿನಪತ್ರಿಕೆಯನ್ನು ನೋಡಿದ್ದಾನೆ. ಅದರಲ್ಲಿ ಮೊದಲನೇ ಪುಟದಲ್ಲಿ ದೊಡ್ಡ ಅಕ್ಷರಗಳಿಂದ "ಭುವನೇಶ್ವರಿ ದೇವಾಲಯದಲ್ಲಿನ ವಜ್ರಗಳು ಮಾಯ" ಎನ್ನುವ ಹೆಡ್ಡಿಂಗ್ ನೋಡಿದ್ದಾರೆ. ಅದರಲ್ಲಿ ಹೀಗೆ ಇದೆ. "ರಾಜರ ಕಾಲದಿಂದಲೂ ಸಂಪತ್ತಾದ ಹತ್ತು ವಜ್ರಗಳು ಭುವನೇಶ್ವರಿ ಕೋಶಾಗಾರದಲ್ಲಿರುವ ವಿಷಯ ಬಹಳ ಜನರಿಗೆ ತಿಳಿಯದೆ ಹೋದರೂ, ಆಲಯದ ಕಮಿಟಿಗೆ ಪೂರ್ತಿ ವಿವರಗಳು ಗೊತ್ತು. ಕೋಶಾಗಾರವೊಂದರ ಬೀಗಗಳು ಆಲಯ ಧರ್ಮಕರ್ತರ ಹತ್ತಿರ ಮತ್ತು ಸಂಸ್ಥೆಯ ಪ್ರೆಸಿಡೆಂಟ್ ಹತ್ತಿರ ಇವೆ. ಅವರಿಬ್ಬರೂ ಸೇರಿ ತೆಗೆದರೇನೆ ಬೀಗ ಬರುತ್ತದೆ. ಹಾಕಿದ ಬೀಗ ಹಾಕಿದಂತೇ ಇದ್ದು ಒಳಗಿನ ವಜ್ರಗಳು ಮಾಯವಾಗಿ ಹೋದಂತೆ ರಿಪೋರ್ಟು ಕೊಡಲಾಗಿದೆ. ಉತ್ಸವದಲ್ಲಿ ಭುವನೇಶ್ವರಿ ಮಾತೆಯ ಅಲಂಕಾರಕ್ಕೆ ಬೇಕಾದ ಆಭರಣಗಳಿಗಾಗಿ ಬಾಗಿಲು ತೆರೆದಾಗ ಕೋಶಾಗಾರದಲ್ಲಿ ವಜ್ರಗಳು ಕಾಣಿಸಲಿಲ್ಲವೆಂದು ಕಮಿಟಿ ತಿಳಿಸಿದೆ.

ಇದರ ಹಿಂದೆ ತಾಳಿಮರ ಮುನೆಪ್ಪನ ದರೋಡೆ ಗುಂಪಿನ ಹಸ್ತವಿದ್ದಂತೆ ಪೋಲೀಸ್ ವರ್ಗಗಳು ಅಭಿಪ್ರಾಯಪಡುತ್ತಿವೆ. ಸ್ವಲ್ಪ ದಿನಗಳಲ್ಲೇ ವಿಶೇಷವಾದ ವಿಚಾರಣೆ ನಡೆಸುತ್ತೇವೆಂದು ಪೊಲೀಸರು ತಿಳಿಸಿದ್ದಾರೆ." ಎನ್ನುವ ವಾರ್ತೆಯನ್ನು ಓದಿ ಮುನೆಪ್ಪ ಹೌಹಾರಿದನು. ಈ ವಾರ್ತೆಯನ್ನು ದಿನ ಪತ್ರಿಕೆಯಲ್ಲಿ ಓದಿದ ಮುನೆಪ್ಪ ಸ್ನೇಹಿತನು ಮೊತ್ತೊಬ್ಬ ದೊಡ್ಡ ದರೋಡೆ ಗುಂಪಿನ ನಾಯಕನಾದ "ಹೀರೊ" ಎನ್ನುವಾತನು ಮುನೆಪ್ಪನ ಹತ್ತಿರಕ್ಕೆ ಬಂದು ಹೀಗೆ ಮಾತನಾಡಿದ್ದಾನೆ.)

**ಹೀರೊ :–** ಏನೋ ಮುನೆಪ್ಪ, ನೀನು ಬಹಳ ದೊಡ್ಡ ಕೆಲಸ ಮಾಡಿದಂತೆ ದಿನಪತ್ರಿಕೆಯಲ್ಲಿ ನೋಡಿದ್ದೇನೆ. ನಿಜವೇನಾ?

**ಮುನೆಪ್ಪ :–** ಈಗ ನನಗಿಂತ ನೀನೇ ಮೇಲು ಕಣೋ, ನಾನು ಏನೂ ಪ್ರಯೋಜನವಿಲ್ಲದವನಾಗಿದ್ದೇನೆ.

**ಹೀರೊ :–** ಅದೇನೋ. ಈ ದರೋಡೆ ನಿನಗೆ ತಿಳಿಯದಾ!

**ಮುನೆಪ್ಪ :–** ಏಕೆ ತಿಳಿಯದು. ಮಾಡಿದ್ದು ನಾನೇ ಅಲ್ಲವೆ! ಆದರೆ ವಜ್ರಗಳು ನನಗೆ ದಕ್ಕಲಿಲ್ಲ. ಅವು ಮಧ್ಯದಲ್ಲೇ ನನ್ನ ಕೈಜಾರಿಹೋಗಿವೆ. ನಮ್ಮವರ ಅಶ್ರದ್ಧೆಯಿಂದ ನಾನು ಹಾಕಿದ ಉಪಾಯವೆಲ್ಲಾ ನಿಷ್ಪ್ರಯೋಜನವಾಯಿತು.

**ಹೀರೊ :–** ಏನೋ, ಹೇಗೆ ಮಾಡಿದ್ದೀಯ. ಹೇಗೆ ವಿಫಲವಾಯಿತು, ನನಗೆ ಹೇಳೋ!

**ಮುನೆಪ್ಪ :–** ನಾನು ತರಬೇತಿ ಕೊಟ್ಟಿರುವ ರಾಜಾ ಎನ್ನುವ ಚಿಕ್ಕ ಕೋತಿಯನ್ನು ಆಲಯ ಪ್ರಾಂತದೊಳಗಿನ ಕೋತಿಗಳಲ್ಲಿ ಬೆರೆತುಹೋಗುವಂತೆ ಅಭ್ಯಾಸ ಮಾಡಿದ್ದೇನೆ. ಅದು ಹಗಲು ಹೊತ್ತು ಅವುಗಳ ಜೊತೆಗೆ ಬೆರೆತಿದ್ದು ರಾತ್ರಿಹೊತ್ತು ನನ್ನ ಹತ್ತಿರಕ್ಕೆ ಬರುತ್ತಿತ್ತು. ಬಿಕ್ಷಕನ ವೇಷದಲ್ಲಿ ನಾನು ಎರಡು ತಿಂಗಳು ಆಲಯದ ಮೆಟ್ಟಿಲಮೇಲೆ ಇರುತ್ತಾ ಕೊನೆಗೆ ಒಂದು ದಿನ ನನ್ನ ಸೂಚನೆ ಪ್ರಕಾರ ಆ ಕೋತಿ ಗಾಳಿಯಾಡಲು ಇಟ್ಟಿರುವ ಚಿಕ್ಕ ಕಿಟಕಿಯಿಂದ ಕೋಶಾಗಾರದೊಳಗೆ ಪ್ರವೇಶಿಸಿ, ನಾನು ಸೂಚಿಸಿದ ಬೀರುವವನ್ನು ಗುರುತಿಸಿತು. ನಾನು ಕೊಟ್ಟಿರುವ ರಬ್ಬರು ಕ್ಯಾಪ್ಸಿಲ್‌ನ್ನು ಬೀರುವ ರಂಧ್ರದೊಳಗೆ ತೂರಿಸಿತು. ಆಗ ಆ ಕ್ಯಾಪ್ಸಿಲ್‌ನಲ್ಲಿನ ಕೆಮಿಕಲ್ ಬೀರುವ ಬೀಗವನ್ನು

ಕರಗಿಸಿತು. ಬೀರುವಾ ಸುಲಭವಾಗಿ ತೆರೆದು ಕೊಂಡಿತು. ನನ್ನ ಹತ್ತಿರ ತರಭೇತಿ ಪಡೆದ ಹುಷಾರಿರುವ ಕೋತಿ ಬೀರುವದಲ್ಲಿ ಬಿದುರು ಬೊಂಬುಗಳಲ್ಲಿ ಬಚ್ಚಿಟ್ಟಿರುವ ವಜ್ರಗಳನ್ನು ತೆಗೆದುಕೊಂಡು ಬಾಯಿ ದವಡೆಗಳಲ್ಲಿ ಇಟ್ಟುಕೊಂಡು ಬಂದು, ಕತ್ತಲಾದ ನಂತರ ನನಗೆ ಸೇರಿಸಿತು. ನನ್ನೊಂದಿಗೆ ಹಾವುಗಳನ್ನು ಆಡಿಸುವವನ ವೇಷದಲ್ಲಿರುವ ನನ್ನ ತಮ್ಮನು ವೆಂಕೂಗೆ ನಾನು ಆ ವಜ್ರಗಳನ್ನು ಕೊಟ್ಟಿದ್ದೇನೆ. ಆ ರಾತ್ರಿ ತನ್ನ ಹತ್ತಿರ ಹೊಸದಾಗಿ ಹಿಡಿದು ತಂದಿರುವ ವಿಷದ ಕೋರೆಗಳು ತೆಗೆಯದ ನಾಗರಹಾವಿನ ಚರ್ಮದ ಕೆಳಗೆ ವಜ್ರಗಳನ್ನು ಬಚ್ಚಿಟ್ಟು, ಪ್ರಯಾಣಿಕನ ವೇಷದಲ್ಲಿ ಬಂದಿರುವ ನೂಕಾ ಎನ್ನುವವನಿಗೆ ಸೂಟ್‌ಕೇಸ್‌ನಲ್ಲಿ ಹಾವನ್ನು ಇಟ್ಟು ಕೊಟ್ಟಿದ್ದಾನೆ. ಸಿ.ಐ.ಡಿಗಳ ನಿಘಾ ಆ ಸೂಟ್‌ಕೇಸ್ ಮೇಲೆ ಇದೆಯೆಂದು ಅನುಮಾನಿಸಿದ ವೆಂಕೂ, ನೂಕಾ, ಇಬ್ಬರೂ ಅದನ್ನು ರೈಲಿನಿಂದ ಕೆಳಗೆ ಹಾಕಿ ಪಕ್ಕದಲ್ಲಿರುವ ಸ್ಟೇಷನ್‌ನಲ್ಲಿ ಇಳಿದು ತಕ್ಷಣವೆ ಹೋಗಿದ್ದಾರೆ. ಯಾರೂ ಮನುಷ್ಯರು ಇಲ್ಲದ ಕಡೆ ಮರಗಳ ಪೊದೆಗಳಲ್ಲಿ ಹಾಕಿದ ಸೂಟ್‌ಕೇಸ್ ಕಾಣಿಸದಂತಾಯಿತು. ಅದು ಇನ್ನೊಬ್ಬರ ಕೈಯಲ್ಲಿ ಇದೆಯೆಂದು, ಎಷ್ಟು ಪ್ರಯತ್ನಿಸಿದರೂ ನಮ್ಮ ಪ್ರಯತ್ನ ವಿಫಲವಾಯಿತು. ಪೊಲೀಸರೇನೋ ನಮ್ಮನ್ನು ಅನುಮಾನಿಸುತ್ತಿದ್ದಾರೆ. ವಜ್ರಗಳೇನೊ ನಮಗೆ ಸಿಗುವಂತಿಲ್ಲ. ಅವುಗಳಿಗಾಗಿ ಪುನಃ ಪ್ರಯತ್ನಿಸಬೇಕೆಂದುಕೊಂಡಿದ್ದೇನೆ. ಎಲೈ ಹೀರೋ! ಈ ವಿಷಯದಲ್ಲಿ ನೀನೂ ಸಹ ನಮಗೆ ಸಹಾಯಮಾಡಬೇಕು.

(ಸರಿ ಎಂದನು ಹೀರೊ. ಇಬ್ಬರು ಸೇರಿ ಆ ಕೆಲಸವನ್ನು ಹೇಗಾದರೂ ನೆರವೇರಿಸಬೇಕೆಂದುಕೊಂಡಿದ್ದಾರೆ.)

************************************

(ಇನ್‌ಸ್ಪೆಕ್ಟರ್ ಬಾಲಪ್ಪನಿಗೆ ನ್ಯೂಸ್‌ಪೇಪರ್ ಓದಿದನಂತರ ಅದರಲ್ಲಿ ಭುವನೇಶ್ವರಿ ದೇವಾಲಯ ಕಳ್ಳತನಕ್ಕೆ, ರಾಜಯೋಗಾನಂದ ಹೇಳಿದ ವಜ್ರಗಳಿಗೆ ಏನಾದರೂ ಸಂಬಂಧವಿದೆಯೇನೋ ಎನ್ನುವ ಅನುಮಾನ ಬಂದಿತು. ಈ ನ್ಯೂಸ್ ಬರುವುದಕ್ಕಿಂತ ಮೊದಲೇ ರಾಜಯೋಗಾನಂದ ಪ್ರಮುಖ ದೇವಾಲಯದಲ್ಲಿ ಕಳ್ಳತನ ನಡೆದಿದೆಯೆಂದು ಆ ಕಳ್ಳರನ್ನು ನಾವು ಹಿಡಿದುಕೊಂಡಿದ್ದೇವೆಂದು

ಹೇಳುವುದನ್ನು ನೋಡಿದರೇ, ಈ ಕಳ್ಳತನ ಆತನು ಹೇಳಿದಂತೆ ಮೊದಲೇ ನಡೆದಿರುತ್ತದೆ. ರಾಜಯೋಗಾನಂದ ಹೇಳಿದ ವಿಷಯ ತನಗೆ ಹೊರತುಪಡಿಸಿ ಯಾರಿಗೂ ತಿಳಿಯದೆಂದು, ಈ ನೆಪದಿಂದ ಸ್ವಲ್ಪ ಹಣವಾದರೂ ಸಂಪಾದಿಸಬಹುದು ಇಲ್ಲದೆ ಹೋದರೆ ಬಡ್ತಿಯಾದರೂ (ಪ್ರಮೋಷನ್) ಪಡೆಯಬಹುದು ಎಂದು ಕೊಂಡಿದ್ದಾನೆ. ಕೂಡಲೇ ರಾಜಯೋಗಾನಂದ ಆಶ್ರಮಕ್ಕೆ ಹೊರಟು ಹೋಗಿದ್ದಾನೆ. ಇನ್‌ಸ್ಪೆಕ್ಟರ್ ಬಾಲಪ್ಪ ಬರುವುದನ್ನು ನೋಡಿ ಆಶ್ರಮದಲ್ಲಿರುವ ವರೆಲ್ಲರೂ ಆತನ ಕಡೆ ಬಂದಿದ್ದಾರೆ. ಬಾಲಪ್ಪ ಸ್ವಾಮಿಯವರೊಂದಿಗೆ ಹೀಗೆ ಹೇಳಿದ್ದಾನೆ.)

**ಇನ್‌ಸ್ಪೆಕ್ಟರ್ :–** ನೀವು ವಜ್ರಗಳು ಸಿಕ್ಕಿವೆ ಎಂದಿದ್ದೀರಲ್ಲ! ಅವು ಭುವನೇಶ್ವರಿ ದೇವಾಲಯದ ವಜ್ರಗಳೆಂದು ಈ ದಿನ ನ್ಯೂಸ್ ಬಂದಿದೆ. ಅವು ಕಳುವಾಗಿವೆ. ಕಳ್ಳರು ಯಾರೋ ಇಲ್ಲಿಯವರೆಗು ತಿಳಿದಿಲ್ಲ. ಆ ವಜ್ರಗಳೇ ನಿಮ್ಮ ಹತ್ತಿರ ಇವೆಯೆಂದು ನಮಗೆ ಅನುಮಾನವಿದೆ. ನಿಮ್ಮ ಹತ್ತಿರ ವಜ್ರಗಳಿರುವ ವಿಷಯ ನನಗೊಬ್ಬನಿಗೆ ಗೊತ್ತು. ನಮ್ಮ ಡಿಪಾರ್ಟ್‌ಮೆಂಟಿಗೆ ತಿಳಿದರೇ ನಿಮ್ಮನ್ನು ತನಿಖೆಗೆ ಎಳೆಯುತ್ತಾರೆ. ಆಗ ನಿಮ್ಮನ್ನೇ ಕಳ್ಳರೆಂದು ಅನುಮಾನಿಸಬಹುದು. ಆ ಗಲಾಟೆ ಇಲ್ಲದಂತೆ ನನಗೆ 50ಸಾವಿರ ಹಣಕೊಟ್ಟರೆ ಅದನ್ನು ಕೆಲವರಿಗೆ ಖರ್ಚುಮಾಡಿ, ನಿಮ್ಮ ಮೇಲೆ ಕೇಸ್ ಬಾರದಂತೆ ನೋಡಿಕೊಳ್ಳುತ್ತೇನೆ. ನಿಮ್ಮ ಹತ್ತಿರ ಇರುವ ವಜ್ರಗಳು ಕೋಟಿ ಬೆಳೆ ಬಾಳುತ್ತವೆ. ಅವು ನಿಮ್ಮ ಹತ್ತಿರ ಇದ್ದರೇನೆ ಒಳ್ಳೆಯದು. ನೀವು ಒಳ್ಳೆಯ ಕೆಲಸಕ್ಕೆ ಉಪಯೋಗಿಸುತ್ತೀರ. ಆದ್ದರಿಂದ ಅವುಗಳನ್ನು ಕುರಿತು ನಾನು ತಲೆಕೆಡಿಸಿಕೊಳ್ಳುವುದಿಲ್ಲ. ಅವು ನಿಮ್ಮ ಹತ್ತಿರ ಇರುವಂತೆ ಸಹ ತಿಳಿಸುವುದಿಲ್ಲ. ಈ ಕೇಸ್‌ನ್ನು ಮುಚ್ಚಿಡುವುದಕ್ಕೆ ಸ್ವಲ್ಪ ಹಣ ಖರ್ಚಾಗುತ್ತದೆ. ಆ ಖರ್ಚು ನನಗೆ ಕೊಟ್ಟರೆ ನಿಮಗೆ ಕೇಸ್ ಇಲ್ಲದಂತೆ ಮಾಡುತ್ತೇನೆ.

**ರಾಜಯೋಗಾನಂದ :–** ಏನಯ್ಯಾ ಇನ್‌ಸ್ಪೆಕ್ಟರ್, ನಮಗೆ ಒಳ್ಳೆದು ಮಾಡಿದಂತೆ ನಿಮಗೆ ಕೇಸ್ ಇಲ್ಲದಂತೆ ಮಾಡುತ್ತೇನೆ ಐವತ್ತು ಸಾವಿರ ಕಸಿಯುತ್ತೀಯ! ಹಾಗಾದರೇ ಜಾಗ್ರತೆಯಿಂದ ಕೇಳು. ಅಸಲು ಕಳ್ಳರು ನಮಗೆ ಸಿಕ್ಕಿದ್ದಾರೆಂದೂ, ಅವರ ಹತ್ತಿರವಿರುವ ವಜ್ರಗಳನ್ನು ನಾವು ಸ್ವಾಧೀನ ಮಾಡಿಕೊಂಡಿದ್ದೇವೆಂದೂ, ಆ ಕಳ್ಳರೊಂದಿಗೆ ಒಗ್ಗಟ್ಟಾಗಿ

ಆ ಕಳ್ಳರನ್ನು ನೀನೇ ಬಿಡಿಸಿಕೊಂಡು ಹೋಗಿದ್ದೀಯೆಂದು ಸ್ಟೇಟ್‌ಮೆಂಟ್ ಕೊಟ್ಟು ಅಸಲು ಕಳ್ಳರನ್ನು ಬಿಡಿಸಿದ್ದಕ್ಕೆ ನೀನೇ ಜವಾಬ್ದಾರನೆಂದು ನಿನ್ನ ಮೇಲೆ ಕೇಸ್ ಇಡುತ್ತೇವೆ. ಆಗ ಸಿಲುಕಿಕೊಳ್ಳುವುದು ನೀನೇ! ನಾವಲ್ಲ. ಒಂದುವೇಳೆ ನಿನ್ನ ಒಳ್ಳೆಯದನ್ನು ಕೋರಿ ನಿನ್ನ ಮೇಲೆ ಕೇಸು ದಾಖಲಿಸದಂತೆ ಇರಬೇಕೆಂದರೆ, ನೀನು ನಮಗೆ ಐವತ್ತು ಸಾವಿರ ಹಣ ಕೊಟ್ಟು ಬಾಯಿ ಮುಚ್ಚಿಕೊಂಡು ಇರಬೇಕು. ಈಗ ಹೇಳು ನೀನು ಐವತ್ತು ಸಾವಿರ ಹಣ ಕೊಡುತ್ತೀಯಾ ಅಥವಾ ಕಳ್ಳರಿಗೆ ಸಹಾಯಮಾಡಿದಕ್ಕೆ ಸಿಕ್ಕಿಕೊಂಡು ಶಿಕ್ಷೆಯನ್ನು ಅನುಭವಿಸುತ್ತೀಯಾ?

(ರಾಜಯೋಗಾನಂದ ಹೇಳಿದ ಮಾತುಗಳನ್ನು ಕೇಳಿದ ಇನ್‌ಸ್ಪೆಕ್ಟರ್ ಬಾಲಪ್ಪನಿಗೆ ಗೋಡೆಗೆ ಬೀಸಿದ ಚೆಂಡು ಪುನಃ ಹಿಂತಿರುಗಿ ಬಂದು ತನ್ನ ಮುಖಕ್ಕೇ ಬಡಿದಂತಾಯಿತು. ಸ್ವಲ್ಪ ಹೊತ್ತು ಅಯೋಮಯ ಸ್ಥಿತಿಯಲ್ಲಿ ಬಿದ್ದು ಎಚ್ಚರಗೊಂಡು ಹೀಗೆಂದನು.)

**ಇನ್‌ಸ್ಪೆಕ್ಟರ್ :–** ನಾನು ಕಳ್ಳರನ್ನು ಬಿಡಿಸಿದ್ದೇನೆಂದು ನಿಮ್ಮ ಹತ್ತಿರ ಸಾಕ್ಷ್ಯವೇನಿದೆ?

**ರಾಘವ :–** ನಮ್ಮ ಹತ್ತಿರ ವಜ್ರಗಳಿವೆ ಎನ್ನುವುದಕ್ಕೆ ನಿನ್ನ ಹತ್ತಿರ ಸಾಕ್ಷಿ ಏನಿದೆ?

( ಆ ಮಾತುಗಳಿಗೆ ಬಾಲಪ್ಪ ತಲೆ ಗಿರ್ರೆಂದು ತಿರುಗಿತು. ಇದೇನು ನಾನು ಹಣ ಕೇಳಿದರೆ, ಅವರು ನನ್ನನ್ನೇ ಹಣ ಕೇಳುತ್ತಾರೆ. ನಾನು ವಜ್ರಗಳೆಂದರೆ ಅವರು ಕಳ್ಳರು ಎನ್ನುತ್ತಾರೆ. ಇವರ ಹತ್ತಿರ ವಜ್ರಗಳಿವೆಯೆಂದು ಡಿಪಾರ್ಟ್‌ಮೆಂಟ್‌ಗೆ ತಿಳಿಸಿದರೆ, ಆ ವಜ್ರಗಳ ವಿವರವೆಲ್ಲಾ ತಿಳಿಸಿ ನನ್ನನ್ನು ಸಿಲುಕಿಸುತ್ತಾರೆ. ಎಂದು ತನ್ನಲ್ಲಿ ತಾನೇ ಅಂದುಕೊಂಡು ಯಾವುದೋ ಒಂದು ರೀತಿಯಲ್ಲಿ ಅವರನ್ನು ಹೆದರಿಸುವ ಉದ್ದೇಶದಿಂದ ಹೀಗೆಂದಿದ್ದಾನೆ.)

**ಇನ್‌ಸ್ಪೆಕ್ಟರ್ :–** ನನ್ನನ್ನು ನೀವು ಸಿಲುಕಿಸಿದರೇ ನಿಮ್ಮ ಹತ್ತಿರವಿರುವ ವಜ್ರಗಳು ಕೂಡಲೇ ಏಕೆ ಕಾನೂನಿಗೆ ಸ್ವಾಧೀನ ಮಾಡಲಿಲ್ಲವೆಂದು ನಿಮ್ಮನ್ನು ದಂಡಿಸುತ್ತೇವೆ.

**ರಾಘವ :–** ಬುದ್ಧಿ ನಿನ್ನೊಬ್ಬನ ಸ್ವತ್ತು ಎಂದುಕೊಳ್ಳಬೇಡ ಮಿಸ್ಟರ್ ಇನ್‌ಸ್ಪೆಕ್ಟರ್.

ನಾವು ಕೂಡಲೇ ಸ್ವಾಧೀನ ಮಾಡುವುದಕ್ಕೆ ಅವು ಕಳ್ಳರಿಂದ ಸಿಗಲಿಲ್ಲ. ಹಾವಿನಿಂದ ಲಭಿಸಿವೆ. ಅದು ಭೂಮಿಯಿಂದ ಸಿಕ್ಕಿದ ನಿಧಿ ಸಹ ಅಲ್ಲ ಕೂಡಲೇ ತಿಳಿಸುವುದಕ್ಕೆ.

**ರಾಜಯೋಗಾನಂದ :–** ಆ ವಜ್ರಗಳು ಭುವನೇಶ್ವರಿ ದೇವಾಲಯದೊಳಗಿನವೆಂದು ನಮಗೆ ಗೊತ್ತು. ಅವುಗಳ ರಕ್ಷಣಾ ಜವಾಬ್ದಾರಿ ಒಬ್ಬ ಗುರುವಾಗಿ ನಿಮಗಿಂತ ನಮಗೇ ಹೆಚ್ಚಾಗಿ ಇದೆ. ನೀವು ಕಳ್ಳರಂತೆ ತಯಾರಾಗಿ, ಲಂಚಗಳನ್ನು ತೆಗೆದುಕೊಂಡು ಕೇಸುಗಳು ಮಾಫೀ ಮಾಡುತ್ತೀರ. ಸ್ವತ್ತನ್ನು ನುಂಗುತ್ತೀರ. ಈ ವಜ್ರಗಳನ್ನು ಸಹ ಮಾಯ ಮಾಡುತ್ತೀರ. ನಿಮ್ಮ ಮೇಲೆ ನಂಬಿಕೆ ನಮಗೆ ಪೂರ್ತಿಯಾಗಿ ಹೋಗಿದೆ. ಆದ್ದರಿಂದ ನಿಮ್ಮ ಡಿಪಾರ್ಟ್‌ಮೆಂಟ್ ಈ ಕಳ್ಳತನವನ್ನು ಹೇಗೆ ಹೊರಗೆ ಎಳೆಯುತ್ತದೋ, ಯಾರನ್ನು ದೋಷಿಗಳಾಗಿ ಗುರುತಿಸುತ್ತದೋ, ತಿಳಿದುಕೊಳ್ಳುವ ವರೆಗು ಆ ವಜ್ರಗಳು ನಮ್ಮ ಹತ್ತಿರವೇ ಇರುತ್ತವೆ. ನಿನ್ನ ಕೈಲಾದರೇ ಅಸಲು ಕಳ್ಳರನ್ನು ಹಿಡಿದುಕೊಂಡು ಅತ್ತ ಕಾನೂನಿಗೂ ಇತ್ತ ದೇವಾಲಯಕ್ಕೂ ಒಳ್ಳೆಯದನ್ನು ಮಾಡು. ಇಲ್ಲದೇ ಹೋದರೆ ಕೈಗಳು ಕಟ್ಟಿಕೊಂಡು ಕುಳಿತುಕೋ, ಹಾಗಲ್ಲದೆ ನಮ್ಮನ್ನೇ ಹೆದರಿಸುವುದಕ್ಕೆ ಶುರು ಮಾಡಿದರೆ ಎಲ್ಲ ರೀತಿಯಲ್ಲೂ ನಿನಗೆ ಪ್ರಮಾದವಿದೆ.

**ಇನ್‌ಸ್ಪೆಕ್ಟರ್ :–** ನಿಮ್ಮ ಒಳಿತನ್ನು ಕೋರಿ ಹೇಳಿದ್ದೇನೆ. ಅಷ್ಟೇ ಆಗಲಿ ನಿಮ್ಮ ಮೇಲೆ ನನಗೆ ಎಂತಹ ಕೆಟ್ಟ ಉದ್ದೇಶವೂ ಇಲ್ಲ.

(ಎಂದು ಅಲ್ಲಿಂದ ಬಾಲಪ್ಪ ಹೊರಟು ಹೋದನು. ಬಾಲಪ್ಪ ಜ್ಞಾನವೆಂದರೂ, ಸ್ವಾಮಿಗಳೆಂದರೂ, ಬಹಳ ಹೇಳನವಾಗಿ ಮಾತನಾಡುವ ಸ್ವಭಾವ ಇರುವವನು. ಗುರುಗಳನ್ನು ಬಹಳ ಕಡಿಮೆಯವರಾಗಿ ಮಾತನಾಡುವ ಬಾಲಪ್ಪ ರಾಜಯೋಗಾನಂದ ಸ್ವಾಮಿಯನ್ನು ನೋಡಿ ಈತನು ಎಲ್ಲರ ಗುರುಗಳ ಹಾಗೆ ಇಲ್ಲವೇ ಎಂದುಕೊಂಡು ಸ್ವಲ್ಪ ಹಿಂಜರಿದರು ನಂತರ ಆತನನ್ನು ಸಹ ಕಡಿಮೆಯಾಗಿ ಲೆಕ್ಕ ಹಾಕಿಕೊಂಡಿದ್ದಾನೆ. ಮೊದಲಸಲ ಆಶ್ರಮಕ್ಕೆ ಬಂದು ಸ್ವಾಮಿಯನ್ನು ಕಡಿಮೆಯಾಗಿ ಮಾತನಾಡಿದಾಗ, ಸ್ವಾಮಿ ಬಾಲಪ್ಪನ ವಿಷಯಗಳೆಲ್ಲವೂ ಹೇಳಿ ಎಲ್ಲಿ ಯಾವ ತಪ್ಪುಮಾಡಿರುವುದು ನೆನಪು ಮಾಡಿ ಹೇಳಿದಾಗ, ಸ್ವಾಮಿಯನ್ನು

ದೊಡ್ಡವನೆಂದುಕೊಂಡ ಬಾಲಪ್ಪ, ಪುನಃ ಕೆಲವು ಗಂಟೆಗಳಿಗೇ ಜ್ಞಾನ ಹೇಳುವವರೆಲ್ಲಾ ಮೋಸಮಾಡುವವರೇ ಎಂದುಕೊಂಡನು.

ಇಂದಿನ ಪ್ರಪಂಚದಲ್ಲಿ ಜ್ಞಾನವೆಂದರೆ ಏನು? ಅಜ್ಞಾನವೆಂದರೆ ಏನೆಂದು ತಿಳಿಯದ ಮನುಷ್ಯರು ಬಹಳ ಜನ ಬಾಲಪ್ಪನ ಹಾಗೆ ಇದ್ದಾರೆ. ಅಂತಹವರಿಗೆ ಜ್ಞಾನವಾಗಲಿ, ಜ್ಞಾನವನ್ನು ತಿಳಿಸುವ ಗುರುಗಳಾಗಲಿ ಸರಿಹೋಗುವುದಿಲ್ಲ. ಅವರಿಗೆ ಸರಿಹೋಗುವವರ್ಯಾರೆಂದರೆ! ಪರಸ್ತ್ರೀಯರನ್ನು ಕುರಿತು ಮಾತನಾಡುವವರು, ನನಗೆ ಬಲವಿದೆ ಎಂದು ಇತರರ ಮೇಲೆ ದೌರ್ಜನ್ಯ ಮಾಡುವವರು, ಸಮಾಜದಲ್ಲಿ ಹೆಸರಿದ್ದು ಎಷ್ಟು ಕೆಟ್ಟ ಕೆಲಸಗಳು ಮಾಡುತ್ತಿರುವವನಾದರೂ ಇವರಿಗೆ ಮಹಾ ಇಷ್ಟರಾಗಿ ಇರುತ್ತಾರೆ. ಪೋಲೀಸ್ ಇನ್‌ಸ್ಪೆಕ್ಟರ್‌ಆಗಿ ಕೆಲಸ ಮಾಡುವ ಬಾಲಪ್ಪ ಮನಸ್ತತ್ವ ನೀಚವಾದದ್ದು ಆದಾಗ, ಆತನ ಹೆಂಡತಿ ಮಧುಮತಿ ಉತ್ತಮಳು. ಗಂಡ ಮಾಡುವ ಕೆಲಸಗಳು ಆಕೆಗೆ ಇಷ್ಟವಿರುತ್ತಿರಲಿಲ್ಲ. ಆಕೆ ಬಹಳ ದೈವಭಕ್ತಿ ಇರುವವಳು. ಐದು ವರ್ಷಗಳ ಕೆಳಗೆ ಆಕೆ ರಾಜಯೋಗಾನಂದ ಸ್ವಾಮಿಯನ್ನು ನೋಡಿದ್ದಾಳೆ. ಆಗ ತನ್ನ ಕುಮಾರನಿಗೆ ಆರೋಗ್ಯ ಸರಿ ಇರಲಿಲ್ಲ. ಆ ರೋಗ ನಿವಾರಣೆಗೆ ಎಷ್ಟು ಆಸ್ಪತ್ರೆಗಳನ್ನು ಸುತ್ತಿದರೂ, ಎಷ್ಟೋ ಡಾಕ್ಟರ್‌ಗಳನ್ನು ಭೇಟಿಯಾದರೂ, ಕೊನೆಗೆ ಫಲಿತಾಂಶ ಇಲ್ಲದಂತಾಯಿತು. ಚಿಕಿತ್ಸೆ ಮೇಲೆ ಆಸೆ ಬಿಟ್ಟ ಮಧುಮತಿ ತನ್ನ ಕುಮಾರನನ್ನು ರಕ್ಷಿಸಿಕೊಳ್ಳುವುದಕ್ಕೆ ತನಗಿರುವ ಸಹಜ ಭಕ್ತಿ ಪ್ರಕಾರ ಕಾಣಿಸಿದ ದೇವರಿಗೆಲ್ಲಾ ಪೂಜೆಗಳು ಮಾಡಿದಳು, ಹರಕೆ ಹೊತ್ತಳು, ಆದರೂ ಫಲವಿಲ್ಲದೆ ಹೋಯಿತು. ತನ್ನ ಕುಮಾರನು ಮೃತ್ಯುವನ್ನು ಸಮೀಪಿಸಿದ್ದಾನೆಂದು ತಿಳಿದ ಆ ತಾಯಿ ಬಹಳ ತಬ್ಬಿಬ್ಬಾಗಿ ಹೋದಳು. ತನಗಿರುವ ಭಕ್ತಿಯಿಂದ ಜಿಗುಪ್ಸೆಗೊಂಡು ಬದಲಾದಾಗ ಕನಿಕರಿಸದ ಈ ದೇವತೆಗಳನ್ನು ಏಕೆ ಮುಗಿಯಬೇಕು. ಇಷ್ಟು ನೋವು ಪಡುತ್ತಿದ್ದರೂ ಒಂದು ಮಾತಾದರೂ ಮಾತನಾಡದ ಈ ದೇವತೆಗಳು ಗೊಂಬೆಗಳೇ ಎಂದು ತಿಳಿದು, ಆವೇಶ ಹೆಚ್ಚಾದಾಗ, ತಾನು ಪ್ರತಿ ದಿನ ಕೈ ಮುಗಿದು ಬರುತ್ತಿರುವ ಊರಿನ ಹೊರಗೆ ಪಾಂಡುರಂಗನ ದೇವಾಲಯಕ್ಕೆ ಹೋಗಿ, ಗರ್ಭಗುಡಿ ಬಾಗಿಲು ತೆರೆದು, ತನ್ನಲ್ಲಿನ ಕೋಪ ತಣ್ಣಗಾಗುವಂತೆ ಪ್ರತಿಮೆಯನ್ನೇ ಹೊಡೆಯಬೇಕೆಂದುಕೊಂಡಿದ್ದಾಳೆ. ಆ ಸಮಯದಲ್ಲಿ

ಅಲ್ಲೇ ಇರುವ ರಾಜಯೋಗಾನಂದ ಸ್ವಾಮಿ ತಡೆದು ಆಕೆಯನ್ನು ಆ ಕೆಲಸದಿಂದ ತಪ್ಪಿಸಿದ್ದಾನೆ. ಆಕೆ ಮಾಡುತ್ತಿರುವ ಕೆಲಸ ವಿಚಕ್ಷಣಾರಹಿತವಾದದ್ದೆಂದು ಸ್ವಾಮಿ ಹೇಳಿದಾಗ ಆಕೆ ಜೋರಾಗಿ ಅತ್ತು ತನ್ನ ಆವೇಶಕ್ಕೆ ಕಾರಣವನ್ನು ಹೇಳಿದಳು. ಆಕೆಯ ಬಾಧೆಯನ್ನು ಅರ್ಥಮಾಡಿಕೊಂಡ ಸ್ವಾಮಿ ಹೀಗೆ ಹೇಳಿದ್ದಾನೆ.)

**ರಾಜಯೋಗಾನಂದ :–** ಸಾವು ಹುಟ್ಟುಗಳು ಕರ್ಮವನ್ನು ಅನುಸರಿಸಿ ಇರುತ್ತವೆ. ನಾವು ಮಾಡುವ ಪೂಜೆಗಳನ್ನು ಅನುಸರಿಸಿ ಇರುವುದಿಲ್ಲ. ಗತ ಜನ್ಮದಲ್ಲಿ ಮಾಡಿಕೊಂಡ ಕರ್ಮದ ಪ್ರಕಾರ ನಮ್ಮಿಂದ ಪ್ರತಿ ಹೆಜ್ಜೆ ಹಾಕಿಸಲ್ಪಡುತ್ತದೆ. ಹಾಗೆಯೇ ರೋಗಗಳು ಸಹ ಕರ್ಮದಿಂದಲೇ ಪೀಡಿಸಲ್ಪಡುತ್ತವೆ. ಯಾವ ಸಮಯದಲ್ಲಿ ಯಾವ ಕರ್ಮ ಅನುಭವಿಸಬೇಕೋ, ಆ ಸಮಯಕ್ಕೆ ಆ ಕರ್ಮವನ್ನು ಅನುಭವಿಸಲೇ ಬೇಕು. ಕರ್ಮ ಎನ್ನುವುದು ಯಾವ ದೇವತೆಗಳ ಅಧೀನದಲ್ಲೂ ಇಲ್ಲ. ಆದ್ದರಿಂದ ಯಾವ ದೇವತೆಗಳೂ ಕರ್ಮದಿಂದ ಕಾಪಾಡಲಾರರು. ಪ್ರಾರಬ್ಧಕರ್ಮದ ಪ್ರಕಾರ ಮರಣ ಆಸನ್ನವಾದಾಗ ಸಹಸ್ರ ದೇವತೆಗಳು ಗುಂಪಾಗಿ ಬಂದರೂ ರಕ್ಷಿಸಲಾರರು. ಕರ್ಮ ವಿವರ ತಿಳಿಯದೇ ಹೋದರೆ ಯಾರಾದರೂ ನಂಬಿದ ದೇವತೆಗಳನ್ನು ನಿಂದಿಸುತ್ತಾರೆ. ಆದರೆ ಅದರಿಂದ ಇನ್ನೂ ಸ್ವಲ್ಪ ಪಾಪವನ್ನು ಅಂಟಿಸಿಕೊಳ್ಳುವುದು ಹೊರತು ಫಲಿತವು ಏನೂ ಇರುವುದಿಲ್ಲ. ಈ ಪಾಂಡುರಂಗನು ಯಾವಾಗಾದರೂ, ಯಾರನ್ನಾದರೂ ಕರೆದಿದ್ದಾನಾ? ಬಂದು ಪೂಜೆಗಳು ಮಾಡಿರೆಂದು, ಗುಡಿ ಕಟ್ಟಿರೆಂದು ಕೇಳಿದ್ದಾನಾ? ತನಗೆ ನಾಮ ಇಡಲು ಹೇಳಿದ್ದಾನಾ? ಅಷ್ಟೇಕೆ ನೀನು ಪೂಜೆ ಮಾಡಿದರೇ ನಿನ್ನ ಕುಮಾರನನ್ನು ರಕ್ಷಿಸುತ್ತೇನೆಂದು ಹೇಳಿದ್ದಾನಾ?

(ಆ ಮಾತುಗಳು ಕೇಳಿದ ಆಕೆ ಸ್ವಾಮಿ ಕಡೆ ಆಶ್ಚರ್ಯದಿಂದ ನೋಡಿದಳು. ನೋಡುವುದಕ್ಕೆ ಸಾಮಾನ್ಯ ಮನುಷ್ಯನಂತೆ ಇರುವ ಆತನ್ಯಾರೋ ಸಾಮಾನ್ಯನಲ್ಲವೆಂದು ಊಹಿಸಿದ ಮಧುಮತಿ "ನೀವ್ಯಾರು"? ಎಂದು ನೇರವಾಗಿ ಸ್ವಾಮಿಯನ್ನು ಪ್ರಶ್ನಿಸಿದಳು. ಆಗ ಸ್ವಾಮಿ ಹೀಗೆ ಹೇಳಿದ್ದಾನೆ.)

**ರಾಜಯೋಗಾನಂದ :–** ನಾನು ಯಾರಾದರೂ ನಿನಗೇನು ಲಾಭವಿಲ್ಲ. ಆದರೆ

ನೀನು ಯಾರು ಎಂದು ನೀನು ತಿಳಿದುಕೋ. ಈಗ ನೀನು ಮಾಡುತ್ತಿರುವ ಕೆಲಸ ಏನೋ ಆಲೋಚಿಸು.

(ಸ್ವಾಮಿ ಮಾತುಗಳಲ್ಲಿ ಏನೋ ವಿಶೇಷವಿರುವಂತೆ ಆಕೆಗೆ ಅನಿಸಿತು. ಆಗ ತನ್ನಲ್ಲಿನ ಬಾಧೆಯನ್ನೆಲ್ಲಾ ಅಡಗಿಸಿಕೊಂಡು ಸ್ವಾಮಿಯೊಂದಿಗೆ ವಿನಯದಿಂದ ಮಾತನಾಡುವುದಕ್ಕೆ ಪ್ರಾರಂಭಿಸಿದಳು.)

**ಮಧುಮತಿ :–** ನೀವು ಯಾರೋ ದೊಡ್ಡ ವ್ಯಕ್ತಿಗಳಂತೆ ನನಗೆ ಕಾಣುತ್ತೀರ. ನಿಮಗೆ ನನ್ನ ನಮಸ್ಕಾರಗಳು, ಪುತ್ರಶೋಕದಿಂದ ಮುಳಿಗಿದ್ದೇನೆ. ಇರುವ ಒಬ್ಬ ಕುವಾರನಿಗೆ ದೂರವಾಗುತ್ತೇನೇನೋ ಎನ್ನುವ ಬಾಧೆಯಿಂದ ಹಾಗೆ ಉದ್ರೇಕಗೊಂಡೆನು. ನಿಜಕ್ಕೆ ನೀವು ಹೇಳಿದಂತೆ ಯಾವ ದೇವತೆಗಳೂ ಏನೂ ಮಾಡಲಾರರು. ಅಂತಹವರನ್ನು ಏಕೆ ಪೂಜಿಸಬೇಕು?

**ರಾಜಯೋಗಾನಂದ :–** ಆ ಮಾತನ್ನು ನಾನು ನಿನ್ನನ್ನು ಕೇಳಬೇಕು. ನೀನು ಉತ್ತರ ಹೇಳಬೇಕು. ಏಕೆಂದರೆ ಪೂಜೆ ಮಾಡುತ್ತಿರುವುದು ನೀನೇ ಅಲ್ಲವೆ.

**ಮಧುಮತಿ :–** ಎಲ್ಲರೂ ಮಾಡುತ್ತಿದ್ದಾರಲ್ಲ! ಎಂದು ಹಾಗೆ ಮಾಡಿದರೆ ಆ ದೇವತೆಗಳು ಕಷ್ಟಗಳು ಬಾರದಂತೆ ಮಾಡುತ್ತಾರೆಂದು ನಂಬಿಕೆಯಿಂದ ಮಾಡಿದ್ದೇನೆ. ಆದರೆ ಪೂರ್ತಿಯಾಗಿ ತಿಳಿದು ಮಾಡಲಿಲ್ಲ.

**ರಾಜಯೋಗಾನಂದ :–** ನಿನ್ನಂತೆ ಎಷ್ಟೋ ಜನ ಎಷ್ಟೋ ದೇವತೆಗಳಿಗೆ ಆಸೆಗಳಿಂದಲೇ ಕೈ ಮುಗಿಯುತ್ತಿದ್ದಾರೆ. ಅಸಲು ದೇವರೆಂದರೇ ಏನೆನ್ನುವ ವಿವರ ತಿಳಿಯದಿದ್ದರೂ ಎಲ್ಲರೂ ಹೇಗೆ ಮಾಡಿದರೇ ಹಾಗೆ ಮಾಡುತ್ತಾ ಲಾಭ ಬಂದರೇ ಹೊಗಳುವುದು, ಬರದಿದ್ದರೆ ದೂಷಿಸುವುದು ಸಹಜವಾಗಿಹೋಗಿದೆ. ಆದ್ದರಿಂದ ಜ್ಞಾನವೆಂದರೇ ಏನೋ ತಿಳಿಯದೆ, ಅದರಿಂದ ಅಗತ್ಯವೇ ಇಲ್ಲವೆಂದುಕೊಂಡು ಅಜ್ಞಾನಿಯಾಗಿ ಮಾನವನು ತಯಾರಾಗಿ ಹೋಗಿದ್ದಾನೆ.

**ಮಧುಮತಿ :–** ಜ್ಞಾನವೆಂದರೇ ಏನು?

**ರಾಜಯೋಗಾನಂದ :–** ದೇವರವೊಂದು ವಿವರವನ್ನು ತಿಳಿದುಕೊಳ್ಳುವುದೇ ಜ್ಞಾನ.

**ಮಧುಮತಿ :–** ಅದು ಎಲ್ಲಿ ತಿಳಿಯುತ್ತದೆ?

**ರಾಜಯೋಗಾನಂದ :–** ದೇವರ ವಿವರ ತಿಳಿದವರ ಹತ್ತಿರವೇ ತಿಳಿಯುತ್ತದೆ.

**ಮಧುಮತಿ :–** ದೇವರ ವಿವರ ತಿಳಿದವರ್‍ಯಾರು? ಅವರನ್ನು ಹೇಗೆ ಗುರುತಿಸುತ್ತೇವೆ?

**ರಾಜಯೋಗಾನಂದ :–** ದೈವತ್ವ ವಿವರ ತಿಳಿದವರು ಇಂತಹವರೆಂದು ಹೇಳುವುದಕ್ಕೆ ನನಗೂ ತಿಳಿದಿಲ್ಲ. ಆದರೆ ಅವರು ತಿಳಿಸುವ ಜ್ಞಾನ ವಿಷಯಗಳನ್ನು ಅನುಸರಿಸಿ ಅವರನ್ನು ಗುರುತಿಸಬಹುದು.

**ಮಧುಮತಿ :–** ಅಸಲು ಜ್ಞಾನವೆಂದರೆ ಏನೋ ತಿಳಿಯದ ನಮ್ಮಂತಹವರು ಕಳ್ಳ ಸ್ವಾಮಿಗಳು ಹೇಳುವುದನ್ನು ಸಹ ಜ್ಞಾನವೆಂದೇ ನಂಬುತ್ತೇವೆ. ಅವರನ್ನೇ ಜ್ಞಾನಿಗಳೆಂದುಕೊಳ್ಳುತ್ತೇವೆ. ಹಾಗೆ ಜ್ಞಾನಿಗಳಾಗದವರನ್ನು ಜ್ಞಾನಿಗಳು ಎಂದುಕೊಳ್ಳುವುದರಿಂದ, ಅಸಲಾದ ಜ್ಞಾನ ತಿಳಿಯದಂತೆ ಹೋಗುತ್ತದಲ್ಲವೆ! ಈ ಕಾಲದಲ್ಲಿ ಜ್ಞಾನಿಗಳು ಆಗದವರೆಷ್ಟೋ ಜ್ಞಾನಿಗಳ ವೇಷ ಹಾಕಿ ಚೆನ್ನಾಗಿ ತಿಳಿದ ಜ್ಞಾನಿಗಳ ಹಾಗೆ ಚಲಾವಣೆ ಆಗುತ್ತಿದ್ದಾರೆ. ಆ ವಿಧವಾಗಿರುವಾಗ ಇವರು ಜ್ಞಾನಿಗಳೆಂದು, ಇವರು ಅಜ್ಞಾನಿಗಳೆಂದು ನಮ್ಮಂತಹವರು ಗುರುತಿಸುವುದು ಕಷ್ಟವಲ್ಲವೆ! ನಮ್ಮಂತಹವರು ಜ್ಞಾನಿಗಳನ್ನು ಗುರುತಿಸುವುದಕ್ಕೆ ಯಾವುದಾದರೂ ಸೂತ್ರಬದ್ಧವಾದ ಮಾರ್ಗವಿದೆಯಾ?

(ಆಕೆ ಮಾತು ಕೇಳಿದ ಸ್ವಾಮಿ ಆಕೆ ಯೋಚನಾಶೈಲಿಗೆ ಸಂತೋಷಪಟ್ಟು ಹೀಗೆ ಹೇಳಿದ್ದಾನೆ.)

**ರಾಜಯೋಗಾನಂದ :–** ನೀನಂದ ಮಾತು ನಿಜವೇ. ಕಳ್ಳರೂ, ಹಂತಕರೂ ಕಾಷಾಯ ವಸ್ತ್ರಗಳು (ಕಾವಿ ವಸ್ತ್ರಗಳು) ಧರಿಸಿದರೆ ಸಾಕು. ಅವರನ್ನು ಸ್ವಾಮಿಗಳೆಂದು ಕುರುಡರಂತೆ ನಂಬುವ ಸಮಾಜ ನಮ್ಮದು. ನಿನ್ನಂತೆ ಸೂತ್ರಬದ್ಧವಾಗಿ ಸ್ವಾಮಿಗಳೆಂದರೇ ಯಾರೆಂದು ಯೋಚಿಸುವುದಿಲ್ಲ. ನೀನು ಕೇಳಿದ್ದೀಯ ಆದ್ದರಿಂದ ನಾನು ಹೇಳುತ್ತಿದ್ದೇನೆ. ನಾನು ನಿಜವಾಗಿಯೂ ಸ್ವಾಮಿಯೇ ಆದರೂ ನೀನು ಊಹಿಸದ

ರೀತಿಯಲ್ಲಿ ಕಾಲಿಗೆ ಬೂಟು, ಶರೀರಕ್ಕೆ ಒಳ್ಳೆಯ ಬಟ್ಟೆಗಳು ಧರಿಸಿ ಇರುವುದರಿಂದ ಯಾರೂ ನನ್ನನ್ನು ಸ್ವಾಮಿ ಎಂದು ಗುರುತಿಸಲಾರರು. ನನ್ನ ಹತ್ತಿರ ಎಷ್ಟೋ ಉನ್ನತವಾದ ಜ್ಞಾನವಿದ್ದರೂ ಮೇಲಿನ ವೇಷದಲ್ಲಿ ಅದು ಕಾಣಿಸುವುದಿಲ್ಲ. ಬೆಳ್ಳಗಿರುವವೆಲ್ಲಾ ಹಾಲೆಂದು ನಂಬುವ ಈ ಮನುಷ್ಯರು ಸಾಧಾರಣ ಬಟ್ಟೆಗಳು ಧರಿಸಿದ ನನ್ನನ್ನು ಸಾಧಾರಣ ವ್ಯಕ್ತಿಯಾಗಿಯೇ ತಿಳಿದು, ಈತನು ಹೇಗೆ ಸ್ವಾಮಿಯಾಗುತ್ತಾನೆಂದು ಹೇಳನವಾಗಿ ಮಾತನಾಡುತ್ತಿರುತ್ತಾರೆ. ಜ್ಞಾನ ಇಲ್ಲದಿದ್ದರೂ ಕಾಷಾಯವಸ್ತ್ರಗಳು ಧರಿಸುವುದರಿಂದ, ರುದ್ರಾಕ್ಷಗಳು ಧರಿಸುವುದರಿಂದ ಅವರನ್ನು ಸ್ವಾಮಿಗಳೆಂದು ಬಿದ್ದು ಬಿದ್ದು ಮುಗಿಯುತ್ತಿದ್ದಾರೆ.

ಈ ವಿಧವಾಗಿ ನೋಡುವವರಿಗೆ ಜ್ಞಾನ ಮೇಲ್ನೋಟಕ್ಕೆ ಕಾಣಿಸುವುದಿಲ್ಲ. ಕೇಳುವವರಿಗೆ ಅದು ಜ್ಞಾನವೋ ಅಲ್ಲವೋ ತಿಳಿಯದು. ಹಾಗಿರುವಾಗ ನಿಜ ಜ್ಞಾನವನ್ನು ಹೇಗೆ ಗುರುತಿಸಬಲ್ಲರೆನ್ನುವ ಪ್ರಶ್ನೆ ಯಾರಿಗಾದರೂ ಬರುತ್ತದೆ. ಇದಕ್ಕೆ ದೇವರೇ ಉತ್ತರ ಹೇಳಬೇಕಾಗಿದೆ. ಆದ್ದರಿಂದ ಜ್ಞಾನಿಗಳನ್ನು ಗುರುತಿಸುವಹಾಗೆ ಎರಡು ಸೂತ್ರಗಳನ್ನು ಭಗವಂತನೇ ಹೇಳಿದ್ದಾನೆ. ಆ ಎರಡು ಸೂತ್ರಗಳು ಭಗವದ್ಗೀತೆಯಲ್ಲಿ ಆತ್ಮ ಸಂಯಮ ಯೋಗವೆನ್ನುವ ಅಧ್ಯಾಯದಲ್ಲಿ ಮೊಟ್ಟಮೊದಲ ಶ್ಲೋಕದಲ್ಲಿಯೇ ಹೇಳಿದ್ದಾನೆ. ಒಂದು ಕೆಲಸಗಳು ಬಿಟ್ಟುಹಾಕುವವನು ಯೋಗಿ ಅಲ್ಲ. ಎರಡನೆ ಮಾತಿನಲ್ಲಿ ಅಗ್ನಿ ಇಲ್ಲದವನು ಯೋಗಿ ಅಲ್ಲ ಎಂದಿದ್ದಾನೆ. ನಿಜವಾದ ಜ್ಞಾನವನ್ನು ತಿಳಿದು ಸಾಧಿಸಿದ ಯೋಗಿ ಎಲ್ಲ ಕೆಲಸಗಳು ಸರ್ವ ಸಾಧಾರಣವಾಗಿ ಮಾಡುತ್ತಿರುವನೆಂದಿದ್ದಾನೆ. ಆದ್ದರಿಂದ ನಾನು ಮದುವೆ ಮಾಡಿಕೊಳ್ಳಬಾರದು, ನಾನು ಇಂತಹ ಕೆಲಸಗಳು ಮಾಡಬಾರದೆಂದು ಕೆಲಸಗಳಿಗೆ ದೂರವಾಗಿ ಇರುವವನು ಯೋಗಿ ಅಲ್ಲ. ಹಾಗೆಂದು ಇತರರನ್ನು ನೋಡಿ ಎಲ್ಲ ಕೆಲಸಗಳು ಅಜ್ಞಾನಿಗಳು ಸಹ ಮಾಡುತ್ತಿರುವರು. ಆದ್ದರಿಂದ ಅವರಲ್ಲಿ ಜ್ಞಾನಿಗಳನ್ನು ಗುರುತಿಸಲಾರೆವು. ಇನ್ನು ಎರಡನೆ ಸೂತ್ರದಲ್ಲಿ ಅಗ್ನಿ ಇಲ್ಲದಂತಹವನು ಯೋಗಿ ಅಲ್ಲ ಎಂದಾಗ, ಅಗ್ನಿ ಎಂದರೆ ಕರ್ಮವನ್ನು ಸುಡುವ ಶಕ್ತಿ ಎಂದು ಅರ್ಥವಾಗುತ್ತಿದೆ. ಆ ಅಗ್ನಿ ಎಂದರೇ ಏನೋ ಜನರಿಗೆ ತಿಳಿದಿಲ್ಲ. ಆ ಅಗ್ನಿ ಕಾಣಿಸುವುದು ಅಲ್ಲ. ಹಾಗಿರುವಾಗ ಅಗ್ನಿ ಇರುವವರನ್ನು ಹೇಗೆ ಗುರುತಿಸಬಲ್ಲವೆನ್ನುವ ಪ್ರಶ್ನೆ

ಉದ್ಭವಿಸುತ್ತದೆ. ಅದಕ್ಕೆ ಉತ್ತರವಾಗಿ ಎದುರಿಗಿರುವವರನ್ನು ಗುರುತಿಸುವಹಾಗೆ ಆ ಅಗ್ನಿ ಯಾವುದೋ ತಿಳಿಯುವಂತೆ ದೈವವೇ ಯೋಗಿಗಳಿಂದ ಆ ಅಗ್ನಿಯನ್ನು ಬಹಿರ್ಗತ ಮಾಡಿ ಇತರರ ಕರ್ಮಗಳು ಸುಟ್ಟುಹೋಗುವಂತೆ ಮಾಡುತ್ತಿದ್ದಾನೆ. ಯಾವ ಚಿಕಿತ್ಸೆ ಇಲ್ಲದಂತೆ ಯಾರ ಸ್ಪರ್ಶದಿಂದ ಮನುಷ್ಯನಿಗಿರುವ ಭಯಂಕರ ರೋಗಗಳು ಸಹಿತ ಹೋಗುತ್ತಿವೆಯೋ, ಆತನ ಹತ್ತಿರವೇ ಅಗ್ನಿ ಇದೆಯೆಂದು, ಆತನೇ ನಿಜಯೋಗಿ, ನಿಜ ಸನ್ಯಾಸಿ ಎಂದು ಮನುಷ್ಯರು ಗ್ರಹಿಸಬೇಕು. ಯೋಗಿ ಎಂದರೆ ಏನೋ ಅಲ್ಲಲ್ಲಿ ಕೆಲವರಿಂದ ಬಂದಿರುವ ಅಗ್ನಿ ಎದುರಿಗಿರುವವನ ಕರ್ಮಗಳನ್ನು ಸುಟ್ಟಿರುವ ಸಂಘಟನೆಗಳು ಚರಿತ್ರೆಯಲ್ಲಿ ಇವೆ. ಈ ವಿಧವಾಗಿ ಯೋಗಿಗಳನ್ನು ಗುರುತಿಸಬಹುದು. ಅಂತಹ ಯೋಗಿಗಳನ್ನು ಗುರುತಿಸಿ ಅವರಿಂದ ಜ್ಞಾನವನ್ನು ತಿಳಿದುಕೊಳ್ಳುವುದರಿಂದ ದೈವವೆಂದರೆ ಏನೋ ತಿಳಿಯುತ್ತದೆ. ಆಗ ಪ್ರಪಂಚ ಸಂಬಂಧ ಕೋರಿಕೆಗಳನ್ನು ನಾವು ಕೋರುವುದಿಲ್ಲ. ಅವು ಈಡೇರದೆ ಹೋದರೂ ದೇವರನ್ನು ನಿಂದಿಸುವುದಿಲ್ಲ. ಅದೇ ಅಸಲಾದ ಜ್ಞಾನವೊಂದರ ಕೆಲಸ.

**ಮಧುಮತಿ :–** ಕೋರಿಕೆಗಳೇ ದೇವರನ್ನು ಕೋರದಿರುವಾಗ ನಮಗೆ ದೇವರಿಂದ ಕೆಲಸ ಏನು?

**ರಾಜಯೋಗಾನಂದ :–** ಇದಕ್ಕು ಮೊದಲು ಸಹ ಹೇಳಿದ್ದೇನೆ. ದೇವರು ಕೋರಿಕೆಗಳು ನೆರವೇರಿಸುವುದಕ್ಕೆ ಇಲ್ಲವೆಂದು, ಆತನು ಯಾರ ಕೋರಿಕೆಗಳನ್ನು ನೆರವೇರಿ ಸುತ್ತೇನೆಂದು ಹೇಳಲಿಲ್ಲವೆಂದೂ, **ದೇವರು ಯಾವ ಕೆಲಸ ಮಾಡದವನೆಂದೂ, ದೇವರಿಗೂ, ಕೋರಿಕೆಗಳಿಗೂ ಸಂಬಂಧವಿಲ್ಲವೆಂದು ತಿಳಿಯುವುದಕ್ಕೇ ನಮಗೆ ಜ್ಞಾನ ಅವಶ್ಯಕ**. ಜ್ಞಾನ ತಿಳಿದರೇ, ಕರ್ಮ ಪ್ರಕಾರ ಎಲ್ಲ ನಡೆಯುತ್ತವೆಂದೂ, ನಾವು ಕೋರುವುದರಿಂದಾಗಲೀ, ಕೋರದೆ ಹೋಗುವುದರಿಂದಾಗಲೀ ಬರುವುದು ಹೋಗುವುದು ಏನೂ ಇಲ್ಲವೆಂದೂ, ಹುಟ್ಟಿದಾಗಲೇ ಪ್ರತಿಯೊಂದು ನಿರ್ಣ ಯಿಸಲ್ಪಟ್ಟಿದ್ದು ಜೀವನದಲ್ಲಿ ಅದರ ಪ್ರಕಾರವೇ ನಡೆಯುತ್ತದೆಂದು ತಿಳಿಯುತ್ತದೆ.

(ಆ ಮಾತುಗಳು ಕೇಳಿದ ಮಧುಮತಿ ಸ್ವಾಮಿ ಹೇಳಿದ ಜ್ಞಾನ ಸಂಬಂಧವಾದ ವಿಷಯಗಳಿಗೆ ಎಷ್ಟೋ ಆಶ್ಚರ್ಯಪಟ್ಟಳು. ಮೇಲ್ನೋಟಕ್ಕೆ ನೋಡಿದರೆ ಸಾಧಾರಣ ಬಟ್ಟೆಗಳು ಧರಿಸಿ, ಎಲ್ಲರಂತೆ ಸಾಧಾರಣ ವ್ಯಕ್ತಿಯ ಹಾಗೆ ಕಾಣಿಸುವ ಸ್ವಾಮಿಯನ್ನು ನೋಡಿ, ಬೂದಿ ಮುಚ್ಚಿದ ಕೆಂಡದಂತೆ ಯಾರಿಗೂ ತಿಳಿಯದಂತೆ ಸ್ವಾಮಿ ಇದ್ದಾನೆಂದು ಗ್ರಹಿಸಿದಳು. ತಮ್ಮ ಬಳಿ ಜ್ಞಾನ ಇಲ್ಲದಿದ್ದರೂ, ಇದ್ದವರಂತೆ ವೇಷ ಹಾಕಿ ನಟಿಸುವವರಿರುವ ಈ ಕಾಲದಲ್ಲಿ, ಎಷ್ಟೋ ಜ್ಞಾನವಿದ್ದರೂ ಇಲ್ಲದವರಂತೆ ಕಾಣಿಸುವ ಸ್ವಾಮಿಯನ್ನು ನೋಡಿ ಈತನು ಸಾಧಾರಣ ವ್ಯಕ್ತಿ ಅಲ್ಲವೆಂದು ತಿಳಿದುಕೊಂಡ ಆಕೆ ಕೂಡಲೇ ಸ್ವಾಮಿ ಪಾದಗಳ ಮೇಲೆ ಎರಗಿ ನಮಸ್ಕರಿಸಿ ಹೀಗೆ ಹೇಳಿದ್ದಾಳೆ.)

**ಮಧುಮತಿ :–** ಸ್ವಾಮೀ! ನೀವು ನಿಜವಾದ ಜ್ಞಾನಿಗಳೆಂದೂ, ನಿಜವಾದ ಯೋಗಿಗಳೆಂದೂ ನಿಮ್ಮ ಮಾತುಗಳನ್ನನುಸರಿಸಿ ತಿಳಿಯಿತು. ದೈವವೆಂದರೇ ಏನೋ ತಿಳಿಸುವ ಸಾಮರ್ಥ್ಯ ನಿಮಗೇ ಇದೆ. ಇಂದಿನ ನನ್ನ ಮನೋಕ್ಷೋಭೆಯನ್ನು ತೀರಿಸಿ, ನನಗೆ ಜ್ಞಾನವನ್ನು ಉಂಟುಮಾಡಿರೆಂದು ಬೇಡಿಕೊಳ್ಳುತ್ತಿದ್ದೇನೆ. ನನ್ನ ಮನವಿಯನ್ನು ಆಲಿಸಿ ನನಗೆ ದೈವಸನ್ನಿಧಿಯನ್ನು ಸೇರುವ ಜ್ಞಾನವನ್ನು ತಿಳಿದುಕೊಳ್ಳುವಂತೆ ಮಾಡಿರಿ.

(ಆಕೆಯ ಮನೋವ್ಯಥೆಯನ್ನು ಅರ್ಥ ಮಾಡಿಕೊಂಡ ಸ್ವಾಮಿ, ಕೂಡಲೇ ಆಕೆಯ ಕುಮಾರನನ್ನು ಕರೆದುಕೊಂಡು ಬಾ ಎಂದು ಆಕೆಗೆ ಹೇಳಿದಾಗ, ಆಕೆ ಓಡಿಹೋಗಿ ಮಂಚದ ಮೇಲಿರುವ ತನ್ನ ಕುಮಾರನನ್ನು ಸ್ವಾಮಿ ಹತ್ತಿರಕ್ಕೆ ತಂದಳು. ಆಕೆ ಮುಖದಲ್ಲಿ ವಿಷಾದ ಛಾಯೆಗಳು ಹೋಗಿ ಸಂತಸದ ಛಾಯೆಗಳು ಹೊಳೆಯುತ್ತಿದ್ದವು. ತನ್ನ ಕುಮಾರನನ್ನು ಕರೆದುಕೊಂಡು ಬಾ ಎಂದು ಸ್ವಾಮಿ ಹೇಳಿದಕೂಡಲೇ ಆಕೆಯಲ್ಲಿ ಹೊಸ ಆನಂದವು ಉಕ್ಕಿಬಂದಿತು. ತನ್ನ ಕುಮಾರನಿಗೆ ಹಾರ್ಟ್ ಎನ್‌ಲಾರ್ಜ್ (ಗುಂಡಿಗೆ ದಪ್ಪ) ಆಗಿದೆಯೆಂದು, ಇನ್ನು ಉಳಿಯುವುದಿಲ್ಲ ಎಂದು ಡಾಕ್ಟರ್‌ಗಳು ಹೇಳಿದಾಗ ನಿರುತ್ಸಾಹದಿಂದಿದ್ದ ಮಧುಮತಿಗೆ, ಸ್ವಾಮಿ ನಿನ್ನ ಮಗನನ್ನು ಕರೆದುಕೊಂಡುಬಾ ಎಂದಕೂಡಲೇ ಹೊಸ ಧೈರ್ಯ ಬಂದಿತು.

20 ವರ್ಷಗಳ ತನ್ನ ಕುಮಾರನನ್ನು ಸ್ವಾಮಿ ಮುಂದೆ ಕೂರಿಸಿದಳು. ಆಗ ಸ್ವಾಮಿ ತನ್ನ ಮುಂದೆ ಕುಳಿತುಕೊಂಡ ಮಧುಮತಿ ಕುಮಾರನನ್ನು ರೆಪ್ಪೆ ಮುಚ್ಚದಂತೆ ಒಂದು ನಿಮಿಷ ನೋಡಿದ್ದಾನೆ. ಇನ್ನು ಆತನನ್ನು ಮನೆಗೆ ಕರೆದುಕೊಂಡು ಹೋಗಲು ಹೇಳಿದನು. ಸ್ವಾಮಿ ಆತನ ಕಡೆ ನೋಡಿ ಇನ್ನು ಮನೆಗೆ ಕರೆದುಕೊಂಡು ಹೋಗಲು ಹೇಳುವುದು ಅರ್ಥವಾಗದೇ ಆಕೆ ಸ್ವಾಮಿಯೊಂದಿಗೆ ಹೀಗೆ ಕೇಳಿದಳು.)

**ಮಧುಮತಿ :–** ಸ್ವಾಮೀ ನನ್ನ ಕುಮಾರನನ್ನು ರಕ್ಷಿಸಿರಿ.

**ರಾಜಯೋಗಾನಂದ :–** ಏನಮ್ಮಾ ಇನ್ನೂ ನನ್ನ ಮೇಲೆ ನಿನಗೆ ನಂಬಿಕೆ ಬರಲಿಲ್ಲವಾ! ನಿನ್ನ ಕುಮಾರನು ರಕ್ಷಿಸಲ್ಪಟ್ಟಿದ್ದಾನೆ. ಆತನ ವ್ಯಾಧಿಗೆ ಕಾರಣವಾದ ಕರ್ಮ ಸುಟ್ಟುಹೋಗಿದೆ. ಒಳಗಿರುವ ಗುಂಡಿಗೆ ಬಾವು ಈಗ ಅರ್ಧ ಕಡಿಮೆಯಾಗಿದೆ. ನೀವು ಮನೆಗೆ ಹೋಗುವುದರೊಳಗೆ ಉಳಿದ ಅರ್ಧ ಕೂಡಾ ಕಡಿಮೆಯಾಗಿ ಸಂಪೂರ್ಣ ಆರೋಗ್ಯವಂತನಾಗಿ ಹೋಗುತ್ತಾನೆ. ಈತನ ಚಿಂತೆ ಬಿಟ್ಟು ಜ್ಞಾನವನ್ನು ತಿಳಿದುಕೊಂಡು ದೈವತ್ವವನ್ನು ಹೊಂದುವುದಕ್ಕೆ ಪ್ರಯತ್ನಿಸು. ಇದು ಪವಾಡವಲ್ಲ. ಜ್ಞಾನಕ್ಕೆ ಇಷ್ಟು ಶಕ್ತಿ ಇದೆಯೆಂದು ನಿರೂಪಿಸುವುದಕ್ಕೆ ತೋರಿಸಿದ ನಿದರ್ಶನ.

(ಸ್ವಾಮಿ ಮಾತು ಕೇಳಿದ ಆಕೆ ಅಶ್ಚರ್ಯಪಟ್ಟಳು. ಡಾಕ್ಟರ್‌ಗಳು ಬದುಕುವುದಿಲ್ಲವೆಂದು ಹೇಳಿದ ವ್ಯಾಧಿಯನ್ನು ಒಂದು ನಿಮಿಷದಲ್ಲಿ ವಾಸಿಯಾಗಿ ಹೋಗಿದೆಯೆಂದು ಕೇಳುವುದು ಆಶ್ಚರ್ಯವೇ ಅಲ್ಲವೆ! ಆದರೂ ಸ್ವಾಮಿ ಮಾತು ನಿಜವೋ ಅಲ್ಲವೋ, ಆ ವ್ಯಾಧಿ ಹೋಗಿದೆಯೋ ಇಲ್ಲವೋ ಎಂದು ಅನುಮಾನವೂ ಸಹ ಒಂದು ಕಡೆ ಹುಟ್ಟಿತ್ತು. ಅನುಮಾನ ಒಂದು ಕಡೆ ಇದ್ದರೂ, ಸ್ವಾಮಿ ಮಾತಿನ ಮೇಲೆ ನಂಬಿಕೆ ಇಟ್ಟುಕೊಂಡು ಚೆನ್ನಾಗಾದಂತೆ ತಿಳಿದ ಆಕೆ ಹೀಗೆ ಹೇಳಿದಳು.)

**ಮಧುಮತಿ :–** ಸ್ವಾಮೀ ತಮ್ಮ ಹೆಸರು ಏನೋ, ತಾವು ಎಲ್ಲಿನವರೋ ನನಗೆ ತಿಳಿದಿಲ್ಲ. ನಾನು ತಿಳಿದುಕೊಳ್ಳಬಹುದಾ?

**ರಾಜಯೋಗಾನಂದ :–** ನೀನು ಕೇಳಿದ್ದೀಯ ಆದ್ದರಿಂದ ಹೇಳುತ್ತೇನೆ ನನ್ನ ಹೆಸರು

ರಾಜಯೋಗಾನಂದ ಎನ್ನುತ್ತಾರೆ. ಆದರೆ ನಾನು ಎಲ್ಲಿನವನೋ ಈಗ ಹೇಳುವುದಿಲ್ಲ. ಸಮಯ ಬಂದಾಗ ನಿನಗೇ ತಿಳಿಯುತ್ತದೆ.

**ಮಧುಮತಿ :–** ನೀವು ಎಲ್ಲಿನವರೋ ತಿಳಿಯದೇ ಹೋದರೆ ನಾನು ಹೇಗೆ ಜ್ಞಾನವನ್ನು ತಿಳಿದುಕೊಳ್ಳುತ್ತೇನೆ. ಜ್ಞಾನಕ್ಕಾಗಿ ಎಲ್ಲಿಗೆ ಬರಬೇಕು?

**ರಾಜಯೋಗಾನಂದ :–** ಆ ಸಂದೇಹ ನಿನಗೆ ಅಗತ್ಯವಿಲ್ಲ. ನಾನು ತಿಳಿಸುವ ಜ್ಞಾನ ಗ್ರಂಥರೂಪವನ್ನು ಮಾಡಿ ಇಟ್ಟಿದ್ದೇನೆ. ಆ ಗ್ರಂಥಗಳು ಓದಿದರೆ ಜ್ಞಾನ ನಿನಗೆ ತಿಳಿಯುತ್ತದೆ.

**ಮಧುಮತಿ :–** ನೀವಂದಹಾಗೆಯೇ ನಿಮ್ಮ ಗ್ರಂಥಗಳಿಂದ ಜ್ಞಾನವನ್ನು ತಿಳಿದುಕೊಳ್ಳುತ್ತೇನೆ. ಆದರೆ ನಿಮ್ಮ ದರ್ಶನ ನಮಗೆ ಬೇಕೆಂದರೆ ಹೇಗೆ ಸ್ವಾಮಿ.

**ರಾಜಯೋಗಾನಂದ :–** ನಂತರ ನಾನೆಲ್ಲಿರುವುದು ನಾನು ಹೇಳದಿದ್ದರೂ ನಿನಗೇ ತಿಳಿಯುತ್ತದೆಂದು ಹೇಳಿದ್ದೇನಲ್ಲವೆ!

(ಸ್ವಾಮಿಯನ್ನು ತನ್ನ ಮನೆಗೆ ಆಹ್ವಾನಿಸಬೇಕೆಂದು ಆತನ ಪಾದ ತನ್ನ ಮನೆಯಲ್ಲಿಟ್ಟರೇ ಒಳ್ಳೆಯದೆಂದು ತಿಳಿದು ಹೀಗೆ ನುಡಿದಳು.)

**ಮಧುಮತಿ :–** ಸ್ವಾಮೀ! ನಮ್ಮ ಮೇಲೆ ದಯೆ ಇಟ್ಟು ನೀವು ನಮ್ಮ ಮನೆಗೆ ಒಂದು ಸಲ ಬನ್ನಿ, ನಮ್ಮ ಆತಿಥ್ಯವನ್ನು ಸ್ವೀಕರಿಸಿ.

**ರಾಜಯೋಗಾನಂದ :–** ನೀನು ಕರೆದಿದ್ದೀಯ. ನಾನು ಬರುತ್ತೇನೆ. ಆದರೆ ಸ್ವಾಮಿಗಳೆಂದರೇ ನಿನ್ನ ಗಂಡನಿಗೆ ಬಹಳ ಕೀಳು ಭಾವನೆ ಇದೆ. ಸಾಧಾರಣ ಮನುಷ್ಯನಂತಿರುವ ನನ್ನನ್ನು ನೋಡಿ ಇವನ್ಯಾರು ಎಂದು ನಿನ್ನ ಗಂಡ ನನ್ನನ್ನೇ ದಂಡಿಸುತ್ತಾನೆ. ಪ್ರಾಣವಿಲ್ಲದ ಚಿತ್ರಗಳಿಗೆ ಕೈ ಮುಗಿಯುವ ನಿನ್ನ ಗಂಡ ಪ್ರಾಣಗಳಿರುವ ನನ್ನನ್ನು ನೋಡಿ ನಮಸ್ಕಾರವೆಂದು ಸಹ ಹೇಳುವುದಿಲ್ಲ. ನನ್ನನ್ನು ಕುರಿತು ನೀನು ದೊಡ್ಡದಾಗಿ ಹೇಳಿದರೂ, ಆತನು ನಂಬದೆ ಹೋಗಿ ನಿನ್ನನ್ನು ಸಹ ದೂಷಿಸುತ್ತಾನೆ. ನಿನ್ನ ಕುಮಾರನನ್ನು ಈತನೇ ರಕ್ಷಿಸಿದ್ದಾನೆಂದು ನೀನು ನನ್ನನ್ನು ಕುರಿತು ದೊಡ್ಡದಾಗಿ ಹೇಳಿದರೂ, ಆತನೇನೋ ನನ್ನನ್ನು ಚಿಕ್ಕದಾಗಿಯೇ ಲೆಕ್ಕಿಸಿ ಆಪತ್ತುಗಳಲ್ಲಿ

ಮುಗಿಯಲ್ಪಡುವವನಾದ ವೆಂಕಟೇಶ್ವರನೇ ತನ್ನ ಕುಮಾರನನ್ನು ಕಾಪಾಡಿದ್ದಾನೆಂದು ಹೇಳುತ್ತಾನೆ. ಜ್ಞಾನದ ಬೆಲೆ ತಿಳಿಯದ ನಿನ್ನ ಗಂಡನಿಗೆ ಜ್ಞಾನವೆಂದರೆ ಏನೋ ತಿಳಿದ ದಿನ ನಾನು ನಿಮ್ಮ ಮನೆಗೆ ಬರುತ್ತೇನೆ.

(ಸ್ವಾಮಿ ಮಾತುಗಳನ್ನು ಕೇಳಿದ ಆಕೆ ಆಶ್ಚರ್ಯಗೊಂಡಳು. ತನ್ನ ಗಂಡನನ್ನು ನೋಡದೇ ತನ್ನ ಗಂಡನಲ್ಲಿನ ಮೂರ್ಖತ್ವವನ್ನು ಕುರಿತು ಹೇಳಿದ ಸ್ವಾಮಿ ಸಾಮಾನ್ಯನಲ್ಲವೆಂದು ತಿಳಿದು ಹೀಗೆ ಹೇಳಿದಳು.)

**ಮಧುಮತಿ :–** ಸ್ವಾಮಿ, ನನ್ನ ಗಂಡ ನಿಮಗೆ ಗೊತ್ತಾ?

**ರಾಜಯೋಗಾನಂದ :–** ಗೊತ್ತು, ಪೋಲೀಸ್ ಡಿಪಾರ್ಟ್‌ಮೆಂಟಿನಲ್ಲಿ ಇದ್ದು ಅವಿನೀತಿಯಲ್ಲಿ ಭಾಗಿಯಾಗುವ ಒಬ್ಬ ಉದ್ಯೋಗಿ.

**ಮಧುಮತಿ :–** ಆತ ನಿಮಗೆ ಹೇಗೆ ಗೊತ್ತು ಸ್ವಾಮಿ.

**ರಾಜಯೋಗಾನಂದ :–** ಹೇಗೆ ಎನ್ನುವ ಪ್ರಶ್ನೆಗೆ ನನ್ನ ಬಳಿ ಸಮಾಧಾನವಿಲ್ಲ. ಇದ್ದರೂ ಹೇಳುವುದಿಲ್ಲ. ನೀನು ಪೂರ್ವಜನ್ಮದಲ್ಲಿ ಮಾಡಿಕೊಂಡ ಪಾಪ ಫಲಿತವಾಗಿ ನಿನಗೆ ಆ ಗಂಡ ದೊರೆತಿದ್ದಾನೆ. ನೀನು ಅನುಭವಿಸದೆ ತಪ್ಪಲ್ಲ. ಅಂತಹ ಕಡೆ ನಾನು ಬರುವುದು ಸರಿಯಲ್ಲ.

(ಸ್ವಾಮಿ ಹೇಳಿರುವುದು ಸತ್ಯವೆಂದು ತಿಳಿದು ತನ್ನಲ್ಲಿ ದುಃಖ ಬರುತ್ತಿದ್ದರೂ ತಡೆಗಟ್ಟಿ ಹೀಗೆ ಹೇಳಿದಳು.)

**ಮಧುಮತಿ :–** ಸ್ವಾಮೀ ನಿಮ್ಮ ದರ್ಶನ ಪುನಃ ಯಾವಾಗ ಲಭಿಸುತ್ತದೋ.

**ರಾಜಯೋಗಾನಂದ :–** ಇನ್ನೊಮ್ಮೆ ಯಾವಾಗಾದರೂ ತಪ್ಪದೆ ಲಭಿಸುತ್ತದೆ.

(ಮಧುಮತಿ ಕುಮಾರನಿಗೆ ಆ ಸ್ವಲ್ಪ ಹೊತ್ತಿಗೆ ತನ್ನ ಆರೋಗ್ಯ ಎಷ್ಟೋ ಮೇಲೆನಿಸಿತು. ಆದ್ದರಿಂದ ಆತನು ಸ್ವಾಮಿ ಪಾದಗಳಿಗೆ ನಮಸ್ಕರಿಸಿದನು. ಮಧುಮತಿ ಸಹ ನಮಸ್ಕಾರ ಮಾಡಿಕೊಂಡು, ಸ್ವಾಮಿ ಹತ್ತಿರ ಅನುಮತಿ ತೆಗೆದುಕೊಂಡು

ಇಬ್ಬರು ಮನೆಗೆ ಹೊರಟು ಹೋಗಿದ್ದಾರೆ. ಮನೆಗೆ ಬಂದ ಕುಮಾರನು ಎಲ್ಲಾ ವಿಧಗಳಲ್ಲಿ ಆರೋಗ್ಯವಾಗಿ ಕಾಣಿಸಿದ್ದಾನೆ. ಆತನಲ್ಲಿ ರೋಗ ಇರುವ ಛಾಯೆಗಳೇ ಕಾಣಿಸಲಿಲ್ಲ. ಮಧುಮತಿ ತನ್ನ ಕುಮಾರನನ್ನು ಡಾಕ್ಟರ್‌ಗಳ ಹತ್ತಿರಕ್ಕೆ ಕರೆದುಕೊಂಡುಹೋಗಿ ತೋರಿಸಿದಳು. ಡಾಕ್ಟರ್‌ಗಳು ಆತನ ಗುಂಡಿಗೆಯನ್ನು ಪರೀಕ್ಷಿಸಿ ನೋಡಿದರು. ಆತನಲ್ಲಿನ ವ್ಯಾಧಿ ವಾಸಿಯಾಗಿ ಗುಂಡಿಗೆ ಒಳ್ಳೆ ಕಂಡೀಷನ್‌ನಲ್ಲಿ ಇರುವುದನ್ನು ನೋಡಿ ಆಶ್ಚರ್ಯಪಟ್ಟು ಆ ವಿಷಯವನ್ನು ಮಧುಮತಿಗೆ ತಿಳಿಸಿದರು. ಆಕೆ ಹಿಡಿಯಲಾರದಷ್ಟು ಸಂತೋಷಪಟ್ಟಳು. ಕುಮಾರನಿಗೆ ವ್ಯಾಧಿ ವಾಸಿಯಾದಂತೆ ತನ್ನ ಗಂಡ ಇನ್‌ಸ್ಪೆಕ್ಟರ್ ಬಾಲಪ್ಪನಿಗೆ ತಿಳಿಸಿದಳು. ಆದರೆ ಸ್ವಾಮಿ ವಾಸಿ ಮಾಡಿದ್ದಾನೆಂದು ಹೇಳಲಿಲ್ಲ. ಹೇಳಿದರೂ ಆತನು ನಂಬುವುದಿಲ್ಲವೆಂದು ಹೇಳಲಿಲ್ಲ. ಅಂದಿನಿಂದ ರಾಜಯೋಗಾನಂದ ಸ್ವಾಮಿ ಕೊಟ್ಟಿರುವ ಗ್ರಂಥವನ್ನು ಓದುತ್ತಾ ಅದರಲ್ಲಿನ ಜ್ಞಾನವನ್ನು ಚೆನ್ನಾಗಿ ತಿಳಿದು ಕೊಳ್ಳುತ್ತಿದ್ದಳು. ಆಕೆ ಕುಮಾರನೂ ಸಹ ಸ್ವಾಮಿ ಜ್ಞಾನದ ಕಡೆ ವಿಧೇಯತೆಯಿಂದಿದ್ದನು.

ಸುಮಾರು ಎರಡು ವರ್ಷಗಳು ಕಳೆಯಿತು. ಸ್ವಾಮಿ ಎಲ್ಲಿದ್ದಾನೆನ್ನುವ ವಿಷಯ ಮಾತ್ರ ಮಧುಮತಿಗೆ ತಿಳಿಯಲಿಲ್ಲ. ಸ್ವಾಮಿ ಕೊಟ್ಟಿರುವ ಗ್ರಂಥದ ಮೇಲೆ ಆತನ ವಿಳಾಸ ಸಹ ಇಲ್ಲ. ಮುಂದೆ ನಾಲ್ಕು ಪುಟಗಳು ಇಲ್ಲದ ಗ್ರಂಥವನ್ನು ಕೊಟ್ಟಿದ್ದಾನಾದ್ದರಿಂದ ಅದರ ಮೇಲೆ ವಿಳಾಸ ಇಲ್ಲ. ಗ್ರಂಥ ಓದದ ಮೊದಲಿಗಿಂತ ಓದಿದ ನಂತರ ಆಕೆಯಲ್ಲಿ ಸ್ವಾಮಿ ದರ್ಶನ ಬೇಕೆನ್ನುವ ಅಪೇಕ್ಷೆ ಹೆಚ್ಚಾಯಿತು. ತನ್ನ ಮನಸ್ಸಿನಲ್ಲಿ ಸ್ವಾಮಿಯನ್ನು ಎಷ್ಟೋ ಸಲ ಜ್ಞಾಪಿಸಿಕೊಂಡು ದರ್ಶನಕ್ಕಾಗಿ ಬೇಡಿಕೊಂಡಳು. ಒಂದು ದಿನ ರಾತ್ರಿ ಆಕೆಗೆ ನಿದ್ರೆ ಬರಲಿಲ್ಲ. ಹೇಗಾದರೂ ಸ್ವಾಮಿ ದರ್ಶನ ಮಾಡಿಕೊಳ್ಳಬೇಕೆಂದು ಆಲೋಚಿಸುತ್ತಿದ್ದಳು. ಸ್ವಾಮಿ ವಿಳಾಸ ಹೇಗೆ ಸಂಪಾದಿಸಬೇಕು. ನಿನಗೇ ನನ್ನ ವಿಳಾಸ ತಿಳಿಯುತ್ತದೆಂದು ಸ್ವಾಮಿ ಹೇಳಿದ್ದಾನೆ. ಅದು ಹೇಗೆ ತಿಳಿಯುತ್ತದೆ. ಯಾವಾಗ ತಿಳಿಯುತ್ತದೆಂದು ಯೋಚಿಸುತ್ತಾ ನಿದ್ರೆ ಬಾರದೆ ಎದ್ದು ಕುಳಿತುಕೊಂಡು, ರಾತ್ರಿ 12 ಗಂಟೆ ಆಯಿತು. ಇನ್ನೂ ತನ್ನ ಗಂಡ ಮಲಗಲಿಲ್ಲ ಏಕೆ ಎಂದು ನೋಡಿದಾಗ ಮುಂದೆ ಹಾಲ್‌ನಲ್ಲಿ ಯಾರೊಂದಿಗೋ ಮಾತನಾಡುವುದು ಆಕೆಗೆ ಕೇಳಿಸಿತು. ಅಷ್ಟರಲ್ಲಿ ಅವರ ಮಾತುಗಳಲ್ಲಿ

“ರಾಜಯೋಗಾನಂದ ಸ್ವಾಮಿ” ಎನ್ನುವ ಮಾತು ಕೇಳಿಸಿತು. ಕೂಡಲೇ ಏನು ವಿಷಯ ಎಂದು ಜಾಗ್ರತೆಯಿಂದ ಕೇಳತೊಡಗಿದಳು.)

**ಜಗನ್ನಾಥ :–** ನಿಮಗೇ ಅಲ್ಲ ಬಾಲಪ್ಪಾ, ಆ ರಾಜಯೋಗಾನಂದ ಸ್ವಾಮಿ ನನಗೂ ಸಹ ದೊಡ್ಡ ಮೋಸ ಮಾಡಿದ್ದಾನೆ. ಅವನು ಅಸಲು ಸ್ವಾಮಿಯಂತೆ ಇದ್ದಾನಾ? ಸ್ವಾಮಿಯಾದರೆ ಉಳಿದ ವಿಷಯಗಳಲ್ಲಿ ತಲೆ ಹಾಕದೆ ಮೂಗು ಮುಚ್ಚಿಕೊಂಡು ಕುಳಿತುಕೊಳ್ಳುತ್ತಾರೆ. ಇವನು ಹಾಗಲ್ಲ. ನಾನು ರಾಧೇಶ್ವರಿ ಎನ್ನುವ ಕನ್ಯೆ ಮೇಲೆ ಆಸೆ ಪಟ್ಟರೆ, ಆ ಹುಡುಗಿಯನ್ನು ಕಾಪಾಡಿ ನನ್ನ ಕೈಗೆ ಸಿಗದಂತೆ ಮಾಡಿದ್ದಾನೆ. ಆ ಹುಡುಗಿ ಈಗ ಆಶ್ರಮದಲ್ಲೇ ಇದ್ದಾಳೆ. ಅವನನ್ನು ನಾನು ಅಷ್ಟು ಸುಲಭವಾಗಿ ಬಿಡುತ್ತೇನಾ?

(ರಾಜಯೋಗಾನಂದ ಸ್ವಾಮಿಯನ್ನು ಕುರಿತು ಮಾತನಾಡಿದ ಆ ಮಾತುಗಳನ್ನು ಕೇಳುತ್ತಿದ್ದಂತೇ ಆಕೆಯಲ್ಲಿ ವಿಪರೀತವಾದ ಕೋಪ ಬಂದಿತು. ಬಾಲ ತುಳಿದ ಹಾವು ಬುಸುಗುಟ್ಟಿ ಎಡೆಬಿಚ್ಚಿ ಎದ್ದಂತೆ ಮೇಲಕ್ಕೆ ಎದ್ದು ಜೋರಾಗಿ ಹೋಗಿ ತನ್ನ ಗಂಡನೊಂದಿಗೆ ಮಾತನಾಡುತ್ತಿರುವ ಆ ವ್ಯಕ್ತಿ ಷರ್ಟನ್ನು ಹಿಡಿದು ಎಳೆದು ಕೆಳಗೆ ತಳ್ಳಿ ಕಾಲಿನಿಂದ ಹೊಡೆದಳು.)

**ಮಧುಮತಿ :–** ಏನು ಬೊಗಳಿದ್ದೀಯ ಕತ್ತೆ! ನಿರ್ಬಲಳಾದ ಅಮಾಯಕ ಹೆಣ್ಣಿನ ಮೇಲೆ ಅತ್ಯಾಚಾರ ಮಾಡಬೇಕೆಂದುಕೊಂಡ ನೀನು ನೀತಿವಂತನಾ? ಆ ಹುಡುಗಿಯನ್ನು ಕಾಪಾಡಿ ನಿನಗೆ ಸಿಗದಂತೆ ಆಶ್ರಯಕೊಟ್ಟು ಆಶ್ರಮದಲ್ಲಿ ಇಟ್ಟುಕೊಂಡ ಸ್ವಾಮಿ ಮೋಸಗಾರನಾ?

(ಊಹಿಸದ ಆ ಪರಿಣಾಮಕ್ಕೆ ಬಾಲಪ್ಪ ಎಚ್ಚೆತ್ತುಗೊಳ್ಳುವುದಕ್ಕಿಂತ ಮೊದಲೇ ಬಿಡುವಿಲ್ಲದೆ ಕಾಲಿನಿಂದ ಹೊಡೆಯುತ್ತಿದ್ದ ಆಕೆಯನ್ನು ಬಾಲಪ್ಪ ಎದ್ದು ಹಿಡಿದುಕೊಂಡನು. ಹೆಂಗಸರನ್ನು ಆಟದ ಗೊಂಬೆಗಳಂತೆ ನೋಡುವ ಜಗನ್ನಾಥನಿಗೆ ಆಕೆ ಏಕೆ ತನ್ನ ಮೇಲೆ ಬಂದಿದ್ದಾಳೋ ಅರ್ಥವಾಗದೇ ಬಾಲಪ್ಪನ ಕಡೆ ನೋಡಿದನು. ಬಾಲಪ್ಪ ತನ್ನ ಹೆಂಡತಿ ಕಡೆ ಕೋಪದಿಂದ ನೋಡಿ ಹೀಗೆ ಹೇಳಿದನು.)

**ಬಾಲಪ್ಪ :–** ನಿನಗೆ ಹುಚ್ಚು ಹಿಡಿದಿದೆಯಾ, ಆತನ್ಯಾರೆಂದುಕೊಂಡಿದ್ದೀಯ. ಆತನೊಬ್ಬ ದೊಡ್ಡ ಮನುಷ್ಯ.

**ಮಧುಮತಿ :–** ಇವನ್ಯಾರೋ ನನಗೆ ಚೆನ್ನಾಗಿ ತಿಳಿದಿದೆ. ಒಂದು ಸಲ ತನ್ನ ಊರಿನಲ್ಲಿನ ಹೆಂಗಸರ ಮೇಲೆ ಹತ್ಯಾಚಾರ ಮಾಡಲು ಹೋಗಿ, ಅದೇ ಊರಿನಲ್ಲಿ ಹರಿಜನರಿಂದ ಒದೆ ತಿಂದವನಲ್ಲವೆ ಇವನು? ಇವನು ನಿನಗೆ ದೊಡ್ಡ ಮನುಷ್ಯನಾ? ಸ್ವಾಮಿಯನ್ನು ಅನವಶ್ಯಕವಾಗಿ ನೀಚವಾಗಿ ಮಾತನಾಡುತ್ತಾನಾ? ಸ್ವಾಮಿಯನ್ನು ಹಾಗೆ ಮಾತನಾಡಿರುವುದಕ್ಕೇ ಕಾಲಿನಿಂದ ಹೊದ್ದಿದ್ದೇನೆ. ಇನ್ನು ಮುಂದೆ ಯಾವಾಗಾದರೂ ಸ್ವಾಮಿ ಹೆಸರು ಎತ್ತಿದರೆ ಚಪ್ಪಲಿ ಹರಿದು ಹೋಗುವವರೆಗು ಹೊಡೆಯುತ್ತೇನೆ!

(ಆಕೆ ಮಾತುಗಳಿಗೆ ಜಗನ್ನಾಥ ಭಯಪಟ್ಟು, ನಂತರ ಭೇಟಿಯಾಗುತ್ತೇನೆಂದು ಬಾಲಪ್ಪನಿಗೆ ಹೇಳಿ ಅಲ್ಲಿಂದ ಹೊರಟು ಹೋದನು. ತನ್ನ ಹೆಂಡತಿ ಪ್ರವರ್ತನೆ ಅರ್ಥವಾಗದೇ ಈಕೆ ಏನು, ರಾಜಯೋಗಾನಂದ ಸ್ವಾಮಿ ಹೆಸರು ಕೇಳುತ್ತಲೆ ರೊಚ್ಚಿಗೇಳುವುದೇನು? ಎಂದು ಆಶ್ಚರ್ಯಪಟ್ಟ ಬಾಲಪ್ಪ ಹೆಂಡತಿಯನ್ನು ಎಳೆದುಕೊಂಡುಹೋಗಿ ಬೆಡ್‌ರೂಮಿನೊಳಗೆ ತಳ್ಳಿ ಹೊರಗೆ ಬಾಗಿಲು ಹಾಕಿ ಬಂದಿದ್ದಾನೆ. ತನ್ನ ಹೆಂಡತಿಯನ್ನು ಕೋಪದಿಂದ ನೋಡುತ್ತಾ "ಆ ಮೋಸಗಾರನು ರಾಜಯೋಗಾನಂದ ಸ್ವಾಮಿ ನಿನಗೆ ತಿಳಿದಿದೆಯಾ" ಎನ್ನುವಷ್ಟರಲ್ಲಿ ಬಾಲಪ್ಪ ಕೆನ್ನೆ ಫಠೀರ್ ಎಂದಿತು. ಮಧುಮತಿ ಹೊಡೆದ ಏಟಿಗೆ ಆತನ ತಲೆ ಗಿರ್ರೆಂದು ತಿರುಗಿತು.)

**********************************

(ನ್ಯೂಸ್ ಪೇಪರ್‌ನಲ್ಲಿ ಬಂದಿರುವ ವಾರ್ತೆಯನ್ನು ನೋಡಿದ ನಂತರ ಭುವನೇಶ್ವರಿ ದೇವಾಲಯದಲ್ಲಿ ವಜ್ರಗಳು ಕಳುವಾದಂತೆ ಪ್ರಜೆಗಳೆಲ್ಲರಿಗೂ ತಿಳಿದುಹೋಯಿತು. ಅವುಗಳ ಮೇಲಿನ ಆಸೆಯಿಂದ ದೇವಾಲಯದಲ್ಲಿ ಮೊಕ್ಕಾಂ ಹಾಕಿದ್ದ ಜಠಾಜೂಟ ಸ್ವಾಮಿಗೆ ನಿರಾಸೆ ಉಂಟಾಯಿತು. ತಪಸ್ವಿಬಾಬಾರವರಿಗೆ ಆ ವಜ್ರಗಳನ್ನು ಹೇಗಾದರೂ ಸಾಧಿಸಬೇಕೆನ್ನುವ ಆತುರತೆ ಹೆಚ್ಚಾಯಿತು. ಮುನೆಪ್ಪ

ಆತನ ಸ್ನೇಹಿತ ಹೀರೋ ಸೇರಿ ರಾಜಯೋಗಾನಂದ ಸ್ವಾಮಿ ಹತ್ತಿರ ಇರುವ ವಜ್ರಗಳು ಯಾವಾಗ ಹೊರಗೆ ಬರುತ್ತವೋ? ಎಂದು ಕಾದುಕೊಂಡಿದ್ದಾರೆ. ಪೊಲೀಸ್ ಯಸ್.ಪಿ ರವರು ಈ ವಿಷಯದಲ್ಲಿ ಶ್ರದ್ಧೆ ತೆಗೆದುಕೊಂಡು ಮುನೆಪ್ಪ ಗುಂಪಿನ ಮೇಲೆ ಎಲ್ಲಾ ಕಡೆ ನಿಘಾ ಇಟ್ಟಿದ್ದಾರೆ. ರಾಜಯೋಗಾನಂದ ಸ್ವಾಮಿ ಎಲ್ಲರಿಂದ ವಜ್ರಗಳನ್ನು ಕಾಪಾಡಿ ಅವುಗಳನ್ನು ಯಥಾ ಪ್ರಕಾರ ಭುವನೇಶ್ವರಿ ದೇವಾಲಯದಲ್ಲಿ ಭದ್ರಪಡಿಸುವುದಕ್ಕೆ ತೀವ್ರ ಯೋಚನೆ ಮಾಡುತ್ತಿದ್ದಾನೆ. ಇನ್ನು ನಾಗಭೂಷಣ, ಮಲ್ಲಯ್ಯ ತಾತ ಇಬ್ಬರು ಮಾಂತ್ರಿಕರೂ ಸೇರಿ ಮಂತ್ರಗಳಿಂದ ಮುನೆಪ್ಪ ಮನುಷ್ಯರಿಗೂ ಸಹ ತಿಳಿಯದಂತೆ, ವಜ್ರಗಳು ಸಿಕ್ಕರೇ ಕದಿಯಬೇಕೆಂದುಕೊಂಡಿದ್ದಾರೆ. ಇಷ್ಟು ಜನ ವಜ್ರಗಳನ್ನು ಕುರಿತು ವಿಧವಿಧಗಳ ಪ್ರಯತ್ನಗಳು ಮಾಡುತ್ತಿರುವಾಗ, ರಾಜಯೋಗಾನಂದ ಸ್ವಾಮಿ ಕರೆಯ ಮೇರೆಗೆ ಆಶ್ರಮಕ್ಕೆ ಬಂದಿರುವ ಹಟ್ಟಿಯ ನಾಯಕನಾದ ಮಲ್ಲುದೊರೆಯಿಂದ, ಹಟ್ಟಿಯಲ್ಲಿ ವಜ್ರಗಳನ್ನು ಕೆಲವು ದಿನಗಳವರೆಗು ಭದ್ರಪಡಿಸುವುದಕ್ಕೆ ರಾಜಯೋಗಾನಂದ ಸ್ವಾಮಿ ಕಳುಹಿಸಬೇಕೆಂದುಕೊಂಡಿದ್ದಾನೆ. ಒಂದು ದಿನ ಹತ್ತು ವಜ್ರಗಳನ್ನು ಚಿಕ್ಕ ಪೆಟ್ಟಿಗೆಯಲ್ಲಿ ಇಟ್ಟು ನಾಯಕನ ಕೈಗೆ ಕೊಟ್ಟು ಕಳುಹಿಸಿದನು. ಆತನೊಂದಿಗೆ ಇನ್ನು ಕೆಲವರು ಆಶ್ರಮದಿಂದ ಹೊರಟು ಹೋದರು.

ವಜ್ರಗಳು ಕಳುವಾಗಿವೆಯೆಂದು ತಿಳಿದ ನಂತರ ಹತ್ತು ದಿನಗಳವರೆಗು ಅವುಗಳನ್ನು ಕುರಿತಾದ ಎಂತಹ ಸುಳಿವು ಪೊಲೀಸರಿಗೆ ತಿಳಿಯದೆ ಹೋಗಿರುವುದರಿಂದ ಅವರು ಅವುಗಳ ಸಮಾಚಾರಕ್ಕಾಗಿ ತೀವ್ರ ಪ್ರಯತ್ನವನ್ನು ಮಾಡಿದ್ದಾರೆ. ರಾಜಯೋಗಾನಂದಸ್ವಾಮಿ ಮೇಲೆ ದ್ವೇಷದಿಂದಿದ್ದ ಇನ್‌ಸ್ಪೆಕ್ಟರ್ ಬಾಲಪ್ಪ ಯಸ್.ಪಿರವರಿಗೆ ಫೋನ್ ಮಾಡಿ ತಾನ್ಯಾರಾಗಿರುವುದು ಹೇಳದಂತೆ ವಜ್ರಗಳ ಸಮಾಚಾರವನ್ನು ತಿಳಿಸುತ್ತಿದ್ದೇವೆಂದು, ವಜ್ರಗಳು ರಾಜಯೋಗಾನಂದ ಸ್ವಾಮಿ ಆಶ್ರಮದಲ್ಲಿ ಇವೆಯೆಂದು, ಅವುಗಳನ್ನು ರಾಜಯೋಗಾನಂದ ಸ್ವಾಮಿಯೇ ಅಪಹರಿಸಿದ್ದಾನೆಂದು ಹೇಳಿದ್ದಾನೆ. ರಾಜಯೋಗಾನಂದ ಸ್ವಾಮಿ ಒಳ್ಳೆಯ ವ್ಯಕ್ತಿ ಎಂದು ಯಸ್.ಪಿ ರವರಿಗೂ ಸಹ ತಿಳಿದಿರುವುದರಿಂದ ಆ ಫೋನ್ ಮಾತುಗಳು ದುರುದ್ದೇಶವಾದವುಗಳೆಂದು, ತಮ್ಮನ್ನು ತಪ್ಪುದಾರಿ ಹಿಡಿಸುವುದಕ್ಕೆ ಅಸಲಾದ

ಕಳ್ಳರೇ ಹಾಗೆ ಹೇಳಿರುತ್ತಾರೆಂದುಕೊಂಡಿದ್ದಾರೆ. ಆ ಫೋನ್ ಯಾರು ಮಾಡಿರುತ್ತಾರೆಂದು ಯೋಚಿಸಿದ್ದಾನೆ.)

*********************************

(ಮಾಂತ್ರಿಕರು ಇಬ್ಬರೂ ಅಂಜನ ಉಪಯೋಗಿಸಿ ವಜ್ರಗಳನ್ನು ಹಟ್ಟಿಯ ನಾಯಕನು ಅಡವಿಯಲ್ಲಿ ತನ್ನ ಹಟ್ಟಿಗೆ ತೆಗೆದುಕೊಂಡು ಹೋಗುತ್ತಿದ್ದಾನೆಂದು ತಿಳಿದುಕೊಂಡಿದ್ದಾರೆ. ಆ ವಜ್ರಗಳನ್ನು ತಮ್ಮ ಸ್ವಾಧೀನ ಮಾಡಿಕೊಳ್ಳುವುದಕ್ಕೆ ಅದೇ ಸರಿಯಾದ ಸಮಯದಂತೆ ಭಾವಿಸಿ ಆ ಇಬ್ಬರು ಹೊರಟು ಅಡವಿಕಡೆ ಹೋಗಿದ್ದಾರೆ. ಹಟ್ಟಿಯ ನಾಯಕ ಮತ್ತು ಆತನೊಂದಿಗೆ ಇನ್ನೂ ಕೆಲವರು ಮಾರ್ಗದಲ್ಲಿ ಕಾಲ್ನಡಿಗೆಯಿಂದ ಹೋಗುತ್ತಾ ಮಧ್ಯಾಹ್ನ ಸಮಯದಲ್ಲಿ ಒಂದು ಕಡೆ ನಿಂತು ಒಂದು ಗಿಡದ ಕೆಳಗೆ ಕುಳಿತುಕೊಂಡು ಹಿಂದೆ ತಂದುಕೊಂಡಿರುವ ಆಹಾರವನ್ನು ತಿಂದು ವಿಶ್ರಾಂತಿ ತೆಗೆದುಕೊಳ್ಳುತ್ತಿರುವ ಸಮಯದಲ್ಲಿ ಮಾಂತ್ರಿಕರಿಬ್ಬರೂ ಅವರು ಎಲ್ಲಿರುವುದು ತಿಳಿದುಕೊಂಡಿದ್ದಾರೆ. ಪಕ್ಕದಲ್ಲಿ ಸ್ವಲ್ಪ ದೂರದಲ್ಲಿ ಪೊದೆಗಳಲ್ಲಿ ಬಚ್ಚಿಟ್ಟುಕೊಂಡು, ಆ ನಾಯಕನು ಒಬ್ಬನು ಪೆಟ್ಟಿಗೆಯೊಂದಿಗೆ ಸಹ ಪಕ್ಕಕ್ಕೆ ಬಂದರೇ ಚೆನ್ನಾಗಿರುತ್ತದೆಂದು ತಿಳಿದು ತಮ್ಮ ಅಧೀನದಲ್ಲಿರುವ ಒಂದು ವಿಗ್ರಹವನ್ನು ಆ ನಾಯಕನಲ್ಲಿ ಸೇರಿ ಹೊಟ್ಟೆನೋವು ಬಂದು ಮಲವಿಸರ್ಜನೆಗೆ ಹೋಗುವಂತೆ ಮಾಡೆಂದು ಹೇಳಿ ಕಳುಹಿಸಿದ್ದಾರೆ. ಅವರ ಆಜ್ಞೆ ಮೇರೆಗೆ ಆ ವಿಗ್ರಹ ಮಲ್ಲುದೊರೆ ಶರೀರದಲ್ಲಿ ಸೇರಿ ಹಾಗೇ ಮಾಡಿದೆ. ಆದರೆ ಮಲ್ಲುದೊರೆಯ ವಜ್ರಗಳ ಪೆಟ್ಟಿಗೆಯನ್ನು ತಮ್ಮ ಮನುಷ್ಯರಿಗೆ ಒಪ್ಪಿಸಿ ಬಹಿರ್ಭೂಮಿಗೆ ಹೋದನು. ಅದರಿಂದ ಮಾಂತ್ರಿಕರ ಯೋಚನೆ ಫಲಿಸಲಿಲ್ಲ.

ನಂತರ ಮಲ್ಲುದೊರೆ ಉಳಿದವರೆಲ್ಲರೂ ಸೇರಿ ಅಲ್ಲಿಂದ ಹೊರಟು ಹೋಗಿದ್ದಾರೆ. ಅವರನ್ನು ಮಾಂತ್ರಿಕರು ಇಬ್ಬರೂ ಹಿಂಬಾಲಿಸುತ್ತಾ ಹೋಗಿದ್ದಾರೆ. ಆ ರಾತ್ರಿಗೆ ಮಲ್ಲುದೊರೆ ಮಾರ್ಗಮಧ್ಯದಲ್ಲಿ ವಿಶ್ರಾಂತಿ ಮಾಡಬೇಕಾಯಿತು. ಸರಿಯಾದ ಪ್ರಾಂತವನ್ನು ನೋಡಿಕೊಂಡು ಆ ರಾತ್ರಿ ಕಳೆದು ಪುನಃ ಬೆಳಗ್ಗೆ ಹೊರಟು ಹೋಗಬೇಕೆಂದುಕೊಂಡಿದ್ದಾರೆ. ವನ್ಯಮೃಗಗಳ ದಾಳಿ ಇಲ್ಲದ ಸ್ಥಳದಲ್ಲಿ

ಕೆಲವು ಸೌದೆಗಳನ್ನು ಕುಪ್ಪೆ ಹಾಕಿ ಬೆಂಕಿ ಹಚ್ಚಿ, ಆ ಬೆಂಕಿ ಸುತ್ತಾ ಎಲ್ಲರೂ ಮಲಗುವಂತೆ ಏರ್ಪಾಟು ಮಾಡಿಕೊಂಡಿದ್ದಾರೆ. ಮರೆಯಿಂದ ಮಲ್ಲುದೊರೆಯನ್ನು, ಆತನ ಮನುಷ್ಯರನ್ನು ಹಿಂಬಾಲಿಸುತ್ತಾ ಮಾಂತ್ರಿಕರು ಇಬ್ಬರೂ ಆ ರಾತ್ರಿಗೆ ಹೇಗಾದರೂ ಅವರಿಂದ ವಜ್ರಗಳನ್ನು ಕದಿಯಬೇಕೆಂದುಕೊಂಡಿದ್ದಾರೆ. ಸಮಯಕ್ಕಾಗಿ ಕಾದು ನೋಡುತ್ತಿರುವ ಮಾಂತ್ರಿಕರು ಅವರು ನಿದ್ರಿಸಿದ್ದಾರೆಂದು ತಿಳಿದುಕೊಂಡ ನಂತರ ತಮ್ಮ ವಶದಲ್ಲಿರುವ ಕಾಟೇರಿ ಎನ್ನುವ ಶಕ್ತಿಯನ್ನು ಕರೆದು ಮಲ್ಲುದೊರೆಯ ಹತ್ತಿರವಿರುವ ವಜ್ರಗಳ ಪೆಟ್ಟಿಗೆಯನ್ನು ತಮ್ಮ ಹತ್ತಿರಕ್ಕೆ ಸೇರಿಸೆಂದು ಹೇಳಿ ಕಳುಹಿಸಿದ್ದಾರೆ. ಅವರ ಆದೇಶಾನುಸಾರ ಕಾಟೇರಿ, ಮಲಗಿರುವ ಮಲ್ಲುದೊರೆಯ ಕಡೆ ಹೋಯಿತು. ಅಡವಿಯಲ್ಲಿ ಮಲಗಿರುವುದರಿಂದ ಮತ್ತು ಅವರ ಹತ್ತಿರ ಬೆಲೆಯುಳ್ಳ ವಜ್ರಗಳಿರುವುದರಿಂದ ಎಲ್ಲರೂ ಮಲಗಿಕೊಂಡು ನಿದ್ರೆಹೋಗದೇ ಕಾವಲಿಗಾಗಿ ಇಬ್ಬರು ಎಚ್ಚರದಿಂದಿದ್ದರು. ಅದೃಶ್ಯರೂಪದಲ್ಲಿರುವ ಕಾಟೇರಿಯನ್ನು, ಎಚ್ಚರದಲ್ಲಿದ್ದ ಇಬ್ಬರೂ ಗಮನಿಸಲಿಲ್ಲ. ಕಾಟೇರಿ ಸಹ ಮುಸುಗು ಹಾಕಿಕೊಂಡು ಮೌನವಾಗಿ ಕುಳಿತುಕೊಂಡ ಇಬ್ಬರೂ ಎಚ್ಚರದಿಂದ ಇದ್ದಾರೆಂದು ಗಮನಿಸಲಿಲ್ಲ. ಕಾಟೇರಿ ನೇರವಾಗಿ ಮಲ್ಲುದೊರೆಯ ಹತ್ತಿರಕ್ಕೆ ಹೋಗಿ ಆತನ ಪಕ್ಕದಲ್ಲಿರುವ ವಜ್ರಗಳ ಪೆಟ್ಟಿಗೆಯನ್ನು ತೆಗೆದುಕೊಂಡು ಮಾಂತ್ರಿಕರ ಹತ್ತಿರಕ್ಕೆ ಬರುತ್ತಿರುವ ಸಮಯದಲ್ಲಿ ಅಲ್ಲೇ ಎಚ್ಚರದಿಂದಿದ್ದ ಇಬ್ಬರು ವ್ಯಕ್ತಿಗಳಿಗು ಪೆಟ್ಟಿಗೆ ಗಾಳಿಯಲ್ಲಿ ತೇಲಿಹೋಗುತ್ತಿರುವಂತೆ ಕಾಣಿಸಿತು. ರಾತ್ರಿಹೊತ್ತು ಉರಿಯುತ್ತಿರುವ ಬೆಂಕಿಯ ಬೆಳಕಿನಲ್ಲಿ ಅವರು ಪೆಟ್ಟಿಗೆ ಹೋಗುವುದನ್ನು ನೋಡಿ ಮಲ್ಲುದೊರೆಯನ್ನು ಉಳಿದವರನ್ನು ಎಬ್ಬಿಸಿದರು. ಅಷ್ಟರಲ್ಲಿ ಅದು ಕತ್ತಲಲ್ಲಿ ಕಾಣಿಸದಂತೆ ಹೋಯಿತು.

ಈ ದೃಶ್ಯವನ್ನು ಪಕ್ಕದಲ್ಲಿ ಮರೆಯಲ್ಲಿದ್ದು ಗಮನಿಸುತ್ತಿರುವ ಇಬ್ಬರು ಮಾಂತ್ರಿಕರು ಕಾಟೇರಿ ತಮ್ಮ ಹತ್ತಿರಕ್ಕೆ ಪೆಟ್ಟಿಗೆಯನ್ನು ತರುತ್ತಲೇ ಅದನ್ನು ತೆಗೆದುಕೊಂಡು ಅಲ್ಲಿಂದ ಕೂಡಲೇ ಓಡಿಹೋದರು. ತಮ್ಮ ಪೆಟ್ಟಿಗೆ ಗಾಳಿಯಲ್ಲಿ ತೇಲಿಹೋದಂತೆ ಕಾಣಿಸುವುದು, ಕೊನೆಗೆ ಅದು ಏನಾಗಿರುವುದೆಂದು ತಿಳಿಯದೆ ಹೋಗುವುದು ವಿಚಿತ್ರವಾಗಿ ತೋಚಿತು. ಬೆಳಗ್ಗೆ ಬೆಳಗಾದನಂತರ ಆ ಸುತ್ತಮುತ್ತಲೆಲ್ಲಾ ಪೆಟ್ಟಿಗೆಗಾಗಿ ಹುಡುಕಿ ನೋಡಿದ್ದಾರೆ. ಪೆಟ್ಟಿಗೆ ಕಾಣಿಸಲಿಲ್ಲ, ಆದರೇ ಮಾಂತ್ರಿಕರು

ಬಚ್ಚಿಟ್ಟುಕೊಂಡ ಪ್ರಾಂತ ಮಾತ್ರ ಕಾಣಿಸಿತು. ಅಲ್ಲಿ ಯಾರೋ ಇದ್ದಂತಹ ಪಾದಗಳ ಗುರುತುಗಳು, ಅವರು ಸುಟ್ಟು ಬಿಸಾಡಿರುವ ಬೀಡಿ ತುಣುಕುಗಳು ಕಾಣಿಸಿದವು. ಆ ಬೀಡಿ ತುಣುಕುಗಳನ್ನು ತೆಗೆದುಕೊಂಡು ಅವರೆಲ್ಲರೂ ಹೊರಟು ಹಿಂದಕ್ಕೆ ಹೋಗಿ ರಾಜಯೋಗಾನಂದ ಸ್ವಾಮಿಗೆ ವಿಷಯವೆಲ್ಲಾ ತಿಳಿಸಿದ್ದಾರೆ. ಆ ವಿಧವಾಗಿ ನಡೆದಿರುವುದಕ್ಕೆ ಸ್ವಾಮಿ ಬೆರಗಾದನು. ಪೆಟ್ಟಿಗೆ ಗಾಳಿಯಲ್ಲಿ ತೇಲಿಹೋಗುವುದೇನು ಎಂದು ಯೋಚಿಸಿದರು. ವಜ್ರಗಳು ಹೋದ ರೀತಿಯನ್ನನುಸರಿಸಿ ಆ ವಜ್ರಗಳ ವಿಷಯ ತಿಳಿದ ಮನುಷ್ಯರೇ ದುಷ್ಟ ಶಕ್ತಿಗಳಿಂದ ಈ ಕೆಲಸವನ್ನು ಮಾಡಿಸಿ, ವಜ್ರಗಳನ್ನು ಅಪಹರಿಸಿರುತ್ತಾರೆಂದು ರಾಘವ ರಾಜಯೋಗಾನಂದ ಸ್ವಾಮಿಗೆ ಹೇಳಿದ್ದಾನೆ. ವಜ್ರಗಳನ್ನು ಕುರಿತು ಎಲ್ಲರೂ ಆಲೋಚಿಸತೊಡಗಿದರು.)

**********************************

(ವಜ್ರಗಳನ್ನು ಕಾಟೇರಿಯಿಂದ ಕಳವು ಮಾಡಿದ ಮಾಂತ್ರಿಕರು ಮರುದಿನ ವಜ್ರಗಳನ್ನು ಪೆಟ್ಟಿಗೆಯಿಂದ ತೆಗೆದು ಚಿಕ್ಕ ಬಟ್ಟೆಯಲ್ಲಿ ಕಟ್ಟಿಕೊಂಡು, ಆ ಪೆಟ್ಟಿಗೆಯನ್ನು ಮಾರ್ಗಮಧ್ಯದಲ್ಲಿ ಒಂದು ಬಾವಿಯೊಳಗೆ ಹಾಕಿ ತಮ್ಮ ನಿವಾಸಕ್ಕೆ ಹೋಗುತ್ತಿದ್ದರು. ಅಷ್ಟರಲ್ಲಿ ಸಂಜೆ ಆಯಿತು. ದಾರಿಯಲ್ಲಿ ಒಂದು ಮಾವಿನ ತೋಟ ಇತ್ತು. ಆ ತೋಟದೊಳಗೆ ಹೋಗಿ, ಆ ತೋಟದವರನ್ನು ಪರಿಚಯ ಮಾಡಿಕೊಂಡು ದಾರಿಯಲ್ಲಿ ಹೋಗುವವರೆಂದು, ಈ ರಾತ್ರಿಗೆ ಇಲ್ಲಿದ್ದು ಹೋಗುತ್ತೇವೆಂದು ಹೇಳಿದಾಗ ಅವರು ಸರಿ ಎಂದು ಒಪ್ಪಿಕೊಂಡಿದ್ದಾರೆ. ಇಬ್ಬರು ಮಾಂತ್ರಿಕರು ಆ ರಾತ್ರಿಗೆ ತೋಟದಲ್ಲಿ ಮಲಗಿದ್ದಾರೆ. ಅವರು ಮಲಗಿದ್ದರೂ ತಮ್ಮ ಹತ್ತಿರವಿರುವ ವಜ್ರಗಳನ್ನು ಯಾರೂ ತೆಗೆಯದಂತೆ ಕಾಟೇರಿಯನ್ನು ಕಾವಲು ಇಟ್ಟು ಮಲಗಿದ್ದಾರೆ. ಬೆಳಗಾದ ನಂತರ ಅವರು ಎದ್ದು ಸೊಂಟಕ್ಕಿರುವ ತಮ್ಮ ವಜ್ರಗಳ ಮೂಟೆಯನ್ನು ಒಂದು ಸಲ ಕೈಯಿಂದ ಮುಟ್ಟಿ ನೋಡಿಕೊಂಡಿದ್ದಾರೆ. ಅವರಿಗೆ ಅವರ ಮೂಟೆ ಸೊಂಟಕ್ಕೆ ಇಲ್ಲದಂತೆ ತಿಳಿದುಹೋಯಿತು. ತಮ್ಮ ಹತ್ತಿರವಿರುವ ಮೂಟೆಯನ್ನು ಯಾರೂ ತೆಗೆಯಲಾರರು. ಏಕೆಂದರೆ ಕಾಟೇರಿ ಕಾವಲಿದೆ. ಅವರು ನಿದ್ರಿಸುವಾಗ ಯಾರಾದರೂ ತೆಗೆದುಕೊಳ್ಳುವ ಪ್ರಯತ್ನ ಮಾಡಿದರೆ ಕಾಟೇರಿ ಅವರನ್ನು ಹೆದರಿಸಿ ಕಳುಹಿಸುತ್ತದೆ.

ಆದ್ದರಿಂದ ಯಾರೂ ತೆಗೆದುಕೊಳ್ಳುವುದಕ್ಕೆ ಆಗುವುದಿಲ್ಲ. ಕಾಟೇರಿಗೆ ತಿಳಿಯದಂತೆ ಏನೂ ನಡೆದಿರುವುದಿಲ್ಲವೆಂದು ತಿಳಿದ ಮಾಂತ್ರಿಕರು ಕಾಟೇರಿಯನ್ನು ಕೇಳಿದ್ದಾರೆ. ಆಗ ಕಾಟೇರಿ ಯಾರೂ ಇಲ್ಲಿಗೆ ಬರಲಿಲ್ಲ, ಯಾರೂ ವಜ್ರಗಳನ್ನು ತೆಗೆದುಕೊಂಡು ಹೋಗಲಿಲ್ಲವೆಂದು ತಿಳಿಸಿತು. ಯಾರೂ ತಮ್ಮ ಹತ್ತಿರವಿರುವ ವಜ್ರಗಳನ್ನು ತೆಗೆಯದಿರುವಾಗ, ಅವು ಹೇಗೆ ಹೋಗಿವೆ ಎಂದು ಕಾಟೇರಿಯನ್ನು ಕೇಳಿದ್ದಾರೆ. ಯಾವ ರೀತಿಯಲ್ಲಿ ನೋಡಿದರೂ ವಜ್ರಗಳ ವಿಷಯ ನನಗೆ ಏನೂ ಅರ್ಥವಾಗಲಿಲ್ಲವೆಂದು ಕಾಟೇರಿ ಸಹ ಹೇಳಿತು.)

***********************************

(ರಾಜಯೋಗಾನಂದ ಸ್ವಾಮಿ ಹತ್ತಿರಕ್ಕೆ ಯಸ್.ಪಿ ರವರು ಹೋಗಲಿಲ್ಲ ವೆಂದು, ಎಂತಹ ವಿಚಾರಣೆ ನಡೆಸಲಿಲ್ಲವೆಂದು, ಅದೇ ಡಿಪಾಟ್‌ಮೆಂಟ್‌ನಲ್ಲಿ ಇದ್ದು ಗಮನಿಸುತ್ತಿರುವ ಇನ್‌ಸ್ಪೆಕ್ಟರ್ ಬಾಲಪ್ಪ ವಜ್ರಗಳ ವಿಷಯವಾಗಿ ಎರಡನೆ ಸಲ ಎಸ್.ಪಿ ರವರಿಗೆ ಫೋನ್ ಮಾಡಿ ರಾಜಯೋಗಾನಂದ ಸ್ವಾಮಿಯೇ ಕಳ್ಳನೆಂದು ಹೇಳಿದ್ದಾನೆ. ಎರಡನೆ ಸಲ ಕೋಡಾ ಸಹ ಫೋನ್ ಬರುವುದರಿಂದ ಆ ವಿಷಯ ಒಂದು ಸಲ ಸ್ವಾಮಿಯೊಂದಿಗೆ ಬೇಟಿಯಾಗಿ ಮಾತನಾಡುವುದು ಒಳ್ಳೆಯದೆಂದುಕೊಂಡ ಯಸ್.ಪಿ ರವರು ಕೂಡಲೇ ಹೊರಟು ರಾಜಯೋಗಾನಂದ ಸ್ವಾಮಿ ಹತ್ತಿರಕ್ಕೆ ಹೋಗಿದ್ದಾನೆ. ಸ್ವಾಮಿ ಹತ್ತಿರಕ್ಕೆ ಹೋದ ಯಸ್.ಪಿ ಹೀಗೆ ಹೇಳಿದನು.)

**ಯಸ್.ಪಿ :–** ಭುವನೇಶ್ವರಿ ದೇವಾಲಯದಲ್ಲಿ ಹೋದ ವಜ್ರಗಳನ್ನು ಕುರಿತು ನಿಮ್ಮ ಹೆಸರನ್ನು ಹೇಳುತ್ತಾ ಎರಡು ಫೋನ್‌ಕಾಲ್ಸ್ ಬಂದಿವೆ. ಫೋನ್ ಮಾಡಿದವರು ನೀವೇ ಕಳ್ಳ ಎಂದು ಹೇಳಿದ್ದಾರೆ. ಆದರೂ ನಾವು ಆ ವಿಷಯವನ್ನು ನಂಬಲಿಲ್ಲ. ಆದರೂ ಒಂದು ಸಲ ನಿಮ್ಮೊಂದಿಗೆ ಭೇಟಿಯಾದರೆ ಚೆನ್ನಾಗಿರುತ್ತದೆಂದು ಬಂದಿದ್ದೇನೆ. ಅದರ ವಿಷಯ ನಿಮಗೇನಾದರೂ ತಿಳಿದಿದ್ದರೆ ಹೇಳಿ.

**ರಾಜಯೋಗಾನಂದ :–** ಆ ಫೋನ್ ಮಾಡಿರುವುದು ಯಾರೋ ಅಲ್ಲ. ನಿಮ್ಮ ಡಿಪಾರ್ಟ್‌ಮೆಂಟ್‌ನಲ್ಲಿ ಕೆಲಸ ಮಾಡುತ್ತಿರುವ ಇನ್‌ಸ್ಪೆಕ್ಟರ್ ಬಾಲಪ್ಪ.

**ಯಸ್.ಪಿ :–** ಆತನೇಕೆ ಫೋನ್‌ನಲ್ಲಿ ಹೇಳುತ್ತಾನೆ? ತನ್ನ ಹತ್ತಿರ ಯಾವುದಾದರೂ ಮಾಹಿತಿ ಇದ್ದರೇ ನೇರವಾಗಿ ಬಂದು ನನ್ನೊಂದಿಗೆ ಹೇಳುತ್ತಾನೆ.

**ರಾಜಯೋಗಾನಂದ :–** ವಜ್ರಗಳು ನಮ್ಮ ಹತ್ತಿರ ಇದ್ದಂತೆ ಬಾಲಪ್ಪನಿಗೆ ಮೊದಲಿನಿಂದ ತಿಳಿದಿತ್ತು. ಆ ವಿಷಯ ನಿಮಗೆ ತಿಳಿಯುವಂತೆ ಬುದ್ಧಿವಂತಿಕೆಯಿಂದ ನಿಮಗೆ ಫೋನ್‌ನಲ್ಲಿ ಹೇಳಿದ್ದಾನೆ.

**ಯಸ್.ಪಿ :–** ಏನೂ ನಿಮ್ಮ ಹತ್ತಿರ ವಜ್ರಗಳಿವೆಯಾ. ನೀವು ತಿಳಿದೇ ಮಾತನಾಡುತ್ತಿದ್ದೀರ?

**ರಾಜಯೋಗಾನಂದ :–** ಹೌದು ತಿಳಿದೇ ಹೇಳುತ್ತಿದ್ದೇನೆ. ಆ ವಜ್ರಗಳು ಭುವನೇಶ್ವರಿ ದೇವಾಲಯದಲ್ಲಿ ಕಳುವಾಗಿರುವವೆಂದು ನಿಮಗೆ ತಿಳಿಯುವುದಕ್ಕಿಂದ ಮೊದಲೇ ಆ ವಜ್ರಗಳು ನಮ್ಮ ಕೈಗೆ ಬಂದಿವೆ. ವಿಷಯವೆಲ್ಲಾ ತಿಳಿದ ನಾವು ಅವುಗಳನ್ನು ಸ್ವಲ್ಪ ಕಾಲ ನಮ್ಮ ರಕ್ಷಣೆಯಲ್ಲೇ ಇಟ್ಟುಕೊಂಡು ಅಸಲು ಕಳ್ಳರನ್ನು ಹೊರಕ್ಕೆ ಎಳೆಯಬೇಕೆಂದುಕೊಂಡಿದ್ದೇನೆ. ಅವುಗಳ ವಿಷಯ ಬಾಲಪ್ಪನಿಗೆ ಸ್ವಲ್ಪ ತಿಳಿದಿತ್ತು. ಆ ವಜ್ರಗಳಿಗಾಗಿ ಇಲ್ಲಿಗೆ ಬಂದಿರುವ ಕಳ್ಳರನ್ನು ಸಹ ನಾವು ಹಿಡಿದು ಬಂಧಿಸಿದ್ದೇವೆ. ಆಗ ಆ ಕಳ್ಳರನ್ನು ನಮ್ಮಿಂದ ಬಿಡಿಸಿಕೊಳ್ಳುವುದಕ್ಕೆ ಬಂದಿದ್ದಾನೆ. ಆದರೂ ನಾವು ಬಿಡಲಿಲ್ಲ. ಹಣ ತೆಗೆದುಕೊಂಡು ಕಳ್ಳರ ಪರವಾಗಿ ಬಂದಿರುವುದಲ್ಲದೆ, ನಮ್ಮನ್ನು ಮರ್ಯಾದೆ ಇಲ್ಲದೆ ಮಾತನಾಡಿರುವುದಕ್ಕೆ ಇಲ್ಲಿ ನಮ್ಮವರು ಎದುರು ತಿರಿಗಿದರು. ಆಗ ಇಲ್ಲಿಂದ ಹೋಗಿದ್ದಾನೆ. ನ್ಯೂಸ್‌ಪೇಪರ್‌ನಲ್ಲಿ ಸಮಾಚಾರ ಬಂದ ನಂತರ ನಮ್ಮ ಹತ್ತಿರಕ್ಕೆ ಬಂದು 50 ಸಾವಿರ ಹಣ ಕೊಟ್ಟರೇ ನಿಮ್ಮ ಹೆಸರು ಹೊರಗೆ ಬಾರದಂತೆ ನೋಡುತ್ತೇನೆಂದಿದ್ದಾನೆ. ಅದಕ್ಕೆ ನಾವು ಒಪ್ಪಿಕೊಂಡಿಲ್ಲ. ಆದ್ದರಿಂದ ಆತನ ಹೆಸರು ತಿಳಿಯದಂತೆ ರಹಸ್ಯವಾಗಿ ಫೋನ್ ಮಾಡಿರುತ್ತಾನೆ.

**ಯಸ್.ಪಿ :–** ವಜ್ರಗಳು ನಿಮ್ಮ ಹತ್ತಿರ ಇಟ್ಟುಕೊಳ್ಳುವುದು ಅಪರಾದವಾಗುತ್ತದೆ. ಕೂಡಲೇ ನಮಗೆ ಏಕೆ ಒಪ್ಪಿಸಲಿಲ್ಲ. ಅವುಗಳನ್ನು ನಿಮ್ಮ ಹತ್ತಿರ ಇಟ್ಟುಕೊಳ್ಳುವುದು ಕಾನೂನು ಒಪ್ಪಿಕೊಳ್ಳುವುದಿಲ್ಲ.

**ರಾಜಯೋಗಾನಂದ :–** ಕಾನೂನು ಒಪ್ಪಿಕೊಂಡರೂ ಒಪ್ಪಿಕೊಳ್ಳದಿದ್ದರೂ ವಜ್ರಗಳು ಈಗ ನಮ್ಮ ಹತ್ತಿರ ಸಹ ಇಲ್ಲ. ಅವು ಈ ದಿನ ರಾತ್ರಿ ನಮ್ಮಿಂದ ಸಹ ಕಳುವಾಗಿವೆ. ಅವುಗಳ ಮೇಲೆ ಕಣ್ಣುಹಾಕಿರುವವರೆಷ್ಟೋ ಜನರಿದ್ದಾರೆ. ಆದ್ದರಿಂದ ಅವುಗಳನ್ನು ನಮ್ಮ ರಕ್ಷಣೆಯಲ್ಲೇ ಇಟ್ಟುಕೊಂಡು ಅಸಲಾದ ಕಳ್ಳರನ್ನು ಹಿಡಿದು ಕೊಟ್ಟು ನಂತರ ಅವುಗಳನ್ನು ಒಪ್ಪಿಸಬೇಕೆಂದುಕೊಂಡಿದ್ದೇವೆ. ಆದರೂ ನಮ್ಮಿಂದ ಅವುಗಳನ್ನು ಸುಲಭವಾಗಿ ಕಳುವುಮಾಡಿದ್ದಾರೆ.

**ಯಸ್.ಪಿ :–** ನಿಮ್ಮ ಮಾತು ನಮಗೆ ಕಟ್ಟುಕಥೆಯಂತೆ ತೋಚುತ್ತಿದೆ. ನಿಮ್ಮ ಹತ್ತಿರದಿಂದ ಯಾರೋ ಕಳುವು ಮಾಡಿದ್ದಾರೆಂದರೇ ಕಾನೂನು ಒಪ್ಪಿಕೊಳ್ಳುವುದಿಲ್ಲ. ನಾವು ನಿಮ್ಮನ್ನು ಅರೆಸ್ಟು ಮಾಡಬೇಕಾಗಿ ಬರುತ್ತದೆ.

(ಅರೆಸ್ಟಾ! ಎಂದು ಸ್ವಾಮಿ ನಕ್ಕು ಕಾನೂನು ಒಪ್ಪಿಕೊಳ್ಳುವುದಿಲ್ಲ ಎನ್ನುತ್ತಿದ್ದೀಯ. ಕಾನೂನು ಒಪ್ಪಿಕೊಂಡರೇ ಅರೆಷ್ಟು ಅಗತ್ಯವಿಲ್ಲ. ಅಗತ್ಯ ಬಂದಿದೆ ಆದ್ದರಿಂದ ನಿನ್ನ ಕಾನೂನಿನೊಂದಿಗೆ ಮಾತನಾಡು ಎಂದು ಸ್ವಾಮಿ ಫೋನ್ ಮಾಡಿ ರಿಸೀವರ್ ಯಸ್.ಪಿರವರಿಗೆ ಕೊಟ್ಟಿದ್ದಾನೆ. ಫೋನ್‌ನಲ್ಲಿ ಕೇಳಿಸಿರುವುದನ್ನು ಅನುಸರಿಸಿ ಯಸ್.ಪಿ ರವರು ನಾನು ಹಾಗೆ ಮಾತನಾಡಿರುವುದಕ್ಕೆ ಕ್ಷಮಿಸಿ ಸ್ವಾಮಿ ಎಂದು ಕ್ಷಮಾಪಣೆ ಹೇಳಿದನು. ನಂತರ ನಾನು ಇಲ್ಲಿಗೆ ಬರಬೇಕಾದ ಕೆಲಸವಿಲ್ಲ. ಹೋಗಿಬರುತ್ತೇನೆಂದು ಹೇಳಿ ಹೋದನು.)

**********************************

(ಕಾಟೇರಿ ಶಕ್ತಿಯನ್ನು ಕಾವಲಿಟ್ಟರೂ ಅರ್ಥವಾಗದಂತೆ ವಜ್ರಗಳು ಹೋಗಿರುವುದು ಮಾಂತ್ರಿಕರಿಬ್ಬರಿಗೂ ಅರ್ಥವಾಗಲಿಲ್ಲ. ಕೊನೆಗೆ ಇಬ್ಬರು ಸೇರಿ ಅವರ ಹತ್ತಿರವಿರುವ ಅಂಜನದಲ್ಲಿ ನೋಡಬೇಕೆಂದುಕೊಂಡಿದ್ದಾರೆ. ಅಂಜನ ಪೂಜೆ ಮಾಡಿ ಅಂಜನ ಡಬ್ಬೀ ಮುಚ್ಚಳವನ್ನು ತೆಗೆದು ನಾಗಭೂಷಣ ನೋಡಲಾರಂಭಿಸಿದನು. ಸ್ವಲ್ಪ ಸಮಯದ ನಂತರ ಅಂಜನದಲ್ಲಿ ದೃಶ್ಯಗಳು ಕಾಣಿಸಲಾರಂಭಿಸಿದವು. ಮೊದಲ ದೃಶ್ಯದಲ್ಲಿ ವಜ್ರಗಳು ಕಾಣಿಸಲಿಲ್ಲ. ಉದ್ದನೆಯ ಹಾವು ಕಾಣಿಸಿತು. ಆ ಹಾವು ಅಂಜನದಲ್ಲಿಂದ ನಾಗಭೂಷಣನ ಕಡೆ ನೇರವಾಗಿ

ನೋಡಿ ತನ್ನ ಬಾಲದಿಂದ ಹೊಡೆಯಿತು. ಅಂಜನದಲ್ಲಿ ಬಾಲವನ್ನು ಜಾಡಿಸಿದರೇ ಇಲ್ಲಿ ನೋಡುವ ನಾಗಭೂಷಣನಿಗೆ ಏಟು ಬಿದ್ದಿದೆ. ಆ ಏಟಿಗೆ ನಾಗಭೂಷಣ ಎಗರಿ ಪಕ್ಕದಲ್ಲಿ ಬಿದ್ದಿದ್ದಾನೆ. ಕೂಡಲೇ ಪಕ್ಕದಲ್ಲಿದ್ದ ಮಾಂತ್ರಿಕ ವೃದ್ಧನು ಮಲ್ಲಯ್ಯ ಅಂಜನದಲ್ಲಿ ಏನೋ ಪ್ರಮಾದ ನಡೆದಿದೆಯೆಂದು ತಿಳಿದು ಅಂಜನವನ್ನು ಮುಚ್ಚಿಹಾಕಿದನು. ಪಕ್ಕದಲ್ಲಿ ಬಿದ್ದಿರುವ ನಾಗಭೂಷಣನಿಗೆ ಮಲ್ಲಯ್ಯ ಯಾವುದೋ ಮಂತ್ರದಿಂದ ಉಪಶಮನವನ್ನು ಮಾಡಿದ್ದಾನೆ. ಮೂರ್ಛೆಯಿಂದ ಎಚ್ಚೆತ್ತುಕೊಂಡ ನಾಗಭೂಷಣನು ನಡೆದ ವಿಷಯವನ್ನು ಹೇಳಿದ್ದಾನೆ. ಮಲ್ಲಯ್ಯ ಅಂಜನದಿಂದ ಹಾವು ಹೊಡೆಯುವುದೇನೆಂದು ಯೋಚಿಸಿದನು. ಕೊನೆಗೆ ಅವರಿಗೆ ಏನೂ ಅರ್ಥವಾಗಲಿಲ್ಲ. ಆದ್ದರಿಂದ ಅವರು ವಜ್ರಗಳಿಗಾಗಿ ಪರದಾಡದೆ ಸ್ವಲ್ಪ ಕಾಲ ಮೌನವಾಗಿ ಇರುವುದು ಒಳ್ಳೆಯದೆಂದುಕೊಂಡಿದ್ದಾರೆ.)

**********************************

(ಜಟಾಜೂಟ ಸ್ವಾಮಿ ತನ್ನ ಅಧೀನದಲ್ಲಿರುವ ಭೂತ, ಪ್ರೇತ, ಪಿಶಾಚಿಗಳೆಲ್ಲವನ್ನು ಉಪಯೋಗಿಸಿ ವಜ್ರಗಳ ಸುಳಿವು ತಿಳಿದುಕೊಳ್ಳಬೇಕೆಂದು ಕೊಂಡಿದ್ದಾನೆ. ದೊಡ್ಡ ಯೋಗಿಯಾದ ರಾಜಯೋಗಾನಂದ ಸ್ವಾಮಿರವರ ಮನೋದೃಷ್ಟಿಗೆ ಗೋಚರವಾಗದ ವಜ್ರಗಳು ತಾಂತ್ರಿಕರಿಗೆ ತಿಳಿಯುತ್ತವಾ? ಜಟಾಜೂಟ ಸ್ವಾಮಿ ಒಂದು ದಿನ ಪ್ರಾತಃ ಕಾಲದಲ್ಲೇ ಎದ್ದು ಸ್ನಾನಪಾನಾದಿಗಳು ಮಾಡಿ ತನ್ನ ಆಸನದಲ್ಲಿ ಆಸೀನನಾಗಿ ತನ್ನ ಶಿಷ್ಯರಲ್ಲಿ ಒಬ್ಬನನ್ನು ತನ್ನ ಎದುರಿಗೆ ಕೂರಿಸಿಕೊಂಡು ತನ್ನ ಅಧೀನದಲ್ಲಿನ ಒಬ್ಬ ಪಿಶಾಚಿಯನ್ನು ಕರೆದು ಎದುರಿಗಿರುವ ತನ್ನ ಶಿಷ್ಯನಲ್ಲಿ ಸೇರಿ ಮಾತನಾಡಲು ಹೇಳಿದಾಗ ಅದು ಹಾಗೆಯೇ ಮಾಡಿತು. ಎದುರಲ್ಲಿರುವ ತನ್ನ ಶಿಷ್ಯನ ಶರೀರದಿಂದ ಪಿಶಾಚಿ ಮಾತನಾಡುವುದಕ್ಕೆ ಪ್ರಾರಂಭಿಸಿತು. ಆಗ ವಜ್ರಗಳ ವಿಷಯವನ್ನು ಜಟಾಜೂಟ ಸ್ವಾಮಿ ಕೇಳಿದನು. ಆಗ ಆ ಪಿಶಾಚಿ ಸ್ವಲ್ಪ ತೂಗುತ್ತಾ, ತನಗೇನೂ ಗೋಚರವಾಗಲಿಲ್ಲವೆಂದು, ದೊಡ್ಡ ಬೆಳಕು ಮಾತ್ರ ಕಾಣಿಸುತ್ತಿದೆಯೆಂದು, ಆ ಬೆಳಕನ್ನು ದಾಟಿ ತನ್ನ ದೃಷ್ಠಿ ಮುಂದಕ್ಕೆ ಹೋಗಲಾರದೆಂದು, ಆ ಬೆಳಕನ್ನು ನೋಡಲಾರದಂತಿದ್ದೇನೆಂದು ಹೇಳಿ ಕೂಡಲೇ ಹೊರಟುಹೋಯಿತು.

ಜಠಾಜೂಟ ಸ್ವಾಮಿಗೆ ಏನೂ ಅರ್ಥವಾಗಲಿಲ್ಲ. ಆದ್ದರಿಂದ ಸ್ವಲ್ಪ ಕಾಲ ಮೌನವಾಗಿ ಇರುವುದು ಒಳ್ಳೆಯದೆಂದುಕೊಂಡಿದ್ದಾನೆ.)

***********************************

(ರಾಜಯೋಗಾನಂದ ಸ್ವಾಮಿ ಬಳಿಯಿಂದ ಕೂಡಾ ವಜ್ರಗಳು ಕೈಜಾರಿ ಹೋಗಿವೆ ಎಂದು ತಿಳಿದ ತಪಸ್ವಿಬಾಬಾರವರಿಗೆ ರಾಜಯೋಗಾನಂದ ಸ್ವಾಮಿ ಹತ್ತಿರದಿಂದ ಹೋಗಿರುವುದಕ್ಕೆ ಸ್ವಲ್ಪ ಸಂತೋಷವಾದರೂ, ಅವು ಪೂರ್ತಿ ತಿಳಿಯದಂತೆ ಹೋಗಿರುವುದಕ್ಕೆ ಸ್ವಲ್ಪ ವ್ಯಥೆಯುಂಟಾಯಿತು. ವಯರ್‌ಲೆಸ್‌ನಿಂದ ಆ ವಿಷಯವನ್ನು ಮುನೆಪ್ಪನಿಗೆ ತಿಳಿಸಿ, ಸ್ವಲ್ಪ ಕಾಲ ವಜ್ರಗಳಿಗೋಸ್ಕರ ಯಾವ ಪ್ರಯತ್ನ ಮಾಡದಂತೆ ಸುಮ್ಮನಿರಲು ಹೇಳಿದನು. ಹೀಗೆ ವಜ್ರಗಳಿಗಾಗಿ ಪ್ರಯತ್ನಿಸುವ ವರೆಲ್ಲರೂ ಯಾರಿಗೆ ಅವರು ಸ್ವಲ್ಪ ಕಾಲ ಸುಮ್ಮನಿರುವುದು ಒಳ್ಳೆಯದೆಂದು ಸುಮ್ಮನಿರುವಾಗ, ರಾಜಯೋಗಾನಂದ ಸ್ವಾಮಿ ಆಶ್ರಮದಲ್ಲಿನ ರಾಘವನಿಗೆ ಹಾಗೆ ಸುಮ್ಮನಿರುವುದು ಸ್ವಲ್ಪವೂ ಇಷ್ಟವಿಲ್ಲ. ಏಕೆಂದರೇ! ತಮ್ಮ ಬಳಿಯಿಂದಲೇ ವಜ್ರಗಳು ಮಾಯವಾಗಿಹೋಗಿವೆ. ಆದ್ದರಿಂದ ಅವುಗಳನ್ನು ಹೇಗಾದರೂ ಪತ್ತೆ ಹಚ್ಚಬೇಕೆಂಬ ಛಲದಿಂದ ಇದ್ದನು. ರಾಘವ ರಾಜಯೋಗಾನಂದ ಸ್ವಾಮಿ ಹತ್ತಿರಕ್ಕೆ ಹೋಗಿ ಹೀಗೆ ಹೇಳಿದ್ದಾನೆ.)

**ರಾಘವ :–** ಸ್ವಾಮೀ! ನೀವು ಎಷ್ಟೋ ವಿಷಯಗಳನ್ನು ಮನೋ ನೇತ್ರದಿಂದ ಹೇಳಿದ್ದೀರ, ಒಂದು ವಜ್ರಗಳ ವಿಷಯದಲ್ಲಿ ಮಾತ್ರ ತಿಳಿಯದೆ ಹೋಗುವುದಕ್ಕೆ ಕಾರಣ ಏನಿರುತ್ತದೆ?

**ರಾಜಯೋಗಾನಂದ :–** ಕರ್ಮಕ್ಕೆ ಎಲ್ಲರೂ ಅಧೀನರೇ. ಆದ್ದರಿಂದ ಕರ್ಮದ ಪ್ರಕಾರ ನಾವೆಲ್ಲರೂ ಆಡಿಸಲ್ಪಡುತ್ತಿದ್ದೇವೆ. ಈ ಆಟದಲ್ಲಿ ಪವಿತ್ರವಾದ ದೇವಾಲಯ ವೊಂದರ ವಜ್ರಗಳ ಸುಳಿವು ತಿಳಿಯದಂತೆ ಹೋಗಿರುವುದು ಸ್ವಲ್ಪ ನೋವನ್ನುಂಟು ಮಾಡುವ ವಿಷಯವಾದರೂ, ದೈವಶಕ್ತಿ ಮುಂದೆ ದುಷ್ಟಶಕ್ತಿಯ ಆಟಗಳು ಸಾಗುವುದಿಲ್ಲ. ಆದ್ದರಿಂದ ನಾವು ಮೌನವಾಗಿ ಇರುವುದು ಒಳ್ಳೆಯದೆಂದಿದ್ದೇನೆ.

**ರಾಘವ :–** ಸ್ವಾಮೀ ನೀವು ಮೌನವಾಗಿ ಇರುವುದರಲ್ಲಿ ಎಷ್ಟೋ ಅರ್ಥವಿರುತ್ತದೆ. ಆದರೆ ನಾವು ನಿಮ್ಮ ಸೇವಕರಾಗಿ ನಿಮ್ಮ ಧ್ಯೇಯವನ್ನು ನೆರವೇರಿಸಬೇಕೆನ್ನುವ ಛಲದಿಂದ ಇದ್ದೇವೆ. ಆದ್ದರಿಂದ ನಾನು ಅವುಗಳ ಸುಳಿವಿಗಾಗಿ ಪ್ರಯತ್ನಿಸಬೇಕೆಂದು ಅಂದುಕೊಂಡಿದ್ದೇನೆ. ಅದಕ್ಕೆ ನಿಮ್ಮ ಆಜ್ಞೆಗಾಗಿ ಕಾದುಕೊಂಡಿದ್ದೇನೆ. ನಿವು ಒಳ್ಳೆಯದೆಂದು ಅನುಮತಿ ಕೊಟ್ಟರೇ ಈ ದಿನವೇ ನನ್ನ ಪ್ರಯತ್ನ ನಾನು ಮಾಡುತ್ತೇನೆ.

(ರಾಘವನ ಛಲಕ್ಕೆ ಸಂತೋಷಿಸಿದ ಸ್ವಾಮಿ, ಸ್ವಲ್ಪ ಯೋಚಿಸಿ ಸರಿ ನಿನ್ನ ಪ್ರಯತ್ನ ನೀನು ಮಾಡು ಎಂದನು. ಆ ಮಾತಿಗೆ ಸಂತೋಷಪಟ್ಟ ರಾಘವ ತನಗೆ ಜೊತೆಗೆ ಕೆಲವರನ್ನು ಕರೆದುಕೊಂಡು, ತಾನು ಎಲ್ಲಿಗೆ ಹೋಗುತ್ತಿರುವುದು ಹೆಂಡತಿ ದುಂದುಭಿಗೂ ಸಹ ಹೇಳದಂತೆ ಆಶ್ರಮದಿಂದ ಹೊರಟು ಹೋಗಿದ್ದಾನೆ. ಸ್ವಲ್ಪ ಜನರೊಂದಿಗೆ ಹೊರಟು ಹೋದ ರಾಘವ ಅಡವಿ ಮಾರ್ಗದಿಂದ ಒಂದು ದಿನವೆಲ್ಲಾ ಪ್ರಯಾಣಿಸಿ ಒಂದು ಪ್ರಾಂತವನ್ನು ಸೇರಿದ ನಂತರ ಅಲ್ಲೇ ತನ್ನ ಸಹಚರರನ್ನು ಇರಲು ಹೇಳಿ ತಾನು ಒಬ್ಬನೇ ಅಡವಿಯಲ್ಲಿ ಮುಂದಕ್ಕೆ ಹೋದನು. ತನ್ನ ಹಿಂದೆ ಬಂದಿರುವವರನ್ನು ಬಿಟ್ಟ ಸ್ಥಳದಿಂದ ಹತ್ತು ನಿಮಿಷಗಳು ಹೋದ ನಂತರ ಮಹಿಮೆಗಳಿರುವ ಆಲದಮರದ ಹತ್ತಿರಕ್ಕೆ ಸೇರಿದ್ದಾನೆ. ಆ ಆಲದಮರದ ಹತ್ತಿರ ಇರುವ ತ್ರಿಶೂಲವನ್ನು, ಪಾದುಕೆಗಳನ್ನು ಮುಟ್ಟಿ ಕೈ ಮುಗಿದಿದ್ದಾನೆ. ಆ ತ್ರಿಶೂಲಕ್ಕೆ ಮುಂದೆ ಕುಳಿತುಕೊಂಡು ಧ್ಯಾನದಲ್ಲಿ ಲಗ್ನವಾಗಿದ್ದಾನೆ. ಸ್ವಲ್ಪ ಸಮಯಕ್ಕೇ ಆಕಾಶದಲ್ಲಿ ಮೇಘಗಳು ಬಂದು ಗುಡುಗು ಮಿಂಚು ಶುರುವಾದವು. ರಾಘವ ಕಣ್ಣು ತೆರೆದು ನೋಡಿದ್ದಾನೆ ಮಳೆ ಪ್ರಾರಂಭವಾಯಿತು. ಸ್ವಲ್ಪ ಹೊತ್ತಿಗೆ ಮಳೆ ನಿಂತುಹೋಯಿತು. ನಂತರ ನಿಶ್ಯಬ್ದ ಏರ್ಪಟ್ಟಿತು. ಆಗ ಮೊದಲು ಕರೆದಂತೆ "ನೀನು ನನ್ನ ಹತ್ತಿರಕ್ಕೆ ಬಾ" ಎಂದು ಶಬ್ದ ಕೇಳಿಸಿತು. ಇದು ಎರಡನೆ ಅನುಭವ ಆದ್ದರಿಂದ ರಾಘವ ಹೆದರದೆ ಮೊದಲಿನಂತೆ ಭೂಮಿಯನ್ನು ಅಗೆದು, ಇಟ್ಟಿಗೆಗಳನ್ನು ತೆಗೆದು ಸುರಂಗ ಮಾರ್ಗದಿಂದ ಒಳಗೆ ಹೋದನು. ಕತ್ತಲಿನಿಂದ ಹೋದ ರಾಘವನಿಗೆ ಒಳಗೆ ದೊಡ್ಡ ಬೆಳಕು ಕಾಣಿಸಿತು. ರಾಘವ ಅದಕ್ಕು ಮೊದಲೇ ಒಂದು ಸಲ ಹೋಗಿ ಬಂದಿರುವುದರಿಂದ ಹೆದರದೆ ಮುಂದಕ್ಕೆ ಹೋಗಿ ಆಸೀನನಾಗಿರುವ

ಮುನಿಗೆ ನಮಸ್ಕರಿಸಿದನು. ಆಗ ಆ ಮುನೀಶ್ವರನು ಮುಗುಳ್ನಗೆಯಿಂದ ಹೀಗೆ ಮಾತನಾಡತೊಡಗಿದನು.)

**ಮುನಿ :–** ನಿನ್ನ ಬರುವಿಕೆವೊಂದರ ಆಂತರ್ಯ ತಿಳಿಯಿತು. ನೀನು ಭುವನೇಶ್ವರಿ ದೇವಾಲಯದಿಂದ ಕಳುವಾದ ವಜ್ರಗಳ ವಿಷಯವಾಗಿ ಬಂದಿದ್ದೀಯ.

**ರಾಘವ :–** ಮಹಾತ್ಮಾ ನೀವು ಸರ್ವಜ್ಞರು. ವಜ್ರಗಳ ವಿಷಯವಾಗಿ ಸ್ವತಃ ರಾಜಯೋಗಾನಂದ ಸ್ವಾಮಿಯೇ ತನಗರ್ಥವಾಗಲಿಲ್ಲವೆಂದಿದ್ದಾನೆ. ಹೊರಗಿನ ಪ್ರಪಂಚದಲ್ಲಿ ದೊಡ್ಡವರಾಗಿ ನೀವು ಸೂಚಿಸಿದ ರಾಜಯೋಗಾನಂದ ಸ್ವಾಮಿಗೇ ತಿಳಿಯದಿರುವಾಗ ಆ ವಿಷಯ ನಿಮಗೆ ಹೊರತು ಯಾರಿಗೂ ತಿಳಿಯದೆಂದು ಕೊಂಡಿದ್ದೇನೆ. ಆದ್ದರಿಂದಲೇ ನಿಮ್ಮ ಹತ್ತಿರಕ್ಕೆ ಒಂಟಿಯಾಗಿ ಬಂದಿದ್ದೇನೆ. ಇನ್ನು ಆ ವಿಷಯ ನೀವೇ ತಿಳಿಸಬೇಕಾಗಿದೆ.

**ಮುನಿ :–** (ಆಗ ಆ ಮುನಿ ತನ್ನ ಪಕ್ಕದಲ್ಲೇ ಇರುವ ವಜ್ರಗಳ ಮೂಟೆಯನ್ನು ತೋರಿಸುತ್ತಾ) ಇವೇ ಆ ವಜ್ರಗಳು. ದುಷ್ಟರ ಕೈಯಿಂದ ಈ ಹಾವೇ ನನ್ನ ಹತ್ತಿರಕ್ಕೆ ತಂದಿದೆ. ಇವು ನನ್ನ ಹತ್ತಿರ ಇರುವುದರಿಂದ ದೊಡ್ಡವನಾದ ರಾಜಯೋಗಾನಂದರ ಊಹೆಗು ಸಹ ತಿಳಿಯದಂತೆ ಹೋಗಿವೆ. ಯಾರಿಗೂ ತಿಳಿಯದಂತೆ ನಾನೇ ಸಂಕಲ್ಪಿಸಿದ್ದೇನೆ. ಆದ್ದರಿಂದ ಇವುಗಳನ್ನು ಕುರಿತು ಯಾರ ಯೋಚನೆಯೂ ಓಡಲಿಲ್ಲ. ಈ ವಜ್ರಗಳಿರುವ ಹಾವನ್ನು ಮೊದಲು ನಿಮ್ಮ ಆಶ್ರಮದವರೆಗು ಸೇರಿಸಿರುವುದು ಈ ಹಾವೇ! ಅದು ನಿಮ್ಮಿಂದ ಕೈಜಾರಿ ಹೋದ ನಂತರ ಸಾಹಸ ಮಾಡಿ ಇಲ್ಲಿಗೆ ತಂದಿರುವುದು ಸಹ ಈ ಹಾವೇ. ಪ್ರಸ್ತುತ ಅವುಗಳಿಗಾಗಿ ಎಷ್ಟೋ ಜನ ಪ್ರಯತ್ನಿಸುತ್ತಿದ್ದಾರೆ. ಅವರ ಮುಂದೆ ನಿಮ್ಮ ಸದುದ್ದೇಶ ಎಷ್ಟು ಮಾತ್ರ ಕೆಲಸಮಾಡುವುದಿಲ್ಲ. ಇವುಗಳನ್ನು ದೇವಾಲಯಕ್ಕೆ ಸೆರಿಸಬೇಕೆನ್ನುವ ನಿಮ್ಮ ಆಲೋಚನೆ ಒಳ್ಳೆಯದೇ, ಆದರೂ ಪ್ರಸ್ತುತ ನೀವು ಸಹ ಸುಮ್ಮನಿರುವುದು ಒಳ್ಳೆಯದೆನ್ನುವ ಆಲೋಚನೆ ನನಗೆ ಉಂಟಾಯಿತು. ಆದ್ದರಿಂದ ನಿಮ್ಮ ಕೈಯಿಂದ ಹೋದ ವಜ್ರಗಳನ್ನು ನಿಮ್ಮ ಹತ್ತಿರಕ್ಕೆ ಬಾರದಂತೆ, ನನ್ನ ಹತ್ತಿರಕ್ಕೆ ಬರುವಹಾಗೆ ಮಾಡಿಕೊಂಡಿದ್ದೇನೆ. ಇವುಗಳಿಗಾಗಿ ನನ್ನೊಂದಿಗೆ ಸಂಪರ್ಕಿಸಬೇಕೆನ್ನುವ ಯೋಚನೆ

ನಿನಗೆ ಬಂದು, ನೀವು ಇಲ್ಲಿ ಬಂದಿರುವುದು ಒಂದು ವಿಧವಾಗಿ ಒಳ್ಳೆಯದೇ. ನೀನು ಬಂದಿದ್ದೀಯ ಆದ್ದರಿಂದ ನಿನಗೆ ಸ್ವಲ್ಪ ಹೊಸ ವಿಷಯವನ್ನು ಹೇಳುತ್ತೇನೆ ಶ್ರದ್ಧೆಯಿಂದ ಕೇಳು.

ಮುಂಬರುವ ತಿಂಗಳಲ್ಲಿ ಅಷ್ಟಗ್ರಹಕೂಟಮಿ ನಡೆಯುತ್ತದೆ. ಅಷ್ಟಗ್ರಹ ಕೂಟಮಿ ಸುಮಾರು ಅರ್ಧಗಂಟೆ ಕಾಲವಿರುತ್ತದೆ. ಆಗ ಆಕಾಶವೆಲ್ಲಾ ಮೇಘಾವೃತವಾಗುತ್ತದೆ, ಬಿರುಗಾಳಿಗಳು ಬೀಸುತ್ತವೆ. ಕೆಲವು ಕಡೆ ಭೂಮಿ ಕಂಪಿಸುತ್ತದೆ. ಧಾರಾಕಾರವಾದ ಮಳೆ ಬೀಳುತ್ತದೆ. ಸುನಾಮೀಗಳು ಬರಬಹುದು. ಸೂರ್ಯನು ಮೇಘಗಳ ಮರೆಯಲ್ಲಿ ಇರುವುದರಿಂದಲೇ ಹೊತ್ತು ಮುಳುಗಿದೆಯಾ! ಎಂದು ಅಂದುಕೊಳ್ಳುತ್ತಾರೆ. ಈ ವಿಧವಾಗಿ ಭೂಮಿ ಮೇಲೆಯಾಗಲೀ, ಸಮುದ್ರದ ಮೇಲೆಯಾಗಲೀ ವಾತಾವರಣದಲ್ಲಿ ಎಷ್ಟೋ ಬದಲಾವಣೆ ಜಾಗ ಮಾಡಿಕೊಳ್ಳುತ್ತದೆ. ಆ ಅಷ್ಟಗ್ರಹಕೂಟಮಿ ಸಮಯದಲ್ಲಿ ಮೊಟ್ಟಮೊದಲು ಹುಟ್ಟಿದ ಗಂಡುಶಿಶು ಬಹಳ ಪ್ರತ್ಯೇಕ ಜಾತಕಬಲ ಹೊಂದಿರುತ್ತಾನೆ. ಏಕೆಂದರೆ! ಅಷ್ಟಗ್ರಹಕೂಟಮಿ ಕನ್ಯಾಲಗ್ನದಲ್ಲಿ ನಡೆಯುತ್ತಿದೆ. ಆ ಲಗ್ನದಲ್ಲಿ ಮೊಟ್ಟಮೊದಲು ಹುಟ್ಟಿದ ಶಿಶುವಿಗೆ ಬುಧಗ್ರಹ, ಆ ರಾಶಿಯಲ್ಲಿನ ಮೊದಲ ನಕ್ಷತ್ರದಲ್ಲಿ, ಮೊದಲ ಪಾದದಲ್ಲಿ ಮೊದಲೇ ಇದೆ. ಆದ್ದರಿಂದ ಬುಧ ಗ್ರಹ ಅಧೀನದಲ್ಲಿರುವವೆಲ್ಲವೂ ಆ ಬಾಲಕನಿಗೆ ಸುಲಭವಾಗಿ ಲಭ್ಯವಾಗುತ್ತವೆ. ಅದು ಕೂಡ ಅಷ್ಟಗ್ರಹಕೂಟಮಿ ಸಮಯವಾಗಿರುವುದರಿಂದ ಕೆಲವು ಅಸಾಧಾರಣ ಶಕ್ತಿಗಳು ಆ ಬಾಲಕನಿಗೆ ಇರುತ್ತವೆ. ಒಟ್ಟಿನಲ್ಲಿ ಆ ಬಾಲಕನು ಸಾಧಾರಣ ವ್ಯಕ್ತಿ ಅಲ್ಲ ಎಂದು ಹೇಳಬಹುದು. ಆ ಸಮಯದಲ್ಲಿ ಮೊದಲು ಹುಟ್ಟಿದವನಿಗೆ ಎಂತಹ ಪ್ರತ್ಯೇಕತೆ ಇರುವುದೂ ಭೂಮಿ ಮೇಲೆ ಕೆಲವರಿಗೆ ತಿಳಿದಿದೆ. ಹಾಗೆ ತಿಳಿದವರು ಆ ಬಾಲಕನನ್ನು ಉಪಯೋಗಿಸಿಕೊಂಡು ಲೋಕದಲ್ಲಿ ಅಸಾಧಾರಣ ಕೆಲಸಗಳು ಮಾಡಲಾರಂಭಿಸುತ್ತಾರೆ. ಅವರು ಮಾಡುವ ದುಷ್ಟಕಾರ್ಯಗಳನ್ನು ನೀನು ರಾಜಯೋಗಾನಂದ ಸಲಹೆಯೊಂದಿಗೆ ಧೈರ್ಯವಾಗಿ ಎದುರಿಸಿ ವಿಫಲ ಮಾಡಬೇಕು. ಹಾಗೆ ಮಾಡದೆ ಹೋದರೆ ಭೂಮಿಮೇಲೆ ಕ್ಷುದ್ರಶಕ್ತಿಗಳ ಪ್ರಾಬಲ್ಯ ಹೆಚ್ಚಾಗಿ, ಅನೇಕ ರೋಗಗಳು ಹೊರಟು ಹೋಗಿ ಪ್ರಜೆಗಳನ್ನು ಗುಂಪು ಗುಂಪುಗಳಾಗಿ ಸಾಯುವಂತೆ ಮಾಡುತ್ತದೆ. ಅಷ್ಟೇ ಅಲ್ಲದೆ ಆ ಬಾಲಕನಲ್ಲಿರುವ

ಶಕ್ತಿಯನ್ನು ಗ್ರಹಿಸಿದವರು ಆ ಬಾಲಕನನ್ನು ಉಪಯೋಗಿಸಿ ಏನಾದರೂ ಮಾಡಬಲ್ಲರು. ಅವರು ಮಾಡಲಾರದ ಕೆಲಸವಾಗಲೀ, ಅವರಿಗೆ ಕೈಲಾಗದ ಕೆಲಸವಾಗಲೀ ಯಾವುದೂ ಇರುವುದಿಲ್ಲ. ಪ್ರಜೆಗಳೆಲ್ಲರನ್ನೂ ಭಯೋತ್ಪಾದಿಗಳಾಗಿ ಮಾಡುತ್ತಾರೆ. ಆದ್ದರಿಂದ ನೀನು ಮತ್ತು ರಾಜಯೋಗಾನಂದ ಸ್ವಾಮಿ ಇಬ್ಬರೂ ಸೇರಿ ಅವರಿಗೆ ಅಂತಹ ಶಕ್ತಿ ಕೈಗೂಡದಂತೆ ಮಾಡಬೇಕು. ಈ ಕಾರ್ಯದಲ್ಲಿ ನಿಮಗೆ ಎಷ್ಟೋ ಪ್ರಾಣಾಪಾಯ ಸ್ಥಿತಿಗಳುಂಟಾಗಬಹುದು. ನಿಮಗೆ ಅಂತಹ ಸ್ಥಿತಿ ಏರ್ಪಟ್ಟಾಗ ನಾನೇ ಸ್ವತಃ ರಕ್ಷಿಸುತ್ತೇನೆ. ಉಳಿದ ಕೆಲಸಗಳನ್ನು ನೀವು ಸ್ವತಃವಾಗಿ ನೋಡಬೇಕಾಗಿರುತ್ತದೆ.

ವಜ್ರಗಳು ಹೊರಗೆ ಇರುವುದು ಒಳ್ಳೆಯದಲ್ಲವೆಂದು ಇಲ್ಲಿಗೆ ಸೇರುವಂತೆ ಮಾಡಿದ್ದೇನೆ. ಎಲ್ಲ ಸುಖಗಳಿದ್ದೂ, ಪ್ರಪಂಚದಲ್ಲಿ ದೊಡ್ಡವರು ಎನಿಸಿಕೊಂಡ ಕೆಲವರು ಈ ವಜ್ರಗಳನ್ನು ಕಳುವು ಮಾಡಬೇಕೆಂದು ನೋಡುತ್ತಿದ್ದಾರೆ. ಅಷ್ಟೇ ಅಲ್ಲದೆ ಪ್ರಪಂಚಾಧಿಪತ್ಯವನ್ನು ಸಂಪಾದಿಸಬೇಕೆಂದು ಅಷ್ಟಗ್ರಹಕೂಟಮಿಗಾಗಿ ಕಾದುಕೊಂಡಿದ್ದಾರೆ. ನಾನು ಹೇಳಿದ ಈ ವಿಷಯಗಳೆಲ್ಲವನ್ನೂ ರಾಜಯೋಗಾನಂದ ಸ್ವಾಮಿಗೆ ತಿಳಿಸು.

**ರಾಘವ :–** ಮಹಾತ್ಮಾ! ಆ ವಜ್ರಗಳು ನಮ್ಮ ಹತ್ತಿರ ಇದ್ದವು ಎಂದು ನಂತರ ಅವು ನಮ್ಮ ಕೈಯಿಂದ ಅಪಹರಿಸಲ್ಪಟ್ಟಿವೆಯೆಂದು ನಾವು ಹೇಳಿದರೂ ಪೊಲೀಸ್‌ನವರು ಸ್ವಲ್ಪ ನಮ್ಮನ್ನು ಅನುಮಾನಿಸಿ ನಾವು ಅಸತ್ಯ ಹೇಳುತ್ತಿದ್ದೇವೆಂದು ಭಾವಿಸಿದ್ದಾರೆ. ವಜ್ರಗಳನ್ನು ಭುವನೇಶ್ವರಿ ದೇವಾಲಯಕ್ಕೆ ಒಪ್ಪಿಸುತ್ತೇವೆಂದು ರಾಜಯೋಗಾನಂದ ಸ್ವಾಮಿ ಹೇಳಿದ್ದಾರೆ. ನಂತರ ಅವು ನಮ್ಮಿಂದ ಕಳುವಾಗಿವೆ ಯೆಂದು ಹೇಳಿದಾಗ ಅವರು ನಮ್ಮನ್ನು ಅನುಮಾನಿಸುತ್ತಿದ್ದಾರೆ. ಈ ಇಕ್ಕಟ್ಟಿನಿಂದ ಹೊರಬೀಳುವುದಕ್ಕೆ ದಾರಿಯನ್ನು ನೀವೇ ತೋರಿಸಬೇಕು.

**ಮುನಿ :–** ವಜ್ರಗಳನ್ನು ಕಾಪಾಡಿ ದೇವಾಲಯಕ್ಕೆ ಸೇರಿಸಬೇಕೆಂದುಕೊಂಡ ನಿಮ್ಮನ್ನು ಅವರು ಏನೂ ಮಾಡಲಾರರು. ರಾಜಯೋಗಾನಂದ ಸ್ವಾಮಿ ಮೊದಲೇ ಡಿ.ಜಿ.ಪಿ ರವರಿಗೆ ವಜ್ರಗಳ ವಿಷಯ ತಿಳಿಸಿದ್ದಾನೆ. ಇದು ಡಿಪಾರ್ಟ್‌ಮೆಂಟಿಗೆ ದೊಡ್ಡವನಾದ

ಡಿ.ಜಿ.ಪಿ ಮತ್ತು ರಾಜಯೋಗಾನಂದ ಇಬ್ಬರೂ ಸೇರಿ ಅಸಲಾದ ದೋಷಿಗಳನ್ನು ಹೊರಕ್ಕೆ ಎಳೆಯುವವರಿದ್ದಾರೆ. ಇಬ್ಬರೂ ಸೇರಿ ಮಾಡುತ್ತಿರುವ ಕೆಲಸ ಉಳಿದ ಆಫೀಸರ್‌ಗಳಿಗೂ ಸಹ ತಿಳಿಯದು. ಆದ್ದರಿಂದ ಒಂದು ದಿನ ಯಸ್.ಪಿ ಬಂದು ಸ್ವಾಮಿಯನ್ನು ಅರೆಸ್ಟ್ ಮಾಡುತ್ತೇನೆಂದು ಹೇಳಿದ್ದಾನೆ. ನಂತರ ಫೋನ್‌ನಲ್ಲಿ ಮಾತನಾಡಿ ಬಾಲಮುದುಡಿಕೊಂಡು ಹೋಗಿದ್ದಾನೆ. ಆ ದಿನ ಯಸ್.ಪಿ ನೊಂದಿಗೆ ಡಿ.ಜಿ.ಪಿ ಮಾತನಾಡಿದ್ದಾನೆಂದು ನಿಮಗೂ ಸಹ ತಿಳಿಯದು. ಡಿ.ಜಿ.ಪಿ ಸಲಹೆಯೊಂದಿಗೆ ವಜ್ರಗಳು ನಮ್ಮ ಹತ್ತಿರ ಇವೆಯೆಂದು ರಾಜಯೋಗಾನಂದ ಸ್ವಾಮಿ ಹೇಳಿದ್ದಾನೆ. ಆದ್ದರಿಂದ ಯಾವ ಅಧಿಕಾರಿ ನಿಮ್ಮನ್ನು ಅನುಮಾನಿಸಿದರೂ ಅವರು ಏನೂ ಮಾಡಲಾರರು. ಇನ್ನು ನೀನು ಇಲ್ಲಿಂದ ಹೊರಟು ಹೋಗು. ನಂತರ ನಾನು ಹೇಳಿದ ವಿಷಯವೆಲ್ಲಾ ರಾಜಯೋಗಾನಂದನಿಗೆ ಹೇಳು.

ಆ ಮಹಾತ್ಮನು ಹೇಳಿದ ಮಾತುಗಳನ್ನು ಕೇಳಿ ರಾಘವ ಗುಹೆಯಿಂದ ಹೊರಗೆ ಬಂದನು. ನಂತರ ಯಥಾರ್ಥವಾಗಿ ಆ ದ್ವಾರವನ್ನು ಮುಚ್ಚಿಟ್ಟು, ಅಲ್ಲಿಂದ ಸ್ವಲ್ಪ ದೂರದಲ್ಲಿರುವ ತನ್ನವರೊಂದಿಗೆ ಸೇರಿ ಮರಳಿ ಪ್ರಯಾಣ ಸಾಗಿಸಿದನು. ಆಶ್ರಮಕ್ಕೆ ಬಂದ ಕೂಡಲೇ ಭೂಗರ್ಭದಲ್ಲಿನ ಮುನೀಶ್ವರನು ಹೇಳಿದ ಸಮಾಚಾರ ವನ್ನು ರಾಜಯೋಗಾನಂದ ಸ್ವಾಮಿಗೆ ತಿಳಿಸಿದನು. ವಿಷಯ ತಿಳಿದುಕೊಂಡ ಸ್ವಾಮಿ ಆಶ್ಚರ್ಯಪಟ್ಟನು. ತಾನು ಡಿ.ಜಿ.ಪಿ ಸೇರಿ ಅಸಲಾದ ಕಳ್ಳರನ್ನು ಹೊರಗೆ ಎಳೆಯಬೇಕೆಂದುಕೊಂಡ ವಿಷಯ ಎಲ್ಲೋ ಭೂಗರ್ಭದಲ್ಲಿರುವ ವ್ಯಕ್ತಿ ಹೇಳುವುದು ಆಶ್ಚರ್ಯವೆನಿಸಿತು. ನಂತರ ಅಷ್ಟಗ್ರಹಕೂಟಮಿಯನ್ನು ಕುರಿತು ಆಲೋಚಿಸುತ್ತಾ ಅಂದಿನ ನವಗ್ರಹಗಳ ಸ್ಥಿತಿ ಹೇಗಿರುತ್ತದೋ ಎಂದು ಯೋಚಿಸಿದ್ದಾನೆ. ಅಷ್ಟಗ್ರಹಕೂಟಮಿಯನ್ನು ಅನುಕೂಲವಾಗಿ ಬದಲಾಯಿಸಿ ಕೊಳ್ಳಬೇಕೆಂದು ಕೊಂಡವರು ಯಾರಾಗಿರುತ್ತಾರೆಂದು ಸಹ ಸ್ವಾಮಿ ಯೋಚಿಸತೊಡಗಿದನು.)

***********************************

(ತಪಸ್ವಿ ಬಾಬಾ ಅಷ್ಟಗ್ರಹಕೂಟಮಿ ಬರುತ್ತಿದೆಯೆಂದು ತಿಳಿದವನಾಗಿ ಮತ್ತು ಆ ಸಮಯದಲ್ಲಿ ಮೊದಲು ಜನ್ಮಿಸಿದವನಿಗೆ ವಿಶೇಷಶಕ್ತಿ ಇರುತ್ತದೆಂದು ತಿಳಿದವನಾಗಿ, ಆ ಬಾಲಕನು ಎಲ್ಲಿ ಜನ್ಮಿಸುತ್ತಾನೆಂದು, ಆ ಬಾಲಕನನ್ನು ಹೇಗೆ ಅಪಹರಿಸಬೇಕೆಂದು, ಆ ಬಾಲಕನನ್ನು ಎಲ್ಲಿಡಬೇಕೆಂದೂ, ಯಾರ ಹತ್ತಿರ ಬೆಳೆಸಬೇಕೆಂದು ಯೋಚಿಸಿದನು. ನಂತರ ಒಂದು ನಿರ್ಣಯಕ್ಕೆ ಬಂದಿದ್ದಾನೆ. ಇದಕ್ಕೂ ಮೊದಲು ತಮ್ಮ ಕೆಲಸಕ್ಕೆ ಉಪಯೋಗಪಟ್ಟಿದ್ದಾರೆಂದು ಹೇಳಿದ ಇಬ್ಬರು ಮಾಂತ್ರಿಕರಿಗು ಹೆಚ್ಚಿನ ಮೊತ್ತದಲ್ಲಿ ಹಣಕೊಟ್ಟು, ನಂತರ ಅವರಿಗೆ ಸ್ವಲ್ಪ ಶಿಕ್ಷಣ ಕಲಿಸಿ ಅವರಿಂದ ತಮ್ಮ ಕೆಲಸವನ್ನು ಸಾಧಿಸಬಹುದೆಂದು ತಪಸ್ವಿ ಬಾಬಾ ಅಂದುಕೊಂಡಿದ್ದಾನೆ. ಕೂಡಲೇ ಮುನೆಪ್ಪನೊಂದಿಗೆ ವಯರ್‌ಲೆಸ್‌ನಲ್ಲಿ ಮಾತನಾಡಿ, ಮೊದಲು ತಮಗೆ ಉಪಯೋಗಪಟ್ಟ ಮಾಂತ್ರಿಕರಿಬ್ಬರನ್ನು ಕರೆದು ತಲಾ ಒಂದುಲಕ್ಷ ರೂಪಾಯಿಗಳನ್ನು ಕೊಟ್ಟು ತಾನು ಹೇಳಿದಂತೆ ನಡೆದುಕೊಳ್ಳುವುದಕ್ಕೆ ಒಪ್ಪಿಸಿಕೊ ಎಂದಿದ್ದಾನೆ. ತಪಸ್ವಿಬಾಬಾನಿಂದ ವಿಷಯವನ್ನು ತಿಳಿದುಕೊಂಡ ಮುನೆಪ್ಪ ಮಾಂತ್ರಿಕರಿಗಾಗಿ ತನ್ನ ಮನುಷ್ಯರನ್ನು ಕಳುಹಿಸಿ ಅವರನ್ನು ಕರೆಸಿಕೊಂಡಿದ್ದಾನೆ. ಒಬ್ಬೊಬ್ಬರಿಗೆ ಲಕ್ಷರೂಪಾಯಿಗಳು ಹಣ ಕೊಡುತ್ತೇವೆಂದು, ಅವರಿಗೆ ಯಾವ ಕಷ್ಟ ಇಲ್ಲದಂತೆ ಮಾಡುತ್ತೇವೆಂದು, ತಾವು ಹೇಳಿದಂತೆ ಮಾಡಬೇಕೆಂದು ಹೇಳಿದಾಗ, ಲಕ್ಷ ರೂಪಾಯಿಗಳೆಂದ ಮಾತು ಕೇಳಿದ ಕೂಡಲೇ ಮಾಂತ್ರಿಕರು ಇಬ್ಬರೂ ಮುಂದೆ ಹಿಂದೆ ಆಲೋಚಿಸದೆ ಹಾಗೇ ಆಗಲಿ ಎಂದು ಒಪ್ಪಿಕೊಂಡಿದ್ದಾರೆ. ದೊಡ್ಡ ಮೊತ್ತದಲ್ಲಿ ಹಣ ನೋಡದ ಮಾಂತ್ರಿಕರಿಬ್ಬರೂ ಲಕ್ಷರೂಪಾಯಿಗಳೆನ್ನುವ ಮಾತಿಗೆ ಪೂರ್ತಿ ವಶರಾಗಿದ್ದಾರೆ. ಆಗಲೇ ಕೊಟ್ಟ 50 ಸಾವಿರವನ್ನು ನೋಡಿ ಸಂತೋಷ ಗೊಂಡು, ಆ ದಿನದಿಂದಲೇ ಮುನೆಪ್ಪ ಹೇಳಿದಂತೆ ನಡೆದುಕೊಳ್ಳುವುದಕ್ಕೆ ಪ್ರಾರಂಭಿಸಿದ್ದಾರೆ. ಈ ವಿಧವಾಗಿ ತಪಸ್ವಿಬಾಬಾ ಮುಂಚಿತವಾಗಿ ತನ್ನ ವ್ಯೂಹವನ್ನು ಸಿದ್ಧ ಮಾಡಿ ಇಟ್ಟುಕೊಂಡು ಆ ಸಮಯಕ್ಕಾಗಿ ಕಾದು ನೋಡುತ್ತಿದ್ದಾನೆ. ಆ ಸಮಯದಲ್ಲಿ ಮೊದಲು ಹುಟ್ಟುವವನ್ಯಾರೋ ತಿಳಿದುಕೊಳ್ಳುವುದಕ್ಕೆ ತನ್ನ ಅಧೀನದಲ್ಲಿರುವ ಮನುಷ್ಯರನ್ನು ವಿನಿಯೋಗಿಸುವುದೇ ಅಲ್ಲದೆ, ಅದೃಶ್ಯರೂಪದಲ್ಲಿ ತನ್ನ ಹತ್ತಿರ ಇರುವ ಸೂಕ್ಷ್ಮಶರೀರವಿರುವವರನ್ನು ಕಾವಲಿಗಾಗಿ ಸಿದ್ಧವಾಗಿ ಇಟ್ಟಿದ್ದಾನೆ.

ಅಷ್ಟಗ್ರಹಕೂಟಮಿ ದಿನ ಹುಟ್ಟುವ ಶಿಶುವನ್ನು ಮಾಂತ್ರಿಕರು ಅವರ ಮಾಯಾ ಜಾಲದಿಂದ ಅಪಹರಿಸಬೇಕೆಂದು ಆದೇಶಕೊಟ್ಟಿದ್ದಾರೆ.)

***********************************

(ಮುಂಬರುವ ಅಷ್ಟಗ್ರಹಕೂಟಮಿ ಕುರಿತು ಜಟಾಜೂಟಸ್ವಾಮಿ ತಿಳಿದವನಾಗಿ, ಆ ದಿನವೆಲ್ಲವೂ ಪ್ರಜೆಗಳು ಯೋಗನಿಷ್ಠೆಯಲ್ಲಿ ಇದ್ದಾನೆಂದು ಕೊಳ್ಳುವಹಾಗೆ, ತಾನು ಮಂತ್ರ ಜಪದಲ್ಲಿ ಇರಬೇಕೆಂದುಕೊಂಡಿದ್ದಾನೆ. ಆ ದಿನ ತಾನು ಮಂತ್ರ ಧ್ಯಾನದಲ್ಲಿರುವುದಕ್ಕೆ ಬೇಕಾದ ಏರ್ಪಾಟುಗಳು ತನ್ನ ಶಿಷ್ಯರಿಂದ ಮಾಡಿಸಿಕೊಂಡು ಆ ದಿನಕ್ಕಾಗಿ ಕಾದುಕೊಂಡಿದ್ದಾನೆ. ಅಷ್ಟಗ್ರಹಕೂಟಮಿ ದಿನದಂದು ಹುಟ್ಟುವವನ ಪ್ರತ್ಯೇಕತೆ ಏನೋ ಜಟಾಜೂಟ ಸ್ವಾಮಿಗೆ ತಿಳಿದಿಲ್ಲ. ತಪಸ್ವಿಬಾಬಾರವರು ಆ ದಿನ ಹುಟ್ಟುವ ಬಾಲಕನಿಗಾಗಿ ಹಾಕಿದ ಯೋಜನೆಯೂ ಸಹ ತಿಳಿದಿಲ್ಲ. ತಪಸ್ವಿಬಾಬಾರವರ ಯೋಜನೆ ತಿಳಿಯದಿದ್ದರೂ, ತನ್ನ ಪದ್ಧತಿ ಪ್ರಕಾರ ತಾನು ವಿಶೇಷಮಂತ್ರ ಶಕ್ತಿಯನ್ನು ಆ ದಿನ ಸಾಧಿಸಬೇಕೆಂದುಕೊಂಡಿದ್ದಾನೆ. ಪ್ರಸ್ತುತ ತನ್ನ ಅಧೀನದಲ್ಲಿರುವ ಭೂತ ಪ್ರೇತ ಪಿಶಾಚಿಗಳಿಗಿಂತ ದೊಡ್ಡ ಶಕ್ತಿಯನ್ನು ಸಾಧಿಸಿ ಅದರಿಂದಾದರೂ ವಜ್ರಗಳಿಗಾಗಿ ಪ್ರಯತ್ನಿಸಬೇಕೆಂದುಕೊಂಡಿದ್ದಾನೆ. ಆದ್ದರಿಂದ ಮುಂಬರುವ ಅಷ್ಟಗ್ರಹಕೂಟಕ್ಕಾಗಿ ಕಾದುಕೊಂಡಿದ್ದಾನೆ.)

***********************************

(ಹೆಂಡತಿ ಕೈಯಿಂದ ಏಟು ತಿಂದ ಸಿ.ಐ. ಬಾಲಪ್ಪ ರೊಚ್ಚಿಗೆದ್ದ ತನ್ನ ಹೆಂಡತಿಯನ್ನು ಏನೂ ಅನ್ನದೆ ಅಲ್ಲಿಗೆ ಸುಮ್ಮನಿದ್ದರೂ, ತಾನು ತನ್ನ ಹೆಂಡತಿ ಕೈಯಿಂದ ಏಟು ತಿನ್ನುವುದಕ್ಕೆ ಕಾರಣ ರಾಜಯೋಗಾನಂದ ಸ್ವಾಮಿಯೇ ಎಂದು ತಿಳಿದು, ಆತನ ಮೇಲೆ ಹೇಗಾದರೂ ದ್ವೇಷ ಸಾಧಿಸಬೇಕೆಂದುಕೊಂಡು ಸಮಯಕ್ಕಾಗಿ ಕಾದುಕೊಂಡಿದ್ದಾನೆ. ಕೆಲವು ದಿನಗಳು ಕಳೆದ ನಂತರ ಒಂದು ಮನೆಯಲ್ಲಿ ಕಳ್ಳತನ ನಡೆಯಿತು. ಅದರಲ್ಲಿ ಹತ್ತು ತೊಲ ಬಂಗಾರ ಕಳುವಾಗಿದೆಯೆಂದು ಆ ಮನೆಯ ಯಜಮಾನನು ಪೊಲೀಸರಿಗೆ ಫಿರ್ಯಾದು ಮಾಡಿದ್ದಾನೆ. ಆಗ ಬಾಲಪ್ಪ ಆ

ಅವಕಾಶವನ್ನು ರಾಜಯೋಗಾನಂದ ಸ್ವಾಮಿ ಮೇಲೆ ದ್ವೇಷ ಸಾಧಿಸುವುದಕ್ಕೆ ವಿನಿಯೋಗಿಸಿಕೊಳ್ಳಬೇಕೆಂದುಕೊಂಡಿದ್ದಾನೆ. ಅದರಲ್ಲಿ ಭಾಗವಾಗಿ ಒಬ್ಬ ಹಳೆ ತಪ್ಪಿತಸ್ಥನನ್ನು ಅರೆಸ್ಟು ಮಾಡಿ ವಿಚಾರಣೆ ನಡೆಸಿದನು. ಆ ಹಳೆ ತಪ್ಪಿತಸ್ಥನು ವಾಸ್ತವವಾಗಿ ಆ ಕಳ್ಳತನ ಮಾಡದಿದ್ದರೂ, ಬಲವಂತವಾಗಿ ಆ ತಪ್ಪನ್ನು ಒಪ್ಪಿಕೊಳ್ಳುವಂತೆ ಮಾಡಿದ್ದಾನೆ. ಆ ಬಂಗಾರವನ್ನು ರಾಜಯೋಗಾನಂದ ಸ್ವಾಮಿಗೆ ಮಾರಿದಂತೆ ಹೇಳಬೇಕೆಂದು ಆ ತಪ್ಪಿತಸ್ಥನನ್ನು ಒಪ್ಪಿಸಿದ್ದಾನೆ. ಏನೂ ಮಾಡುವುದಿಲ್ಲದೆ ಆ ತಪ್ಪಿತಸ್ಥನು ಹಾಗೇ ಆಗಲಿ ಎಂದು ಒಪ್ಪಿಕೊಂಡಿದ್ದಾನೆ.)

ಹಾಗೆ ಒಪ್ಪಿಸಿದ ಸಿ.ಐ.ಬಾಲಪ್ಪ ಮರುದಿನ ಹಳೆ ತಪ್ಪಿತಸ್ಥನನ್ನು ಕರೆದುಕೊಂಡು ರಾಜಯೋಗಾನಂದ ಸ್ವಾಮಿಹತ್ತಿರಕ್ಕೆ ಹೋಗಿ, ತಪ್ಪಿತಸ್ಥನ ಹತ್ತಿರ ಕೊಂಡ ಬಂಗಾರವನ್ನು ಕೊಡಬೇಕೆಂದು ಸ್ವಾಮಿಯನ್ನು ಕೇಳಿದನು. ಹಾಗೆ ಕೇಳುವುದರಲ್ಲಿ ಬಾಲಪ್ಪ ಉದ್ದೇಶ ಸ್ವಾಮಿಗೆ ಅರ್ಥವಾಯಿತು. ಬಾಲಪ್ಪ ಉದ್ದೇಶಪೂರ್ವಕವಾಗಿ ತನ್ನನ್ನು ತಪ್ಪಿತಸ್ಥನನ್ನಾಗಿ ಮಾಡಬೇಕೆಂದುಕೊಂಡಿದ್ದಾನೆಂದು, ತನ್ನ ಅಧಿಕಾರ ಬಲದಿಂದ ತನ್ನನ್ನು ಕೋರ್ಟಿಗೆ ಹೋಗುವಂತೆ ಮಾಡುವುದೇ ಆತನ ಉಪಾಯವೆಂದೂ, ತನ್ನ ಮೇಲೆ ದ್ವೇಷದಿಂದ ಹಾಗೆ ಮಾಡುತ್ತಿದ್ದಾನೆಂದೂ ಸ್ವಾಮಿ ಎಂದುಕೊಂಡಿದ್ದಾನೆ. ಆಗ ಅಲ್ಲೇ ಇರುವ ರಾಘವನ ಕಡೆ ಸ್ವಾಮಿ ನೋಡಿದ್ದಾನೆ. ಸ್ವಾಮಿ ನೋಟದಲ್ಲಿನ ಆಂತರ್ಯವನ್ನು ಗ್ರಹಿಸಿದ ರಾಘವ ತನ್ನ ಅನುಚರರಾದ ಗಿರಿಜನರಿಗೆ ಕಿವಿಯಲ್ಲಿ ಏನೋ ಹೇಳಿದ್ದಾನೆ. ಎಲ್ಲರೂ ಸರಿ ಎನ್ನುವಂತೆ ತಲೆ ಅಲ್ಲಾಡಿಸಿದ್ದಾರೆ. ಆಗ ಸ್ವಾಮಿ ರಾಘವನೊಂದಿಗೆ "ನಿಮ್ಮ ಹತ್ತಿರ ಇರುವ ಬಂಗಾರನ್ನು ಸಿ.ಐ. ಬಾಲಪ್ಪನಿಗೆ ಕೊಡಿ" ಎಂದನು. ಆ ಮಾತು ಕೇಳಿದ ರಾಘವ ಬಾಲಪ್ಪನ ಕಡೆ ತಿರುಗಿ "ಬನ್ನಿ" ಎಂದು ಪಕ್ಕದಲ್ಲೇ ಇರುವ ಕೊಠಡಿಯೊಳಗೆ ಕರೆದುಕೊಂಡು ಹೋದನು. ಬಾಲಪ್ಪನ ಹಿಂದೆ ಬಂದಿರುವ ಹಳೆ ಕಳ್ಳ ಹೊರಗೇ ನಿಂತುಹೋಗಿದ್ದಾನೆ. ಕೊಠಡಿಯೊಳಗೆ ಹೋದ ಬಾಲಪ್ಪ ಕಿರುಚುವುದು ಮುಲುಗುವುದೂ ಮಾಡುತ್ತಿದ್ದನು. ಕೊಠಡಿಯೊಳಗೆ ಹೊಡೆದಂತೆ ಶಬ್ದ ಕೇಳಿಸುತ್ತಿದೆ. ಹೊರಗೆ ಇರುವ ಕಳ್ಳ "ಒಳಗೆ ಏನು ನಡೆಯುತ್ತಿದೆ" ಎಂದು ಕೇಳಿದನು. ಆಗ ಸ್ವಾಮಿ ನಗಾಡಿ "ನಾವು ನಿನ್ನ ಹತ್ತಿರ ಕೊಂಡ ಬಂಗಾರವನ್ನು ಕೇಳಿದನಲ್ಲ!

ಆದ್ದರಿಂದ ಅತನಿಗೆ ನಮ್ಮವರು ಬಿಸಿಬಿಸಿ ಒದೆಗಳನ್ನು ಬಡಿಸುತ್ತಿದ್ದಾರೆ. ಆತನು ಮುಲುಗುತ್ತಾ ತಿನ್ನುತ್ತಿದ್ದಾನೆ. ಒಳಗೆ ಜಾಗಾ ಇಲ್ಲ, ಆದ್ದರಿಂದ ಆತನೊಬ್ಬನಿಗೇ ಬಡಿಸುತ್ತಿದ್ದಾರೆ. ಆತನು ಹೊಟ್ಟೆ ತುಂಬಾ ತಿಂದು ಬಂದ ನಂತರ, ನಮಗೆ ಬಂಗಾರವನ್ನು ಮಾರಿದ್ದೇನೆಂದು ಹೇಳಿದ ನಿನ್ನನ್ನು ಕರೆದುಕೊಂಡು ಹೋಗಿ ಬಡಿಸುತ್ತಾರೆ" ಎಂದನು. ಆ ಮಾತು ಕೇಳಿದ ಹಳೆ ತಪ್ಪಿತಸ್ಥನು ಸ್ವಾಮಿ ಕಾಲುಗಳ ಮೇಲೆ ಬಿದ್ದು ಸಿ.ಐ ರವರೇ ಹಾಗೆ ಹೇಳೆಂದಿದ್ದಾರೆಂದು, ತನಗೆ ಯಾವ ಕರ್ಮ ತಿಳಿಯದೆಂದೂ, ತಾನು ಈ ಕಳ್ಳತನವೇ ಮಾಡಲಿಲ್ಲವೆಂದು ಹೇಳಿದ್ದಾನೆ. ಆಗಲೇ ಬಾಲಪ್ಪನನ್ನು ಕೊಠಡಿಯಿಂದ ಹೊರಗೆ ತಂದಿದ್ದಾರೆ. ಬಾಲಪ್ಪನ ಗತಿಯನ್ನು ನೋಡಿದ ಕಳ್ಳ ಭಯಪಟ್ಟಿದ್ದಾನೆ. ಆಗ ಸ್ವಾಮಿ ಆ ಕಳ್ಳನೊಂದಿಗೆ ಹೀಗೆ ಹೇಳಿದನು.

**ರಾಜಯೋಗಾನಂದ :–** ನೀನು ಏನೂ ಭಯಪಡಬೇಡ, ಈಗ ಬಾಲಪ್ಪ ನೀನು ಕಳ್ಳತನ ಮಾಡಿದ್ದೀಯೆಂದು ಅನ್ನುವುದಿಲ್ಲ. (ಬಾಲಪ್ಪನ ಕಡೆ ನೋಡಿ) ಏನು ಬಾಲಪ್ಪಾ! ಈತನು ಕಳ್ಳತನ ಮಾಡಿದ್ದಾನಾ? ಬಂಗಾರವನ್ನು ನಮಗೆ ಮಾರಿದ್ದಾನಾ?

**ಬಾಲಪ್ಪ :–** ಇಲ್ಲ, ಈತನು ಕಳ್ಳತನ ಮಾಡಲಿಲ್ಲ. ಈ ಬಂಗಾರದ ವಿಷಯ ನಿಮಗೆ ತಿಳಿಯದು.

**ರಾಘವ :–** ಇನ್ನು ಯಾವಾಗಾದರೂ ತಪ್ಪು ಕೇಸುಗಳು ಇಡಬೇಕೆಂದು ನೋಡಿದ್ದೀಯೋ, ನಿನ್ನನ್ನು ಸಾಯಿಸಿ ನಾವು ಜೈಲಿಗೆ ಹೋಗುತ್ತೇವೆ. ಹುಷಾರ್!

**ಬಾಲಪ್ಪ :–** ಬೇಡ, ನೀವು ಏನಾದರೂ ಮಾಡುತ್ತೀರ. ನಾನು ಎಂದಿಗೂ ನಿಮ್ಮ ತಂಟೆಗೆ ಬರುವುದಿಲ್ಲ. ನನ್ನನ್ನು ಬಿಡಿ ಹೋಗುತ್ತೇನೆ.

**ರಾಜಯೋಗಾನಂದ :–** ನೀನು ನಿಮ್ಮ ಯಸ್.ಪಿ ರವರು ಬರುವವರೆಗು ನಮ್ಮ ಹತ್ತಿರ ಇರಬೇಕು.

(ಯಸ್.ಪಿ ರವರಿಗೆ ತಿಳಿಸಿದಾಗ ಆತನು ಕೂಡಲೇ ಹೊರಟು ಬಂದಿದ್ದಾನೆ. ಯಸ್.ಪಿ ರವರು ರಾಜಯೋಗಾನಂದ ಸ್ವಾಮಿ ಹತ್ತಿರಕ್ಕೆ ಬಂದ ಕೂಡಲೇ ಒದೆಗಳು ತಿಂದ ಬಾಲಪ್ಪ ಕಾಣಿಸಿದ್ದಾನೆ. ಸ್ವಾಮಿ ನಡೆದ ವಿಷಯವೆಲ್ಲಾ ಕೂಲಂಕುಶವಾಗಿ ಹೇಳಿದ್ದಾನೆ. ಬಾಲಪ್ಪನಿಗು, ಸ್ವಾಮಿಗೂ ಮೊದಲೇ ತಗಾದೆ ಇದೆಯೆಂದು ತಿಳಿದ

ಯಸ್.ಪಿರವರು ಹಳೆ ತಪ್ಪಿತಸ್ಥನನ್ನು ಸಹ ವಿಚಾರಿಸಿ, ಎಲ್ಲ ವಿಧಗಳಲ್ಲಿ ಬಾಲಪ್ಪನದ್ದು ತಪ್ಪೆಂದು ಗ್ರಹಿಸಿ ಯಸ್.ಪಿ ರವರು ಬಾಲಪ್ಪನನ್ನು ಎಚ್ಚರಿಸಿ ಸಸ್ಪೆಂಡ್ ಮಾಡುತ್ತಿದ್ದೇನೆಂದು ಹೇಳಿದನು. ಬಾಲಪ್ಪ ತಲೆ ಬಗ್ಗಿಸಿಕೊಂಡು ಅಲ್ಲಿಂದ ಹೋದನು.)

**ಯಸ್.ಪಿ :–** ಸ್ವಾಮೀ ವಜ್ರಗಳ ವಿಷಯ ಏನಾದರೂ ತಿಳಿಯಿತಾ?

**ರಾಜಯೋಗಾನಂದ :–** ನಿನ್ನೆ ಸ್ವಲ್ಪ ವಿಷಯ ರಾಘವನಿಂದ ತಿಳಿಯಿತು. ಅದನ್ನು ಈಗ ನಿಮಗೆ ಹೇಳಲಾರೆವು. ಏಕೆಂದರೆ ಹೇಳಿದರೂ ನೀವು ಆ ವಿಷಯವನ್ನು ನಂಬಲಾರೆರು. ಮೇಲಾಗಿ ಆ ವಿಷಯ ಯಾರಿಗೂ ತಿಳಿಯಬಾರದೆನ್ನುವ ನಿಬಂಧನೆ ಸಹ ನಮ್ಮ ಮೇಲೆ ಇದೆ. ಒಟ್ಟಿನಲ್ಲಿ ವಜ್ರಗಳು ನಮ್ಮ ಹತ್ತಿರ ಇದ್ದಂತೇ ಪೂರ್ತಿ ರಕ್ಷಣೆಯಲ್ಲೇ ಇವೆ. ಅವು ಯಾವ ದುರ್ಮಾರ್ಗನ ಕೈಯ್ಯಲ್ಲಿ ಬೀಳಲಿಲ್ಲ. ವಿಷಯವೆಲ್ಲಾ ಸಮಯ ಬಂದಾಗ ಹೇಳುತ್ತೇವೆ.

( ಸ್ವಾಮಿ ಮಾತು ಕೇಳಿದ ಯಸ್.ಪಿ ರವರು ಸ್ವಾಮಿ ಮಾತಿನ ಮೇಲೆ ನಂಬಿಕೆ ಇರುವವನಾಗಿ ಸರಿ ಎಂದು ಹೇಳಿ ಹೊರಟು ಹೋದನು.)

**********************************

(ಅಷ್ಟಗ್ರಹ ಕೂಟಮಿ ನಡೆಯುತ್ತದೆಂದು ತಿಳಿದವರೆಲ್ಲರೂ ಅವರ ದೃಷ್ಠಿಯನ್ನು ಅದರ ಮೇಲೆಯೇ ಹರಿಸಿದ್ದಾರೆ. ಆಗ ವಜ್ರಗಳ ವಿಷಯಕ್ಕೆ ಹೆಚ್ಚಿನ ಪ್ರಾಧಾನ್ಯತೆ ಕೊಡದಂತೆ, ಅಷ್ಟಗ್ರಹಕೂಟಮಿ ಕಡೆಗೆ ಹೆಚ್ಚಿನ ಶ್ರದ್ಧೆಯಿಂದಿದ್ದಾರೆ. ಮಂತ್ರಶಕ್ತಿಗೆ ದುಪ್ಪಟ್ಟು ಶಕ್ತಿ ಹೆಚ್ಚಿಗೆ ಮಾಡಿಕೊಳ್ಳುವುದಕ್ಕೆ ಜಠಾಜೂಟ ಸ್ವಾಮಿ ನೋಡುತ್ತಿರುವಾಗ, ಆ ಸಮಯದಲ್ಲಿ ಮೊದಲು ಹುಟ್ಟಿದ ಬಾಲಕನನ್ನು ಸ್ವಾಧೀನ ಪಡಿಸಿಕೊಂಡು ಪ್ರಪಂಚವನ್ನೇ ತನ್ನ ಕೈಯೊಳಗೆ ತೆಗೆದುಕೊಳ್ಳಬೇಕೆಂದು ತಪಸ್ವಿ ಬಾಬಾ ಅಂದುಕೊಂಡಿದ್ದಾನೆ. ಈಗ ಅವರ ಯೋಚನೆಗಳಲ್ಲಿ ವಜ್ರಗಳಿಗೆ ಪ್ರಾಧಾನ್ಯತೆ ಇಲ್ಲ.)

ರಾಘವ ರಾಜಯೋಗಾನಂದ ಸ್ವಾಮಿ ಸಲಹೆಗಳನ್ನು ತೆಗೆದುಕೊಳ್ಳುತ್ತಾ ತಪಸ್ವಿಬಾಬಾರವರ ಪ್ರಯತ್ನವನ್ನು ವ್ಯರ್ಥ ಮಾಡಿ ದುಷ್ಟಶಕ್ತಿಗಳ ವಶದಿಂದ

ಪ್ರಜೆಗಳನ್ನು ಕಾಪಾಡಬೇಕೆನ್ನುವ ಛಲದಿಂದ ಇದ್ದಾನೆ. ಅಷ್ಟರಲ್ಲಿ ಗ್ರಹಕೂಟಮಿ ಹತ್ತಿರ ಬಂದಿತು. ನಾಳೆಯ ದಿನ ಕೂಟಮಿ ನಡೆಯುತ್ತದೆಂದು ಎಲ್ಲ ರೇಡಿಯೋ ಕೇಂದ್ರಗಳು, ಉಳಿದ ಟಿ.ವಿ. ವಾರ್ತಾ ಪ್ರಚಾರದ ಛಾನೆಲ್‌ಗಳು ಜನರಿಗೆ ತಿಳಿಸಿವೆ. ವಾತಾವರಣದಲ್ಲಿ ಬದಲಾವಣೆ ಇರುತ್ತದೆಂದು, ಸಮುದ್ರಕ್ಕೆ ಮೀನುಗಳು ಹಿಡಿಯುವವರು ಹೋಗಬಾರದೆಂದು ಸಹ ತಿಳಿಸಿವೆ. ಪಾಠಶಾಲೆಗಳಲ್ಲಿ ಉಪಾಧ್ಯಾಯರು ವಿದ್ಯಾರ್ಥಿಗಳಿಗೆ ಗ್ರಹಕೂಟಮಿಯನ್ನು ಕುರಿತು ತಿಳಿಸುತ್ತಾ, ಇದು ಮೂರು ಸಾವಿರ ಐದು ನೂರು ಸಂವತ್ಸರಗಳ ಕೆಳಗೆ ನಡೆದಿದೆಯೆಂದು, ದೇಶದಲ್ಲಿ ಈಗಿರುವ ನಾಗರಿಕತೆ ಆಗ ಇಲ್ಲದೆ ಕಾಗದ ಇಲ್ಲದೆ ಹೋಗುವುದರಿಂದ ಅಂದಿನ ವಿಷಯಗಳು ಗ್ರಂಥರೂಪವಾಗಿ ನಮ್ಮ ಹಿರಿಯರು ಬರೆಯಲಾರದೆ ಹೋಗಿದ್ದಾರೆಂದು, ಆಗ ಕೆಲವರು ಮುನಿಗಳು ತಾಳೆಗರಿಗಳಮೇಲೆ ಬರೆದ ಕೆಲವು ವಿಷಯಗಳು ಮಾತ್ರ ಸಿಕ್ಕಿವೆಯೆಂದು, ಅವೂ ಕೆಲವು ಗೆದ್ದಲು ಹಿಡಿದ ಎಲೆಗಳಾದ್ದರಿಂದ ಅದರಲ್ಲಿನ ಪೂರ್ತಿ ವಿಷಯಗಳು ಗ್ರಹಿಸಲಾರದೆ ಹೋಗಿದ್ದೇವೆಂದು, ಸ್ವಲ್ಪಮಟ್ಟಿಗೆ ತಿಳಿದ ವಿಷಯಗಳನ್ನನುಸರಿಸಿ ನೋಡಿದರೆ ಅಷ್ಟಗ್ರಹಕೂಟಮಿ ಎಂದರೆ ಸಾಮಾನ್ಯವಾದದ್ದಲ್ಲವೆಂದು, ಆಗ ಅದು ಅರ್ಧಗಡಿಯ (12 ನಿಮಿಷಗಳ) ಕಾಲದಲ್ಲಿ ಭೂಮಿ ಮೇಲೆ ಎಷ್ಟೋ ವೈಪರಿತ್ಯ ಸಂಘಟನೆಗಳು ನಡೆದಂತೆ ಬರೆದಿದ್ದಾರೆಂದು ತಿಳಿಸಿ, ನಾಳೆಯ ದಿನ ಎಲ್ಲ ವಿದ್ಯಾ ಕೇಂದ್ರಗಳಿಗು ರಜಾ ಪ್ರಕಟಿಸಿದಂತೆ ಹೇಳಿದ್ದಾರೆ. ಅತ್ಯವಶ್ಯಕ ಉದ್ಯೋಗಗಳಿಗೆ ಹೊರತುಪಡಿಸಿ ಉಳಿದ ಉದ್ಯೋಗಸ್ತರೆಲ್ಲರಿಗೂ ಆ ದಿನ ಸರ್ಕಾರ ರಜಾ ದಿನವಾಗಿ ಪ್ರಕಟಿಸಿತು.

ನಾಳೆ ಅಷ್ಟಗ್ರಹ ಕೂಟಮಿ ನಡೆಯುತ್ತದೆಂದು ತಿಳಿದ ಬ್ರಾಹ್ಮಣರು ಆ ಸಮಯ ಕೆಟ್ಟ ಕಾಲವೆಂದು, ಆ ಸಮಯದಲ್ಲಿ ವೇದಮಂತ್ರಗಳು ಓದುವುದರಿಂದ ಆ ಕೆಟ್ಟದ್ದನ್ನು ಸ್ವಲ್ಪ ಹರಿಸಬಹುದೆಂದೂ, ವೇದ ಪಠನಕ್ಕೆ ಬೇಕಾದ ಪೂಜಾ ಸಾಮಾಗ್ರಿಯನ್ನು ಜೋಡಿಸಿಕೊಳ್ಳುವುದರಲ್ಲಿ ಮಗ್ನವಾಗಿದ್ದಾರೆ. ಮಂತ್ರಗಾರರು ತಮ್ಮ ಆಚಾರಾನುಸಾರ ಕಂಠದವರೆಗು ಭೂಮಿಯಲ್ಲಿ ಊತಿಡಲಾಗಿ ಜಪ ಮಾಡುವುದಕ್ಕೆ ಕುತ್ತಿಗೆ ಆಳದ ವರೆಗು ಕುಣಿಗಳು ತೆಗೆಸಿಕೊಳ್ಳುತ್ತಿರುವಾಗ, ಕೆಲವರು ಕುತ್ತಿಗೆ ಆಳದ ವರೆಗು ನೀರಿನಲ್ಲಿ ಇಳಿದು ಜಪಿಸಿಕೊಳ್ಳಬೇಕೆನ್ನುವ ಉದ್ದೇಶದಿಂದ

ಅದಕ್ಕೆ ಅನುಕೂಲವಾದ ಬಾವಿಗಳನ್ನು, ಕೆರೆಗಳನ್ನು ಹುಡುಕುತ್ತಿರುವಾಗ, ಸಾಧಾರಣ ಜಪ ಮಾಡಿಕೊಳ್ಳುವುದಕ್ಕೆ ಬನ್ನಿಮರದ ನೆರಳು, ಆಲದ ಮರ ನೆರಳನ್ನು ಕೆಲವರು ಹುಡುಕುತ್ತಿದ್ದಾರೆ. ಹೀಗೆ ಎಷ್ಟೋ ಜನರು ಎಷ್ಟೋ ವಿಧಗಳಲ್ಲಿ ಗ್ರಹಕೂಟಮಿಯನ್ನು ಉಪಯೋಗಿಸಿಕೊಳ್ಳಬೇಕೆಂದು ಪ್ರಯತ್ನಿಸುತ್ತಿರುವಾಗ ರಾಜಯೋಗಾನಂದ ಆಶ್ರಮದಲ್ಲಿ ರಾಘವ ಸ್ವಾಮಿಹತ್ತಿರ ಹೋಗಿ ಹೀಗೆ ಹೇಳಿದ್ದಾನೆ.)

**ರಾಘವ :–** ಸ್ವಾಮೀ ಪಂಚಾಂಗದ ಪ್ರಕಾರ ನಾಳೆಯ ದಿನದಲ್ಲಿ ಮಧ್ಯಾಹ್ನ ಮೂರು ಗಂಟೆಗಳಿಗೆ ಅಷ್ಟಗ್ರಹ ಕೂಟಮಿ ನಡೆಯುತ್ತಿದೆ. ಎಷ್ಟೋ ಜನರು ಎಷ್ಟೋ ವಿಧಗಳಲ್ಲಿ ಅವರವರ ಸಾಧನೆಗೆ ಬೇಕಾದ ಏರ್ಪಾಟುಗಳನ್ನು ಮಾಡಿಕೊಳ್ಳುತ್ತಿದ್ದಾರೆ. ನಾಳೆ ನಮ್ಮ ಕೆಲಸವೇನೋ ತಿಳಿಸಿದರೇ ಅದಕ್ಕೆ ಬೇಕಾದ ಏರ್ಪಾಟುಗಳನ್ನು ಮಾಡುತ್ತೇವೆ.

**ರಾಜಯೋಗಾನಂದ :–** ನಾವು ಎಲ್ಲರಂತೆ ಜಪತಪಗಳನ್ನು ಮಾಡುವುದಿಲ್ಲ. ಆದರೆ ನಾಳೆ ಹುಟ್ಟುವವನು ಎಲ್ಲಿ ಹುಟ್ಟುತ್ತಿದ್ದಾನೆನ್ನುವ ವಿಷಯ ತಿಳಿಯದಂತಿದೆ. ಈ ವಿಷಯದಲ್ಲಿ ಲಾಭ ಹೊಂದಬೇಕೆಂದುಕೊಂಡಿರುವುದು ಮುಖ್ಯವಾಗಿ ತಪಸ್ವಿಬಾಬಾರವರೇ. ಆದ್ದರಿಂದ ಅವರು ಈ ವಿಷಯವನ್ನು ನಮಗಿಂತ ಮುಂಚಿತವಾಗಿ ತಿಳಿದುಕೊಳ್ಳುವುದಕ್ಕೆ ಹುಷಾರಾಗಿ ಪ್ರಯತ್ನಿಸುತ್ತಿರುತ್ತಾರೆ. ನಾವು ನಾಳೆ ತಪಸ್ವಿಬಾಬಾರವರ ಮೇಲೆ ನಿಘಾ ಇಡುವುದೇ ಮುಖ್ಯವಾದ ಕೆಲಸದಂತೆ ಇಟ್ಟುಕೊಳ್ಳಬೇಕು. ಇಷ್ಟು ಭೂಮಿಯ ಮೇಲೆ ಯಾರು ಎಲ್ಲಿ ಹುಟ್ಟುವನೋ ನಮಗೆ ತಿಳಿಯದಂತಿದೆ. ಆದ್ದರಿಂದ ಅವರಿಂದಲೇ ನಾವು ಸುಲಭವಾಗಿ ಗ್ರಹಿಸಬಹುದು.

**ರಾಘವ :–** ಸ್ವಾಮೀ! ತಪಸ್ವಿಬಾಬಾರವರು ಒಬ್ಬರೇ ಈ ವಿಷಯಕ್ಕಾಗಿ ಪ್ರಯತ್ನಿಸುವುದಿಲ್ಲ ಅಲ್ಲವೆ! ಆತನ ಮನುಷ್ಯರು ಯಾರಾದರೂ ಪ್ರಯತ್ನಿಸಬಹುದು. ಆಗ ಆತನ ಮೇಲೆ ನಿಘಾ ಇಡುವುದರಿಂದ ನಮಗೆ ಏನೂ ತಿಳಿಯದಂತೆ ಹೋಗುತ್ತದೇನೋ. ಬಹುಶಃ ಆತನು ಈ ಕಾರ್ಯದಲ್ಲಿ ಯಾವಕಡೆ ಕದಲದಂತಿದ್ದು ತನ್ನವರಿಂದ ಕೆಲಸವನ್ನು ಮಾಡಿಸಿಕೊಳ್ಳುತ್ತಾನೆ.

**ರಾಜಯೋಗಾನಂದ :–** ನೋಡು ರಾಘವ! ನೀನು ಈಗಲೇ ಬುದ್ಧಿವಂತಿಕೆಯಿಂದ ಯೋಚಿಸಬೇಕು. ನೀನಂದುಕೊಂಡಂತೆ ನಾನೂ ಸಹ ಊಹಿಸಿದ್ದೇನೆ. ಹಾಗೆ ಆ ಕಾರ್ಯವನ್ನು ಮಾಡುವವರು ತಪಸ್ವಿ ಬಾಬಾಗೆ ಸಾವಿರ ಜನ ಇರಬಹುದು. ಆಗ ನಾವು ಸಾವಿರ ಜನರನ್ನು ಕಾವಲು ಕಾದು ನೋಡಬಲ್ಲೆವಾ? ಅದು ಸಾಧ್ಯವಿಲ್ಲದ ಕೆಲಸವಾಗುತ್ತದೆ. ಎಷ್ಟು ಜನ ಆತನ ಕಾರ್ಯದಲ್ಲಿ ಲಗ್ನವಾಗಿದ್ದರೂ, ಕೊನೆಗೆ ಅವರಿಗೆ ತಿಳಿದ ವಿಷಯವೇನೋ, ಅವರು ಮಾಡುತ್ತಿರುವುದೇನೋ ಬಾಬಾರವರಿಗೆ ಹೇಳದೆ ಇರುವುದಿಲ್ಲ. ಕೇಂದ್ರವು ತಪಸ್ವಿಬಾಬಾನೇ ಆದಾಗ ಅಲ್ಲಿಯೇ ಎಲ್ಲ ವಿಷಯಗಳು ತಿಳಿಯುತ್ತವೆ. ಆದ್ದರಿಂದ ಮುಖ್ಯವಾದ ತಪಸ್ವಿಬಾಬಾರವರ ಹತ್ತಿರವೇ ಇದ್ದಂತಾದರೇ, ಅವರಿಗೆ ಬೇಕಾಗಿರುವುದು ಎಲ್ಲಿದೆಯೋ, ಯಾವ ವಿಧವಾಗಿ ತಿಳಿದುಕೊಳ್ಳುತ್ತಿದ್ದಾರೋ, ಯಾವ ವಿಧವಾಗಿ ಮಾಡುವುದಕ್ಕೆ ಹೊಂಚು ಹಾಕುತ್ತಿದ್ದಾರೋ, ನಮಗೆ ಸುಲಭವಾಗಿ ತಿಳಿಯಬಲ್ಲದು. ಆಗ ಅವರ ಕಾರ್ಯಗಳನ್ನು ವಿಘ್ನಪಡಿಸುವುದಕ್ಕೆ ನಾವು ತಯಾರಾಗುತ್ತೇವೆ.

**ರಾಘವ :–** ತಪಸ್ವಿಬಾಬಾ ಹತ್ತಿರ ನಿಘಾಇಟ್ಟು ಸಮಾಚಾರವನ್ನು ಶೇಖರಿಸಬೇಕೆಂದರೆ ಬಹಳ ಕಷ್ಟವಾದ ಕೆಲಸ ಎಂದುಕೊಳ್ಳುತ್ತೇನೆ. ಹೊಸಬರನ್ನು ಅವರು ನಂಬುವುದಿಲ್ಲ, ಹತ್ತಿರಕ್ಕೂ ಸಹ ಬರಲು ಬಿಡುವುದಿಲ್ಲ. ಹಾಗಿರುವಾಗ ತಪಸ್ವಿಬಾಬಾರವರ ಹತ್ತಿರ ಅಂತರಂಗವಾಗಿ ನಡೆಯುವ ವಿಷಯಗಳನ್ನು ನಾವು ತಿಳಿದುಕೊಳ್ಳಬೇಕೆಂದರೆ ಸಾಧ್ಯವಾಗುವುದಿಲ್ಲವೇನೋ ಎಂದು ಅನುಮಾನ ಬರುತ್ತಿದೆ.

**ರಾಜಯೋಗಾನಂದ :–** ಆ ಅನುಮಾನವನ್ನು ನೀನು ಇಟ್ಟುಕೊಳ್ಳಬೇಡ. ಅದಕ್ಕೆ ಬೇಕಾದ ಏರ್ಪಾಟುಗಳು ಆರು ತಿಂಗಳ ಕೆಳಗೇ ಮಾಡಿಟ್ಟಿದ್ದೇನೆ. ನಮ್ಮ ಮನುಷ್ಯ ನನ್ನ ಆದೇಶಾನುಸಾರ ಬಾಬಾರವರ ಭಕ್ತರಲ್ಲಿ ಒಬ್ಬ ಮುಖ್ಯವಾದ ಭಕ್ತನಾಗಿ ಹೋಗಿದ್ದಾನೆ. ಆತನು ನಾಳೆ ದಿನ ಬಾಬಾರವರನ್ನು ಸಾವಿರ ಕಣ್ಣಿನಿಂದ ಕಾದುಕೊಂಡಿರುತ್ತಾನೆ. ಬಾಬಾರವರಿಗೆ ಆ ದಿನ ಯಾವ ಸಮಾಚಾರವಾದರೂ ನಮ್ಮ ಮನುಷ್ಯನಿಗೆ ತಿಳಿಯಬಲ್ಲದು. ಅಲ್ಲಿ ತಿಳಿದ ಕೂಡಲೇ ಆ ವಿಷಯವನ್ನು ಒಂದು ಕಾಗದದಲ್ಲಿ ಬರೆದು ನಮ್ಮ ಆಶ್ರಮದಿಂದ ತೆಗೆದುಕೊಂಡು ಹೋದ

ಪಾರಿವಾಳಕ್ಕೆ ಕಟ್ಟಿ ಕಳುಹಿಸುತ್ತಾನೆ. ಭೂಮಿ ಮೇಲೆ ಹೋಗುವ ಎಲ್ಲ ವಾಹನಗಳಿಗಿಂತ ನಮ್ಮ ಪಾರಿವಾಳ ವೇಗವಾಗಿ ಪ್ರಯಾಣಿಸಿ ನಮ್ಮ ಆಶ್ರಮ ಸೇರುತ್ತದೆ. ಆಗ ಅವರ ವಿಷಯ ಆ ಪಾರಿವಾಳ ತಂದಿರುವ ಕಾಗದದಲ್ಲಿ ಇರುತ್ತದೆ.

(ಆ ಮಾತುಕೇಳಿದ ರಾಘವ ಆಶ್ಚರ್ಯಚಕಿತನಾಗಿ ತನ್ನಲ್ಲಿ ತಾನು ಹೀಗೆಂದುಕೊಂಡನು. ನಾನು ತಿಂಗಳ ಕೆಳಗೇ ಅಲ್ಲವೆ ಗ್ರಹಕೂಟಮಿಯನ್ನು ಕುರಿತು ಗುಹೆಯಲ್ಲಿನ ಮುನೀಶ್ವರನು ಹೇಳಿದ್ದಾನೆಂದು ಹೇಳಿದ್ದೇನೆ. ಈ ವಿಷಯ ಈತನಿಗೆ ಮೊದಲೇ ತಿಳಿದಿದೆಯಾ? ವಜ್ರಗಳ ವಿಷಯ ಅರ್ಥವಾಗಲಿಲ್ಲವೆಂದ ನಂತರ ಗುಹೆಯಲ್ಲಿನ ಮಹಾತ್ಮನ ಹತ್ತಿರಕ್ಕೆ ನಾನು ಹೋಗಿದ್ದೇನೆ. ಈತನಿಗೆ ಅರ್ಥವಾಗದ ವಿಷಯ ಆತನು ಹೇಳಿದ್ದಾನೆ. ನಂತರ ಗ್ರಹಕೂಟಮಿಯನ್ನು ಕುರಿತು ರಾಜಯೋಗಾ ನಂದ ಸ್ವಾಮಿಗೆ ಹೇಳೆಂದಿದ್ದಾನೆ. ಇಂತಹ ತಪಸ್ವಿಬಾಬಾರವರು ಈ ವಿಷಯಕ್ಕೇ ಕಾದುಕೊಂಡಿದ್ದಾನೆಂದು ಆಗ ಆತನು ಹೇಳಲಿಲ್ಲ. ಯಾರೋ ಗ್ರಹಕೂಟಮಿಗಾಗಿ ಕಾದುಕೊಂಡಿದ್ದಾನೆಂದು ಮಾತ್ರ ಹೇಳಿದ್ದಾನೆ. ಆಗ ಆತನು ಹೇಳಲಾರದ ವಿಷಯವನ್ನು ಈ ಸ್ವಾಮಿ ಮೊದಲೇ ತಿಳಿದುಕೊಂಡಿದ್ದಾನೆ. ಗುಹೆಯಲ್ಲಿನ ಸ್ವಾಮಿಗೆ ತಿಳಿಯದ ವಿಷಯಗಳು ಹೊರಗಿನ ಸ್ವಾಮಿಗೆ ತಿಳಿದಿವೆ. ಹೊರಗಿನ ಸ್ವಾಮಿಗೆ ತಿಳಿಯದ ವಜ್ರಗಳ ವಿಷಯ ಗುಹೆಯಲ್ಲಿನ ಸ್ವಾಮಿಗೆ ತಿಳಿದಿದೆ. ಇದನ್ನನುಸರಿಸಿ ನೋಡಿದರೆ ಆತನಿಗಿಂತ ಈತನು ದೊಡ್ಡವನಾ, ಈತನಿಗಿಂತ ಆತನು ದೊಡ್ಡವನಾ ಎಂದು ಪ್ರಶ್ನೆ ಬಾರದೆ ಇರುವುದಿಲ್ಲವೆಂದು ಯೋಚಿಸುತ್ತಿರುವ ರಾಘವನನ್ನು ನೋಡಿ ಸ್ವಾಮಿ ಹೀಗೆ ಹೇಳಿದ್ದಾನೆ.)

**ರಾಜಯೋಗಾನಂದ :–** ಏನು ರಾಘವ! ಏನೂ ಮಾತನಾಡದೆ ಯೋಚಿಸುತ್ತಿದ್ದೀಯ. ನಿನ್ನ ಸಂಶಯವೇನೋ ನನಗೆ ಹೇಳು.

**ರಾಘವ :–** ಏನೂ ಇಲ್ಲ ಸ್ವಾಮೀ, ಗುಹೆಯಲ್ಲಿನ ಸ್ವಾಮಿ ನೆನಪಿಗೆ ಬಂದಿದ್ದಾನೆ.

**ರಾಜಯೋಗಾನಂದ :–** ಈಗ ಆತನೇಕೆ ನೆನಪಿಗೆ ಬಂದಿದ್ದಾನೆ. ನಾನು ಹೇಳುವ ವಿಷಯ ಬೇರೆ ಅಲ್ಲವೆ!

**ರಾಘವ :–** ತಪಸ್ವಿಬಾಬಾರವರು ಅಷ್ಟಗ್ರಹಕೂಟಮಿಗಾಗಿ ಪ್ರಯತ್ನಿಸುತ್ತಿದ್ದಾನೆಂದು ಆತನು ಹೇಳದೇ ಯಾರೋ ಪ್ರಯತ್ನಿಸುತ್ತಿದ್ದಾರೆಂದು ಹೇಳಿದ್ದಾನೆ. ಆತನು ಇಂತಹ ಬಾಬಾ ಎಂದು ಹೇಳಲಿಲ್ಲ. ಆತನಿಗೆ ತಿಳಿಯದ ಬಾಬಾರವರ ವಿಷಯ ನಿಮಗೆ ಮೊದಲೇ ತಿಳಿದು ಆರು ತಿಂಗಳು ಮೊದಲೇ ಏರ್ಪಾಟು ಮಾಡಿದ್ದೀರ. ಅದನ್ನನುಸರಿಸಿ ಗುಹೆಯಲ್ಲಿನ ಸ್ವಾಮಿಗೆ ತಿಳಿಯದ ವಿಷಯ ನಿಮಗೆ ಮೊದಲೇ ತಿಳಿದಿದೆಯೆಂದು ಆತನಿಗಿಂತ ನೀವು ದೊಡ್ಡವರೆಂದು ಅರ್ಥವಾಗುತ್ತಿದೆ. ಹಾಗೇ ವಜ್ರಗಳ ವಿಷಯಕ್ಕೆ ಬಂದರೆ ನಿಮಗೆ ತಿಳಿಯದ ವಿಷಯ ಆತನಿಗೆ ತಿಳಿದು ಅವುಗಳನ್ನು ತನ್ನ ಹತ್ತಿರಕ್ಕೆ ತಂದುಕೊಂಡಿದ್ದಾನೆ. ಇಲ್ಲಿ ನಿಮಗೆ ತಿಳಿಯದಂತಿರುವುದು ಆತನಿಗೆ ತಿಳಿದಿದೆ. ಇದನ್ನನುಸರಿಸಿ ನಿಮಗಿಂತ ಆತನೇ ದೊಡ್ಡವರೆನ್ನುವ ಯೋಚನೆ ಬರುತ್ತಿದೆ. ಒಂದು ವಿಷಯದಲ್ಲಿ ನೀವು, ಮತ್ತೊಂದು ವಿಷಯದಲ್ಲಿ ಅವರು, ದೊಡ್ಡದಾಗಿ ಇರುವುದರಿಂದ ಯಾರು ದೊಡ್ಡವನೆನ್ನುವ ಪ್ರಶ್ನೆಗೆ ಸಮಾಧಾನ ಇಲ್ಲದಂತೆ ಹೋಗುತ್ತಿದೆ. ಅದನ್ನು ಕುರಿತೇ ಯೋಚಿಸುತ್ತಿದ್ದೇನೆ.

**ರಾಜಯೋಗಾನಂದ :–** ಯಾರು ದೊಡ್ಡವರೆನ್ನುವುದು ನಂತರ ತಿಳಿಯುತ್ತದೆ. ಈಗದು ಅಗತ್ಯವಿಲ್ಲ. ಈಗ ನಮಗೆ ಬೇಕಾಗಿರುವುದು ವಿಷಯ ಶೇಖರಣೆ.

**ರಾಘವ :–** ಸ್ವಾಮೀ! ನೀವು ಗ್ರಹಕೂಟಮಿಗೆ ಆರು ತಿಂಗಳು ಮೊದಲೇ ವಿಷಯ ಶೇಖರಣೆಗೆ ಮಾಡಿದ ಏರ್ಪಾಟು ಬಹಳ ದೊಡ್ಡದು. ತಪಸ್ವಿಬಾಬಾರವರನ್ನು ಕೇಂದ್ರವಾಗಿ ಮಾಡಿಕೊಂಡು ಅವರ ವಿಷಯವನ್ನು ಶೇಖರಿಸುವುದು ದೊಡ್ಡ ಯೋಜನೆ. ನಾಳೆ ದಿನ ನಮಗೆ ಬರುವ ಸಮಾಚಾರಕ್ಕಾಗಿ ಕಾದು ನೋಡೋಣ. ಮುಂದಿನ ಯೋಚನೆ ನೀವೇ ಹೇಳಿದರೇ ನಾನು ಮಾಡುವವನು.

(ಮುಂಚಿತವಾಗಿ ರಾಘವ ತನ್ನ ಸಹಚರರನ್ನು ಸಮಯ ಬಂದಾಗ ಎಂತಹ ಕೆಲಸ ಮಾಡುವುದಕ್ಕಾದರೂ ಸರ್ವ ಸನ್ನದ್ಧ ಮಾಡಿ ಇಟ್ಟಿದ್ದಾನೆ. ಆತನ ಹತ್ತಿರ ಇರುವ ಗಿರಿಜನರು ಆತನು ಏನು ಹೇಳಿದರೇ ಅದು ಮಾಡುವುದಕ್ಕೆ ಹಿಂಜರಿಯುವುದಿಲ್ಲ. ಮರುದಿನ ಬೆಳಕರಿಯಿತು. ಆ ದಿನ ಬುಧವಾರ ಆಗಿರುವುದರಿಂದ ಇನ್ನೂ ವಿಶೇಷ. ಬೆಳಗ್ಗೆ ಎಲ್ಲಾ ಚೆನ್ನಾಗಿದ್ದರೂ ಮಧ್ಯಾಹ್ನ

ಎರಡು ಗಂಟೆಗಳಿಂದ ಆಕಾಶದಲ್ಲಿ ಮೇಘಗಳು ಆವರಿಸಲು ಪ್ರಾರಂಭಿಸಿದವು. ಸಮುದ್ರದಲ್ಲಿನ ಅಲೆಗಳು ಎತ್ತರವಾಗಿ ಏಳಲು ಆರಂಭಿಸಿದವು. ಮೂರು ಗಂಟೆಗಳ ಸಮಯದಲ್ಲಿ ವಾತಾವರಣ ಪೂರ್ತಿ ತಂಪಾಯಿತು. ಆಕಾಶದಲ್ಲಿ ಅಷ್ಟಗ್ರಹಕೂಟಮಿ ಮೂರು ಗಂಟೆ ಮೂರು ನಿಮಿಷಕ್ಕೆ ನಡೆದಿದೆ. ಮೂರು ಗಂಟೆಗಳ ಸಮಯದಲ್ಲಿ ಬಿರುಗಾಳಿಗಳು ಬೀಸತೊಡಗಿದವು. ಮೂರು ಗಂಟೆ ಮೂರು ನಿಮಿಷಗಳಿಗೆ ಮಳೆ ಸಹ ಆರಂಭವಾಯಿತು. ಗಾಳಿ ಮಳೆಗೆ ಪ್ರಜೆಗಳು ಯಾರೂ ಹೊರಗೆ ಬಾರದೆ ಮನೆಗಳಲ್ಲಿಯೇ ಇರಬೇಕಾಗಿ ಬಂದಿತು. ಆಕಾಶದಲ್ಲಿ ಸಿಡಿಲು ಬಳ್ಳಿಗಳು ಮೇಲಿನಿಂದ ಭೂಮಿವರೆಗು ಹೊಳೆಯುತ್ತಿದ್ದವು. ರಸ್ತೆಗಳ ಮೇಲೆ ಪ್ರಯಾಣಿಸುವ ವಾಹನಗಳು ಅನೇಕವಾಗಿ ಪ್ರಮಾದಕ್ಕೆ ಗುರಿಯಾಗಿವೆ. ಸೂರ್ಯನು ಮೊದಲುಗೊಂಡು ಉಳಿದ ಏಳು ಗ್ರಹಗಳು ರಾಹುವಿನೊಂದಿಗೆ ಬೆರೆಯುವುದರಿಂದ ಅಲ್ಲಲ್ಲಿ ಹುತ್ತದ ರಂಧ್ರಗಳಿಂದ ಊಹಿಸದ ರೀತಿಯಲ್ಲಿ ವಿಷವಾಯುಗಳು ಹೊರಗೆ ಬರಲಾರಂಭಿಸಿದವು. ಆ ವಾಯು ಪ್ರಭಾವದಿಂದ ಹುತ್ತಗಳಿಗೆ ಹತ್ತಿರದಲ್ಲಿರುವವರಿಗೆಲ್ಲಾ ಸ್ವಲ್ಪ ಅಪಸ್ಮಾರಕ ಸ್ಥಿತಿ ಏರ್ಪಟ್ಟಂತಾಯಿತು. ಚರ್ಮದಲ್ಲಿ ಉರಿ ಉಂಟಾಯಿತು. ಕೆಲವರಿಗೆ ಆ ವಾಯುವಿನಿಂದ ಚರ್ಮದ ಮೇಲೆ ಬೊಬ್ಬೆಗಳು ಬಂದಿವೆ. ವಿಷ ಸರ್ಪಗಳು ತಮ್ಮ ನಿವಾಸಗಳಿಂದ ಹೊರಗೆ ಬಂದು ಇಷ್ಟಾನುಸಾರ ಸಂಚರಿಸಲು ಪ್ರಾರಂಭಿಸಿದವು.

ಹೀಗೆ ಎಷ್ಟೋ ವಿಧಗಳಲ್ಲಿ ಭೂಮಿ ಮೇಲೆ ವಿಚಿತ್ರ ನಡೆಯುತ್ತಿದ್ದರೂ, ತಪಸ್ವಿಬಾಬಾ ಯೋಚನೆ ಮೊಟ್ಟಮೊದಲು ಹುಟ್ಟುವ ಶಿಶುವನ್ನು ಕುರಿತೇ ಆಲೋಚಿಸುತ್ತಿದ್ದಾನೆ. ಅಷ್ಟರಲ್ಲಿ ಆತನ ಅಧೀನದಲ್ಲಿದ್ದು ಆದೇಶಿಸಲ್ಪಟ್ಟಿರುವ ಸೂಕ್ಷ್ಮ ರೂಪ ಒಂದು ಬಂದು ಹೀಗೆ ತಿಳಿಸಿತು. ಆ ವಿಷಯ ಕಾಗದದ ಮೇಲೆ ಬರವಣಿಗೆಯಂತೆ ಇದೆ. “ಬಾಬಾರವರಿಗೆ ವಂದನೆಗಳು ತಮ್ಮ ಆದೇಶಾನುಸಾರ ಹೊರಟು ಹೋಗಿ, ಎಲ್ಲ ಪ್ರಾಂತಗಳಲ್ಲಿ ಗರ್ಭಿಣೀ ಸ್ತ್ರೀಯರು ಇರುವ ಕಡೆಯೆಲ್ಲಾ ನೋಡುತ್ತಿದ್ದೇವೆ. ಗ್ರಹ ಕೂಟಮಿ ಸಮಯದಲ್ಲಿ ಇಲ್ಲಿಗೆ 60 ಮೈಲಿ ದೂರದಲ್ಲಿರುವ ಮಾಲಸಮುದ್ರ ಎನ್ನುವ ಊರಿನಲ್ಲಿ, ಒಬ್ಬ ಅನಾಥ ಸ್ತ್ರೀ ಆ ಊರಿನ ಕೊನೆಯಲ್ಲಿರುವ ಮುತ್ಯಾಲಮ್ಮ ಎನ್ನುವ ಡಾಕ್ಟರ್ ಹತ್ತಿರ ಪ್ರಸವಿಸಿದ್ದಾಳೆಂದು, ಆ ಗಂಡು ಶಿಶುವೇ ಮೊದಲು ಹುಟ್ಟಿದ ಮಗು ಎಂದು ತಮಗೆ ತಿಳಿಸುತ್ತಿದ್ದೇನೆ.” ಎಂದು ಬರೆಯಲಾಗಿದೆ.

ಗಾಳಿಗೆ ತನ್ನ ಮುಂದಕ್ಕೆ ಬಂದು ಬಿದ್ದಿರುವ ಕಾಗದದ ಮೇಲೆ ಬರೆದಿರುವುದನ್ನು ನೋಡಿದ ಬಾಬಾರವರು ಕೂಡಲೇ ತನ್ನ ಭಕ್ತರನ್ನು ಕರೆದು "ಮಾಲಸಮುದ್ರವೆನ್ನುವ ಊರಿಗೆ ಹೋಗಿ, ಆ ಊರಿನ ಕೊನೆಯಲ್ಲಿ ಮುತ್ಯಾಲಮ್ಮ ಎನ್ನುವ ಡಾಕ್ಟರ್ ಹತ್ತಿರ ಪ್ರಸವಿಸಿದ ಗಂಡು ಶಿಶುವನ್ನು ಹೇಗಾದರೂ ತೆಗೆದುಕೊಂಡು ಬನ್ನಿ" ಎಂದು ಹೇಳಿದನು.

ಆ ವಿಷಯವನ್ನು ಕೇಳಿದ ರಾಜಯೋಗಾನಂದ ಸ್ವಾಮಿಗೆ ಸಂಬಂಧಿಸಿದ ಮನುಷ್ಯ ಕೂಡಲೇ ತನ್ನ ಕೊಠಡಿಯೊಳಗೆ ಬಂದು ತಿಳಿದ ವಿಷಯವನ್ನು ಕಾಗದದ ಮೇಲೆ ಬರೆದು ಒಂದು ತಾಯತದಲ್ಲಿ ಆ ಕಾಗದವನ್ನು ಮುದಿರಿಟ್ಟು, ಬುಟ್ಟಿಯೊಳಗಿನ ಪಾರಿವಾಳವನ್ನು ಹೊರಗೆ ತೆಗೆದು, ಅದರ ಕಾಲಿಗೆ ತಾಯತವನ್ನು ಕಟ್ಟಿ ಬಿಟ್ಟಿದ್ದಾನೆ. ಆ ಪಾರಿವಾಳ ಮೇಲಕ್ಕೆ ಹಾರಿ ರಾಜಯೋಗಾನಂದ ಸ್ವಾಮಿ ಆಶ್ರಮದ ಕಡೆ ಬರತೊಡಗಿತು. ಆ ಸಮಯಕ್ಕೆ ಅಷ್ಟಗ್ರಹಕೂಟಮಿ ಮುಗಿದು ಮಳೆ ನಿಂತುಹೋಯಿತು. ಆದ್ದರಿಂದ ಪಾರಿವಾಳ ಸುಲಭವಾಗಿ ಪ್ರಯಾಣಿಸತೊಡಗಿತು. ತಪಸ್ವಿಬಾಬಾರವರ ಆದೇಶಾನುಸಾರ ಆತನ ಮನುಷ್ಯರು ಮಾಲಸಮುದ್ರಕ್ಕೆ ಹೊರಟು ಹೋದರು.)

*********************************

(ಮಾಲ ಸಮುದ್ರದಲ್ಲಿ ಮುತ್ಯಾಲಮ್ಮ ಡಾಕ್ಟರ್ ಹತ್ತಿರ ಪ್ರಸವಿಸಿದ ಸ್ತ್ರೀ ಅನಾಥೆ ಆಗಿರುವುದರಿಂದ, ಆ ಶಿಶುವನ್ನು ಪ್ರಸವಿಸಿದ ಕೂಡಲೇ ಆಕೆ ಸತ್ತುಹೋಗಿರುವುದರಿಂದ, ಆ ಗಂಡು ಶಿಶು ಒಬ್ಬಂಟಿಗನಾಗಿ ಡಾಕ್ಟರ್ ಹತ್ತಿರ ಉಳಿದಿದ್ದಾನೆ. ಅಲ್ಲಿಗೆ ಸಮೀಪದಲ್ಲಿರುವ ಒಬ್ಬ ದೊಡ್ಡ ಜಮೀನ್ದಾರನಿಗೆ ಸಂತಾನ ಇಲ್ಲದ ಕಾರಣದಿಂದ, ಆ ಜಮೀನ್ದಾರ್ ಮುತ್ಯಾಲಮ್ಮ ಡಾಕ್ಟರ್‌ನೊಂದಿಗೆ ನಾವು ಸಾಕಿಕೊಳ್ಳುವುದಕ್ಕೆ ನಮಗೆ ಒಬ್ಬ ಗಂಡು ಶಿಶು ಬೇಕೆಂದು ಅನೇಕ ಸಲ ಹೇಳುತ್ತಿದ್ದನು. ಈ ವಿಷಯ ಡಾಕ್ಟರ್‌ಮ್ಮನಿಗೆ ತಕ್ಷಣ ನೆನಪಿಗೆ ಬಂದು, ಆ ಜಮೀನ್ದಾರನಿಗೆ ಫೋನ್ ಮಾಡಿ ತನ್ನ ಹತ್ತಿರವಿರುವ ಶಿಶು ವಿಷಯ ಹೇಳಿದಳು. ಯಾರೋ ಅನಾಥೆಗೆ ಗಂಡು ಶಿಶು ಹುಟ್ಟಿದ್ದಾನೆ ಆಕೆ ಸತ್ತುಹೋಗಿದ್ದಾಳೆ. ಆಕೆ ಕಡೆಯವರು

ಯಾರೂ ಇಲ್ಲವೆಂದು ಡಾಕ್ಟರ್ ಹೇಳಿದ ಕೂಡಲೇ ಜಮೀನ್ದಾರನು ಬಹಳ ಸಂತೋಷಪಟ್ಟು, ಆತನೂ, ಆತನ ಹೆಂಡತಿ ಇಬ್ಬರೂ ಕಾರಿನಲ್ಲಿ ಹೊರಟು ಬಂದು ಮಾಲ ಸಮುದ್ರ ಸೇರಿಕೊಂಡು, ಆ ಶಿಶುವನ್ನು ಡಾಕ್ಟರ್ ಹತ್ತಿರದಿಂದ ತೆಗೆದುಕೊಂಡು ಅವರ ಊರಿಗೆ ಹೊರಟು ಹೋದರು.

ಹಾಗೆ ಅವರು ಹೋದ ಐದು ನಿಮಿಷಗಳಿಗೆ ತಪಸ್ವಿಬಾಬಾರವರ ಮನುಷ್ಯರು ಬಂದು, ಮುತ್ಯಾಲಮ್ಮ ಡಾಕ್ಟರ್‌ನನ್ನು ಬೇಟಿ ಮಾಡಿ ಅನಾಥೆಯಾಗಿ ಪ್ರಸವಿಸಿದ ಸ್ತ್ರೀ ತಮ್ಮ ಬಂಧುವೆಂದು ಹೇಳಿ ಆಕೆಯನ್ನೂ, ಆಕೆ ಪ್ರಸವಿಸಿದ ಶಿಶುವನ್ನೂ ಕುರಿತು ಕೇಳುತ್ತಾರೆ. ಆಗ ಆಕೆ ನಡೆದ ವಿಷಯವೆಲ್ಲಾ ತಿಳಿಸಿ, ಆ ಶಿಶು ಸಮೀಪ ಪಟ್ಟಣವಾದ ಚನ್ನಪಟ್ಟಣ ಎನ್ನುವ ಊರಲ್ಲಿ ಇದ್ದಾನೆಂದು ಹೇಳುತ್ತಾಳೆ. ಆ ಮಾತು ಕೇಳಿದ ತಪಸ್ವಿಬಾಬಾರವರ ಮನುಷ್ಯರು ನಿರುತ್ಸಾಹದಿಂದ ಕೂಡಲೇ ಚನ್ನ ಪಟ್ಟಣಕ್ಕೆ ಹೊರಟು ಹೋಗುತ್ತಾರೆ.)

***********************************

(ಪಾರಿವಾಳ ವೇಗವಾಗಿ ಸಾಗಿಹೋಗಿ ಬೇಗನೇ ರಾಜಯೋಗಾನಂದ ಸ್ವಾಮಿ ಆಶ್ರಮದಲ್ಲಿ ಸೇರಿತು. ಆ ಪಾರಿವಾಳಕ್ಕಾಗಿ ಕಾದು ನೋಡುತ್ತಿರುವ ರಾಘವ ಮತ್ತು ಉಳಿದವರು, ಪಾರಿವಾಳ ಕಾಲಿಗೆ ಕಟ್ಟಿರುವ ದುಂಡಾದ ಕೊಳಿವೆಯಂತಿರುವ ತಾಯತವನ್ನು ತೆಗೆದು ಅದರಲ್ಲಿ ದುಂಡಾಗಿ ಸುತ್ತಿ ಇಟ್ಟಿರುವ ಕಾಗದವನ್ನು ಹೊರಗೆ ತೆಗೆದು ಓದಿದರು. ಅದರಲ್ಲಿನ ವಿಷಯವನ್ನು ರಾಜಯೋಗಾನಂದಸ್ವಾಮಿಗೆ ತಿಳಿಸಿದರು. ಸ್ವಾಮಿ ಆದೇಶಾನುಸಾರ ರಾಘವ ಮತ್ತು ಗಿರಿಜನರು ಎಲ್ಲರೂ ಸೇರಿ ಮಾಲಸಮುದ್ರದ ಕಡೆ ಹೊರಟು ಹೋದರು. ತಪಸ್ವಿ ಬಾಬಾರವರ ಮನುಷ್ಯರು ಮುತ್ಯಾಲಮ್ಮ ಡಾಕ್ಟರ್ ಹತ್ತಿರದಿಂದ ಹೋಗುತ್ತಿರುವ ಸಮಯದಲ್ಲಿ ರಾಘವ ಅವರಿಗೆ ಎದುರಾಗುತ್ತಾರೆ. ಬಾಬಾರವರ ಮನುಷ್ಯರು, ಸ್ವಾಮಿ ಮನುಷ್ಯರು ಒಬ್ಬರಿಗೊಬ್ಬರು ಎದುರಾಗಿ ನೋಡಿಕೊಂಡರೂ, ಇವರು ಯಾರಾಗಿರುವುದು ಅವರಿಗೂ, ಅವರು ಯಾರಾಗಿರುವುದು ಇವರಿಗೂ ತಿಳಿದಿಲ್ಲ. ಆದ್ದರಿಂದ ಅವರು ಹೊರಗೆ, ಸ್ವಾಮಿ ಮನುಷ್ಯರು ಒಳಗೆ ಹೋಗುತ್ತಾರೆ. ಮುತ್ಯಾಲಮ್ಮ ಡಾಕ್ಟರ್

ಅವರು ಹೋಗುತ್ತಿರುವುದು, ಇವರು ಬರುತ್ತಿರುವುದನ್ನು ನೋಡಿದಳು. ಬಂದಿರುವ ಸ್ವಾಮಿ ಮನುಷ್ಯರು ಪ್ರಸವಿಸಿದ ಅನಾಥೆಗೆ ತಾವು ಬಂಧುವು ಎಂದು ಆಕೆಯನ್ನೂ, ಆಕೆ ಪ್ರಸವಿಸಿದ ಶಿಶುವನ್ನೂ ಕುರಿತು ಕೇಳುತ್ತಾರೆ.

ಆ ಮಾತು ಕೇಳಿದ ಡಾಕ್ಟರ್‌ರವರಿಗೆ ಅನುಮಾನ ಬಂದಿತು. ಮೊದಲು ಬಂದಿರುವವರು ಸಂಬಂಧಿಕರೆಂದಿದ್ದಾರೆ. ನಂತರ ಬಂದಿರುವವರು ಸಂಬಂಧಿಕರೆಂದಿದ್ದಾರೆ. ಒಬ್ಬರಿಗೊಬ್ಬರು ಎದುರಾದರೂ ಅವರನ್ನು ಇವರಾಗಲೀ, ಇವರನ್ನು ಅವರಾಗಲೀ ಮಾತನಾಡಿಸಿಕೊಳ್ಳಲಿಲ್ಲ. ನಿಜವಾಗಿ ಬಂಧುಗಳಾದರೇ ಏಕೆ ಮಾತನಾಡಿಸಿಕೊಳ್ಳಲಿಲ್ಲ? ಅಷ್ಟೇ ಅಲ್ಲದೆ ಮೊದಲು ಬಂದಿರುವವರು ಅನಾಥ ಸ್ತ್ರೀಗೆ ಬಂಧುಗಳೆಂದಿದ್ದಾರೆ. ಆದರೆ ಶವವಾಗಿ ಇನ್ನೂ ಅಲ್ಲೇ ಇದ್ದರೂ ಅನಾಥ ಸ್ತ್ರೀಯನ್ನು ನೋಡದಂತೆ ಶಿಶುವಿಗಾಗಿ ಆತುರತೆಯಿಂದ ಏಕೆ ಹೋಗಿದ್ದಾರೆ? ಹೀಗೆ ಆಲೋಚಿಸಿದ ಮುತ್ಯಾಲಮ್ಮ ಡಾಕ್ಟರ್‌ರವರಿಗೆ, ಬಂದಿರುವವರು ಯಾರೂ ಅನಾಥೆಗೆ ಬಂಧುಗಳು ಅಲ್ಲವೆಂದು ಅರ್ಥವಾಯಿತು. ಆದರೂ ತನ್ನ ಅನುಮಾನ ಹೊರಬೀಳದಂತೆ ಸ್ವಾಮಿ ಮನುಷ್ಯರಿಗೂ ಸಹ ಚನ್ನಪಟ್ಟಣ ಅಡ್ರಸ್ ಹೇಳಿ ಕಳುಹಿಸುತ್ತಾಳೆ. ರಾಘವ ಸಹ ತರಾತುರಿಯಲ್ಲಿ ಚನ್ನ ಪಟ್ಟಣಕ್ಕೆ ಹೊರಟು ಹೋಗಿದ್ದಾನೆ. ಇಬ್ಬರಿಗೆ ಅಡ್ರಸ್ ಹೇಳಿ ಕಳುಹಿಸಿದ ಡಾಕ್ಟರಮ್ಮ, ಅವರು ಹೊರಗೆ ಹೋದಕೂಡಲೇ ಜಮೀನ್ದಾರನಿಗೆ ಫೋನ್ ಮಾಡಿ, ಬಂಧುಗಳು ಅಲ್ಲದವರು ಬಂಧುಗಳೆಂದು ಅಸತ್ಯ ಹೇಳಿ ಆ ಶಿಶುವಿಗಾಗಿ ಬರುತ್ತಿದ್ದಾರೆ. ಅವರಿಗೆ ಆ ಶಿಶುವನ್ನು ಕೊಡಬೇಡವೆಂದು ಹೇಳಿದಳು. ಆ ಮಾತು ಕೇಳಿದ ಜಮೀನ್ದಾರನು ಕೋಪದಿಂದ ತುಂಬಿರುವವನಾಗಿ ಅಲ್ಲಿಗೆ ಯಾರು ಬರುತ್ತಾರೋ ಎಂದು ನೋಡುತ್ತಿದ್ದನು. ಕತ್ತಲು ಬೀಳುವುದರೊಳಗೆ ಬಾಬಾರವರ ಮನುಷ್ಯರು ಅಲ್ಲಿಗೆ ಸೇರಿ ಶಿಶುವನ್ನು ಕುರಿತು ಕೇಳುತ್ತಾರೆ. ಆಗ ಜಮೀನುದಾರ ಶಿಶು ದಾರಿಯಲ್ಲೇ ಸತ್ತುಹೋದನೆಂದು, ಸತ್ತುಹೋದ ಶಿಶುವನ್ನು ದಾರಿ ಪಕ್ಕದಲ್ಲೇ ಇರುವ ನದಿ ದಡದ ಹತ್ತಿರ ಹೂತಿಟ್ಟಿದ್ದೇವೆಂದು ಹೇಳಿದ್ದಾನೆ. ಆ ಮಾತು ಕೇಳಿದ ಬಾಬಾ ಮನುಷ್ಯರು ವಿಧಿ ಇಲ್ಲದೆ ಬಂದಿರುವ ದಾರಿಗೇ ಹಿಂತಿರುಗಿ ಹೋದರು. ಸ್ವಲ್ಪ ಸಮಯಕ್ಕೆ ರಾಘವ ತನ್ನ ಮನುಷ್ಯರೊಂದಿಗೆ ಚನ್ನ ಪಟ್ಟಣಕ್ಕೆ ಸೇರಿ, ಜಮೀನ್ದಾರನ

ಮನೆಗೆ ಹೋಗಿ ಶಿಶುವನ್ನು ಕುರಿತು ಕೇಳಿದ್ದಾನೆ. ಆಗ ಆ ಜಮೀನ್ದಾರ್ ಮೊದಲಿನವರಿಗೆ ಹೇಳಿದಂತೇ ಶಿಶು ಮರಣಿಸಿದ್ದಾನೆಂದು ಹೇಳಿದ್ದಾನೆ. ಆ ಶಿಶು ಮರಣಿಸುವವನಲ್ಲವೆಂದು, ದೊಡ್ಡ ಶಕ್ತಿವಂತನೆಂದು ರಾಘವನಿಗೆ ತಿಳಿದಿತ್ತು. ಆದ್ದರಿಂದ ಆತನ ಮಾತುಗಳನ್ನು ರಾಘವ ನಂಬಲಿಲ್ಲ.

ಶಿಶು ಸತ್ತುಹೋಗಿದ್ದಾನೆನ್ನುವ ಮಾತು ಅಸತ್ಯವೆಂದು, ಆ ಬಾಲಕನನ್ನು ಎಲ್ಲೋ ಬಚ್ಚಿಟ್ಟು ತಮಗೆ ಅಸತ್ಯ ಹೇಳುತ್ತಿದ್ದಾರೆಂದು, ತಿಳಿದ ರಾಘವ ವಿಧಿ ಇಲ್ಲದೆ ಹಿಂತಿರುಗಿ ಹೋದನು. ವಿಷಯವನ್ನು ತಿಳಿದುಕೊಂಡ ರಾಜಯೋಗಾನಂದ ಸ್ವಾಮಿ ಸಂತಾನವಿಲ್ಲದವರ ಕೈಯ್ಯಲ್ಲಿರುವ ಮಗು ಕ್ಷೇಮದಿಂದ ಇರುತ್ತಾನೆಂದೂ, ಪ್ರಸ್ತುತ ಆ ಶಿಶು ಜಮೀನ್ದಾರನ ರಕ್ಷಣೆಯಲ್ಲಿ ಇರುವುದೇ ಒಳ್ಳೆಯದೆಂದೂ, ಹಾಗಿರುವುದರಿಂದ ತಪಸ್ವಿಬಾಬಾರವರಿಗೂ ಸಹ ಸಿಗದೇ ಕ್ಷೇಮದಿಂದ ಬೆಳೆಯುತ್ತಾನೆಂದು ರಾಘವನಿಗೆ ಹೇಳಿದ್ದಾನೆ. ಅಷ್ಟೇ ಅಲ್ಲದೆ ಈ ದಿನ ತಿಳಿಯದೇ ಹೋದರೂ, ಇನ್ನೂ ಸ್ವಲ್ಪ ದಿನಗಳಿಗಾದರೂ ಒಂದು ವೇಳೆ ತಪಸ್ವಿಬಾಬಾರವರು ತಿಳಿದುಕೊಳ್ಳುವುದಾದರೇ, ಆ ಹುಡುಗನಿಗಾಗಿ ಪ್ರಯತ್ನಿಸುತ್ತಾನೆ. ಆಗ ಆತನ ಕಾರ್ಯಗಳನ್ನು ಕಂಡುಹಿಡಿದು ವಿಘ್ನ ಮಾಡುತ್ತಿರಬೇಕು. ತಪಸ್ವಿ ಬಾಬಾ ಹತ್ತಿರ ಭಕ್ತನಾಗಿರುವ ನಮ್ಮ ಮನುಷ್ಯ, ಬಾಲಕನ ವಿಷಯಗಳು ಬಾಬಾರವರಿಗೆ ತಿಳಿದರೇ, ಆ ವಿಷಯವನ್ನು ನಮಗೆ ತಿಳಿಸುತ್ತಿರುತ್ತಾನೆ. ಹಾಗೆ ಏನಾದರೂ ತಿಳಿದರೇ ಆಗ ಆಲೋಚಿಸೋಣ. ಪ್ರಸ್ತುತಕ್ಕೆ ಆ ಬಾಲಕ ಬಾಬಾರವರ ಹತ್ತಿರಕ್ಕೆ ಸೇರದಂತೆ ಹೋಗುವುದು ನಮಗೆ ಸಂತೋಷಕರವಾದ ವಿಷಯವೇ ಎಂದು ಸ್ವಾಮಿ ಹೇಳಿದಾಗ, ರಾಘವನಿಗೂ ಸಹ ಪ್ರಯತ್ನ ಮಾಡುತ್ತಿರುವ ಬಾಬಾರವರಿಗೆ ಸಿಗದಂತೆ ದೈವ ಆ ಮಗುವನ್ನು ಜಮೀನ್ದಾರನ ಹತ್ತಿರಕ್ಕೆ ಸೇರಿಸುವುದು ಬಹಳ ವಿಚಿತ್ರವಾದದ್ದೆಂದು, ಇನ್ನೂ ಏನು ನಡೆಯುತ್ತದೋ ನೋಡಬೇಕೆಂದುಕೊಂಡಿದ್ದಾನೆ.)

**********************************

(ತಪಸ್ವಿಬಾಬಾರವರ ಮನುಷ್ಯರು ಜಮೀನ್ದಾರನು ಹೇಳಿದ ಮಾತುಗಳನ್ನು ನಂಬಿದವರಾಗಿ, ಅದೇ ವಿಷಯವನ್ನು ಮುನೆಪ್ಪನಿಗೆ ಹೇಳಿದಾಗ, ಮುನೆಪ್ಪ ಬಾಬಾರವರಿಗೆ ತಿಳಿಸುತ್ತಾನೆ. ಆ ವಿಷಯ ತಿಳಿದ ಬಾಬಾರವರು ತನ್ನ ಮನುಷ್ಯರು ಬುದ್ಧಿ ಕಡಿಮೆ ಇರುವವರೆಂದು ಕೋಪಿಸಿಕೊಂಡು ಮುನೆಪ್ಪನೊಂದಿಗೆ "ಆ ಶಿಶು ಅಷ್ಟು ಸುಲಭವಾಗಿ ಸತ್ತುಹೋಗುವವನಲ್ಲ. ಅವರು ನಮ್ಮವರನ್ನು ಮೋಸಮಾಡುವುದಕ್ಕೆ ಹಾಗೆ ಹೇಳಿದ್ದಾರೆ. ಆ ಶಿಶು ಕ್ಷೇಮವಾಗಿ ಅವರ ಹತ್ತಿರವೇ ಇರುತ್ತಾನೆ. ಆ ಶಿಶುವಿಗಾಗಿ ಮಾಡಿದ ಮೊದಲ ಪ್ರಯತ್ನವೇ ನೆರವೇರದಂತೆ ಹೋಗಿದೆ. ಇನ್ನು ಎರಡನೆ ಪ್ರಯತ್ನವಾದರೂ ಬುದ್ಧಿವಂತಿಕೆಯಿಂದ ಮಾಡಬೇಕು" ಎಂದು ಹೇಳಿದ್ದಾನೆ. ಬಾಬಾರವರ ಮಾತುಗಳು ಕೇಳಿ ಮುನೆಪ್ಪ ತನ್ನ ಮನುಷ್ಯರನ್ನು ಬೈದಿದ್ದಾನೆ. ಅವರು ಅಸತ್ಯವನ್ನು ಹೇಳಿದರೆ ನಂಬಿ ಬರುವುದೇನಾ! ಎಂದು ಸಿಟ್ಟಿನಿಂದ ಹೇಳಿ, ಈ ಸಲ ಮತ್ತೊಂದು ಪದ್ಧತಿಯನ್ನು ಅನುಸರಿಸಿ ಪ್ರಯತ್ನಿಸೋಣ, ಆಗಾದರೂ ಜಾಗ್ರತೆಯಿಂದ ಮಾಡಬೇಕು! ಎಂದು ಹೇಳಿದ್ದಾನೆ. ಎರಡು ದಿನಗಳ ನಂತರ ಮುನೆಪ್ಪನಿಗೆ ತಪಸ್ವಿ ಬಾಬಾರವರ ಹತ್ತಿರದಿಂದ ಸಮಾಚಾರ ವಯರ್‌ಲೆಸ್‌ನಿಂದ ತಿಳಿಯಿತು. ಅದರಲ್ಲಿ ಮುನೆಪ್ಪನಿಗೆ ಬಾಬಾರವರು ಹೇಳಿದ ವಿಷಯವನ್ನು ಮುನೆಪ್ಪ ತನ್ನ ಮನುಷ್ಯರೊಂದಿಗೆ ಹೀಗೆ ಹೇಳಿದ್ದಾನೆ.)

**ಮುನೆಪ್ಪ :–** ಈ ಸಲ ನಾವುಮಾಡಬೇಕಾದ ಪದ್ಧತಿ ಬಹಳ ಸುಲಭವಾಗಿದೆ. ನಿಮ್ಮಲ್ಲಿ ಒಬ್ಬರು ಗೊಂಬೆಗಳನ್ನು ಮಾರುವವರಂತೆ ತಿಂಗಳ ನಂತರ ಚನ್ನಪಟ್ಟಣಕ್ಕೆ ಹೋಗಿ ನಾನು ಕೊಟ್ಟಿರುವ ಗೊಂಬೆಗಳನ್ನು ಆ ಜಮೀನ್ದಾರನ ಮನೆಯಲ್ಲಿ ಮಾರಿ ಬರಬೇಕು. ಮಾರುವ ಅವಕಾಶ ಇಲ್ಲದಿದ್ದರೇ, ಅವರು ಕೊಳ್ಳದಿದ್ದರೂ ಅವರಿಗೆ ಉಚಿತವಾಗಿಯಾದರೂ ಕೊಟ್ಟು ಬರಬೇಕು. ಕೊನೆಗೆ ಹೇಗಾದರೂ ಆ ಗೊಂಬೆಯನ್ನು ಆ ಮನೆಯೊಳಗೆ ಸೇರಿಸಿ ಬರಬೇಕು. ಹುಡುಗ ನಮ್ಮ ಹತ್ತಿರಕ್ಕೆ ಬರದಿದ್ದರೂ, ನಮ್ಮ ಗೊಂಬೆ ಅಲ್ಲಿಗೆ ಸೇರಬೇಕು. ನಮ್ಮ ಗೊಂಬೆ ಅಲ್ಲಿಗೆ ಸೇರುವುದರಿಂದ ನಮ್ಮ ಕಾರ್ಯ ಸುಲಭವಾಗಿ ನೆರವೇರುತ್ತದೆ.

**ನೂಕಾ :–** ನಮ್ಮ ಗೊಂಬೆಗಳು ಅಲ್ಲಿಗೆ ಸೇರಿದಷ್ಟು ಮಾತ್ರಕ್ಕೆ ನಮ್ಮ ಕಾರ್ಯ ಸರಿಹೋಗುತ್ತದೆನ್ನುತ್ತೀರಾ?

**ಮುನೆಪ್ಪ :–** ಅವು ಸಾಧಾರಣ ಗೊಂಬೆಗಳು ಅಲ್ಲ. ನಾವು ಹೇಳಿದ ಕೆಲಸವನ್ನು ಮಾಡಿಕೊಡುವ ಕಂಪ್ಯೂಟರ್‌ಗಳಂತಹ ನಮ್ಮ ಏಜೆಂಟ್‌ಗಳೆಂದುಕೋ. ಅವು ಅಲ್ಲಿದ್ದರೆ ಇಲ್ಲಿಂದ ನಮ್ಮ ಕೆಲಸಗಳನ್ನು ಅವುಗಳ ಮುಖಾಂತರ ಮಾಡಿಸಬಹುದು. ಮನುಷ್ಯರು ಮಾಡಲಾರದ ಕೆಲಸಗಳನ್ನು ಗೊಂಬೆಗಳು ಮಾಡುತ್ತವೆನ್ನುವುದರಲ್ಲಿ ಆಶ್ಚರ್ಯ ತಪ್ಪದೆ ಉಂಟಾಗುತ್ತದೆ. ಅವುಗಳ ಮೇಲೆ ಯಾರಿಗೂ ಅನುಮಾನವೂ ಸಹ ಬರುವುದಿಲ್ಲ. ಏಕೆಂದರೆ ಅವು ಸಾಧಾರಣ ಮಕ್ಕಳು ಆಡಿಕೊಳ್ಳುವ ಗೊಂಬೆಗಳ ಹಾಗೇ ಇರುತ್ತವೆ. ಆ ಗೊಂಬೆಗಳನ್ನು ಬುದ್ಧಿವಂತಿಕೆಯಿಂದ ಅಲ್ಲಿಗೆ ಸೇರಿಸುವುದೇ ನಿಮ್ಮ ಕೆಲಸ. ನಂತರ ಮನುಷ್ಯನಿಗಿಂತ ಬುದ್ಧಿವಂತಿಕೆ ಕೆಲಸವನ್ನು ಅವು ಮಾಡುತ್ತವೆ.

(ಆ ಮಾತುಗಳು ಕೇಳಿದ ಎಲ್ಲರೂ ಆಶ್ಚರ್ಯಪಟ್ಟು ಅವು ಎಂತಹ ಗೊಂಬೆಗಳೋ ನೋಡಬೇಕೆಂದುಕೊಂಡಿದ್ದಾರೆ.)

*********************************

(ಒಬ್ಬ ಅನಾಥ ಬಾಲಕನನ್ನು ತಂದುಕೊಂಡ ನಂತರ ಆ ಬಾಲಕನಿಗಾಗಿ ಎರಡು ಗುಂಪುಗಳ ಮನುಷ್ಯರು ಬಂದು ಹೋಗುವುದು, ರಾವುಬಹುದ್ದೂರ್ ಎನ್ನುವ ಆ ಜಮೀನ್ದಾರನಿಗೆ ಅರ್ಥವಾಗಲಿಲ್ಲ. ಬಂಧುಗಳೆಂದು ಹೇಳಿ ತಾಯಿ ಶವವನ್ನು ಸಹ ನೋಡದಂತೆ, ಮಗುವಿಗಾಗಿ ಬಂದು ಹೋಗುವುದರಲ್ಲಿ ಮರ್ಮವೇನೋ ತಿಳಿಯಲಿಲ್ಲ. ಅಂತಹ ಪರಿಸ್ಥಿತಿಯಲ್ಲಿ ಆ ಜಮೀನ್ದಾರನು ಯೋಚಿಸಿ ಮಗುವನ್ನು ಕಣ್ಣಿಗೆ ರೆಪ್ಪೆಯಂತೆ ಬೆಳಸಬೇಕೆಂದು, ಆ ಮಗುವನ್ನು ಯಾರೂ ಅಪಹರಿಸದಂತೆ, ತಕ್ಕ ಬಂದೋಬಸ್ತೆಗಾಗಿ ನಾಲ್ವರು ಪೈಲ್ವಾನರನ್ನು ಜೀತ ಕೊಟ್ಟು ರಾವುಬಹುದ್ದೂರ್ ಜಮೀನ್ದಾರ ನೇಮಿಸಿದ್ದಾನೆ. ಭಾರೀ ಶರೀರವಿರುವ ಆ ನಾಲ್ವರು ಪೈಲ್ವಾನರ ರಕ್ಷಣೆಯಲ್ಲಿ ಎಂತಹ ಭಯವಿಲ್ಲದೆ ಆ ಮಗು ಬೆಳೆಯುತ್ತಿದ್ದಾನೆ. ರಾವುಬಹುದ್ದೂರ್‌ರವರು ತಮ್ಮ ವಂಶ ಆಚಾರದ ಪ್ರಕಾರ ಆ ಮಗುವಿಗೆ ನಾಮಕರಣ ಮಾಡಬೇಕೆಂದುಕೊಂಡಿದ್ದಾನೆ. ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಆ ಶಿಶುವಿಗೆ ಹೆಸರನ್ನು ನಿರ್ಣಯಿಸುವುದಕ್ಕೂ, ಹಾಗೇ ಆ ಶಿಶು ಜಾತಕವನ್ನು ಬರೆಯಿಸುವುದಕ್ಕೂ ಸುಪ್ರಸಿದ್ಧ ಜ್ಯೋತಿಷ್ಯನನ್ನು ಕರೆಯಬೇಕೆಂದುಕೊಂಡಿದ್ದಾನೆ.

ನಾಮಕರಣ ಮಾಡುವುದಕ್ಕೆ, ಜಾತಕ ಬರೆಯುವುದಕ್ಕೆ ತನಗೆ ಸಮೀಪ ಬಂಧು ವರಸೆಗೆ ಚಿಕ್ಕಪ್ಪ, ಜ್ಯೋತಿಷ್ಯದಲ್ಲಿ ದೊಡ್ಡ ಪಂಡಿತನೂ ಆದ ಶಿವಬಹುದ್ದೂರ್ ಎನ್ನುವ ಮುದುಕನನ್ನು ಕರೆಯಿಸಿ ಮಗುವಿನ ನಾಮಕರಣಕ್ಕೆ ಮುಹೂರ್ತವನ್ನು ಇಡಿಸಿದ್ದಾನೆ. ನಾಮಕರಣ ಮುಹೂರ್ತ ಸುಮಾರು ಒಂದೂವರೆ ತಿಂಗಳಿಗೆ ನಿರ್ಣಯಿಸಿದರು. ಅಷ್ಟರಲ್ಲಿ ತಪಸ್ವಿಬಾಬಾ ಹೇಳಿದಂತೆ ಮುನೆಪ್ಪ ಚನ್ನಪಟ್ಟಣಕ್ಕೆ ತನ್ನ ಮನುಷ್ಯರನ್ನು ಗೊಂಬೆಗಳು ಮಾರುವುದಕ್ಕೆ ಕಳುಹಿಸಿದನು.

ಗೊಂಬೆಗಳನ್ನು ಮಾರುವವರು ಆ ಊರಿನೊಳಗೆ ಬಂದು ಜಮೀನ್ದಾರನ ಮನೆಯಲ್ಲಿ ಗೊಂಬೆಗಳನ್ನು ಮಾರುವುದಕ್ಕೆ ಸರಿಯಾದ ಸಮಯಕ್ಕಾಗಿ ಕಾದುಕೊಂಡು ಗೊಂಬೆಗಳನ್ನು ಮಾರುತ್ತಾ ಅಲೆಯುತ್ತಿದ್ದರು. ಜಮೀನ್ದಾರನ ಮನೆಯಲ್ಲಿ ಮಾರಬೇಕಾದ ಗೊಂಬೆಗಳನ್ನು ಪಕ್ಕದಲ್ಲಿಟ್ಟುಕೊಂಡು ದಿನದಿನವೂ ಪ್ರಯತ್ನ ಮಾಡುತ್ತಿರುವಾಗ, ಒಂದು ದಿನ ರಾವುಬಹುದ್ದೂರ್ ಮಗುವನ್ನು ಕರೆದುಕೊಂಡು ಡಾಕ್ಟರ್ ಹತ್ತಿರಕ್ಕೆ ಕಾರಿನಲ್ಲಿ ಹೊರಟು ಬಂದಿದ್ದಾನೆ. ಅದೇ ಸಮಯವೆಂದುಕೊಂಡ ಗೊಂಬೆ ಮಾರುವವನು ಜಮೀನ್ದಾರನನ್ನು ಅನುಸರಿಸಿ ಹೋಗಿದ್ದಾನೆ. ಡಾಕ್ಟರ್ ಹತ್ತಿರ ಮಗು ಅಳುವುದಕ್ಕೆ ಆರಂಭಿಸಿದನು. ಅಳುತ್ತಿರುವ ಮಗುವನ್ನು ಡಾಕ್ಟರ್ ಹತ್ತಿರದಿಂದ ಹೊರಗೆ ತಂದ ಕೂಡಲೇ ಕಾದುಕೊಂಡಿರುವ ಗೊಂಬೆ ಮಾರುವವನು ಗೊಂಬೆಗಳನ್ನು ತೋರಿಸುತ್ತಾ ಗೊಂಬೆಗಳನ್ನು ಕೊಳ್ಳಿರೆಂದು ರಾವುಬಹದೂರ್‌ನನ್ನು ಕೇಳಿದನು. ಮಗು ಅಳುತ್ತಿರುವುದರಿಂದ ಗೊಂಬೆಗಳನ್ನು ತೋರಿಸಿ ಅಳುವುದನ್ನು ನಿಲ್ಲಿಸಬೇಕೆಂದು ಜಮೀನ್ದಾರನು ಗೊಂಬೆಗಳನ್ನು ಮಗುವಿಗೆ ತೋರಿಸಿದಾಗ ಅವುಗಳನ್ನು ನೋಡಿ ಮಗು ಅಳುವುದನ್ನು ನಿಲ್ಲಿಸಿದನು. ಆಗ ಜಮೀನ್ದಾರನು, ಗೊಂಬೆಗಳು ಮಾರುವವನು ಕೊಟ್ಟಿರುವ ಗೊಂಬೆಗಳನ್ನು ತೆಗೆದುಕೊಂಡು ಅವುಗಳಿಗೆ ಹಣ ಕೊಟ್ಟನು. ಜಮೀನ್ದಾರನಿಗೆ ಗೊಂಬೆಗಳನ್ನು ಮಾರುವುದೇ ಉದ್ದೇಶವಾಗಿಟ್ಟು ಕೊಂಡು ಬಂದಿರುವ ಮುನೆಪ್ಪ ಮನುಷ್ಯ, ತನ್ನ ಕೆಲಸ ಸುಲಭವಾಗಿ ನೆರವೇರಿರುವುದಕ್ಕೆ ಸಂತೋಷಿಸಿ ಆ ವಿಷಯವನ್ನು ಮುನೆಪ್ಪನಿಗೆ ತಿಳಿಸುವುದಕ್ಕೆ ಹೊರಟು ಹೋದನು.

ಕೊಂಡ ಗೊಂಬೆಗಳು ಸಾಧಾರಣವಾಗಿ ಮಕ್ಕಳು ಆಡಿಕೊಳ್ಳುವ ಗೊಂಬೆಗಳಹಾಗೆಯೇ ಇವೆ. ಅದರಲ್ಲಿ ಚಿಕ್ಕ ಮಕ್ಕಳು ಆಡಿಕೊಳ್ಳುವ ಹೆಲೀಕ್ಯಾಪ್ಟರ್ ಒಂದು, ಕಾಲಿಗೆ ಕೀಲುಗಳು ಜೋಡಿಸಿರುವ ನಾಯಿ ಗೊಂಬೆ, ಕೋತಿ ಗೊಂಬೆ. ಹಾಗೇ ಕಾಲು ಕೈ ಅಲುಗಾಡುವಂತಿರುವ ಅಡಿ ಉದ್ದವಿರುವ ಪ್ಲಾಸ್ಟಿಕ್ ಮನುಷ್ಯನ ಗೊಂಬೆ. ಆ ಗೊಂಬೆ ಕೈಯ್ಯಲ್ಲಿ ಚಾಕುವಿನಂಥದ್ದು ಇದೆ, ಮತ್ತು ರಬ್ಬರ್‌ನಿಂದ ಮಾಡಿರುವ ಅಡಿ ಉದ್ದವಿರುವ ಮುದುಕನ ಗೊಂಬೆ ಖರೀದಿಸಿರುವವುಗಳಲ್ಲಿ ಇವೆ. ಒಟ್ಟು ಎಲ್ಲಾ ಸೇರಿಸಿ ಐದು ಗೊಂಬೆಗಳೇ. ಅವು ನೋಡುವುದಕ್ಕೆ ಸಾಧಾರಣ ಗೊಂಬೆಗಳೇ ಆದರೂ, ಅವುಗಳಲ್ಲಿ ಪ್ರತ್ಯೇಕತೆ ಇದೆಯೆಂದು ನೋಡುತ್ತಲೇ ಅರ್ಥವಾಗುವಂತೆ ಇವೆ. ಆದರೆ ಏನು ಪ್ರತ್ಯೇಕತೆ ಇರುವುದು ಯಾರಿಗೂ ತಿಳಿದಿಲ್ಲ. ಅಷ್ಟರಲ್ಲೇ ನಾಮಕರಣ ದಿನ ಬಂದಿತು. ಆ ದಿನ ದೊಡ್ಡ ಹಬ್ಬವನ್ನು ಮಾಡಬೇಕೆಂದುಕೊಂಡ ಜಮೀನ್ದಾರನು ದೊಡ್ಡದಾಗಿ ಏರ್ಪಾಟುಗಳೆಲ್ಲ ಮಾಡಿದ್ದಾನೆ. ಅನೇಕ ಜನ ಬಂಧು ಮಿತ್ರರು ಮಗುವನ್ನು ನೋಡಿಹೋಗಬೇಕೆಂದು ಬಂದಿದ್ದಾರೆ. ಜ್ಯೋತಿಷ್ಯ ತಿಳಿದ ತನ್ನ ಬಂಧು ಸಹ ಬಂದು, ಆ ದಿನ ಜಾತಕರೀತ್ಯಾ ಆ ಮಗುವಿಗೆ ಈಶ್ವರ್ ಎಂದು ಹೆಸರನ್ನು ಇಟ್ಟಿದ್ದಾನೆ. ಆ ದಿನ ರಾತ್ರಿಗೆ ಜ್ಯೋತಿಷ್ಯ ತಿಳಿದ ರಾವುಬಹುದ್ದೂರ್ ಚಿಕ್ಕಪ್ಪ ತನ್ನ ಕೊಠಡಿಯಲ್ಲಿ ಕುಳಿತುಕೊಂಡು, ಜಮೀನ್ದಾರನು ತಂದುಕೊಂಡ ಮಗುವಿನ ಜಾತಕವನ್ನು ಬರೆಯುವುದಕ್ಕೆ ಬಿಳಿ ಕಾಗದದಲ್ಲಿ ಮೊದಲು ಗ್ರಹಕುಂಡಲಿಯನ್ನು ಗೀಚಿದ್ದಾನೆ. ನಂತರ ಪಂಚಾಂಗದಲ್ಲಿ ಮಗು ಹುಟ್ಟಿದ ಸಮಯವನ್ನು ನೋಡಿದಾಗ, ಆ ಸಮಯದಲ್ಲಿ ಅಷ್ಟಗ್ರಹ ಕೂಟಮಿ ನಡೆದಂತೆ ತಿಳಿಯಿತು. ಅಂತಹ ಸಮಯದಲ್ಲಿ ಹುಟ್ಟಿದವನಿಗೆ ಯಾವುದೋ ಒಂದು ಪ್ರತ್ಯೇಕತೆ ಇರುತ್ತದೆಂದು ತಿಳಿದ ಆ ಜ್ಯೋತಿಷ್ಯನು, ಆ ಸಮಯದಲ್ಲಿನ ಒಂದೊಂದು ಗ್ರಹವನ್ನು ಕುಂಡಲಿಯಲ್ಲಿ ಬರೆಯುತ್ತಾ ಜಾತಕವನ್ನು ಬರೆಯಲು ಆರಂಭಿಸಿದ್ದಾನೆ. ಜಾತಕವನ್ನು ಪೂರ್ತಿಯಾಗಿ ಬರೆದರೆ ಆ ಮಗುವಿನ ಪ್ರತ್ಯೇಕತೆ ಏನೋ ತಿಳಿಯುತ್ತದೆಂದುಕೊಂಡಿದ್ದಾನೆ. ಆದರೆ ಆ ಜ್ಯೋತಿಷ್ಯನ ಪೆನ್ನು ಬರೆಯದಂತೆ ನಿಂತುಹೋಯಿತು. ಕಾಗದದ ಮೇಲೆ ಬರವಣಿಗೆ ಬೀಳಲಿಲ್ಲ. ಅದೇ ಪೆನ್ನಿನಿಂದ ಪಕ್ಕದಲ್ಲಿರುವ ಕಾಗದ ಮೇಲೆ ಬರೆದರೆ ಅದು ಸುಲಭವಾಗಿ ಬರೆಯುತ್ತಿದೆ.

ಜ್ಯೋತಿಷ್ಯನು ಜಾತಕವೊಂದರ ಕಾಗದದ ಮೇಲೆ ಪುನಃ ಬರೆಯುವುದಕ್ಕೆ ಪ್ರಯತ್ನಿಸಿದರೆ ಆಗಲೂ ಸಹ ಅದು ಬರೆಯಲಿಲ್ಲ. ಪಕ್ಕದಲ್ಲಿ ಬರೆಯುವ ಪೆನ್ನು, ಜಾತಕವನ್ನು ಬರೆದರೆ ಕಾಗದದ ಮೇಲೆ ಬರೆಯದೆ ಹೋಗುವುದು ಆ ಮುದುಕನಿಗೆ ಆಶ್ಚರ್ಯವೆನಿಸಿತು. ಇಲ್ಲಿಯಾವುದೋ ಕಾಣಿಸದ ಶಕ್ತಿ ಕೆಲಸ ಮಾಡುತ್ತಿದೆಯೆಂದು ಕೊಂಡು, ತಾನು ಅಲ್ಲಿ ಒಂಟಿಯಾಗಿ ಇರುವುದು ಒಳ್ಳೆಯದಲ್ಲವೆಂದುಕೊಂಡು, ಕೂಡಲೇ ಅಲ್ಲಿಂದ ಪಕ್ಕದ ಕೊಠಡಿಯೊಳಗೆ ಹೋಗಬೇಕೆಂದು ಎದ್ದು ಹೋಗಲು ಹೋಗಿದ್ದಾನೆ. ಅಷ್ಟರಲ್ಲಿ ಮಗುವಿಗಾಗಿ ಕೊಂಡ ಗೊಂಬೆಗಳಲ್ಲಿರುವ ಹೆಲಿಕ್ಯಾಪ್ಟರ್ ರುಯ್ ಎಂದು ಎದ್ದು ಬಂದಿತು. ಅದರ ರೆಕ್ಕೆಗಳು ಮೂರು ಅಂಗುಲ ಉದ್ದ ಇದ್ದರೂ, ಆ ಸಮಯದಲ್ಲಿ ಅದರ ರೆಕ್ಕೆಗಳು ಮೂರು ಮೀಟರುಗಳ ಉದ್ದವಾಗಿ ಕಾಣಿಸುತ್ತಿವೆ. ಆ ವಿಚಿತ್ರವನ್ನು ನೋಡಿ ಆ ಮುದುಕನ ಬಾಯಲ್ಲಿ ಮಾತುಬರಲಿಲ್ಲ. ಕಾಲು ಕೈಗಳು ಆಡದೆ ನಿಶ್ಚೇಷ್ಟನಾಗಿ ನಿಂತುಹೋಗಿದ್ದಾನೆ. ಅತೀ ವೇಗವಾಗಿ ರೆಕ್ಕೆಗಳು ತಿರುಗುತ್ತಿರುವಾಗ ಹೆಲಿಕ್ಯಾಪ್ಟರ್ ತನ್ನ ಕಡೆ ಬಂದಿತು. ನೋಡುತ್ತಿದ್ದಂತೆ ಅದರ ರೆಕ್ಕೆಗಳು ಮುದುಕನ ಕುತ್ತಿಗೆ ಭಾಗದಲ್ಲಿ ತಾಕಿ ತಲೆ ಹಾರಿಬಿದ್ದಿತು.

ನಂಬಲಾಗದಂತಹ, ಯಾರೂ ಊಹಿಸದ ಕೆಲಸ ಅಲ್ಲಿ ನಡೆದುಹೋಯಿತು. ಮುದುಕನ ತಲೆ, ಮುಂಡ ಬೇರೆಬೇರೆಯಾಗಿ ಬಿದ್ದಿವೆ. ಇದು ಹೇಗೆ ನಡೆದಿದೆಯೆಂದು ಹೇಳುವವರು ಸಹ ಇಲ್ಲ. ಆದ್ದರಿಂದ ಮುದುಕನು ಸತ್ತುಹೋಗಿರುವ ವಿಷಯ ಬೆಳಕಾಗುವವರೆಗು ಯಾರಿಗೂ ತಿಳಿಯದು. ಮುದುಕನ ಮರಣಕ್ಕೆ ಕಾರಣವಾದ ಗೊಂಬೆ ಮೊದಲಿನ ಹಾಗೆ ಗೊಂಬೆಯಂತೆ ಎಲ್ಲಿರುವುದು ಪುನಃ ಅಲ್ಲೇ ಇದೆ. ಬೆಳಗಾದ ನಂತರ ಮುದುಕನು ಮರಣಿಸಿರುವುದನ್ನು ನೋಡಿ ಜಮೀನ್ದಾರನು ಆಶ್ಚರ್ಯಪಟ್ಟಿದ್ದಾನೆ. ಮಗುವಿನ ನಾಮಕರಣ ದಿನವೇ ಹಾಗೆ ನಡೆಯುವುದು ಆತನಿಗೆ ಬಹಳ ನೋವು ಉಂಟಾಯಿತು. ತಲೆ ಬೇರೆಯಾಗಿ ಇರುವುದರಿಂದ ಅದನ್ನು ಪೊಲೀಸರು ಹತ್ಯೆ ನಡೆದಂತೆ ಲೆಕ್ಕಿಸಿದ್ದಾರೆ. ಆ ಹತ್ಯೆಯನ್ನು ಯಾರು ಮಾಡಿದ್ದಾರೆ, ಅಂತಹ ಅಗತ್ಯ ಯಾರಿಗಿದೆಯೆಂದು ಜಮೀನ್ದಾರ್ ಹೇಳಲಾರದೆ ಹೋಗಿದ್ದಾನೆ. ಮರಣಿಸಿದ ವ್ಯಕ್ತಿಗೆ ಯಾರೊಂದಿಗೂ ಶತ್ರುತ್ವವಿಲ್ಲ. ಯಾರಾದರೂ ಕಳ್ಳರು ಮಾಡಿದ್ದಾರಾ ಎನ್ನುವುದಕ್ಕೆ ಆ ಮನೆಯೊಳಗೆ ಕಳ್ಳರು ಬಂದ ಸೂಚನೆಗಳು

ಏನೂ ಇಲ್ಲ. ಮೇಲಾಗಿ ಆ ಮನೆಯಲ್ಲಿ ಯಾವ ವಸ್ತು ಕಳುವಾಗಿರಲಿಲ್ಲ. ಎಲ್ಲ ವಿಧಗಳಲ್ಲಿ ಯೋಚಿಸಿದ ಪೋಲೀಸರಿಗೆ ಅದು ಒಂದು ಮಿಷ್ಟರೀಯಂತೆ ನಿಂತುಹೋಯಿತು. ಅವರ ತನಿಖೆ ಮುಂದಕ್ಕೆ ನಡೆಯುವುದಕ್ಕೆ ಅವಕಾಶವೇ ಇಲ್ಲದಂತೆ ಹೋಯಿತು.)

**********************************

(ತಮ್ಮ ಮನುಷ್ಯ ಸುಲಭವಾಗಿ ಗೊಂಬೆಗಳನ್ನು ಜಮೀನ್ದಾರನ ಮನೆಯಲ್ಲಿ ಸೇರಿಸಿ ಬರುವುದು ತಪಸ್ವಿಬಾಬಾಗೆ ಸಂತೋಷವಾಯಿತು. ಆ ಗೊಂಬೆಗಳಿಂದ ಆ ಮಗುವಿನ ರಹಸ್ಯ ಯಾರಿಗೂ ತಿಳಿಯದಂತೆ ಮಾಡಬಹುದು. ಒಂದುವೇಳೆ ಯಾರಾದರೂ ಆ ಮಗುವಿನ ರಹಸ್ಯವನ್ನು ತಿಳಿಯಬೇಕೆಂದು ಪ್ರಯತ್ನಿಸಿದರೇ, ಅವರನ್ನು ಸಾಯಿಸುವುದಕ್ಕೂ ಸಹ ಆ ಗೊಂಬೆಗಳಲ್ಲಿ ಏರ್ಪಾಟನ್ನು ಜೋಡಿಸಲಾಗಿದೆ. ಮಂತ್ರಶಕ್ತಿಯಿಂದ ನಿರ್ಮಿತವಾದ ಆ ಗೊಂಬೆಗಳಿಂದ ಆ ದಿನ ರಾತ್ರಿ ಜಾತಕವನ್ನು ಬರೆಯಬೇಕೆಂದು ನೋಡಿದ ಮುದುಕನ ವಿಷಯ ತಿಳಿದುಕೊಂಡ ಬಾಬಾರವರು, ತಾನು ತನ್ನ ಮಂದಿರದಿಂದಲೇ ಮಂತ್ರ ಪ್ರಯೋಗ ಮಾಡಿ ಹೆಲಿಕ್ಯಾಪ್ಟರ್ ಗೊಂಬೆಯಿಂದ ಮುದುಕನನ್ನು ಸಾಯಿಸಿದ್ದಾನೆ. ಮುದುಕನು ಮರಣಿಸಿದ್ದಾನೆನ್ನುವ ವಾರ್ತೆಯನ್ನು ಕೇಳಿದ ಬಾಬಾ ಸಂತೋಷದಿಂದ ಈ ಪದ್ಧತಿಯಿಂದ ಏನಾದರೂ ಮಾಡಬಲ್ಲೆನು ಎಂದುಕೊಂಡಿದ್ದಾನೆ. ಅಡ್ಡ ಬಂದವರನ್ನು ಯಾರನ್ನಾದರೂ ಸಾಯಿಸಿ ಆ ಮಗುವಿನ ರಹಸ್ಯ ಯಾರಿಗೂ ತಿಳಿಯದಂತೆ ಮಾಡಿ, ಆ ಮಗುವಿಗೆ ಯುಕ್ತವಯಸ್ಸು ಬಂದ ನಂತರ ತನ್ನ ಕಾರ್ಯವನ್ನು ನೆರವೇರಿಸಿಕೊಳ್ಳಬೇಕೆಂದುಕೊಂಡಿದ್ದಾನೆ. ಭುವನೇಶ್ವರಿ ದೇವಾಲಯದಲ್ಲಿನ ವಜ್ರಗಳ ವಿಷಯದಲ್ಲಿ ಅಡ್ಡ ಬಂದು ಅವುಗಳನ್ನು ಸಿಗದಂತೆ ಮಾಡಿದ ರಾಜಯೋಗಾನಂದ ಸ್ವಾಮಿ ಈ ವಿಷಯದಲ್ಲಿ ಕೂಡ ಆತಂಕವಾಗಿ ತನ್ನ ಕಾರ್ಯಗಳನ್ನು ವಿಘ್ನ ಮಾಡುವುದಕ್ಕೆ ಸಿದ್ಧವಾಗಿ ಇದ್ದಾನೆಂದು ತಪಸ್ವಿಬಾಬಾರವರಿಗೆ ತಿಳಿಯದು. ಒಂದೇ ಒಂದು ಹತ್ಯೆಯಿಂದ ಸರ್ವವನ್ನು ಸಾಧಿಸಿದಂತೆ ಸಂತೋಷಪಟ್ಟಿದ್ದಾನೆ.)

**********************************

(ವಿಚಿತ್ರವಾಗಿ ಸಾಯಿಸಲ್ಪಟ್ಟಿರುವ ರಾವುಬಹುದೂರ್‌ರವರ ಸಂಬಂಧಿಯ ಮರಣ ರಾಘವನಿಗು, ರಾಜಯೋಗಾನಂದ ಸ್ವಾಮಿಗೂ ತಿಳಿಯಿತು. ಇದು ಮಗುವಿನ ವಿಷಯದಲ್ಲಿ ಬಾಬಾರವರ ಕೆಲಸವೇ ಆಗಿರುತ್ತದೆಂದು ಸ್ವಾಮಿ ಅಂದುಕೊಂಡಿದ್ದಾನೆ. ಮಗುವಿಗಾಗಿ ಪ್ರಯತ್ನಿಸಿದಾಗ, ಆ ಪ್ರಯತ್ನದಲ್ಲಿ ಆ ಮುದುಕನು ಆತಂಕಪಡಿಸಿದ್ದರೇ, ತಮ್ಮ ಸುಳಿವು ಹೊರಬರದಂತೆ ಇರುವುದಕ್ಕೆ ಮಾಡಿದ ಹತ್ಯೆಯೇ ಅದು ಆಗಿರುತ್ತದೆಂದುಕೊಂಡಿದ್ದಾನೆ. ವಾಸ್ತವವಾಗಿ ಹೇಗೆ ಮರಣಿಸಿರುವುದು, ಆತನ ಮರಣಕ್ಕೆ ಒಂದು ಗೊಂಬೆ ಕಾರಣವಾಗಿರುವುದು ರಾಜಯೋಗಾನಂದ ಸ್ವಾಮಿಗೂ ಸಹ ತಿಳಿಯದು. ಆದರೆ ಯಾವುದೋ ಒಂದು ವಿಧವಾಗಿ ತಪಸ್ವಿಬಾಬಾ ಮೇಲೆಯೇ ರಾಜಯೋಗಾನಂದ ಸ್ವಾಮಿಗೆ ಅನುಮಾನ ಬಂದಿತು. ಸ್ವಾಮಿಗೆ ಹೊರತು ಯಾರಿಗೂ ಬಾಬಾರವರ ಮೇಲೆ ಅನುಮಾನವೇ ಬರಲಿಲ್ಲ. ಬರುವುದಕ್ಕೂ ಸಹ ಆಗಲಿಲ್ಲ. ಪೊಲೀಸ್‌ರವರಿಗೂ ಸಹ ಯಾವ ಆಧಾರ ಸಿಗದೆ, ಯಾರನ್ನೂ ಅನುಮಾನಿಸದೇ ಇದ್ದಾರೆ. ಮಗುವಿನ ವಿಷಯದಲ್ಲಿ ತಾವು ಸ್ವಲ್ಪ ಕಾಲ ಕಾದು ನೋಡಬೇಕೆಂದು ಕೊಳ್ಳುವುದು ಮೋಸವಾಯಿತೆಂದು ರಾಜಯೋಗಾನಂದ ಸ್ವಾಮಿ ರಾಘವನೊಂದಿಗೆ ಹೇಳಿದ್ದಾನೆ. ಅಷ್ಟೇ ಅಲ್ಲದೆ ತಮ್ಮ ಅಶ್ರದ್ಧೆಯಿಂದಲೇ ಒಂದು ಪ್ರಾಣವನ್ನು ಬಾಬಾರವರು ಬಲಿ ತೆಗೆದುಕೊಂಡಿದ್ದಾರೆಂದು, ಇನ್ನು ಮುಂದೆ ಅಂತಹದ್ದು ನಡೆಯದಂತೆ ನೋಡಬೇಕೆಂದು, ರಾಜಯೋಗಾನಂದ ಸ್ವಾಮಿ ನಿರ್ಣಯಿಸಿಕೊಂಡು ರಾಘವನೊಂದಿಗೆ ಹೀಗೆ ಹೇಳಿದ್ದಾನೆ.)

**ರಾಜಯೋಗಾನಂದ :–** ರಾಘವಾ! ಇಂದಿನಿಂದ ನಾವು ಬಾಬಾರವರ ದುಷ್ಟಕಾರ್ಯವನ್ನು ತಡೆಗಟ್ಟುವುದಕ್ಕೆ ಪೂರ್ತಿ ಸಮರ್ಥತೆ ಹೊಂದಿರಬೇಕು.

**ರಾಘವ :–** ಸ್ವಾಮೀ! ನಾವು ಈ ವಿಷಯದಲ್ಲಿ ನಮ್ಮ ಪ್ರಾಣ ಕೊಡುವುದಕ್ಕಾಗಲೀ ಸಂಸಿದ್ಧವಾಗಿ ಇದ್ದೇವೆ. ಇದರಲ್ಲಿ ಯಾವ ಅನುಮಾನ ಬೇಡವೆಂದು ಮನವಿ ಮಾಡಿಕೊಳ್ಳುತ್ತಿದ್ದೇನೆ. ನೀವು ಏನು ಹೇಳಿದರೂ ಅದು ಮಾಡುವುದಕ್ಕೆ ಹಿಂಜರಿಯುವು ದಿಲ್ಲ.

**ರಾಜಯೋಗಾನಂದ :–** ನೀನು ಸಂಸಿದ್ಧವಾಗಿ ಇದ್ದೀಯೆಂದು ಹೇಳಿದರೂ, ನಾನೇ ನೀನು ಹೀಗೆ ಮಾಡೆಂದು ಹೇಳಲಾರದೆ ಹೋಗುತ್ತಿದ್ದೇನೆ. ಆದರೆ ಆಕಡೆ ನಡೆಯುವ ಅನ್ಯಾಯವನ್ನು ನೋಡಿ ಹೇಳದಂತೆ ಇರಲಾರದೇ ಹೋಗುತ್ತಿದ್ದೇನೆ.

**ರಾಘವ :–** ಸ್ವಾಮೀ! ನಿಮ್ಮ ಆಜ್ಞೆಯೇ ನಮಗೆ ಶಿರೋಧಾರ್ಯವಾದಾಗ, ನಿಮ್ಮ ಸೇವೆಯೇ ನನಗೆ ಭಾಗ್ಯವಾದಾಗ, ನಿಮ್ಮ ಕಾರ್ಯಸಾಧನೆಗಾಗಿ ನನ್ನ ಪ್ರಾಣವನ್ನಾದರೂ ಕೊಡುವುದಕ್ಕೆ ನಾನು ಸಿದ್ಧವಾಗಿ ಇರುವಾಗ, ನೀವು ನನ್ನೊಂದಿಗೆ ಹೇಳುವುದಕ್ಕೆ ಏಕೆ ಸಂಶಯಪಡುತ್ತಿದ್ದೀರ. ನನ್ನ ಮೇಲಿನ ಪ್ರೇಮದಿಂದ ನನಗೆ ನೀವೆಂದುಕೊಂಡ ಜವಾಬ್ದಾರಿಯನ್ನು ಒಪ್ಪಿಸದೆ ಹೋಗುತ್ತೀರ. ಯಾವ ಕಷ್ಟವನ್ನಾದರೂ ಎದುರಿಸುವ ಶಕ್ತಿ ತಮ್ಮಿಂದಲೇ ನನಗೆ ಲಭಿಸಿದೆ. ಆದ್ದರಿಂದ ತಾವು ಸಂಶಯಪಡದೆ ನಾನು ಮಾಡಬೇಕಾದ ಆ ಕೆಲಸ ಏನೋ ಹೇಳಿ.

**ರಾಜಯೋಗಾನಂದ :–** ನಿನ್ನ ಮೇಲೆ ನನಗೆ ಆ ನಂಬಿಕೆ ಇದೆ. ನೀನು ಮಾಡಬೇಕಾದ ಕೆಲಸಕ್ಕಿಂತ ಮೊದಲು ನೀನು ತಿಳಿದುಕೊಳ್ಳಬೇಕಾದ ವಿಷಯ ಸ್ವಲ್ಪ ಇದೆ. ತಪಸ್ವಿ ಬಾಬಾರವರು ಒಬ್ಬ ದೊಡ್ಡ ಸ್ವಾಮೀಜೀಯಾಗಿ ಚಲಾವಣೆ ಆಗುತ್ತಾ, ಎಷ್ಟೋ ಜನರಿಂದ ಪ್ರಶಂಸಿಸಲ್ಪಡುತ್ತಿದ್ದರೂ, ಆತನ ಹತ್ತಿರ ಅನೇಕ ಧನರಾಶಿಗಳಿದ್ದರೂ, ಹೊರಗಿನ ಪ್ರಪಂಚದಲ್ಲಿ ತನ್ನ ಮಾತು ವೇದವಾಕ್ಯವಾಗಿ ಚಲಾವಣೆಯಾಗುತ್ತಿದ್ದರೂ, ಮಾಯೆಗೆ ವಶನಾಗಿ ಅದು ಪ್ರೇರೇಪಿಸಿದ ಆಸೆ ಎನ್ನುವ ಗುಣದಲ್ಲಿ ಪೂರ್ತಿ ಮುಳುಗಿರುವವನಾಗಿ, ವಜ್ರಗಳನ್ನು ಅಪಹರಿಸಬೇಕೆಂದು ಇಲ್ಲಿಯವರೆಗು ಪ್ರಯತ್ನಿಸುವುದೂ, ಅದು ಭಂಗವಾಗಿ ಹೋಗುವುದು ನಡೆದಿದೆ. ಆ ಪ್ರಯತ್ನ ಭಂಗವಾದರೂ ಸ್ವಲ್ಪವಾದರೂ ಯೋಚಿಸದೆ, ಭೂಮಂಡಲಕ್ಕೇ ಅಧಿಪತಿ ಆಗಬೇಕೆನ್ನುವ ಆಸೆಯಿಂದ ಎಷ್ಟೋ ನೀಚ ಕಾರ್ಯಗಳನ್ನು ಮಾಡುತ್ತಾ, ಹಿಂಸಾ ಮಾರ್ಗವನ್ನು ಅವಲಂಭಿಸಿ ತನ್ನ ಅನುಚರರೊಂದಿಗೂ ಮತ್ತು ತನ್ನ ಅಧೀನದಲ್ಲಿರುವ ದುಷ್ಟ ಶಕ್ತಿಗಳೊಂದಿಗೂ ಇಂತಹ ನೀಚವಾದ ಕೆಲಸಗಳನ್ನು ಮಾಡಿಸುತ್ತಾ, ತನಗೇನು ತಿಳಿಯದಂತೆ ಪ್ರಪಂಚಕ್ಕೆ ತಾನು ಕಾಣಿಸುತ್ತಿದ್ದಾನೆ. ತನ್ನ ಅನುಚರರೊಂದಿಗೆ ಮಾಡುವ ಕೆಲಸಗಳನ್ನು ಬಾಹ್ಯವಾಗಿ ನಾವು ತಡೆಗಟ್ಟಿ ಭಂಗ ಮಾಡಬಹುದು. ಆದರೆ ಆತನ

ಮಂತ್ರಶಕ್ತಿಗಳಿಂದ ಕೆಲಸ ಮಾಡುವ ಹಾವಳಿಯನ್ನು ಅಹರ್ನಿಶೆಗಳು ನಾವು ಭಂಗ ಮಾಡಲಾರೆವು.

ಆತನು ಯಾವ ಮಗುವಿಗಾಗಿ ಪ್ರಯತ್ನ ಮಾಡುತ್ತಿದ್ದಾನೋ, ಆ ಮಗು ಕನ್ಯಾರಾಶಿಯಲ್ಲಿ ಬುಧಗ್ರಹ ಮೊದಲನೆ ಪಾದದಲ್ಲಿ ಇರುವಾಗ ಅಷ್ಟಗ್ರಹ ಕೂಟಮಿ ದಿನದಂದು ಹುಟ್ಟಿದ್ದಾನೆ. ಆದ್ದರಿಂದ ಕ್ಷುದ್ರಶಕ್ತಿಗಳು ಆ ಬಾಲಕನನ್ನು ಸುಲಭವಾಗಿ ಆಕರ್ಷಿಸುತ್ತವೆ. ಆ ಬಾಲಕನಿಗಿರುವ ಪ್ರತ್ಯೇಕತೆಯಿಂದ ತಪಸ್ವಿಬಾಬಾರವರು ತನ್ನ ಅಧೀನದಲ್ಲಿರುವ ಸೂಕ್ಷ್ಮರೂಪಶಕ್ತಿಗಳಿಂದ ಆ ಬಾಲಕನನ್ನು ಸುಲಭವಾಗಿ ತನ್ನ ಅಧೀನದೊಳಗೆ ತಂದುಕೊಳ್ಳುತ್ತಾನೆ. ಆ ಬಾಲಕನು ಬಾಬಾರವರ ಅಧೀನದೊಳಗೆ ಹೋದ ನಂತರ ನಾವು ಬಾಬಾರವರನ್ನು ಎದುರಿಸುವುದು ಬಹಳ ಕಷ್ಟವಾಗುತ್ತದೆ. ಎಷ್ಟು ಜನರ ಪ್ರಾಣಗಳೊಂದಿಗಾದರೂ ಆತನು ಚೆಲ್ಲಾಟ ಆಡುತ್ತಾನೆ. ಪ್ರಪಂಚವೆಲ್ಲದಕ್ಕೂ ತಾನೇ ಅಧಿಪತಿ ಎನಿಸಿಕೊಳ್ಳುವುದಕ್ಕೆ ಎಷ್ಟು ಪ್ರಾಣಗಳಾದರೂ ಆತನಿಗೆ ಲೆಕ್ಕವಿಲ್ಲ. ನಾವು ಆಗ ಆತನನ್ನು ನಿರ್ಬಲನನ್ನಾಗಿ ಮಾಡಬೇಕೆಂದರೆ ನಮ್ಮಿಂದ ಆಗದಿರಬಹುದು. ಆದ್ದರಿಂದ ಆತನು ಅಷ್ಟು ದೂರ ಹೋಗುವುದಕ್ಕಿಂತ ಮೊದಲೇ ಆತನನ್ನು ನಾವು ತಡೆಗಟ್ಟಬೇಕು. ಅದಕ್ಕೆ ನಾನೊಂದು ಆಲೋಚನೆ ಮಾಡಿಟ್ಟಿದ್ದೇನೆ. ಆ ಯೋಚನೆ ಒಂದೇ ನಮಗೀಗ ಮಾರ್ಗ.

ಅದು ಏನೆಂದರೆ! ಬಾಬಾರವರ ಆಸೆಗೆ ಮುಖ್ಯಸೂತ್ರವಾದ ಬಾಲಕನು ಅಷ್ಟಗ್ರಹ ಕೂಟಮಿ ದಿನ ಹುಟ್ಟಿದ್ದಾನಲ್ಲವೆ! ಆ ದಿನ ರಾಹುವು ನೊಂದಿಗೆ ಉಳಿದ ಏಳು ಗ್ರಹಗಳು ಸೇರಿರುವುದರಿಂದ ಎಂಟು ಗ್ರಹಗಳ ಕೂಟಮಿ ಏರ್ಪಟ್ಟಿದೆ. ಆ ಗ್ರಹಗಳ ಕೂಟಮಿಗೆ ಮುಖ್ಯಕಾರಕನು ರಾಹುವು. ಆ ಗ್ರಹಕೂಟಮಿ ಇರುವ ಶಕ್ತಿ ಆ ಬಾಲಕನಲ್ಲಿ ನಿಕ್ಷಿಪ್ತವಾಗಿ ಇದೆ. ಆ ಬಾಲಕನಲ್ಲಿ ನಿಕ್ಷಿಪ್ತವಾಗಿರುವ ಶಕ್ತಿಗೆ ಮುಖ್ಯಕಾರಕನು ರಾಹು. ಇದೆಲ್ಲವೂ ಏಕೆ ಹೇಳುತ್ತಿದ್ದೀನೆಂದರೆ! ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕೆನ್ನುವುದು ಸೂತ್ರ. ಆದ್ದರಿಂದ ಅವರು ಮಾಡುತ್ತಿರುವ ಕಾರ್ಯವನ್ನು ನಾವು ಭಂಗ ಮಾಡಬೇಕೆಂದರೆ, ಅದಕ್ಕೆ ತಕ್ಕ ಉಪಾಯ ಅವಶ್ಯಕ. ಆದ್ದರಿಂದ ಮೊದಲು ನವಗ್ರಹಗಳಲ್ಲಿನ ರಾಹು ವೊಂದರ ಕಿರಣಗಳನ್ನು ನಮ್ಮ

ಮೇಲೆ ಹೆಚ್ಚಾಗಿ ಬೀಳುವಂತೆ ಮಾಡಿಕೊಳ್ಳಬೇಕು. ಆಗ ನಾವು ಮಾಡುವ ಕೆಲಸಗಳು ನಮಗೆ ಸುಲಭವಾಗುತ್ತದೆ. ತಪಸ್ವಿಬಾಬಾರವರು ಮಾಡುವ ಕೆಲಸಗಳು ಆತನಿಗೆ ಕಷ್ಟವಾಗುತ್ತವೆ. ಖಗೋಳದಲ್ಲಿನ ರಾಹು ಗ್ರಹ ವೊಂದರ ಕಿರಣಗಳನ್ನು ಹೆಚ್ಚಾಗಿ ನಮ್ಮ ಮೇಲೆ ಬೀಳುವಂತೆ ಮಾಡಿಕೊಳ್ಳುವುದಕ್ಕೆ ತಕ್ಕಂತಹ ವ್ಯಕ್ತಿ ಅಗತ್ಯ. ಅದಕ್ಕೆ ಸರಿಹೋಗುವ ವ್ಯಕ್ತಿ ನೀನು ಒಬ್ಬನೇ ಇಲ್ಲಿದ್ದೀಯ.

(ಸ್ವಾಮಿ ಮಾತುಗಳನ್ನು ಕೇಳಿದ ರಾಘವನಿಗೆ, ತಾನು ಒಬ್ಬನೇ ಆ ಕೆಲಸಕ್ಕೆ ಅರ್ಹನೆನ್ನುವ ಮಾತು ಸಂತೋಷ ಉಂಟುಮಾಡಿತು. ಕೋಡಲೇ ಹೀಗೆ ಹೇಳಿದ್ದಾನೆ.)

**ರಾಘವ :–** ಹೇಳಿರಿ ಸ್ವಾಮಿ ನಾನೇನು ಮಾಡಬೇಕು, ರಾಹು ಗ್ರಹವೊಂದರ ಕಿರಣಗಳನ್ನು ಹೇಗೆ ಆಕರ್ಷಿಸಿಕೊಳ್ಳಬೇಕು?

**ರಾಜಯೋಗಾನಂದ :–** ನೀನು ಎರಡನೆ ಮದುವೆ ಮಾಡಿಕೊಳ್ಳಬೇಕು.

(ಸ್ವಾಮಿರವರ ಮಾತು ಕೇಳಿದ ಕೂಡಲೇ ರಾಘವನಿಗೆ ಸ್ವಲ್ಪ ಆಶ್ಚರ್ಯ ವಾಯಿತು. ತನ್ನ ಎರಡನೆ ಮದುವೆಗು ಈ ಕಾರ್ಯಕ್ಕೂ ಸಂಬಂಧವೇನೋ ಅರ್ಥವಾಗಲಿಲ್ಲ. ಸ್ವಾಮಿಯವರು ನಿರ್ಣಯಿಸಿ ಹೇಳಿದ ಮಾತನ್ನು ತೆಗೆದುಹಾಕದ ತಾನು ಎರಡನೆ ಮದುವೆಯಲ್ಲಿನ ರಹಸ್ಯವೇನೋ ತಿಳಿದುಕೊಳ್ಳಬೇ ಕೆಂದು ಸ್ವಾಮಿಯೊಂದಿಗೆ ಹೀಗೆ ಹೇಳಿದ್ದಾನೆ.)

**ರಾಘವ :–** ಸ್ವಾಮೀ! ತಮ್ಮ ಮಾತಿಗೆ ನನ್ನ ಪ್ರಾಣವನ್ನಾದರೂ ಕೊಡುವುದಕ್ಕೆ ಸಂಸಿದ್ಧವಾಗಿರುವ ನಾನು, ನಿಮ್ಮ ಆಜ್ಞೆಯಪ್ರಕಾರ ಎರಡನೆ ಮದುವೆಯನ್ನು ಮಾಡಿಕೊಳ್ಳುವುದರಲ್ಲಿ ನನಗೆ ಏನೂ ತೊಂದರೆ ಇಲ್ಲ. ಆದರೆ ನನ್ನ ಎರಡನೆ ಮದುವೆಗು, ನಮ್ಮ ಕಾರ್ಯಕ್ಕೂ ಸಂಬಂಧವೇನು ಎಂದು ಸಂಶಯ ಏರ್ಪಟ್ಟಿದೆ. ಆದ್ದರಿಂದ ಆ ಸಂಶಯವನ್ನು ತೀರಿಸಬೇಕೆಂದು ಪ್ರಾರ್ಥಿಸುತ್ತಿದ್ದೇನೆ.

**ರಾಜಯೋಗಾನಂದ :–** ತಪಸ್ವಿಬಾಬಾರವರ ದುಷ್ಟ ಕಾರ್ಯಗಳನ್ನು ಎದರಿಸುವುದಕ್ಕೆ ನಿನ್ನ ಮೇಲೆ ರಾಹುಗ್ರಹವೊಂದರ ಕಿರಣಗಳನ್ನು ಹೆಚ್ಚಾಗಿ ಬೀಳುವಂತೆ ಮಾಡಿ

ಕೊಳ್ಳಬೇಕೆಂದು ಅದಕ್ಕೆ ನೀನು ಒಬ್ಬನೇ ಅರ್ಹನೆಂದು ತಿಳಿಸಿದ್ದೀನಲ್ಲವೆ! ಆದ್ದರಿಂದ ನೀನು ಮದುವೆ ಮಾಡಿಕೊಳ್ಳಬೇಕಾದ ಅವಶ್ಯಕತೆ ಏರ್ಪಟ್ಟಿದೆ. ಭೂತಕನ್ನಡಿಯನ್ನು ಸೂರ್ಯನಕಾಂತಿಯಲ್ಲಿ ಇಟ್ಟಾಗ ಅದರ ಕೆಳಗೆ ಒಂದು ಕೇಂದ್ರದಲ್ಲಿ ಸೂರ್ಯಕಿರಣಗಳೆಲ್ಲವೂ ಒಂದು ಕಡೆ ಸೇರುತ್ತವೆ. ಹಾಗೆ ಸೇರುವು ದರಿಂದ ಅಲ್ಲಿ ಬಿಸಿ ಏರ್ಪಟ್ಟು ಬೆಂಕಿ ಹುಟ್ಟಿ ಅಲ್ಲಿರುವ ವಸ್ತು ಸುಟ್ಟುಹೋಗುವುದಕ್ಕೆ ಅವಕಾಶವಿದೆ. ಭೂತಕನ್ನಡಿಯೊಂದರ ಕಾರಣದಿಂದ ಸೂರ್ಯ ಕಿರಣಗಳೆಲ್ಲವೂ ಒಂದು ಕಡೆ ಸೇರುವುದಕ್ಕೆ ಅವಕಾಶ ಏರ್ಪಟ್ಟಂತೆ, ನಿನ್ನ ಎರಡನೆ ಮದುವೆಯಿಂದ ರಾಹು ಗ್ರಹವೊಂದರ ಕಿರಣಗಳು ನಿನ್ನ ಮೇಲೆ ಹೆಚ್ಚಾಗಿ ಪ್ರಸರಿಸುತ್ತವೆ. ಇನ್ನೊಂದು ಉದಾಹರಣೆಯನ್ನು ಸಹ ತಿಳಿಸುತ್ತೇನೆ ಕೇಳು. ಮತ್ತಿನ ಪಾನೀಯಕ್ಕೆ ಶುಕ್ರಗ್ರಹ ಅಧಿಪತಿ. ಶುಕ್ರಗ್ರಹ ಶತ್ರುವಾಗಿ ಇರುವವರೆಗು ಮತ್ತಿನ ಪಾನೀಯವನ್ನು ಕುಡಿದರೆ ಅದು ಶರೀರದಲ್ಲಿ ಇರುವವರೆಗು ಶುಕ್ರಗ್ರಹ ಕಿರಣಗಳು ಅವರ ಮೇಲೆ ಹೆಚ್ಚಾಗಿ ಪ್ರಸರಿಸಿ ಅವರಿಗೆ ಕೆಡಕನ್ನು ಮಾಡುತ್ತದೆ. ಅಂತಹವರಿಗೆ ಕುಡಿಯುವುದರಿಂದಲೇ ಹೆಚ್ಚಿನ ಧನ ನಷ್ಟವಾಗುತ್ತದೆ. ಅದೇ ಶುಕ್ರನು ಮಿತ್ರ ಗ್ರಹವಾದರೇ ಕುಡಿಯದವನಿಗಿಂತ ಕುಡಿದವನ ಮೇಲೆಯೇ ಹೆಚ್ಚಿನ ಶುಕ್ರಗ್ರಹ ಕಿರಣಗಳು ಬಿದ್ದು ಅವನಿಗೆ ಧನ ಕೈಗೂಡುತ್ತದೆ. ಆದ್ದರಿಂದ ಕುಡಿದು ಹಾಳಾಗಿರುವವರನ್ನು, ಬಡವರಾದವರನ್ನು ನೋಡುತ್ತಿದ್ದೇವೆ. ಹಾಗೆಯೇ ಕುಡಿದರೂ ಧನಿಕರಾದವರನ್ನು ಪ್ರತ್ಯಕ್ಷವಾಗಿ ನೋಡುತ್ತಿದ್ದೇವೆ.

ಮುಖ್ಯವಾಗಿ ಹೇಳುವುದೇನೆಂದರೇ! ಎರಡನೆ ಮದುವೆಗೆ ರಾಹು ಅಧಿಪತಿ. ದುಂದುಭಿಯನ್ನು ನೀನು ಮದುವೆ ಮಾಡಿಕೊಳ್ಳುವ ಸಮಯದಲ್ಲಿ ನಾನು ನಿನಗೆ ಎರಡನೆ ಮದುವೆ ಯೋಗವಿದೆಯೆಂದು ಮೊದಲೇ ಹೇಳಿದ್ದೇನೆ. ನೀನು ತುಲಾ ಲಗ್ನದಲ್ಲಿ ಹುಟ್ಟಿದವನು. ನಿನ್ನ ಜಾತಕದಲ್ಲಿ ಏಳನೇ ಸ್ಥಾನದಲ್ಲಿ ರಾಹುಗ್ರಹ ಇರುವುದರಿಂದ ಪ್ರತ್ಯೇಕತೆ ಇರುವ ಹೆಂಡತಿ ನಿನಗೆ ಲಭಿಸಿದ್ದಾಳೆ. ಆಕೆಯೊಂದಿಗೆ ವಿಷ ಸರ್ಪಗಳು ಸ್ನೇಹದಿಂದ ಇರುವುದು ನಿನಗೆ ತಿಳಿದ ವಿಷಯವೇ. ರಾಹು ವಿಷಕ್ಕು, ವಿಷ ಸರ್ಪಗಳಿಗು ಅಧಿಪತಿ ಆಗಿರುವುದರಿಂದ ನಿನ್ನ ಹೆಂಡತಿಗೂ ಸಹ ವಿಷ ಸರ್ಪಗಳು ಸ್ನೇಹವಾಗಿ ಇರುತ್ತವೆ. ರಾಹುಗ್ರಹ ಏಳನೇ ಸ್ಥಾನದಲ್ಲಿ

ಇರುವುದರಿಂದ ನಿನ್ನ ಜೀವನದಲ್ಲಿ ಎರಡನೆ ಮದುವೆ ತಪ್ಪದೆ ನಡೆಯಬೇಕಾಗಿದೆ. ನೀನು ಎರಡನೆ ಮದುವೆ ಮಾಡಿಕೊಳ್ಳುವುದರಿಂದ ನಿನಗೆ ರಾಹುಗ್ರಹ ಕಿರಣಗಳು ಹೆಚ್ಚಾಗುತ್ತವೆ. ಅಷ್ಟಗ್ರಹ ಕೂಟಮಿ ದಿನದಂದು ಕೇತು ಹೊರತು ರಾಹುನೊಂದಿಗೆ ಉಳಿದ ಗ್ರಹಗಳೆಲ್ಲವೂ ಬೆರೆತಿರುವುದರಿಂದ, ಆ ದಿನ ಏರ್ಪಟ್ಟಿರುವ ಶಕ್ತಿ ಎಲ್ಲದಕ್ಕೂ ರಾಹುವೇ ಅಧಿಪತಿ. ಆ ದಿನದಂದು ಹುಟ್ಟಿದ ಬಾಲಕನಿಗೆ ಉಂಟಾಗುವ ಮಹತ್ತರ ಶಕ್ತಿಗಳೆಲ್ಲವೂ ರಾಹುಗ್ರಹವೊಂದರ ಜ್ಞಾಪಕವಿಲ್ಲದೆ ಉಂಟಾಗುವುದಿಲ್ಲ. ಆದ್ದರಿಂದ ಆ ಶಕ್ತಿಗಳನ್ನು ನಿರೋಧಿಸುವ ಕಾರ್ಯವನ್ನು ಕೈಹಿಡಿದ ನಾವು ರಾಹುವೊಂದರ ಕಿರಣಗಳನ್ನು ಆಕರ್ಷಿಸಬೇಕಾಗಿದೆ. ಇಷ್ಟು ಬಲವಾದ ಕಾರಣವಿರುವುದರಿಂದ ನಿನ್ನನ್ನು ಎರಡನೆ ಮದುವೆ ಮಾಡಿಕೊಳ್ಳಲು ಹೇಳಿದ್ದೇನೆ.

(ಸಾವಧಾನವಾಗಿ ಕೇಳಿದ ರಾಘವನಿಗೆ ವಿಷಯವೆಲ್ಲಾ ಅರ್ಥವಾಯಿತು. ಜ್ಯೋತಿಷ್ಯ ಶಾಸ್ತ್ರಜ್ಞರು ಸಹ ಹೇಳಲಾರದ ಗ್ರಹಗಳ ವಿಷಯಗಳನ್ನು ಸುಲಭವಾಗಿ ಅರ್ಥವಾಗುವಂತೆ ಹೇಳಿದ ಸ್ವಾಮಿ ಕಡೆ ನೋಡಿ ರಾಘವ ಹೀಗೆ ಹೇಳಿದ್ದಾನೆ.)

**ರಾಘವ :–** ಸ್ವಾಮೀ. ನನ್ನ ಎರಡನೆ ಮದುವೆಗೆ ವಧು ಯಾರೋ ನೀವೇ ನಿರ್ಣಯಿಸಿ, ನಿಮ್ಮ ಇಷ್ಟ ಪ್ರಕಾರವೇ ಮಾಡಬೇಕೆಂದು ಕೋರುತ್ತಿದ್ದೇನೆ.

(ರಾಘವ ತನ್ನ ಎರಡನೆ ಮದುವೆ ವಿಷಯ ಸ್ವಾಮಿರವರಿಗೇ ಒಪ್ಪಿಸಿ ತನ್ನ ಭಕ್ತಿಯನ್ನು ಮತ್ತೊಂದುಸಲ ನಿರೂಪಿಸಿಕೊಂಡನು. ರಾಘವ, ಸ್ವಾಮಿ ಹೇಳಿದಂತೆ ನಡೆದುಕೊಳ್ಳುತ್ತೇನೆಂದು ಹೇಳಿರುವುದಕ್ಕೆ ರಾಜಯೋಗಾನಂದ ಸ್ವಾಮಿ ಸಂತೋಷಿಸಿ ಮತ್ತೊಂದು ವಿಷಯವನ್ನು ತಿಳಿಸುತ್ತಾ ಹೀಗೆ ಹೇಳಿದ್ದಾನೆ.)

**ರಾಜಯೋಗಾನಂದ :–** ನೀನು ಎರಡನೆ ಮದುವೆ ಮಾಡಿಕೊಳ್ಳಬೇಕಾದ ವಧುವಿನ ಜಾತಕ ಸಹ ಸ್ವಲ್ಪ ಪ್ರತ್ಯೇಕತೆ ಹೊಂದಿರಬೇಕು. ಆಕೆ ಜಾತಕದಲ್ಲಿ ಐದನೆ ಸ್ಥಾನ ಶುಭಸ್ಥಾನವಾಗಿ, ಆ ಸ್ಥಾನ ಶನಿ ಪಕ್ಷದ್ದಾಗಿ ಇರಬೇಕು. ಆ ಐದನೆ ಸ್ಥಾನ ಬುಧಗ್ರಹವೊಂದರ ಸ್ವಸ್ಥಾನಗಳಾದ ಮಿಥುನ, ಕನ್ಯಲಗ್ನಗಳಾಗಿ ಇರಬೇಕು. ಹಾಗೆ ಇರುವುದರಿಂದ ಒಳ್ಳೆಯ ಸಂತಾನವತಿಯಾಗಿದ್ದು, ಆ ಸಂತಾನ ಮಂತ್ರ ತಂತ್ರ

ಶಕ್ತಿಗಳಿಗೆ ಅತೀತವಾದ ವ್ಯಕ್ತಿಯಿಂದ ಉಂಟಾಗುತ್ತದೆನ್ನುವ ಜ್ಯೋತಿಷ್ಯ ಸೂತ್ರ ಇದೆ. ನಿನ್ನ ಆಯುಸ್ಸುಗೆ ಎಂತಹ ಮುಪ್ಪು ಬರಬಾರದೆಂದರೇ ಸೌಭಾಗ್ಯ, ಸಂತಾನ ಭಾಗ್ಯ ಇರುವ ಸ್ತ್ರೀ ಹೆಂಡತಿಯಾಗುವುದು ಮುಖ್ಯ. ಆಕೆ ಸಂತಾನಕ್ಕೆ ಗಂಡ ಕಾರಣವಾಗುವುದರಿಂದ ಗಂಡನ ಆಯುಸ್ಸುಗೆ ತೊಂದರೆ ಇರುವುದಿಲ್ಲ. ಹೆಂಡತಿಯ ಐದನೆ ಸ್ಥಾನ ಬುಧಸ್ಥಾನವಾಗುವುದರಿಂದ, ಆಕೆಗೆ ಉಂಟಾಗುವ ಸಂತಾನಕ್ಕೆ ಕಾರಕನಾದ ಗಂಡ ಮಂತ್ರತಂತ್ರ ಶಕ್ತಿಗಳನ್ನು ಸುಲಭವಾಗಿ ಜಯಿಸುವವನಾಗುತ್ತಾನೆ.

ಆದ್ದರಿಂದ ಆ ಜಾತಕವಿರುವ ಹುಡುಗಿ ನಮಗೆ ಅವಶ್ಯಕ. ಆ ಜಾತಕವಿರುವ ಹುಡುಗಿಯನ್ನು ನಾವು ಹುಡುಕಬೇಕಾಗಿರುವಾಗ, ನಮಗೆ ಅಂತಹ ಕೆಲಸವಿಲ್ಲದಂತೆ, ಆಕೆ ಇಲ್ಲೇ ಇರುವುದು ನಮ್ಮ ಅದೃಷ್ಟ. ಜಾತಕರೀತ್ಯಾ ಎಲ್ಲ ವಿಧಗಳಲ್ಲಿ ನಮಗೆ ಅನುಕೂಲವಾದ ಹುಡುಗಿ ನಮ್ಮ ಹತ್ತಿರವಿರುವ ರಾಧೇಶ್ವರಿಯೇ. ಆದ್ದರಿಂದ ನೀನು ಆಕೆಯನ್ನು ಮದುವೆ ಮಾಡಿಕೊಳ್ಳಬೇಕಾಗಿರುತ್ತದೆಂದು ತಿಳಿಸುತ್ತಿದ್ದೇನೆ.

**ರಾಘವ :–** ಈ ವಿಷಯ ನಾನು ಹೇಳುವುದಕ್ಕಿಂತ ನೀವೇ ದುಂದುಭಿಯೊಂದಿಗೆ ಹೇಳುವುದು ಒಳ್ಳೆಯದೆಂದುಕೊಳ್ಳುತ್ತೇನೆ. ಸಹಜವಾಗಿ ಸ್ತ್ರೀಯರಿಗೆ ಈ ವಿಷಯದಲ್ಲಿ ಅಸೂಯೆ ಭಾವನೆ ಇರುತ್ತದೆ. ಆದರೆ ದುಂದುಭಿ ಹಾಗಲ್ಲವೆಂದುಕೊಳ್ಳುತ್ತೇನೆ. ಆದರೂ ನೀವೇ ಹೇಳುವುದು ಒಳ್ಳೆಯದು.

**ರಾಜಯೋಗಾನಂದ :–** ಸರಿ ರಾಘವ, ಈ ವಿಷಯವನ್ನು ನಾನೇ ದುಂದುಭಿ ಯೊಂದಿಗೆ ಹೇಳುತ್ತೇನೆ. ದುಂದುಭಿ ಎಲ್ಲರಂತಹ ಮನುಷ್ಯಳಲ್ಲ. ಮುಂಬರುವ ಕಾಲದಲ್ಲಿ ಆಕೆ ಪಾತ್ರ ಬಹಳ ಇದೆ. ಆಕೆ ನಿನ್ನೊಂದಿಗೆ ಸಮಾನವಾಗಿ ಜ್ಞಾನವನ್ನು ತಿಳಿದುಕೊಂಡಿದ್ದಾಳೆ. ಆಕೆಗೆ ಈ ವಿಷಯವನ್ನು ಹೇಳುವುದರಲ್ಲಿ ಕಷ್ಟವಿಲ್ಲ. ಆಕೆ ಈ ವಿಷಯದಲ್ಲಿ ಪೂರ್ತಿ ಸಹಕರಿಸುತ್ತಾಳೆ ಆದರೆ ರಾಧೇಶ್ವರಿಗೆ ಹೇಳುವುದರಲ್ಲಿ ನಮಗೆ ಸ್ವಲ್ಪ ಕಷ್ಟವಿರುತ್ತದೆ. ಏಕೆಂದರೆ! ಆಕೆ ತನ್ನ ಜೀವನದಲ್ಲಿ ಮದುವೆಯೇ ಮಾಡಿಕೊಳ್ಳಬಾರದೆಂದು ನಿಶ್ಚಯಿಸಿಕೊಂಡಿದ್ದಾಳೆ. ಆದ್ದರಿಂದ ಈ ವಿಷಯ ಸವಿವರವಾಗಿ ಎಲ್ಲವೂ ವಿವರಿಸಿ ಹೇಳಬೇಕಾಗಿರುತ್ತದೆ. ಈ ವಿಷಯ ಪೂರ್ತಿ ತಿಳಿದರೇ ಆಕೆ ನಮಗೆ ಸಹಕರಿಸುತ್ತಾಳೆ. ಈ ವಿಷಯವನ್ನು ನಾಳೆ ಆಕೆಗೆ ವಿವರಿಸಿ

ಹೇಳುತ್ತೇನೆ. ಅಷ್ಟೇ ಅಲ್ಲದೆ ಈ ವಿಷಯದಲ್ಲಿ ದುಂದುಭಿ ಅಭಿಪ್ರಾಯವನ್ನು ಸಹ ತಿಳಿದುಕೊಳ್ಳುತ್ತೇನೆ.

**********************************

(ರಾವುಬಹದೂರ್ ತನ್ನ ಚಿಕ್ಕಪ್ಪನವರು ಮರಣಿಸುವುದು ಯಾವುದೋ ಅಶುಭವಾಗಿ ತಿಳಿದನು. ಮೇಲಾಗಿ ಆತನ ಮರಣ ಹೇಗೆ ನಡೆದಿದೆಯೋ ಯಾರಿಗೂ ಅರ್ಥವಾಗಲಿಲ್ಲ. ಈ ವಿಷಯವನ್ನು ತಿಳಿದುಕೊಳ್ಳುವುದಕ್ಕೆ ತನಗೆ ತಿಳಿದ ಜ್ಯೋತಿಷ್ಯನ ಹತ್ತಿರಕ್ಕೆ ರಾವುಬಹದೂರ್ ಹೋಗಬೇಕೆಂದುಕೊಂಡಿದ್ದಾನೆ. ಅಲ್ಲಿಗೆ ನೂರು ಕಿಲೋಮೀಟರ್‌ಗಳ ದೂರದಲ್ಲಿರುವ ಜ್ಯೋತಿಷ್ಯನ ಹತ್ತಿರಕ್ಕೆ ಹೋಗಬೇಕೆಂದುಕೊಂಡ ಜಮೀನ್ದಾರ ತನ್ನ ಸ್ನೇಹಿತನೊಂದಿಗೆ ಸಹ ಸೇರಿ ಹೊರಟು ಹೋಗಿದ್ದಾನೆ. ಅವರು ದಾರಿಯಲ್ಲಿ ಸುಮಾರು 80 ಕಿಲೋಮೀಟರ್‌ಗಳ ದೂರ ಪ್ರಯಾಣಿಸಿದ ನಂತರ ಅವರು ಪ್ರಯಾಣಿಸುವ ಕಾರಿನೊಂದರ ಮುಂದಿನ ಟೈರು ಹೊಡೆದುಹೋಯಿತು, ಕಾರು ಪಕ್ಕಕ್ಕೆ ಹೋಗಿ ಮರಕ್ಕೆ ಗುದ್ದಿಕೊಂಡಿತು. ಆ ವಿಧವಾಗಿ ಕಾರು ಅಪಘಾತಕ್ಕೆ ಗುರಿಯಾಗುವುದರಿಂದ ಕಾರಿನಲ್ಲಿರುವ ಜಮೀನ್ದಾರನ ಸ್ನೇಹಿತನು ಪೂರ್ತಿ ಗಾಯಗಳ ಪಾಲಾಗಿ ಮರಣಿಸುವುದು ನಡೆಯಿತು. ತನ್ನ ಚಿಕ್ಕಪ್ಪನ ಮರಣವನ್ನು ಕುರಿತು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸಿದ ಜಮೀನ್ದಾರನಿಗೆ, ತನ್ನ ಸ್ನೇಹಿತನ ಮರಣದಿಂದ ಏನೂ ಅರ್ಥವಾಗದಂತೆ ಹೋಯಿತು. ಆ ಬಾಲಕನನ್ನು ಮನೆಗೆ ತಂದುಕೊಂಡ ನಂತರ ತನಗೆ ಎಲ್ಲಾ ಅಶುಭಗಳೇ ನಡೆಯುತ್ತಿವೆಯೆಂದು ಮನಸ್ಸಿನಲ್ಲಿ ಅಂದುಕೊಂಡಿದ್ದಾನೆ. ಪ್ರಸ್ತುತ ಆಗ ಹಿಂದಕ್ಕೆ ಹೋಗಿ, ಜ್ಯೋತಿಷ್ಯನಾದ ತನ್ನ ಚಿಕ್ಕಪ್ಪ ಮರಣಿಸುವುದಕ್ಕು, ಈಗ ತನ್ನ ಸ್ನೇಹಿತನು ಮರಣಿಸುವುದಕ್ಕು ಏನಾದರೂ ತನಗೆ ತಿಳಿಯದ ಕಾರಣವಿದೆಯೇನೋ ಎಂದು ಯೋಚಿಸಿ, ಅದರ ವಿಷಯವನ್ನು ತಿಳಿದುಕೊಳ್ಳುವುದಕ್ಕೆ ಒಂದು ದಿನ ಜ್ಯೋತಿಷ್ಯನನ್ನು ತನ್ನ ಹತ್ತಿರಕ್ಕೇ ಕರೆದುಕೊಂಡು ಯಾರೂ ಇಲ್ಲದ ಸಮಯದಲ್ಲಿ ತನ್ನ ಮನಸ್ಸಿನಲ್ಲಿನ ವಿಷಯವನ್ನು ಜ್ಯೋತಿಷ್ಯನಿಗೆ ತಿಳಿಸಿದನು. ಆಗ ಆ ಜ್ಯೋತಿಷ್ಯನು ತನಗೆ ತಿಳಿದ ಗಣಿತವನ್ನು ನೋಡಿಕೊಂಡು, ತನ್ನ ಗಣಿತದ ಪ್ರಕಾರ ಮರಣಿಸಿದ ಇಬ್ಬರ ಮರಣಗಳು ಅಸಾಧಾರಣವಾಗಿ

ನಡೆದಿರುವವೇ ಎಂದು, ಅವರ ಮರಣದ ಹಿಂದೆ ಯಾರಿಗೂ ತಿಳಿಯದ ರಹಸ್ಯವಿದೆಯೆಂದು, ಆ ರಹಸ್ಯವನ್ನು ತಾನು ಸಹ ಹೇಳಲಾರೆನೆಂದನು. ಆ ಮಾತುಗಳನ್ನು ಕೇಳಿದ ಜಮೀನ್ದಾರ "ಅಸಲಾದ ಕಾರಣವನ್ನು ತಿಳಿದುಕೊಳ್ಳುವುದಕ್ಕೆ ಬೇರೇ ದಾರಿಯೇ ಇಲ್ಲವಾ" ಎಂದು ಕೇಳಿದಾಗ ಆ ಜ್ಯೋತಿಷ್ಯನು ಚೆನ್ನಾಗಿ ಯೋಚಿಸಿ ಹೀಗೆ ಹೇಳಿದ್ದಾನೆ.

**ಜ್ಯೋತಿಷ್ಯನು :–** ನಮ್ಮ ಗಣಿತಕ್ಕೂ ಸಹ ತಿಳಿಯದ ರಹಸ್ಯವನ್ನು ತಿಳಿದುಕೊಳ್ಳುವ ಏಕೈಕ ವ್ಯಕ್ತಿ ಒಬ್ಬರಿದ್ದಾರೆ. ಆತನೇ ರಾಜಯೋಗಾನಂದ ಸ್ವಾಮಿ, ಆದರೆ ಆತನು ಯಾರಿಗೂ ಭವಿಷ್ಯತ್ತನ್ನು ಕುರಿತು ಹೇಳುವುದಿಲ್ಲ.

**ಜಮೀಂದಾರ್ :–** ನನಗೆ ಬೇಕಾಗಿರುವುದು ಭವಿಷ್ಯತ್ತು ಅಲ್ಲ. ಪ್ರಸ್ತುತವಿರುವ ಆಪತ್ತು ಏನೋ ತಿಳಿದುಕೊಂಡು, ಅದರಿಂದ ಹೊರಬೀಳುವ ಉಪಾಯ.

**ಜ್ಯೋತಿಷ್ಯನು :–** ಹಾಗಾದರೇ ನಾನೇ ಆತನ ಹತ್ತಿರಕ್ಕೆ ಹೋಗಿ ಕೇಳಿ ತಿಳಿದುಕೊಳ್ಳುತ್ತೇನೆ. ನೀನು ಹೋದರೇ ಆತನು ಏನೂ ಹೇಳುವುದಿಲ್ಲ.

**ಜಮೀಂದಾರ್ :–** ಹೇಗಾದರೇನು. ನನಗೆ ಬೇಕಾಗಿರುವುದು ವಿಷಯವನ್ನು ತಿಳಿದುಕೊಳ್ಳುವುದೇ. ಅದೇನೋ ನೀವೇ ಹೋಗಿ ಕೇಳಿ ಬನ್ನಿ. ಅದಕ್ಕೆ ಬೇಕಾದ ಖರ್ಚನ್ನು ನಾನು ನಿಮಗೆ ಕೊಡುತ್ತೇನೆ.

**ಜ್ಯೋತಿಷ್ಯನು :–** ಆ ಸ್ವಾಮಿಯವರು ಪ್ರಾಪಂಚಿಕ ವಿಷಯಗಳನ್ನು ತನ್ನ ಹತ್ತಿರಕ್ಕೆ ಬರಲು ಬಿಡುವುದಿಲ್ಲ. ಆದ್ದರಿಂದ ನಾನು ಎರಡು ದಿನಗಳ ನಂತರ ಹೋಗಿ ಬಿಡುವಿನಿಂದ ಅಲ್ಲೇ ಇದ್ದು, ಸಮಯ, ಸಂದರ್ಭ ಬಂದಾಗ ಕೇಳಿ ತಿಳಿದುಕೊಳ್ಳುತ್ತೇನೆ.

(ಎಂದು ಹೇಳಿ ಜಮೀನುದಾರನನ್ನು ಸಮಾಧಾನಪಡಿಸಿ ಅಲ್ಲಿಂದ ಹೊರಟು ಹೋದನು. ಆ ಜ್ಯೋತಿಷ್ಯನ ಮಾತುಗಳನ್ನು ಕೇಳಿದ ನಂತರ ರಾವುಬಹುದೂರ್ ತನಗೆ ತಿಳಿಯದಂತಿರುವುದೇನೋ ಇದೆಯೆಂದುಕೊಂಡು, ಕೊನೆಗೆ ರಾಜಯೋಗಾನಂದ ಸ್ವಾಮಿ ಏನು ಹೇಳುತ್ತಾನೋ ನೋಡಬೇಕೆಂದುಕೊಂಡಿದ್ದಾನೆ.)

*********************************

(ಮುನೆಪ್ಪನ ಹತ್ತಿರಕ್ಕೆ ತನ್ನನ್ನು ಕರೆದುಕೊಂಡು ಹೋಗೆಂದು ನಾಗೋತುಲ ನಾಗಭೂಷಣ, ಮಂತ್ರಗಳ ಮಲ್ಲಯ್ಯ ತಾತ ವೆಂಕೂನನ್ನು ಕೇಳಿದ್ದಾರೆ. ವೆಂಕು ಅವರ ಮಾತುಗಳನ್ನು ಒಪ್ಪಿಕೊಳ್ಳಲಿಲ್ಲ. ಏನಾದರೂ ಇದ್ದರೇ ತನ್ನೊಂದಿಗೆ ಹೇಳೆಂದಾಗ, ಇಬ್ಬರು ಮಾಂತ್ರಿಕರು ಮುನೆಪ್ಪನೊಂದಿಗೇ ಹೇಳುತ್ತೇವೆಂದು ಹೇಳಿದ್ದಾರೆ. ಆಗ ಅನ್ಯಮಾರ್ಗವಿಲ್ಲದೆ ವೆಂಕು ಇಬ್ಬರು ಮಾಂತ್ರಿಕರನ್ನೂ ಅಡವಿಯಲ್ಲಿನ ಮುನೆಪ್ಪ ಹತ್ತಿರಕ್ಕೆ ಕರೆದುಕೊಂಡುಹೋದಾಗ ಮೊದಲು ನಾಗಭೂಷಣನು ಮುನೆಪ್ಪನೊಂದಿಗೆ ಹೀಗೆ ಹೇಳಿದ್ದಾನೆ.)

**ನಾಗಭೂಷಣ :–** ಅಯ್ಯಾ! ನಮಗೆ ನಮ್ಮ ದೇವತೆ ಕನಸಿನಲ್ಲಿ ಬಂದು ನೀನು ಕೂಡಲೇ ಅವರ ಹತ್ತಿರದಿಂದ ಹೊರಬಂದು ನಿಮ್ಮ ಮನೆಗೆ ಹೋಗೆಂದು ಹೇಳಿದೆ.

**ಮುನೆಪ್ಪ :–** ಹಾಗೆ ಏಕೆ ಹೇಳಿದೆ. ನಾವು ನಿನಗೆ ಏನು ಕಡಿಮೆ ಮಾಡಿದ್ದೇವೆ. ನಿವು ಕೇಳದಿದ್ದರೂ ಹೆಚ್ಚಿನ ಹಣ ಕೊಟ್ಟಿದ್ದೇವಲ್ಲ!

**ನಾಗಭೂಷಣ :–** ಹಣದ ವಿಷಯದಲ್ಲಿ ನಮಗೆ ಎಂತಹ ತೊಂದರೆ ಇಲ್ಲ. ಈ ಕೆಲಸ ನೀವು ಮಾಡಲಾರರೆಂದು ನಮ್ಮ ಇಷ್ಟದೇವತೆ ಹೇಳಿದೆ. ವಜ್ರಗಳ ವಿಷಯದಲ್ಲಿ ಅಪಾಯವಿಲ್ಲ. ಆದರೆ ಹುಡುಗನ ವಿಷಯದಲ್ಲಿ ದೊಡ್ಡ ಅಪಾಯವಿದೆಯೆಂದು, ಆ ಅಪಾಯವನ್ನು ಜಯಿಸಬೇಕೆಂದರೆ ಈಗ ನಿಮಗಿರುವ ಶಕ್ತಿ ಸಾಲುವುದಿಲ್ಲವೆಂದು ಹೇಳಿದ್ದಾಳೆ.

**ಮುನೆಪ್ಪ :–** ನೀವು ಇನ್ನೂ ಏನಾದರೂ ಮಾಡಿ ಇನ್ನೂ ಸ್ವಲ್ಪ ಶಕ್ತಿಯನ್ನು ಸಂಪಾದಿಸಿಕೊಳ್ಳಬಹುದಲ್ಲವೆ!

**ನಾಗಭೂಷಣ :–** ಹಾಗೆ ಶಕ್ತಿಯನ್ನು ಹೊಂದುವುದಕ್ಕೆ ಸುಮಾರು ಒಂದು ವರ್ಷ ನಾವು ಮಂತ್ರಸಾಧನೆಗಳು ಮಾಡಬೇಕಾಗಿ ಬರುತ್ತದೆ. ಆ ಮಂತ್ರ ಸಾಧನೆ ಮಾಡುವುದಕ್ಕೆ ಕೆಲವು ಲಕ್ಷಗಳ ಹಣ ಖರ್ಚಾಗುತ್ತದೆ. ಹೆಚ್ಚಾಗಿ ಪ್ರತಿ ದಿನವೂ ಪ್ರಾಣಿ ಬಲಿಗಳು, ಪಕ್ಷಿ ಬಲಿಗಳೂ ಕೊಡಬೇಕಾಗಿರುತ್ತದೆ.

**ಮುನೆಪ್ಪ :–** ನಿಮಗೆ ಎಷ್ಟು ಹಣವಾದರೂ ಖರ್ಚು ಮಾಡುತ್ತೇವೆ. ನೀವು ಆ ಮಂತ್ರ ಸಾಧನೆ ಮಾಡುವುದಕ್ಕೆ ಪ್ರಾರಂಭಿಸಿರಿ.

**ಮಲ್ಲಯ್ಯತಾತ :–** ನಾವೂ ಸಹ ನೀವು ಹೇಳಿದಂತೆ ಮಾಡಬೇಕೆಂದು ನಿರ್ಣಯಿಸಿಕೊಂಡಿದ್ದೇವೆ. ಆದರೆ ನಾವು ಸಂಪಾದಿಸಿಕೊಳ್ಳುವ ಶಕ್ತಿ ಒಂದು ಜ್ಞಾನಶಕ್ತಿಯನ್ನು ಹೊರತುಪಡಿಸಿ ಯಾವುದನ್ನಾದರೂ ಎದರಿಸುತ್ತದೆ. ಒಂದೇ ಒಂದು ದೈವಶಕ್ತಿ (ಜ್ಞಾನಶಕ್ತಿ) ಹತ್ತಿರ ನಮ್ಮ ಶಕ್ತಿ ಕೆಲಸ ಮಾಡುವುದಿಲ್ಲ. ಆದ್ದರಿಂದ ನಾವು ದೈವಶಕ್ತಿ ಇರುವವರನ್ನು ಎಂದಿಗೂ ಎದುರಿಸಲಾರೆವು. ಒಂದುವೇಳೆ ಹಾಗೆ ನಾವು ಜ್ಞಾನಶಕ್ತಿಗೆ ಪೋಟಿ ಮಾಡಿದರೆ ನಮ್ಮಲ್ಲಿರುವ ಶಕ್ತಿ ಎಲ್ಲವೂ ಇಲ್ಲದಂತೆ ಹೋಗುತ್ತದೆ. ನಾವು ಎಂತಹ ಮಂತ್ರಶಕ್ತಿಯನ್ನಾದರೂ ಎದುರಿಸುತ್ತೇವೆ. ಜ್ಞಾನಶಕ್ತಿ ಹತ್ತಿರ ನಮ್ಮ ಶಕ್ತಿ ಕೆಲಸ ಮಾಡದೇ ಹೋಗುವುದಲ್ಲದೆ ಇರುವುದು ಸಹ ಹೋಗುತ್ತದೆ. ಆದ್ದರಿಂದ ಆ ವಿಷಯವನ್ನು ಮೊದಲೇ ನಿಮಗೆ ಹೇಳುತ್ತಿದ್ದೇವೆ.

**ಮುನೆಪ್ಪ :–** ಸರಿ ನೀವು ಸ್ವಲ್ಪ ಹಣವನ್ನು ತೆಗೆದುಕೊಂಡು ಹೋಗಿ, ನಿಮ್ಮ ಸಾಧನೆ ನೀವು ಮಾಡಿ.

ಎರಡು ಲಕ್ಷ ರುಪಾಯಿಗಳನ್ನು ಆ ಇಬ್ಬರು ಮಾಂತ್ರಿಕರಿಗೂ ಕೊಟ್ಟು ಕಳುಹಿಸಿದ ನಂತರ ತಪಸ್ವಿಬಾಬಾರವರೊಂದಿಗೆ ಮುನೆಪ್ಪ ರಹಸ್ಯವಾಗಿ ಮಾತನಾಡಿದನು. ಮಾಂತ್ರಿಕರು ಹೇಳಿದ ವಿಷಯವೆಲ್ಲವನ್ನೂ ಬಾಬಾರವರಿಗೆ ಹೇಳಿದನು. ಅದಕ್ಕೆ ಬಾಬಾರವರು ಮಾಂತ್ರಿಕರನ್ನು ಇಬ್ಬರನ್ನು ತಮ್ಮ ಹತ್ತಿರವೇ ಇಟ್ಟುಕೊಳ್ಳಲು ಹೇಳಿ ಅವರೊಂದಿಗೆ ಕೆಲವು ಕೆಲಸಗಳು ಮಾಡಿಸಿಕೊಳ್ಳಬೇಕಾಗಿ ಬರುತ್ತದೆಂದು ಹೇಳಿದ್ದಾನೆ.)

********************************

(ಎರಡನೆ ದಿನ ರಾಜಯೋಗಾನಂದ ಸ್ವಾಮಿ ರಾಧೇಶ್ವರಿಯನ್ನು, ದುಂದುಭಿಯನ್ನು ಕರೆದು ತನ್ನ ಕೊಠಡಿಯಲ್ಲಿ ಪ್ರತ್ಯೇಕವಾಗಿ ಅವರೊಂದಿಗೆ ಮಾತನಾಡಿದನು.)

**ರಾಜಯೋಗಾನಂದ :–** ರಾಧೇಶ್ವರಿ! ನಿನ್ನೊಂದಿಗೆ ಮುಖ್ಯವಾದ ವಿಷಯವನ್ನು ಮಾತನಾಡಬೇಕಾಗಿದೆ. ಇದು ನಿನ್ನ ಜೀವನಕ್ಕೆ ಸಂಬಂಧಿಸಿದ ಸಮಸ್ಯೆ, ಆದ್ದರಿಂದ ನಿನ್ನೊಂದಿಗೆ ತಪ್ಪದೆ ಹೇಳಬೇಕಾಯಿತು. ಅದಕ್ಕಿಂತ ಮೊದಲು ನೀವು ಇಬ್ಬರೂ ಸೇರಿ ತಿಳಿದುಕೊಳ್ಳಬೇಕಾದ ಸಮಾಚಾರ ಸ್ವಲ್ಪ ಇದೆ ಅದು ಏನೆಂದರೆ! ನಾವು ನಮ್ಮ ಸ್ವಾರ್ಥಕ್ಕಾಗಿ ಬದುಕುತ್ತಿಲ್ಲ. ಹೊರಗಿನ ಸಮಾಜ ಶ್ರೇಯಸ್ಸಿಗಾಗಿ ಬದುಕುತ್ತಿದ್ದೇವೆ. ಅದರಲ್ಲಿ ಕೆಲವರು ದುಷ್ಟರನ್ನು ಅಡಗಿಸಿ, ಸನ್ಮಾರ್ಗವಾದ ದೈವಜ್ಞಾನವನ್ನು ತಿಳಿಸುವುದು ನಮ್ಮ ಕೆಲಸವಾಗಿ ಆಯ್ಕೆ ಮಾಡಿಕೊಂಡಿದ್ದೇವೆ. ಮುಂಬರುವ ಕಾಲದಲ್ಲಿ ಕೆಲವು ಜನ ದುಷ್ಟರನ್ನು ಇಲ್ಲದಂತೆ ಮಾಡುವುದಕ್ಕೆ, ಇಂದಿನಿಂದಲೇ ಜಾಗ್ರತೆಯಿಂದ ಇರಬೇಕಾಗುತ್ತದೆ. ಮುಂಬರುವ ಕಾಲದಲ್ಲಿ ಕೆಲವು ದುಷ್ಟಶಕ್ತಿಗಳನ್ನು ವಶ ಮಾಡಿಕೊಂಡು, ಅವುಗಳಿಂದ ಪ್ರಪಂಚವನ್ನು ಅಲ್ಲೋಲಕಲ್ಲೋಲ ಮಾಡಿ, ತಮಗಿಂತ ಮಿಗಿಲಾದವರು ಇಲ್ಲವೆಂದುಕೊಂಡು, ದೇವರ್‍ಯಾರು ಎಂದು ಪ್ರಶ್ನಿಸುವ ಪರಿಸ್ಥಿತಿ ಬರುತ್ತಿದೆ. ಅಂತಹ ಪರಿಸ್ಥಿತಿ ಬರಬಾರದೆಂದು, ಮನುಷ್ಯ ಎಲ್ಲಾ ಬಲಗಳನ್ನು ಸಾಧಿಸಿಕೊಂಡು ದೇವರನ್ನು ಪ್ರಶ್ನಾರ್ಥಕ ಮಾಡಬಾರದೆಂದು ನಾವು ಅಂದು ಕೊಳ್ಳುತ್ತಿದ್ದೇವೆ.

ಮುಖ್ಯವಾಗಿ ಹೇಳುವುದೇನೆಂದರೆ, ಮುಂಬರುವ ವಿಪತ್ತು ಕಾಲದಲ್ಲಿ ರಾಘವನೊಂದಿಗೆ ಕೆಲವು ಕೆಲಸಗಳು ಮಾಡಿಸಿ, ಆ ದುರ್ಮಾರ್ಗವಾದ ವಿಪತ್ತಿನಿಂದ ಪ್ರಜೆಗಳನ್ನು ಕಾಪಾಡಬೇಕೆಂದು ಅಂದುಕೊಂಡಿದ್ದೇನೆ. ಅದಕ್ಕೆ ರಾಘವನ ಬಲ ಕಡಿಮೆಯಾಗುತ್ತದೆ. ರಾಘವನೊಂದಿಗೆ ಮತ್ತೆ ಕೆಲವರು ಸಹ ಅ ಸಮಯಕ್ಕೆ ಅವಶ್ಯಕ. ಅಂತಹವರು ಈಗ ಯಾರೂ ಇಲ್ಲ. ಜಾತಕ ಚಕ್ರದಲ್ಲಿ ಐದನೇ ಸ್ಥಾನವಾದ ಸಂತಾನ ಸ್ಥಾನ ಬಲವಾಗಿರುವ ಸ್ತ್ರೀ ಗರ್ಭದಿಂದ ಜನಿಸುವವರು ಸ್ವಲ್ಪ ಶಕ್ತಿವಂತರಾಗಿದ್ದು, ರಾಘವನಿಗೆ ಜೊತೆಯಾಗಿ ಇರುತ್ತಾರೆ. ಮೊದಲು ರಾಘವನ ಮದುವೆ ಸಮಯದಲ್ಲಿ ಸಹ ರಾಘವನಿಗೆ ಎರಡನೆ ಮದುವೆ ಯೋಗವಿದೆಯೆಂದು ಹೇಳಿದ್ದೇನೆ. ಆ ವಿಷಯವನ್ನು ತಿಳಿದು ದುಂದುಭಿ ಸಹ ರಾಘವನನ್ನು ಮದುವೆ ಮಾಡಿಕೊಂಡಿದ್ದಾಳೆ. ಈಗ ರಾಘವನಿಗೆ ಎರಡನೆ ಮದುವೆ ನಡೆಯುವ ಸಮಯ ಹತ್ತಿರವಾಗುತ್ತಿದೆ. ಎರಡನೆ ಮದುವೆಯನ್ನು, ಸಂತಾನಸ್ಥಾನವಾದ ಐದನೆ ಸ್ಥಾನ

ಅನುಕೂಲವಾಗಿರುವ ಕನ್ಯೆಯೊಂದಿಗೆ ಮಾಡಬೇಕೆಂದುಕೊಳ್ಳುತ್ತಿದ್ದೇನೆ. ಈಗ ಎಲ್ಲರೂ ಆ ಕನ್ಯೆಗಾಗಿ ಹುಡುಕಬೇಕಾಗಿದೆ.

**ದುಂದುಭಿ :–** ನೀವು ಸರ್ವವು ತಿಳಿದವರು, ನಿವು ಏನು ಮಾಡಬೇಕೆಂದುಕೊಂಡರೇ ಅದನ್ನೇ ಮಾಡಬಹುದು. ಪ್ರಪಂಚ ಒಳಿತನ್ನು ಕೋರಿ ಮಾಡುವ ನಿಮ್ಮ ಕೆಲಸಕ್ಕೆ ಯಾರೂ ಆತಂಕ ಹೇಳುವುದಿಲ್ಲ. ನೀವು ನಮ್ಮೊಂದಿಗೆ ಹೇಳಿ ಮಾಡಿಸಿಕೊಳ್ಳಬೇಕೆಂದು, ನಮ್ಮ ಸಲಹೆ ಏನೂ ಅಗತ್ಯವಿಲ್ಲವೆಂದು ತಿಳಿಸುತ್ತಿದ್ದೇನೆ.

**ರಾಧೇಶ್ವರಿ :–** ದುಂದುಭಿ ಹೇಳಿರುವುದು ವಾಸ್ತವ. ನೀವು ನಮಗೆ ಏನೂ ಹೇಳಬೇಕಾಗಿರುವುದು ಇಲ್ಲದೆ, ನಿಮ್ಮ ಕೆಲಸದಲ್ಲಿ ಭಾಗವಾಗಿ ನಮ್ಮನ್ನು ವಿನಿಯೋಗಿಸಿಕೊಳ್ಳಿ. ನಾವು ಮಾಡಬೇಕಾದ ಕಾರ್ಯವೇನೋ ಹೇಳಿರಿ. ನಾವು ಆ ಕೆಲಸದಲ್ಲಿ ಮಗ್ನರಾಗಿ ಮಾಡುತ್ತೇವೆ.

**ರಾಜಯೋಗಾನಂದ :–** ನೀವು ಆ ಮಾತು ಹೇಳಿರುವುದಕ್ಕೆ ನಮಗೆ ಸಂತೋಷ. ನಾನು ಹೇಳುವ ಕೆಲಸ ನಿಮ್ಮೊಂದಿಗೆ ಮುಡಿಪಟ್ಟಿರುತ್ತದೆ. ರಾಘವನಿಗೆ ಒಳ್ಳೆಯ ಸಂತಾನವನ್ನು ಕೊಡುವ ಹೆಂಡತಿಯನ್ನು ಮಾಡುವುದರಿಂದ ರಾಘವನಿಗೆ ಒಳ್ಳೆಯ ಸಂತಾನ ಲಭಿಸುತ್ತದೆ. ಆದರೆ ರಾಘವನಿಗೆ ಮೊದಲನೆ ಹೆಂಡತಿಯಾಗಿರುವ ದುಂದುಭಿಗೆ ಸಂತಾನ ಯೋಗವಿಲ್ಲದಿರುವುದರಿಂದ ಆಕೆಗೆ ಸಂತಾನ ಉಂಟಾಗುವು ದಿಲ್ಲ. ಎರಡನೆ ಹೆಂಡತಿಗೆ ಹುಟ್ಟಿರುವ ಸಂತಾನವನ್ನು ತನ್ನ ಸಂತಾನವಾಗಿಯೇ ಬೆಳಿಸಬೇಕು.

**ದುಂದುಭಿ :–** ಇದರಲ್ಲಿ ಬಾಧಪಡಬೇಕಾದ್ದು ಏನೂ ಇಲ್ಲ. ನನಗೆ ಸಂತಾನ ಉಂಟಾಗುವುದಿಲ್ಲವೆಂದು ಮೊದಲೇ ತಿಳಿದಿತ್ತು, ಅಷ್ಟೇ ಅಲ್ಲದೆ ಆತನಿಗೆ ಎರಡನೆ ವಿವಾಹವಿದೆಯೆಂದು ಸಹ ನೀವೇ ಹೇಳಿದ್ದೀರ. ಇದೇನೂ ಹೊಸ ವಿಷಯವಲ್ಲ. ನನಗೆ ಸ್ವಲ್ಪ ದೈವಜ್ಞಾನ ನಿಮ್ಮಿಂದಲೇ ತಿಳಿದಿದೆ. ಆದ್ದರಿಂದ ಈ ವಿಷಯದಿಂದ ನನಗೆ ಎಂತಹ ಬಾಧೆಯೂ ಇಲ್ಲ.

**ರಾಧೇಶ್ವರಿ :–** ನೀವು ಹೇಳಿದ ಜಾತಕವಿರುವ ಹೆಣ್ಣು ಎಲ್ಲಿದ್ದಾಳೋ ಹೇಳಿ. ಅದು

ನಮ್ಮ ಮುಖ್ಯವಾದ ಕೆಲಸದಂತೆ ತಿಳಿದು ಹೋಗಿ ಅವರೊಂದಿಗೆ ಮಾತನಾಡಿ ಬರುತ್ತೇವೆ.

**ರಾಜಯೋಗಾನಂದ :–** ನೀವು ಎಲ್ಲಿಗೂ ಹೋಗಿ ಮಾತನಾಡಬೇಕಾದ ಕೆಲಸವಿಲ್ಲ. ಎಲ್ಲ ವಿಧಗಳಲ್ಲಿ ಜಾತಕ ಸರಿಹೋಗುವ ಹುಡುಗಿ ಇಲ್ಲೇ ಇದ್ದಾಳೆಂದು ನಿಮ್ಮೊಂದಿಗೆ ಹೇಳುತ್ತಿದ್ದೇನೆ. ಆ ಹುಡುಗಿ ಯಾರೋ ಅಲ್ಲ. ನಮ್ಮ ರಾಧೇಶ್ವರಿಯೇ. ಆದರೆ ಆಕೆ ವಿವಾಹ ಮಾಡಿಕೊಳ್ಳುವುದಿಲ್ಲವೆಂದು ಹೇಳುವುದರಿಂದ ಈ ವಿಷಯವನ್ನು ಹೇಳುವುದಕ್ಕೆ ಸ್ವಲ್ಪ ಹಿಂದೆಮುಂದೆ ಹೇಳಬೇಕಾಯಿತು.

**ರಾಧೇಶ್ವರಿ :–** ಸ್ವಾಮೀ! ನನ್ನ ವಿಷಯದಲ್ಲಿ ನೀವು ಮುಂದೆ ಹಿಂದೆ ನೋಡಬೇಕಾದ ಕೆಲಸವಿಲ್ಲ. ನಾನು ವಿವಾಹ ಮಾಡಿಕೊಳ್ಳುವುದಿಲ್ಲವೆಂದು ನನ್ನ ಉದ್ದೇಶವನ್ನು ಹೇಳಿದ ಮಾತು ನಿಜವೇ. ನೀವು ಸಮಾಜ ಶ್ರೇಯಸ್ಸಿಗಾಗಿ ನಮ್ಮ ಜೀವನವನ್ನು ಅರ್ಪಿಸೆಂದರೂ ಅದಕ್ಕೆ ನಾವು ಸಿದ್ಧವಾಗಿ ಇದ್ದೇವೆ. ನಿಮ್ಮ ಮಾತಿನ ಮುಂದೆ ನಮ್ಮ ಉದ್ದೇಶ ಬೆಲೆಯುಳ್ಳದ್ದಲ್ಲ. ಆದ್ದರಿಂದ ನೀವು ಹೇಳಿದಂತೆ ಮಾಡುವುದಕ್ಕೆ ನನಗೆ ಯಾವ ಅಡಚಣೆ ಇಲ್ಲ. ನಾನು ಇಲ್ಲಿಗೆ ಬರುವುದರಿಂದಲೇ ನನ್ನ ಜೀವನಕ್ಕೆ ಒಳ್ಳೆಯ ದೆಸೆ ಬಂದಿದೆಯೆಂದುಕೊಂಡಿದ್ದೇನೆ. ನಿಮ್ಮ ಹತ್ತಿರ ಜ್ಞಾನವನ್ನು ತಿಳಿದುಕೊಂಡ ನಂತರ ನನ್ನ ಜೀವನವನ್ನು ದೈವಸೇವೆಗೇ ವಿನಿಯೋಗಿಸಬೇಕೆಂದು, ಅದೂ ನೀವು ಹೇಗೆ ಹೇಳಿದರೇ ಹಾಗೆ ಮಾಡಬೇಕೆಂದು ಅಂದುಕೊಂಡಿದ್ದೇನೆ.

**ರಾಜಯೋಗಾನಂದ :–** ನೀನು ನಮ್ಮ ಮೇಲಿಟ್ಟಿರುವ ವಿಶ್ವಾಸದಿಂದ ಆ ವಿಧವಾಗಿ ನಿರ್ಣಯ ತೆಗೆದುಕೊಳ್ಳುವುದು ಒಳ್ಳೆಯದೇ. ನಾವು ಎಲ್ಲಾ ವಿಷಯಗಳನ್ನು ಕೂಲಂಕುಷವಾಗಿ ಆಲೋಚಿಸಿ ಈ ನಿರ್ಣಯಕ್ಕೆ ಬಂದಿದ್ದೇನೆ. ಮೇಲಾಗಿ ಎಲ್ಲ ವಿಧಗಳಲ್ಲಿ ನಿನ್ನ ಜಾತಕ ಸರಿಹೋಗುತ್ತದೆ. ರಾಘವನು ಸಹ ನೀವು ಹೇಳಿದಂತೆ ನಿಮ್ಮ ನಿರ್ಣಯ ಹೇಗಿದ್ದರೇ ಹಾಗೇ ಮಾಡೆಂದು ಹೇಳಿದ್ದಾನೆ. ದುಂದುಭಿಯೂ ಸಹ ಇದನ್ನು ಸಹಕರಿಸುವುದಕ್ಕೆ ಒಪ್ಪಿಕೊಳ್ಳುವುದು ಸಂತೋಷ. ಇನ್ನು ಈ ವಿಷಯವನ್ನು ಆಲಸ್ಯ ಇಲ್ಲದಂತೆ ಮಲ್ಲುದೊರೆಗೆ ತಿಳಿಸುತ್ತೇನೆ.

**********************************

(ಜಮೀಂದಾರ್ ರಾವುಬಹದೂರ್‌ರವರೊಂದಿಗೆ ಮಾತನಾಡಿದ ಜ್ಯೋತಿಷ್ಯನು ಎರಡು ದಿನಗಳ ನಂತರ ರಾಜಯೋಗಾನಂದ ಸ್ವಾಮಿ ಪ್ರಬೋಧಾಶ್ರಮಕ್ಕೆ ಬಂದಿದ್ದಾನೆ. ಜಮೀಂದಾರ್ ತನ್ನ ಹತ್ತಿರಕ್ಕೆ ಬಂದಿರುವ ವಿಷಯವೂ, ಜಮೀಂದಾರನಲ್ಲಿನ ಅನುಮಾನವೂ, ತಾನು ಹೇಳಿದ ವಿಷಯ ಎಲ್ಲಾ ಹೇಳಿದ್ದಾನೆ. ಕೊನೆಗೆ ಆ ಬಾಲಕನಲ್ಲಿರುವ ವಿಶೇಷವೇನೋ, ಆ ಮರಣಗಳಿಗೆ ಕಾರಣವೇನೋ ತಾವೇ ಹೇಳಬೇಕೆಂದು ಕೇಳಿದ್ದಾನೆ. ಆಗ ರಾಜಯೋಗಾನಂದ ಸ್ವಾಮಿ ಎಲ್ಲಾ ಕೇಳಿ ನಂತರ ಅ ಜ್ಯೋತಿಷ್ಯನೊಂದಿಗೆ ಹೀಗೆ ಹೇಳಿದ್ದಾನೆ.)

**ರಾಜಯೋಗಾನಂದ :–** ಜಮೀಂದಾರ್ ರಾವುಬಹದೂರ್ ಹತ್ತಿರವಿರುವ ಹುಡುಗ ಪ್ರತ್ಯೇಕವಾದ ಜಾತಕ ಇರುವವನು. ಆತನು ಅಷ್ಟಗ್ರಹ ಕೂಟಮಿ ದಿನದಂದು ಹುಟ್ಟಿದ ಮೊದಲನೆ ಮಗು. ಆ ಮಗು ಚಿಕ್ಕ ವಯಸ್ಸಿನಲ್ಲಿ ಸರ್ವಸಾಧಾರಣವಾಗಿ ಇದ್ದರೂ ವಯಸ್ಸು ಬೆಳಯುತ್ತಿದ್ದಂತೆ ಆತನಲ್ಲಿ ಎಷ್ಟೋ ಬದಲಾವಣೆಗಳು ಬರುತ್ತವೆ. ಆ ಬಾಲಕ ಬೆಳೆದು 16 ಸಂವತ್ಸರಗಳ ವಯಸ್ಸು ಬಂದ ನಂತರ ಮುಂಬರುವ ಆರು ಅಮಾವಾಸ್ಯೆಗಳು ಬಹಳ ಮುಖ್ಯವಾದವು. ಏಕೆಂದರೆ! ಪ್ರತಿ ಅಮಾವಾಸ್ಯೆ ದಿನ ಒಂದು ಪ್ರತ್ಯೇಕವಾದ ಶಕ್ತಿ ಆತನಲ್ಲಿ ಸೇರಿಹೋಗುತ್ತದೆ. ಆ ವಿಧವಾಗಿ ಆರು ಅಮಾವಾಸ್ಯೆ ದಿನಗಳಲ್ಲಿ ಆರು ಶಕ್ತಿಗಳು ಸೇರುವುದು ನಡೆಯುತ್ತದೆ. ಮೊದಲ ಮೂರು ಅಮಾವಾಸ್ಯೆಗಳಲ್ಲಿ ಮೊದಲನೆ ಅಮಾವಾಸ್ಯೆ ದಿನದಂದು ಈಶ್ವರನ ಶರೀರದೊಳಗೆ ಸೇರುವ ಶಕ್ತಿ ಮಾತ್ರ ಲೋಕ ವಿನಾಶಕ್ಕೆ ಅಲ್ಲದೆ ಲೋಕೋದ್ಧಾರದ ಕೆಲಸಕ್ಕೆ ಬರುತ್ತದೆ. ಉಳಿದ ಎರಡು ಅಮಾವಾಸ್ಯೆ ದಿನಗಳಲ್ಲಿ ಬರುವ ಎರಡು ಶಕ್ತಿಗಳೂ ಲೋಕ ವಿನಾಶಕ್ಕಾಗಿ ಕೆಲಸ ಮಾಡುತ್ತವೆ. ಮೊದಲ ಅಮಾವಾಸ್ಯೆ ದಿನದಂದು ಬರುವ ಶಕ್ತಿ ಲೋಕೋದ್ಧಾರಕ್ಕೆ ಉಪಯೋಗಪಡುವುದಾದಾಗ, ನಂತರ ಬರುವ ಎರಡನೆ ಮತ್ತು ಮೂರನೆ ಅಮಾವಾಸ್ಯೆಗಳಲ್ಲಿ ಬರುವ ಶಕ್ತಿಗಳು ಮಾತ್ರ ಭೂಮಿಮೇಲೆ ವಿನಾಶ ಮಾಡುವವಾಗಿ ಇವೆ. ಎರಡು, ಮೂರು ಅಮಾವಾಸ್ಯೆಗಳಲ್ಲಿ ಬರುವ ಶಕ್ತಿಗಿಂತ ನಂತರ ಬರುವ ನಾಲ್ಕು, ಐದು, ಆರು ಅಮಾವಾಸ್ಯೆಗಳ ದಿನಗಳಲ್ಲಿ ಈಶ್ವರನೊಳಗೆ ಬರುವ ಶಕ್ತಿಗಳು ಇನ್ನೂ ಭಯಂಕರವಾದವು. ಕೊನೆಯ ಮೂರು ಅಮಾವಾಸ್ಯೆಗಳ ಶಕ್ತಿಗಳು ಭೂಮಿಮೇಲೆ ಪ್ರಳಯವನ್ನೇ ಸೃಷ್ಟಿಸಿ ಸರ್ವವನ್ನು

ನಾಶ ಮಾಡಬಲ್ಲವು. ಈ ವಿಧವಾಗಿ ಮೊದಲ ಅಮವಾಸ್ಯೆ ನಂತರ ಬರುವ ಐದು ಅಮಾವಾಸ್ಯೆಗಳ ವಿನಾಶ ಮಾಡುವವವಾದಾಗ, ಅವುಗಳಲ್ಲಿ ಕೊನೆಯ ಮೂರು ಬಹಳ ಭಯಂಕರವಾದವುಗಳೆಂದು ಹೇಳಬಹುದು.

ಈ ವಿಧವಾಗಿ ರಾವುಬಹದೂರ್ ಕುಮಾರನಾದ ಈಶ್ವರನ ಜಾತಕದ ಪ್ರಕಾರ ನಡೆಯಬೇಕಾಗಿದೆ. ಹಾಗೆ ನಡೆಯದಂತೆ ಯಾರೂ ತಡೆಯಲಾರರು. ಆರು ಅಮಾವಾಸ್ಯೆಗಳಲ್ಲಿ ಪ್ರಮಾದಭರಿತವಾದ ಐದು ಅಮಾವಾಸ್ಯೆಗಳ ಶಕ್ತಿಗಳನ್ನು ಈಶ್ವರ್ ತನ್ನ ಜೀವನದಲ್ಲಿ ಎಂದಿಗೂ ಹೊರಗೆ ಉಪಯೋಗಿಸುವುದಿಲ್ಲ. ಆದರೆ ಇತರರು ಆ ಶಕ್ತಿಗಳನ್ನು ತಮ್ಮ ವಶ ಮಾಡಿಕೊಳ್ಳುವ ಅವಕಾಶವಿದೆ. ಯಾರಾದರೆ ಆ ಶಕ್ತಿಗಳನ್ನು ವಶ ಮಾಡಿಕೊಳ್ಳುತ್ತಾರೋ, ಅವರು ಆ ಶಕ್ತಿಗಳನ್ನು ಉಪಯೋಗಿಸಿ ಭೂಮಿಮೇಲೆ ಪ್ರಳಯವನ್ನೇ ಸೃಷ್ಠಿಸುತ್ತಾರೆ. ಆ ಶಕ್ತಿಗಳು ಇತರರ ವಶವಾದರೆ 16ನೇ ಸಂವತ್ಸರದಲ್ಲಿ ಬರುವ ಉಳಿದ ಆರು ತಿಂಗಳುಗಳು ಮಾತ್ರ ಈಶ್ವರ್ ಇರುತ್ತಾನೆ. ನಂತರ ಆತನಿಗೆ ಪ್ರಾಣಹಾನಿ ಇರುವಂತೆ ತಿಳಿಯುತ್ತಿದೆ. ಇದನ್ನನುಸರಿಸಿ ಈಶ್ವರ್ ತನ್ನ 16ನೇ ಸಂವತ್ಸರದ ಕೊನೆಯಲ್ಲಾಗಲೀ ಅಥವಾ ಏಳನೆ ತಿಂಗಳಿಂದ ಕೊನೆಯ ಹನ್ನೆರಡು ತಿಂಗಳುಗಳೊಳಗೆ ಯಾವಾಗಾದರೂ ಮರಣಿಸುತ್ತಾನೆಂದು ಹೇಳಬಹುದು. ಒಂದುವೇಳೆ ಆತನಲ್ಲಿ ಸೇರುವ ಆರು ಅಮಾವಾಸ್ಯೆಗಳ ಶಕ್ತಿಗಳನ್ನು ಯಾರೂ ವಶ ಪಡಿಸಿಕೊಳ್ಳದೆ ಹೋದರೆ ಈಶ್ವರ್ ಸಂಪೂರ್ಣ ಆಯುಸ್ಸುನಿಂದ ಬದುಕುತ್ತಾನೆಂದು ಸಹ ಹೇಳಬಹುದು. ಆದರೆ ಆ ಶಕ್ತಿಗಳನ್ನು ತನ್ನ ವಶ ಮಾಡಿಕೊಳ್ಳುವುದಕ್ಕೆ ಒಬ್ಬ ವ್ಯಕ್ತಿ ಕಾದುಕೊಂಡಿರುವುರಿಂದ, ಆತನು ಆ ಶಕ್ತಿಗಳನ್ನು ವಶ ಮಾಡಿಕೊಳ್ಳುವುದಕ್ಕೇ ಪ್ರಯತ್ನಿಸುತ್ತಾನೆ. ಆರು ತಿಂಗಳ ಶಕ್ತಿಗಳನ್ನು ವಶಪಡಿಸಿಕೊಳ್ಳದೆ ಹೋದರೂ, ಕೇವಲ ಒಂದು ತಿಂಗಳ ಶಕ್ತಿಯನ್ನು ವಶಪಡಿಸಿಕೊಂಡರೂ ಈಶ್ವರ್‌ಗೆ ಮಾತ್ರ ಮರಣ ತಪ್ಪುವುದಿಲ್ಲ.

ಈಶ್ವರ್‌ನಲ್ಲಿ ಸೇರುವ ಶಕ್ತಿಯನ್ನು ವಶಪಡಿಸಿಕೊಳ್ಳಬೇಕೆಂದು ಕಾದುಕೊಂಡಿರುವವರು ಅವುಗಳನ್ನು ಹೇಗಾದರೂ ವಶಪಡಿಸಿಕೊಂಡರೇ ಆಗ ಆತನು ಯಾವ ದೇಶವನ್ನಾದರೂ ಪೂರ್ತಿಯಾಗಿ ನಾಶ ಮಾಡುತ್ತಾನೆ. ಆತನು

ಬಹಳ ದೇಶಗಳನ್ನು ನಾಶ ಮಾಡಿ, ಉಳಿದ ಎಲ್ಲ ದೇಶಗಳಿಗೂ ಅಧಿಪತಿ ಆಗಬಲ್ಲನು. ದುಷ್ಟ ಬುದ್ಧಿಯಿಂದ ಆಧಿಪತ್ಯವನ್ನು ಚಲಾಯಿಸುವವನು ಕೊನೆಗೆ ನಾನೇ ದೇವರೆಂದು ಪ್ರಕಟಿಸಿಕೊಂಡು ಅಸಲಾದ ಸೃಷ್ಠಿಕರ್ತನಿಗೇ ಪ್ರಶ್ನಾರ್ಥಕವಾಗುತ್ತಾನೆ. ಈ ವಿಷಯಗಳು ತಿಳಿದವರು ಆ ಬಾಲಕನ ವಿಷಯ ಯಾರಿಗೂ ತಿಳಿಯದೆ ಇರುವಂತೆ ಜಾಗ್ರತೆಯಿಂದಿರುತ್ತಾರೆ. ಮೊದಲು ಆ ಬಾಲಕನ ಜಾತಕವನ್ನು ಬರೆಯಬೇಕೆಂದು ಕೊಂಡ ವೃದ್ಧನನ್ನು ಆ ಬಾಲಕನ ವಿಷಯ ತಿಳಿಯಬಾರದೆಂದುಕೊಂಡವರೇ ಮರಣಿಸುವಂತೆ ಮಾಡಿದ್ದಾರೆ. ಅದು ಯಾರಿಗೂ ಅರ್ಥವಾಗಲಿಲ್ಲ. ಯಾರಿಗೂ ತಿಳಿಯದಂತೆ ಆ ಬಾಲಕನನ್ನು ಕಾದುಕೊಂಡು ಕೆಲವು ಶಕ್ತಿಗಳಿವೆ. ಆ ಶಕ್ತಿಗಳು ಆ ಬಾಲಕನ ಮೇಲೆ ಯಾವಾಗಲೂ ನಿಘಾ ಇಡುವುದರಿಂದ ಆ ಬಾಲಕನನ್ನು ಕುರಿತು ಯಾರಾದರೂ ತಿಳಿದುಕೊಳ್ಳಬೇಕೆಂದರೆ ಅವರನ್ನು ಆ ಕೆಲಸದಿಂದ ದೂರಸರಿಯುವಹಾಗೆ ಆತಂಕಗಳನ್ನು ಉಂಟುಮಾಡುತ್ತವೆ. ಅಲ್ಲಿಗೂ ಮೊಂಡರಂತೆ ಪ್ರವರ್ತಿಸಿದರೇ ಕೊನೆಗೆ ಅವರನ್ನು ಆ ಶಕ್ತಿಗಳು ಸಾಯಿಸುತ್ತವೆ. ಇಲ್ಲಿಗೆ ಆ ಬಾಲಕನ ವಿಷಯ ತಿಳಿದುಕೊಳ್ಳಬೇಕೆಂದುಕೊಂಡ ಅವರಲ್ಲಿ ಇಬ್ಬರನ್ನು ಆ ಶಕ್ತಿಗಳು ಸಾಯಿಸಿವೆ. ನಂತರ ಸಹ ಯಾರು ಪ್ರಯತ್ನ ಮಾಡಿದರೂ ಅವರನ್ನು ಸಹ ಬಿಡುವುದಿಲ್ಲ. ಈಗ ಈ ವಿಷಯ ನನ್ನಿಂದ ನಿನಗೆ ತಿಳಿದಿದೆ. ನಿನಗೆ ತಿಳಿದ ಈ ವಿಷಯವನ್ನು ನೀನು ಜಮೀನ್ದಾರನಿಗೆ ತಿಳಿಸಬೇಕೆಂದುಕೊಂಡರೇ ಆತನಿಗೆ ತಿಳಿಸುವುದಕ್ಕಿಂತ ಮೊದಲೇ ಆ ಶಕ್ತಿಗಳು ನಿನ್ನನ್ನು ಸಹ ಸಾಯಿಸುತ್ತವೆ. ನನ್ನಿಂದ ನಿನಗೆ ತಿಳಿದಿದೆ ಆದ್ದರಿಂದ ಇಲ್ಲಿಂದ ನಿನಗೆ ಯಾವ ಮುಪ್ಪು ಇರುವುದಿಲ್ಲ. ಒಂದುವೇಳೆ ಈ ರಹಸ್ಯವನ್ನು ಹೊರಗೆ ಹೇಳಬೇಕೆಂದುಕೊಂಡರೇ ಮಾತ್ರ ನಿನಗೆ ಪ್ರಮಾದ ತಪ್ಪುವುದಿಲ್ಲ. ಆದ್ದರಿಂದ ನೀನು ಜಮೀನ್ದಾರನ ಹತ್ತಿರಕ್ಕೆ ಹೋಗದಂತೆ ನೇರವಾಗಿ ಮನೆಗೆ ಹೋಗಿ, ಏನೂ ತಿಳಿಯದಂತೆ ಇರು.

**ಜ್ಯೋತಿಷ್ಯನು :–** ಈ ವಿಷಯವನ್ನು ಹೊರಗೆ ಹೇಳಿದರೇ ನನ್ನ ಪ್ರಾಣಗಳಿಗೇ ಮುಪ್ಪು ಇರುವಾಗ, ನಾನೇಕೆ ಹೇಳಬೇಕು. ನನಗೇನು ತಿಳಿಯದಂತೆ ಇರುತ್ತೇನೆ.

(ರಾಜಯೋಗಾನಂದ ಸ್ವಾಮಿ ಹೇಳಿದ ಮಾತುಗಳು ಕೇಳಿ ಆ ಜ್ಯೋತಿಷ್ಯನು ಹೆದರಿ ಮನೆಗೆ ಹೋಗಿದ್ದಾನೆ. ಸ್ವಾಮಿ ಹೇಳುತ್ತಿರುವಾಗ ಆ ಸಮಾಚಾರವನ್ನೆಲ್ಲಾ

ಕೇಳಿದ ರಾಘವ, ದುಂದುಭಿ, ರಾಧೇಶ್ವರಿ ಮೂವರೂ ಆಶ್ಚರ್ಯಪಟ್ಟಿದ್ದಾರೆ. ಆಗ ರಾಘವ ಈ ವಿಧವಾಗಿ ಕೇಳಿದ್ದಾನೆ.)

**ರಾಘವ :–** ಇಷ್ಟು ದೊಡ್ಡ ರಹಸ್ಯವನ್ನು ತಿಳಿದುಕೊಳ್ಳುವುದೇ ಅಲ್ಲದೆ, ಆ ಬಾಲಕನಿಗೆ ಕೆಲವು ಶಕ್ತಿಗಳನ್ನು ಕಾವಲಿಗಾಗಿ ಇಟ್ಟಿರುವ ವ್ಯಕ್ತಿ ಸಾಮಾನ್ಯನಾಗಿರುವುದಿಲ್ಲ. ಯಾರೋ ದೊಡ್ಡ ಶಕ್ತಿ ಇರುವ ವ್ಯಕ್ತಿಯೇ ಆಗಿರುತ್ತಾನೆ.

**ದುಂದುಭಿ :–** ಬಾಲಕನ ವಿಷಯ ತಿಳಿದುಕೊಳ್ಳಬೇಕೆಂದು ಪ್ರಯತ್ನಿಸಿದರೇನೆ ಸಾಯಿಸುವ ಆತನು ಯಾರೋ ಪ್ರಮಾದಭರಿತವಾದ ವ್ಯಕ್ತಿ ಆಗಿರುತ್ತಾನೆ.

**ರಾಧೇಶ್ವರಿ :–** ಬಾಲಕನ ಮೇಲೆ ಆಸೆ ಇಟ್ಟುಕೊಂಡ ಆತನ ಶಕ್ತಿಯನ್ನು ಅಡಗಿಸಿಹಾಕುವುದಕ್ಕೆ ಮಾಡುವ ಪ್ರಯತ್ನದಲ್ಲಿನ ಭಾಗವೇ ನನ್ನ ಮದುವೆ ಎಂದು ತಿಳಿಯುತ್ತಿದೆ. ಲೋಕಗಳನ್ನು ಹಿಂಸಿಸುವವರನ್ನು ಅಡಗಿಸಿಹಾಕುವುದಕ್ಕೆ ನೀವು ಮಾಡುವ ಪ್ರಯತ್ನದಲ್ಲಿ ನಾವು ಭಾಗಸ್ಥರಾಗಿ ಉಪಯೋಗವಾಗುತ್ತಿರುವುದಕ್ಕೆ ನಾವು ಅದೃಷ್ಟವಂತರೆಂದು ಅಂದುಕೊಳ್ಳುತ್ತಿದ್ದೇನೆ.

**ರಾಜಯೋಗಾನಂದ :–** ನಮ್ಮ ಹತ್ತಿರ ಸ್ವಲ್ಪ ಜ್ಞಾನ ಶಕ್ತಿ ಇದೆ, ಆದ್ದರಿಂದ ಆತನ ಮಂತ್ರಶಕ್ತಿಗಳು ನಮ್ಮ ಮೇಲೆ ಕೆಲಸ ಮಾಡುವುದಿಲ್ಲ. ಇನ್ನೊಂದು ವಿಷಯವೇನೆಂದರೆ ಆ ಬಾಲಕನ ವಿಷಯ ನಮಗೆ ತಿಳಿದಿದೆಯೆಂದು ಅತನಿಗೆ ತಿಳಿಯದು. ಆತನು ಇನ್ನೂ ಸ್ವಲ್ಪ ಶಕ್ತಿ ಸಂಪನ್ನನ್ನು ಆಗುತ್ತಿದ್ದಾನೆ. ಕೊನೆಯ ಸಮಯದಲ್ಲಿ ಆತನನ್ನು ಎದುರಿಸುವುದು ನಮಗೂ ಸಹ ಕಷ್ಟವೆನುಸುತ್ತದೇನೋ ಹೇಳಲಾರೆ. ಆತನು ಈಗಲೇ ಸ್ವಲ್ಪ ಶಕ್ತಿ ಇರುವ ವ್ಯಕ್ತಿಯಾಗಿ ಎಷ್ಟೋ ಕಾರ್ಯಗಳನ್ನು ಸಾಧಿಸಿದ್ದಾನೆ. ಆದರೂ ಆತನ ಆಸೆಗೆ ಪರಿಮಿತಿಯಿಲ್ಲ. ಎಷ್ಟೋ ದುಷ್ಟಕಾರ್ಯಗಳನ್ನು ಮಾಡುವುದರಲ್ಲಿಯೂ ನಿಪುಣನಾಗಿರುವವನು. ಇಲ್ಲಿಯವರೆಗು ಆತನು ಎಲ್ಲರಿಗೂ ಒಳ್ಳೆಯವನಾಗಿಯೇ ಕಾಣಿಸುತ್ತಿದ್ದಾನೆ. ಆತನು ಮಾಡುವ ಒಳ್ಳೆಯ ಕೆಲಸಗಳು ಹತ್ತು (10) ಇದ್ದರೆ, ತೊಂಬತ್ತು (90) ಕೆಟ್ಟ ಕೆಲಸಗಳೇ ಇವೆ. ಆತನು ದೊಡ್ಡ ಸ್ವಾಮಿಯಾಗಿ ಹೆಸರು ಗಳಿಸಿದ ತಪಸ್ವಿಬಾಬಾರವರು. ಇದಕ್ಕು ಮೊದಲೇ ಆತನು ಭುವನೇಶ್ವರಿ ದೇವಾಲಯದಲ್ಲಿ ಕದಿಯಬೇಕೆಂದುಕೊಂಡ ವಜ್ರಗಳ ವಿಷಯದಲ್ಲಿ

ನಾವು ಅಡ್ಡಿ ಮಾಡಿದ್ದೇವೆ. ಆ ವಿಷಯದಲ್ಲಿ ಆತನಿಗೆ ನಾವು ಪೂರ್ತಿ ಶತ್ರುಗಳಾಗಿ ಕಾಣಿಸಿದ್ದೇವೆ. ಆದರೆ ಈ ಬಾಲಕನ ವಿಷಯದಲ್ಲಿ ಮಾತ್ರ ಇಲ್ಲಿಯವರೆಗು ನಮ್ಮ ಉದ್ದೇಶ ಆತನಿಗೆ ತಿಳಿದಿಲ್ಲ. ಆ ಬಾಲಕನ ವಿಷಯ ನಮಗೆ ತಿಳಿದಿರುವಂತೆ ಸಹ ಆತನಿಗೆ ತಿಳಿದಿಲ್ಲ. ಹದಿನಾರು (16) ಸಂವತ್ಸರಗಳಿಗೆ ಆ ಬಾಲಕನಿಗೆ ಯುಕ್ತವಯಸ್ಸು ಬಂದಾಗ ನಾವು ಬಹಿರಂಗವಾಗಿ ಆ ಬಾಲಕನ ವಿಷಯದಲ್ಲಿ ಅಡ್ಡಿಪಡಿಸಬೇ ಕಾಗುತ್ತದೆ. ಆಗ ಬಾಬಾಗೆ ನಾವು ಮುಖ್ಯವಾದ ಶತ್ರುಗಳಾಗಿ ಉಳಿದುಹೋಗುತ್ತೇವೆ. ಆಗ ಆತನು ನಮ್ಮನ್ನು ಅಂತ್ಯ ಮಾಡಬೇಕೆಂದು ನೋಡುತ್ತಾನೆ. ಆದ್ದರಿಂದ ಹಾಗೆ ನಡೆಯುವುದಕ್ಕೆ ಸಾಧ್ಯವಿಲ್ಲದಂತೆ ಮೊದಲೇ ಜಾಗ್ರತೆವಹಿಸುತ್ತಿದ್ದೇವೆ.

(ರಾಜಯೋಗಾನಂದ ಸ್ವಾಮಿ ಮೊದಲು ಜಾಗ್ರತೆಯಾಗಿ ರಾಘವ, ರಾಧೇಶ್ವರಿ ವಿವಾಹವನ್ನು ನಡೆಸಿದ್ದಾನೆ, ಮಲ್ಲುದೊರೆ, ದುಂದುಭಿ ಹತ್ತರವಿದ್ದು ರಾಘವನಿಗೆ ಮದುವೆ ಕಾರ್ಯಕ್ರಮವನ್ನು ನೆರವೇರಿಸಿದ್ದಾರೆ.)

**********************************

(ತಪಸ್ವಿಬಾಬಾರವರು ಅಷ್ಟಗ್ರಹ ಕೂಟಮಿ ದಿನದಂದು ಹುಟ್ಟಿದ ಬಾಲಕನಿಂದ ಶಕ್ತಿಯನ್ನು ಪಡೆಯುವುದಕ್ಕೆ ಆ ಬಾಲಕನಿಗೆ ಯುಕ್ತವಯಸ್ಸು 16 ಸಂವತ್ಸರಗಳು ಬರುವವರೆಗು ಕಾದು ಇರಬೇಕಾದ್ದೆ. ಎಲ್ಲ ಸಂವತ್ಸರಗಳು ಆ ಬಾಲಕನನ್ನು ಕಾದುಕೊಂಡಿರುವಂತೆ ತನ್ನ ಶಕ್ತಿಗಳನ್ನು ನಿಯಮಿಸಿ, ಇನ್ನು ವಜ್ರಗಳ ವಿಷಯವನ್ನು ನೋಡಬೇಕೆಂದುಕೊಂಡಿದ್ದಾನೆ. ಆಗ ಮುನೆಪ್ಪನೊಂದಿಗೆ ಹೀಗೆ ಮಾತನಾಡಿದ್ದಾನೆ.)

**ತಪಸ್ವಿಬಾಬಾ :–** ಮುನೆಪ್ಪಾ, ನೀನು ಮಾಂತ್ರಿಕರನ್ನು ಉತ್ಸಾಹಪಡಿಸಿ ಅವರಿಂದ ವಜ್ರಗಳ ಸುಳಿವನ್ನು ತಿಳಿದುಕೋ, ನಾನು ನನ್ನ ಶಕ್ತಿಗಳಿಂದ ಪ್ರಯತ್ನಿಸಿದರೆ ಏನೂ ತಿಳಿಯುತ್ತಿಲ್ಲ.

**ಮುನೆಪ್ಪ :–** ಬಾಬಾರವರೆ, ಈ ಮಾಂತ್ರಿಕರು ವಜ್ರಗಳಿಗಾಗಿ ಅಂಜನದಲ್ಲಿ ನೋಡಿ ಹಾವು ಹೊಡೆದಿದೆಯೆಂದು ಭಯಪಟ್ಟಿದ್ದಾರೆ. ಅಂಜನವೂ ಸಹ ಹೋಗಲಾರದ

ಜಾಗದಲ್ಲಿ ಆ ವಜ್ರಗಳಿವೆ. ಆದ್ದರಿಂದ ಅವು ಕಾಣಿಸುತ್ತಿಲ್ಲ ಎನ್ನುತ್ತಿದ್ದಾರೆ. ಮೇಲಾಗಿ ಹಾವಿನ ಭಯದಿಂದ ಅವರು ವಜ್ರಗಳ ವಿಷಯವೆಂದರೇನೆ ಹೆದರುತ್ತಿದ್ದಾರೆ.

**ತಪಸ್ವಿಬಾಬಾ :–** ಹಾಗಾದರೆ ಒಂದು ಕೆಲಸವನ್ನು ಉಪಾಯದಿಂದ ಯಾರಿಗೂ ತಿಳಿಯದಂತೆ ಮಾಡಬೇಕು. ಅದೇನೆಂದರೆ ನಕಲಿ ವಜ್ರಗಳನ್ನು ತೆಗೆದುಕೊಂಡು ಬಂದು ಭುವನೇಶ್ವರಿ ದೇವಾಲಯದಲ್ಲಿ ಭುವನೇಶ್ವರಿದೇವಿ ಪ್ರತಿಮೆಯ ಮುಂದೆ ಇಡಿ. ನಕಲಿ ವಜ್ರಗಳನ್ನು ಕವರಿನಲ್ಲಿಟ್ಟು, ಅದೇ ಕವರಿನಲ್ಲೇ ಒಂದು ಉತ್ತರವನ್ನು ಸಹ ಇಡಿ. ಆ ಪತ್ರದಲ್ಲಿ "ನಾವು ಈ ವಜ್ರಗಳನ್ನು ಕಳುವು ಮಾಡಿರುವುದು ತಪ್ಪು. ನಾವು ಅವುಗಳನ್ನು ತೆಗೆದುಕೊಂಡು ಹೋದಾಗಿನಿಂದ ನಮಗೆ ಅನಾರೋಗ್ಯವಾಗಿದೆ. ಆದ್ದರಿಂದ ಇವುಗಳನ್ನು ನಿನ್ನ ಮುಂದೆಯೇ ಇಡುತ್ತಿದ್ದೇವೆ. ನಮ್ಮನ್ನು ಕ್ಷಮಿಸಿ ನಮ್ಮ ಆರೋಗ್ಯ ಸರಿಹೋಗುವಂತೆ ಮಾಡು ತಾಯಿ" ಎಂದು ಬರೆದಿಡಿ. ಹಾಗೆ ಇಡುವುದರಿಂದ ಪುನಃ ವಜ್ರಗಳ ವಿಷಯ ಹೊರಗೆ ತಿಳಿಯುತ್ತದೆ. ಹಾಗೆ ತಿಳಿಯುವುದರಿಂದ ಅಸಲಾದ ವಜ್ರಗಳು ಎಲ್ಲಿರುವುದು ಅವುಗಳ ವಿವರವನ್ನು ತಿಳಿದವರು ಮಾತನಾಡಿಕೊಳ್ಳುತ್ತಾರೆ.  ಆಗ ಗೋಕರ್ಣ ವಿದ್ಯೆಯಲ್ಲಿನ ಕರ್ಣ ಪಿಶಾಚಿಯನ್ನು ಆದೇಶಿಸಿ ವಜ್ರಗಳ ಸಮಾಚಾರವನ್ನು ತಿಳಿದುಕೊಳ್ಳಬಹುದು. ಆದ್ದರಿಂದ ನೀನು ಕೂಡಲೇ ನಕಲಿ ವಜ್ರಗಳನ್ನು ತಯಾರು ಮಾಡಿಸಿ ಭುವನೇಶ್ವರಿ ದೇವಾಲಯದಲ್ಲಿ ಇಡುವ ಏರ್ಪಾಟನ್ನು ಮಾಡಿಡು.

**ಮುನೆಪ್ಪ :–** ನಮ್ಮವರು ವಜ್ರಗಳ ವಿಷಯವೆಂದರೇನೆ ಬೇಸರಗೊಂಡಿದ್ದಾರೆ. ಅಷ್ಟೇ ಅಲ್ಲದೆ ಮೊದಲು ಹೋದವರು ಆ ಗುಡಿ ಹತ್ತಿರಕ್ಕೆ ಹೋಗುವುದು ಒಳ್ಳೆಯದಲ್ಲ. ಆದ್ದರಿಂದ ಈ ಕೆಲಸಕ್ಕೆ ಯಾರನ್ನು ವಿನಿಯೋಗಿಸಬೇಕೋ ನೀವೇ ಹೇಳಿರಿ.

**ತಪಸ್ವಿಬಾಬಾ :–** ಈ ಕೆಲಸವನ್ನು ಬುದ್ಧಿ ಕಡಿಮೆ ಇರುವವರು ಮಾಡಬಾರದು. ಮಾರುವೇಷದಲ್ಲಿ ಹೋಗುತ್ತಾರೆ ಆದ್ದರಿಂದ ಮೊದಲು ಹೋದವರು ಹೋದರೂ ಪರವಾಗಿಲ್ಲ. ಒಬ್ಬರನ್ನು ಕೆಲಸಕ್ಕಾಗಿ, ಒಬ್ಬರನ್ನು ಸಮಾಚಾರವನ್ನು ಶೇಖರಿಸುವುದಕ್ಕಾಗಿ, ಒಬ್ಬರನ್ನು ಮೇಲೆ ನಿಘಾ ವಹಿಸಲು ಕಳುಹಿಸಬೇಕು.

(ಬಾಬಾರವರು ಹೇಳಿದಂತೆ ಮುನೆಪ್ಪ ತನ್ನ ಮನುಷ್ಯರನ್ನು ಮಾರುವೇಷದಲ್ಲಿ ಭುವನೇಶ್ವರಿ ದೇವಾಲಯಕ್ಕೆ ಕಳುಹಿಸಿದನು. ಭುವನೇಶ್ವರಿ ಆಲಯಕ್ಕೆ ಹೋದ ಮುನೆಪ್ಪ ಮನುಷ್ಯರು, ಮುನೆಪ್ಪ ಹೇಳಿದಂತೇ ಮಾಡಿದ್ದಾರೆ. ಆ ದಿನ ರಾತ್ರಿ ಅಲ್ಲಿರುವ ಪೂಜಾರಿ ಕವರನ್ನೂ, ಅದರಲ್ಲಿನ ವಜ್ರಗಳನ್ನೂ, ಕಳ್ಳರು ಬರೆದ ಪತ್ರವನ್ನು ನೋಡಿ ಕೂಡಲೇ ಪೊಲೀಸ್‌ನವರಿಗೆ ತಿಳಿಸಿದ್ದಾರೆ. ಆ ವಿಷಯವನ್ನು ತಿಳಿದುಕೊಂಡ ಪೊಲೀಸರು ದೇವಾಲಯಕ್ಕೆ ಬಂದು ವಿಷಯವನ್ನು ತಿಳಿದುಕೊಂಡು, ಆ ವಿಷಯವನ್ನು ಮೀಡಿಯಾದವರಿಗೆ ಹೇಳಿದ್ದಾರೆ. ಕೂಡಲೇ ಭುವನೇಶ್ವರಿ ದೇವಾಲಯದಲ್ಲಿ ಕಳುವಾದ ವಜ್ರಗಳು ಪುನಃ ಆಲಯ ಸೇರಿವೆಯೆಂದು ಎಲ್ಲ ಪತ್ರಿಕೆಗಳಲ್ಲಿ ವಾರ್ತೆಗಳು ಬಂದಿವೆ. ಆ ವಾರ್ತೆಗಳನ್ನು ನೋಡಿದ ಬಾಲಪ್ಪ ಇದು ಹೇಗೆ ಸಾಧ್ಯ? ಇದೇನೋ ಮೋಸವೆಂದುಕೊಂಡಿದ್ದಾನೆ. ಆದರೆ ತಾನು ಹೇಳಿದರೂ ಡಿಪಾರ್ಟ್‌ಮೆಂಟ್‌ನಲ್ಲಿ ಯಾರೂ ತನ್ನ ಮಾತನ್ನು ನಂಬುವುದಿಲ್ಲವೆಂದು ತಿಳಿದಿತ್ತು. ಆದ್ದರಿಂದ ಸುಮ್ಮನೆ ಇದ್ದಾನೆ. ವಾರ್ತಾ ವಿಷಯವನ್ನು ನೋಡಿದ ರಾಜಯೋಗಾ ನಂದಸ್ವಾಮಿ ತಪಸ್ವಿಬಾಬಾರವರ ಕುತಂತ್ರವನ್ನು ಗ್ರಹಿಸಿ ವಜ್ರಗಳ ವಿಷಯವನ್ನು ಮಾತನಾಡಬಾರದೆಂದುಕೊಂಡಿದ್ದಾರೆ. ವಜ್ರಗಳ ವಾರ್ತೆ ಕೊನೆಗೆ ಡಿ.ಜಿ.ಪಿಯವರ ಬಳಿಗೂ ಹೋಗಿದೆ. ಡಿ.ಜಿ.ಪಿ ರವರು ಇದು ಹೇಗೆ ಸಾಧ್ಯವಾಗುತ್ತದೆಂದು, ವಜ್ರಗಳು ಕಳ್ಳರ ಕೈಯ್ಯಲ್ಲಿ ಇಲ್ಲದಿದ್ದರೂ, ಕಳ್ಳರು ಹೇಗೆ ತಂದು ದೇವಾಲಯದಲ್ಲಿ ಇಡುತ್ತಾರೆಂದು ಅಂದುಕೊಂಡಿದ್ದಾನೆ. ಇದು ಕಳ್ಳರ ಕೈಚಳಕವೆಂದು ಡಿ.ಜಿ.ಪಿರವರು ಆಲೋಚಿಸ ಲಾರದೆ ಹೋದರು. ಮೊದಲಿನಿಂದ ವಜ್ರಗಳು ಎಲ್ಲಿರುವುದು ತನಗೆ ತಿಳಿದಿತ್ತು. ವಜ್ರಗಳು ಮಾಯವಾಗುವುದರಲ್ಲಿ ಯಾರ ಪಾತ್ರ ಇದೆಯೋ ಸಹ ತಿಳಿದಿತ್ತು. ಕೊನೆಗೆ ಅವು ರಾಜಯೋಗಾನಂದ ಸ್ವಾಮಿ ಹತ್ತಿರ ಇರುವ ವಿಷಯ ಸಹ ತಿಳಿದಿತ್ತು. ಆದರೂ ಈ ವಾರ್ತೆ ಏನು? ಎನ್ನುವ ಸಂದಿಗ್ಧದಲ್ಲಿ ಬಿದ್ದು ಒಂದು ಸಲ ರಾಜಯೋಗಾನಂದ ಸ್ವಾಮಿಯೊಂದಿಗೆ ಮಾತನಾಡಿದರೆ ವಿಷಯವೆಲ್ಲಾ ತಿಳಿಯುತ್ತದಲ್ಲವೆ ಎಂದುಕೊಂಡಿದ್ದಾನೆ. ಆಗ ಡಿ.ಜಿ.ಪಿ ಫೋನ್ ಹತ್ತಿರಕ್ಕೆ ಹೋಗಿ ರಿಂಗ್ ಮಾಡಬೇಕೆಂದುಕೊಂಡಿದ್ದಾನೆ. ಹಾಗೆ ಆತನು ಫೋನ್ ತೆಗೆಯದ ಮೊದಲೇ ರಿಂಗ್ ಶಬ್ದ ಕೇಳಿಸಿತು. ಕೂಡಲೇ ಡಿ.ಜಿ.ಪಿ ರಿಸೀವರ್ ತೆಗೆದುಕೊಂಡು ಹಲೋ

ಡಿ.ಜಿ.ಪಿ ಹಿಯರ್ ಎಂದನು. ನಾನು "ರಾಜಯೋಗಾನಂದ ನೀವು ನನ್ನನ್ನು ಯಾವ ವಿಷಯ ಕೇಳಬೇಡಿ. ನೀವು ಕೇಳಿರುವುದು ಕುತಂತ್ರದಲ್ಲಿನ ಭಾಗ" ಎಂದು ಫೋನ್ ಇಟ್ಟನು. ಡಿ.ಜಿ.ಪಿಗೆ ಆಗ ಸ್ವಲ್ಪ ಅರ್ಥವಾಗಿ ನನ್ನದೇ ತಪ್ಪೆಂದು ತಿಳಿದುಕೊಂಡಿದ್ದಾನೆ.)

**********************************

(ಜಮೀಂದಾರ್ ರಾವುಬಹುದೂರ್ ಜ್ಯೋತಿಷ್ಯನಿಗಾಗಿ ಕಾದುಕೊಂಡು ತಿಂಗಳು ದಿನಗಳು ನೋಡಿದ್ದಾನೆ. ಕೊನೆಗೆ ಆ ಜ್ಯೋತಿಷ್ಯನು ಸಹ ಭಯಪಟ್ಟಿದ್ದಾನೆಂದು ಅಂದುಕೊಂಡ ಜಮೀನ್ದಾರ ಕೊನೆಗೆ ಆತನಿಗಾಗಿ ಕಾದು ನೋಡುವುದು ಬಿಟ್ಟು ಬೇರೆ ಪ್ರಯತ್ನ ಮಾಡಬೇಕೆಂದುಕೊಂಡಿದ್ದಾನೆ. ಅಷ್ಟರಲ್ಲಿ ಆ ಬಾಲಕನಿಗೆ ಒಂದು ಸಂವತ್ಸರ ವಯಸ್ಸು ಬಂದಿತು. ಮಗು ಈಶ್ವರ್ ಚಿಕ್ಕದಾಗಿ ನಡೆಯುತ್ತಾ ಮನೆ ಹೊರಗೆ ಹೋಗಿದ್ದಾನೆ. ಆ ದಿನ ಅಮಾವಾಸ್ಯೆ ಆದರೂ ಯಾರಿಗೂ ಅದರ ಮೇಲೆ ಗಮನವಿಲ್ಲ. ಈಶ್ವರ್‌ನನ್ನು ಎತ್ತಿಕೊಂಡು ಒಳಗೆ ಕರೆದುಕೊಂಡು ಬರಬೇಕೆಂದು ಕೆಲಸದವಳು ಹೊರಗೆ ಬಂದಿದ್ದಾಳೆ. ಅಷ್ಟರಲ್ಲಿ ಒಂದು ಹುಚ್ಚು ಹಿಡಿದ ಕುದುರೆ ಓಡುತ್ತಾ ಬಂದಿತು. ಅದು ಊರೆಲ್ಲಾ, ಬಜಾರುಗಳ ಹಿಂದೆ ಓಡುತ್ತಾ ಅಡ್ಡಬಂದವರನ್ನೆಲ್ಲ ಕಚ್ಚುವುದು, ಕಾಲಿನಿಂದ ಹೊದೆಯುವುದು ಮಾಡುತ್ತಿದೆ. ಅಂತಹ ಹುಚ್ಚು ಕುದುರೆಯನ್ನು ಊರಿನಿಂದ ಓಡಿಸಬೇಕೆಂದು ಬಹಳ ಜನ ಅದನ್ನು ಓಡಿಸಿದಾಗ, ಅದು ಯಾರಿಗೂ ಸಿಗದಂತೆ ಈಶ್ವರ್ ಇರುವ ದಾರಿಯಲ್ಲಿ ವೇಗವಾಗಿ ಓಡುತ್ತಾ ಬಂದಿತು. ಅದು ಬರುವ ವೇಗಕ್ಕೆ ಎಲ್ಲರೂ ಭಯಪಟ್ಟು ಪಕ್ಕಕ್ಕೆ ಓಡಿಹೋಗಿದ್ದಾರೆ. ಈಶ್ವರ್‌ನನ್ನು ಕರೆದುಕೊಳ್ಳುವುದಕ್ಕೆ ಹೊರಗೆ ಬಂದಿರುವ ಕೆಲಸದವಳು ಕುದುರೆಯನ್ನು ನೋಡಿ ಮುಂದಕ್ಕೆ ಹೋಗಲಾರದೆ ಹಿಂದಕ್ಕೆ ಹೆಜ್ಜೆಹಾಕಿದಳು. ಆ ಕುದುರೆ ವೇಗವಾಗಿ ಈಶ್ವರ್ ಕಡೆ ಬಂದಿತು. ಅದನ್ನು ನೋಡಿದ ಎಲ್ಲರೂ ಈಶ್ವರ್ ಕುದುರೆ ಕಾಲಿನ ಕೆಳಗೆ ಬೀಳುತ್ತಾನೆಂದು ಅಂದುಕೊಂಡಿದ್ದಾರೆ. ವೇಗವಾಗಿ ಬಂದಿರುವ ಕುದುರೆ ಈಶ್ವರ್‌ನಿಂದ ಆರು ಅಡಿಗಳ ದೂರದಲ್ಲಿ ಕುಸಿದು ಕೆಳಗೆ ಬಿದ್ದಿತು. ಕುದುರೆ ಈಶ್ವರ್ ಹತ್ತಿರಕ್ಕೆ ಬರುವುದಕ್ಕಿಂದ

ಮೊದಲೆ ಕೆಳಗೆ ಬೀಳುವುದು ನಡೆದ ಕೂಡಲೇ ಅಲ್ಲಿರುವವರು ಈಶ್ವರ್‌ನನ್ನು ಮನೆಯೊಳಗೆ ತಂದಿದ್ದಾರೆ. ಕೆಳಗೆ ಬಿದ್ದಿರುವ ಕುದುರೆ ಕಾಲು ಕದಲಿಸುತ್ತಾ ಏಳಲಾರದೆ ಕೆಳಗೆ ಬಿದ್ದಿದೆ. ಸ್ವಲ್ಪ ಹೊತ್ತಿಗೆ ಅದು ಸತ್ತುಹೋಯಿತು. ಈಶ್ವರ್ ಕಡೆ ಬಂದಿರುವ ಕುದುರೆ ಹಾಗೆ ಮರಣಿಸುವುದು ಎಲ್ಲರಿಗೂ ವಿಚಿತ್ರವೆನಿಸಿತು. ಈ ವಿಷಯವನ್ನು ರಾವುಬಹದೂರ್ ಕೇಳಿ ಅಂದಿನಿಂದ ಆ ಬಾಲಕನನ್ನು ದೊಡ್ಡದಾಗಿಯೇ ನೋಡಿಕೊಳ್ಳುತ್ತಿದ್ದನು. ಬಾಲಕನನ್ನು ಜಾಗ್ರತೆಯಿಂದ ನೋಡಿಕೊಳ್ಳಲು ಹೇಳಿ ಒಂಟಿಯಾಗಿ ಬಿಡಬೇಡವೆಂದು ಆತನು ಕೆಲಸದವರೊಂದಿಗೆ ಹೇಳಿದನು.)

*********************************

(ರಾಘವ ಮದುವೆಯಾದ ನಂತರ ಸಂವತ್ಸರಕ್ಕೆ ಮಗ ಹುಟ್ಟಿದ್ದಾನೆ. ರಾಘವ ಮಗನಿಗೆ ರಾಜಯೋಗಾನಂದ ಸ್ವಾಮಿ ಅಕ್ಷಯ್ ಎಂದು ಹೆಸರು ಇಟ್ಟಿದ್ದಾನೆ. ನಂತರ ಎರಡು ಸಂವತ್ಸರಗಳಿಗೆ ಒಬ್ಬರಂತೆ ಅಮರ್, ಅಕ್ಷತ್ ಎನ್ನುವ ಇಬ್ಬರು ಮಕ್ಕಳು ಹುಟ್ಟಿದ್ದಾರೆ. ರಾಘವನಿಗೆ ಮೂವರು ಮಕ್ಕಳು ಹುಟ್ಟುವುದು ಅಲ್ಲಿರುವವರೆಲ್ಲರಿಗೂ ಸಂತೋಷವಾಯಿತು. ದುಂದುಭಿಗೆ ಸಂತಾನವಿಲ್ಲ, ಆದ್ದರಿಂದ ರಾಧೇಶ್ವರಿ ಮಕ್ಕಳನ್ನು ತನ್ನ ಸ್ವಂತ ಮಕ್ಕಳಾಗಿ ಭಾವಿಸಿ ಬೆಳೆಸುತ್ತಿದ್ದಳು. ಈ ವಿಧವಾಗಿ ಸಂತೋಷವಾಗಿ ಕಾಲ ಕಳೆದುಹೋಗುತ್ತಿದೆ.)

*********************************

(ತಪಸ್ವಿ ಬಾಬಾರವರು ತನ್ನ ಆಶ್ರಮದಲ್ಲಿ ವಜ್ರಗಳ ವಿಷಯವನ್ನು ಕುರಿತು ಚಿಂತಿಸುತ್ತಾ, ನಕಲಿ ವಜ್ರಗಳನ್ನು ದೇವಾಲಯದಲ್ಲಿ ಇಟ್ಟರೆ ಅಷ್ಟಕ್ಕೆ ಆ ವಿಷಯ ನಿಂತುಹೋಯಿತು. ಆದರೆ ಅಸಲಾದ ವಜ್ರಗಳ ವಿಷಯ ತಿಳಿಯದಂತೆ ಹೋಯಿತು. ಸುಮಾರು ಏಳು ಸಂವತ್ಸರಗಳ ಕಾಲವಾದರೂ ಅವುಗಳ ಸುಳಿವು ತಿಳಿಯದಂತೆ ಹೋಯಿತು. ಯಾವಾಗ ಎಷ್ಟು ಪ್ರಯತ್ನಗಳನ್ನು ಮಾಡಿದರೂ ಅವು ಎಲ್ಲಿರುವುದೂ ಸಹ ತಿಳಿಯದಂತೆ ಹೋಗಿದೆ. ಇಷ್ಟು ಧನಬಲ, ಮಂತ್ರಬಲ ಇದ್ದೂ ಸಹ ಏನೂ ಪ್ರಯೋಜನವಿಲ್ಲದಂತೆ ಹೋಗಿದೆ ಎಂದುಕೊಂಡಿದ್ದಾನೆ. ಹಾಗೆ ಅಂದುಕೊಳ್ಳುತ್ತಾ

ನಂತರ ಒಂದು ವರ್ಷವೂ ಕಳೆದುಹೋಯಿತು. ಅಲ್ಲಿಗೆ ಎಂಟು ಸಂವತ್ಸರಗಳು ಕಳೆದುಹೋಯಿತು. ಇದ್ದಕ್ಕಿಂದ್ದಂತೆ ಒಂದು ದಿನ ಭುವನೇಶ್ವರಿ ದೇವಾಲಯದಲ್ಲಿ ಆಭರಣಗಳು ವಜ್ರಗಳು ಕಳ್ಳರು ಕದ್ದುಕೊಂಡುಹೋದಂತೆ ವಾರ್ತೆಗಳು ಬಂದಿವೆ. ರಾಜಯೋಗಾನಂದ ಸ್ವಾಮಿ ಆ ವಾರ್ತೆಗಳಿಗೆ ಸ್ಪಂದಿಸಲಿಲ್ಲ. ತಪಸ್ವಿಬಾಬಾಗು, ಮುನೆಪ್ಪನಿಗು ಆ ವಾರ್ತೆ ತಿಳಿದು ನಮಗಿಂತ ಮೀರಿದ ಕಳ್ಳರು ಯಾರಿದ್ದಾರೆಂದು ಆಲೋಚಿಸಿದರು. ಈ ಸಲ ಗುಡಿಯೊಳಗೆ ಹೋಗಿ ನೋಡಿದ ಪೋಲೀಸರಿಗೆ ಕೆಲವು ಆಧಾರಗಳು ದೊರೆತಿವೆ. ದೊರೆತ ಆಧಾರಗಳಿಂದ ಕಳ್ಳರನ್ನು ಹಿಡಿದುಕೊಳ್ಳ ಬಹುದೆಂದು ಪೋಲೀಸರು ತಿಳಿದಿದ್ದಾರೆ.

ಭುವನೇಶ್ವರಿ ದೇವಾಲಯದಲ್ಲಿ ಕಳ್ಳತನ ನಡೆದ ದಿನ ರಾತ್ರಿ ಹನ್ನೊಂದು ಗಂಟೆಗಳವರೆಗು ಭಜನೆ ಕಾರ್ಯಕ್ರಮ ಇತ್ತು. ಆ ದಿನ ಗುಡಿಯಲ್ಲಿ ಜಠಾಜೂಟ ಸ್ವಾಮಿ ಕುಳಿತುಕೊಂಡಿರುವಾಗ, ಆ ಸ್ವಾಮಿ ಭಕ್ತರು ನೂರಾರು ಜನರು ಬಂದು ಭಜನೆ ಮಾಡಿದ್ದಾರೆ. ಭಾನುವಾರ ದಿನ ಭಜನೆ ಕಾರ್ಯಕ್ರಮ ಸಾಯಂಕಾಲ ಐದು ಗಂಟೆಗಳಿಂದ ರಾತ್ರಿ ಹನ್ನೊಂದುಗಂಟೆಗಳವರೆಗು, ಬೆಳಗ್ಗೆ ಐದು ಗಂಟೆಗಳಿಂದ ಹಗಲು ಹನ್ನೊಂದು ಗಂಟೆಗಳವರೆಗು ಜಠಾಜೂಟ ಸ್ವಾಮಿ ಸಮ್ಮುಖದಲ್ಲಿ ನಡೆಯುತ್ತದೆ. ಜಠಾಜೂಟಸ್ವಾಮಿ ಭಜನೆಯಲ್ಲಿ ಬಹಳ ಜನ ಭಕ್ತರಿಗೆ ಮೈ ಮೇಲೆ ಸೂಕ್ಷ್ಮಗಳು ಬರುತ್ತವೆಂದು ಮೊದಲೇ ಹೇಳಿಕೊಂಡಿದ್ದೇವಲ್ಲವೆ! ಸ್ವಾಮಿ ಅಧೀನದಲ್ಲಿರುವ ಭೂತ, ಪ್ರೇತ, ಪಿಶಾಚಿಗಳು ಕೆಲವರು ಭಕ್ತರಲ್ಲಿ ಬಂದು ಇಷ್ಟ ಬಂದಂತೆ ಕುಣಿದು, ನಾಟ್ಯಮಾಡುತ್ತವೆಂದು ತಿಳಿದಿತ್ತು. ಆ ರಾತ್ರಿ ಭಜನೆ ಸಮಯದಲ್ಲಿ ಬಹಳಜನರಿಗೆ ಮೈ ಮೇಲೆ ಸೂಕ್ಷ್ಮಗಳು ಬಂದಿವೆ. ಕೆಲವರು ಕುಣಿಯುತ್ತಿದ್ದರೆ, ಕೆಲವರು ಓಡುತ್ತಿದ್ದರೇ, ಕೆಲವರು ವಿವಿಧ ವಿಧಗಳ ನಾಟ್ಯಗಳು ಮಾಡುತ್ತಿದ್ದರೇ, ಕೆಲವರು ತೂಗುತ್ತಾ, ಕೆಲವರು ಊಗುತ್ತಾ ಇದ್ದಾರೆ. ಅಂತಹ ಗೊಂದಲ ಸಮಯದಲ್ಲಿ ಭಜನೆ ಮುಗಿದುಹೋಗುತ್ತದೆ. ಅದೇ ಸಮಯದಲ್ಲಿ ಪೂಜಾರಿ ತೀರ್ಥಕ್ಕಾಗಿ ಬಹಳ ಜನ ಪರದಾಡುತ್ತಿರುವಾಗ, ಪೂಜಾರಿ ಗಮನಿಸದಂತೆ ಒಬ್ಬ ಸೂಕ್ಷ್ಮ ಬಂದಂತೆ ನಟಿಸುತ್ತಾ ಗರ್ಭಗುಡಿಯೊಳಗೆ ಹೋಗಿದ್ದಾನೆ. ಎಲ್ಲರ ಕಣ್ಣು ಮುಚ್ಚಿ ಹೋದ ವ್ಯಕ್ತಿ ಒಳಗಿರುವ ಬಾಗಿಲು ಪರದೆಬಟ್ಟೆಗಳನ್ನು ತನ್ನಮೇಲೆ

ಹಾಕಿಕೊಂಡು ಒಂದು ಮೂಲೆಯಲ್ಲಿ ಕುಳಿತುಕೊಂಡಿದ್ದಾನೆ. ಅಷ್ಟರಲ್ಲಿ ಭಜನೆ ಮುಗಿದುಹೋಗಿರುವುದು ದೇವಾಲಯ ಬಾಗಿಲು ಹಾಕುವುದು ನಡೆದಿದೆ. ಗರ್ಭಗುಡಿಯೊಳಗೆ ಹೋಗಿರುವುದು ಜಟಾಜೂಟ ಸ್ವಾಮಿಯೊಬ್ಬನ ಮನುಷ್ಯನೇ! ಆತನಿಗೆ ಹಾಗೆ ಹೋಗಲು ಜಟಾಜೂಟ ಸ್ವಾಮಿಯೇ ಹೇಳಿದ್ದಾನೆ.

ಹಾಗೆ ತನ್ನ ಮನುಷ್ಯನನ್ನು ಗರ್ಭಗುಡಿಯೊಳಗೆ ಆ ರಾತ್ರಿ ಜಟಾಜೂಟಸ್ವಾಮಿ ಏಕೆ ಹೋಗೆಂದು ಹೇಳಿದ್ದಾನೆಂದರೆ! ಭುವನೇಶ್ವರಿದೇವಿಯೊಂದರ ವಜ್ರಗಳು ಗತಕಾಲದಲ್ಲಿ ಎಂಟು ಸಂವತ್ಸರಗಳ ಕೆಳಗೆ ಕಳುವಾಗಿರುವ ವಿಷಯ ಎಲ್ಲರಿಗು ತಿಳಿದಿತ್ತು. ನಂತರ ವಜ್ರಗಳನ್ನು ಚೀಟಿ ಬರೆದು ಕವರ್‌ನೊಳಗಿಟ್ಟು ಹೋಗುವುದು ಸಹ ಎಲ್ಲರಿಗೂ ತಿಳಿದಿದೆ. ಹಾಗೆ ಇಟ್ಟುಹೋದ ವಜ್ರಗಳು ನಕಲಿವೆಂದು ದೇವಾಲಯದವರಾಗಲೀ, ಪೊಲೀಸರಾಗಲೀ ಗುರುತಿಸಲಾರದೆ ಹೋಗಿದ್ದಾರೆ. ಆ ವಿಷಯ ಜಟಾಜೂಟ ಸ್ವಾಮಿಗೂ ಸಹ ತಿಳಿದಿಲ್ಲ. ಪುನಃ ಬಂದಿರುವ ವಜ್ರಗಳನ್ನು ಮೊದಲು ಬಚ್ಚಿಟ್ಟಿರುವ ಕಡೆ ಬಚ್ಚಿಡದಂತೆ, ಈ ಸಲ ಗರ್ಭಗುಡಿಯಲ್ಲಿ ಮೇಲೆ ಇಟ್ಟಿರುವ ಪೆಟ್ಟಿಗೆಯಲ್ಲಿ ಬಚ್ಚಿಟ್ಟಿರುವುದು ನಡೆದಿದೆ. ಗರ್ಭಗುಡಿಯೊಳಗೆ ಹೋದರೂ ಯಾರೂ ಮೇಲಕ್ಕೆ ನೋಡುವುದಿಲ್ಲವೆನ್ನುವ ಉದ್ದೇಶದಿಂದ ಆಲೋಚಿಸಿ ಕೆಲವು ಆಭರಣಗಳನ್ನು ವಜ್ರಗಳನ್ನು ಬಚ್ಚಿಟ್ಟಿರುವುದು ನಡೆದಿದೆ. ಹಾಗೆ ಬಚ್ಚಿಟ್ಟಿರುವ ವಿಷಯ ಕೆಲವು ಸಂವತ್ಸರಗಳಿಗೆ ಜಟಾಜೂಟ ಸ್ವಾಮಿಗೆ ತಿಳಿಯಿತು. ಮೊದಲಿನಿಂದ ವಜ್ರಗಳನ್ನು ಕದಿಯಬೇಕೆನ್ನುವ ಉದ್ದೇಶದಿಂದಿರುವ ಜಟಾಜೂಟ ಸ್ವಾಮಿಗೆ ಮೊದಲು ನಡೆದ ಕಳ್ಳತನದಿಂದ ಸ್ವಲ್ಪ ನಿರುತ್ಸಾಹ ಏರ್ಪಟ್ಟರೂ, ಪುನಃ ವಜ್ರಗಳನ್ನು ಆಲಯದೊಳಗೆ ಸೇರಿದಾಗಿನಿಂದ ಅವುಗಳನ್ನು ಸ್ವಾಧೀನಪಡಿಸಿಕೊಳ್ಳಬೇಕೆನ್ನುವ ಚಿಂತೆಯಲ್ಲೇ ಇದ್ದನು. ಆದರೂ ಅವು ಎಲ್ಲಿರುವುದು ತಿಳಿಯದೆ ಇಷ್ಟು ಕಾಲ ಕಾದಿರುವ ಜಟಾಜೂಟ ಸ್ವಾಮಿಗೆ ವಜ್ರಗಳು ಗರ್ಭಗುಡಿಯಲ್ಲೇ ಇವೆಯೆನ್ನುವ ವಿಷಯ ಕೊನೆಗೆ ತಿಳಿದುಹೋಯಿತು. ಆಗ ಬುದ್ಧಿವಂತಿಕೆಯಿಂದ ಅವುಗಳನ್ನು ಕದಿಯಬೇಕೆನ್ನುವ ಉದ್ದೇಶದಿಂದ ಭಜನೆ ಕಾರ್ಯವನ್ನು ಇಟ್ಟು, ಉಪಾಯದ ಪ್ರಕಾರ ಅ ದಿನ ರಾತ್ರಿ ತನ್ನ ಮನುಷ್ಯನನ್ನು ಗರ್ಭಗುಡಿಯೊಳಗೆ ಕಳುಹಿಸಿದ್ದಾನೆ. ರಾತ್ರಿ ಹನ್ನೊಂದರಿಂದ ಬೆಳಗಿನ ಜಾವ ಐದು ಗಂಟೆಗಳವರೆಗು ಅವಧಿ

ಇರುವುದರಿಂದ ಒಳಗೆ ಹೋಗಿರುವ ಮನುಷ್ಯ ಅವುಗಳನ್ನು ತೆಗೆದುಕೊಂಡು ಇರುವುದು ನಡೆದಿದೆ. ಪ್ರಾತಃಕಾಲದಲ್ಲೇ ಐದು ಗಂಟೆಗಳಿಗೆ ಗರ್ಭಗುಡಿ ಬಾಗಿಲು ತೆಗೆದಾಗ ಒಳಗೆ ಇರುವ ವ್ಯಕ್ತಿಯನ್ನು ಯಾರೂ ಗಮನಿಸದಂತೆ ಹೊರಗೆ ಬರುವುದಕ್ಕೆ ಸರಿಯಾಗಿ ಗರ್ಭಗುಡಿ ಬಾಗಿಲು ತೆಗೆದಾಗ ತಮ್ಮ ಹತ್ತಿರ ಬಚ್ಚಿಟ್ಟುಕೊಂಡಿರುವ ಹಾವನ್ನು ಗುಡಿಯಲ್ಲಿ ಬಿಟ್ಟು ಜಠಾಜೂಟ ಸ್ವಾಮಿ ಭಕ್ತರು ಗೊಂದಲದ ಪರಿಸ್ಥಿತಿಯನ್ನು ಸೃಷ್ಠಿಸಿದ್ದಾರೆ. ಹಾಗೆ ನಡೆಯುತ್ತಿರುವ ಗೊಂದಲದಲ್ಲಿ ಕೆಲವರು ಸ್ವಾಮಿ ಭಕ್ತರು ಗರ್ಭಗುಡಿಯೊಳಗೆ ಹಾವಿನ ಭಯದಿಂದ ಹೋಗುವಂತೆ ಮಾಡಿ, ಹಾಗೆ ಒಳಗೆ ಹೋದವರಲ್ಲಿ ವಜ್ರಗಳನ್ನು ಕಳುವು ಮಾಡಿದ ಮನುಷ್ಯ ಸೇರಿ ಬರುವಂತೆ ಮಾಡಿದ್ದಾನೆ. ಈ ವಿಧವಾಗಿ ಆ ದಿನ ರಾತ್ರಿ ಜಠಾಜೂಟ ಸ್ವಾಮಿ ತನ್ನ ಒಳಸಂಚಿನ ಪ್ರಕಾರ ವಜ್ರಗಳನ್ನು ಸಂಪಾದಿಸಿದ್ದಾನೆ. ನಂತರ ಕೆಲವು ದಿನಗಳಿಗೆ ಆ ವಜ್ರಗಳನ್ನು ಚೆನ್ನಾಗಿ ಗಮನಿಸಿದ ಜಠಾಜೂಟ ಸ್ವಾಮಿ ಅವು ಅಸಲಾದ ವಜ್ರಗಳು ಅಲ್ಲವೆಂದು ತಾವು ಕಳುವು ಮಾಡಿದ ವಜ್ರಗಳು ನಕಲಿವೆಂದು ತಿಳಿದುಕೊಂಡಿದ್ದಾನೆ. ತಮ್ಮ ಹತ್ತಿರ ಇರುವವು ನಕಲಿ ವಜ್ರಗಳಾದರೆ ಅಸಲಾದ ವಜ್ರಗಳೆಲ್ಲಿವೆಯೆಂದು ಆಲೋಚಿಸಿದ್ದಾನೆ. ದೇವಸ್ಥಾನವೊಂದರ ಧರ್ಮಕರ್ತರೇ ಅಸಲಾದ ವಜ್ರಗಳನ್ನು ತೆಗೆದುಕೊಂಡು ನಕಲಿ ವಜ್ರಗಳನ್ನು ಆಲಯದಲ್ಲಿ ಇಟ್ಟಿದ್ದಾನೆಂದು ಅಂದುಕೊಂಡಿದ್ದಾನೆ.

ಆಲಯ ಧರ್ಮಕರ್ತನ ಮೇಲೆ ಜಠಾಜೂಟ ಸ್ವಾಮಿಗೆ ಅನುಮಾನ ಬಂದ ನಂತರ ಧರ್ಮಕರ್ತನ ಮೋಸವನ್ನು ಹೊರಗೆ ಇಡಬೇಕೆಂದುಕೊಂಡಿದ್ದಾನೆ. ಎರಡು ದಿನಗಳ ನಂತರ ನ್ಯೂಸ್‌ಪೇಪರ್‌ರವರಿಗೆ ಆಕಾಶರಾಮಣ್ಣನ ಪತ್ರ ಬರೆದಿದ್ದಾನೆ. ಅದರಲ್ಲಿ ಭುವನೇಶ್ವರಿ ಆಲಯದಲ್ಲಿನ ಆಭರಣಗಳು ನಕಲಿವೆಂದು, ಅಸಲಾದ ವಜ್ರಗಳನ್ನು ಧರ್ಮಕರ್ತನು ಕದ್ದಿದ್ದಾನೆಂದು, ಗುಡಿಯಲ್ಲಿನ ವಜ್ರಗಳನ್ನು ಕಳುವು ಮಾಡಿದ ನಂತರ ಅವು ನಕಲಿವೆಂದು ತಿಳಿದಿದೆಯೆಂದು ತಾವು ಕಷ್ಟಪಟ್ಟು ಕಳ್ಳತನ ಮಾಡಿದರೂ ಪ್ರಯೋಜನ ಇಲ್ಲದೆ ಹೋಗಿದೆಯೆಂದು ಬರೆದು, ಆ ಪತ್ರವನ್ನು ಪೋಲೀಸ್‌ರವರಿಗೆ ಕಳುಹಿಸಿದ್ದಾನೆ. ಆ ಪತ್ರವನ್ನು ನೋಡಿದ ಪೋಲೀಸರಿಗೆ ಗುಡಿಯಲ್ಲಿನ ವಜ್ರಗಳು ಕಳುವಾಗಿವೆಯೆಂದು ತಿಳಿಯಿತು. ಆಲಯಕ್ಕೆ

ಸಂಬಂಧಿಸಿದವರು ಯಾರೂ ತಮಗೆ ಕಳ್ಳತನವನ್ನು ಕುರಿತು ಹೇಳಲಿಲ್ಲವೇ ಎಂದುಕೊಂಡು, ಆ ವಿಷಯವನ್ನು ವಿಚಾರಿಸಬೇಕೆಂದು ಸಿ.ಐ. ಭುವನೇಶ್ವರಿ ದೇವಾಲಯಕ್ಕೆ ಹೋಗಿ ವಜ್ರಗಳನ್ನು ಕುರಿತು ವಿಚಾರಿಸಿದ್ದಾನೆ. ಆಲಯದವರು ಅಸಲು ಕಳ್ಳತನವೇ ನಡೆಯಲಿಲ್ಲವೆಂದು ಹೇಳಿದ್ದಾರೆ. ಆಗ ತನಗೆ ಬಂದಿರುವ ಉತ್ತರವನ್ನು ಸಿ.ಐ. ದೇವಾಲಯದವರಿಗೆ ತೋರಿಸಿದ್ದಾನೆ. ಅದನ್ನು ನೋಡಿದ ಧರ್ಮಕರ್ತನು ಸಿ.ಐ ನೊಂದಿಗೆ ಹೀಗೆ ಹೇಳಿದ್ದಾನೆ.

**ಧರ್ಮಕರ್ತ:–** ಮೊದಲು ಎಂಟು ಸಂವತ್ಸರಗಳ ಕೆಳಗೆ ಕಳುವು ನಡೆದ ನಂತರ ನಾವು ಕೆಲವರೊಂದಿಗೆ ಆಲೋಚಿಸಿ ಅಮ್ಮನವರಿಗೆ ಬಳಸುವ ಆಭರಣಗಳನ್ನು ಒಂದು ಕಡೆ, ಬಳಸದ ಆಭರಣಗಳನ್ನು ವಜ್ರಗಳನ್ನೂ ಮತ್ತೊಂದು ಕಡೆ ಇಡಬೇಕೆಂದುಕೊಂಡಿದ್ದೇವೆ. ನಂತರ ವಜ್ರಗಳನ್ನೂ, ಮತ್ತೆ ಕೆಲವು ಅಲಂಕಾರಕ್ಕೆ ಕೆಲಸಕ್ಕೆ ಬಾರದ ಆಭರಣಗಳನ್ನೂ ಸೇರಿಸಿ ಮತ್ತೊಂದು ಕಡೆ ಇಟ್ಟಿದ್ದೇವೆ. ಎರಡನೆ ಸಲ ವಜ್ರಗಳು ಎಲ್ಲಿ ಇಟ್ಟಿರುವುದು ಹೊರಗಿನವರಿಗೆ ತಿಳಿಯದು. ತಿಳಿದರೂ ಅವುಗಳನ್ನು ಕಳುವು ಮಾಡುವುದಕ್ಕೆ ಆಗುವುದಿಲ್ಲ. ಅವುಗಳನ್ನು ನಾವು ತೆಗೆಯಬೇಕೆಂದರೂ ಒಂದು ಗಂಟೆ ಸಮಯ ಬೇಕಾಗುತ್ತದೆ.

**ಸಿ.ಐ:–** ಆದರೆ ಈ ಉತ್ತರವನ್ನು ಕಳ್ಳರೇ ಬರೆದಂತೆ ಇದೆಯಲ್ಲವೆ!

**ಧರ್ಮಕರ್ತ :–** ಹಾಗೆ ಬರೆದರೆ ನೀವು ನಾವು ಅವುಗಳನ್ನು ನೋಡುವ ಪ್ರಯತ್ನ ಮಾಡುತ್ತೇವಲ್ಲವೆ! ಆಗ ಅವು ಎಲ್ಲಿರುವುದು ತಿಳಿದುಕೊಳ್ಳಬಹುದೆಂದು ಹಾಗೆ ಬರೆದಿರಬಹುದು. ಇಲ್ಲದೇ ಹೋದರೆ ಧರ್ಮಕರ್ತನ ಮೇಲೆ ಕೆಸರು ಚಲ್ಲುವುದಕ್ಕೆ ಆಲಯಕ್ಕೆ ಸಂಬಂಧಿಸಿದವರೇ ಅಸೂಯೆಯಿಂದ ಹಾಗೆ ಬರೆದಿರಬಹುದು.

**ಸಿ.ಐ. :–** ಹಾಗಾದರೆ ಒಂದು ಕೆಲಸವನ್ನು ಮಾಡಿ. ನಾವು ಬಂದು ವಿಚಾರಿಸಿದಂತೆ ಆಲಯದಲ್ಲಿ ಎಂತಹ ದರೋಡೆ ನಡೆಯಲಿಲ್ಲವೆನ್ನುವಂತೆ ನೀವು ನಮಗೆ ಬರೆದು ಕೊಡಿ.

**ಧರ್ಮಕರ್ತ :–** ಹಾಗೆಯೇ ಬರೆದು ಕೊಡುತ್ತೇವೆ. ನಾವು ಹೇಳುವ ಮಾತು

ನಿಜವೆಂದು ತಿಳಿಯುವುದಕ್ಕೆ ವಜ್ರಗಳನ್ನು ಹೇಗೆ ಬಚ್ಚಿಟ್ಟಿರುವುದು ಸಹ ನಿಮಗೆ ತೋರಿಸುತ್ತೇವೆ ಬನ್ನಿ..

(ಎಂದು ಹೇಳಿ ಸಿ.ಐ ನನ್ನು ಕರೆದುಕೊಂಡು ಗರ್ಭಗುಡಿಯೊಳಗೆ ಹೋಗಿ ಮೇಲೆ ಕಟ್ಟಿ ಇಟ್ಟಿರುವ ಪೆಟ್ಟಿಗೆಯನ್ನು ತೋರಿಸಿದ್ದಾನೆ. ಸಿ.ಐ. ಕೂಡಾ ಗರ್ಭಗುಡಿಯಲ್ಲಿ ಭದ್ರವಾಗಿಟ್ಟಿರುವ ಪೆಟ್ಟಿಗೆಯನ್ನು ನೋಡಿದರು. ವಜ್ರಗಳನ್ನು ಕುರಿತು ತಪ್ಪು ಸಮಾಚಾರವನ್ನು ಕೊಟ್ಟಿದ್ದಾರೆಂದು ಸಿ.ಐ ಎಂದುಕೊಂಡು ಅಲ್ಲಿಂದ ಹೊರಟು ಹೋಗಿ, ಯಸ್.ಪಿನೊಂದಿಗೆ ವಿಷಯವೆಲ್ಲಾ ಹೇಳಿದ್ದಾನೆ ಆಗ ಪೋಸ್ಟ್‌ನಲ್ಲಿ ಬಂದಿರುವ ಆ ಲೆಟರ್‌ನನ್ನು ಯಸ್.ಪಿ ರವರು ಓದಿ, ನಂತರ ಲೆಟರ್ ಹಿಂಬದಿಯಲ್ಲಿ ಇರುವ ಪೋಸ್ಟ್ ಮುದ್ರೆಯನ್ನು ನೋಡಿದ್ದಾನೆ. ಹಾಗೆ ನೋಡುವುದರಿಂದ ಆ ಪತ್ರ(ಲೇಖನ) ಎಲ್ಲಿಂದ ಬಂದಿದೆಯೋ ತಿಳಿಯುತ್ತದೆಂದು ನೋಡಿದ್ದಾನೆ. ಅದರ ಮೇಲೆ ಎರಡು ಮುದ್ರೆಗಳು ಅದೇ ಊರಿಗೆ ಸಂಬಂಧಿಸಿರುವವಾಗಿ ಇರುವುದನ್ನು ಗಮನಿಸಿದ್ದಾನೆ. ಇದನ್ನನುಸರಿಸಿ ಆ ಪತ್ರ ಸ್ಥಳೀಯರೇ ಬರೆದಂತೆ ಅರ್ಥವಾಯಿತು. ಅದನ್ನು ನೋಡಿದ ನಂತರ ಸಿ.ಐನೊಂದಿಗೆ ಯಸ್.ಪಿ ರವರು ಹೀಗೆ ಹೇಳಿದ್ದಾರೆ.

**ಯಸ್.ಪಿ :–** ಈ ಪತ್ರ ಇದೇ ಊರಿನಿಂದ ಇಲ್ಲಿನ ಸ್ಥಳೀಯರೇ ಬರೆದಿದ್ದಾರೆನ್ನುವುದಕ್ಕೆ ಆಧಾರವಿದೆ. ಆದರೆ ಕಳ್ಳತನ ನಡೆಯಲಿಲ್ಲವೆನ್ನುವುದಕ್ಕೆ ಆಧಾರವಿದೆಯಾ?

**ಸಿ.ಐ.:–** ಸಾರ್ ನಾನು ಹೋಗಿ ನೋಡಿ ಬಂದಿದ್ದೇನಲ್ಲ ಸಾರ್.

**ಯಸ್.ಪಿ :–** ನೀನು ನೋಡಿರುವುದು ಪೆಟ್ಟಿಗೆಯನ್ನು ಮಾತ್ರ, ಆ ಪೆಟ್ಟಿಗೆಯಲ್ಲಿ ವಜ್ರಗಳಿರುವುದೂ ಇಲ್ಲದಿರುವುದು ನೀನು ನೋಡಲಿಲ್ಲವಲ್ಲವೆ!

**ಸಿ.ಐ.:–** ಇಲ್ಲ ಸಾರ್, ಅವರು ಏನೂ ನಡೆಯಲಿಲ್ಲವೆಂದು ಹೇಳಿದ್ದಾರೆ.

**ಯಸ್.ಪಿ :–** ಅವರೂ ಸಹ ನೀನು ನೋಡಿದಂತೆ ಮೇಲೆ ಪೆಟ್ಟಿಗೆಯನ್ನು ನೋಡಿ ಹೇಳಿರುತ್ತಾರೆ. ಲೆಟರ್ ಬಂದ ನಂತರ ಸಹ ನೀವು ಪೂರ್ತಿಯಾಗಿ ನೋಡಲಿಲ್ಲ ವೆಂದರೇ ನೀನು ಪೊಲೀಸ್ ಡಿಪಾರ್ಟ್‌ಮೆಂಟ್‌ನಲ್ಲಿ ಕೆಲಸಕ್ಕೆ ಬರುವುದಿಲ್ಲ. ನಾವು ಕಷ್ಟಪಟ್ಟು ಕಳ್ಳತನ ಮಾಡಿದರೂ ಫಲಿತ ಇಲ್ಲದಂತೆಹೋಯಿ ತೆಂದು ಬರೆದಿದ್ದಾರೆ.

ಅಸೂಯೆಯಿಂದ ಧರ್ಮಕರ್ತನಿಗೆ ತೊಂದರೆ ಕೊಡುವುದಕ್ಕೇ ಆದರೆ, ವಜ್ರಗಳು ನಕಲಿಯಾಗಿವೆ, ಧರ್ಮಕರ್ತ ಅವುಗಳನ್ನು ಬದಲಾಯಿಸಿರಬಹುದು ಎಂದು ಮಾತ್ರವೇ ಬರೆದಿಡುತ್ತಿದ್ದರು. ಇಲ್ಲಿ ಬರೆದವರು ಸ್ಥಳೀಯರೇ, ಆದ್ದರಿಂದ ಅವರಿಗೆ ಎಲ್ಲಾ ಅನುಕೂಲಗಳು ಸರಿಹೋದಾಗ ಕಳ್ಳತನ ಮಾಡಿರಬಹುದು. ಮೊದಲು ನೀನು ಹೋಗಿ ವಜ್ರಗಳಿವೆಯೋ ಇಲ್ಲವೊ ನೋಡಿಕೊಂಡು ಬಾ.

(ಆ ಮಾತುಗಳನ್ನು ಕೇಳಿದ ಸಿ.ಐ ಅಲ್ಲಿಂದ ಭುವನೇಶ್ವರಿ ದೇವಾಲಯದ ಹತ್ತಿರಕ್ಕೆ ಹೋಗಿ, ಧರ್ಮಕರ್ತನ ಸಮಕ್ಷಮದಲ್ಲಿ ಪೆಟ್ಟಿಗೆಯನ್ನು ಇಳಿಸಿ ನೋಡಿದ್ದಾರೆ. ಪೆಟ್ಟಿಗೆಯೊಳಗೆ ವಜ್ರಗಳು ಇಲ್ಲದಂತೆ ಹೋಗಿರುವುದನ್ನು ನೋಡಿದವರೆಲ್ಲಾ ಆಶ್ಚರ್ಯಪಟ್ಟಿದ್ದಾರೆ. ಅಷ್ಟೇ ಅಲ್ಲದೆ ಆ ಪೆಟ್ಟಿಗೆಯಲ್ಲಿ ಕಳ್ಳತನ ನಡೆದ ದಿನ ಹೆಸರು, ತಾರೀಕು ಬರೆದ ಚೀಟಿ ಸಹ ಇದೆ. ಆ ಚೀಟಿಯನ್ನು ಸಿ.ಐ ತೆಗೆದುಕೊಂಡು ಹೋಗಿ ಯಸ್.ಪಿ ರವರಿಗೆ ಸಹ ತೋರಿಸಿದ್ದಾರೆ. ಕೇಸ್ ದಾಖಲು ಮಾಡಿಕೊಂಡು ತನಖೆಯನ್ನು ಪ್ರಾರಂಭಿಸಿದನು.)

**********************************

(ರಾವುಬಹುದೂರ್ ಜಮೀಂದಾರನ ಮನೆಯಲ್ಲಿ ಈಶ್ವರ್ ಆರೋಗ್ಯದಿಂದ ಬೆಳೆಯುತ್ತಿದ್ದಾನೆ. ಜಮೀನ್ದಾರನ ಆರ್ಥಿಕ ಪರಿಸ್ಥಿತಿ ಸಹ ಆ ಬಾಲಕನು ಮನೆಗೆ ಬಂದಾಗಿನಿಂದ ಬಹಳ ಅಭಿವೃದ್ಧಿ ಆಗಿದೆ. ರಾವುಬಹುದೂರ್ ಸಹ ಈಶ್ವರ್‌ನಿಂದ ಸಂತೋಷವಾಗಿ ಇದ್ದಾನೆ. ಆತನ ಮೇಲೆ ಇರುವ ಅನುಮಾನಗಳೆಲ್ಲವನ್ನು ಇಲ್ಲದಂತೆ ಮಾಡಿಕೊಂಡಿದ್ದಾನೆ. ಹಾಗೆ ನಡೆದುಹೋಗುತ್ತಿರುವ ಕಾಲದಲ್ಲಿ ಒಂದು ದಿನ ಆ ಊರಿನೊಳಗೆ ಸ್ಮಶಾನ ಕಾವಲುಗಾರ (ಸ್ಮಶಾನದಲ್ಲಿ ಕಾವಲಿದ್ದು ಶವಗಳಿಗೆ ಹಣ ವಸೂಲಿ ಮಾಡುವವನು) ಬಂದಿದ್ದಾನೆ. ಆತನು ತನ್ನ ಮಂತ್ರವಿದ್ಯೆಯನ್ನು ಪ್ರದರ್ಶಿಸುತ್ತಾ, ಊರೆಲ್ಲಾ ಮನೆಮನೆ ತಿರುಗುತ್ತಾ, ಕೆಲವರು ಕೊಟ್ಟಿರುವ ಹಣ ತೆಗೆದುಕೊಂಡು ಹೋಗುತ್ತಿದ್ದನು. ಯಾರಾದರೂ ಹಣ ಕೊಡದಿದ್ದಲ್ಲಿ ತನ್ನ ಮಂತ್ರಗಳಿಂದ ಚೇಳು, ಹಾವುಗಳನ್ನು ಸೃಷ್ಟಿಸಿ ಹೆದರಸಿ ಹಣಕೊಟ್ಟನಂತರ ಅವುಗಳನ್ನು ಇಲ್ಲದಂತೆ ಮಾಡಿಹೋಗುತ್ತಿದ್ದನು. ಹಾಗೆ ಮನೆ ಮನೆ ತಿರುಗುತ್ತಾ ಸ್ಮಶಾನ

ಕಾವಲುಗಾರನು ಕೊನೆಗೆ ಜಮೀಂದಾರನ ಮನೆಗೆ ಬಂದು ತನಗೆ ದಕ್ಷಿಣೆ ಕೊಡಲು ಕೇಳಿದ್ದಾನೆ. ಆ ಸಮಯದಕ್ಕೆ ಜಮೀಂದಾರ, ಆತನ ಹೆಂಡತಿ ಇಬ್ಬರೂ ಮನೆಯಲ್ಲಿ ಇಲ್ಲ. ಆದ್ದರಿಂದ ನಂತರ ಬರಲು ಹೇಳಿ ಮನೆಯಲ್ಲಿನ ಕೆಲಸದವರು ಹೇಳಿದರು. ಆದರೂ ಆ ಸ್ಮಶಾನ ಕಾವಲುಗಾರ ಮನೆಬಿಟ್ಟು ಹೋಗಲಿಲ್ಲ. ಆಗ ಈಶ್ವರ್ ಸಹ ಹೊರಗೆ ಬಂದು ಅಮ್ಮ ಅಪ್ಪ ಇಲ್ಲವೆಂದು ಹೇಳಿದರೂ ಕೇಳದಂತೆ ಮೊಂಡನಾಗಿ ಇದ್ದು, ಚೇಳನ್ನು ಸೃಷ್ಠಿಸಿ ಬಿಟ್ಟರೇ ಹಣ ಕೊಟ್ಟು ಕಳುಹಿಸುತ್ತಾರೆಂದು, ಒಂದು ಮಂತ್ರವನ್ನು ಹೇಳುತ್ತಾ ಬೇವಿನ ಎಲೆಯನ್ನು ಕಿತ್ತು ಚೆಲ್ಲಿದನು. ಹಾಗೆ ಎಲೆಗಳನ್ನು ಚೆಲ್ಲುವುದರಿಂದ ಎಲೆಗಳೆಲ್ಲವೂ ಚೇಳುಗಳಂತೆ ಕಾಣಿಸುತ್ತವೆ. ಆದರೆ ಅಲ್ಲಿ ಬೇವಿನ ಎಲೆ ಚೇಳುಗಳಂತೆ ಬದಲಾಗಲಿಲ್ಲ. ಈಶ್ವರ್ ವಿಚಿತ್ರವಾಗಿ ನೋಡುತ್ತಾ ಅಲ್ಲೇ ನಿಂತಿದ್ದಾನೆ. ಸ್ಮಶಾನ ಕಾವಲುಗಾರ ಎರಡನೆ ಸಲ ಹಾವುಗಳನ್ನು ಕಾಣಿಸುವಂತೆ ಮಾಡಬೇಕೆಂದುಕೊಂಡಿದ್ದಾನೆ. ಆಗಲೂ ಸಹ ಆತನ ಮಂತ್ರ ಕೆಲಸ ಮಾಡಲಿಲ್ಲ. ಆಗ ಸ್ಮಶಾನ ಕಾವಲುಗಾರನಿಗೆ ಏನೂ ಅರ್ಥವಾಗದೇ ಅಲ್ಲಿಂದ ಹೊರಟು ಹೋದನು.

ಅದೇ ಊರಿನಲ್ಲಿ ಮತ್ತೊಂದು ಮನೆಯಹತ್ತಿರ ತನ್ನ ಮಂತ್ರಕ್ಕೆ ಹಾವುಗಳು ಚೇಳುಗಳು ತಯಾರಾಗಿವೆ. ಆದರೆ ಒಬ್ಬ ಜಮೀಂದಾರನ ಮನೆಯಹತ್ತಿರ ಮಾತ್ರ ಕೆಲಸ ಮಾಡಲಿಲ್ಲವೆಂದು ಸ್ಮಶಾನ ಕಾವಲುಗಾರನು ಗ್ರಹಿಸಿದ್ದಾನೆ. ಆ ಮನೆಯಲ್ಲಿ ಯಾವುದೋ ದೊಡ್ಡ ಶಕ್ತಿ ಇದ್ದರೇನೆ ತನ್ನ ಮಂತ್ರಶಕ್ತಿ ಅಲ್ಲಿ ಕೆಲಸಮಾಡಲಿಲ್ಲ ವೆಂದುಕೊಂಡಿದ್ದಾನೆ. ಅ ಮನೆಯಲ್ಲಿನ ಶಕ್ತಿ ಏನೋ ತಿಳಿದುಕೊಳ್ಳುವುದಕ್ಕೆ ತನ್ನ ಗುರುವು ದೊಡ್ಡ ಸ್ಮಶಾನ ಕಾವಲುಗಾರನ ಹತ್ತಿರಕ್ಕೆ ಹೋಗಿ ಅ ವಿಷಯವನ್ನು ಹೇಳಿದ್ದಾನೆ. ಆ ವಿಷಯವನ್ನು ಕೇಳಿದ ದೊಡ್ಡ ಸ್ಮಶಾನ ಕಾವಲುಗಾರ ತನಗಿರುವ ಶಕ್ತಿಯಿಂದ ಆ ಮನೆಯಲ್ಲಿನ ಈಶ್ವರ್‌ನಿಂದ ಹಾಗೆ ನಡೆದಿದೆಯೆಂದು ತಿಳಿದುಕೊಂಡಿದ್ದಾನೆ. ಆತನಿಗೆ ತಿಳಿದ ವಿಧಾನದ ಪ್ರಕಾರ ಆ ಬಾಲಕನನ್ನು ಮರಣಿಸುವಂತೆ ಮಾಡಿ, ಆತನನ್ನು ಸ್ಮಶಾನದಲ್ಲಿ ಹೂತಿಟ್ಟನಂತರ, ಆ ಬಾಲಕನ ಬಲಗೈ ಮೂಳೆಯನ್ನು ತೆಗೆದು ಇಟ್ಟುಕೊಂಡರೆ ತಮಗೂ ಸಹ ಅಂತಹ ಶಕ್ತಿಗಳು ಲಭಿಸುತ್ತವೆಂದು ತಿಳಿದುಕೊಂಡಿದ್ದಾನೆ. ಆ ಬಾಲಕನನ್ನು ಸಾಯಿಸುವುದಕ್ಕೆ ತಮಗೆ

ತಿಳಿದ ಮಾಟವನ್ನು ಮಾಡಿ, 40 ದಿನಗಳಿಗೆ ಆತನನ್ನು ಮರಣಿಸುವಂತೆ ಮಾಡಿ, ನಂತರ ಆ ಮನೆಯವರು ತಂದು ಸ್ಮಶಾನದಲ್ಲಿ ಹೂತಿಟ್ಟ ಮೂವತ್ತು ದಿನಗಳಿಗೆ ಪೂಜೆ ಮಾಡಿ ಕೈ ಮೂಳೆಯನ್ನು ತೆಗೆದುಕೊಳ್ಳಬೇಕೆಂದು ಕೊಂಡಿದ್ದಾನೆ. ಕೂಡಲೇ ಅದಕ್ಕೆ ಬೇಕಾದ ಸಿದ್ಧತೆಗಳೆಲ್ಲವನ್ನು ಮಾಡಿಟ್ಟುಕೊಂಡು ಒಂದು ದಿನ ಈಶ್ವರ್ ಮೇಲೆ ಮಾಟಮಂತ್ರವನ್ನು ಪ್ರಯೋಗಿಸಿ, ಆತನು ಮರಣಿಸುತ್ತಾನೆಂದು 40 ದಿನಗಳವರೆಗು ಕಾದುಕೊಂಡಿದ್ದಾನೆ. ಈ ಕೆಲಸವನ್ನು ಇಬ್ಬರು ಸ್ಮಶಾನ ಕಾವಲು ಗಾರರು ಮಾಡಿದ್ದಾರೆ. ಕೊನೆಗೆ 40 ದಿನಗಳು ಕಳೆದುಹೋದವು. ಆದರೂ ಈಶ್ವರ್ ಮರಣಿಸಲಿಲ್ಲ. ಈಶ್ವರ್ ಮರಣಕ್ಕಾಗಿ ಎಲ್ಲಾ ಸಿದ್ಧ ಮಾಡಿಕೊಂಡವರಿಗೆ ಏನೂ ಅರ್ಥವಾಗಲಿಲ್ಲ. ಹಾಗೆ ಈಶ್ವರ್ ಮೇಲೆ ಮಾಟ ಮಾಡಿದ ಕೂಡಲೇ, ಈಶ್ವರ್‌ನನ್ನು ಅನುಸರಿಸಿರುವ ಶಕ್ತಿಗಳು ಸ್ಮಶಾನ ಕಾವಲುಗಾರರು ಮಂತ್ರಗಳನ್ನು ಇಲ್ಲದಂತೆ ಮಾಡಿವೆ. ಆ ದಿನದಿಂದ ಅವರು ಖಾಲಿ ಮನುಷ್ಯರಾಗಿದ್ದಾರೆ. ಹಾಗೆ ಅವರ ಮಂತ್ರಗಳು ಒಂದೇ ಏಟಿಗೆ ಹೋಗಿಬಿಟ್ಟವು.

ಈಶ್ವರ್ ತನ್ನ ಹತ್ತನೆ ವರ್ಷ ಹೈಸ್ಕೂಲ್‌ಗೆ ಹೋಗಿ ಓದುತ್ತಿದ್ದಾನೆ. ಆತನಿಗೆ ಪ್ರತಿ ಸಬ್ಜೆಕ್ಟ್‌ನಲ್ಲಿ ಒಳ್ಳೆಯ ಅಂಕಗಳು ಬರುತ್ತಿದ್ದವು. ಶಾಲೆಯಲ್ಲೂ, ತರಗತಿಯಲ್ಲೂ ಒಳ್ಳೆಯ ಹೆಸರು ತಂದುಕೊಂಡ ಈಶ್ವರ್ ಅಂಕಗಳಲ್ಲೂ ಎಲ್ಲರಿಗಿಂತ ಮೊದಲೇ ಇದ್ದಾನೆ. ಆತನ ಪ್ರವರ್ತನೆ ಮತ್ತು ಓದನ್ನು ನೋಡಿದ ಶಿಕ್ಷಕರೆಲ್ಲರೂ ಈಶ್ವರ್‌ನನ್ನು ಮೆಚ್ಚಿಕೊಂಡಿದ್ದರು. ಒಂದು ದಿನ ತನ್ನ ಸ್ನೇಹಿತರೊಂದಿಗೆ ಸೇರಿ ಶಾಲೆಯಿಂದ ಬರುತ್ತಿರುವಾಗ, ಆ ದಾರಿಯಲ್ಲೇ ಒಂದು ದೆವ್ವ ಒಬ್ಬ ಹೆಣ್ಣು ಮಗಳನ್ನು ಆವರಿಸಿತು. ಆಕೆ ಮುಂದೆ ಒಬ್ಬ ಮಾಂತ್ರಿಕನು ಆ ದೆವ್ವವನ್ನು ಬಿಡಿಸುವ ಕೆಲಸದಲ್ಲಿ ಇದ್ದಾನೆ. ತನ್ನನ್ನು ಬಿಟ್ಟು ಹೋಗೆಂದು ಮಾಂತ್ರಿಕನು ಹೇಳಿರುವಾಗ, ಆ ದೆವ್ವ ಆ ಮಾಂತ್ರಿಕನ ಮೇಲೆ ಎದುರು ತಿರಿಗಿತು. ನಾನು ಬಿಟ್ಟುಹೋಗುವುದಿಲ್ಲ ಎಂದು ಹೇಳಿತು. ಅದಕ್ಕೆ ಮಾಂತ್ರಿಕನಿಗೆ ಕೋಪ ಬಂದು ಬೇವಿನ ಕೊಂಬೆಗಳಿಂದ ದೆವ್ವ ಸೇರಿದ ಹೆಣ್ಣು ಮಗಳನ್ನು ಹೊಡೆದಿದ್ದಾನೆ. ಆಗ ಆ ದೆವ್ವಕ್ಕೆ ಮಾಂತ್ರಿಕನ ಮೇಲೆ ಕೋಪ ಬಂದು ಆತನನ್ನು ತಿರುಗಿಸಿ ಹೊಡೆಯಲು ಆರಂಭಿಸಿದಳು. ಅಲ್ಲಿರುವವರು ಅಡ್ಡ ಬಂದರೂ ಆ ದೆವ್ವ ಆತನನ್ನು ಬಿಡದಂತೆ ಹೊಡೆಯುತ್ತಿದ್ದಾಳೆ. ಇಂತಹ ಗಲಾಟೆ

ಅಲ್ಲಿ ನಡೆಯುತ್ತಿರುವಾಗ ಈಶ್ವರ್ ಆ ದಾರಿಯಲ್ಲಿ ಹೋಗುತ್ತಾ ಅಲ್ಲಿಗೆ ಬಂದು ಏನು ನಡೆಯುತ್ತಿದೆಯೋ ನೋಡಬೇಕೆಂದುಕೊಂಡಿದ್ದಾನೆ. ಈಶ್ವರ್ ಅಲ್ಲಿಗೆ ಬಂದನಂತರ ಆ ದೆವ್ವ ಈಶ್ವರ್‌ನನ್ನು ನೋಡಿತು. ಅಲ್ಲಿಯವರೆಗು ಯಾರು ಅಡ್ಡಬಂದರೂ ಮಾಂತ್ರಿಕನನ್ನು ಬಿಡದಂತೆ ಹೊಡೆಯುತ್ತಿರುವ ದೆವ್ವ ಈಶ್ವರ್‌ನನ್ನು ನೋಡುತ್ತಲೆ ಒಂದೇ ಸಲ ನಿಂತುಹೋಯಿತು. ಭಯದಿಂದ ನಡುಗುತ್ತಾ ನಾನು ಹೋಗುತ್ತೇನೆ ಎಂದು ಕಿರುಚುತ್ತಾ ಸ್ವಲ್ಪ ದೂರ ಓಡಿ ಕೆಳಗೆ ಬಿದ್ದು ಆಕೆಯಿಂದ ಹೊರಗೆ ಹೋಗಿದ್ದಾಳೆ. ಅಲ್ಲಿಯವರೆಗು ಯಾರ ಮಾತು ಕೇಳದ ದೆವ್ವ ಈಶ್ವರ್ ಅಲ್ಲಿಗೆ ಬರುತ್ತಲೆ ಹಾಗೆ ಓಡಿಹೋಗುವುದರಿಂದ ಈಶ್ವರ್ ದೊಡ್ಡವನೆಂದು ಅಲ್ಲಿರುವವರೆಲ್ಲರೂ ಅಂದುಕೊಂಡಿದ್ದಾರೆ. ಈ ವಿಧವಾಗಿ ಚಿಕ್ಕಚಿಕ್ಕ ಸಂಘಟನೆಗಳು ಆಗಾಗ ನಡೆಯುತ್ತಿದ್ದವು.

ಈಶ್ವರ್‌ಗೆ ಪಾಠ ಕಲಿಸುವ ಶಾಲಾ ಶಿಕ್ಷಕ ರಾವುಬಹುದೂರ್‌ರವರನ್ನು ಲಕ್ಷರೂಪಾಯಿಗಳನ್ನು ಸಾಲ ಕೇಳಿದ್ದಾನೆ. ಅ ಸಮಯದಕ್ಕೆ ಅಷ್ಟು ಹಣ ಇಲ್ಲದ ಕಾರಣ ಮತ್ತು ಕೊಟ್ಟಿರುವ ಹಣ ತಿರುಗಿ ಬರುವುದಿಲ್ಲವೆನ್ನುವ ಅನುಮಾನದಿಂದ ಜಮೀನ್ದಾರನು ಹಣ ಇಲ್ಲವೆಂದು ಹೇಳಿದ್ದಾನೆ. ತನಗೆ ಹಣ ಕೊಡಲಿಲ್ಲವೆಂದು ಆ ಟೀಚರ್ ಜಮೀಂದಾರನ ಮೇಲೆ ಕೋಪದಿಂದ ಇದ್ದನು. ಒಂದು ದಿನ ರಾವುಬಹದೂರ್ ಮೇಲೆ ಕೋಪದಿಂದ ಈಶ್ವರ್ ಯಾವ ತಪ್ಪು ಮಾಡದಿದ್ದರೂ, ಈಶ್ವರ್‌ನನ್ನು ಕೆನ್ನೆಯಮೇಲೆ ಹೊಡೆದಿದ್ದಾನೆ. ಈಶ್ವರ್‌ಗೆ ಕೆನ್ನೆಯಮೇಲೆ ಏಟು ಬಿದ್ದ ಕೂಡಲೇ ಆ ಟೀಚರ್‌ಗೆ ಬಲಕೈ, ಬಲಗಾಲು, ಬಾಯಿ ಸ್ವಾಧೀನದಲ್ಲಿ ಇಲ್ಲದಂತೆ ಹೋದವು. ಪಕ್ಷಪಾತ ಬಂದು ಕೆಳಗೆ ಬಿದ್ದಿದ್ದಾನೆ. ಈಶ್ವರ್‌ನನ್ನು ಹೊಡೆದಿರುವುದಕ್ಕೇ ಆ ಟೀಚರ್‌ಗೆ ಹಾಗೆ ನಡೆದಿದೆಯೆಂದು ಅಲ್ಲಿರುವವರೆಲ್ಲರೂ ಅಂದುಕೊಳ್ಳುವುದು ನಡೆಯಿತು. ಆದ್ದರಿಂದ ಶಾಲೆಯಲ್ಲಿ ಜೊತೆಗಿರುವ ಮಕ್ಕಳಾಗಲೀ, ಟೀಚರ್‌ಗಳಾಗಲೀ ಈಶ್ವರ್‌ನನ್ನು ಗೌರವಿಸುತ್ತಿದ್ದರು.)

********************************

(ರಾಜಯೋಗಾನಂದ ಸ್ವಾಮಿ ಭುವನೇಶ್ವರಿ ದೇವಾಲಯದಲ್ಲಿನ ನಕಲಿ ವಜ್ರಗಳ ವಿಷಯ ಕೇಳಿ ಮೊದಲು ಅವುಗಳನ್ನು ಕುರಿತು ಏನೂ ಸ್ಪಂದಿಸಿ ಮಾತನಾಡದೆ ಸುಮ್ಮನಿದ್ದನು. ಎರಡನೆ ಸಲ ವಜ್ರಗಳು ಕಳುವಾಗಿವೆಯೆನ್ನುವ ವಾರ್ತೆ ಸ್ವಾಮಿಗೆ ವಿಚಿತ್ರವಾಗಿ ಕಾಣಿಸಿತು. ಅಸಲಾದ ವಜ್ರಗಳು ತಮಗೆ ತಿಳಿದ ಸ್ಥಳದಲ್ಲಿ ಕ್ಷೇಮವಾಗಿ ಇರುವಾಗ, ನಕಲಿ ವಜ್ರಗಳ ವಿಷಯವೇನು? ನಂತರ ಅವು ಕಳುವಾಗುವುದೇನು? ಎಂದು ಯೋಚಿಸತೊಡಗಿದನು. ಅಷ್ಟರಲ್ಲಿ ರಾಘವ ಅಲ್ಲಿಗೆ ಬಂದಿದ್ದಾನೆ. ಆಗ ರಾಘವನೊಂದಿಗೆ ರಾಜಯೋಗಾನಂದ ಸ್ವಾಮಿ ಹೀಗೆ ಹೇಳಿದ್ದಾನೆ.)

**ರಾಜಯೋಗಾನಂದ :–** ಕೇಳಿದ್ದೀಯಾ ರಾಘವಾ! ವಜ್ರಗಳು ಸಿಕ್ಕಿವೆ ಎನ್ನುವ ಮಾತು ಕಲ್ಪಿತವೆಂದು, ಅಸಲಾದ ವಜ್ರಗಳ ವಿಷಯವನ್ನು ತಿಳಿದುಕೊಳ್ಳುವುದಕ್ಕೆ ಹಾಗೆ ವಜ್ರಗಳು ಸಿಕ್ಕಿವೆ ಎನ್ನುತ್ತಿದ್ದಾರೆಂದು ನಾವು ಅಂದುಕೊಂಡಿದ್ದೇವಲ್ಲವೆ! ಈಗೇನೋ ವಜ್ರಗಳು ನಕಲಿವೆಂದು ಅವುಗಳನ್ನು ಕಳುವುಮಾಡಿದ ಕಳ್ಳರು ಹೇಳಿದ್ದಾರೆಂದೂ, ಕಳ್ಳರು ಹೇಳುವವರೆಗು ಕಳ್ಳತನ ನಡೆದಂತೆ ದೇವಾಲಯದವರಿಗೂ ಸಹ ತಿಳಿಯದೆಂದು, ವಾರ್ತೆಗಳು ಬರುವುದು ವಿಚಿತ್ರವೆನಿಸುತ್ತಿದೆ. ಮೊದಲು ಕಳುವು ಮಾಡಿದ ಕಳ್ಳರು ಅಸಲು ವಜ್ರಗಳ ವಿಷಯ ಹೊರಗೆ ಬರುವುದಕ್ಕೆ, ನಕಲಿ ವಜ್ರಗಳನ್ನು ಸೃಷ್ಠಿಸಿ ಆಲಯದಲ್ಲಿ ಇಟ್ಟಿರಬಹುದೆಂದು ಅಂದುಕೊಂಡಿದ್ದೇವೆ. ಆದರೆ ಈಗ ಅ ನಕಲಿ ವಜ್ರಗಳು ಸಹ ಕಳುವಾಗಿವೆಯೆಂದು ಹೇಳುತ್ತಿದ್ದಾರೆ. ಮೊದಲು ಕಳುವುಮಾಡಿದವರು ಮುನೆಪ್ಪ ಮನುಷ್ಯರೆಂದೂ, ಅದನ್ನು ತಪಸ್ವಿಬಾಬಾನೇ ಮಾಡಿಸಿದ್ದಾನೆಂದು ನಮಗೆ ತಿಳಿದಿದೆ. ಎರಡನೆ ಸಲ ನಕಿಲೀ ವಜ್ರಗಳನ್ನು ಕಳುವುಮಾಡಿದವರು ಯಾರಾಗಿರುತ್ತಾರೆ? ಇದನ್ನನುಸರಿಸಿ ನೋಡಿದರೆ ಮೊದಲ ಸಲ ಕೂಡ ಇವರು ಪ್ರಯತ್ನ ಮಾಡಿರುತ್ತಾರೆಂದೂ, ವಜ್ರಗಳು ಪುನಃ ಆಲಯಕ್ಕೆ ಬಂದಿವೆ ಎಂದು ತಿಳಿದು ಪ್ರಯತ್ನ ಮಾಡುತ್ತಾ ಇದ್ದು, ಕೊನೆಗೆ ದರೋಡೆ ಮಾಡಿದ್ದಾರೆಂದು ಅರ್ಥವಾಗುತ್ತಿದೆ. ವಜ್ರಗಳ ಮೇಲೆ ದೃಷ್ಠಿ ಇರುವವರು ತಪಸ್ವಿಬಾಬಾ ಹೊರತು ನಮ್ಮ ದೃಷ್ಠಿಯಲ್ಲಿ ಯಾರೂ ಇಲ್ಲ. ಆದರೆ ಒಂದೇ ಸಲ ತೆರೆ ಮೇಲೆ ಬಂದಿರುವ ಈ ಎರಡನೆ ಕಳ್ಳರು ಯಾರಾಗಿರುತ್ತಾರೆ?

**ರಾಘವ :–** ಮೊದಲ ಕಳ್ಳರಾದ ತಪಸ್ವಿಬಾಬಾರವರಿಗೆ ನಾವೂ, ನಮಗೆ ತಪಸ್ವಿ ಬಾಬಾರವರು ತಿಳಿದಿದೆ. ಈಗ ಈ ಎರಡನೆ ಕಳ್ಳ ನಮಗೆ ತಿಳಿಯದಂತೆ ತಪಸ್ವಿಬಾಬಾರವರಿಗು ಸಹ ತಿಳಿದಿರುವುದಿಲ್ಲ. ಹಾಗೆಯೇ ಈ ಎರಡನೆ ಕಳ್ಳನಿಗೆ ನಮ್ಮ ವಿಷಯವಾಗಲೀ, ತಪಸ್ವಿಬಾಬಾ ವಿಷಯವಾಗಲೀ ತಿಳಿದಿರುವುದಿಲ್ಲವೆಂದು ಕೊಳ್ಳುತ್ತೇನೆ.

**ರಾಜಯೋಗಾನಂದ :–** ನಾವು ಈ ಎರಡನೆ ಕಳ್ಳ ಯಾರಾಗಿರುವುದು ತಿಳಿದುಕೊಳ್ಳಬೇಕಾದ ಅಗತ್ಯವಿದೆ. ಈ ವಿಷಯದಲ್ಲಿ ಪೋಲೀಸ್‌ರವರ ವಿಚಾರಣೆ ಹೇಗೆ ನಡೆಯುತ್ತದೋ ಕೆಲವು ದಿನಗಳು ನೋಡಿದ ನಂತರ, ಅವರಿಗೆ ಅರ್ಥವಾಗದ ಪಕ್ಷದಲ್ಲಿ ನಾವು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸೋಣ.

**********************************

(ಭುವನೇಶ್ವರಿ ದೇವಾಲಯದಲ್ಲಿ ನಡೆದ ದರೋಡೆ ವಿಷಯವನ್ನು ತನಿಖೆ ಮಾಡುವುದಕ್ಕೆ ಯಸ್.ಪಿ ರವರ ಸಲಹೆ ಮೇರೆಗೆ ಸಿ.ಐ ರವರು ಮುಂದಾಗಿದ್ದಾರೆ. ಆ ವಿಚಾರಣೆಯಲ್ಲಿ ಭಾಗವಾಗಿ ಪೂಜಾರಿಯನ್ನು ಹೀಗೆ ಕೇಳಿದ್ದಾನೆ.)

**ಸಿ.ಐ :–** ದೇವಾಲಯದಲ್ಲಿ ನೀವು ರಾತ್ರಿ ಹೊತ್ತು ಎಷ್ಟು ಗಂಟೆಗಳವರೆಗು ಇರುತ್ತೀರ?

**ಪೂಜಾರಿ :–** ಪ್ರತಿ ದಿನ 9 ಗಂಟೆಗಳವರೆಗು ಇರುತ್ತೇನೆ. ನಂತರ ಗರ್ಭಗುಡಿ ಬಾಗಿಲು ಮುಚ್ಚಿ, ಬೀಗ ಹಾಕಿ ಧರ್ಮಕರ್ತನಿಗೆ ಒಂದು ಬೀಗದ ಕೈ ಕೊಟ್ಟು, ನನ್ನ ಹತ್ತಿರ ಒಂದು ಇಟ್ಟುಕೊಂಡು ಹೋಗುತ್ತೇನೆ.

**ಸಿ.ಐ :–** ಆಲಯದಲ್ಲಿ ದರೋಡೆ ನಡೆದಿದೆಯೆಂದು ಮೊದಲು ನಿನಗೆ ಯಾವಾಗ ತಿಳಿದಿದೆ?

**ಪೂಜಾರಿ :–** ನೀವು ಬಂದು ಹೇಳಿದಾಗಲೇ ನನಗೂ ತಿಳಿದಿದೆ. ಮೊದಲು ನಾನು ನಿಮ್ಮ ಮಾತನ್ನು ನಂಬಲಿಲ್ಲ.

**ಸಿ.ಐ :–** ಕಳ್ಳರು ಬರೆದ ಕಾಗದದ ಮೇಲೆ ದಿನಾಂಕವನ್ನು ಅನುಸರಿಸಿ ಇಂತಹ

ದಿನ ಕಳ್ಳತನ ನಡೆದಿದೆಯೆಂದು ಅಂದುಕೊಳ್ಳುತ್ತಿದ್ದೇನೆ. ಆ ದಿನ ನೀವು ಗುಡಿಯಲ್ಲಿ ಎಷ್ಟು ಗಂಟೆಗಳವರೆಗು ಇದ್ದೀರ?

**ಪೂಜಾರಿ :–** ಆ ದಿನ ಇಲ್ಲಿ ಭಜನೆ ಕಾರ್ಯಕ್ರಮ ಇರುವುದರಿಂದ ರಾತ್ರಿ 11 ಗಂಟೆಗಳವರೆಗು ಇರಬೇಕಾಗಿದ್ದಿತು. 11 ಗಂಟೆಗಳ ನಂತರ ಎಲ್ಲರಿಗೂ ತೀರ್ಥಕೊಟ್ಟು ಗರ್ಭಗುಡಿ ಬಾಗಿಲು ಹಾಕಿ ಹೋಗಿದ್ದೇನೆ.

**ಸಿ.ಐ :–** ಹಾಗೆ ರಾತ್ರಿ ಬಾಗಿಲು ಮುಚ್ಚಿ ಹೋದ ನಂತರ ಪುನಃ ಇಲ್ಲಿಗೆ ಯಾವಾಗ ಬಂದಿದ್ದೀರ?

**ಪೂಜಾರಿ :–** ಬೆಳಗ್ಗೆ ಐದು ಗಂಟೆಯ ಸಮಯದಲ್ಲಿ ಬಂದು ಬಾಗಿಲು ತೆರೆದಿದ್ದೇನೆ. ಬೆಳಗ್ಗೆ ಐದು ಗಂಟೆಗಳಿಂದ ಭಜನೆ ಕಾರ್ಯ ಇರುವುದರಿಂದ ಐದು (5) ಗಂಟೆಗಳಿಗೇ ಬಾಗಿಲು ತೆರೆದಿದ್ದೇನೆ. ಇಲ್ಲದೇ ಹೋದರೆ ಬೆಳಗ್ಗೆ ಆರು (6) ಗಂಟೆಗಳಿಗೆ ಬಾಗಿಲು ತೆರೆಯುತ್ತಿದ್ದೆ.

**ಸಿ.ಐ :–** ಆ ದಿನ ಭಜನೆ ಕಾರ್ಯ ಯಾರು ಮಾಡಿದ್ದಾರೆ?

**ಪೂಜಾರಿ :–** ಭಕ್ತರೆಲ್ಲರೂ ಮಾಡಿದ್ದಾರೆ. ಅದು ಜಟಾಜೂಟ ಸ್ವಾಮಿರವರ ಭಜನೆಯ ಕಾರ್ಯ. ಸುಮಾರು ವಾರದ ದಿನಗಳು ನಡೆದಿರುತ್ತದೆ.

**ಸಿ.ಐ :–** ವಾರದ ದಿನಗಳು ನಡೆಯುವ ಭಜನೆ ಕಾರ್ಯ ಯಾವಾಗ ಪ್ರಾರಂಭವಾಗಿದೆ?

**ಪೂಜಾರಿ :–** ದರೋಡೆ ನಡೆದ ದಿನದಿಂದಲೇ ಪ್ರಾರಂಭವಾಗಿದೆ.

**ಸಿ.ಐ :–** ಜಟಾಜೂಟಸ್ವಾಮಿ ಎಲ್ಲಿರುತ್ತಾರೆ?

**ಪೂಜಾರಿ :–** ಇಲ್ಲೆ ಗುಡಿಗೆ ಎಡ ಪಕ್ಕದಲ್ಲಿರುವ ಮೇಲಿನ ಅಂತಸ್ಥಿನಲ್ಲಿ ಇರುತ್ತಾನೆ. ದೇವಸ್ಥಾನ ಆತನಿಗೆ ಉಚಿತವಾಗಿ ಆ ಮನೆಯನ್ನು ಕೊಟ್ಟಿದೆ.

**ಸಿ.ಐ :–** ಆ ದಿನ ಬೆಳಗ್ಗೆ ಐದು ಗಂಟೆಗಳಿಗೆ ಬಾಗಿಲು ತೆರೆದಾಗ ಒಳಗೆ ಯಾವುದಾದರೂ ಹೊಸದಾಗಿ ಕಾಣಿಸುವುದಾಗಲೀ ಅಥವಾ ಕಳ್ಳತನ ನಡೆದಂತೆ ಯಾವುದಾದರೂ ವ್ಯತ್ಯಾಸ ಕಾಣಿಸಿದೆಯಾ?

**ಪೂಜಾರಿ :–** ಹಾಗೆ ಏನೂ ಕಾಣಿಸಲಿಲ್ಲ. ಹಾಗೆ ಏನಾದರೂ ಕಾಣಿಸಿದ್ದರೇ ಆಗಲೇ ಹೇಳುತ್ತಿದ್ದೇವಲ್ಲವೆ!

**ಸಿ.ಐ :–** ಗರ್ಭಗುಡಿಯೊಳಗೆ ಏನೂ ತಿಳಿಯದೆ ಹೋದರೂ ಹೊರಗೆ ಏನಾದರೂ ಅನುಮಾನವಾಗಿ ಆಗಲೀ, ಹೊಸದಾಗಿ ಆಗಲೀ ಕಾಣಿಸಿದೆಯಾ?

**ಪೂಜಾರಿ :–** ಗರ್ಭಗುಡಿಯೊಳಗೆ ಏನೂ ಕಾಣಿಸಲಿಲ್ಲ. ಆದರೆ ಗರ್ಭಗುಡಿ ಬಾಗಿಲು ತೆಗೆಯುತ್ತಿದ್ದಂತೆ ನಾನು ಇನ್ನೂ ಗರ್ಭಗುಡಿಯೊಳಗೆ ಹೆಜ್ಜೆ ಇಡುವುದರಲ್ಲೇ ಹೊರಗೆ ಗಲಾಟೆ ಆಯಿತು. ಆಗಲೇ ಗುಡಿಯೊಳಗೆ ಹಾವು ಕಾಣಿಸಿದೆಯೆಂದು ಭಜನೆಗೆ ಬಂದಿರುವವರೆಲ್ಲಾ ಎಲ್ಲ ಕಡೆ ಓಡುತ್ತಿದ್ದರು. ಹತ್ತು ಹದಿನೈದು ಮಂದಿ ಹಾವಿನ ಭಯಕ್ಕೆ ನನ್ನನ್ನು ತಳ್ಳಿಕೊಂಡು ಗರ್ಭಗುಡಿಯೊಳಗೆ ಸಹ ಬಂದಿದ್ದಾರೆ. ನಾನೂ ಸಹ ಭಯಪಟ್ಟು ಗರ್ಭಗುಡಿಯೊಳಗೆ ಬಂದಿದ್ದೇನೆ. ಗುಡಿಯೊಳಗಿನಿಂದ ನಾನು ನೋಡುತ್ತಿದ್ದಂತೆ ಯಾರೋ ಕಟ್ಟಿಗೆಯನ್ನು ತೆಗೆದುಕೊಂಡು ಬಂದು ಹಾವನ್ನು ಸಾಯಿಸಿದ್ದಾರೆ. ಹಾವನ್ನು ಸಾಯಿಸಿದ ನಂತರ ಎಲ್ಲರೂ ಹೊರಗೆ ಬಂದಿದ್ದೇವೆ. ಭಯದಿಂದ ಕೆಲವರು ಗರ್ಭಗುಡಿಯೊಳಗೆ ಬಂದಿರುವುದರಿಂದ ಗುಡಿ ಎಲ್ಲಾ ತೊಳೆದು ಶುಭ್ರ ಮಾಡಿಕೊಳ್ಳಬೇಕಾಯಿತು. ಆ ಗಲಾಟೆಯಿಂದ ಆ ದಿನ ಭಜನೆ ಕಾರ್ಯ ಸಹ ಅರ್ಧಗಂಟೆ ತಡವಾಗಿ ಪ್ರಾರಂಭಿಸಿದ್ದಾರೆ.

**ಸಿ.ಐ :–** ರಾತ್ರಿ ಗರ್ಭಗುಡಿ ಬಾಗಿಲು ಹಾಕುವಾಗ ಗರ್ಭಗುಡಿ ಎಲ್ಲಾ ನೋಡಿ, ಅದರಲ್ಲಿ ಯಾರೂ ಇಲ್ಲದಿರುವಾಗ ಬಾಗಿಲು ಹಾಕಿದ್ದೀಯ? ಅಥವಾ ನೀನು ಬಾಗಿಲು ಹಾಕುವಾಗ ಗರ್ಭಗುಡಿಯಲ್ಲಿ ಯಾರಾದರೂ ಇದ್ದಾರಾ?

**ಪೂಜಾರಿ :–** ಒಳಗೆ ಯಾರಾದರೂ ಇದ್ದರೇ ನಾನು ಏಕೆ ಬಾಗಿಲು ಹಾಕುತ್ತೇನೆ. ಪ್ರತಿ ದಿನ ಹಾಕಿದಂತೆ ಹಾಕಿದ್ದೇನೆ. ಅಷ್ಟೇ ಹೊರತು ಹುಡುಕಿ ನೋಡಲಿಲ್ಲ. ಗರ್ಭಗುಡಿಯೊಳಗೆ ಯಾರೂ ಹೋಗುವುದಿಲ್ಲ. ಒಳಗೆ ಹೋಗುವುದಕ್ಕೆ ಎಲ್ಲರೂ ಹೆದರುತ್ತಾರೆ.

**ಸಿ.ಐ :–** ನೀನು ಗರ್ಭಗುಡಿ ಬಾಗಿಲು ಹಾಕಿದಾಗ ನಿನಗೆ ತಿಳಿಯದಂತೆ ಒಳಗೆ ಯಾರಾದರೂ ಇದ್ದಿರುತ್ತಾರೆ. ನಿನ್ನ ಗಮನವನ್ನು ಪಕ್ಕಕ್ಕೆ ಮರಳಿಸಿ ನಿನಗೆ ತಿಳಿಯದಂತೆ

ಯಾರೋ ಒಳಗೆ ಹೋಗಿ, ಆ ರಾತ್ರಿ ಎಲ್ಲಾ ಒಳಗೇ ಇದ್ದು ವಜ್ರಗಳನ್ನು ಕಳುವು ಮಾಡಿ ಪುನಃ ಬಾಗಿಲು ತೆಗೆಯುವ ಸಮಯಕ್ಕೆ ಹಾಕಿಕೊಂಡಿರುವ ಉಪಾಯದ ಪ್ರಕಾರ ಹಾವನ್ನು ಗುಡಿಯೊಳಗೆ ಬಿಟ್ಟು ಗೊಂದಲವನ್ನು ಸೃಷ್ಟಿಸಿ, ಕೆಲವರು ನಿನ್ನನ್ನು ಪಕ್ಕಕ್ಕೆ ತಳ್ಳಿ ನಿನಗಿಂತ ಮೊದಲು ಗರ್ಭಗುಡಿಯೊಳಗೆ ಹೋಗಿರುತ್ತಾರೆ. ಆಗ ಒಳಗಿರುವ ಕಳ್ಳ ಅವರೊಂದಿಗೆ ಸುಲಭವಾಗಿ ಬೆರೆತುಹೋಗಿರುತ್ತಾನೆ. ನಂತರ ಎಲ್ಲರೊಂದಿಗೆ ಹೊರಗೆ ಬಂದಿರುತ್ತಾನೆ.

**ಪೂಜಾರಿ :–** ಗರ್ಭಗುಡಿ ಬೀಗ ತೆಗೆದು ಬಾಗಿಲು ತಳ್ಳುತ್ತಿದ್ದಂತೆ ಅವರು ನನ್ನನ್ನು ಪಕ್ಕಕ್ಕೆ ತಳ್ಳಿ ಗಬಕ್ಕನೆ ಒಳಗೆ ಹೋಗಿದ್ದಾರೆ. ಅವರು ಹೋದ ನಂತರವೇ ನಾನು ಹೋಗಿದ್ದೇನೆ.

**ಸಿ.ಐ :–** ಆ ದಿನ ನಿನ್ನನ್ನು ತಳ್ಳಿ ಒಳಗೆ ಹೋಗಿರುವವರು ಯಾರೋ ನಿನಗೆ ನೆನಪಿದೆಯಾ?

**ಪೂಜಾರಿ :–** ಎಲ್ಲರೂ ಜಟಾಜೂಟ ಸ್ವಾಮಿ ಭಕ್ತರೇ ಹೋಗಿದ್ದಾರೆ. ಅವರೆಲ್ಲಾ ನನಗೆ ತಿಳಿದವರೇ. ಸ್ವಾಮಿ ಹತ್ತಿರ ಇರುವವರೇ.

**ಸಿ.ಐ :–** ಅವರೆಲ್ಲಾ ಎಂತಹವರು?

**ಪೂಜಾರಿ :–** ಅವರು ಎಲ್ಲರೂ ಸಾತ್ವಿಕರು, ಎಲ್ಲರೂ ಒಳ್ಳೆಯವರೇ, ನನಗೆ ಚೆನ್ನಾಗಿ ಪರಿಚಯವಿರುವವರೇ.

(ಈ ವಿಧವಾಗಿ ಸಿ.ಐ ಬುದ್ಧಿವಂತಿಕೆಯಿಂದ ಪೂಜಾರಿಯನ್ನು ಇಂಟರಾಗೇಷನ್ ಮಾಡಿದ ನಂತರ ಆ ಕಳ್ಳತನ ಯೋಜನೆಯ ಪ್ರಕಾರ ನಡೆದಿರುವುದೇ ಎನ್ನುವ ನಿರ್ಣಯಕ್ಕೆ ಬಂದು ಆ ವಿಷಯವೆಲ್ಲವನ್ನು ಯಸ್.ಪಿರವರಿಗೆ ತಿಳಿಸಿದ್ದಾನೆ. ಆಗ ಯಸ್.ಪಿರವರಿಗೆ ವಿಷಯವೆಲ್ಲಾ ಅರ್ಥವಾಯಿತು. ಜಟಾಜೂಟ ಸ್ವಾಮಿ ಹತ್ತಿರಕ್ಕೆ ಹೋಗಿ ಆತನ ಕೈ ಬರವಣಿಗೆಯನ್ನು ತೆಗೆದುಕೊಂಡು ಬಾ ಎಂದು ಹೇಳಿದ್ದಾನೆ. ಹಾಗೆಯೇ ಆಗಲಿ ಎಂದು ಸಿ.ಐ ಅಲ್ಲಿಂದ ಬಂದು ಎರಡನೆ ದಿನ ಜಟಾಜೂಟ ಸ್ವಾಮಿ ಹತ್ತಿರಕ್ಕೆ ಹೋಗಿದ್ದಾನೆ. ಸಿ.ಐ. ಸ್ವಾಮಿ ಹತ್ತಿರಕ್ಕೆ

ಹೋಗುವುದಕ್ಕಿಂತ ಮೊದಲೇ ಬಲಗೈ ಹಸ್ತಕ್ಕೆ ಗಾಯ ಕಟ್ಟುಕಟ್ಟಿದಂತೆ ಬ್ಯಾಂಡೇಜ್ ಕಟ್ಟಿಕೊಂಡಿದ್ದಾನೆ. ನಂತರ ಕೈಯ್ಯನ್ನು ಸ್ವಲ್ಪ ಮೇಲಕ್ಕೆ ಇಟ್ಟುಕೊಂಡು ಜಠಾಜೂಟ ಸ್ವಾಮಿ ಹತ್ತಿರಕ್ಕೆ ಹೋಗಿದ್ದಾನೆ. ಅಲ್ಲಿಗೆ ಹೋಗಿ ಸ್ವಾಮಿಯೊಂದಿಗೆ ಹೀಗೆ ಮಾತನಾಡಿದ್ದಾನೆ.)

**ಸಿ.ಐ :–** ಸ್ವಾಮೀ! ಈ ಮಧ್ಯಕಾಲದಲ್ಲಿ ಭುವನೇಶ್ವರಿ ದೇವಾಲಯದಲ್ಲಿ ಕಳ್ಳತನ ನಡೆದಂತೆ ನಮಗೆ ತಿಳಿದು ಅದನ್ನು ಕುರಿತು ತನಿಖೆ ಮಾಡುತ್ತಿದ್ದೇವೆ. ಒಂದು ವಾರ ನಿಮ್ಮ ಭಜನೆ ಕಾರ್ಯ ಅಲ್ಲಿ ನಡೆದಿದೆಯೆಂದು ತಿಳಿದಿದೆ. ಆದ್ದರಿಂದ ಆ ಕಳ್ಳತನವನ್ನು ಕುರಿತು ನಾನು ಕೇಳುವುದೇನೆಂದರೆ, ನಿಮ್ಮ ಭಜನೆಯಲ್ಲಿ ಯಾರಾದರೂ ಹೊಸ ವ್ಯಕ್ತಿಗಳಾಗಲೀ, ಅನುಮಾನಾಸ್ಪದ ವ್ಯಕ್ತಿಗಳಾಗಲೀ ನಿಮಗೇನಾದರೂ ಕಾಣಿಸಿದ್ದಾರಾ? ಹಾಗೆ ಏನಾದರೂ ನಿಮಗೆ ತಿಳಿದಿದ್ದರೂ, ತಿಳಿಯದಿದ್ದರೂ ವಿವರವಾಗಿ ಬರೆದುಕೊಡಿ. ನಾನು ಬರೆದುಕೊಳ್ಳುವುದಕ್ಕೆ ನನ್ನ ಕೈ ಚೆನ್ನಾಗಿಲ್ಲ. ನಿಮಗೇನಾದರೂ ತಿಳಿದಿದ್ದರೇ ಬರೆಯಿರಿ, ತಿಳಿಯದಿದ್ದರು ಏನೂ ತಿಳಿಯದೆಂದೇ ಬರೆದುಕೊಡಿ.

**ಸ್ವಾಮಿ :–** ನಮ್ಮ ಭಜನೆಗೆ ಹೊಸಬರು ಸಹ ಬಹಳ ಜನ ಬಂದಿದ್ದಾರೆ. ಅವರು ಯಾರು, ಯಾವ ಪ್ರಾಂತದವರೆನ್ನುವ ವಿಷಯ ನಮಗೆ ತಿಳಿಯದಲ್ಲವೆ!

**ಸಿ.ಐ :–** ನಾವು ಶೇಖರಿಸಿದ ಸಮಾಚಾರವೆಲ್ಲವೂ ಯಸ್.ಪಿ ರವರಿಗೆ ಕಳು ಹಿಸುತ್ತಿರುತ್ತೇವೆ. ಎಲ್ಲರ ಹತ್ತಿರ ವಿಚಾರಿಸಿದಂತೆ ಆತನಿಗೆ ತಿಳಿಯಬೇಕಲ್ಲವೆ! ನೀವು ಬರೆದುಕೊಟ್ಟಿರುವ ಸಮಾಚಾರವನ್ನು ಮೇಲಿನ ಅಧಿಕಾರಿಗಳಿಗೆ ತಿಳಿಸುತ್ತೇವೆ. ನಮ್ಮ ವಿಚಾರಣೆಗೆ ನೀವೂ ಸಹ ಸಹಕರಿಸಬೇಕು.

**ಸ್ವಾಮಿ :–** ಸರಿ ಹಾಗೇ ಬರೆದುಕೊಡುತ್ತೇನೆ. ಹೊಸಬರು ಇದ್ದಾರೆ ಆದರೆ ಅವರು ಯಾರೋ ತಿಳಿಯದೆಂದೇ ಬರೆಯುತ್ತೇನೆ.

(ಎಂದು ಸ್ವಾಮಿ ತಾನು ಏನು ಬರೆಯಬೇಕೆಂದುಕೊಂಡಿದ್ದಾನೋ ಅದೇ ಬರೆದು ಕೊಟ್ಟಿದ್ದಾನೆ. ಅದನ್ನು ಸಿ.ಐ ಯಸ್.ಪಿ ರವರಿಗೆ ತೆಗೆದುಕೊಂಡು ಹೋಗಿ

ತೋರಿಸಿದ್ದಾನೆ. ಯಸ್.ಪಿ ರವರು ದೇವಾಲಯಕ್ಕೆ ಬರೆದ ಪತ್ರವನ್ನು, ಈಗ ಬರೆದ ಪತ್ರವನ್ನು ಚೆನ್ನಾಗಿ ನೋಡಿ ಎರಡರಲ್ಲೂ ಇರುವುದು ಒಂದೇ ಕೈ ಬರವಣಿಗೆ ಎಂದು ಗ್ರಹಿಸಿದ್ದಾನೆ. ಇದರಿಂದ ಈ ಕಳ್ಳತನ ಸ್ವಾಮಿಯೇ ಮಾಡಿಸಿದ್ದಾನೆಂದು ಯಸ್.ಪಿ ರವರಿಗೆ ಅರ್ಥವಾಯಿತು. ಆದರೆ ಸ್ವಲ್ಪ ಕಾಲ ಕಾದುಕೊಂಡು ಆ ಕಳ್ಳತನಕ್ಕೆ ಸಂಬಂಧಿಸಿದ ಆಧಾರಗಳನ್ನು ಶೇಖರಿಸಬೇಕೆಂದುಕೊಂಡಿದ್ದಾನೆ. ಅಲ್ಲಿಗೂ ಆ ವಿಷಯವನ್ನು ಸಿ.ಐ. ರವರಿಗೆ ಕೂಡಾ ಹೇಳದಂತೆ ಕಳುಹಿಸಿದನು. ನಂತರ ಆ ಕೇಸನ್ನು ಸಿ.ಐ.ಡಿ ಪೊಲೀಸರಿಗೆ ಒಪ್ಪಿಸಿ ಬೇಗನೆ ಸಾಕ್ಷ್ಯಾಧಾರಗಳು ಸಂಪಾದಿಸಲು ಆದೇಶಕೊಟ್ಟನು.)

***********************************

(ಈಶ್ವರ್ ಜೀವನದಲ್ಲಿ ಒಂದೊಂದು ವರ್ಷ ಕಳೆದುಹೋಗುತ್ತಾ ಇದೆ. ಈಶ್ವರ್ ಮಾತ್ರ ಎಲ್ಲರ ದೃಷ್ಟಿಯಲ್ಲಿ ಒಳ್ಳೆಯವನಾಗಿ ಹೆಸರು ತಂದುಕೊಂಡಿದ್ದಾನೆ. ಒಂದು ದಿನ ಆತನು ಶಾಲೆಗೆ ಹೋಗುತ್ತಿದ್ದಾನೆ. ಆ ದಾರಿಯಲ್ಲಿರುವ ಒಂದು ಮನೆ ಅಗ್ನಿ ದುರಂತಕ್ಕೆ ಗುರಿಯಾಗಿದೆ. ಅದು ದೊಡ್ಡ ಮನೆ, ಆ ಮನೆಯಲ್ಲಿ ಸುಮಾರು 20 ಮಂದಿ ಒಂದೇ ಕುಟುಂಬದವರಿದ್ದಾರೆ. ಆ ಮನೆಯಿಂದ ಎಲ್ಲರೂ ಹೊರಬಂದಿದ್ದಾರೆ. ಆದರೆ ಕೊನೆಗೆ ನೋಡಿಕೊಂಡಾಗ ನಾಲ್ಕು ವರ್ಷಗಳ ಹುಡುಗ ಒಂದು ಕೊಠಡಿಯಲ್ಲಿ ಮಲಗಿರುವಾಗ ಯಾರೂ ನೋಡಿಕೊಳ್ಳದೇ ಎಲ್ಲರೂ ಹೊರಗೆ ಬಂದಿದ್ದಾರೆ. ಮನೆ ಸುತ್ತಾ, ಮನೆಯೊಳಗೆ ಕೆಲವು ಭಾಗ ಉರಿ ಒತ್ತಿಕೊಂಡು ಭೀಕರವಾಗಿ ಉರಿಯುತ್ತಿದೆ. ಒಳಗೆ ಮಲಗಿರುವ ಹುಡುಗ ಎದ್ದು ಕಿರುಚುವುದಕ್ಕೆ ಆರಂಭಿಸಿದನು. ಆ ಹುಡುಗನ ತಾಯಿಯ ಹೃದಯ ವಿಶಾದಕರವಾಗಿ ಮಗುವಿಗಾಗಿ ಅಳುತ್ತಿದ್ದಾಳೆ. ಆಕೆಯನ್ನು ಕೆಲವರು ಹಿಡಿದುಕೊಂಡಿದ್ದಾರೆ. ಒಳಗೆ ಹೋಗಿ ಆ ಹುಡುಗನನ್ನು ರಕ್ಷಿಸುವುದಕ್ಕೆ ಯಾರಿಗೂ ಧೈರ್ಯ ಸಾಲುತ್ತಿಲ್ಲ. ಒಳಗೆ ಹೋದರೇ ಪುನಃ ಹೊರಗೆ ಬರಲಾರೆವೆಂದು ಎಲ್ಲರೂ ಅಂದುಕೊಳ್ಳುತ್ತಿದ್ದಾರೆ. ಅಂತಹ ಪರಿಸ್ಥಿತಿಯಲ್ಲಿ ಈಶ್ವರ್ ಅಲ್ಲಿಗೆ ಹೋಗಿದ್ದಾನೆ. ತಾಯಿ ಬಾಧೆಯನ್ನೂ, ಇತರರ ನಿಸ್ಸಹಾಯತೆಯನ್ನು ನೋಡಿದ್ದಾನೆ. ಈಶ್ವರ್ ಸ್ವಲ್ಪವೂ ಆಲೋಚಿಸದೆ ತನ್ನ ಪುಸ್ತಕಗಳ

ಬ್ಯಾಗ್‌ನ್ನು ಪಕ್ಕದಲ್ಲಿ ಹಾಕಿ ಒಂದೇ ಸಲ ಮನೆಯೊಳಗೆ ಉರಿಯ ಮಧ್ಯದಲ್ಲಿ ನುಗ್ಗಿ ಹೋಗಿದ್ದಾನೆ. ಅದು ನೋಡಿದ ಎಲ್ಲರೂ ಭಯಪಟ್ಟಿದ್ದಾರೆ. ಒಳಗಿರುವ ಹುಡುಗನೊಂದಿಗೆ ಈಶ್ವರ್ ಸಹ ಅಗ್ನಿಗೆ ಆಹುತಿ ಆಗುತ್ತಾನೆಂದು ಎಲ್ಲರೂ ಅಂದುಕೊಂಡಿದ್ದಾರೆ. ಈಶ್ವರ್ ಒಳಗೆ ಹೋದ ವಿಷಯವನ್ನು ಜಮೀನ್ದಾರನ ಮನೆಯಲ್ಲಿ ತಿಳಿದಾಗ, ಆ ಮನೆಯಲ್ಲಿರುವವರೆಲ್ಲರೂ ಗಾಬರಿಯಿಂದ ಓಡುತ್ತಾ ಅಲ್ಲಿಗೆ ಬಂದಿದ್ದಾರೆ. ಈಶ್ವರ್ ಒಳಗೆ ಹೋಗಿ ಹತ್ತು ನಿಮಿಷಗಳಾದರೂ ಹೊರಗೆ ಬರಲಿಲ್ಲ. ಅಲ್ಲಿರುವವರೆಲ್ಲರೂ ಒಳಗಿರುವ ಇಬ್ಬರ ಮೇಲೆ ಆಸೆಯನ್ನು ಬಿಟ್ಟುಕೊಂಡಿದ್ದಾರೆ. ಉರಿ ತೀವ್ರಸ್ಥಾಯಿಗೆ ಸೇರಿಕೊಂಡಿವೆ. ಆಗ ಆ ಉರಿಯ ಮಧ್ಯದಿಂದ ಈಶ್ವರ್ ನಾಲ್ಕು ಸಂವತ್ಸರಗಳ ಮಗುವಿನೊಂದಿಗೆ ಸಹ ಹೊರಗೆ ಬಂದಿದ್ದಾನೆ. ಅವರು ಹಾಗೆಯೇ ಉರಿಯೊಳಗಿನಿಂದ ಬಂದರೂ ಈಶ್ವರ್ ಶರೀರದ ಮೇಲಾಗಲೀ, ಆ ಹುಡುಗನ ಶರೀರದ ಮೇಲಾಗಲೀ ಒಂದು ಕಡೆಯೂ ಸಹ ಸುಡಲಿಲ್ಲ. ಚಿಕ್ಕ ಬೊಬ್ಬೆಯೂ ಸಹ ಕಾಣಿಸಲಿಲ್ಲ. ಹಾಗೆ ಅವರು ಬರುವುದು ಎಲ್ಲರಿಗೂ ಆಶ್ಚರ್ಯವಾಯಿತು. ಆ ಚಿಕ್ಕ ಮಗುವಿನ ತಾಯಿ ತನ್ನ ಮಗನನ್ನು ರಕ್ಷಿಸಿರುವುದಕ್ಕೆ ಈಶ್ವರ್ ಕಾಲಿನ ಮೇಲೆ ಬಿದ್ದಳು. ಈಶ್ವರ್ ಮನೆಯಿಂದ ಬಂದಿರುವವರು ಈಶ್ವರ್‌ನನ್ನು ಮನೆಗೆ ಕರೆದುಕೊಂಡು ಹೋಗಿದ್ದಾರೆ. ಆ ಸಂಘಟನೆಯಿಂದ ಆ ಊರಲ್ಲಾಗಲೀ, ಪಕ್ಕದ ಊರಲ್ಲಾಗಲೀ ಈಶ್ವರ್ ಎಂದರೇ ತಿಳಿಯದವರಿಲ್ಲ.)

**********************************

(ಯಸ್.ಪಿ ರವರ ಆದೇಶಾನುಸಾರ ಸಿ.ಐ.ಡಿ ಪಾರ್ಟೀ ಪೊಲೀಸರು ವಜ್ರಗಳ ಕಳ್ಳತನದ ಆಧಾರಗಳಿಗಾಗಿ ಶೋಧಿಸುತ್ತಿದ್ದರು. ಸಿ.ಐ.ಡಿ ಪೊಲೀಸ್ ಒಬ್ಬನು ಜಠಾಜೂಟ ಸ್ವಾಮಿ ಭಕ್ತರಲ್ಲಿ ಸೇರಿಹೋಗಿದ್ದಾನೆ. ಒಂದು ವರ್ಷ ದಿನಗಳಿಂದ ಅದೇ ಕೆಲಸದಲ್ಲಿ ಮಗ್ನರಾಗಿ ಸ್ವಾಮಿ ಭಕ್ತರಲ್ಲಿ ಒಬ್ಬ ಭಕ್ತನಾಗಿ ತಯಾರಾಗಿದ್ದಾನೆ. ಒಂದು ವರ್ಷದಿಂದ ಅನೇಕ ಭಕ್ತಿ ಕಾರ್ಯಗಳಲ್ಲಿ ಪಾಲ್ಗೊಂಡು ಸೇವೆ ಮಾಡುತ್ತಾ ಸ್ವಾಮಿಗೆ ಸ್ವಲ್ಪ ಆಪ್ತನಾಗಿ ಬದಲಾಗಿದ್ದಾನೆ. ಧನುಂಜಯ ಎನ್ನುವ ಸಿ.ಐ.ಡಿ ಪೊಲೀಸ್

ಪೂರ್ತಿ ಸ್ವಾಮಿ ಭಕ್ತನಾಗಿ ಬದಲಾಗಿದ್ದಾನೆ. ಅಂತಹ ಸಮಯದಲ್ಲಿ ಸ್ವಾಮಿಯೊಂದಿಗೆ ಆಪ್ತರಾಗಿರುವವರೆಲ್ಲರೂ ಧನುಂಜಯನೊಂದಿಗೆ ಚೆನ್ನಾಗಿ ಬೆರೆತುಕೊಂಡಿದ್ದರು. ಹಾಗೆ ಧನುಂಜಯ ತಮ್ಮ ಮನುಷ್ಯನೇ ಎನ್ನುವಂತೆ ಸ್ವಾಮಿ ಹತ್ತಿರವಾಗಲೀ, ಉಳಿದ ಭಕ್ತರ ಹತ್ತಿರವಾಗಲೀ ನಡೆದುಕೊಳ್ಳುತ್ತಿದ್ದನು. ಅಂತಹ ಸಮಯದಲ್ಲಿ ಒಂದು ದಿನ ಜಟಾಜೂಟ ಸ್ವಾಮಿ ಹತ್ತಿರಕ್ಕೆ ಹೋಗಿ ಹೀಗೆ ಹೇಳಿದ್ದಾನೆ.)

**ಧನಂಜಯ :–** ಸ್ವಾಮೀ! ನನಗೆ ತಿಳಿದ ವ್ಯಕ್ತಿ ಒಬ್ಬನು ವಜ್ರಗಳ ನಿಧಿಯನ್ನು ತೋರಿಸುತ್ತೇನೆಂದಿದ್ದಾನೆ. ಅದನ್ನು ತೆಗೆದು ಕೊಟ್ಟರೆ ಎರಡು ಪಟ್ಟು ನಮಗೆ ಕೊಟ್ಟು ಮೂರು ಪಟ್ಟು ಅತನು ತೆಗೆದುಕೊಳ್ಳುತ್ತೇನೆಂದಿದ್ದಾನೆ. ಅದಕ್ಕೆ ನಾನು ಇಬ್ಬರೂ ಸಮಾನವಾಗಿ ಹಂಚಿಕೊಳ್ಳೋಣ ಎಂದು ಹೇಳಿದ್ದೇನೆ. ಆತನು ಬಹಳ ದಿನಗಳಿಂದ ನನ್ನ ಮಾತನ್ನು ಒಪ್ಪಿಕೊಂಡಿಲ್ಲ. ನಂತರ ಒಂದು ಭಾಗ ನಮಗೆ ಎರಡು ಭಾಗಗಳು ತನಗೆ ಎಂದು ಹೇಳುತ್ತಾ ಬಂದಿದ್ದಾನೆ. ಅದಕ್ಕೆ ನಾನು ಒಪ್ಪಿಕೊಂಡಿಲ್ಲ. ಬಹಳ ದಿನಗಳನಂತರ ಈಗ ನಾನು ಹೇಳಿದಂತೇ ಅರ್ಧ ಭಾಗ ತೆಗೆದುಕೊಳ್ಳುವಂತೆ ಒಪ್ಪಿಕೊಂಡಿದ್ದಾನೆ. ಅದನ್ನು ಹೇಗೆ ತೆಗೆಯಬೇಕೋ ನನಗೂ ಸಹ ತಿಳಿದಿಲ್ಲ. ನೀವು ಅದಕ್ಕೆ ಏನಾದರೂ ಉಪಾಯವನ್ನು ಹೇಳಿ.

(ಧನಂಜಯ ಹೇಳಿದ ಮಾತನ್ನು ಕೇಳಿದ ಜಟಾಜೂಟ ಸ್ವಾಮಿ ದೀರ್ಘ ವಾಗಿ ಯೋಚಿಸಿ ಹೀಗೆ ಹೇಳಿದ್ದಾನೆ.)

**ಜಟಾಜೂಟಸ್ವಾಮಿ :–** ಮೊದಲು ನಿಧಿಯನ್ನು ತೋರಿಸಲಿ, ನಂತರ ಎರಡು ದಿನಗಳಲ್ಲಿ ತೆಗೆದುಕೊಡುತ್ತೇವೆಂದು ಹೇಳು. ಆತನು ನಿನಗೆ ಒಂದು ಭಾಗ ಕೊಟ್ಟು ಎರಡು ಭಾಗಗಳು ಆತನೇ ತೆಗೆದುಕೊಂಡರೂ ಪರವಾಗಿಲ್ಲ. ನಾನು ನಿನಗೆ ನಿಧಿಯನ್ನು ಸುಲಭವಾಗಿ ತೆಗೆಯುವುದಕ್ಕೆ ಉಪಾಯವನ್ನು ಹೇಳುತ್ತೇನೆ. ನಿಧಿ ಇರುವ ಸ್ಥಳವನ್ನು ಮೊದಲು ತೋರಿಸಿದರೆ ಒಂದು ದಿನ ಆ ಸ್ಥಳದಲ್ಲಿ ಪೂಜೆ ನಿರ್ವಹಿಸಿದ ನಂತರ ಎರಡನೆ ದಿನ ನಿಧಿ ಸುಲಭವಾಗಿ ಲಭಿಸುತ್ತದೆ. ನೀನು ಮೊದಲು ನಿಧಿ ಇರುವ ಜಾಗಾ ತಿಳಿದುಕೊಂಡು ಬಾ, ನಂತರ ಅಲ್ಲಿ ಯಾವ ಪೂಜೆ ಮಾಡಬೇಕೋ ನಾನು ಹೇಳುತ್ತೇನೆ. ಅದರ ಪ್ರಕಾರ ಆ ನಿಧಿಯನ್ನು ಸುಲಭವಾಗಿ ತೆಗೆದು ಕೊಡಬಹುದು ಎಂದಿದ್ದಾನೆ.

**ಧನಂಜಯ :–** ಹಾಗೇ ಸ್ವಾಮೀ! ಈ ದಿನವೇ ಅ ವಿಷಯವನ್ನು ಆತನೊಂದಿಗೆ ಮಾತನಾಡಿ ಬರುತ್ತೇನೆ.

(ಆ ವಿಧವಾಗಿ ಹೋದ ಧನುಂಜಯ ಮರುದಿನವೇ ಜಠಾಜೂಟ ಸ್ವಾಮಿ ಹತ್ತಿರಕ್ಕೆ ಬಂದಿದ್ದಾನೆ. ಧನುಂಜಯ ಸ್ವಾಮಿಯನ್ನು ನೋಡಿ ನಗುತ್ತಾ ಹೀಗೆ ಹೇಳಿದ್ದಾನೆ.)

**ಧನಂಜಯ :–** ಕೇಳಿ ಬಂದಿದ್ದೇನೆ ಸ್ವಾಮೀ, ಆತನು ಸಂತೋಷದಿಂದ ಆ ಸ್ಥಳ ನನಗೆ ತೋರಿಸಿದ್ದಾನೆ. ನಾಳೆ ಪೂಜೆ ಮಾಡಿ ನಾಡಿದ್ದು ನಿಧಿಯನ್ನು ತೆಗೆದುಕೊಡುತ್ತೇನೆಂದು ಹೇಳಿದ್ದೇನೆ. ಇನ್ನು ನೀವು ಹೇಗೆ ಹೇಳಿದರೇ ಹಾಗೇ ಮಾಡುತ್ತೇನೆ.

**ಜಠಾಜೂಟ ಸ್ವಾಮಿ :–** ನಾನು ಆ ಸ್ಥಳವನ್ನು ನೋಡಿ ಆ ಸ್ಥಳವನ್ನನುಸರಿಸಿ ಎಂತಹ ಪೂಜೆ ಮಾಡಬೇಕೋ ಹೇಳುತ್ತೇನೆ. ಮೊದಲು ನಾವು ಆ ಸ್ಥಳವನ್ನು ನೋಡಿ ಬರಬೇಕು.

(ಸ್ವಾಮಿ ಮಾತಿನ ಪ್ರಕಾರ ಧನುಂಜಯ ಸ್ವಾಮಿಯನ್ನು ಕರೆದುಕೊಂಡು ಹೋಗಿ 20 ಮೈಲು ದೂರದಲ್ಲಿ ಒಂದು ಗುಡ್ಡ ಪಕ್ಕದಲ್ಲಿ ಒಂದು ಸ್ಥಳವನ್ನು ತೋರಿಸಿದ್ದಾನೆ. ಆ ಸ್ಥಳವನ್ನು ನೋಡಿದ ಜಠಾಜೂಟ ಸ್ವಾಮಿ ಹೀಗೆ ಹೇಳಿದ್ದಾನೆ.)

**ಜಠಾಜೂಟಸ್ವಾಮಿ :–** ಇದು ಕಪ್ಪು ಮಣ್ಣಿನ ನೆಲವಾದ್ದರಿಂದ ನಾಳೆ ಸಂಜೆ ಮೂರು ಗಂಟೆಗಳಿಗೆ ಪೂಜೆ ಮಾಡಬೇಕು. ಈ ಪೂಜೆಯಲ್ಲಿ ರಕ್ತ ಇರಬಾರದು. ಅಂದರೆ ಪ್ರಾಣಿಬಲಿ ಕೆಲಸಕ್ಕೆ ಬರುವುದಿಲ್ಲ. ಆದ್ದರಿಂದ ಕೆಂಪು ಕುಂಕುಮ ನೀರನ್ನು ಬಳಸಬೇಕು. ಈ ಪೂಜೆಯಲ್ಲಿ ಈ ಎರಡೇ ಮುಖ್ಯ, ಉಳಿದವೆಲ್ಲಾ ಸಾಧಾರಣ ಪೂಜೆಯೇ ಮಾಡಬಹುದು.

(ಹಾಗೆ ಸ್ವಾಮಿ ಹೇಳಿದ ಪ್ರಕಾರ ಮಾಡುತ್ತೇನೆಂದು ಧನುಂಜಯ ಹೇಳಿದ್ದಾನೆ. ಇಬ್ಬರೂ ಸೇರಿ ಹಿಂದಕ್ಕೆ ಬಂದಿದ್ದಾರೆ. ಹಾಗೆ ಬಂದ ನಂತರ ಧನುಂಜಯ ನಾಳೆ ಪೂಜೆಗೆ ತಯಾರಿಯನ್ನು ಮಾಡಿಕೊಳ್ಳುತ್ತೇನೆಂದು ಹೊರಟು ಹೋದಾಗ ಜಠಾಜೂಟ ಸ್ವಾಮಿ ತನ್ನ ಮಂದಿರಕ್ಕೆ ಬಂದಿದ್ದಾನೆ.

ಮರುದಿನ ಧನಂಜಯನು ಆ ಸ್ಥಳದಲ್ಲಿ ಪೂಜೆ ಮಾಡಬೇಕಾಗಿದೆ. ಅಷ್ಟರಲ್ಲಿ ಈ ದಿನ ರಾತ್ರಿಯಲ್ಲೇ ಜಟಾಜೂಟಸ್ವಾಮಿ ತನ್ನ ಹತ್ತಿರವಿರುವ ನಕಲಿ ವಜ್ರಗಳನ್ನು ಆ ಸ್ಥಳದಲ್ಲಿ ಒಂದು ಅಡಿ ಆಳದಲ್ಲೇ ಇಡಬೇಕೆಂದುಕೊಂಡಿದ್ದಾನೆ. ಹಾಗೆ ಇಡುವುದರಿಂದ ನಾಳೆ ಧನುಂಜಯನು ಅಲ್ಲಿ ಪೂಜೆ ಮಾಡಿ ಸ್ವಲ್ಪ ಅಗೆದ ಕೂಡಲೇ ಆತನಿಗೆ ತಾನು ಅಡಿ ಆಳದಲ್ಲಿ ಇಟ್ಟಿರುವ ವಜ್ರಗಳು ಕಾಣಿಸುತ್ತವೆ. ಆಗ ಆತನು ವಜ್ರಗಳು ಸಿಕ್ಕಿವೆಯೆನ್ನುವ ತೃಪ್ತಿಯಿಂದ ಅಲ್ಲಿಂದ ಹೋಗುತ್ತಾನೆ. ಹಾಗೆ ಆತನು ತಾನು ಇಟ್ಟಿರುವ ನಕಲಿ ವಜ್ರಗಳನ್ನು ತೆಗೆದುಕೊಂಡು ಹೋದನಂತರ ಎರಡನೆ ದಿನ ಹೋಗಿ ಭೂಮಿಯೊಳಗಿರುವ ಅಸಲಾದ ವಜ್ರಗಳ ನಿಧಿ ತಾನು ತಂದುಕೊಳ್ಳಬಹುದೆನ್ನುವುದು ಜಟಾಜೂಟ ಸ್ವಾಮಿ ಮನಸ್ಸಿನಲ್ಲಿರುವ ಉಪಾಯ.

ನಾಳೆ ಬೆಳಗ್ಗೆ ನಿಧಿ ಇರುವ ಕಡೆ ಪೂಜೆ ಮಾಡಬೇಕೆಂದು ಹೋದ ಧನುಂಜಯ, ಸ್ವಾಮಿಯವರಿಗೆ ಭಕ್ತನಾಗಿ ನಟಿಸುತ್ತಿರುವವನು ತನಿಖೆ ಮಾಡುತ್ತಿರುವ ಪೊಲೀಸ್. ಆದ್ದರಿಂದ ಧನಂಜಯ ಮನಸ್ಸಿನಲ್ಲಿನ ಉಪಾಯವೇನೆಂದರೆ! ನಿಧಿ ಇರುವ ಸ್ಥಳವನ್ನು ತೋರಿಸಿದ ನಂತರ ಜಟಾಜೂಟಸ್ವಾಮಿ ತನ್ನ ಹತ್ತಿರವಿರುವ ಭುವನೇಶ್ವರಿ ಆಲಯದಿಂದ ಕಳುವುಮಾಡಿರುವ ನಕಲಿ ವಜ್ರಗಳನ್ನು ಅಲ್ಲಿಗೆ ತಂದಿಟ್ಟು, ಅಸಲಾದ ವಜ್ರಗಳ ನಿಧಿಯನ್ನು ತಾನು ಹೊಡೆಯಬೇಕೆಂದು ಅಂದುಕೊಳ್ಳುತ್ತಾ ನೆಂದೂ, ಆ ಕೆಲಸ ಮಾಡುವುದಕ್ಕೆ ಆ ದಿನ ರಾತ್ರಿಗೇ ನಕಲಿ ವಜ್ರಗಳನ್ನು ತೆಗೆದುಕೊಂಡು ನಿಧಿ ಇದೆಯೆಂದು ತಾನು ನಂಬಿಸಿದ ಸ್ಥಳ ಹತ್ತಿರಕ್ಕೆ ಬರುತ್ತಾನೆಂದೂ, ಆಗ ಸ್ವಾಮಿ ಹತ್ತಿರ ವಜ್ರಗಳಿದ್ದಂತೆ ರೆಡ್‌ಹ್ಯಾಂಡೆಡ್‌ಆಗಿ ಜಟಾಜೂಟಸ್ವಾಮಿಯನ್ನು ಹಿಡಿದುಕೊಳ್ಳಬಹುದೆಂದು ಅಂದುಕೊಂಡಿದ್ದಾನೆ. ಅಷ್ಟೇ ಅಲ್ಲದೆ ಆ ವಿಷಯ ವೆಲ್ಲವನ್ನೂ ಯಸ್.ಪಿ ರವರಿಗೆ ಹೇಳಿ ಸ್ವಾಮಿಯನ್ನು ಅರೆಸ್ಟು ಮಾಡುವುದಕ್ಕೆ ಕೆಲವರು ಪೊಲೀಸರನ್ನು ಗುಡ್ಡದ ಹತ್ತಿರ ಮರಗಳ ಮರೆಯಿಂದ ಗಮನಿಸುವಹಾಗೆ ಮಾಡಿ ಸ್ವಾಮಿ ಬಂದ ಕೂಡಲೇ ಆತನನ್ನು ಅರೆಸ್ಟು ಮಾಡುವುದಕ್ಕೆ ತಕ್ಕ ಏರ್ಪಾಟನ್ನು ಮಾಡಿ ಇಟ್ಟಿದ್ದಾನೆ. ಈ ವಿಧವಾಗಿ ಭಕ್ತನಾಗಿ ಮಾರುವೇಷದಲ್ಲಿರುವ ಧನಂಜಯ ಪ್ಲಾನ್ ಇರುವಾಗ, ಸ್ವಾಮಿ ಆ ರಾತ್ರಿಗೇ ತನ್ನ ಹತ್ತಿರವಿರುವ ವಜ್ರಗಳನ್ನು ಯಾರಿಗೂ ತಿಳಿಯದಂತೆ ಧನಂಜಯ ತೋರಿಸಿದ ಸ್ಥಳದಲ್ಲಿ ಇಡುವುದಕ್ಕೆ ತನ್ನ ಉಪಾಯದ

ಪ್ರಕಾರ ತಾನು ಬಂದಿದ್ದಾನೆ. ಕತ್ತಲಲ್ಲಿ ತನಗಾಗಿಯೇ ಪೋಲೀಸರು ಮರಗಳ ಮರೆಯಲ್ಲಿ ಬಚ್ಚಿಟ್ಟುಕೊಂಡಿದ್ದಾರೆನ್ನುವ ವಿಷಯ ಸ್ವಲ್ಪವೂ ಜಟಾಜೂಟ ಸ್ವಾಮಿಗೆ ತಿಳಿದಿಲ್ಲ. ಆದ್ದರಿಂದ ಸ್ವಾಮಿ ಧೈರ್ಯವಾಗಿ ಅಲ್ಲಿಗೆ ಬಂದು ಅಡಿ ಆಳ ತೆಗೆಯುವುದಕ್ಕೆ ಆರಂಭಿಸಿದನು. ಅದೇ ಸರಿಯಾದ ಸಮಯವೆನ್ನುವಂತೆ ಅಲ್ಲೇ ಬಚ್ಚಿಟ್ಟುಕೊಂಡಿರುವ ಪೋಲೀಸರು ಬಂದು ಜಟಾಜೂಟ ಸ್ವಾಮಿಯನ್ನು, ಆತನ ಹತ್ತಿರವಿರುವ ವಜ್ರಗಳೊಂದಿಗೆ ಸಹ ಹಿಡಿದುಕೊಂಡಿದ್ದಾರೆ. ಊಹಿಸದ ಆ ಪರಿಣಾಮಕ್ಕೆ ಸ್ವಾಮಿ ಮಣ್ಣು ಮುಕ್ಕಿದ್ದಾನೆ. ಅರೆಸ್ಟು ಮಾಡಿದ ಪೋಲೀಸರು ಸ್ವಾಮಿಯನ್ನು ಯಸ್.ಪಿ ಮುಂದೆ ಹಾಜರು ಪಡಿಸಿದರು. ಆಗ ಯಸ್.ಪಿ ರವರು ಸ್ವಾಮಿಯನ್ನು ಹೀಗೆ ಇಂಟರಾಗೇಷನ್ ಮಾಡಿದ್ದಾನೆ.)

**ಯಸ್.ಪಿ :–** ಸ್ವಾಮೀ! ನಿಮ್ಮ ಹತ್ತಿರವಿರುವ ವಜ್ರಗಳು ಎಲ್ಲಿಯವು?

**ಜಟಾಜೂಟ :–** ಅವು ಬಹಳ ಕಾಲದಿಂದ ನಮ್ಮ ಹತ್ತಿರವೇ ಇವೆ.

**ಯಸ್.ಪಿ :–** ಬಹಳ ಕಾಲದಿಂದ ಎಂದರೇ ಎಷ್ಟು ಕಾಲದಿಂದ?

**ಜಟಾಜೂಟ :–** ನಮ್ಮ ಹಿರಿಯರ ಕಾಲದಿಂದ ಇವೆ.

**ಯಸ್.ಪಿ :–** ನಿಮ್ಮ ಹಿರಿಯರ ಕಾಲದಿಂದ ಇರುವ ವಜ್ರಗಳನ್ನು ನೀವು ರಾತ್ರಿ ಸಮಯ ಅಲ್ಲಿಗೆ ಏಕೆ ತೆಗೆದುಕೊಂಡು ಹೋಗಿದ್ದೀರ?

**ಜಟಾಜೂಟ :–** ಸ್ವಲ್ಪ ಕಾಲ ಅಲ್ಲಿ ಬಚ್ಚಿಡಬೇಕೆಂದು ತೆಗೆದುಕೊಂಡು ಹೋಗಿದ್ದೇವೆ.

**ಯಸ್.ಪಿ :–** ನೀವು ಅವುಗಳನ್ನು ಬಚ್ಚಿಡಬೇಕೆಂದು ಏಕೆ ಅಂದುಕೊಂಡಿದ್ದೀರ?

**ಜಟಾಜೂಟ :–** ಭದ್ರತೆಗಾಗಿ.

**ಯಸ್.ಪಿ :–** ಅಲ್ಲೇ ಏಕೆ ಬಚ್ಚಿಡಬೇಕೆಂದುಕೊಂಡಿದ್ದೀರ?

**ಜಟಾಜೂಟ :–** ಅಲ್ಲಿ ಗುಡ್ಡ ಗುರುತಾಗಿ ಇರುತ್ತದೆಂದುಕೊಂಡಿದ್ದೇನೆ.

**ಯಸ್.ಪಿ :–** ಇಲ್ಲಿಯವರೆಗು ನೀನು ಹೇಳಿರುವುದೆಲ್ಲಾ ಚೆನ್ನಾಗೇ ಇದೆ. ಇದರಲ್ಲಿ ನಿನ್ನ ತಪ್ಪು ಏನೂ ಇಲ್ಲ. ಆದರೆ ನಾವು ನಿನ್ನೆಯ ದಿನ ನಿನ್ನನ್ನು ಅರೆಸ್ಟು

ಮಾಡುವುದಕ್ಕಿಂತ ಮೊದಲೆ ಧನುಂಜಯನನ್ನು ಅರೆಸ್ಟು ಮಾಡಿ ವಿಚಾರಿಸಿದ್ದೇವೆ. ನಮಗೆ ಎಲ್ಲಾ ವಿಷಯಗಳು ಹೇಳಿದ್ದಾನೆ. ವಿಚಾರಣೆಯಲ್ಲಿ ಎಲ್ಲ ವಿಷಯಗಳು ತಿಳಿದ ನಂತರ ಕೂಡ ನೀವು ಹೇಳಿದ ಮಾತನ್ನು ನಂಬಬೇಕೆನ್ನುತ್ತೀರಾ! ನಾವು ಕಳುವು ಮಾಡಿರುವುದು ನಕಲಿ ವಜ್ರಗಳೆಂದು ದೇವಾಲಯಕ್ಕೆ ಬರೆದ ನಿಮ್ಮ ಹಸ್ತಗಳಿಂದ ಬರೆದ ಉತ್ತರವನ್ನು ನೋಡಿದ ನಂತರವೂ ಸಹ ನೀವು ಹೇಳಿದ ಮಾತನ್ನು ನಂಬು ಎನ್ನುತ್ತೀರಾ! ನಾಳೆ ಪೂಜೆ ಮಾಡಲು ಧನಂಜಯಗೆ ಹೇಳಿ, ಆತನನ್ನು ಮೋಸ ಮಾಡುವುದಕ್ಕೆ ರಾತ್ರಿಗೆ ರಾತ್ರಿ ಅಲ್ಲಿಗೆ ಹೋಗಿ, ಪ್ರತ್ಯಕ್ಷವಾಗಿ ಸಿಕ್ಕಿದ ನಂತರ ಸಹ ನೀವು ಹೇಳಿದ ಮಾತನ್ನು ನಂಬ ಬೇಕಾ? ಸರಿ! ನೀವು ಹೇಳುವ ಪ್ರತಿ ಮಾತನ್ನು ನಾನು ಕುರುಡನಂತೆ ನಂಬುತ್ತೇನೆ. ನಾನು ನಂಬಿದರೂ ಧನುಂಜಯ ನಿನ್ನನ್ನು ನಂಬುವುದಿಲ್ಲವೇ! ಈಗ ಆತನೇ ನಿನ್ನನ್ನು ಕೇಳುತ್ತಾನೆ. ಆತನಿಗೆ ನೀನು ಏನು ಹೇಳುತ್ತೀಯೋ ನಾವು ಪಕ್ಕದಲ್ಲಿದ್ದು ಕೇಳುತ್ತೇವೆ.

(ಅಷ್ಟರಲ್ಲೇ ಧನುಂಜಯ ಕೈಗಳಿಗೆ ಬೇಡೀ ತಗಲಿಸಿಕೊಂಡು ಆತನನ್ನು ಅಲ್ಲಿಗೆ ತಂದರು. ಆಗ ಧನುಂಜಯ ಸ್ವಾಮಿಯನ್ನು ನೋಡಿ ಹೀಗೆ ಮಾತನಾಡಿದನು.)

**ಧನಂಜಯ :–** ಸ್ವಾಮೀ! ನಾನು ನಿಧಿಯನ್ನು ತೆಗೆಯುವುದಕ್ಕೆ ಹೋಗುತ್ತಿದ್ದೇನೆಂದು ಪೊಲೀಸರಿಗೆ ಹೇಳಿ ಅರೆಸ್ಟ್ ಮಾಡಿಸಿದ್ದೀಯ. ನಿನಗೆ ಇದು ನ್ಯಾಯವೇನಾ?

**ಜಟಾಜೂಟ :–** ನಾನು ನಿನ್ನನ್ನು ಕುರಿತು ಯಾರಿಗೂ ಏನೂ ಹೇಳಲಿಲ್ಲ.

**ಧನಂಜಯ :–** ಆದರೆ ನೀನು ಏಕೆ ಅಲ್ಲಿಗೆ ಹೋಗಿದ್ದೀಯ? ನನ್ನನ್ನು ಇಲ್ಲಿ ಅರೆಸ್ಟ್ ಮಾಡಿಸಿ ಅಲ್ಲಿಗೆ ಹೋಗಿ ನೀನು ನಿಧಿಯನ್ನು ಹೊಡೆಯಬೇಕೆಂದೇ ಅಲ್ಲವೆ! ನಿನ್ನ ಉದ್ದೇಶ.

**ಜಟಾಜೂಟ :–** ಇಲ್ಲ ನಿನ್ನನ್ನು ಅರೆಸ್ಟ್ ಮಾಡಿಸಬೇಕೆಂದು ನಾನು ಎಂದಿಗೂ ಅಂದುಕೊಂಡಿಲ್ಲ.

**ಧನಂಜಯ :–** ಆದರೆ ನಿನು ಅಲ್ಲಿಗೆ ಏಕೆ ಹೋಗಿದ್ದೀಯ? ಅಲ್ಲಿಗೆ ಹೋಗಿ ನಾನು ತೋರಿಸಿದ ನಿಧಿಯನ್ನು ನೀನು ಏಕೆ ತೆಗೆದುಕೊಂಡಿದ್ದೀಯ? ನೀನು ಒಬ್ಬ ಸ್ವಾಮಿಯಾಗಿದ್ದು ಸಹ ಅಸತ್ಯ ಹೇಳಿದರೆ ಹೇಗೆ? ನೀನು ಆ ನಿಧಿಯನ್ನು

ತೆಗೆದುಕೊಂಡಂತೆ ನನಗೆ ತಿಳಿದಿದೆ. ನಿನ್ನ ಹತ್ತಿರ ಆ ನಿಧಿ ವಜ್ರಗಳು ಸಿಕ್ಕಿರುವಂತೆಯೂ ಸಹ ತಿಳಿದಿದೆ. ಪ್ರತ್ಯಕ್ಷವಾಗಿ ವಜ್ರಗಳು ಸಿಕ್ಕಿದರೂ ಅಸತ್ಯ ಹೇಳುವುದರಲ್ಲಿ ಅರ್ಥವಿಲ್ಲ.

(ಧನಂಜಯ ಹೇಳಿದ ಮಾತುಗಳು ಕೇಳಿ ಸ್ವಾಮಿ ಸಂದಿಗ್ಧದ ಪರಿಸ್ಥಿತಿಯಲ್ಲಿದ್ದಾನೆ. ಈಗ ಎರಡೂ ಕಡೆ ಬಲೆ ಇದೆಯೆಂದು ನಿಧಿ ತೆಗೆದುಕೊಂಡಿಲ್ಲ ವೆಂದರೂ ತನ್ನ ಹತ್ತಿರ ಸಿಕ್ಕಿರುವ ವಜ್ರಗಳನ್ನು ಕುರಿತು ಬಲೆಗೆ ಬೀಳದೆ ತಪ್ಪುವುದಿಲ್ಲ. ಒಂದು ವೇಳೆ ತನ್ನ ಹತ್ತಿರವಿರುವ ವಜ್ರಗಳು ನಿಧಿಯಲ್ಲಿ ಸಿಕ್ಕಿವೆಯೆಂದು ಹೇಳಿದರೂ ಸರ್ಕಾರದ ಅನುಮತಿ ಇಲ್ಲದೆ ನಿಧಿಯನ್ನು ತೆಗೆಯುವುದು ಅಪರಾಧವೇ ಆಗುತ್ತದೆ. ಆದ್ದರಿಂದ ಹಾಗೆ ಹೇಳಿದರೂ ಬಲೆಗೆ ಬೀಳಬಹುದು. ಇಷ್ಟು ತೊಂದರೆಗಳಿಗಿಂತ ನಿಜ ಹೇಳಿ ಶಿಕ್ಷೆಯನ್ನು ಕಡಿಮೆ ಮಾಡಿಕೊಳ್ಳುವುದು ಒಳ್ಳೆಯದೆಂದುಕೊಂಡಿದ್ದಾನೆ.)

**ಯಸ್.ಪಿ :–** ಧನಂಜಯ ಮಾತಿಗೆ ಏನು ಸಮಾಧಾನ ಹೇಳುತ್ತೀರ?

**ಜಟಾಜೂಟ :–** ಒಂದು ವಿಷಯ ಮಾತ್ರ ಸತ್ಯ. ನಾನು ಧನುಂಜಯ ತೋರಿಸಿದ ನಿಧಿಯನ್ನು ತೆಗೆಯಲಿಲ್ಲ. ನನ್ನ ಹತ್ತಿರವಿರುವ ನಕಲಿ ವಜ್ರಗಳನ್ನು ಅಲ್ಲಿ ಇಟ್ಟು ಬರಬೇಕೆಂದುಕೊಂಡಿದ್ದೇನೆ. ಆ ನಕಲಿ ವಜ್ರಗಳನ್ನು ಧನಂಜಯ ತೆಗೆದುಕೊಂಡು ಹೋದ ನಂತರ, ಆ ನಿಧಿಯಲ್ಲಿರುವ ವಜ್ರಗಳನ್ನು ತೆಗೆದುಕೊಳ್ಳಬೇಕೆಂದು ಕೊಂಡಿದ್ದೇನೆ. ನಾನು ಧನುಂಜಯನನ್ನು ಮೋಸ ಮಾಡಬೇಕೆಂದುಕೊಂಡಿದ್ದೇನೆ. ಆದರೆ ಮೋಸ ನಡೆಯುವುದಕ್ಕಿಂತ ಮೊದಲೇ ನಾನು ನಿಮಗೆ ಸಿಕ್ಕಿಬಿದ್ದೆನು. ಇನ್ನು ನನ್ನ ಹತ್ತಿರ ಇರುವ ವಜ್ರಗಳು ನೀವು ಹೇಳಿದಂತೆ ಭುವನೇಶ್ವರಿ ದೇವಾಲಯದೊಳಗಿನವೇ. ನನ್ನ ಮನುಷ್ಯರಿಂದ ನಾನೇ ಅವುಗಳನ್ನು ಕಳುವು ಮಾಡಿಸಿದ್ದೇನೆ. ಅವು ನನ್ನ ಹತ್ತಿರಕ್ಕೆ ಸೇರಿದ ನಂತರ ನಾವು ಕಳುವು ಮಾಡಿದ ವಜ್ರಗಳು ನಕಲಿವೆಂದು ತಿಳಿಯಿತು. ಈಗ ಸಮಯ ಬಂದಿದೆ ಆದ್ದರಿಂದ ನಿಧಿ ಹತ್ತಿರ ಒಂದು ಅಡಿ ಒಳಗೇ ನನ್ನ ಹತ್ತಿರವಿರುವ ನಕಲಿ ವಜ್ರಗಳನ್ನು ಇಟ್ಟುಹೋಗಬೇಕೆಂದುಕೊಂಡಿದ್ದೇನೆ. ಹಾಗೆ ಇಟ್ಟಿರುವ ವಜ್ರಗಳನ್ನು ನಿಧಿಯಂತೆ ಭಾವಿಸಿ ಧನಂಜಯನು ಅವುಗಳನ್ನು ತೆಗೆದುಕೊಂಡು ಹೋದ ನಂತರ, ಆ ನಿಧಿಯಲ್ಲಿನ ಅಸಲಾದ ವಜ್ರಗಳನ್ನು ತೆಗೆದುಕೊಳ್ಳಬೇಕೆಂದುಕೊಂಡಿದ್ದೇನೆ. ಆದರೆ

ನಾನು ನನ್ನ ನಕಲಿ ವಜ್ರಗಳೊಂದಿಗೆ ಅಲ್ಲಿಗೆ ಹೋದ ಕೂಡಲೇ ನನ್ನ ಹತ್ತಿರವಿರುವ ವಜ್ರಗಳಿಂದ ಸಹ ಸಿಕ್ಕಿದ್ದೇನೆ. ನಡೆದ ವಾಸ್ತವ ಸಂಗತಿ ಇಷ್ಟೇ. ಇದಕ್ಕಿಂತ ಮೀರಿ ಇಲ್ಲ.

**ಯಸ್.ಪಿ :–** ನೀನು ನಿಜ ಒಪ್ಪಿಕೊಂಡಿದ್ದೀಯ. ಆದ್ದರಿಂದ ನಿನಗೆ ಶಿಕ್ಷೆ ಕಡಿಮೆಯಾಗುವಂತೆ ನಾವು ಪ್ರಯತ್ನ ಮಾಡುತ್ತೇವೆ. ನೀನು ಇನ್ನೂ ಕೆಲವು ನಿಜ ಹೇಳಬೇಕಾಗಿದೆ. ಭುವನೇಶ್ವರಿ ದೇವಾಲಯದಲ್ಲಿನ ಅಸಲಾದ ವಜ್ರಗಳು ಹೋಗಿ ಅವುಗಳ ಸ್ಥಾನದಲ್ಲಿ ನಕಲಿ ವಜ್ರಗಳು ಸೇರಿಹೋಗಿವೆ. ಆ ವಿಷಯ ನಿನಗೆ ತಿಳಿಯದೆ ಅಲ್ಲಿರುವುದು ನಿಜವಾದ ವಜ್ರಗಳೆನ್ನುವ ಉದ್ದೇಶದಿಂದಲೇ ಅವುಗಳನ್ನು ಕಳುವುಮಾಡಿದ್ದೀರ. ಅವು ನಿಮ್ಮ ಕೈಗೆ ಬಂದು ನಕಲಿ ವಜ್ರಗಳೆಂದು ತಿಳಿದ ನಂತರ ದೇವಾಲಯ ಕಮಿಟಿಗೆ ನೀನು ಪತ್ರ ಬರೆದಿದ್ದೀಯ. ಆ ಪತ್ರದಲ್ಲಿ ಗುಡಿಯೊಳಗಿನವು ನಿಜವಾದ ವಜ್ರಗಳು ಅಲ್ಲವೆಂದು ತಿಳಿಸಿರುವೆ. ಹಾಗೆ ಬರೆಯುವುದರಲ್ಲಿ ನಿನ್ನ ಉದ್ದೇಶ ಏನು?

**ಜಟಾಜೂಟ :–** ಹಾಗೆ ಬರೆಯುವುದರಿಂದ ಅಸಲಾದ ವಜ್ರಗಳ ಪ್ರಸ್ತಾವನೆ ಎಲ್ಲೋ ಒಂದು ಕಡೆ ತಿಳಿಯುತ್ತದೆಂದು ಅಂದುಕೊಂಡಿದ್ದೇನೆ. ಅವು ನಕಲಿ ವಜ್ರಗಳೆಂದು ತಿಳಿಸುವುದರಿಂದ ಪೋಲೀಸ್‌ನವರು ಅಸಲಾದ ವಜ್ರಗಳಿಗೋಸ್ಕರ ವಿಚಾರಿಸುತ್ತಾರೆ ಅಲ್ಲವೆ! ಆಗ ಅವುಗಳ ಸುಳಿವು ತಿಳಿಯುತ್ತದೆಂದು, ತಿಳಿದ ನಂತರ ಅವುಗಳನ್ನು ಹೇಗೆ ಕದಿಯಬೇಕೋ ಆಗ ಆಲೋಚಿಸೋಣ ಎಂದು ಅಂದುಕೊಂಡಿದ್ದೆನು.

(ಈ ವಿಧವಾಗಿ ಜಟಾಜೂಟ ಸ್ವಾಮಿ ಕಾನೂನು ಕೈಯ್ಯಲ್ಲಿ ತಾನು ದೋಷಿಯಾಗಿ ಒಪ್ಪಿಕೊಂಡಿದ್ದಾನೆ. ಆದರೆ ಅಲ್ಲಿಯವರೆಗು ಧನಂಜಯ ಒಂದು ಪರಿಶೋಧನಾ ವಿಭಾಗದ (ಸಿ.ಐ.ಡಿ) ಪೋಲೀಸ್ ಎಂದು ಜಟಾಜೂಟಸ್ವಾಮಿಗೆ ತಿಳಿಯದು. ಧನಂಜಯ ಬಹಳ ಬುದ್ಧಿವಂತಿಕೆಯಿಂದ ಕೆಲಸ ಮಾಡಿ, ಜಟಾ ಜೂಟಸ್ವಾಮಿಯನ್ನು ತಪ್ಪಿಸಿಕೊಳ್ಳುವ ಅವಕಾಶವಿಲ್ಲದಂತೆ ಮಾಡಿರುವುದಕ್ಕೆ ಯಸ್.ಪಿ ರವರು ಧನುಂಜಯನನ್ನು ಅಭಿನಂದಿಸಿ, ತಾಳೆಮರ ಮುನೆಪ್ಪ ಕ್ರೈಮ್ ಫೈಲನ್ನು ಧನಂಜಯನಿಗೆ ಕೊಟ್ಟು, ಆತನನ್ನು ಸಹ ಸಾಕ್ಷ್ಯಾಧಾರಗಳೊಂದಿಗೆ ಹಿಡಿದು

ಒಪ್ಪಿಸಬೇಕೆಂದು ಹೇಳಿದನು. ಜಠಾಜೂಟ ಸ್ವಾಮಿಯನ್ನು ಕೋರ್ಟಿಗೆ ಒಪ್ಪಿಸಿ ಆ ಕೇಸ್ ಬೇಗನೇ ಟ್ರೈಲ್‌ಗೆ ಬರುವಹಾಗೆ ಮಾಡಿದ್ದಾರೆ. ಕೊನೆಗೆ ಜಠಾಜೂಟಸ್ವಾಮಿಗೆ ಶಿಕ್ಷೆ ಬಿದ್ದಿತು. ಆತನು ಜೈಲಿಗೆ ಹೋಗುವುದರಿಂದ ಜಠಾಜೂಟಸ್ವಾಮಿ ಅಧ್ಯಾಯ ಅಲ್ಲಿಗೆ ಮುಗಿದಂತಾಯಿತು.)

***********************************

(ಜಠಾಜೂಟ ಸ್ವಾಮಿ ಸಿಕ್ಕಿ ಬಿದ್ದು ಜೈಲಿಗೆ ಹೋಗುವುದು ಪತ್ರಿಕೆಗಳು ಪ್ರಚಾರ ಮಾಡಿದಾಗ ಆ ವಾರ್ತೆ ಎಲ್ಲರಿಗೂ ತಿಳಿದುಹೋಯಿತು. ಹಾಗೆಯೇ ಮುನೆಪ್ಪನಿಗೂ, ಮುನೆಪ್ಪನ ಮನುಷ್ಯರಿಗೂ ವಿಷಯವೆಲ್ಲಾ ತಿಳಿದುಹೋಯಿತು. ಮುನೆಪ್ಪ ಅಸಲಾದ ವಜ್ರಗಳಿಗಾಗಿ ಪ್ರಯತ್ನ ಮಾಡೆಂದು ತನ್ನ ತಮ್ಮನಾದ ವೆಂಕೂಗೆ ಹೇಳಿದ್ದಾನೆ. ವೆಂಕು ತನಗೂ ಸಹ ಸ್ನೇಹಿತನಾದ ಹೀರೋನೊಂದಿಗೆ ಸೇರಿ ವಜ್ರಗಳ ಸುಳಿವಿಗಾಗಿ ತೀವ್ರವಾಗಿ ಪ್ರಯತ್ನಿಸಲು ಪ್ರಾರಂಭಿಸಿದರು. ತಮ್ಮ ಕೈಯಿಂದ ಹಾವು ಜಾರಿಹೋದಾಗಿನಿಂದ ಕೆಲವು ಸಂವತ್ಸರಗಳು ವಜ್ರಗಳ ಸುಳಿವು ತಿಳಿಯದೆ ಹೋಗುವುದು ಅವರು ಜೀರ್ಣಿಸಿಕೊಳ್ಳಲಾರದೆ ಹೋಗುತ್ತಿದ್ದಾರೆ. ಇನ್ನು ಯಾವುದೋ ಒಂದು ಪ್ರಯತ್ನ ಮಾಡಬೇಕೆಂದುಕೊಂಡಿದ್ದಾರೆ. ಅವರು ಹಾಗಿರುವಾಗ ಮೇಲಿನ ಅಧಿಕಾರಿಗಳಿಂದ ಪ್ರಶಂಸೆಗಳು ಪಡೆದ ಧನಂಜಯ, ಮುನೆಪ್ಪ ಗುಂಪನ್ನು ಹೇಗಾದರೂ ಹಿಡಿದುಕೊಳ್ಳಬೇಕೆಂದುಕೊಂಡಿದ್ದಾನೆ. ಅದಕ್ಕಾಗಿ ತಮ್ಮ ಡಿಪಾರ್ಟ್‌ಮೆಂಟ್‌ನಲ್ಲಿ ನಾಲ್ವರು ವ್ಯಕ್ತಿಗಳನ್ನು ತೆಗೆದುಕೊಂಡು ಐದು ಮಂದಿ ಒಂದು ಗುಂಪಾಗಿ ತಯಾರಾಗಿದ್ದಾರೆ. ಆ ಐದು ಮಂದಿ ಸದಸ್ಯರ ಗುಂಪಿನಲ್ಲಿ ಧನಂಜಯನು ಗುಂಪಿನ ನಾಯಕನಾಗಿ ಇರುವಂತೆ ಮಾತನಾಡಿಕೊಂಡಿದ್ದಾರೆ. ಈ ಸಲ ಧನುಂಜಯ, ಆ ನಾಲ್ವರು ಸದಸ್ಯರು ಕಳ್ಳರ ಗುಂಪಿನ ಅವತಾರ ಎತ್ತಿದ್ದಾರೆ. ಈ ಐದು ಮಂದಿ ಮೊದಲೇ ಏರ್ಪಾಟು ಮಾಡಿಕೊಂಡಂತೆ, ಒಂದು ಘಾಟ್ ರಸ್ತೆಯಲ್ಲಿ ಪೊಲೀಸರ ಕಾರನ್ನು ನಿಲ್ಲಿಸಿ ನಾಲ್ವರು ಪೊಲೀಸರನ್ನು, ಒಬ್ಬ ಯಸ್.ಐನನ್ನು ಹಗ್ಗದಿಂದ ಕಟ್ಟಿಹಾಕಿ ಅವರು ತರುತ್ತಿರುವ ಹತ್ತು ಲಕ್ಷಗಳ ಟ್ರಝರಿ ಹಣವನ್ನು ದೋಚಿಕೊಂಡು ಹೋಗಿದ್ದಾರೆ. ಆ ದರೋಡೆ ಹೇಗೆ ನಡೆದಿರುವುದೆಂದು

ವಿವರಿಸಿದರೇ, ಒಂದು ಘಾಟ್‌ರಸ್ತೆಯಲ್ಲಿ ಐದು ಮಂದಿ ಕಳ್ಳರ ಗುಂಪೊಂದು ತಮ್ಮ ಕಾರನ್ನು ರಸ್ತೆಗೆ ಅಡ್ಡವಾಗಿ ನಿಲ್ಲಿಸಿ, ಅದರಲ್ಲಿ ಮೂವರು ಇಬ್ಬರನ್ನು ಹೊಡೆಯುತ್ತಿದ್ದರು. ಅಷ್ಟರಲ್ಲಿ ಪೊಲೀಸ್‌ರವರು ಅಲ್ಲಿಗೆ ಹೋಗಿ ರಸ್ತೆಯಲ್ಲಿ ಕಾರು ನಿಲ್ಲಿಸಿರುವುದು, ಮೂವರು ಮನುಷ್ಯರು ಇಬ್ಬರನ್ನು ಹೊಡೆಯುತ್ತಿರುವುದನ್ನೂ ನೋಡಿ, ಕುಡಿದ ಅಮಲಿನಲ್ಲಿ ಹೊಡೆದಾಡುತ್ತಿದ್ದಾರೆಂದು ತಿಳಿದು ತಮ್ಮ ಹತ್ತಿರವಿರುವ ಲಾಠಿ ಕೋಲುಗಳನ್ನು ತೆಗೆದುಕೊಂಡು ಕಾರು ಇಳಿದುಹೋಗಿ, ಮೂವರನ್ನು ಹಿಡಿದುಕೊಂಡು ನಿಲ್ಲಿಸಿ ಏಕೆ ಅವರನ್ನು ಹೊಡೆಯುತ್ತಿದ್ದೀರೆಂದು ಕೇಳಿದ್ದಾರೆ.

ಆಗ ಅಲ್ಲಿ ಹೊಡೆದಾಡುತ್ತಿರುವ ಐದು ಮಂದಿ ಒಂದೇ ಸಲ ಅವರಹತ್ತಿರವಿರುವ ರಿವಾಲ್ವರ್ ತೆಗೆದು ಪೊಲೀಸರಿಗೆ ಗುರಿ ಇಟ್ಟು ಕದಲಬಾರದೆಂದು, ಕೈಗಳನ್ನು ಮೇಲಕ್ಕೆತ್ತಿರೆಂದು ತಾವು ಕಳ್ಳರೆಂದು ಹೇಳಿದ್ದಾರೆ. ಅಕಸ್ಮಿಕವಾಗಿ ನಡೆದ ಆ ಸಂಘಟನೆಗೆ ಬೆರಗಾಗಿ ಹೋದ ಪೊಲೀಸರು, ಏನು ಮಾಡಲಾಗದೆ ಕೈಗಳು ಎತ್ತಿ ನಿಂತಿದ್ದಾರೆ. ಕಳ್ಳರಲ್ಲಿ ಇಬ್ಬರು ಬಂದು ಅವರ ಹತ್ತಿರವಿರುವ ಹಗ್ಗದಿಂದ ಪೊಲೀಸರ ಕೈಗಳು ಕಟ್ಟಿಹಾಕಿದ್ದಾರೆ. ನಂತರ ಎಲ್ಲರು ಸೇರಿ ರಸ್ತೆಗೆ ದೂರವಾಗಿ ಪಕ್ಕಕ್ಕೆ ಪೊಲೀಸರನ್ನು ತೆಗೆದುಕೊಂಡುಹೋಗಿ ಅಲ್ಲಿ ಮರಕ್ಕೊಬ್ಬನನ್ನು ಕಟ್ಟಿಹಾಕಿ, ರಸ್ತೆ ಮೇಲೆ ಬಂದು ತಮ ಕಾರಲ್ಲಿ ಓಡಿಹೋಗಿದ್ದಾರೆ. ನಂತರ ಪೊಲೀಸ್ ಸ್ಟೇಷನ್‌ಗೆ ಫೋನ್ ಮಾಡಿ ನಿಮ್ಮ ಪೊಲೀಸರನ್ನು ಇಂತಹ ಕಡೆ ಕಟ್ಟಿ ಹಾಕಿದ್ದೇವೆಂದು, ಟ್ರಝರೀ ಹಣವನ್ನು ನಾವು ದೋಚಿಕೊಂಡಿದ್ದೇವೆಂದು ಹೇಳಿದ್ದಾರೆ. ಆ ದರೋಡೆಯಿಂದ ಪ್ರಜೆಗಳಲ್ಲಿ ಪೊಲೀಸರಿಗೆ ಮರ್ಯಾದೆ ಹೋದಂತಾಯಿತು. ಅವರನ್ನು ಹೇಗಾದರೂ ಹಿಡಿದುಕೊಳ್ಳುತ್ತೇವೆಂದು ಪೊಲೀಸರು ಪ್ರಕಟಿಸಿದ್ದಾರೆ. ಈ ವಿಷಯವೆಲ್ಲಾ ದಿನಪತ್ರಿಕೆಯಲ್ಲಿ ಗಮನಿಸಿದ ಮುನೆಪ್ಪ ಮತ್ತು ಆತನ ಗುಂಪಿನಲ್ಲಿನ ಎಲ್ಲರೂ ಆಶ್ಚರ್ಯಪಟ್ಟರು. ತಮಗಿಂತ ಮೀರಿದ ಕಳ್ಳರು ತಯಾರಾಗಿದ್ದಾರೆಂದು ಅಂದುಕೊಂಡಿದ್ದಾರೆ. ಪೊಲೀಸರನ್ನೇ ಕಟ್ಟಿಹಾಕಿ ಟ್ರಝರೀ ಹಣವನ್ನು ತೆಗೆದು ಕೊಂಡವರು ಬಹಳ ಧೈರ್ಯವಿರುವ ಕಳ್ಳರೆಂದು ಅಂದುಕೊಂಡಿದ್ದಾರೆ. ಸ್ವಲ್ಪ ಕಾಲಕ್ಕೆ ಆ ಹೊಸ ಕಳ್ಳರ ನಾಯಕ ಧನುಷ್ ಎಂದು, ಅವರು ಎಲ್ಲ ರಾಜ್ಯಗಳಲ್ಲಿ ದೊಡ್ಡ ದೊಡ್ಡ ದರೋಡೆಗಳು ಮಾಡಿದ್ದಾರೆಂದೂ, ಪ್ರಸ್ತುತ ಆಂಧ್ರರಾಜ್ಯದಲ್ಲಿ

ಇದ್ದಾರೆಂದೂ, ಅವರು ಬ್ಯಾಂಕುಗಳನ್ನು ದರೋಡೆ ಮಾಡಬೇಕೆನ್ನುವ ಉಪಾಯದಿಂದ ಇದ್ದಾರೆಂದೂ, ಆದ್ದರಿಂದ ಬ್ಯಾಂಕ್‌ಗಳೆಲ್ಲವೂ ಜಾಗ್ರತೆಯಾಗಿ ಇರಬೇಕೆಂದೂ, ಪೊಲೀಸರು ದಿನಪತ್ರಿಕೆಯಲ್ಲಿ ತಿಳಿಸಿದ್ದಾರೆ. ಹಾಗೆ ಬಂದಿರುವ ಮಾಹಿತಿಯನ್ನು ಮುನೆಪ್ಪ ಮತ್ತು ಆತನ ಸದಸ್ಯರು ಎಲ್ಲರೂ ನೋಡಿದ್ದಾರೆ. ಆ ಕಳ್ಳರ ನಾಯಕನಾದ ಧನುಷ್‌ನೊಂದಿಗೆ ಹೇಗಾದರೂ ಪರಿಚಯ ಮಾಡಿಕೊಳ್ಳಬೇಕೆಂದುಕೊಂಡಿದ್ದಾನೆ.

ಮಾರುವೇಷದಲ್ಲಿ ಕಳ್ಳ ಧನುಷ್‌ನಹಾಗೆ ನಟಿಸುತ್ತಿರುವ ಧನಂಜಯನು ಕೂಡ ಮುನೆಪ್ಪ ಮನುಷ್ಯರನ್ನು ಭೇಟಿಯಾಗಬೇಕೆಂದು ಇದ್ದಾನೆ. ಮುನೆಪ್ಪ ಮನುಷ್ಯರನ್ನು ಮೊದಲಿನಿಂದ ಅನುಮಾನಿಸುತ್ತಿರುವ ಇಂಟಲಿಜೆನ್ಸ್‌ನವರು ಒಂದು ದಿನ ಮುನೆಪ್ಪ ಗುಂಪಿನಲ್ಲಿನ ನೂಕಾ ಅನಾರೋಗ್ಯದಿಂದ ಒಂದು ಪ್ರೈವೇಟ್ ಆಸ್ಪತ್ರೆಯಲ್ಲಿ ಸೇರಿದಂತೆ ಧನುಂಜಯ್‌ಗೆ ತಿಳಿಸಿದರು. ಆಗ ಧನುಂಜಯನ ಗುಂಪಿನಲ್ಲಿನ ಸುರೇಷ್ ಎನ್ನುವವನು ಕೂಡ ಅದೇ ಆಸ್ಪತ್ರೆಯಲ್ಲಿ ಸೇರುವಂತೆ ಧನುಂಜಯ ಹೇಳಿ ಕಳುಹಿಸಿದ್ದಾನೆ. ಸುರೇಷ್ ಧನುಂಜಯ ಹೇಳಿದಂತೆ ಆಸ್ಪತ್ರೆಯಲ್ಲಿ ಸೇರಿದ್ದಾನೆ. ಮುನೆಪ್ಪ ಮನುಷ್ಯ ಇಂತಹವನೇ ಎಂದು ಧನುಂಜಯ ಮೊದಲೇ ತಿಳಿಸಿರುವುದರಿಂದ, ಸುರೇಷ್ ಆತನೊಂದಿಗೆ ಮಾತನಾಡುವುದಕ್ಕೆ ಅವಕಾಶ ಏರ್ಪಡಿಸಿಕೊಂಡಿದ್ದಾನೆ. ಸಂಜೆ ಮುನೆಪ್ಪ ಮನುಷ್ಯನೊಂದಿಗೆ ಸುರೇಷ್ ಹೀಗೆ ಮಾತನಾಡಿದ್ದಾನೆ.)

**ಸುರೇಷ್ :–** ನಿನಗೆ ಯಾವ ರೋಗ ಬ್ರದರ್?

**ನೂಕಾ :–** ನ್ಯೂಮೊನಿಯಾ ಎಂದು ಡಾಕ್ಟರ್ ಹೇಳಿದ್ದಾನೆ.

**ಸುರೇಷ್ :–** ನ್ಯೂಮೊನಿಯಾ ಎಂದರೆ ಶ್ವಾಸಕೋಶಗಳ ಜ್ವರ ಎನ್ನುತ್ತಾರಲ್ಲವೆ!

**ನೂಕಾ :–** ಹೌದು ಅದೇ.

**ಸುರೇಷ್ :–** ಎಷ್ಟು ದಿನ ಇರಬೇಕೆಂದಿದ್ದಾರೆ?

**ನೂಕಾ :–** ಒಂದು ವಾರದ ದಿನಗಳು ಇರಲು ಹೇಳಿದ್ದಾರೆ.

**ಸುರೇಷ್ :–** ನನಗೂ ಸಹ ತಿಂಗಳು ಕೆಳಗೆ ಇದೇ ಜ್ವರ ಬಂದಿದೆ. ಆಗ ಮೂರು ದಿನಗಳೇ ಆಸ್ಪತ್ರೆಯಲ್ಲಿ ಇದ್ದೇನೆ.

**ನೂಕಾ :–** ನ್ಯೂಮೊನಿಯಾ ರಾತ್ರಿಹೊತ್ತು ಚಳಿಯಲ್ಲಿ ಎಚ್ಚರದಿಂದಿದ್ದರೆ ಬರುತ್ತದಂತೆ. ನಿನಗೆ ಏಕೆ ಬಂದಿದೆ?

**ಸುರೇಷ್ :–** ಆ ಮಾತು ವಾಸ್ತವವೇ, ನಾನೂ ಸಹ ಆರು ದಿನಗಳ ಕೆಳಗೆ ಚಳಿಯಲ್ಲಿ ರಾತ್ರಿಯೆಲ್ಲಾ ಎದ್ದಿದ್ದೇನೆ. ಅದಕ್ಕೇ ನನಗೆ ಈಗ ಅದೇ ಜ್ವರ ಬಂದಿದೆ. ಈಗ ಚಳಿಗಾಲ ಅಲ್ಲವೆ! ಆದ್ದರಿಂದ ಬಹಳ ಜನರಿಗೆ ಈ ರೋಗವೇ ಬರುತ್ತದೆ. ಆದರೂ ಮನೆಯಲ್ಲಿ ಚಳಿ ತಾಕದಂತೆ ಇರುವವರಿಗೆ ಬರುವುದಿಲ್ಲವಲ್ಲವೆ!

**ನೂಕಾ :–** ಮನೆಯಲ್ಲಿರುವವರಿಗೆ ಬರುವುದಿಲ್ಲವೇನೋ! ಆದರೆ ನಾನು ಹೊರಗೆ ಇರುವುದರಿಂದ ಬಂದಿದೆ.

**ಸುರೇಷ್ :–** ಏನು ಮಾಡೋಣ, ಕೆಲವು ಸಮಯಗಳಲ್ಲಿ ತಪ್ಪದೆ ಹೊರಗೆ ಇರಬೇಕಾದ ಕೆಲಸ ಬೀಳುತ್ತದೆ. ನನಗೆ ಒಂದು ದಿನ ರಾತ್ರಿಹೊತ್ತು ಡ್ಯೂಟೀ ಮಾಡಬೇಕಾಗಿ ಬಂದಿದೆ. ಒಂದು ದಿನ ಚಳಿಯಲ್ಲಿ ಇರುವುದರಿಂದ ಈ ಜ್ವರ ಬಂದಿದೆ. ಆದ್ದರಿಂದ ರಾತ್ರಿಹೊತ್ತು ಮೂಗಿಗೆ ಬಟ್ಟೆಯನ್ನು ಕಟ್ಟಿಕೊಳ್ಳಬೇಕೆಂದು ಡಾಕ್ಟರ್ ಹೇಳಿದ್ದಾನೆ.

**ನೂಕಾ :–** ನೀನು ಯಾವ ಡ್ಯೂಟಿ ಮಾಡುತ್ತೀಯಣ್ಣಾ.

**ಸುರೇಷ್ :–** ಡ್ಯೂಟಿ ಎಂದರೇ ಸರ್ಕಾರಿ ಉದ್ಯೋಗ ಅಲ್ಲ. ಆದರೆ ಸ್ವಂತ ಡ್ಯೂಟಿ ಎಂದುಕೋ, ಬದುಕುವುದಕ್ಕೆ ಏನೋ ಒಂದು ಮಾಡಬೇಕಲ್ಲವೆ!

**ನೂಕಾ :–** ಇಷ್ಟೊಂದು ಪರಿಚಯವಾದ ನಂತರ ನನಗೆ ಹೇಳುವುದಕ್ಕೆ ಹಿಂದೆ ಮುಂದೆ ನೋಡುತ್ತಿದ್ದೀಯ. ಬದುಕುವುದಕ್ಕೆ ಯಾವ ಡ್ಯೂಟಿ ಮಾಡಿದರೆ ಏನು? ನಿನ್ನ ಡ್ಯೂಟಿ ನನಗೆ ಹೇಳಬಾರದಾ?

**ಸುರೇಷ್ :–** ನಿನಗೆ ಹೇಳುವುದಕ್ಕೆ ಏನಿದೆಯಣ್ಣಾ? ನನ್ನ ಡ್ಯೂಟಿಯನ್ನು ಹೇಳಬೇಕೆಂದರೆ ನನಗೇ ನಾಚಿಗೆಯಾಗುತ್ತಿದೆ. ನೀನು ಏನೂ ಅಂದುಕೊಳ್ಳುವುದಿಲ್ಲ ಎಂದರೆ ಹೇಳುತ್ತೇನೆ. ನಾನು ಸಣ್ಣ ಪುಟ್ಟ ಕಳ್ಳತನ ಮಾಡಿ ಬದುಕುತ್ತಿರುತ್ತೇನೆ.

**ನೂಕಾ :–** ನೀನು ನನ್ನ ಮುಂದೆ ನಾಚಿಗೆ ಪಡಬೇಕಾದ ಕೆಲಸವಿಲ್ಲ. ನಾನೂ ನಿನ್ನಂತಹ ಕಳ್ಳನೇ, ನಾನು ಏನೂ ನಾಚಿಗೆಪಡಲಿಲ್ಲವಲ್ಲವೆ! ನೀನು ಚಿಕ್ಕ ಕಳ್ಳನೇ ಆದರೆ ನಾನು ನಿನಗಿಂತ ದೊಡ್ಡ ಕಳ್ಳ. ಅದಕ್ಕೇನಿದೆ ಬದುಕುವುದಕ್ಕೆ ಯಾರ ಕೆಲಸ ಅವರದು.

**ಸುರೇಷ್ :–** ಆದರೆ ನನಗೆ ಒಂದು ಸಹಾಯ ಮಾಡಣ್ಣಾ, ಬದುಕಿದಷ್ಟು ದಿನ ನಿನ್ನ ಹೆಸರೆ ಹೇಳಿಕೊಳ್ಳುತ್ತೇನೆ.

**ನೂಕಾ :–** ಏನು ಸಹಾಯ ಮಾಡಬೇಕು, ಹೇಳು.

**ಸುರೇಷ್ :–** ನಾನು ನನ್ನ ಜೊತೆ ಇನ್ನೂ ನಾಲ್ವರು ನನಗೆ ತಿಳಿದವರಿದ್ದಾರೆ. ನಾವು ಈ ಚಿಕ್ಕ ಕಳ್ಳತನ ಎಷ್ಟು ಮಾಡಿದರೂ ಬದುಕಲಾರದಿದ್ದೇವೆ. ನಮಗೂ ಸಹ ಯಾವುದಾದರೂ ದೊಡ್ಡ ಕಳ್ಳತನ ಇದ್ದರೆ ಹೇಳು. ಅದು ಹೇಗೆ ಮಾಡಬೇಕೋ ಸಹ ಹೇಳಿದರೆ ಹೇಗಾದರೂ ಮಾಡುತ್ತೇವೆ. ದೊಡ್ಡ ಕಳ್ಳತನ ಹೇಗೆ ಮಾಡಬೇಕೋ ನಮಗೆ ತಿಳಿಯದು.

**ನೂಕಾ :–** ತಿಳಿಯದಿರುವಾಗ ಹೇಳಿದರೆ ಮಾಡುವುದು ಕಷ್ಟವಾಗುತ್ತದೆ. ದೊಡ್ಡ ಕಳ್ಳತನಗಳಲ್ಲಿ ಆಗಿಂದಾಗ್ಗೆ ನಿರ್ಣಯ ತೆಗೆದುಕೊಳ್ಳಬೇಕಾಗುತ್ತದೆ. ಹೇಳಿದರೆ ನೀವು ಮಾಡಲಾರರು, ಆದ್ದರಿಂದ ನೀವು ನಾವು ಹೋಗುವಾಗ ನಮ್ಮ ಹಿಂದೆ ಬಂದು, ನಾವು ಮಾಡುವಾಗ ಹೇಗೆ ಮಾಡುತ್ತಿದ್ದೇವೋ ನೋಡಿ ಕಳಿತುಕೊಳ್ಳಬಹುದು.

**ಸುರೇಷ್ :–** ಈ ದಿನ ನಿನ್ನೊಂದಿಗೆ ಭೇಟಿಯಾಗಿ ಮಾತನಾಡಿರುವುದಕ್ಕೆ ನನಗೆ ಬಹಳ ಮೇಲಾಗಿದೆ. ಬದುಕುವುದಕ್ಕೆ ಹೊಸ ದಾರಿ ಸಿಕ್ಕಿಂತಾಯಿತು. ನಿನ್ನ ಹಿಂದೆ ನಮ್ಮನ್ನು ಬಾ ಎಂದು ಯಾವಾಗ ಕರೆದರೆ ಆಗ ಬರುತ್ತೇನೆ.

(ಈ ವಿಧವಾಗಿ ನೂಕಾ, ಸುರೇಷ್ ಇಬ್ಬರೂ ಪರಿಚಯವಾಗಿದ್ದಾರೆ. ಸುರೇಷ್ ಅಡ್ರಸ್ ನೂಕಾಗೆ ಕೊಟ್ಟು ಕಳುಹಿಸಿದ್ದಾನೆ. ನೂಕಾ ತನ್ನ ಮನಸ್ಸಿನಲ್ಲಿ ಇಂತಹ ಚಿಲ್ಲರೆ ಕಳ್ಳರು ತಮ್ಮ ಕೈಯ್ಯಲ್ಲಿ ಇರುವುದು ಒಳ್ಳೆಯದೆಂದುಕೊಂಡಿದ್ದಾರೆ. ಸ್ವಲ್ಪ ಕಾಲ ಕಳೆದ ನಂತರ ಸುರೇಷ್‌ನ್ನು ನೂಕಾ ಕರೆದಿದ್ದಾನೆ.)

**********************************

(ಪ್ರಬೋಧಾಶ್ರಮದಲ್ಲಿ ರಾಘವ, ರಾಘವನ ಹೆಂಡತಿಯರು ದುಂದುಭಿ, ರಾಧೇಶ್ವರಿ, ರಾಜಯೋಗಾನಂದ ಸ್ವಾಮಿಯವರ ಹತ್ತಿರ ದೈವ ಜ್ಞಾನವನ್ನು ಸಂಪೂರ್ಣವಾಗಿ ತಿಳಿದುಕೊಳ್ಳುತ್ತಿದ್ದಾರೆ. ಭೂಮಿಮೇಲೆ ಎಲ್ಲಿ ನಿಜವಾದ ದೈವಜ್ಞಾನವಿರುತ್ತದೊ ಅಲ್ಲಿಗೆ ಖಗೋಳದಲ್ಲಿನ ಕೆಲವು ಗ್ರಹಗಳು ಬಂದುಹೋಗುತ್ತಿರುತ್ತವೆ. ದೈವಜ್ಞಾನ ಸಂಪೂರ್ಣವಾಗಿ ಇರುವ ಮನುಷ್ಯರ ತಲೆಗಳಿಂದ ಒಂದು ಪ್ರತ್ಯೇಕವಾದ ಕಿರಣಗಳು ಬೆಳಕಿನ ರೂಪದಿಂದ ಹೊರಗೆ ಬರುತ್ತಿರುತ್ತವೆ. ಆ ಬೆಳಕು ಹೊರಬರುವ ಕಡೆ ಸಂಪೂರ್ಣ ಜ್ಞಾನವಿದೆಯೆಂದು ಗ್ರಹಿಸಿದ ಗ್ರಹಗಳು ದೈವಜ್ಞಾನವನ್ನು ತಾವೂ ಸಹ ತಿಳಿದುಕೊಳ್ಳುವುದಕ್ಕೆ ಬಂದು ಹೋಗುತ್ತಿರುವರು. ಆ ವಿಧವಾಗಿ ರಾಜಯೋಗಾನಂದಸ್ವಾಮಿ ಆಶ್ರಮಕ್ಕೆ ಎಷ್ಟೋ ಗ್ರಹಗಳು ಬಂದು ಸ್ವಾಮಿಯನ್ನು ದರ್ಶಿಸಿಕೊಂಡು ಹೋಗುತ್ತಿರುವವು. ಒಂದು ದಿನ ರಾಘವ ಆಶ್ರಮದಲ್ಲಿ ಒಂದು ಕಡೆ ಇರುವಾಗ, ಅಲ್ಲಿ ಇದ್ದಕ್ಕಿದ್ದಂತೆ ಒಳ್ಳೆ ಸುವಾಸನೆ ಬರಲಾರಂಭಿಸಿತು. ಆ ಸುವಾಸನೆಯನ್ನು ರಾಘವ ಎಂದೂ ನೋಡಿರಲಿಲ್ಲ. ಅದನ್ನು ಆಸ್ವಾದಿಸಿದಂತೆಲ್ಲಾ ಇನ್ನೂ ಆಸ್ವಾದಿಸಬೇಕೆನಿಸುತ್ತಿತ್ತು. ಸ್ವಲ್ಪ ಸಮಯದ ನಂತರ ರಾಘವ ಹೊರಗೆ ಕೆಲಸದ ಮೇಲೆ ಹೋಗಿ ಹತ್ತು ನಿಮಿಷಗಳ ನಂತರ ಪುನಃ ಮೊದಲಿರುವ ಜಾಗದೊಳಗೇ ಬಂದನು. ಆಗಲೂ ಸಹ ಅಲ್ಲಿ ಸುವಾಸನೆ ಬೀರುತ್ತಲೇ ಇದೆ. ಆ ವಿಧವಾಗಿ ಸುವಾಸನೆ ಬರುವುದು ರಾಘವನಿಗೆ ಏನೂ ಅರ್ಥವಾಗಲಿಲ್ಲ. ಅದನ್ನು ಕುರಿತು ರಾಜಯೋಗಾನಂದ ಸ್ವಾಮಿಯನ್ನು ಕೇಳಬೇಕೆಂದು ಅಂದುಕೊಂಡಿದ್ದಾನೆ.

ತಿಂಗಳ ನಂತರ ಒಂದು ದಿನ ಅಮಾವಾಸ್ಯೆ ರಾತ್ರಿ ಸುಮಾರು ಒಂದು ಗಂಟೆ ಸಮಯದಲ್ಲಿ ರಾಘವ ನಿದ್ರೆಯಿಂದ ಎಚ್ಚರಗೊಂಡಿದ್ದಾನೆ. ಕಣ್ಣು ತೆರೆದು ನೋಡಿದ್ದಾನೆ. ಕತ್ತಲಲ್ಲಿ ಬಿಳಿ ವಸ್ತು ಕಾಣಿಸಿತು. ಅಂತಹ ದೃಶ್ಯವನ್ನು ರಾಘವ ಎಂದೂ ನೋಡಿರಲಿಲ್ಲ. ಇದೇನೆಂದು ಜಾಗ್ರತೆಯಿಂದ ನೋಡಿದನು ಭೂಮಿಗೆ ಎರಡು ಅಡಿಗಳ ಎತ್ತರದಲ್ಲಿ ಅದೇ ದೃಶ್ಯ ಕಾಣಿಸಿತು. ಚಿಕ್ಕ ನಿಂಬೆಹಣ್ಣಿನಂತೆ ವೃತ್ತಾಕಾರದ ಬಿಳಿ ಕಾಂತಿಯಿಂದ ಕೂಡಿಕೊಂಡಿರುವ ಆಕಾರ ಎರಡನೆ ಸಲ ರಾಘವನು ನೋಡಿದ ಅರ್ಧನಿಮಿಷಕ್ಕೇ ವೇಗವಾಗಿ ಕೆಳಗೆ ಬಿದ್ದಂತಾಗಿ ಕಾಣಿಸದಂತೆ

ಹೋಗಿದೆ. ಒಂದು ಸಲ ಸುವಾಸನೆಯನ್ನು ನೋಡಿದ ರಾಘವ, ನಂತರ ತಿಂಗಳ ದಿನಗಳಿಗೇ ಬಿಳಿ ಬೆಳಕನ್ನು ಹೊಂದಿರುವ ಆಕಾರವನ್ನು ನೋಡಿರುವುದು ನಡೆದಿದೆ. ಮೂಗಿಗೆ ತಿಳಿದ ಸುವಾಸನೆ, ಕಣ್ಣಿಗೆ ಕಾಣಿಸಿದ ಪ್ರಕಾಶವನ್ನು ಕುರಿತು ರಾಜಯೋಗಾನಂದ ಸ್ವಾಮಿಯನ್ನು ಒಂದು ದಿನ ರಾಘವ ಕೇಳಿದ್ದಾನೆ. ರಾಘವ ಹೇಳಿದ್ದನ್ನೆಲ್ಲಾ ಕೇಳಿ ರಾಜಯೋಗಾನಂದಸ್ವಾಮಿ ರಾಘವನೊಂದಿಗೆ ಈ ವಿಧವಾಗಿ ಹೇಳಿದನು.)

**ರಾಜಯೋಗಾನಂದ :–** ಭೂಮಿ ಮೇಲೆ ಮನುಷ್ಯ ಎಷ್ಟೋ ವಿಜ್ಞಾನವನ್ನು ಹೊಂದಿದರೂ, ಇನ್ನೂ ಮನುಷ್ಯನಿಗೆ ತಿಳಿಯದಂತಿರುವವು ಬಹಳ ಇವೆ. ಇಲ್ಲಿಯವರೆಗು ತಿಳಿಯದಿರುವುದು ಹೊಸದಾಗಿ ತಿಳಿದಾಗ ಅದು ಒಂದು ವಿಚಿತ್ರವಾಗಿ ಇರುತ್ತದೆ. ಮನುಷ್ಯನಿಗೆ ಇಲ್ಲಿಯವರೆಗು ತಿಳಿಯದವುಗಳಲ್ಲಿ ನೀನು ನೋಡಿರುವವೂ ಸಹ ಇವೆ. ಅವುಗಳನ್ನು ಕುರಿತು ಮನುಷ್ಯ ವಿಚಿತ್ರವಾಗಿ ಹೇಳಿಕೊಳ್ಳುವುದೇ ಹೊರತು, ಇದು ಇಂತಹದ್ದೆಂದು ಹೇಳಲಾರದ ಸ್ಥಿತಿಯಲ್ಲಿ ಇದ್ದಾನೆ. ನೀನು ಕೇಳಿದ್ದೀಯಾ ಆದ್ದರಿಂದ, ನಿನಗೆ ಹೇಳಬೇಕಾದ ಜವಾಬ್ದಾರಿ ನನಗೆ ಇದೆ. ಆದ್ದರಿಂದ ಹೇಳುತ್ತಿದ್ದೇನೆ. ಜಾಗ್ರತೆಯಿಂದ ಕೇಳು. ನಾವು ನಿವಾಸಿಸುತ್ತಿರುವ ಭೂಮಿ ಮೇಲೆಯೇ ಅಲ್ಲದೆ ಖಗೋಳದಲ್ಲಿ ಸಹ ಕೆಲವು ಕೋಟಿ ಗ್ರಹಗಳಿವೆ. ಅವು ಎಲ್ಲವೂ ಜೀವ ಹೊಂದಿರುವವೇ. ಅವುಗಳಲ್ಲಿ ಚಿಕ್ಕವು, ದೊಡ್ಡವು, ಸಾಮಾನ್ಯವಾದವು, ಅಸಾಮಾನ್ಯವಾದವು, ಶ್ರೇಷ್ಠವಾದವು, ಮಹಾ ದೊಡ್ಡವು ಹೀಗೆ ಎಷ್ಟೋ ವಿಧಗಳು ಇವೆ. ಅದರಲ್ಲಿ ಕೆಲವು ಗ್ರಹಗಳಿಗೆ ದೈವಜ್ಞಾನವೆಂದರೇ ಅಮಿತವಾದ ಇಷ್ಟ. ದೈವ ಜ್ಞಾನದ ಮೇಲೆ ಇಷ್ಟವಿರುವ ಗ್ರಹಗಳು ಭೂಮಿ ಮೇಲೆ ಉತ್ತಮವಾದ ಜ್ಞಾನ ಎಲ್ಲಿದೆಯೋ ಅಲ್ಲಿಗೆ ಬಂದು ಹೋಗುತ್ತಿರುವರು. ಹಾಗೆ ಬರುವುದರಿಂದ ಅವರು ಸಹ ದೊಡ್ಡ ಜ್ಞಾನವನ್ನು ತಿಳಿದುಕೊಳ್ಳುತ್ತಿದ್ದಾರೆ. ತಿಳಿದುಕೊಳ್ಳುವುದೇ ಅಲ್ಲದೇ, ಜ್ಞಾನದ ಪ್ರಕಾರ ಆಚರಿಸುತ್ತಿದ್ದಾರೆ.

ಈಗ ಮುಖ್ಯವಾಗಿ ಹೇಳುವುದೇನೆಂದರೇ! ಪ್ರಸ್ತುತ ಕಾಲದಲ್ಲಿ ಭೂಮಿ ಮೇಲೆ ನಮ್ಮ ಆಶ್ರಮದಲ್ಲಿ ಹೊರತುಪಡಿಸಿ ಎಲ್ಲೂ ನಿಜವಾದ ದೈವಜ್ಞಾನವಿಲ್ಲ. ಈ ವಿಷಯ ತಿಳಿದ ಕೆಲವು ಗ್ರಹಗಳು ಎಷ್ಟೋ ಲೆಕ್ಕವಿಲ್ಲದಷ್ಟು ಇಲ್ಲಿಗೆ ಬಂದು

ಹೋಗುತ್ತಿವೆ. ಅವುಗಳಲ್ಲಿ ಎಷ್ಟೋ ವಿಧಗಳು ಇವೆಯೆಂದು ಹೇಳಿದ್ದೇನಲ್ಲವೆ! ಒಂದು ಪ್ರತ್ಯೇಕವಾದ ಲಕ್ಷಣಗಳಿರುವ ಗ್ರಹ ಇಲ್ಲಿಗೆ ಬಂದಾಗ, ಅದನ್ನು ತಾಕಿದ ಗಾಳಿಗೆ ಸುವಾಸನೆ ಏರ್ಪಡುತ್ತಿದೆ. ಆ ಗಾಳಿಯನ್ನು ನೀನು ಹೀರಿ ಆಸ್ವಾದಿಸಿ ಸುವಾಸನೆಯನ್ನು ಗ್ರಹಿಸಿದ್ದೀಯ. ಸುವಾಸನೆ ನಿನಗೆ ತಿಳಿದರೂ, ಅಲ್ಲೇ ಇರುವ ಗ್ರಹವೊಂದರ ಇರುವಿಕೆ ನಿನಗೆ ತಿಳಿಯಲಿಲ್ಲ. ಹಾಗೆಯೇ ನಿನಗೆ ಕಾಣಿಸಿದ ಬೆಳಕು ಸಹ ಅಂತಹದ್ದೇ. ಆ ಬೆಳಕು ಬಹುಶಃ ನಾಗಮಣಿದಾಗಿ ಇರುತ್ತದೆ. ನಾಗಮಣಿ ಇರುವ ನಾಗರಹಾವಿನ ಗ್ರಹ ಬಂದಾಗ ಮಣಿಯನ್ನು ನಾವು ನೋಡಬಹುದು. ಆದರೆ ಅಂತಹ ಗ್ರಹಗಳು ಭೂಮಿಮೇಲೆಗೆ ಅಪರೂಪವಾಗಿ ಬರುತ್ತವೆ. ಮಣಿ ಇರುವ ಹಾವಿನ ಗ್ರಹ ಭೂಮಿಮೇಲೆ ಯಾರಿಗೂ ಕಾಣಿಸುವುದಿಲ್ಲ. ಕೆಲವರು ದೈವಶಕ್ತಿ ಇರುವವರು ಮಾತ್ರ ಅವುಗಳನ್ನು ನೋಡಬಲ್ಲರು. ಮಣಿ ಗ್ರಹಗಳು ತಮ್ಮನ್ನು ಯಾರಾದರೂ ನೋಡುತ್ತಿದ್ದಾರೆಂದು ತಿಳಿದ ಕೂಡಲೇ ಕಾಣಿಸದಂತೆ ಹೋಗುವವು. ಅಂತಹ ಸಂಘಟನೆಯೇ ನಿನಗೂ ನಡೆದಿದೆಯೆಂದು ತಿಳಿಯುತ್ತಿದೆ. ಇದನ್ನನುಸರಿಸಿ ನಿನ್ನಲ್ಲಿ ಸ್ವಲ್ಪ ದೈವಶಕ್ತಿ ಒಳಗೊಂಡಿದೆಯೆಂದು ಅರ್ಥವಾಗುತ್ತಿದೆ.

**ರಾಘವ :–** ಸ್ವಾಮೀ! ನಮ್ಮ ಆಶ್ರಮಕ್ಕೆ ನೀವು ಹೇಳಿದಂತೆ ಗ್ರಹಗಳು ಇತ್ತೀಚಿಗೆ ಬರುತ್ತಿವೆಯಾ? ಇಲ್ಲವೇ ಮೊದಲಿನಿಂದಲೂ ಬರುತ್ತಿವೆಯಾ?

**ರಾಜಯೋಗಾನಂದ :–** ನನಗೆ ತಿಳಿದು ಕಳೆದ ಮುವ್ವತ್ತು ವರ್ಷಗಳಿಂದಲೂ ಬರುತ್ತಿವೆ. ಖಗೋಳದಲ್ಲಿರುವ ಗ್ರಹಶಕ್ತಿಗಳೇ ಅಲ್ಲದೆ, ಕಾಣಿಸದ ಎಷ್ಟೋ ಮಹರ್ಷಿ ಗಳೂ, ದೇವತೆಗಳೂ ಕೂಡಾ ಬಂದು ಹೋಗುತ್ತಿದ್ದಾರೆ. ಅವರೆಲ್ಲರೂ ಇಲ್ಲಿರುವ ಜ್ಞಾನದ ಮೇಲೆ ಆಸಕ್ತಿಯಿಂದಲೇ ಬಂದಿದ್ದಾರೆ.

**ರಾಘವ :–** ನಾವು ನಿಮ್ಮ ಹತ್ತಿರ ಬಹಳ ಕಾಲದಿಂದ ಇದ್ದೇವಲ್ಲವೇ! ನಮಗೆ ಈ ವಿಷಯ ಸ್ವಲ್ಪವಾದರೂ ತಿಳಿಯದು. ಇಲ್ಲಿಗೆ ಎಷ್ಟೋ ಕಾಣಿಸದವರು ಬಂದು ಹೋಗುತ್ತಿದ್ದರೂ, ಅವರು ಬಂದಂತಾಗಲಿ, ಹೋದಂತಾಗಲಿ ಏನೂ ತಿಳಿಯದು. ನೀವು ಹೇಳಿದರೇ ಅರ್ಥವಾಗಿದೆ. ಕಾಣಿಸದವರು ಎಷ್ಟೋ ಜನ ಬಂದು

ಹೋಗುತ್ತಿರುವ ವಿಷಯ ನಮಗೇಕೆ ತಿಳಿಯುತ್ತಿಲ್ಲ. ನಮಗೆ ತಿಳಿಯುವುದಕ್ಕೆ ನಾವು ಏನು ಮಾಡಬೇಕು?

**ರಾಜಯೋಗಾನಂದ :–** ನಿನಗೇ ಅಲ್ಲ ನನಗೂ ಸಹ ಕಾಣಿಸಲಿಲ್ಲ. ಅವರು ಯಾರಿಗೂ ಕಾಣಿಸುವುದಿಲ್ಲ. ನಿನಗೆ ಬೆಳಕು ಕಾಣಿಸಿದಂತೆ, ಸುವಾಸನೆ ಬಂದಂತೆ ತಿಳಿದಿದೆಯಲ್ಲವೆ! ಹಾಗೇ ನನ್ನ ಶರೀರವನ್ನು ಮುಟ್ಟಿಕೊಂಡಂತೆ ನನಗೆ ಆಗಾಗ ಸ್ಪರ್ಶದಿಂದ ತಿಳಿಯುತ್ತಿರುತ್ತದೆ. ಆದರೆ ಯಾರು ಮುಟ್ಟಿಕೊಂಡಿರುವುದೂ ತಿಳಿದಿಲ್ಲ. ಬೇರೆ ಶರೀರದೊಳಗೆ ಪ್ರವೇಶಿಸಿ ಗ್ರಹಗಳು ಹೇಳಿದಾಗ ಯಾರ್‍ಯಾರು ಬರುತ್ತಿರುವುದು ತಿಳಿಯಿತು. ಇತರ ಗ್ರಹಗಳು ಬೇರೆ ಶರೀರದಿಂದ ಮಾತನಾಡಿ ತಿಳಿಸಿದಾಗ ತಿಳಿದ ವಿಷಯವನ್ನೇ ನಾನು ಹೇಳಿದ್ದೇನೆ. ಆದರೆ ನಾನು ನೋಡಿ ಹೇಳಿರುವುದಲ್ಲ. ನನ್ನ ಪಾದಗಳಿಗು, ಕಾಲಿಗೂ ತಾಕಿದ ಸ್ಪರ್ಶದಿಂದ ಯಾರೋ ನನ್ನ ಹತ್ತಿರಕ್ಕೆ ಬಂದಿದ್ದಾರೆಂದು ಮಾತ್ರ ತಿಳಿಯುತ್ತದೆ. ಹಾಗೇ ನಾನು ಜ್ಞಾನವನ್ನು ಹೇಳುವಾಗ ನನ್ನ ಜ್ಞಾನವನ್ನು ಕೇಳುವುದಕ್ಕೆ ಕಾಣಿಸದವರು ಕೆಲವು ನೂರಾರು ಜನ ಬಂದು ಕೇಳಿಹೋಗುತ್ತಿರುವಂತೆಯೂ ಸಹ ತಿಳಿದಿದೆ. ಇದೆಲ್ಲಾ ಇಲ್ಲಿ ತಿಳಿಯುವ ಜ್ಞಾನದಿಂದ ನಡೆಯುತ್ತಿದೆಯೇ ಹೊರತು ಬೇರೆಯಲ್ಲ. ಆದ್ದರಿಂದ ನೀವು ಸಹ ಸಂಪೂರ್ಣ ಜ್ಞಾನಿಗಳು ಆಗಬೇಕೆಂದು ತಿಳಿಸುತ್ತಿದ್ದೇನೆ. ಹಾಗೆ ಸಂಪೂರ್ಣ ಜ್ಞಾನ ನಮ್ಮ ಹತ್ತಿರ ಇರುವಾಗ ಜ್ಞಾನವೊಂದರ ಬೆಲೆ ತಿಳಿದವರು ಯಾರಾದರೂ ನಮ್ಮ ಹತ್ತಿರಕ್ಕೆ ತಪ್ಪದಂತೆ ಬರುತ್ತಾರೆ.

(ಈ ವಿಷಯವೆಲ್ಲವನ್ನೂ ಸ್ವಾಮಿಯಿಂದ ತಿಳಿದುಕೊಂಡ ರಾಘವ ಅಂದಿನಿಂದ ಜ್ಞಾನದ ಮೇಲೆ ಹೆಚ್ಚಿನ ಆಸಕ್ತಿಯಿಂದಿದ್ದು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದನು.)

*********************************

(ನೂಕಾ ಬರುವುದಕ್ಕೆ ಹೇಳಿದ ಕೂಡಲೇ ಸುರೇಷ್, ಧನುಷ್‌ಗೆ ಹೇಳಿ ಹೊರಟು ಬಂದಿದ್ದಾನೆ. ತಾನು ಕರೆದಕೂಡಲೇ ಬಂದಿರುವ ಸುರೇಷ್‌ನನ್ನು ನೋಡಿ ನೂಕಾ ಹೀಗೆಂದನು.)

**ನೂಕಾ :–** ಏನು ಸುರೇಷ್ ಹೇಗಿದ್ದೀಯಾ?

**ಸುರೇಷ್ :–** ಚೆನ್ನಾಗಿದ್ದೀನಣ್ಣಾ, ಏನಣ್ಣಾ ಕರೆದಿದ್ದೀಯ, ಏನಾದರೂ ಪ್ರೋಗ್ರಾಮ್ ಇದೆಯಾ?

**ನೂಕಾ :–** ಮೊದಲು ನಿಮ್ಮವರನ್ನೆಲ್ಲಾ ಕರೆದುಕೊಂಡು ಬಂದು ತೋರಿಸಿ, ನನಗೆ ಪರಿಚಯ ಮಾಡು. ನನ್ನನ್ನು ಕುರಿತು ಹೇಳಿದ್ದೀಯಾ?

**ಸುರೇಷ್ :–** ಹೇಳಿದ್ದೇನೆ. ಮೊದಲು ನಮ್ಮ ಪರಿಚಯ ಹೇಗೆ ಆಗಿರುವುದು ಹೇಳಿದ್ದೇನೆ. ಅದಕ್ಕೆ ನಮ್ಮವರು ಚೆನ್ನಾಗಿ ನಗಾಡಿದರು. ನಾನು ಚಿಕ್ಕ ಕಳ್ಳತನಗಳನ್ನು ಮಾಡುತ್ತಿರುತ್ತೇನೆಂದು ಹೇಳಿದ್ದೇನಲ್ಲವೆ! ಅದಕ್ಕೆ ನಮ್ಮ ದೊಡ್ಡಣ್ಣ ಧನುಷ್ ನನ್ನನ್ನು ಚೆನ್ನಾಗಿ ಮೆಚ್ಚಿಕೊಂಡಿದ್ದಾನೆ. ಧನುಷ್ ಅಣ್ಣನೇ ನಮಗೆ ಹಿರಿಯನಾಗಿ ಇರುತ್ತಾನೆ. ನಾವು ಎಷ್ಟು ದೊಡ್ಡವರಾದರೂ ಇನ್ನೊಬ್ಬರ ಮುಂದೆ ಚಿಕ್ಕವರಾಗಿ ಇರಬೇಕೆನ್ನುವುದು ಅಣ್ಣ ಧನುಷ್ ನೀತಿ.

**ನೂಕಾ :–** ಧನುಷ್ ಎಂದರೆ ನಿಮ್ಮೆಲ್ಲರಿಗೂ ನಾಯಕನಾ? ನಿಮ್ಮವರನ್ನೆಲ್ಲಾ ಒಂದು ಸಲ ಕರೆದುಕೊಂಡು ಬಂದರೆ, ನಮ್ಮ ನಾಯಕನಾದ ಮುನೆಪ್ಪನಿಗೆ ಪರಿಚಯ ಮಾಡುತ್ತೇನೆ. ನಿಮ್ಮ ವಿಷಯ ಮುನೆಪ್ಪನಿಗೆ ಹೇಳಿದ್ದೇನೆ. ಒಂದು ಸಲ ಬಂದು ಹೋಗಲು ಹೇಳಿದ್ದಾನೆ.

**ಸುರೇಷ್ :–** ತಪ್ಪದೇ ಬರುತ್ತೇವೆ. ಯಾವಾಗ ಬರಬೇಕು, ಎಲ್ಲಿಗೆ ಬರಬೇಕು?

**ನೂಕಾ :–** ನಿಮಗೆ ಬಿಡುವಾದರೆ ನಾಳೆನೇ ಬನ್ನಿ. ನೀವು ಎಲ್ಲರೂ ನಾಳೆ ಇದೇ ಸಮಯಕ್ಕೆ, ಇದೇ ಜಾಗಕ್ಕೆ ಬಂದರೆ ನಾನು ನಮ್ಮ ನಾಯಕನಾದ ಮುನೆಪ್ಪನ ಹತ್ತಿರಕ್ಕೆ ಕರೆದುಕೊಂಡು ಹೋಗುತ್ತೇನೆ.

**ಸುರೇಷ್ :–** ಸರಿ ನಾಳೆ ಈ ಸಮಯಕ್ಕೆ ಇಲ್ಲಿಗೆ ಬರುತ್ತೇವೆ. ಆದರೆ ನಾನು ಈಗಲೇ ಹೊರಟು ಹೋಗಿ, ಎಲ್ಲರಿಗೂ ವಿಷಯ ತಿಳಿಸಿ ಕರೆದುಕೊಂಡು ಬರುತ್ತೇನೆ.

(ಆ ವಿಧವಾಗಿ ಮಾತನಾಡಿದ ಸುರೇಷ್ ಕೂಡಲೇ ಅಲ್ಲಿಂದ ಹೊರಟು ಹೋಗಿದ್ದಾನೆ. ಧನುಷ್‌ಗೆ ಈ ವಿಷಯವೆಲ್ಲಾ ಹೇಳಿದ್ದಾನೆ. ಆ ಸಮಯಕ್ಕೋಸ್ಕರವೇ ಕಾದುಕೊಂಡಿದ್ದ ಧನುಂಜಯ್ (ಧನುಷ್) ತನ್ನ ಮನುಷ್ಯರನ್ನು ಕರೆದುಕೊಂಡು ಸುರೇಷ್ ಜೊತೆ ಎರಡನೆ ದಿನ ನೂಕಾ ಹೇಳಿರುವ ಜಾಗಕ್ಕೆ ಬಂದಿದ್ದಾರೆ. ಆ ಸಮಯಕ್ಕೆ ನೂಕಾ ಅಲ್ಲಿ ಸುರೇಷ್‌ಗೋಸ್ಕರ ಕಾದುಕೊಂಡಿದ್ದಾನೆ. ಸುರೇಷ್ ಬಂದಕೂಡಲೇ ತನ್ನವರನ್ನೆಲ್ಲಾ ನೂಕಾಗೆ ಪರಿಚಯ ಮಾಡಿದ್ದಾನೆ. ಎಲ್ಲರೂ ಸೇರಿ ಹೊರಟು ಹೋದರು. ಸ್ವಲ್ಪ ದೂರ ಬಾಡಿಗೆ ಕಾರಿನಲ್ಲಿ ಪ್ರಯಾಣ ಮಾಡಿದ ನಂತರ ಒಂದು ಊರಿನಲ್ಲಿ ಇಳಿದು ಅಲ್ಲಿಂದ ಚಿಕ್ಕ ಪ್ಯಾಸಿಂಜರ್ ವ್ಯಾನ್‌ನಲ್ಲಿ ಪ್ರಯಾಣಿಸಿದ್ದಾರೆ. ಅದು ಅಡವಿಯಲ್ಲಿ ಹೋಗುತ್ತಿರುವಾಗ ಒಂದು ರೈಲ್ವೇ ಗೇಟು ಹತ್ತಿರ ಅವರೆಲ್ಲಾ ಇಳಿದರು. ಅಲ್ಲಿ ಯಾವ ಸ್ಟೇಜಿಯಾಗಲೀ, ಯಾವ ಊರಿಗೂ ಹೋಗುವ ದಾರಿಯಾಗಲೀ ಇಲ್ಲ. ಅಡವಿಯೊಳಗೆ ಬಿದುರುಕಟ್ಟಿಗೆಗಳಿಗಾಗಿ ಹೋಗುವವರು ಅಲ್ಲಿ ಇಳಿದು ಅಡವಿಯೊಳಗೆ ಹೋಗುವುದು ರೂಢಿಯಲ್ಲಿದೆ. ಇವರು ಅಲ್ಲಿ ಇಳಿಯುವುದರಿಂದ ಅಲ್ಲಿರುವ ಗೇಟ್‌ಮ್ಯಾನ್ ಕೂಡಾ ಇವರೆಲ್ಲರೂ ಕಟ್ಟಿಗೆಗಳಿಗಾಗಿ ಅಡವಿಯೊಳಗೆ ಹೋಗುವವರೆಂದುಕೊಂಡಿದ್ದಾನೆ. ಅಲ್ಲಿಂದ ಅಡವಿಯೊಳಗೆ ನುಗ್ಗಿದವರು ಕಾಲ್ನಡಿಗೆಯಿಂದ ಎರಡು ಗಂಟೆಗಳು ಪ್ರಯಾಣಿಸಿ ಪೂರ್ತಿ ಅಡವಿಯೊಳಗೆ ಹೋಗಿದ್ದಾರೆ. ಅಲ್ಲಿ ಸುತ್ತಾ ಹಬ್ಬಿಕೊಂಡಿರುವ ಪೊದೆಗಳ ಮಧ್ಯದಲ್ಲಿ, ಸ್ವಲ್ಪ ಖಾಲಿ ಸ್ಥಳದಲ್ಲಿ ಒಂದು ಟೆಂಟ್ ಕಟ್ಟಿರುವುದು ಕಾಣಿಸಿತು. ಅಲ್ಲಿಗೆ ಹೋಗಬೇಕೆಂದರೆ ಒಂದು ಮರದ ಪೊದೆಯಲ್ಲಿ ಮಾತ್ರ ದಾರಿ ಇದೆ. ಅದೂ ಮುಳ್ಳಿನ ಗಿಡಗಳಿಂದ ಮುಚ್ಚಿದೆ. ಅಲ್ಲಿಗೆ ಹೋಗುವುದಕ್ಕಿಂತ ಮೊದಲೇ, ಅಲ್ಲಿಗೆ ಎರಡು ನೂರು ಮೀಟರುಗಳ ದೂರದಲ್ಲಿ ಇರುವಾಗ, ನೂಕಾ ಒಂದು ಪಕ್ಷಿ ಕೂಗಿದಂತೆ ಕೂಗಿದಾಗ, ಅಂತಹ ಕೂಗು ದೂರದಿಂದ ಕೇಳಿಸಿತು. ನಂತರ ಒಂದು ಮರದ ಪೊದೆ ಹತ್ತಿರಕ್ಕೆ ಬಂದು ಮೊದಲು ಕೂಗಿದಂತೆ ಕೂಗಿದನು. ಆಗ ಆ ಪೊದೆ ಮಧ್ಯದಲ್ಲಿರುವ ಮುಳ್ಳನ್ನು ಪೊದೆ ಒಳಗಿನಿಂದ ಯಾರೋ ತೆಗೆದಾಗ ಪೊದೆ ಮಧ್ಯದಲ್ಲಿ ಇಕ್ಕಟ್ಟಾದ ಒಂದು ದಾರಿ ಕಾಣಿಸಿತು. ಆ ದಾರಿಯಿಂದ ಎಲ್ಲರೂ ಆ ಪೊದೆಯನ್ನು ದಾಟಿಹೋದಾಗ ಸ್ವಲ್ಪ ಖಾಲಿ ಸ್ಥಳದಲ್ಲಿ ಇರುವ

ಟಾರ್ಪಲ್‌ಟೆಂಟ್ ಕಾಣಿಸಿತು. ಟೆಂಟು ಹಿಂದೆ ಸುಮಾರು 60 ಅಡಿಗಳು ಎತ್ತರವಿರುವ ಮರವಿದೆ. ಆ ಮರದ ಮೇಲೆ ಎತ್ತರದಲ್ಲಿ ಎ.ಕೆ 47 ರೈಫಿಲ್ ಹೊಂದಿರುವ ಒಬ್ಬ ಮನುಷ್ಯ ಸುತ್ತಾ ನೋಡುವುದಕ್ಕೆ ಅನುಕೂಲವಾಗಿ ಕೊಂಬೆ ಮೇಲೆ ಕುಳಿತುಕೊಂಡಿದ್ದಾನೆ. 20 ಅಡಿಗಳ ಅಗಲ, 40 ಅಡಿಗಳ ಉದ್ದವಿರುವ ದೊಡ್ಡ ಟೆಂಟ್ ಪಕ್ಕದಲ್ಲಿ ಹೊರಗೆ ನಾಲ್ಕು ಮೂಲೆಗಳಲ್ಲಿ ನಾಲ್ವರು ಮನುಷ್ಯರು ಎ.ಕೆ.47 ರೈಫಿಲ್ಸ್ ಹಿಡಿದುಕೊಂಡಿದ್ದಾರೆ. ಅಲ್ಲಿರುವವರೆಲ್ಲಾ ನೂಕಾಗೆ ನಮಸ್ಕರಿಸಿದರು. ಎಲ್ಲರೂ ಹೊರಗೇ ನಿಂತಿರುವಾಗ ಐದು ನಿಮಿಷಗಳ ನಂತರ ಟೆಂಟ್‌ಒಳಗಿನಿಂದ ಒಬ್ಬ ಮನುಷ್ಯ ಬಂದು ಒಳಗೆ ಹೋಗಲು ನೂಕಾಗೆ ಸನ್ನೆ ಮಾಡಿದನು. ಆಗ ನೂಕಾ ಎಲ್ಲರನ್ನೂ ಕರೆದುಕೊಂಡು ಒಳಗೆ ಹೋಗಿದ್ದಾನೆ. ಟೆಂಟ್ ಒಳಗೆ ಸಕಲ ಸೌಕರ್ಯಗಳಿಂದಿರುವ ಮುನೆಪ್ಪನಿಗೆ ಎಲ್ಲರೂ ನಮಸ್ಕರಿಸಿದರು. ಅಲ್ಲಿ ಹತ್ತು ಕುರ್ಚಿಗಳಿವೆ. ಅದರಲ್ಲಿ ಕುಳಿತುಕೊಳ್ಳಲು ನೂಕಾ ಹೇಳಿ ತಾನೂ ಸಹ ಒಂದು ಕುರ್ಚಿಯಲ್ಲಿ ಕುಳಿತುಕೊಂಡನು. ಮುನೆಪ್ಪ ಎಲ್ಲರ ಕಡೆ ನೋಡಿ ನೂಕಾ ಕಡೆ ನೋಡಿದನು. ಆಗ ನೂಕಾ ತನ್ನ ಕುರ್ಚಿಯನ್ನು ಮುನೆಪ್ಪ ಮುಂದಕ್ಕೆ ಹತ್ತಿರಕ್ಕೆ ಎಳೆದುಕೊಂಡು ಹೀಗೆ ಹೇಳಿದನು.)

**ನೂಕಾ :–** ನಾನು ಹೇಳಿರುವುದು ಇವರನ್ನು ಕುರಿತೇ. ಈತನು ಸುರೇಷ್, ಸುರೇಷ್‌ನೊಂದಿಗೆ ನನಗೆ ಮೊದಲು ಪರಿಚಯ ಏರ್ಪಟ್ಟಿದೆ. ಸುರೇಷ್ ನಂತರ ಈತನು ಧನುಷ್ ಈತನು ಈ ನಾಲ್ಕು ಸದಸ್ಯರಿಗೂ ನಾಯಕನಾಗಿ ಇದ್ದಾನೆ.

**ಮುನೆಪ್ಪ :–** ಹಲೋ ಧನುಷ್! ನಿಮ್ಮನ್ನು ಭೇಟಿಮಾಡುವುದು ನಮಗೆ ಸಂತೋಷ. ನಾವು ಪ್ರಸ್ತುತಕ್ಕೆ ಹೀಗೆ ಇದ್ದೇವೆ. ನಮ್ಮ ಪರಿಸ್ಥಿತಿ ನಿಮಗೆ ಅರ್ಥವಾಗಿರುತ್ತದೆ. ನಿಮ್ಮನ್ನು ಕುರಿತು ನೀವೇ ಹೇಳಬೇಕು. ನೀವು ಮಾಡಿದ ದೊಡ್ಡ ದರೋಡೆ ಒಂದನ್ನು ಕುರಿತು ಹೇಳಿರಿ.

**ಧನುಷ್ :–** ನಾವು ಎಷ್ಟು ದೊಡ್ಡದು ಮಾಡಿದರೂ ನಮ್ಮನ್ನು ನಾವು ಚಿಕ್ಕದಾಗಿಯೇ ಹೇಳಿಕೊಳ್ಳುತ್ತಾ ಇರುತ್ತೇವೆ. ನೀವು ಕೇಳಿದ್ದೀರ ಆದ್ದರಿಂದ ಹೇಳುತ್ತಿದ್ದೇವೆ. ನಾವು ಈ ಪ್ರಾಂತದಲ್ಲಿ ಮಾಡಿದವುಗಳಲ್ಲಿ ಟ್ರಜರಿ ಹಣವನ್ನು ಪೊಲೀಸರಿಂದ ಕಸಿದುಕೊಂಡು ಹೋಗುವುದು ಒಂದೇ ದೊಡ್ಡದೆಂದುಕೊಳ್ಳುತ್ತೇನೆ.

(ಆ ಮಾತು ಕೇಳಿದ ಕೂಡಲೇ ಮುನೆಪ್ಪ ಆಶ್ಚರ್ಯದಿಂದ ನೋಡುತ್ತಾ ಹೀಗೆ ಹೇಳಿದ್ದಾನೆ.)

**ಮುನೆಪ್ಪ :–** ನಿಮ್ಮ ಗುಂಪೇನಾ ಆ ಕೆಲಸ ಮಾಡಿರುವುದು? ಆದರೆ ನೀವು ಚಿಕ್ಕವರೇನೂ ಅಲ್ಲ. ನಮಗಿಂತ ದೊಡ್ಡವರೇ. ಮತ್ತೆ ನಮ್ಮ ನೂಕಾನೊಂದಿಗೆ ಚಿಕ್ಕವರಾಗಿ ಹೇಳಿದ್ದೀರ. ನೂಕಾ ಹೇಳಿದ್ದನ್ನು ನೋಡಿ ನಮ್ಮ ಗುಂಪಿನೊಳಗೆ ನಿಮ್ಮನ್ನು ಸೇರಿಸಿಕೊಳ್ಳಬೇಕೆಂದುಕೊಂಡಿದ್ದೆ. ಆದರೆ ಈಗ ನಿಮ್ಮ ಗುಂಪಿನೊಳಗೆ ನಾವೇ ಸೇರಬೇಕು.

(ಆ ಮಾತನ್ನು ಮುನೆಪ್ಪ ಅಂದಕೂಡಲೇ ಎಲ್ಲರೂ ನಗಾಡಿದರು.)

**ಧನುಷ್ :–** ನಾವು ಎಂತಾದ್ದು ಮಾಡಿದರೂ ವಾಸ್ತವಕ್ಕೆ ನಮ್ಮ ಗುಂಪು ಹೊಸದಾಗಿ ತಯಾರಾಗಿದೆ. ಹೆಚ್ಚಿನ ಕಾಲ ಅನುಭವವಿಲ್ಲ. ಅನುಭವವಿರುವವರ ಹತ್ತಿರ ಕೆಲಸ ಮಾಡಿ ಇನ್ನು ಸ್ವಲ್ಪ ಅನುಭವವನ್ನು ಸಂಪಾದಿಸಿಕೊಳ್ಳಬೇಕೆಂದುಕೊಂಡಿದ್ದೇವೆ. ಅದೂ ಅಲ್ಲದೆ ನಮ್ಮ ಗುಂಪು ಐದು ಮಂದಿ ಸದಸ್ಯರಿಂದಲೇ ಇದೆ. ಕನಿಷ್ಟ 20 ಜನ ಸದಸ್ಯರಾದರೂ ಇದ್ದರೆ ಎಲ್ಲ ಕೆಲಸಗಳೂ ನಡೆಯುತ್ತವೆ. ಐದುಮಂದಿ ಅದೂ ನನ್ನೊಂದಿಗೆ ಸೇರಿ ಐದು ಮಂದಿ ಹೊರಗೆ ಹೇಳಿಕೊಳ್ಳುವುದಕ್ಕೂ ಸಹ ಚೆನ್ನಾಗಿರುವುದಲ್ಲ ಅಣ್ಣಾ.

**ಮುನೆಪ್ಪ :–** ಬಹಳ ಜನ ಇದ್ದರೆ ಒಳ್ಳೆಯದೆ, ಆದರೆ ಬುದ್ಧಿವಂತರು ನಾಲ್ವರಿದ್ದರೂ ಸಾಕಲ್ಲವೆ!

**ಧನುಷ್ :–** ಎಷ್ಟು ಬುದ್ಧಿ ಇದ್ದರೂ ಒಂದೊಂದು ಸಲ ಬಲವೂ ಸಹ ಬೇಕಾಗುತ್ತದಲ್ಲವೆ! ಆ ದಿನ ಪೊಲೀಸರು ಐದುಮಂದಿಯೇ ಇದ್ದಾರೆ. ಆದ್ದರಿಂದ ನಾವು ಹೊರ ಬಿದ್ದಿದ್ದೇವೆ. ಅವರು ಹತ್ತು ಜನ ಇದ್ದಿದ್ದರೇ ನಾವು ಅವರ ಕೈಯಲ್ಲಿ ಸಿಕ್ಕಿಕೊಳ್ಳುತ್ತಿದ್ದೆವಲ್ಲವೆ! ಆದ್ದರಿಂದ ಜನರಿಲ್ಲದ ಗುಂಪು ಕೆಲಸಕ್ಕೆ ಬರುವುದಿಲ್ಲವೆಂದುಕೊಂಡಿದ್ದೇವೆ. ನಾವು ನಿಮ್ಮಂತಹವರೊಂದಿಗೆ ಸೇರಿಹೋಗುವುದು ಒಳ್ಳೆಯದು. ನಾನು ಬಹಳ ದಿನಗಳಿಂದ ಯಾರೊಂದಿಗೆ ಸೇರಬೇಕಾ ಎಂದು

ಆಲೋಚನೆ ಮಾಡುತ್ತಿದ್ದೆ. ಅಷ್ಟರಲ್ಲಿ ನಮ್ಮ ಸುರೇಷ್ ಬಂದು ನಮಗೆ ಒಳ್ಳೆ ಜಾಗಾ ತೋರಿಸಿದ್ದಾನೆ. ಈಗ ನಿಮ್ಮನ್ನು ನೋಡಿದ ನಂತರ ನಿಮ್ಮ ಗುಂಪಿನಲ್ಲಿ ಇದ್ದರೇ ಏನಾದರೂ ಮಾಡಬಲ್ಲೆವೆನ್ನುವ ಧೈರ್ಯ ಬಂದಿದೆ. ಪೋಲೀಸ್‌ನವರನ್ನು ಆಟ ಆಡಿಸಬಲ್ಲೆನು.

**ಮುನೆಪ್ಪ :–** ನೀನು ಹೇಳುವ ಮಾತು ಒಳ್ಳೆಯದೇ. ನಾವು ಮತ್ತೊಬ್ಬರ ಅಧೀನದಲ್ಲಿ ಕೆಲಸ ಮಾಡುತ್ತಿದ್ದೇವೆ. ಆದ್ದರಿಂದ ಆತನ ಅನುಮತಿ ತೆಗೆದುಕೊಂಡು ನಮ್ಮೊಳಗೆ ಸೇರಿಸಿಕೊಳ್ಳುತ್ತೇನೆ. ನಿಮ್ಮಂತಹವರು ನನ್ನ ಹತ್ತಿರ ಇರುವುದು ಒಳ್ಳೆಯದೇ ಅಲ್ಲವೆ? ನಿಮ್ಮ ಹತ್ತಿರ ವೆಪನ್ಸ್ ಯಾವಾದರೂ ಇವೆಯಾ?

**ಧನುಷ್ :–** ನಮ್ಮ ಐದು ಮಂದಿಗೂ ರಿವಾಲ್ವರ್ ಕೊಂಡಿದ್ದೇವೆ. ಅದರಲ್ಲಿ ಒಂದು ಕೆಲಸ ಮಾಡುತ್ತಿಲ್ಲ. ನಾಲ್ಕು ಕಂಡೀಷನ್‌ನಲ್ಲಿ ಇವೆ. ಅದಕ್ಕಿಂತ ದೊಡ್ಡವಿಲ್ಲ.

**ಮುನೆಪ್ಪ :–** ಕೆಲಸ ಮಾಡದ ರಿವಾಲ್ವರ್‌ನ್ನು ನಮ್ಮವರು ರಿಪೇರಿ ಮಾಡುತ್ತಾರೆ. ನಿಮಗೆ ಉಳಿದ ರೈಫಿಲ್ಸ್ ಮೇಲೆ ಕೆಲಸ ಮಾಡುವುದು ಬರುತ್ತದಾ.

**ಧನುಷ್ :–** ಇಲ್ಲಿಯವರೆಗು ರಿವಾಲ್ವರ್ ಹೊರತು ನಮಗೆ ಏನೂ ತಿಳಿದಿಲ್ಲ. ಒಂದು ಸಲ ನೋಡಿದರೆ ಸಾಕು ಕಲಿತುಕೊಳ್ಳುತ್ತೇವೆ.

**ಮುನೆಪ್ಪ :–** ನೀವು ಎಲ್ಲಾ ರಾಜ್ಯಗಳಲ್ಲಿ ದರೋಡೆಗಳು ಮಾಡಿದಂತೆ, ಪ್ರಸ್ತುತ ಬ್ಯಾಂಕ್ ದರೋಡೆ ಮಾಡಬೇಕೆಂದಿರುವಂತೆ ಇಂಟಲಿಜೆನ್ಸ್ ವರ್ಗಗಳು ತಿಳಿಸಿವೆ ಯೆಂದು ಬ್ಯಾಂಕ್‌ನವರು ಜಾಗ್ರತೆಯಿಂದ ಇರಬೇಕೆಂದು ನ್ಯೂಸ್ ನೋಡಿದ್ದೇನೆ. ಅದರಲ್ಲಿ ಧನುಷ್ ಗುಂಪು ಎಂದು ಸಹ ಬರೆದಿದೆ.

**ಧನುಷ್ :–** ಪೊಲೀಸ್‌ನವರು ಒಂದಿದ್ದರೇ ಎರಡು ಬರೆಯುತ್ತಿರುತ್ತಾರೆ. ಮೊದಲು ಕರ್ನಾಟಕದಲ್ಲಿ ಮಾಡಿದ್ದೇವೆ. ಆ ಹಣದಿಂದ ರಿವಾಲ್ವರ್‌ಗಳು ಕೊಂಡಿದ್ದೇವೆ. ನಾವು ಮಾಡಿರುವುದು ಒಟ್ಟು ಐದು ಮಾತ್ರವೇ. ಈಗ ಬ್ಯಾಂಕನ್ನು ದರೋಡೆ ಮಾಡಬೇಕೆಂದುಕೊಂಡಿಲ್ಲ. ಬ್ಯಾಂಕ್‌ನಲ್ಲಿರುವ ಲಾಕರ್‌ನ್ನು ಮಾತ್ರವೇ ದೋಚಿ ಕೊಳ್ಳಬೇಕೆಂದುಕೊಂಡಿದ್ದೇವೆ. ಆದರೆ ಅದೂ ಸಹ ಒಂದು ಹತ್ತು ದಿನಗಳ

ನಂತರ ಮಾಡಬೇಕೆಂದುಕೊಂಡಿದ್ದೇವೆ. ನಮ್ಮ ಲೆಕ್ಕದಲ್ಲಿ ಇಲ್ಲಿಯವರೆಗು ಮಾಡಿರುವವು ಚಿಕ್ಕಚಿಕ್ಕವೇ. ಯಾವುದಾದರೂ ದೊಡ್ಡದು ಮಾಡಬೇಕೆಂದಿದೆ.

**ಮುನೆಪ್ಪ :–** ದೊಡ್ಡದೆಂದರೆ ಯಾವುದು?

**ಧನುಷ್ :–** ಒಂದು ಬ್ಯಾಂಕ್ ಲಾಕರ್‌ನಲ್ಲಿ ಹತ್ತು ವಜ್ರಗಳಿವೆಯಂತೆ, ಅವುಗಳನ್ನು ತೆಗೆಯುವುದಾದರೇ ದೊಡ್ಡದಾಗುತ್ತದೆ.

**ಮುನೆಪ್ಪ :–** ಲಾಕರ್‌ನಲ್ಲಿ ಇದ್ದಂತೆ ಹೇಗೆ ತಿಳಿದಿದೆ? ನಿಮಗೆ ತಿಳಿದಿರುವುದು ವಾಸ್ತವವೊ ಅಲ್ಲವೊ!

**ಧನುಷ್ :–** ನಾವು ಐದು ಮಂದಿ ಇದ್ದೇವಲ್ಲವೆ! ನಾನು, ಸುರೇಷ್ ಹೊರತು ಉಳಿದ ಮುವ್ವರೂ ಹೊರಗೆ ಕಾರುಡ್ರೈವರ್‌ಗಳಾಗಿ ಕೆಲಸವನ್ನು ಮಾಡುತ್ತಿದ್ದಾರೆ. ಇಬ್ಬರು ಬ್ಯಾಂಕ್ ಮ್ಯಾನೇಜರುಗಳ ಕಾರು ಡ್ರೈವರಾಗಿ ಇದ್ದಾರೆ. ಒಬ್ಬರು ಮಾತ್ರ ಸುಖ್‌ಲಾಲ್ ಸೇಟ್ ಹತ್ತಿರ ಕಾರು ಡ್ರೈವರ್ ಆಗಿ ಇದ್ದಾನೆ. ಹಾಗೆ ಇದ್ದರೇ ಇನ್‌ಫರ್‌ಮೇಷನ್ ಸಿಗುತ್ತದೆಂದು ಇಟ್ಟಿದ್ದೇನೆ. ಒಂದು ದಿನ ಬ್ಯಾಂಕು ಮ್ಯಾನೇಜರ್ ಕಾರಿನಲ್ಲಿ ಹೋಗುತ್ತಾ ತನ್ನ ಹೆಂಡತಿಯೊಂದಿಗೆ ಮಾತನಾಡುವಾಗ, ನಮ್ಮ ಮನುಷ್ಯ ಡ್ರೈವರಾಗಿ ಕಾರು ನಡೆಸುತ್ತಾ ಕೇಳುವುದು ನಡೆದಿದೆ. ಯಾರೋ ತನ್ನ ಬ್ಯಾಂಕ್‌ನಲ್ಲಿ ಹತ್ತು ವಜ್ರಗಳನ್ನು ಇಟ್ಟಿದ್ದಾನಂತೆ. ಅವು ಬಹಳ ಚೆನ್ನಾಗಿವೆ ಎಂದು ಎಂದಿಗಾದರೂ ಅಂತಹ ವಜ್ರವನ್ನು ಒಂದನ್ನಾದರೂ ಕೊಡಿಸುತ್ತೇನೆಂದು, ಅದನ್ನು ನೆಕ್ಲೆಸ್‌ನಲ್ಲಿ ಹೊಂದಿಸಿ ವಜ್ರದ ನೆಕ್ಲೆಸ್ ಮಾಡಿಸುತ್ತೇನೆಂದು ಹೇಳಿರುವುದನ್ನು ಕೇಳಿದ್ದಾನೆ. ತನ್ನ ಬ್ಯಾಂಕಿನಲ್ಲಿ 1,11 ಎರಡು ಲಾಕರ್‌ಗಳು ಬ್ಯಾಂಕಿಗೆ ಚೆನ್ನಾಗಿ ಆಗಿಬಂದಿರುವ ವೆಂದು, ಈ ಎರಡು ಲಾಕರ್‌ಗಳಲ್ಲಿ ಒಂದರಲ್ಲಿ ವಜ್ರಗಳ ಸರ ಇದೆಯೆಂದೂ, 11ನೇ ನಂಬರ್ ಲಾಕರ್‌ನಲ್ಲಿ ವಜ್ರಗಳಿವೆಯೆಂದು ಹೇಳುತ್ತಿರುವಾಗ ನಮ್ಮ ಮನುಷ್ಯ ಕೇಳಿಸಿಕೊಂಡಿದ್ದಾನೆ. ಆದ್ದರಿಂದ ನಾವು ಈ ಎರಡು ಲಾಕರ್‌ಗಳನ್ನು ಹೇಗಾದರೂ ಕದಿಯಬೇಕೆಂದು ಅಂದುಕೊಂಡಿದ್ದೇನೆ. ಆದರೆ ಮನುಷ್ಯರು ಕಡಿಮೆ ಇದ್ದೇವೆ ಅಲ್ಲವೆ! ಆದ್ದರಿಂದ ಆ ಕೆಲಸ ಮಾಡಲಾರದೆ ಹೋಗುತ್ತಿದ್ದೇವೆ.

**ಮುನೆಪ್ಪ :–** ಬ್ಯಾಂಕ್ ಲಾಕರ್‌ಗಳ ದರೋಡೆ ಮಾಡುವುದು ಚಿಕ್ಕ ಕೆಲಸವೇನಾ! ಅನುಭವ ಇಲ್ಲ ಎನ್ನುತ್ತೀಯ. ಮುಂದಾಲೋಚನೆಯಿಂದ ನಿಮ್ಮವರನ್ನು ಇನ್‌ಫರ್‌ಮೇಷನ್‌ಗಾಗಿ ಕಾರು ಡ್ರೈವರ್‌ಗಳಾಗಿ ಇಟ್ಟಿದ್ದೀಯ. ನಮ್ಮ ಹತ್ತಿರ ನಿಮ್ಮ ಬಳಿ ಇರುವುದಕ್ಕಿಂತ ದೊಡ್ಡ ಆಯುಧಗಳಿವೆ. ಆದರೆ ದೊಡ್ಡ ಬುದ್ಧಿ ಇಲ್ಲ. ನಮಗಿಂತ ನಿಮ್ಮ ತಲೆ ದೊಡ್ಡದು. ಆದರೇ ಒಂದು ಕೆಲಸ ಮಾಡೋಣ ಲಾಕರ್‌ಗಳ ದರೋಡೆಗೆ ಹೊರಗೆ ಕೆಲವರು, ಒಳಗೆ ಕೆಲವರು, ವಾಹನದ ಹತ್ತಿರ ಒಬ್ಬರು ಇದ್ದಾಗಲೆ ಕೆಲಸವಾಗುತ್ತದೆ. ಒಟ್ಟು ಹತ್ತು ಜನರಾದರೂ ಇರಬೇಕು. ಇಲ್ಲದಿದ್ದರೆ ಕಷ್ಟ. ನಾಳೆವರೆಗು ನೀವು ಇಲ್ಲೆ ಇರಿ. ಅಷ್ಟರಲ್ಲಿ ನಾನು ನಮ್ಮ ಬಾಸ್‌ನ್ನು ಕೇಳಿಕೊಂಡು ನಿಮ್ಮ ದರೋಡೆಯಲ್ಲಿ ನಮ್ಮ ಮನುಷ್ಯರನ್ನು ಸೇರುವಂತೆ ಮಾಡುತ್ತೇನೆ.

**ಧನುಷ್ :–** ಹಾಗಾದರೇ ನಾಳೇನೆ ಆದರೂ ಮಾಡುತ್ತೇನೆ.

(ನಂತರ ವಿಷಯವೆಲ್ಲಾ ಹೇಳುತ್ತೇವೆಂದು ಮುನೆಪ್ಪ ಧನುಷ್ ಗುಂಪು ಎಲ್ಲರನ್ನೂ ಹೊರಗೆ ಕಳುಹಿಸಿದನು. ತಾನು ಒಬ್ಬನು ರೇಡಿಯೊಸೆಟ್ ಆನ್ ಮಾಡಿ ತಪಸ್ವಿ ಬಾಬಾನೊಂದಿಗೆ ಧನುಷ್ ವಿಷಯವೆಲ್ಲಾ ಹೇಳಿದ್ದಾನೆ. ಅಷ್ಟು ಬುದ್ಧಿವಂತರು ಸಿಗುವುದು ಒಳ್ಳೆಯದೇ ಎಂದು ಹೇಳಿದ ತಪಸ್ವಿಬಾಬಾ ಆ ಹತ್ತು ವಜ್ರಗಳು ಭುವನೇಶ್ವರಿ ದೇವಾಲಯದಲ್ಲಿ ನಾವು ಕದ್ದಿರುವವೆ. ಅವು ಅಲ್ಲಿಗೆ ಹೇಗೆ ಸೇರಿವೆಯೊ ನಮಗೆ ತಿಳಿಯದು. ಈಗ ಅವುಗಳ ಅಡ್ರಸ್ ನಮಗೆ ದೊರೆದಂತೆ. ಮೊದಲು ಧನುಷ್‌ನೊಂದಿಗೆ ನಮ್ಮ ಮನುಷ್ಯರನ್ನು ಕಳುಹಿಸುತ್ತೇವೆಂದು ಹೇಳು. ಅದರಲ್ಲಿ ಒಂದು ನಮ್ಮ ಬಾಸ್‌ಗೆ ಕೊಡಬೇಕೆಂದು ಉಳಿದ ಒಂಬತ್ತನ್ನು ಅವರೇ ತೆಗೆದುಕೊಳ್ಳಲು ಹೇಳು. ಕೆಲಸ ಎಲ್ಲಾ ಮುಗಿದ ನಂತರ ಆ ಒಂಬತ್ತನ್ನು ಅವರಿಂದ ತೆಗೆದುಕೊಳ್ಳಬಹುದು. ಅವರನ್ನು ನಮ್ಮ ಹತ್ತಿರವೇ ಇಟ್ಟುಕೊಳ್ಳಬಹುದು. ಇವರು ಸಿಗುವುದು ನಮ್ಮ ಅದೃಷ್ಟವೇ ಎಂದು ಬಾಬಾ ಹೇಳಿ ವಯರ್‌ಲೆಸ್ ಆಫ್ ಮಾಡಿದ್ದಾನೆ. ನಂತರ ಮುನೆಪ್ಪ ಧನುಷ್‌ನೊಂದಿಗೆ ಮಾತಾಡಿ ತನ್ನ ಬಾಸ್ ಹೇಳಿದ್ದನ್ನೆಲ್ಲಾ ಹೇಳಿದ್ದಾನೆ. ಅದಕ್ಕೆ ಧನುಷ್ ಎಲ್ಲಾ ವಿಧಗಳಲ್ಲಿ ಒಪ್ಪಿಕೊಂಡನು. ಆ ದಿನ ಧನುಷ್ ಅವರು ಅಡವಿ ವಾತಾವರಣದಲ್ಲಿ ವಿಶ್ರಾಂತಿ ತೆಗೆದುಕೊಂಡರು.

ಮರುದಿನ ಬೆಳಗ್ಗೆ ಪಕ್ಕದಲ್ಲೇ ಇರುವ ಹಳ್ಳದಲ್ಲಿ ಸ್ನಾನ ಮಾಡಿ ಸಿದ್ಧವಾಗಿ ಹೋಗಿದ್ದಾರೆ. ಎಲ್ಲರೂ ಬೆಳಗ್ಗೆ ಎಂಟು ಗಂಟೆಗೇ ಊಟ ಮಾಡಿದ್ದಾರೆ. ನಂತರ ಮುನೆಪ್ಪ ಧನುಷ್‌ನೊಂದಿಗೆ ಹೀಗೆ ಹೇಳಿದ್ದಾನೆ.)

**ಮುನೆಪ್ಪ :-** ನೀನಲ್ಲದೆ ನಿಮ್ಮವರು ನಾಲ್ವರಿದ್ದಾರೆ. ಅವರಿಗೆ ಜೊತೆಯಾಗಿ ನಾನು ಆರುಜನರನ್ನು ಕಳುಹಿಸುತ್ತೇನೆ. ಅಲ್ಲಿಗೆ ಒಟ್ಟು ಹನ್ನೊಂದು ಜನ ಆಗುತ್ತಾರೆ. ಅವರನ್ನು ಹೇಗೆ ಉಪಯೋಗಿಸಿಕೊಳ್ಳಬೇಕೊ ಹಾಗೆ ಉಪಯೋಗಿಸಿಕೊ.

**ಧನುಷ್ :-** ಇವತ್ತು ಶನಿವಾರ. ನಾಳೆ ಭಾನುವಾರ ಬ್ಯಾಂಕು ರಜಾ. ನಾಳೆ ರಾತ್ರಿಗೆ ನಾವು ಕೆಲಸ ಪ್ರಾರಂಭಿಸುತ್ತೇವೆ. ನೀವು ಕಳುಹಿಸುವವರನ್ನು ನನಗೆ ಪರಿಚಯ ಮಾಡಿಸಿದರೆ, ಅವರಿಗೆ ಮೊದಲೇ ಕೆಲವು ಸೂಚನೆಗಳನ್ನು ಕೊಟ್ಟು, ಈ ದಿನವೇ ಇಲ್ಲೇ ಅವರಿಗೆ ಸ್ವಲ್ಪ ತರಬೇತಿ ಮಾಡಿದಂತೆ ದರೋಡೆ ನಮೂನೆಯನ್ನು ಮಾಡಿ ನೋಡುತ್ತೇವೆ.

(ಮುನೆಪ್ಪ ತನ್ನ ತಮ್ಮ ವೆಂಕೂನನ್ನು ಮೊದಲು ಧನುಷ್‌ಗೆ ಪರಿಚಯ ಮಾಡಿದ್ದಾನೆ. ನಂತರ ನೂಕಾ ಇನ್ನೂ ಐದು ಜನರನ್ನು ಪರಿಚಯ ಮಾಡಿದ್ದಾನೆ. ಎಲ್ಲರೂ ಒಬ್ಬರಿಗೊಬ್ಬರು ಪರಿಚಯ ಮಾಡಿಕೊಂಡ ನಂತರ ಧನುಷ್ ತನ್ನ ಬುದ್ಧಿಯನ್ನು ಉಪಯೋಗಿಸಿ ಬ್ಯಾಂಕ್ ಲಾಕರ್‌ಗಳ ದರೋಡೆ ಹೇಗೆ ಮಾಡಬೇಕೊ ವಿವರಿಸಿ ಹೇಳಿ, ಅದೇ ವಿಧವಾಗಿ ಎಲ್ಲರೂ ಟ್ರಯಲ್ ಮಾಡುವಂತೆ ಮಾಡಿದ್ದಾನೆ. ಆ ವಿಧವಾಗಿ ಬ್ಯಾಂಕ್ ಲಾಕರ್‌ಗಳ ದರೋಡೆ ವಿಷಯದಲ್ಲಿ ಸ್ವಲ್ಪ ತರಭೇತಿ ಪಡೆದಂತಾಯಿತು. ಭಾನುವಾರ ರಾತ್ರಿಗೆ ಎಲ್ಲಾ ಏರ್ಪಾಟುಗಳನ್ನು ಮಾಡಿಕೊಂಡು, ಎಲ್ಲರೂ ಒಂದು ಕಾರಲ್ಲಿ ಹೊರಟು ಹೋದರು. ಭಾನುವಾರ ದರೋಡೆ ಮಾಡಬೇಕಾಗಿರುವ ಬ್ಯಾಂಕನ್ನು ಒಂದು ಬಾರಿ ನೋಡಿಕೊಂಡು, ಆ ದಿನ ಎಲ್ಲರೂ ಒಂದು ಲಾಡ್ಜಿನಲ್ಲಿ ಉಳಿದರು. ಲಾಡ್ಜಿನಲ್ಲಿ ಎಲ್ಲರನ್ನು ಇರಿಸಿ ಧನುಷ್ ಒಬ್ಬನು ಹೊರಗೆ ಬಂದು ಫೋನ್‌ಬೂತ್‌ನಿಂದ ಯಸ್. ಪಿ ರವರಿಗೆ ಸಮಾಚಾರವನ್ನು ತಿಳಿಸಿದ್ದಾನೆ. ನಂತರ ಎಲ್ಲರೊಂದಿಗೆ ತನ್ನ ರೂಮಿಗೆ ಬಂದು ಸೇರಿದನು. ರಾತ್ರಿ 9 ಗಂಟೆಗೇ ಲಾಡ್ಜ್ ಖಾಲಿ ಮಾಡಿ ಊರಿನ ಹೊರಗೆ ಹೈವೇ ಮೇಲಿರುವ

ಡಾಬಾ ಹೋಟಲ್‌ಗೆ ಹೋಗಿ, ಅಲ್ಲಿ ರಾತ್ರಿ ಹನ್ನೊಂದು ಗಂಟೆಯವರೆಗು ತಿನ್ನುತ್ತಾ ಕಾಲ ಕಳೆದರು. ನಂತರ ಮತ್ತೊಂದು ಡಾಬಾ ಹೋಟಲ್‌ಗೆ ಬಂದು, ಅಲ್ಲಿ ಟೀ ಕುಡಿಯುವುದಕ್ಕೆ ಅರ್ಧಗಂಟೆ ಕಳೆದು, ರಾತ್ರಿ 12.45 ಸಮಯಕ್ಕೆ ಹೊರಟು ಒಂದು ಗಂಟೆಗೆ ಬ್ಯಾಂಕ್ ಹತ್ತಿರಕ್ಕೆ ಹೋಗಿದ್ದಾರೆ. ಬ್ಯಾಂಕ್ ಹತ್ತಿರ ಸೆಕ್ಯೂರಿಟಿ ಗಾರ್ಡ್ ಬ್ಯಾಂಕು ಮುಂದೆ ಕೂತು ನಿದ್ರೆ ಮಾಡುತ್ತಿದ್ದಾನೆ. ಅದೇ ಸರಿಯಾದ ಸಮಯವೆಂದು ಕಾರಿನಿಂದ ಧನುಷ್ ಇಳಿದು ಕೈರುಮಾಲಿನಲ್ಲಿ ಕ್ಲೋರೋಪಾಮ್‌ನ್ನು ಹಾಕಿಕೊಂಡು ನಿದ್ರೆಮಾಡುತ್ತಿರುವ ಗಾರ್ಡ್ ಮೂಗಿನ ಹತ್ತಿರ ಇಟ್ಟನು. ಕ್ಲೋರೋಪಾಮ್ ಮತ್ತಿನ ಔಷಧಿ ಆದ್ದರಿಂದ ಆತನನ್ನು ಗಾಢ ನಿದ್ರೆಯೊಳಗೆ ಕಳುಹಿಸಿತು. ಆಗ ಕಾರನ್ನು ಬ್ಯಾಂಕು ಪಕ್ಕದಲ್ಲಿ ಸ್ವಲ್ಪ ದೂರದಲ್ಲಿ ಕತ್ತಲಾಗಿರುವ ಕಡೆ ನಿಲ್ಲಿಸಿ, ಡ್ರೈವರ್ ಸೀಟಿನಲ್ಲಿ ನಿದ್ರಿಸುತ್ತಿರುವಂತೆ ನಟಿಸುತ್ತಾ ಒಬ್ಬ ಮನುಷ್ಯ ಕುಳಿತುಕೊಂಡಾಗ, ಉಳಿದ ಹತ್ತು ಜನರು ಬ್ಯಾಂಕ್ ಹತ್ತಿರಕ್ಕೆ ಹೋಗಿದ್ದಾರೆ. ಬ್ಯಾಂಕ್ ಮುಂಭಾಗದಲ್ಲಿ ಅಲ್ಲದೆ ಪಕ್ಕದಲ್ಲಿರುವ ಒಂದು ಕಿಟಿಗೀ ಹತ್ತಿರಕ್ಕೆ ಸೇರಿಕೊಂಡು, ಅದರ ಕಬ್ಬಿಣ ಕಡ್ಡಿಗಳಿಗೆ ಅವರ ಹತ್ತಿರವಿರುವ ಐರನ್‌ಮಿಲ್ಟ್ ಪೇಸ್ಟನ್ನು ಸುತ್ತಲೂ ಹಚ್ಚಿದ್ದಾರೆ. ಸ್ವಲ್ಪ ಹೊತ್ತಿನಲ್ಲಿ ಆ ಕಡ್ಡಿಗಳು ಮೃದುವಾಗಿ ಬದಲಾಗಿ ಕರುಗುವುದಕ್ಕೆ ಪ್ರಾರಂಭಿಸಿದವು. ಆಗ ಬಲವಾಗಿ ಎಳೆದು ಪಕ್ಕದಲ್ಲಿಟ್ಟು, ಒಳಗಿರುವ ಕನ್ನಡಿಗಳನ್ನು ತಮ್ಮ ಹತ್ತಿರವಿರುವ ಮಿರರ್ ಕಟರ್‌ನಿಂದ ಕತ್ತರಿಸಿ ಪಕ್ಕದಲ್ಲಿಟ್ಟು, ಆ ಕಿಟಿಕಿ ಮುಖಾಂತರ ಎಲ್ಲರೂ ಒಳಗೆ ಸುಲಭವಾಗಿ ಹೋಗಿದ್ದಾರೆ. ಎಲ್ಲರೂ ಮುಖಗಳಿಗೆ ಬಟ್ಟೆಗಳು ಕಟ್ಟಿಕೊಂಡು ಸಿ.ಸಿ. ಕೆಮರಾಗಳ ಕಣ್ಣಿಗೆ ಬೀಳದಂತೆ, ಅವು ಎಲ್ಲಿರುವುದೂ ಗಮನಿಸಿ ಅವುಗಳನ್ನು ಕಿತ್ತುಹಾಕಿದ್ದಾರೆ. ನಂತರ ಲಾಕರ್‌ರೂಮ್ ಲಾಕ್‌ನ್ನು ತೆಗೆಯದಂತೆ ಅದಕ್ಕೂ ಸಹ ಮೆಟಲ್ ಮಿಲ್ಟ್ ಪೇಸ್ಟನ್ನು ಹಚ್ಚಿದ್ದಾರೆ. ಒಂದು ನಿಮಿಷದಲ್ಲಿ ಅದೂ ಸಹ ಕರಿಗಿ ಹೋಯಿತು. ಎಲ್ಲೂ ಬೆರಳಿನ ಮುದ್ರೆಗಳು ಬೀಳದಂತೆ ಧನುಷ್ ಎಲ್ಲರಿಗು ಮೊದಲೇ ಹ್ಯಾಂಡ್‌ಗ್ಲೋವ್ಸ್ ಕೊಟ್ಟಿದ್ದಾನೆ. ಎಲ್ಲರೂ ಅವುಗಳನ್ನು ಕೈಗಳಿಗೆ ಹಾಕಿಕೊಂಡು ಇರುವುದರಿಂದ ಯಾರ ಕೈ ಬೆರಳ ಮುದ್ರೆಗಳೂ ಎಲ್ಲೂ ಬೀಳಲಿಲ್ಲ. ಸುಲಭವಾಗಿ ಲಾಕರ್ ರೂಮ್‌ನೊಳಗೆ ಪ್ರವೇಶಿಸಿದ ಅವರು ಕೆಲವರು ಒಂದನೆ ನಂಬರ್ ಲಾಕರ್ ಹತ್ತಿರಕ್ಕೆ ಬಂದಿದ್ದಾರೆ. ಕೆಲವರು ಬ್ಯಾಂಕ್

ಮಧ್ಯ ಹಾಲ್‌ನಲ್ಲಿರುವಾಗ, ಒಬ್ಬರು ಮುಖ್ಯ ರಸ್ತೆ ಎದುರಿಗೆ ಇರುವ ಕಿಟಿಕಿಯಿಂದ ಯಾರಾದರೂ ಆಕಡೆ ಬರುತ್ತಿದ್ದಾರೇನೋ ಎಂದು ಹೊರಗೆ ನೋಡುತ್ತಿದ್ದಾನೆ. ಹೊರಗೆ ಕಾರಿನಲ್ಲಿ ಡ್ರೈವರ್ ಸೀಟಿನಲ್ಲಿ ಕುಳಿತುಕೊಂಡ ಮನುಷ್ಯ ಧನುಷ್ ಗುಂಪಿನೊಳಗಿರುವ ಮನುಷ್ಯ. ಹಾಗೇ ಮುಖ್ಯ ರಸ್ತೆ ಕಿಟಿಕಿ ಹತ್ತಿರ ಹೊರಗೆ ನೋಡುತ್ತಿರುವುದೂ ಸಹ ಧನುಷ್ ಮನುಷ್ಯನೇ. ಬ್ಯಾಂಕ್ ಮೊದಲನೆ ಹಾಲ್‌ನಲ್ಲಿ ಒಬ್ಬರು ಧನುಷ್ ಮನುಷ್ಯ, ಇಬ್ಬರು ಮುನೆಪ್ಪ ಮನುಷ್ಯರು ಇರುವಾಗ, ನಾಲ್ವರು ಮುನೆಪ್ಪ ಮನುಷ್ಯರಲ್ಲಿ ಒಬ್ಬರು ವೆಂಕು ಒಬ್ಬರು ನೂಕಾ ಆದಾಗ, ಉಳಿದ ಇಬ್ಬರು ಧನುಷ್, ಸುರೇಷ್ ಆರು ಮಂದಿ ಬ್ಯಾಂಕ್ ಲಾಕರ್ ರೂಮಿನಲ್ಲಿ ಇದ್ದಾರೆ. ಐದು ನಿಮಿಷಗಳು ಕಷ್ಟಪಟ್ಟು 1ನೇ ನಂಬರ್ ಲಾಕರ್ ತೆಗೆದಿದ್ದಾರೆ. ಅದರಲ್ಲಿ ಎಲ್ಲಾ ಆಭರಣಗಳೇ ಇವೆ. ಅವುಗಳೆಲ್ಲವನ್ನೂ ಬ್ಯಾಗ್‌ನಲ್ಲಿ ಹಾಕಿಕೊಂಡಿದ್ದಾರೆ. ನಂತರ 11ನೇ ನಂಬರ್ ಲಾಕರ್ ಹತ್ತಿರಕ್ಕೆ ಹೋಗಿದ್ದಾರೆ. ಅಷ್ಟರಲ್ಲಿ ಹೊರಗೆ ಸ್ವಲ್ಪ ಶಬ್ದವಾಯಿತು. ಏನಾಶಬ್ದ ಎಂದು ಲಾಕರ್‌ರೂಮ್ ನೊಳಗಿರುವವರು ಹೊರಗೆ ಬಂದು ನೋಡಬೇಕೆಂದು ಹೊರಗೆ ಬಂದರು. ಅಷ್ಟರಲ್ಲೇ ಆಯುಧಗಳನ್ನೊಳಗೊಂಡ ಪೊಲೀಸ್ ಆಫೀಸರುಗಳು ಆರು ಜನ ಲಾಕರ್ ರೂಮ್‌ನೊಳಗೆ ಬಂದು, ಅಲ್ಲಿರುವವರನ್ನು ಕದಲದಂತೆ ಕೈಗಳು ಮೇಲಕ್ಕೆ ಎತ್ತಿರೆಂದರು. ಪರಿಸ್ಥಿತಿ ಕೈಜಾರಿಹೋಯಿತು ಎಂದುಕೊಂಡ ವೆಂಕು ಮೊದಲಾದವರು ಕೈಗಳು ಮೇಲಕ್ಕೆ ಎತ್ತಿದರು. ಕೂಡಲೇ ಹೊರಗಿನಿಂದ ಇನ್ನೂ ಹತ್ತು ಮಂದಿ ಪೊಲೀಸರು ಬಂದು ಕೈಗಳಿಗೆ ಬೇಡೀಗಳು ಹಾಕಿದರು. ಪೊಲೀಸರು ಹೇಗೆ ಬಂದಿದ್ದಾರೊ ವೆಂಕೂಗು, ನೂಕಾಗೂ ಅರ್ಥವಾಗಲಿಲ್ಲ. ತಮ್ಮ ಹತ್ತಿರವಿರುವ ಬ್ಯಾಂಕ್ ಲಾಕರ್ ಆಭರಣಗಳೊಂದಿಗೆ ಸಹ ರೆಡ್‌ಹ್ಯಾಂಡೆಡ್ ಆಗಿ ಪೊಲೀಸರಿಗೆ ಸಿಕ್ಕಿಬಿದ್ದರು.

ಇದೆಲ್ಲಾ ಧನುಷ್ ಎನ್ನುವ ಮತ್ತೊಂದು ಹೆಸರಿನಿಂದಿರುವ ಧನಂಜಯ್ ಮಾಡಿದ ಪಿತೂರಿಎಂದು ಮುನೆಪ್ಪ ಮನುಷ್ಯರಿಗೆ ತಿಳಿಯದು. ಧನುಷ್ ಗುಂಪು ಸಹ ತಮ್ಮೊಂದಿಗೆ ಸಿಕ್ಕಿದೆಯೆಂದು ಮುನೆಪ್ಪ ಮನುಷ್ಯರು ಅಂದುಕೊಂಡರು. ಆದರೆ ಧನುಷ್, ಆತನ ಗುಂಪು ಎಲ್ಲರೂ ಪೊಲೀಸರೇ ಎಂದು ಅವರಿಗೆ

ತಿಳಿಯದು. ಧನುಷ್ ಎಲ್ಲರಿಗೂ ಕೈ ಗ್ಲೌಸ್ ಕೊಟ್ಟು, ಸಿ.ಸಿ. ಕೆಮೆರಾಗಳನ್ನು ಹೊಡೆದಿರುವುದು ನೋಡಿದರೆ, ನಿಜವಾಗಿ ಕಳ್ಳರು ಮಾಡಿದಂತೆ, ಆ ಕೆಲಸ ಎಲ್ಲಾ ನಿಜವಾದ ಕಳ್ಳತನವೆನ್ನುವಂತೇ ಇದೆ. ಧನಂಜಯ್ ಧನುಷ್‌ನಾಗಿ ಬದಲಾಗಿ, ಕಳ್ಳರ ಗ್ರೂಪ್ ನಾಯಕನಂತೆ ಬದಲಾದಂತೆ ನಟಿಸುತ್ತಾ, ಎಷ್ಟೋ ಕಾಲದಿಂದ ಸಿಗದ ಮುನೆಪ್ಪ ಮನುಷ್ಯರನ್ನು ಬ್ಯಾಂಕ್ ದರೋಡೆ ಎನ್ನುವ ಹೆಸರಿಂದ ಬಲೆಯೊಳಗೆ ಎಳೆದು ಸಿಲುಕಿಕೊಳ್ಳುವಂತೆ ಮಾಡಿದ್ದಾನೆ. ಮುನೆಪ್ಪ ಮನುಷ್ಯರೆಲ್ಲರೂ ಪೊಲೀಸರಿಗೆ ಸಿಕ್ಕ ನಂತರ ಕೂಡಾ ಧನುಷ್ ಪೊಲೀಸ್ ಗ್ರೂಪ್ ಮನುಷ್ಯ ಎಂದು ಮುನೆಪ್ಪನಿಗಾಗಲೀ, ಮುನೆಪ್ಪ ಮನುಷ್ಯರಿಗಾಗಲೀ ತಿಳಿಯದು. ಈ ವಿಧವಾಗಿ ನುರಿತ ಕಳ್ಳರನ್ನು ಹಿಡಿದು ಕೊಟ್ಟಿರುವುದಕ್ಕೆ ಧನುಂಜಯ್‌ಗೆ ಪೊಲೀಸ್ ಶಾಖೆಯಿಂದ ಒಳ್ಳೆಯ ಬಹುಮಾನ ಲಭಿಸಿತು. ಹಾಗೇ ಪ್ರಮೋಷನ್ ಸಹ ಲಭಿಸಿತು. ಅಡವಿಯಲ್ಲಿ ಮುನೆಪ್ಪ, ಆತನ ಮುಖ್ಯ ಅನುಚರರು ಮುವ್ವರು ಉಳಿದು ಹೋದರು. ತಪಸ್ವಿಬಾಬಾರವರಿಗೆ ಮುನೆಪ್ಪ ನಡೆದಿರುವುದೆಲ್ಲಾ ಹೇಳಿದಾಗ! ಬಾಬಾ ಆಶ್ಚರ್ಯಪಟ್ಟನು.)

**********************************

(ರಾವುಬಹದೂರ್ ಜಮೀಂದಾರನ ಮನೆಯಲ್ಲಿ ಈಶ್ವರ್ ವಯಸ್ಸು ಹದಿನೈದನೆ (15) ಸಂವತ್ಸರದಲ್ಲಿ ನಡೆಯುತ್ತಿದೆ. ಈಶ್ವರ್‌ಗೆ ವಯಸ್ಸು ಬೆಳೆಯುತ್ತಿದ್ದಂತೆ ಸುಂದರವಾಗಿ, ಆಕರ್ಷಣೀಯವಾಗಿ ಕಾಣಿಸತೊಡಗಿದನು. ಈಶ್ವರ್‌ನನನ್ನು ನೋಡುತ್ತಿದ್ದಂತೆ ದೆವ್ವಗಳಾಗಲೀ, ಪಿಶಾಚಿಗಳಾಗಲೀ ಭಯಪಟ್ಟು ಓಡಿಹೋಗುತ್ತಿದ್ದವು. ಒಂದು ದಿನ ಮೂರು ಸಂವತ್ಸರಗಳ ಹುಡುಗನನ್ನು ಹಾವು ಕಚ್ಚಿದೆ. ತಾಯಿ ತಂದೆ ಹಾವು ಕಚ್ಚಿದ ಕೂಡಲೇ ವೈದ್ಯರ ಹತ್ತಿರಕ್ಕೆ ಕರೆದುಕೊಂಡು ಹೋದರೂ ಆ ಹುಡುಗ ಬದುಕಲಿಲ್ಲ. ದಂಪತಿಗಳಿಗೆ ಒಬ್ಬನೇ ಕುಮಾರನು ಆಗಿರುವುದರಿಂದ ಬಹಳ ಬಾಧೆಪಡುತ್ತಿದ್ದರು. ತಾಯಿ ಬಾಧೆಯನ್ನು ನೋಡಲಾರದೆ ಅಲ್ಲಿಗೆ ಹೋದವರೂ ಸಹ ಕಣ್ಣೀರು ಹಾಕುತ್ತಿದ್ದರು. ಮಗುವಿಗೆ ಹಾವು ಕಚ್ಚಿ ಸತ್ತುಹೋದ ವಿಷಯ ಊರೆಲ್ಲಾ ಹಬ್ಬಿತು. ಆ ವಿಷಯ ಮನೆಯಲ್ಲಿರುವ ಈಶ್ವರ್‌ಗೂ ಸಹ

ತಿಳಿಯಿತು. ಈಶ್ವರ್‌ಗೆ ಆ ವಿಷಯ ತಿಳಿದ ಕೂಡಲೇ ತನ್ನ ಮನೆಯೊಳಗಿನ ಕೆಲಸದವನನ್ನು ಕರೆದು ಆ ಬಾಲಕನನ್ನು ತನ್ನ ಹತ್ತಿರಕ್ಕೆ ತೆಗೆದುಕೊಂಡು ಬನ್ನಿ ಎಂದು ಹೇಳಿ ಕಳುಹಿಸಿದನು. ಆ ಮನೆ ಕೆಲಸದವನು ರೋದಿಸುತ್ತಿರುವ ಆ ಬಾಲಕನ ತಾಯಿತಂದೆಯರಿಗೆ ಆ ವಿಷಯ ಹೇಳಿದನು. ಈಶ್ವರ್ ಎಂದರೆ ಆತನು ದೊಡ್ಡವ್ಯಕ್ತಿ ಎನ್ನುವ ಅಭಿಮಾನ ಎಲ್ಲರಲ್ಲಿ ಇರುವುದರಿಂದ, ಈಶ್ವರ್ ಹೇಳಿದ್ದಾನೆಂದಕೂಡಲೇ ಮುಂದೆ ಹಿಂದೆ ನೋಡದಂತೆ, ಯಾವ ಆಲೋಚನೆ ಮಾಡದಂತೆ, ಸತ್ತುಹೋದ ಮಗುವನ್ನು ಈಶ್ವರ್ ಮನೆಹತ್ತಿರಕ್ಕೆ ತೆಗೆದುಕೊಂಡು ಹೋಗಿದ್ದಾರೆ. ಆ ಮಗು ತಾಯಿತಂದೆಯರ ಹಿಂದೆ ಬಹಳ ಜನ ಹೋಗಿದ್ದಾರೆ. ಈಶ್ವರ್ ಕರೆದಿದ್ದಾನೆಂದರೆ ಏಕೆ ಕರೆದಿದ್ದಾನೋ ಎಂದು, ಆತನ ಮಾತನ್ನು ಗೌರವಿಸಿ ಅಲ್ಲಿಗೆ ಹೋಗಿರುವುದು ನಡೆದಿದೆ. ಈಶ್ವರ್ ಮನೆಹತ್ತಿರಕ್ಕೆ ಹೋದಾಗ ಜನ ಮನೆಯಲ್ಲಿನ ಈಶ್ವರ್‌ಗೆ ಸತ್ತುಹೋದ ಮಗುವನ್ನು ತಂದಿದ್ದೇವೆಂದು ತಿಳಿಸಿದ್ದಾರೆ. ತಕ್ಷಣ ಈಶ್ವರ್ ಹೊರಗೆ ಬಂದು ಎಲ್ಲರನ್ನೂ ನೋಡಿದ್ದಾನೆ. ಎಲ್ಲರೂ ವಿಚಾರವಾಗಿ ಕಾಣಿಸುತ್ತಿದ್ದರೆ, ಕೆಲವರು ಅಳುತ್ತಾ ಕಾಣಿಸಿದ್ದಾರೆ. ಎಲ್ಲರನ್ನೂ ನೋಡಿದ ಈಶ್ವರ್, "ನೀವು ಬಾಧೆಪಡಬೇಕಾದ ಅವಶ್ಯವಿಲ್ಲ. ಈ ಮಗು ಸತ್ತುಹೋಗಿಲ್ಲ, ನಿದ್ರೆ ಮಾಡುತ್ತಿದ್ದಾನೆ. ನಾನು ಎಬ್ಬಿಸುತ್ತೇನೆ ನೋಡಿ ಎಂದು ಮಗು ಹತ್ತಿರಕ್ಕೆ ಹೋಗಿ ಕೈಯಿಂದ ತಟ್ಟಿ "ನಿಮ್ಮ ಅಮ್ಮ ಅಪ್ಪ ಅಳುತ್ತಿದ್ದಾರೆ. ನೀನು ಎಚ್ಚರಗೊಂಡು ಹೊರಗೆ ಬಾ" ಎಂದನು. ಆ ಮಾತು ಹೇಳಿ ಕೈಯಿಂದ ತಟ್ಟಿ ಎಬ್ಬಿಸಿದಾಗ ನಿದ್ರೆಯಿಂದ ಎಚ್ಚರಗೊಂಡವನಂತೆ ಆ ಮಗು ಕಣ್ಣು ತೆರೆದು ನೋಡಿದ್ದಾನೆ. ಆ ಸಂಘಟನೆಯಿಂದ ಅಲ್ಲಿರುವವರೆಲ್ಲಾ ಈಶ್ವರ್‌ನನ್ನು ದೇವರೊಂದಿಗೆ ಸಮಾನವಾಗಿ ಹೊಗಳಿದರು. ಈಶ್ವರ್ ಅವರ ಅಮಾಯಕತ್ವಕ್ಕೆ ನಗಾಡಿ ಮನೆಯೊಳಗೆ ಹೋದನು. ಸ್ವಲ್ಪಹೊತ್ತಿಗೇ ಸತ್ತುಹೋದ ಮಗುವನ್ನು ಈಶ್ವರ್ ಬದುಕಿಸಿದ್ದಾನೆನ್ನುವ ವಿಷಯ ಊರೆಲ್ಲಾ ಹರಡಿಹೋಯಿತು. ಆ ಮಗುವಿನ ತಾಯಿತಂದೆಯರು ಈಶ್ವರ್ ನಿಜಕ್ಕೂ ದೇವರೇ ಎಂದು ಎಲ್ಲರಿಗೂ ಹೇಳತೊಡಗಿದರು. ಜಮೀನ್ದಾರ ರಾವುಬಹದೂರ್ ಸಹ ಈಶ್ವರ್‌ನಲ್ಲಿ ಯಾವುದೋ ದೊಡ್ಡ ಶಕ್ತಿ ಇದೆಯೆಂದು ನಂಬಿ, ಆತನು ತನಗೆ ಮಗನಾಗಿ ಸಿಕ್ಕಿರುವುದು ತಮ್ಮ ಪೂರ್ವಜನ್ಮ ಅದೃಷ್ಟವೆಂದುಕೊಂಡಿದ್ದಾನೆ.

ಸಾಯಂಕಾಲಕ್ಕೆ ಈಶ್ವರ್ ಸತ್ತುಹೋದ ಮಗುವನ್ನು ಬದುಕಿಸಿದ್ದಾನೆಂದು ಜಿಲ್ಲಾದ್ಯಂತ ತಿಳಿದುಹೋಯಿತು. ಅದರಿಂದ ಕೆಲವರು ವಾರ್ತಾ ಪತ್ರಿಕೆಗಳ ಪತ್ರಕರ್ತರು ಬಂದು ಈಶ್ವರ್‌ನ್ನು ಮಗುವನ್ನು ಬದುಕಿಸಿದ ವಿಷಯವನ್ನು ಕುರಿತು ಕೇಳಲು ಆರಂಭಿಸಿದರು. ಯಾರು ಕೇಳಿದರೂ ಎಲ್ಲರಿಗೂ "ಆ ಮಗು ಸತ್ತುಹೋಗಿಲ್ಲ, ನಿದ್ರೆ ಮಾಡುತ್ತಿದ್ದವನನ್ನು ಎಬ್ಬಿಸಿದ್ದೇನೆ, ನಾನು ಸತ್ತುಹೋದವನನ್ನು ಬದುಕಿಸಲಿಲ್ಲ." ಎಂದು ಈಶ್ವರ್ ಒಂದೇ ಉತ್ತರ ಹೇಳುತ್ತಿದ್ದನು. "ಹಾವು ಕಚ್ಚಿ ಸತ್ತುಹೋಗಿರುವುದು ಎಲ್ಲರಿಗೂ ತಿಳಿದಿದೆ ಅಲ್ಲವೆ" ಎಂದು ಪತ್ರಕರ್ತರು ಕೇಳಿದರೆ "ಸತ್ತುಹೋಗಿಲ್ಲವೆಂದು ನಾನು ಹೇಳುತ್ತಿದ್ದೇನಲ್ಲವೆ" ಎಂದು ಉತ್ತರ ಹೇಳುತ್ತಿದ್ದನು. ಆತನು ಹೇಳುವುದು ಯಾರಿಗೂ ಅರ್ಥವಾಗಲಿಲ್ಲ. ಆದರೂ ಅವರವರ ಪತ್ರಿಕೆಗಳಲ್ಲಿ "ಸತ್ತುಹೋದ ಬಾಲಕನನ್ನು ಬದುಕಿಸಿದ ಈಶ್ವರ್" ಎಂದು ಬರೆಯುತ್ತಾ, ಈಶ್ವರ್‌ನನ್ನು ಕೇಳಿದರೆ ನಾನು ಸತ್ತುಹೋದವನನ್ನು ಬದುಕಿಸಲಿಲ್ಲ, ಎಂದು ಉತ್ತರ ಹೇಳಿದಂತೆ ಕೂಡಾ ಬರೆದಿದ್ದಾರೆ. ಈ ವಾರ್ತೆ ಎರಡನೆ ದಿನ ಸ್ಟೇಟ್‌ನಲ್ಲಿ ಎಲ್ಲರಿಗೂ ತಿಳಿದುಹೋಯಿತು.

*********************************

(ರಾಜಯೋಗಾನಂದ ಸ್ವಾಮಿಗೆ ರಾಘವ ಪತ್ರಿಕೆಗಳಲ್ಲಿ ಬಂದಿರುವ ವಾರ್ತೆಯನ್ನು ತೋರಿಸಿ ಹೀಗೆ ಕೇಳಿದನು.)

**ರಾಘವ :–** ಸ್ವಾಮೀ! ನಾವು ಅಷ್ಟಗ್ರಹ ಕೂಟಮಿ ದಿನದಂದು ಹುಟ್ಟಿದ ಬಾಲಕನೆಂದು ಯಾರನ್ನಾದರೇ ಅಂದುಕೊಳ್ಳುತ್ತಿದ್ದೇವೊ ಆತನೇ ಈಶ್ವರ್. ಈಶ್ವರ್‌ಗೆ ಇಂದಿಗೆ ಹದಿನೈದು ಸಂವತ್ಸರಗಳ ವಯಸ್ಸೇ. ಆ ಹುಡುಗ ನಿನ್ನೆಯ ದಿನ ಹಾವು ಕಚ್ಚಿ ಸತ್ತುಹೋದ ಮೂರು ಸಂವತ್ಸರಗಳ ಮಗುವನ್ನು ಕೆಲವು ಗಂಟೆಗಳ ನಂತರ ಬದುಕಿಸಿದ್ದಾನೆಂದು ವಾರ್ತೆ ಬರೆದಿದ್ದಾರೆ. ಸತ್ತುಹೋದವನನ್ನು ಬದುಕಿಸುವುದಕ್ಕೆ ಸಾಧ್ಯವಾಗುತ್ತದಾ? ಅದನ್ನು ಕುರಿತು ಕೇಳಿದ ಪತ್ರಕರ್ತರಿಗೆ "ಆತನು ಸತ್ತುಹೋಗಲಿಲ್ಲ ನಿದ್ರೆಹೋಗುವವನನ್ನು ಎಬ್ಬಿಸಿದ್ದಾನೆ" ಎಂದಿದ್ದಾನಂತೆ. ಈ ಮಾತು ವಾಸ್ತವವೇನಾ?

**ರಾಜಯೋಗಾನಂದ :–** ಶ್ವಾಸ ಆಡದಷ್ಟು ಮಾತ್ರಕ್ಕೆ ಸತ್ತುಹೋಗಿದ್ದಾನೆಂದುಕೊಳ್ಳುವುದು

ತಪ್ಪೇ ಆಗುತ್ತದೆ. ಒಂದು ವಿಧವಾಗಿ "ಈತನು ಸತ್ತುಹೋಗಲಿಲ್ಲ. ನಿದ್ರೆ ಹೋದವನನ್ನು ಎಬ್ಬಿಸಿದ್ದೇನೆ" ಎಂದು ಈಶ್ವರ್ ಹೇಳಿದ ಮಾತು ವಾಸ್ತವ. ನಾವು ನೋಡುತ್ತಿದ್ದಂತೆ ಎಷ್ಟೋ ಮಂದಿ ಸತ್ತುಹೋಗಿದ್ದಾರಲ್ಲವೆ! ಆದರೆ, ವಾಸ್ತವವಾಗಿ ಅಷ್ಟು ಜನರಲ್ಲಿ ಕೆಲವರೆ ಸತ್ತುಹೋಗಿದ್ದಾರೆ. ಸ್ವಲ್ಪ ಜನ ಸತ್ತುಹೋದಂತೆ ಕಾಣಿಸಿದರೂ, ಅವರ ಶರೀರದಲ್ಲಿ ಕದಲಿಕೆಗಳು, ಶ್ವಾಸ ನಿಂತುಹೋದರೂ ಅವರು ನಿಜವಾಗಿ ಸತ್ತುಹೋಗಲಿಲ್ಲ. ಅವರು ಸತ್ತುಹೋಗದಂತೆ ಶರೀರದಲ್ಲಿ ಸಜೀವವಾಗಿಯೇ ಸ್ವಲ್ಪ ಕಾಲ ಇರುತ್ತಾರೆ. ಆ ವಿಷಯ ಬಹಳಮಂದಿ ಜ್ಞಾನಿಗಳಿಗೂ ಸಹ ತಿಳಿಯದು. ಶ್ವಾಸ ನಿಂತುಹೋಗಿದೆ, ಚೈತನ್ಯ ನಿಂತುಹೋಗಿದೆ, ಸತ್ತುಹೋಗಿದ್ದಾನೆಂದು ಅಜ್ಞಾನಿಗಳು ಅಂದುಕೊಂಡಂತೇ ಆಧ್ಯಾತ್ಮಿಕ ರಂಗದಲ್ಲಿ ಸ್ವಲ್ಪ ತಿಳಿದವರು ಸಹ ಅಂದುಕೊಳ್ಳುತ್ತಿರುವರು. ಒಬ್ಬ ಆಧ್ಯಾತ್ಮಿಕತಜ್ಞನೆಂದು ಎನಿಸಿಕೊಂಡ ವ್ಯಕ್ತಿ ಸಹ ತನ್ನ ತಾತನವರು ನಿಜವಾಗಿ ಸತ್ತುಹೋಗದಿದ್ದರೂ, ಶ್ವಾಸ ನಿಂತುಹೋದಕೂಡಲೇ ಸತ್ತುಹೋಗಿದ್ದಾನೆಂದುಕೊಂಡು ತನ್ನ ಪುಸ್ತಕದಲ್ಲಿ ಹೀಗೆ "ನಮ್ಮ ತಾತನವರು ಸತ್ತುಹೋಗುವುದು, ಸ್ಮಶಾನಕ್ಕೆ ತೆಗೆದುಕೊಂಡು ಹೋಗುವ ಮಧ್ಯದಲ್ಲಿ ಇಳಿಸಿದಾಗ, ಪುನಃ ಆತನು ಶರೀರದೊಳಗೆ ಬಂದು ಎದ್ದು, ಮನೆಗೆ ಬಂದ ನಂತರ ಸ್ವಲ್ಪ ಕಾಲ ಬದುಕಿದ್ದಾರೆ" ಎಂದು ಬರೆದಿದ್ದಾರೆ. ಅಷ್ಟೋ, ಇಷ್ಟೋ ತಿಳಿದವರು ಸಹ ಹೀಗೆ ತಪ್ಪಾಗಿ ಅರ್ಥೈಸಿಕೊಳ್ಳುತ್ತಿದ್ದಾರೆ. ವಾಸ್ತವವಾಗಿ ಒಂದು ಸಲ ಶರೀರದಲ್ಲಿಂದ ಜೀವಿಯು ಹೊರಗೆ ಹೋಗಿ ಸತ್ತುಹೋದರೇ ಪುನಃ ಆ ಶರೀರದೊಳಗೆ ಬರುವುದಕ್ಕೆ ಸಾಧ್ಯವಿಲ್ಲ. ಶರೀರದಲ್ಲಿಂದ ಜೀವಿಯು ಹೊರಗೆ ಹೋಗದಂತಿರುವಾಗ ಶರೀರ ಮೃತಿ ಹೊಂದಿದಂತೆ ಕಾಣಿಸಿದರೂ, ಆತನು ಶರೀರದಲ್ಲೇ ಇದ್ದಾನೆ, ಆದ್ದರಿಂದ ಪುನಃ ಮೇಲೇಳುವನು. ಈ ವಿಷಯವನ್ನು ವಿವರವಾಗಿ "ಮರಣ ರಹಸ್ಯ" ಎನ್ನುವ ಗ್ರಂಥದಲ್ಲಿ ಬರೆಯಲಾಗಿದೆ. ಇನ್ನೊಂದು ವಿಷಯ ಏನೆಂದರೆ! ಹಾವು ಕಚ್ಚಿ ಮೃತಿಹೊಂದಿದವರ ಶರೀರದಲ್ಲಿ ಜೀವಿಯು ಶರೀರವನ್ನು ಬಿಟ್ಟು ಹೊರಗೆ ಹೋಗದಂತೆ ಸುಮಾರು 4 ಗಂಟೆಗಳಿಂದ 24 ಗಂಟೆಗಳವರೆಗು ಇರಬಲ್ಲನು. ಆದ್ದರಿಂದ ಹಾವುಕಡಿತದಿಂದ ಮರಣಿಸಿದಂತೆ ಕಾಣಿಸುತ್ತಿದ್ದ ಮೂರುವರ್ಷ ಬಾಲಕನನ್ನು ಈಶ್ವರ್ ಎಬ್ಬಿಸಿದ್ದಾನೆ. ಅಂತಹ ಮರಣವನ್ನು "ತಾತ್ಕಾಲಿಕ ಮರಣ"

ಎನ್ನುತ್ತಾರೆಂದು ಮರಣ ರಹಸ್ಯ ಗ್ರಂಥದಲ್ಲಿ ಸಹ ತಿಳಿಸಿದ್ದೇವೆ. ಈ ವಿಷಯ ಬಹಳ ಮಂದಿ ಮೇಧಾವಿಗಳಿಗು ಸಹ ತಿಳಿಯದು. ಆದ್ದರಿಂದ ಇದನ್ನು ಮರಣ ರಹಸ್ಯ ಎನ್ನುತ್ತಿದ್ದೇವೆ. ಈಶ್ವರನದು ಪ್ರತ್ಯೇಕವಾದ ಜಾತಕ. ಆದ್ದರಿಂದ ಯಾರಿಗೂ ತಿಳಿಯದ ವಿಷಯಗಳು ಆತನಿಗೆ ಅವಗಾಹನೆಯಲ್ಲಿ ಇವೆ. ಹಾಗೆಯೇ ಯಾರಿಗೂ ಇಲ್ಲದ ಶಕ್ತಿಗಳು ಸಹ ಈಶ್ವರ್‌ಗೆ ಇವೆ. ಈಶ್ವರ್‌ಗೆ ಈಗ 15 ಸಂವತ್ಸರಗಳು ನಡೆಯುತ್ತಿವೆ. ಆತನಿಗೆ 15 ಸಂವತ್ಸರಗಳು ಪೂರ್ತಿಯಾಗಿ ಮುಗಿದು 16ನಲ್ಲಿ ಬಿದ್ದಾಗ ಆರು ತಿಂಗಳು ಪ್ರತಿ ಅಮಾವಾಸ್ಯೆಗೂ ಆತನಲ್ಲಿ ವಿಶೇಷ ಶಕ್ತಿಗಳು ಪ್ರವೇಶಿಸುತ್ತದೆ. ಆತನಲ್ಲಿ ಶಕ್ತಿಗಳು ಕೆಲವು ಈಗಾಗಲೇ ಇವೆ.

ಈಶ್ವರ್‌ವೊಂದರ ಪ್ರತಿ ವಿಷಯವನ್ನು ತಪಸ್ವಿಬಾಬಾ ಗಮನಿಸುತ್ತಾ ಇದ್ದನು. ಬಾಬಾ ಅಂದುಕೊಂಡ ಕೆಲಸಕ್ಕೆ ಕೆಲವು ತಿಂಗಳುಗಳೇ ಬಾಕಿ ಇವೆ. ಆತನಿಗೆ ಮುಖ್ಯವಾಗಿ ಕೆಲಸ ಮಾಡಿಕೊಡುವ ಮುನೆಪ್ಪ ಮನುಷ್ಯರು ಬ್ಯಾಂಕ್ ದರೋಡೆಯಲ್ಲಿ ಪೊಲೀಸರಿಗೆ ಸಿಕ್ಕಿದ್ದಾರೆ. ಕೊನೆಗೆ ಮುನೆಪ್ಪ, ಆತನ ಅನುಚರರು ಕೆಲವರು, ಇಬ್ಬರು ಮಾಂತ್ರಿಕರು ಬಾಬಾಕಡೆ ಉಳಿದಿದ್ದಾರೆ. ಮುನೆಪ್ಪ ಹೊರಗೆ ಬಾರದಂತೆ ಯಾರಿಗೂ ತಿಳಿಯದ ಜಾಗಕ್ಕೆ ಸೇರಿಹೋಗಿದ್ದಾನೆ. ಒಟ್ಟಿನಲ್ಲಿ ಬಾಬಾ ಬಲ ಕಡಿಮೆ ಆಗಿದೆಯೆಂದುಕೊಳ್ಳಬಹುದು.

**ರಾಘವ :–** ಸ್ವಾಮೀ, ಈಶ್ವರ್‌ಗೆ ಹದಿನೈದನೆ ವರ್ಷ ಮುಗಿಯುವುದಕ್ಕೆ ಇನ್ನೂ ಎಷ್ಟು ಕಾಲವಿದೆ?

**ರಾಜಯೋಗಾನಂದ :–** ಇನ್ನು ಎರಡು ತಿಂಗಳು ಮಾತ್ರವೇ ಇದೆ. ಮೂರನೆ ತಿಂಗಳಿಂದ 16ನೇ ವರ್ಷ ಪ್ರಾರಂಭವಾಗುತ್ತದೆ. 16ನೇ ವರ್ಷ ಮೂರು ಅಮಾವಾಸ್ಯೆಗಳ ನಂತರ ನಾಲ್ಕು, ಐದು, ಆರು ತಿಂಗಳಲ್ಲಿ ಬರುವ ಅಮಾವಾಸ್ಯೆಗಳಲ್ಲಿ ಬರುವ ಶಕ್ತಿಗಳು ಬಹಳ ದೊಡ್ಡವು. ಆಗ ತಕ್ಕಂತೆ ನಾವು ಪ್ರವರ್ತಿಸಬೇಕು. ತಪಸ್ವಿಬಾಬಾ ಸಹ ಆಗಲೇ ನಮ್ಮನ್ನು ಅಡ್ಡ ತೊಲಗಿಸಿಕೊಳ್ಳಬೇ ಕೆಂದು ನೋಡುತ್ತಾನೆ. ಅಲ್ಲಿಯವರೆಗು ನಮ್ಮ ಉದ್ದೇಶ ಆತನಿಗೆ ತಿಳಿಯದು. ನಾವು ಆತನಿಗೆ ವಿರುದ್ಧವಾಗಿ

ಇದ್ದೇವೆಂದು ತಿಳಿದ ಕೂಡಲೇ ಬಾಬಾನಿಂದ ನಮಗೆ ಕೆಲವು ಕಷ್ಟಗಳು ಬರುವುದು ತಪ್ಪುವುದಿಲ್ಲ.

*********************************

(ವೆಂಕೂ, ನೂಕಾ ಮುಂತಾದ ಆರುಮಂದಿ ಪೋಲೀಸರಿಗೆ ಸಿಗುವುದು ಮುನೆಪ್ಪನಿಗೆ ಚೇತರಿಸಿಕೊಳ್ಳದಂತಹ ಪೆಟ್ಟಾಯಿತು. ಬ್ಯಾಂಕು ದರೋಡೆಯಲ್ಲಿ ಲಾಕರ್‌ನಲ್ಲಿ ದೋಚಿತ ಆಭರಣಗಳೊಂದಿಗೆ ಸಹ ರೆಡ್‌ಹ್ಯಾಂಡೆಡಾಗಿ ಸಿಕ್ಕಿರುವುದು ಹೇಗೆ ನಡೆದಿದೆಯೋ ಮುನೆಪ್ಪನಿಗೆ ಅರ್ಥವಾಗಲಿಲ್ಲ. ಧನುಷ್‌ಅವರು ದೊಡ್ಡ ಚತುರರೆಂದುಕೊಂಡು ಅವರಹಿಂದೆ ತನ್ನವರನ್ನು ಕಳುಹಿಸುವುದು ತಪ್ಪಾಯಿತೆಂದು ಮುನೆಪ್ಪ ಅಂದುಕೊಂಡಿದ್ದಾನೆ. ವಾಸ್ತವಕ್ಕೆ ಧನುಷ್ ಪೋಲೀಸ್ ಮನುಷ್ಯನೆಂದು ಮುನೆಪ್ಪ ಆಗಲೀ, ಮುನೆಪ್ಪ ಮನುಷ್ಯರಾಗಲೀ ಗ್ರಹಿಸಲಿಲ್ಲ. ಕೈಗೆ ಗ್ಲೋವ್ಸ್ ಹಾಕಿಕೊಳ್ಳಬೇಕೆಂದು ಹೇಳುವುದೂ, ಐರನ್ ಮಿಲ್ಟಿಂಗ್ ಯಾಸಿಡ್ ಪೇಸ್ಟು ತೆಗೆದುಕೊಂಡು ಬಂದಿರುವುದರಿಂದ ಮುನೆಪ್ಪ, ಧನುಷ್‌ನನ್ನು ಪೂರ್ತಿಯಾಗಿ ನಂಬಿದ್ದಾನೆ. ಅವರಿಗೆ ಎಲ್ಲೂ ಅನುಮಾನ ಬಾರದಂತೆ ಧನುಷ್ ಪ್ರವರ್ತಿಸಿದನು. ಕಾರಿನಲ್ಲಿ ತನ್ನ ಮನುಷ್ಯನನ್ನು ಇರಿಸುವುದು, ಕಬ್ಬಿಣದ ಕಂಬಿಗಳು ಕಿತ್ತಿದ ಕಿಟಕಿ ಹತ್ತಿರವೂ ಸಹ ತನ್ನ ಮನುಷ್ಯನನ್ನೇ ಇರಿಸುವುದರಿಂದ ಹೊರಗೆ ಪೋಲೀಸರು ಬಂದರೂ ಸಹ ಮುನೆಪ್ಪ ಮನುಷ್ಯರಿಗೆ ತಿಳಿಯದಂತೆ ಹೋಯಿತು. ಕಿಟಕಿ ಹತ್ತಿರ, ಕಾರಿನಲ್ಲಿ ಇರುವುದು ಪೋಲೀಸ್ ಮನುಷ್ಯರೆಂದು ಮುನೆಪ್ಪ ಮನುಷ್ಯರಿಗೆ ಯಾರಿಗೂ ತಿಳಿದಿಲ್ಲ. ನಂತರ ಹಾಲ್‌ನಲ್ಲಿ ಸಹ ಒಬ್ಬ ಮನುಷ್ಯ ಧನುಷ್‌ಗೆ ಸಂಬಂಧಿಸಿದವನು ಇರುವುದರಿಂದ ಆತನು ತನ್ನ ಪಕ್ಕದಲ್ಲಿರುವ ಮುನೆಪ್ಪ ಮನುಷ್ಯರ ಗಮನವನ್ನು ಪಕ್ಕಕ್ಕೆ ಮರಳಿಸಿ ಪೋಲೀಸರು ಬ್ಯಾಂಕಿನೊಳಗೆ ಬರುವವರೆಗು ನೋಡಿಕೊಳ್ಳದಂತೆ ಮಾಡಿದ್ದಾನೆ. ಧನುಷ್ ಯೋಜನೆಯ ಪ್ರಕಾರ, ಮುನೆಪ್ಪ ಮನುಷ್ಯರನ್ನು ಅಲ್ಲಿ ಸಿಗುವಂತೆ ಮಾಡಿದ್ದಾನೆ. ಮೊದಲೇ ಎಲ್ಲ ವಿಷಯಗಳು ಯಸ್.ಪಿ. ಯೊಂದಿಗೆ ಸಂಪರ್ಕಿಸಿ ಸರಿಯಾದ ಸಮಯದ ಪ್ರಕಾರ ಪೋಲೀಸರನ್ನು ಬರಲು ಹೇಳಿರುವು ದರಿಂದ, ಹೊರಗೆ ಕಾಯುತ್ತಿರುವ ವ್ಯಕ್ತಿಗಳು ಪೋಲೀಸಿನವರೇ, ಆಗಿರುವುದರಿಂದ

ಮುನೆಪ್ಪ ಮನುಷ್ಯರು ಸುಲಭವಾಗಿ ಸಿಕ್ಕಿದ್ದಾರೆ. ಅವರೊಂದಿಗೆ ಧನುಷ್‌ನ್ನು, ಆತನ ಮನುಷ್ಯರನ್ನೂ ಸಹ ಪೊಲೀಸ್ ಕಸ್ಟಡಿಯೊಳಗೆ ಕಳುಹಿಸಿರುವುದರಿಂದ, ಅರೆಸ್ಟಾದ ನಂತರ ಸಹ ಮುನೆಪ್ಪ ಮನುಷ್ಯರಿಗೆ ಧನುಷ್ ಮೇಲೆ ಅನುಮಾನ ಬರಲಿಲ್ಲ. ಮುನೆಪ್ಪನಿಗೂ ಸಹ ಧನುಷ್ ಮೇಲೆ ಸ್ವಲ್ಪವೂ ಅನುಮಾನ ಬರಲಿಲ್ಲ.)

*********************************

(ತಪಸ್ವಿ ಬಾಬಾ ಈಶ್ವರ್‌ಗೆ ಹದಿನಾರನೇ ಸಂವತ್ಸರ ಬರುತ್ತಿರುವುದರಿಂದ ತಾನು ಮಾಡಬೇಕಾದ ಕೆಲಸಕ್ಕಾಗಿ ಮೊದಲಿನಿಂದಲೇ ಯೋಜನೆಗಳನ್ನು ತಯಾರು ಮಾಡಿಕೊಂಡಿದ್ದಾನೆ. ತಾನು ರಚಿಸಿದ ಯೋಜನೆಗಳನ್ನು ಈಡೇರಿಸುವುದಕ್ಕೆ ಇಬ್ಬರು ಮಾಂತ್ರಿಕರನ್ನು ಉಪಯೋಗಿಸಿಕೊಳ್ಳಬೇಕೆಂದುಕೊಂಡಿದ್ದಾನೆ. ಆದ್ದರಿಂದ ಮಾಂತ್ರಿಕರೊಂದಿಗೆ ಮೊದಲೇ ಮಾತನಾಡಿ ಮುಂಬರುವ ಸಮಯಗಳಲ್ಲಿ ತಾವು ಮಾಡುತ್ತಿರುವ ಕಾರ್ಯಗಳನ್ನು ಕುರಿತು ಮೊದಲೇ ವಿವರಿಸಿ ಹೇಳಬೇಕೆಂದು ಕೊಂಡಿದ್ದಾನೆ. ತಾನು ಹೊರಗೆ ಹೋಗದಂತೆ, ಯಾರಿಗೂ ಯಾವ ಅನುಮಾನ ಬಾರದಂತೆ, ತನ್ನ ಕೆಲಸವನ್ನು ಇಬ್ಬರು ಮಾಂತ್ರಿಕರಿಂದಲೇ ಮಾಡಿಸಬೇಕೆಂದು ಕೊಂಡಿದ್ದಾನೆ. ನಂತರ ತನ್ನ ಹತ್ತಿರವಿರುವ ಕೆಲವು ಶಕ್ತಿಗಳನ್ನು ಸಹ ಅವರ ವಶದಲ್ಲಿ ಇಟ್ಟು, ಅವರಿಂದ ಎಲ್ಲ ಕೆಲಸಗಳು ಸಮಯಾನುಕೂಲವಾಗಿ ಮಾಡಿಸಿ ಕೊಳ್ಳುವುದು ಒಳ್ಳೆಯದೆಂದುಕೊಂಡಿದ್ದಾನೆ. ಅದಕ್ಕಾಗಿ ಮುನೆಪ್ಪನೊಂದಿಗೆ ತನ್ನ ಹತ್ತಿರಕ್ಕೆ ಇಬ್ಬರು ಮಾಂತ್ರಿಕರನ್ನು ತನ್ನ ಮನುಷ್ಯನೊಂದಿಗೆ ಕಳುಹಿಸು ಎಂದು ಹೇಳಿದ್ದಾನೆ. ಅದಕ್ಕೆ ಮುನೆಪ್ಪ ತನ್ನ ಮನುಷ್ಯನನ್ನು ಕಳುಹಿಸಿ ಇಬ್ಬರು ಮಾಂತ್ರಿಕರನ್ನು ತನ್ನ ಹತ್ತಿರಕ್ಕೆ ಕರೆಸಿಕೊಂಡಿದ್ದಾನೆ. ಮಾಂತ್ರಿಕರು ಮುನೆಪ್ಪನಿಂದ ತಮ್ಮ ಜೀವನದಲ್ಲಿ ಎಂದೂ ನೋಡದ ಹಣವನ್ನು ನೋಡಿರುವುದರಿಂದ, ಮುನೆಪ್ಪ ಕರೆದ ಕೂಡಲೇ ಇಬ್ಬರೂ ಸಂತೋಷದಿಂದ ಬಂದಿದ್ದಾರೆ. ಮುನೆಪ್ಪನವರೆಗೇ ಪರಿಮಿತವಾದ ಮಾಂತ್ರಿಕರು ಈ ಸಲ ತಪಸ್ವಿಬಾಬಾವರೆಗು ಹೋಗುವುದಕ್ಕೆ ಅವಕಾಶ ಬಂದಿದೆ. ಮುನೆಪ್ಪ ಮಾಂತ್ರಿಕರನ್ನು ಒಂದು ದಿನ ತನ್ನ ಹತ್ತಿರವೇ ಇಟ್ಟುಕೊಂಡು ತಪಸ್ವಿ ಬಾಬಾ ಹತ್ತಿರಕ್ಕೆ ಕಳುಹಿಸುತ್ತಿದ್ದೇನೆಂದು, ಅಲ್ಲಿಗೆ ಹೋದ ನಂತರ ಬಾಬಾ ಹತ್ತಿರ

ಬಹಳ ಭಯದಿಂದ ಇದ್ದು, ವಿನಯದಿಂದ ಮಾತನಾಡಬೇಕೆಂದು, ಆತನು ಏನು ಹೇಳಿದರೇ ಅದನ್ನು ಜಾಗ್ರತೆಯಿಂದ ಕೇಳಿ, ಏನು ಮಾಡೆಂದರೇ ಸರಿ ಅದನ್ನೇ ಮಾಡುತ್ತೇವೆಂದು, ನಂತರ ತನ್ನ ಹತ್ತಿರಕ್ಕೆ ಬಾ ಎಂದು ಹೇಳಿ, ತನ್ನ ಮನುಷ್ಯನಿಂದ ಇಬ್ಬರನ್ನೂ ತಪಸ್ವಿಬಾಬಾ ಹತ್ತಿರಕ್ಕೆ ಕಳುಹಿಸಿದ್ದಾನೆ. ಮುನೆಪ್ಪ ತನ್ನ ಮನುಷ್ಯನಿಂದ ಕಳುಹಿಸಿದ ಮಾಂತ್ರಿಕರನ್ನು ಬಾಬಾ ತನ್ನ ಮಂದಿರದೊಳಗೆ ಏಕಾಂತವಾಗಿರುವಾಗ ಕರೆಸಿಕೊಂಡನು. ಆ ವಿಧವಾಗಿ ಯಾರೂ ಇಲ್ಲದಿರುವಾಗ ಬಾಬಾನನ್ನು ಭೇಟಿಯಾದ ಮಾಂತ್ರಿಕರೊಂದಿಗೆ ಹೀಗೆ ಮಾತನಾಡಿದನು.)

**ತಪಸ್ವಿಬಾಬಾ :–** ಭವಿಷ್ಯತ್ತಿನಲ್ಲಿ ಯಾರೊಂದಿಗೂ ನೀವು ನನ್ನ ಹತ್ತಿರಕ್ಕೆ ಬಂದು ಮಾತನಾಡಿದಂತೆ ಹೇಳಬಾರದು. ಅಷ್ಟೇ ಅಲ್ಲ ಇಲ್ಲಿ ನಾನು ನಿಮಗೆ ಹೇಳುವ ವಿಷಯಗಳು ಬಹಳ ರಹಸ್ಯವಾದವು. ಆದ್ದರಿಂದ ಅವುಗಳನ್ನು ಎಲ್ಲೂ ಯಾರಿಗೂ ತಿಳಿಯದಂತೆ ನಿಮ್ಮ ಹತ್ತಿರವೇ ಇಟ್ಟುಕೊಳ್ಳಬೇಕು. ನಾನು ಮಾತು ಮಾತಿಗೂ ಭೇಟಿಮಾಡಿ ಮಾತನಾಡುವ ಅವಕಾಶ ಇರುವುದಿಲ್ಲ. ಆದ್ದರಿಂದ ನಿಮಗೆ ವಿಷಯವೆಲ್ಲವನ್ನೂ ಈಗ ಒಂದೇ ಸಲ ಹೇಳುತ್ತೇನೆ. ಆದ್ದರಿಂದ ಕೇಳಿದ ವಿಷಯವೆಲ್ಲವನ್ನೂ ಈಗ ಜಾಗ್ರತೆಯಿಂದ ನೆನಪಲ್ಲಿಟ್ಟುಕೊಳ್ಳಬೇಕು. ನಿಮಗೆ ಏನಾದರೂ ಅರ್ಥವಾಗದ ವಿಷಯಗಳಿದ್ದರೇ ಈಗಲೇ ಕೇಳಿ ತಿಳಿದುಕೊಳ್ಳಿ. ಈಗ ನಾನು ಕೇಳಿರುವುದಕ್ಕೆ ಉತ್ತರವನ್ನು ಹೇಳಿ. ನಿಮಗೆ ದೇವತೆಗಳು ಯಾರಾದರೂ ವಶದಲ್ಲಿದ್ದಾರಾ?

**ಮಲ್ಲಯ್ಯತಾತ :–** ನನಗೆ ಕಾಟೇರಿ, ಭಗಳಾಮುಖಿ, ಕರ್ಣಪಿಶಾಚಿ, ಮುವ್ವರೂ ನನ್ನ ವಶದಲ್ಲಿ ಇದ್ದಾರೆ.

**ತಪಸ್ವಿಬಾಬಾ :–** ಮಂತ್ರ ಯೋಗಗಳಾಗಲೀ, ಮಂತ್ರ ಪ್ರಯೋಗಗಳಾಗಲೀ ಎಷ್ಟು ತಿಳಿದಿವೆ?

**ಮಲ್ಲಯ್ಯತಾತ :–** ನನಗೆ ಎರಡೂ ಸೇರಿಸಿ ನೂರುವರೆಗು ತಿಳಿದಿವೆ. ಪ್ರಸ್ತುತ ದೇಶದಲ್ಲಿ ನನಗೆ ತಿಳಿದಷ್ಟು ತಂತ್ರಗಳು ತಿಳಿದವರು ಇಲ್ಲ.

**ತಪಸ್ವಿಬಾಬಾ :–** ಬದನಿಕೆಗಳು ಎಷ್ಟು ಇವೆ?

**ಮಲ್ಲಯ್ಯತಾತ :–** ನನ್ನ ಹತ್ತಿರ ಮುಖ್ಯವಾದವು ನಾಲ್ಕು ಬದನಿಕೆಗಳು ಮಾತ್ರವೇ ಇವೆ. ಮೂಲಿಕೆಗಳು ಅರವತ್ತರವರೆಗು ತಿಳಿದಿವೆ.

**ತಪಸ್ವಿಬಾಬಾ :–** ನಾಗಭೂಷಣ! ನಿನ್ನ ಹತ್ತಿರ ವಶದಲ್ಲಿರುವವರಿದ್ದಾರಾ? ನಿನಗೆ ಏನು ತಿಳಿದಿವೆಯೊ, ಏನೇನು ಇವೆಯೊ ಹೇಳು.

**ನಾಗಭೂಷಣ :–** ನನಗೆ ಯಾರೂ ವಶದಲ್ಲಿ ಇಲ್ಲ. ಮಂತ್ರ ಕಿಟುಕುಗಳೆಂದರೆ ಎರಡು ವಿಧಗಳು ಸೇರಿ ನಲವತ್ತರವರೆಗು ಇವೆ. ಬದನಿಕೆಗಳು ಆರು ಇವೆ, ಮೂಲಿಕೆಗಳು ಸುಮಾರು ನಲವತ್ತರವರೆಗು ತಿಳಿದಿವೆ.

**ತಪಸ್ವಿಬಾಬಾ :–** ನೀವು ಹೇಳಿರುವುದನ್ನನುಸರಿಸಿ ನೀವು ಇಬ್ಬರೂ ಸೇರಿದರೆ ನಿಮ್ಮನ್ನು ಮೀರಿದವರು ಯಾರೂ ಇರುವುದಿಲ್ಲ. ಅಷ್ಟೇ ಅಲ್ಲ ನನ್ನ ಹತ್ತಿರವಿರುವ ಬಹಳ ಜನ ಕ್ಷುದ್ರದೇವತೆಗಳನ್ನು ನಿಮಗೆ ವಶದಲ್ಲಿ ಇದ್ದು, ನೀವು ಹೇಳಿದಂತೆ ಮಾಡಲು ಹೇಳಿ ಕಳುಹಿಸುತ್ತೇನೆ. ಆದ್ದರಿಂದ ನಿಮಗೆ ಯಾವ ಕ್ಷುದ್ರದೇವತೆಗಳಿಂದಲೂ ತೊಂದರೆ ಆಗದಂತೆ ನಾನು ನಿಮ್ಮ ಹಿಂದೆ ಕಳುಹಿಸುವ ಶಕ್ತಿಗಳು ನೋಡಿಕೊಳ್ಳುತ್ತವೆ.

**ಮಲ್ಲಯ್ಯತಾತ :–** ಬಾಬಾ! ನಮಗೆ ಚಿಕ್ಕ ಅನುಮಾನ, ಅದು ಏನೆಂದರೆ ನಮ್ಮ ವಶದಲ್ಲಿರುವ ಶಕ್ತಿಗಳಿಗಿರುವ ನಿಮಯಗಳ ಪ್ರಕಾರ ನಾವು ನಡೆದುಕೊಳ್ಳುತ್ತಿದ್ದೇವೆ. ಈಗ ನೀವು ನಮ್ಮ ಹಿಂದೆ ಕೆಲವು ಶಕ್ತಿಗಳನ್ನು ಕಳುಹಿಸಿದರೆ ಅವುಗಳಿಗಿರುವ ನಿಯಮದ ಪ್ರಕಾರ ನಡೆದುಕೊಳ್ಳಬೇಕಾ, ಬೇಡವಾ?

**ತಪಸ್ವಿಬಾಬಾ :–** ನಾನು ನನ್ನ ವಶದಲ್ಲಿರುವ ಶಕ್ತಿಗಳನ್ನು ನಿಮ್ಮ ಮಾತು ಕೇಳುವಂತೆ ಮಾಡಿ ಕಳುಹಿಸುತ್ತಿದ್ದೇನೆ. ಅಷ್ಟು ಮಾತ್ರಕ್ಕೆ ಅವುಗಳ ನಿಯಮವನ್ನು ನೀವು ಪಾಟಿಸಬೇಕಾದ ಕೆಲಸವಿಲ್ಲ. ಅವುಗಳ ನಿಯಮಗಳನ್ನು ನಾನು ಪಾಟಿಸುತ್ತೇನೆ, ನಿಮಗೆ ಸಂಬಂಧವಿಲ್ಲ. ಈಗ ನಿಮಗೆ ಹೇಳುವ ವಿಷಯವನ್ನು ಜಾಗ್ರತೆಯಿಂದ ಕೇಳಿರಿ. ಇಲ್ಲಿಗೆ ಸುಮಾರು 16 ಸಂವತ್ಸರಗಳ ಕೆಳಗೆ ಅಷ್ಟಗ್ರಹ ಕೂಟಮಿ ನಡೆದಿದೆ. ನೀವು ಮಾಂತ್ರಿಕರಾದ್ದರಿಂದ ನಿಮಗೆ ಆ ವಿಷಯ ಚನ್ನಾಗಿ ಜ್ಞಾಪಕವಿರುತ್ತದೆ. ಆ

ಸಮಯದಲ್ಲಿ ಮೊದಲು ಹುಟ್ಟಿದ ಗಂಡು ಶಿಶುವಿಗೆ ಕೆಲವು ಪ್ರತ್ಯೇಕವಾದ ಶಕ್ತಿಗಳು ಇರುತ್ತವೆ. ನಾವು ಮಂತ್ರಸಾಧನೆ ಮಾಡಿದರೂ ಲಭಿಸದ ಶಕ್ತಿಗಳು ಆತನಿಗೆ ಯಾವ ಸಾಧನೆ ಇಲ್ಲದಂತೆ ಇರುತ್ತವೆ. ಆತನಿಗಿರುವ ಶಕ್ತಿಗಳು ನಮಗೆ ಲಭಿಸಬೇಕೆಂದರೆ ಆತನಿಗೆ 16ನೇ ಸಂವತ್ಸರ ಬರುವವರೆಗು ಕಾದುಕೊಂಡು ಇರಬೇಕಾದ್ದೇ. ಆ ಬಾಲಕನ ಹೆಸರು ಈಶ್ವರ್, ಆ ಬಾಲಕನು ನಮ್ಮ ಜಿಲ್ಲೆಯಲ್ಲೇ ಧನಿಕನಾಗಿ ಹೆಸರುಪಡೆದ ರಾವುಬಹದೂರ್ ಜಮೀನ್ದಾರನ ಮನೆಯಲ್ಲಿ ದತ್ತು ಪುತ್ರನಾಗಿ ಬೆಳೆದಿದ್ದಾನೆ. ಆತನಿಗೆ ಹದಿನಾರನೆ ಸಂವತ್ಸರ ಈ ತಿಂಗಳಿಂದ ಪ್ರಾರಂಭವಾಗುತ್ತಿದೆ. ಈ ಸಂವತ್ಸರದಲ್ಲಿ ಆತನಿಗೆ ಇಲ್ಲಿಯವರೆಗು ಇರುವ ಶಕ್ತಿಗಳೇ ಅಲ್ಲದೇ ಹೊಸ ಶಕ್ತಿಗಳು ಬಹಳ ಬರುತ್ತವೆ. ಆತನಿಗೆ ಬರುವ ಶಕ್ತಿಗಳನ್ನು ನಾವು ಆತನಿಂದ ಸಂಪಾದಿಸಿಕೊಳ್ಳಬೇಕೆಂದರೆ, ಆತನನ್ನು ನಾವು ವಶಮಾಡಿಕೊಳ್ಳಬೇಕು. ಆತನನ್ನು ವಶ ಮಾಡಿಕೊಳ್ಳುವ ಕೆಲಸವನ್ನು ನೀವು ಮಾಡಬೇಕು. ಅದಕ್ಕಾಗಿ ನೀವು ಇಂದಿನಿಂದ ಆ ಕೆಲಸದಲ್ಲಿ ಮಗ್ನರಾಗಬೇಕು. ನಾವು ಇಲ್ಲಿಯವರೆಗು ನೀವು ಕೇಳುವುದಕ್ಕಿಂತ ಮೊದಲೇ ಹಣವನ್ನು ಕೊಟ್ಟಿದ್ದೇವೆ. ಅವಶ್ಯಕತೆ ಬಂದಾಗ ಕೆಲಸವನ್ನು ಹೇಳುತ್ತೇವೆಂದಿದ್ದೇವೆ. ಈಗ ನೀವು ಮಾಡಬೇಕಾದ ಕೆಲಸ ಬಂದಿದೆ. ಈಗಲೂ ಸಹ ನಿಮ್ಮಿಂದ ಉಚಿತವಾಗಿ ಕೆಲಸ ಮಾಡಿಸಿಕೊಳ್ಳುವುದಿಲ್ಲ. ನಾವು ಹೇಳುವ ಕೆಲಸ ಮಾಡುವುದರಿಂದ ನಿಮಗೆ ಒಬ್ಬೊಬ್ಬರಿಗೆ ಹತ್ತುಲಕ್ಷ ಹಣವನ್ನು ಕೊಡುತ್ತೇವೆ. ನೀವು ಇಲ್ಲಿಯವರೆಗು ಅಷ್ಟು ಹಣವನ್ನು ನೋಡಿಯೂ ಸಹ ಇರುವುದಿಲ್ಲ. ನೀವು ಮಾಡುವ ಕೆಲಸಕ್ಕಿಂತ ನಾವು ಹೆಚ್ಚಿನ ಹಣವನ್ನು ಕೊಡುತ್ತಿದ್ದೇವೆ. ಏನನ್ನುತ್ತೀರಾ ಹೇಳ್ರಿ.

**ಮಾಂತ್ರಿಕರು :–** ನೀವು ಅಷ್ಟು ಹಣವನ್ನು ನಾವು ಕೇಳದಿದ್ದರೂ ಕೊಡುತ್ತಿದ್ದೀರ. ನೀವು ಹೇಳಿದ ಕೆಲಸವನ್ನು ನಾವು ತಪ್ಪದೇ ಮಾಡುತ್ತೇವೆ. ಒಂದುವೇಳೆ ಅದು ಕಷ್ಟವಾದ ಕೆಲಸವಾದರೂ ನಾವು ಮಾಡಿ ತೋರಿಸುತ್ತೇವೆ.

**ತಪಸ್ವಿಬಾಬಾ :–** ಸಂತೋಷ. ನೀವು ಹೇಗಾದರೂ ಮಾಡುತ್ತೀರ. ಆದರೆ ಇದರಲ್ಲಿ ಕಷ್ಟವೇನೂ ಇರುವುದಿಲ್ಲ. ನಿಮಗೆ ಪ್ರತಿ ಕೆಲಸ ಮುನೆಪ್ಪನಿಂದಾಗಲೀ, ಮುನೆಪ್ಪ

ಮನುಷ್ಯರಿಂದಾಗಲೀ ಆಗಿಂದಾಗ್ಗೆ ತಿಳಿಯುತ್ತಾ ಇರುತ್ತದೆ. ಅವರು ಹೇಗೆ ಹೇಳಿದರೆ ಹಾಗೇ ಮಾಡಿ. ನಂತರ ನೀವು ನನ್ನನ್ನು ಭೇಟಿಮಾಡುವುದಕ್ಕೆ ಆಗುವುದಿಲ್ಲ. ಎಲ್ಲಾ ಮುನೆಪ್ಪನಿಂದಲೇ ತಿಳಿಯುತ್ತವೆ. ಇನ್ನು ನೀವು ಇಲ್ಲಿಂದ ಹೋಗಿ ಮುನೆಪ್ಪನಿಗೆ ಸಂಪರ್ಕದಲ್ಲಾಗಲೀ, ಮುನೆಪ್ಪನಿಗೆ ಹತ್ತಿರದಲ್ಲಾಗಲೀ ಇರಿ. ನಂತರ ನಾನು ತಿಳಿಸುತ್ತೇನೆ. ಹೋಗಿಬನ್ನಿ.

(ತಪಸ್ವಿಬಾಬಾರವರೊಂದಿಗೆ ಮಾತನಾಡಿದ ಮಾಂತ್ರಿಕರಿಬ್ಬರೂ ಮುನೆಪ್ಪನ ಹತ್ತಿರವೇ ಇರುವುದಕ್ಕೆ ನಿಶ್ಚಯಿಸಿಕೊಂಡು ಹೊರಟು ಮುನೆಪ್ಪನ ಹತ್ತಿರಕ್ಕೆ ಬಂದಿದ್ದಾರೆ. ಮುನೆಪ್ಪನ ಹತ್ತಿರಕ್ಕೆ ಬಂದ ಕೂಡಲೇ ಮುನೆಪ್ಪ ಒಬ್ಬೊಬ್ಬರಿಗೆ ಎರಡು ಲಕ್ಷ ರೂಪಾಯಿಗಳನ್ನು ಕೊಟ್ಟು, ಈ ಹಣ ನಿಮ್ಮ ಮನೆ ಹತ್ತಿರ ಕೊಟ್ಟು ಬನ್ನಿ ಎಂದು ಹೇಳಿದ್ದಾನೆ. ಹಾಗೇ ಮಾಂತ್ರಿಕರು ಇಬ್ಬರೂ ಹಣವನ್ನು ತೆಗೆದುಕೊಂಡು ಹೋಗಿ ಅವರ ಮನೆಗಳಿಗೆ ಕೊಟ್ಟು ಪುನಃ ಮುನೆಪ್ಪನ ಹತ್ತಿರಕ್ಕೆ ಬಂದಿದ್ದಾರೆ.)

**********************************

(ಈಶ್ವರ್‌ಗೆ 16ನೇ ಸಂವತ್ಸರ ಬಂದು ಕೆಲವು ದಿನಗಳು ಕಳೆದ ನಂತರ ಅಮಾವಾಸ್ಯೆ ಬಂದಿತು. ಈಶ್ವರ್ ಹದಿನಾರನೇ ವರ್ಷ ಮೊದಲು ಬಂದ ಅಮಾವಾಸ್ಯೆ ಅದು. ಆ ದಿನ ಈಶ್ವರ್‌ಗೆ ಶರೀರದಲ್ಲಿ ಚುರುಕುತನ ಇಲ್ಲದೆ ನಿದ್ರೆಮತ್ತು ಹೆಚ್ಚಾಗಿದ್ದಂತಿತ್ತು. ಆ ದಿನ ತನಗೆ ಆರೋಗ್ಯ ಸರಿ ಇಲ್ಲವೆನಿಸಿ ಕಾಲೇಜೀಗೂ ಸಹ ಹೋಗದಂತೆ ಈಶ್ವರ್ ಮನೆಹತ್ತಿರನೇ ಇದ್ದಾನೆ. ತನ್ನ ಕೊಠಡಿಯಲ್ಲಿ ಒಂಟಿಯಾಗಿದ್ದಾನೆ. ಈಶ್ವರ್ ನಿದ್ರೆಮಾಡದಿದ್ದರೂ ಒಂದು ವಿಧವಾದ ಮತ್ತಿನಂತೆ ಇರುವುದರಿಂದ ಕಣ್ಣು ಮುಚ್ಚಿಕೊಂಡು ಕಳಿತುಕೊಂಡಿದ್ದಾನೆ. ಎಚ್ಚರದಲ್ಲಿದ್ದರೂ ಕಣ್ಣು ತೆರೆದು ನೋಡಬೇಕೆಂದೆನಿಸುತ್ತಿಲ್ಲ. ಕಣ್ಣು ಮುಚ್ಚಿಕೊಂಡರೆ ಹಾಯಾಗಿ ಇದ್ದಂತಿದೆ. ಆದ್ದರಿಂದ ಕಣ್ಣು ಮುಚ್ಚಿಕೊಂಡು ಕುರ್ಚಿಯಲ್ಲಿ ಕುಳಿತುಕೊಂಡಿದ್ದಾನೆ. ಬೆಳಗ್ಗೆ ಸ್ನಾನ ಮಾಡಿ, ಟಿಫಿನ್ ತಿಂದ ನಂತರ ಹಾಗೆ ಇರುವುದರಿಂದ ಈಶ್ವರ್ ಹೊರಗೆ ಹೋಗಲಿಲ್ಲ. ಈಶ್ವರ್ ತಾಯಿ ಆತನಿಗೆ ಬಿಸಿಹಾಲು ಕೊಟ್ಟು ಬಾ ಎಂದು ಕೆಲಸದವಳಿಂದ ಕಳುಹಿಸಿದಳು. ಹಾಲಿನ ಗ್ಲಾಸನ್ನು ತೆಗೆದುಕೊಂಡು ಕೆಲಸದವಳು

ಈಶ್ವರ್ ಕೊಠಡಿಯೊಳಗೆ ಬಂದಳು. ಈಶ್ವರ್ ಸ್ಟಡೀ ಟೇಬಲ್ ಮುಂದೆ ಕುರ್ಚಿಯಲ್ಲಿ ಕುಳಿತುಕೊಂಡಿದ್ದಾನೆ. ಕೆಲಸದವಳು ಹಾಲಿನ ಗ್ಲಾಸನ್ನು ತೆಗೆದುಕೊಂಡು ಈಶ್ವರ್‌ಗೆ ಹಿಂಬದಿಯಿಂದ ಬಂದು, ಆತನ ಮುಂದೆ ಟೇಬಲ್ ಮೇಲೆ ಗ್ಲಾಸನ್ನು ಇಟ್ಟು ಅಮ್ಮ ಹಾಲು ಕುಡಿಯಬೇಕೆಂದಿದ್ದಾರೆಂದು ಹೇಳಿ, ಈಶ್ವರ್ ಮುಖದ ಕಡೆ ನೋಡಿದಳು. ಈಶ್ವರ್‌ನನ್ನು ನೋಡಿದಕೂಡಲೇ ಹೆದರಿಹೋದಳು. ಭಯದಿಂದ ಜೋರಾಗಿ ಚೀರಿ ಅಲ್ಲಿಂದ ಓಡಿಹೋದಳು. ಈಶ್ವರ್ ಕೊಠಡಿಯಿಂದ ಗಾಬರಿಯಾಗಿ ಓಡಿಬಂದ ಕೆಲಸದವಳನ್ನು ಜಮೀಂದಾರು, ಜಮೀಂದಾರು ಹೆಂಡತಿ ಇಬ್ಬರೂ ನೋಡಿದ್ದಾರೆ. ಅವರು "ಏನು, ಏಕೆ ಭಯಪಡುತ್ತಿದ್ದೀಯೆಂದು, ಏನು ನಡೆದಿದೆ?" ಎಂದು ಕೇಳಿದರು. ಕೆಲಸದವಳಿಗೆ ಬಾಯಿಂದ ಮಾತು ಬರಲಿಲ್ಲ. ಭಯದಿಂದ ಈಶ್ವರ್ ಕೊಠಡಿಯಕಡೆ ಕೈ ತೋರಿಸಿದಳು. ಹಾಗೆ ಆಕೆ ಭಯಪಟ್ಟು ಮಾತನಾಡದೇ ಕೈ ತೋರಿಸುವುದರಿಂದ ಈಶ್ವರ್‌ಗೆ ಏನಾಗಿದೆಯೋ ಎನ್ನುವ ಗಾಬರಿಯಿಂದ ಜಮೀಂದಾರ್, ಆತನ ಹೆಂಡತಿ ಇಬ್ಬರೂ ಈಶ್ವರ್ ರೂಮಿನ ಕಡೆ ಬಂದರು. ಕೆಲಸದವಳು ಬೇಡ, ಹೋಗಬೇಡ ಎನ್ನುತ್ತಿದ್ದರೂ ಅವರು ಕೇಳಿಸಿಕೊಳ್ಳದೇ, ಈಶ್ವರ್ ರೂಮಿನೊಳಗೆ ಹೋಗಿ ಈಶ್ವರ್ ಎಂದು ಜೋರಾಗಿ ಕರೆದರು. ಈಶ್ವರ್ ಸಾಧಾರಣವಾಗಿ ಕುರ್ಚೀಯಲ್ಲಿ ಕಳಿತುಕೊಂಡಿದ್ದಾನೆ. ರೂಮಿನಲ್ಲಿ ಏನೂ ಇಲ್ಲ. ಈಶ್ವರ್ ಕುರ್ಚೀಯಲ್ಲಿ ಟೇಬಲ್ ಮುಂದೆ ಕುಳಿತುಕೊಂಡಿದ್ದಾನೆ. ಅಷ್ಟೇ ಹೊರತು ಅಲ್ಲಿ ಭಯಪಡುವ ಪರಿಸ್ಥಿತಿ ಅವರಿಗೆ ಏನೂ ಕಾಣಿಸಲಿಲ್ಲ. ನಂತರ ರಾವುಬಹದೂರ್ ಈಶ್ವರ್ ಎಂದು ಆತನನ್ನು ಕರೆದನು. ಈಶ್ವರ್ ತಿರುಗಿ ನೋಡಲಿಲ್ಲ. ಇಷ್ಟು ಗೊಂದಲ ನಡೆದರೂ, ರಾವುಬಹುದೂರ್ ಕರೆದರೂ ಆತನು ತಿರುಗಿ ನೋಡಲಿಲ್ಲ. ಈಶ್ವರ್ ಏಕೆ ಮಾತನಾಡಲಿಲ್ಲವೆಂದು ಜಮೀಂದಾರ್ ಮತ್ತು ಆತನ ಹೆಂಡತಿ ಇಬ್ಬರೂ ಈಶ್ವರ್ ಹತ್ತಿರಕ್ಕೆ ಹೋಗಿ ಈಶ್ವರ್‌ನನ್ನು ನೋಡಿದರು. ಒಂದು ಸಲ ಸಾವಿರ ವಾಟ್ಸ್ ಕರೆಂಟ್ ಷಾಕ್ ಹೊಡೆದಂತಾಯಿತು. ಇಬ್ಬರೂ ತಮಗೆ ತಿಳಿಯದಂತೇ ರೂಮ್ ಹೊರಗೆ ಓಡಿ ಬಂದರು. ಉಳಿದ ಮನೆಯಲ್ಲಿರುವವರೆಲ್ಲರೂ ಅಲ್ಲಿಗೆ ಬಂದು, ಏನು ನಡೆದಿದೆಯೆಂದು ಆಶ್ಚರ್ಯದಿಂದ ಅವರನ್ನು ಕೇಳಿದರು. ಅವರು ಏನೂ ಹೇಳಲಿಲ್ಲ. ಅಷ್ಟರಲ್ಲಿ ಉಳಿದವರೂ ಸಹ ಈಶ್ವರ್ ರೂಮ್ ಕಡೆ

ಹೋಗಬೇಕೆಂದು ಪ್ರಯತ್ನಿಸಿದಾಗ, ರಾವುಬಹದೂರ್ ಬೇಡ ಎಂದು ಹೇಳಿ ಯಾರನ್ನೂ ಈಶ್ವರ್ ರೂಮಿನಕಡೆ ಹೋಗಲು ಬಿಡಲಿಲ್ಲ. ಎಲ್ಲರೂ ಮೌನವಾಗಿ ಇದ್ದರು. ಕೆಲಸದವಳು ಏನು ಹೇಳಲಿಲ್ಲ. ಹಾಗೇ ರಾವುಬಹದೂರ್ ಸಹ ಏನೂ ಹೇಳಲಿಲ್ಲ. ಆ ಮನೆಯಲ್ಲಿ ಎಲ್ಲಾ ನಿಶ್ಶಬ್ದ ಆವರಿಸಿತು. ಹಾಗೆ ಒಂದು ಗಂಟೆ ಸಮಯ ಕಳೆಯಿತು. ಈಶ್ವರ್ ತನ್ನ ರೂಮಿನಿಂದ ಹೊರಗೆ ಬಂದು "ಅಮ್ಮಾ! ನಾನು ಹಾಲು ಕೊಡು ಎಂದಿದ್ದೇನಲ್ಲ! ನನ್ನ ಟೇಬಲ್ ಮೇಲೆ ತಣ್ಣಗಿರುವ ಹಾಲಿವೆ. ಮೇಲಾಗಿ ಗ್ಲಾಸಿನ ಮೇಲೆ ಮುಚ್ಚದಂತೆ ಇಟ್ಟು ಬಂದಿದ್ದೀರ. ಅವು ತಣ್ಣಗಾಗಿವೆ. ನನಗೆ ಹಾಲು ಬಿಸಿ ಮಾಡಿ ಕೊಡಿ" ಎಂದು ಸರ್ವಸಾಧಾರಣವಾಗಿ ಈಶ್ವರ್ ತನ್ನ ಅಮ್ಮನನ್ನು ಕೇಳಿದ್ದಾನೆ.

ಈಶ್ವರ್ ಸರ್ವಸಾಧಾರಣವಾಗಿ ಬಂದು ಬಿಸಿ ಹಾಲು ಬೇಕೆಂದು ಕೇಳಿದರೂ, ಈಶ್ವರ್ ಅಮ್ಮ ಆತನನ್ನು ನೋಡಿ ಭಯದಿಂದ ನಡಗುತ್ತಿದ್ದಾಳೆ. ಬೇಗ ಬಿಸಿಹಾಲು ಕಳುಹಿಸೆಂದು ಹೇಳಿ ಈಶ್ವರ್ ಪುನಃ ತನ್ನ ರೂಮಿನೊಳಗೆ ಹೋಗಿದ್ದಾನೆ. ಆದರೂ ಈಶ್ವರ್‌ಗೆ ಹಾಲನ್ನು ಯಾರೂ ತೆಗೆದುಕೊಂಡು ಹೋಗಲಿಲ್ಲ. ನಂತರ ಸ್ವಲ್ಪ ಹೊತ್ತಿಗೆ ಈಶ್ವರ್ ಎರಡನೆಸಲ ಹೊರಗೆ ಬಂದು ಹಾಲ್‌ನಲ್ಲಿ ಕುಳಿತುಕೊಂಡಿದ್ದಾನೆ. "ನಾನು ಹಾಲು ಕೇಳಿ ಹೋಗಿದ್ದೇನೆ, ನೀವು ಮರೆತು ಹೋಗಿದ್ದೀರ. ನನಗೆ ನಿದ್ರೆಮತ್ತಿನಂತಿದೆ ಬೇಗ ಕಾಫೀಯನ್ನು ಮಾಡಿ ಕೊಡಿ" ಎಂದು ಕೇಳಿದನು. ಎರಡನೆ ಸಲ ಈಶ್ವರ್ ಹಾಲ್‌ನಲ್ಲಿ ಕುಳಿತುಕೊಂಡು ಕಾಫೀಯನ್ನು ಕೇಳಿದಾಗ ಎಲ್ಲರಿಗೂ ಸ್ವಲ್ಪ ಧೈರ್ಯ ಬಂದಿತು. ಕಾಫೀಯನ್ನು ಮಾಡಿ ಕೊಟ್ಟಿದ್ದಾರೆ. ಈಶ್ವರ್ ಕಾಫೀ ಕುಡಿದು ಹಾಲ್‌ನಲ್ಲೇ ಪೇಪರ್ ಓದುತ್ತಾ ಕುಳಿತುಕೊಂಡನು. ಜಮೀಂದಾರ್, ಆತನ ಹೆಂಡತಿ, ಕೆಲಸದವಳು ಮಾತುಮಾತಿಗೂ ಈಶ್ವರ್‌ನನ್ನು ನೋಡುತ್ತಾ ಸ್ವಲ್ಪ ಧೈರ್ಯ ತಂದುಕೊಂಡರು. ಮನೆಯಲ್ಲಿ ಉಳಿದವರು ಅಸಲು ವಿಷಯ ಏನು ನಡೆದಿದೆಯೋ ಅರ್ಥವಾಗದೆ ಗಡಿಬಿಡಿಯಾಗಿದ್ದಾರೆ. ಕೆಲಸ ದವಳಾಗಲೀ, ಜಮೀಂದಾರ್ ದಂಪತಿಗಳಾಗಲೀ ಆ ದಿನ ರೂಮ್‌ನಲ್ಲಿ ಏನು ನಡೆದಿರುವುದು ಯಾರಿಗೂ ಹೇಳಲಿಲ್ಲ. ಹೇಳಬೇಕೆಂದುಕೊಂಡಿಲ್ಲ.

ಈಶ್ವರ್ ವಿಷಯವನ್ನು ಜಮೀಂದಾರ್ ಯಾರಾದರೂ ದೊಡ್ಡವರ ಹತ್ತಿರ ಕೇಳಿ ತಿಳಿದುಕೊಳ್ಳಬೇಕೆಂದುಕೊಂಡಿದ್ದಾನೆ. ಅಂತಹ ದೊಡ್ಡ ವ್ಯಕ್ತಿಗಳು ಯಾರಿದ್ದಾರೆಂದು ಜಮೀಂದಾರ್ ರಾವುಬಹದೂರ್ ಬಹಳ ಜನರನ್ನು ಕೇಳಿ ನೋಡಿದ್ದಾನೆ. ಹಾಗೆ ಕೇಳಿದಾಗ ಬಹಳ ಜನ ರಾಜಯೋಗಾನಂದ ಸ್ವಾಮಿ ಹೆಸರನ್ನು ಹೇಳಿದ್ದಾರೆ. ಆದರೇ ಆ ಸ್ವಾಮಿ ತನ್ನ ಹತ್ತಿರ ದೈವಜ್ಞಾನವನ್ನು ತಿಳಿದುಕೊಳ್ಳುವವರಿಗೆ ಮಾತ್ರ ಯಾವುದಾದರೂ ಸಲಹೆ ಕೊಡುತ್ತಾರೆಂದು, ಉಳಿದವರಿಗೆ ಏನೂ ಹೇಳುವುದಿಲ್ಲವೆಂದು ಹೇಳಿದ್ದಾರೆ. ಆದರೂ ರಾವುಬಹದೂರ್, ರಾಜಯೋಗಾನಂದ ಸ್ವಾಮಿ ಹತ್ತಿರಕ್ಕೆ ಹೋಗಿ ಅಂಗಲಾಚಿ ತನ್ನ ಸಮಸ್ಯೆಯನ್ನು ಕುರಿತು ಕೇಳಬೇಕೆಂದುಕೊಂಡಿದ್ದಾನೆ. ಅಮಾವಾಸ್ಯೆ ಹೋದ ನಾಲ್ಕು ದಿನಗಳಿಗೆ ಹೊರಟು ಹೋಗಿ ರಾಜಯೋಗಾನಂದ ಸ್ವಾಮಿ ಆಶ್ರಮಕ್ಕೆ ಹೋಗಿದ್ದಾನೆ. ಅಲ್ಲಿ ಸ್ವಾಮಿಯನ್ನು ಭೇಟಿಯಾಗಿ ಹೀಗೆ ಮಾತನಾಡಿದನು.)

**ಜಮೀಂದಾರ್ :–** ಸ್ವಾಮೀ! ನನಗೆ ದೈವಜ್ಞಾನವೆಂದರೆ ಏನೋ ತಿಳಿಯದು. ನನಗೆ ಭಕ್ತಿ ಮಾತ್ರವಿದೆ. ನಾನು ಇಂದಿನಿಂದ ನಿಮ್ಮ ಆಶ್ರಮಕ್ಕೆ ಆಗಾಗ ಬಂದು ಜ್ಞಾನವನ್ನು ತಿಳಿದುಕೊಳ್ಳುತ್ತೇನೆ. ಹಾಗೆಯೇ ಜ್ಞಾನ ಅಭಿವೃದ್ಧಿ ಆಗುವುದಕ್ಕೆ ಯಾವುದಾದರೂ ವಿಧಾನವಿದ್ದರೇ, ಅದಕ್ಕೆ ಹಣ ಖರ್ಚು ಮಾಡಿ ಜ್ಞಾನ ಪ್ರಚಾರವಾಗುವಂತೆ ಸೇವೆ ಮಾಡುತ್ತೇನೆ. ಅಷ್ಟೇ ಅಲ್ಲ ನೀವು ಹೇಗೆ ಹೇಳಿದರೇ ಹಾಗೆ ನಡೆದುಕೊಳ್ಳುತ್ತೇನೆ. ಪ್ರಸ್ತುತ ನನಗಿರುವ ಸಮಸ್ಯೆಗೆ ನೀವೇ ಪರಿಷ್ಕಾರ ಹೇಳಬೇಕು.

**ರಾಜಯೋಗಾನಂದ :–** ನಾನು ಇಲ್ಲಿ ಪ್ರಪಂಚ ವಿಷಯಗಳಿಗೆ ಹೆಚ್ಚಿನ ಪ್ರಾಧಾನ್ಯತೆ ಕೊಡುವುದಿಲ್ಲ. ನೀನು ದೈವಜ್ಞಾನವನ್ನು ತಿಳಿದುಕೊಳ್ಳುತ್ತೇನೆಂದು ಹೇಳುತ್ತಿದ್ದೀಯ, ಆದ್ದರಿಂದ ಈ ಒಂದು ಸಲ ನಿನ್ನ ಸಮಸ್ಯೆಗೆ ಪರಿಷ್ಕಾರವನ್ನು ಹೇಳಬಲ್ಲೆನು. ಅಷ್ಟಕ್ಕೂ ನಿನ್ನ ಸಮಸ್ಯೆ ಏನು?

**ಜಮೀಂದಾರ್ :–** ನನಗೆ ಸಂತತಿ ಇಲ್ಲ. ಆದ್ದರಿಂದ ನಾನು ತಾಯಿ ಇಲ್ಲದ ಒಬ್ಬ ಅನಾಥ ಬಾಲಕನನ್ನು ತಂದುಕೊಂಡು ಸಾಕಿಕೊಂಡಿದ್ದೇನೆ. ಆತನಿಗೆ ಈಶ್ವರ್

ಎಂದು ಹೆಸರು ಇಟ್ಟಿದ್ದೇನೆ. ಈಶ್ವರ್ ಅಷ್ಟಗ್ರಹ ಕೂಟಮಿ ದಿನ ಹುಟ್ಟಿದ ಮಗು. ಆತನನ್ನು ಕುರಿತು ಬಹಳ ಜನ ಬಹಳ ವಿಧಗಳಾಗಿ ಹೇಳಿದ್ದಾರೆ. ನಾನು ಯಾರ ಮಾತನ್ನು ಕೇಳಲಿಲ್ಲ. ಈಶ್ವರ್ ಮೇಲೆ ಹೆಚ್ಚಿನ ಪ್ರೇಮವನ್ನು ಇಟ್ಟುಕೊಂಡಿದ್ದೇನೆ. ಈಶ್ವರ್ ಸಹ ಒಳ್ಳೆ ಬುದ್ಧಿವಂತನು, ಚೆನ್ನಾಗಿ ಓದುತ್ತಿದ್ದಾನೆ. ಅಷ್ಟೇ ಅಲ್ಲ ಆತನಿಗೆ ಹುಟ್ಟಿನಿಂದಲೇ ಇರುವ ಶಕ್ತಿಗಳಿಂದ ಬಹಳ ಜನರಿಗೆ ಒಳ್ಳೆಯದನ್ನು ಮಾಡಿದ್ದಾನೆ. ಆತನು ಚಿಕ್ಕ ವಯಸ್ಸಿನಲ್ಲೇ ಮನೆಯಲ್ಲೇ ಅಲ್ಲದೆ ಹೊರಗಿನ ಪ್ರಜೆಗಳಲ್ಲೂ ಸಹ ಒಳ್ಳೆಯ ಹೆಸರನ್ನು ತಂದುಕೊಂಡಿದ್ದಾನೆ. ಆತನನ್ನು ಹೊರಗಿನ ಪ್ರಜೆಗಳೆಲ್ಲರೂ ಅಭಿಮಾನಿಸುತ್ತಾರೆ. ಈ ಮಧ್ಯ ಕಾಲದಲ್ಲಿ ಹಾವುಕಚ್ಚಿ ಸತ್ತುಹೋದ ಹುಡುಗನನ್ನು ಬದುಕಿಸಿ ಪ್ರಜೆಗಳಲ್ಲಿ ಪೂಜ್ಯಭಾವನೆಯನ್ನು ಹೊಂದಿದವನಾಗಿದ್ದಾನೆ. ಆತನನ್ನು ಕುರಿತು ಹೇಳುವುದಾದರೆ ಎಲ್ಲಾ ಒಳ್ಳೆಯದೇ ಹೊರತು ಕೆಟ್ಟದಂತು ಯಾವುದೂ ಇಲ್ಲ. ಅಂತಹವನಲ್ಲಿ ಕಳೆದ ಅಮಾವಾಸ್ಯೆ ದಿನದಂದು ಒಂದೇ ಒಂದು ಕೆಡಕು ಕಾಣಿಸಿದೆ. ಅದನ್ನು ನಾವು ಜೀರ್ಣಿಸಿಕೊಳ್ಳದೆ ಹೋಗುತ್ತಿದ್ದೇವೆ. ಏಕೆ ಹೀಗೆ ನಡೆದಿದೆಯೋ ನೀವು ಹೊರತು ಹೇಳುವವರು ಯಾರೂ ಇಲ್ಲವೆಂದು ಬಹಳ ಜನ ನಿಮ್ಮ ಹೆಸರನ್ನೇ ಹೇಳಿದ್ದಾರೆ. ಆದ್ದರಿಂದ ನಿಮ್ಮ ಹತ್ತಿರಕ್ಕೆ ಬಂದು ಹೇಳಿಕೊಳ್ಳುತ್ತಿದ್ದೇನೆ.

**ರಾಜಯೋಗಾನಂದ :–** ನಿನ್ನ ಬಾಧೆಯೆಲ್ಲಾ ನನಗೆ ಅರ್ಥವಾಗಿದೆ. ಕಳೆದ ಅಮಾವಾಸ್ಯೆಯ ದಿನ ಏನು ನಡೆದಿದೆಯೋ ವಿವರವಾಗಿ ಹೇಳು. ಆಗ ಅದನ್ನು ಕುರಿತು ಯೋಚಿಸುತ್ತೇನೆ.

**ಜಮೀಂದಾರ್ :–** ಅಮಾವಾಸ್ಯೆ ದಿನದಂದು ಈಶ್ವರ್ ಚುರುಕುತನದಿಂದ ಇರದೇ ಮಂಕಾಗಿ ಇದೆಯೆಂದು, ನಿದ್ರೆಮತ್ತಿನಿಂದ ಇದೆಯೆಂದು ಹೇಳಿದ್ದಾನೆ. ಆ ದಿನ ಕಾಲೇಜಿಗೂ ಸಹ ಹೋಗಲಿಲ್ಲ. ಹಗಲು ಸುಮಾರು ಹತ್ತು ಗಂಟೆಗಳ ಸಮಯದಲ್ಲಿ ಈಶ್ವರ್ ತಾಯಿ ಕೆಲಸದವಳೊಂದಿಗೆ ಈಶ್ವರ್‌ಗೆ ಹಾಲು ಕೊಟ್ಟುಬರಲು ಹೇಳಿ ಹಾಲು ಕಳಿಸಿದ್ದಾಳೆ. ಆಗ ಈಶ್ವರ್ ತನ್ನ ರೂಮ್‌ನಲ್ಲೇ ಕುಳಿತುಕೊಂಡಿದ್ದಾನೆ. ಹಾಲು ತೆಗೆದುಕೊಂಡು ಹೋದ ಕೆಲಸದವಳು ಹಾಲಿನ ಗ್ಲಾಸನ್ನು ಟೇಬಲ್

ಮೇಲೆ ಇಟ್ಟು, ಈಶ್ವರ್ ಮುಖದ ಕಡೆ ನೋಡಿದ ಕೂಡಲೇ ಆಕೆ ಭಯಪಟ್ಟು ಕಿರುಚುತ್ತಾ ಹೊರಗೆ ಓಡಿ ಬಂದಿದ್ದಾಳೆ. ನಂತರ ನಾವು ಏನು ನಡೆದಿದೆಯೋ ಎಂದು ಒಳಗೆ ಹೋಗಿ ಈಶ್ವರ್‌ನನ್ನು ನೋಡಿದ್ದೇವೆ. ಮನುಷ್ಯ ಎಲ್ಲಾ ಚೆನ್ನಾಗಿದ್ದಾನೆ. ಆದರೆ ಮುಖ ವಿಕೃತಾಕಾರದಲ್ಲಿ ಬದಲಾಗಿ ಭಯಂಕರವಾಗಿ ಇದ್ದಾನೆ. ಅದು ಹೀಗಿದೆಯೆಂದು ಹೇಳುವುದಕ್ಕೆ ಆಗಲಾರದಷ್ಟು ಭಯಂಕರವಾಗಿ ಇದೆ. ನಾವೂ ಸಹ ಭಯಪಟ್ಟು ಹೊರಗೆ ಬಂದಿದ್ದೇವೆ. ನಂತರ ನಾವು ಯಾರೂ ಒಳಗೆ ಹೋಗಲಿಲ್ಲ. ಒಂದು ಗಂಟೆ ನಂತರ ಈಶ್ವರ್ ಸಾಧಾರಣವಾಗಿ ಹೊರಗೆ ಬಂದು ನಮ್ಮೊಂದಿಗೆ ಮಾತನಾಡಿದ್ದಾನೆ. ಹೊರಗೆ ಬಂದಾಗ ಪ್ರತಿ ದಿನ ಇದ್ದಂತೆ ಇದ್ದಾನೆ, ಯಾವ ಬದಲಾವಣೆ ಇಲ್ಲ. ಆತನನ್ನು ಆ ವಿಧವಾಗಿ ನಾವು ಮೂವ್ವರೇ ನೋಡಿದ್ದೇವೆ. ನಾವು ನೋಡಿದ ವಿಷಯ ಇಲ್ಲಿಯವರೆಗು ಹೊರಗೆ ಎಲ್ಲೂ ಹೇಳಲಿಲ್ಲ. ಆಗ ಏಕೆ ಹಾಗೆ ಕಾಣಿಸಿದ್ದಾನೋ, ಇಲ್ಲಿಯವರೆಗು ನಮಗೆ ಅರ್ಥವಾಗಲಿಲ್ಲ. ಆ ವಿಷಯವನ್ನು ಎಲ್ಲಾ ತಿಳಿದ ಹಿರಿಯರಾದ ನಿಮ್ಮ ಹತ್ತಿರ ತಿಳಿಸುವುದಕ್ಕಾಗಿ ಬಂದಿದ್ದೇನೆ. ಈಶ್ವರ್ ಏಕೆ ಹಾಗೆ ಕಾಣಿಸಿದ್ದಾನೋ? ನಂತರ ಏನೂ ತಿಳಿಯದಂತೆ ಮಾಮೂಲಾಗಿ ಏಕೆ ಇದ್ದಾನೋ, ನೀವು ಹೇಳುವವರೆಗು ನಮಗೆ ಅರ್ಥವಾಗುವುದಿಲ್ಲ ಎಂದುಕೊಂಡಿದ್ದೇವೆ.

**ರಾಜಯೋಗಾನಂದ :–** ನೀವು ಬೆಳೆಸಿಕೊಳ್ಳುತ್ತಿರುವ ಈಶ್ವರ್ ಸಾಮಾನ್ಯನಲ್ಲ. ಆತನು ಪ್ರತ್ಯೇಕವಾದ ಜಾತಕದಲ್ಲಿ ಹುಟ್ಟಿದ್ದಾನೆ. ಎಂಟು ಗ್ರಹಬಲಗಳ ಶಕ್ತಿ ಆತನಲ್ಲಿ ಒಳಗೊಂಡಿದೆ. ಆದ್ದರಿಂದ ಅತನು ಸಾಧಾರಣವಾದ ಮನುಷ್ಯನಲ್ಲ. ಆತನು ಅಸಾಧಾರಣವಾದ ಮನುಷ್ಯ. ಈಗ ಆತನಿಗೆ 15 ಸಂವತ್ಸರಗಳು ಪೂರ್ತಿ ಮುಗಿದು 16ನೇ ಸಂವತ್ಸರ ಬಂದಿದೆ. 16ನೇ ಸಂವತ್ಸರದಲ್ಲಿ ನಿನ್ನೆ ಕಳೆದಿರುವುದು ಮೊದಲನೆ ಅಮಾವಾಸ್ಯೆ. ಕಳೆದ ಅಮಾವಾಸ್ಯ ದಿನದಂದು ಪ್ರಪಂಚವನ್ನು ವಿನಾಶ ಮಾಡುವ ಭಯಂಕರವಾದ ಶಕ್ತಿ ಒಂದು ಈಶ್ವರ್‌ನಲ್ಲಿ ಸೇರಿಹೋಗಿದೆ. ಅದು ಈಶ್ವರ್‌ನಲ್ಲಿ ಸೇರಿರುವುದರಿಂದ, ಆತನ ಮೆದುಳಿನಲ್ಲಿ ಅದು ಪ್ರತಿಬಿಂಬಿಸಿ, ಅದು ಸೇರಿದಂತೆ ಹೊರಗೆ ತಿಳಿಯುವುದಕ್ಕೆ ಸುಮಾರು ಒಂದು ಗಂಟೆಕಾಲ, ಆತನ ಮುಖ ವಿಕೃತಾಕಾರವಾಗಿ ಬದಲಾಗಿರುತ್ತದೆ. ಆ ಸಮಯದಲ್ಲಿ ಈಶ್ವರ್‌ಗೆ ಹೊರಗಿನ

ಗಮನ ಇರುವುದಿಲ್ಲ. ಆದ್ದರಿಂದ ಕೆಲಸದವಳು ನೋಡಿ ಕಿರುಚಿದಾಗಾಗಲಿ, ಎರಡನೆ ಸಲ ನೀವು ಗಾಬರಿಯಿಂದ ಆತನ ರೂಮಿನೊಳಗೆ ಹೋಗಿ ನೋಡಿದಾಗಾಗಲಿ, ಈಶ್ವರ್ ನಿಮ್ಮನ್ನು ಸ್ವಲ್ಪವೂ ಗುರುತಿಸಲಿಲ್ಲ. ನೀವು ಆತನನ್ನು ನೋಡಿ ಕಿರುಚಿದರೂ ಆತನಿಂದ ಯಾವ ಸ್ಪಂದನೆ ಇರುವುದಿಲ್ಲ. ಆಗ ಆತನು ಪೂರ್ತಿ ಅಪಸ್ಮಾರಕ ಸ್ಥಿತಿಯಲ್ಲಿ ಇದ್ದಾನೆ. ಆದ್ದರಿಂದ ಈಶ್ವರ್‌ಗೆ ನೀವು ರೂಮಿನೊಳಗೆ ಬಂದು ಹೋದ ವಿಷಯ ತಿಳಿಯದು. ನೀವು ತನ್ನ ಮುಖದಲ್ಲಿ ವಿಕೃತಾಕಾರವನ್ನು ನೋಡಿದ ವಿಷಯವೂ ಸಹ ಆತನಿಗೆ ತಿಳಿಯದು. ನಂತರ ಆತನಿಗೆ ಜ್ಞಾಪಕ ಬಂದ ನಂತರ ತನ್ನ ರೂಮಿನಲ್ಲಿ ತಣ್ಣನೆಯ ಹಾಲಿರುವಂತೆ ನೋಡಿ, ಆತನು ಸ್ವತಃವಾಗಿ ಹೊರಗೆ ಬಂದು, ಸರ್ವ ಸಾಧಾರಣವಾಗಿ ಬಿಸಿಹಾಲು ಬೇಕೆಂದು ಹೇಳಿದ್ದಾನೆ. ಅಲ್ಲಿಗೆ ಒಂದು ವಿನಾಶಕರಶಕ್ತಿ ಈಶ್ವರ್‌ನಲ್ಲಿ ಸೇರಿಹೋಗಿದೆ. ಇದೆಲ್ಲವೂ ನಿಮಗೆ ತಿಳಿಯದು. ಆದ್ದರಿಂದ ನೀವು ಭಯಪಟ್ಟಿದ್ದೀರ. ಆ ದಿನ ಅಮಾವಾಸ್ಯೆ ಆದ್ದರಿಂದ ಬೆಳಗ್ಗೆಯಿಂದ ಮಂಕಾಗಿ ಇರುವುದೂ, ನಿದ್ರೆಮತ್ತಿನಿಂದ ಇರುವುದು ನಡೆದಿರುತ್ತದೆ. ಒಂದು ಸಾಧಾರಣ ದೆವ್ವ ಒಬ್ಬ ಮನುಷ್ಯನೊಳಗೆ ಸೇರಿಹೋಗುವ ಮೊದಲಾಗಲೀ, ಸೇರಿದಾಗಾಗಲೀ ಆ ಮನುಷ್ಯನಲ್ಲಿ ಆಕಳಿಕೆಗಳು, ತೇಗುಗಳು ಬಂದಂತೆ, ಈಶ್ವರ್‌ನಲ್ಲಿ ಸಹ ಒಂದು ಭಯಂಕರ ವಿನಾಶಕರಶಕ್ತಿ ಸೇರುವುದಕ್ಕಿಂತ ಮೊದಲು ಆತನಿಗೆ ಮಂಕಾಗಿ, ನಿದ್ರೆ ಮತ್ತಾಗಿ ಇರುವುದು ನಡೆದಿರುತ್ತದೆ. ಆದ್ದರಿಂದ ಆ ದಿನ ಆತನು ಕಾಲೇಜೀಗೂ ಸಹ ಹೋಗಲಿಲ್ಲ. ಆತನು ಅಷ್ಟಗ್ರಹ ಕೂಟಮಿ ದಿನ ಹುಟ್ಟಿದ ಕಾರಣದಿಂದ ಆತನಲ್ಲಿ ಕೆಲವು ಶಕ್ತಿಗಳು ಮೊದಲೆ ಒಳಗೊಂಡಿವೆ. ಆದ್ದರಿಂದ ಈಶ್ವರ್‌ನನ್ನು ನೋಡಿದಕೂಡಲೇ ದೆವ್ವಗಳು ಭಯಪಟ್ಟು ಓಡಿಹೋಗಿವೆ. ಎಲ್ಲರೂ ಸತ್ತುಹೋಗಿದ್ದಾನೆಂದುಕೊಂಡ ಬಾಲಕನನ್ನು ಸತ್ತುಹೋಗಿಲ್ಲವೆಂದು ಗುರುತಿಸಿದ್ದಾನೆ. ಆತನ ಮೇಲೆ ಬಂದ ಕುದುರೆ ಸತ್ತುಹೋಗಿದೆ. ಇಷ್ಟುಕಾಲ ಆತನಲ್ಲಿ ಚಿಕ್ಕ ಚಿಕ್ಕ ಶಕ್ತಿಗಳು ಸೇರಿರುವಾಗ, 16ನೇ ಸಂವತ್ಸರ ಆತನಲ್ಲಿ ಭಯಂಕರವಾದ ಲೋಕ ವಿನಾಶಕರ ಶಕ್ತಿಗಳು ಸೇರಬೇಕಾಗಿದೆ. ಆದ್ದರಿಂದ ನಾಳೆ ಬರುವ ಅಮಾವಾಸ್ಯೆಗೂ ಸಹ ಮತ್ತೊಂದು ಶಕ್ತಿ ಈಶ್ವರ್‌ನಲ್ಲಿ ಸೇರಿಹೋಗುತ್ತದೆ. ಈ ವಿಧವಾಗಿ ಆರು ಅಮಾವಾಸ್ಯೆಗಳು ನಡೆಯುತ್ತವೆ. ಆತನೊಳಗೆ ಆ ಶಕ್ತಿಗಳು ಆವರಿಸದಂತೆ ಯಾರು

ಅಡ್ಡಿಮಾಡಲಾರರು. ಆದ್ದರಿಂದ ನೀವು ಬರುವ ಅಮಾವಾಸ್ಯೆ ದಿನಗಳಲ್ಲಿ ಮೊದಲೇ ಆತನನ್ನು ಹೊರಗೆ ಹೋಗದಂತೆ ಮನೆಯಲ್ಲೇ ಇರುವುದಕ್ಕೆ ಬೇಕಾದ ಏರ್ಪಾಟುಗಳನ್ನು ಮಾಡಿ. ಅಮಾವಾಸ್ಯೆ ದಿನಗಳಲ್ಲಿ ಈಶ್ವರ್ ಹೊರಗೆ ಹೋಗದಂತೆ ಆತನಿಗೆ ಮೊದಲೇ ನಶೆ ಏರ್ಪಡುತ್ತದೆ. ಆದ್ದರಿಂದ ಆ ದಿನ ಈಶ್ವರ್ ಹೊರಗೆ ಹೋಗದಂತೆ ಮನೆಯಲ್ಲೇ ಇರುತ್ತಾನೆ. ಆ ಸಮಯದಲ್ಲಿ ಆತನ ರೂಮಿನೊಳಗಾಗಲೀ, ಆತನ ಹತ್ತಿರಕ್ಕಾಗಲೀ ಯಾರೂ ಹೋಗಬೇಡಿ. ಆ ದಿನ ಆತನು ಸರ್ವ ಸಾಧಾರಣವಾಗಿ ತನ್ನ ರೂಮಿನಿಂದ ಹೊರಗೆ ಬರುವವರೆಗೂ, ಯಾರೂ ಆತನನ್ನು ಕುರಿತು ಯೋಚಿಸದೆ ನಿಮ್ಮ ಕೆಲಸಗಳಲ್ಲಿ ನೀವು ಇರಿ. ಆತನಲ್ಲಿ ಸೇರಬೇಕಾದ ಶಕ್ತಿ ಸೇರಿಹೋದ ಒಂದು ಗಂಟೆ ನಂತರ ಆತನು ಸಾಧಾರಣ ಮನುಷ್ಯನಾಗಿ ಬದಲಾಗಿ ಹೊರಗೆ ಬರುತ್ತಾನೆ. ಆಗ ಆತನೊಂದಿಗೆ ಸೇರಿ ಮಾತನಾಡಿದರೂ, ಬೆರೆತಿದ್ದರೂ ನಿಮಗೆ ಆತನಿಂದ ಎಂತಹ ಹಾನಿ ಆಗಲೀ, ಎಂತಹ ಭಯವಾಗಲೀ ಇರುವುದಿಲ್ಲ. ಈಗ ನನ್ನಿಂದ ಪ್ರತಿ ಅಮಾವಾಸ್ಯೆಗೂ ನಡೆಯುವ ವಿಷಯ ನಿಮಗೆ ತಿಳಿದುಹೋಗಿದೆ ಅಲ್ಲವೆ! ಆದ್ದರಿಂದ ನೀವು ಯಾವ ಗಾಬರಿ ಇಲ್ಲದಂತೆ ಇರಬಹುದು. ನಾನು ಹೇಳುವುದಕ್ಕಿಂತ ಹೆಚ್ಚಿನದಾಗಿ ಏನೂ ನಡೆಯುವುದಿಲ್ಲವೆಂದು ನಾನು ಅಂದುಕೊಳ್ಳುತ್ತಿದ್ದೇನೆ. ನಂತರ ನಿಮಗೆ ಯಾವುದಾದರೂ ಅನುಮಾನ ವಿದ್ದರೂ, ಯಾವುದಾದರೂ ಅರ್ಥವಾಗದಿದ್ದರೂ, ಅಥವಾ ಇನ್ನೂ ಏನಾದರೂ ನಡೆದರೂ ನನ್ನ ಹತ್ತಿರಕ್ಕೆ ಬಂದು ತಿಳಿಸಿರಿ.

(ರಾಜಯೋಗಾನಂದ ಸ್ವಾಮಿ ಹೇಳಿದ ಅನೂಹ್ಯವಾದ ವಿಷಯವನ್ನು ಕೇಳಿದ ನಂತರ ಜಮೀಂದಾರನಿಗೆ ತಲೆ ತಿರುಗಿದಷ್ಟು ಕೆಲಸವಾಯಿತು. ಈಶ್ವರ್‌ಗೆ ಕಳೆದ ಅಮಾವಾಸ್ಯೆಯ ದಿನದಂದು ಹೀಗೆ ನಡೆದಿದೆಯೆಂದು ಹೇಳಿರುವುದೂ, ಸ್ವಾಮಿ ಮುಂದೆ ನಡೆಯುತ್ತದೆಂದು ಹೇಳಿರುವುದು ಪೂರ್ತಿ ಅರ್ಥವಾಯಿತು. ಮುಂದೆ ನಡೆಯುವುದನ್ನು ಯಾರೂ ನಿಲ್ಲಿಸಲಾರರೆನ್ನುವ ವಿಷಯವೂ ಸಹ ಅರ್ಥವಾಯಿತು. ರಾಜಯೋಗಾನಂದ ಸ್ವಾಮಿ ನಡೆದಿರುವುದನ್ನು, ಮುಂದೆ ನಡೆಯುವುದನ್ನು, ವಿವರಿಸಿ ಹೇಳುವುದರಿಂದ ಅವರು ಸ್ವಲ್ಪ ನಿಧಾನರಾದರು. ಈಶ್ವರ್‌ಗೆ ನಡೆದ ಮತ್ತು ಮುಂದೆ ನಡೆಯುವಂತಹ ರಹಸ್ಯಗಳನ್ನು ಮುಂಚಿತವಾಗಿ

ಗ್ರಹಿಸಿ ಹೇಳುವುದು ಯಾರಿಂದಲೂ ಸಾಧ್ಯವಾಗುವ ಕೆಲಸವಲ್ಲ ಎಂದುಕೊಂಡಿದ್ದಾರೆ. ಸ್ವಾಮಿ ಬಹಳ ದೊಡ್ಡವನೆಂದು ಅವರ ಮನಸ್ಸಿನಲ್ಲಿ ಅರ್ಥವಾಯಿತು. ನಂತರ ಜಮೀಂದಾರ್ ರಾವುಬಹದೂರ್ ಸ್ವಾಮಿಯೊಂದಿಗೆ ಹೀಗೆ ಹೇಳಿದ್ದಾನೆ.)

**ಜಮೀಂದಾರ್ :–** ಸ್ವಾಮೀ, ಈಶ್ವರ್‌ಗೆ ತನ್ನನ್ನು ಕುರಿತು ತನಗೆ ತಿಳಿಯದಾ? ತನಗೆ ಹೀಗೆ ನಡೆದಿದೆಯೆಂದು ಸ್ವಲ್ಪವಾದರೂ ತಿಳಿಯದಾ!

**ರಾಜಯೋಗಾನಂದ :–** ಏನೂ ತಿಳಿಯದು. ತಿಳಿಯುವುದಕ್ಕೆ ಅವಕಾಶವೇ ಇಲ್ಲ. ನೀವೂ ಸಹ ಏನೂ ಹೇಳಬೇಡಿ.

**ಜಮೀಂದಾರ್ :–** ಸ್ವಾಮೀ, ಈ ವಿಧವಾಗಿ ನಡೆಯುವುದರಿಂದ ಈಶ್ವರ್ ಆರೋಗ್ಯಕ್ಕೆ ಯಾವ ತೊಂದರೆ ಇರುವುದಿಲ್ಲವಾ?

**ರಾಜಯೋಗಾನಂದ :–** ಆತನ ಆರೋಗ್ಯವನ್ನು ಕುರಿತು ಈಗ ಸದ್ಯಕ್ಕೆ ಚಿಂತಿಸಬೇಕಾದ ಕೆಲಸವಿಲ್ಲ. ಮುಖ್ಯವಾಗಿ ನಾನು ಹೇಳುವುದೇನೆಂದರೆ! ನಿಮಗೆ ತಿಳಿಯದಿರುವವು ಭವಿಷ್ಯತ್ತಿನಲ್ಲಿ ಎಷ್ಟೋ ನಡೆಯುತ್ತವೆ. ಆದ್ದರಿಂದ ಅವುಗಳನ್ನು ಕುರಿತು ನೀವು ತಿಳಿದುಕೊಂಡು ಚಿಂತಿಸಿದರೂ ಏನೂ ಪ್ರಯೋಜನವಿರುವುದಿಲ್ಲ. ನಡೆಯುವುದು ನಡೆಯದಂತೆ ಇರುವುದಿಲ್ಲ.

(ಅಲ್ಲೇ ಇರುವ ರಾಘವ, ದುಂದುಭಿ, ರಾಧೇಶ್ವರಿ ಮುವ್ವರೂ ಸ್ವಾಮಿ ಹೇಳಿದ ಮಾತುಗಳನ್ನು ಕೇಳಿ ಆಶ್ಚರ್ಯಪಟ್ಟರು. ಜಮೀಂದಾರನು ಸಹ ಸರಿಯೆಂದುಕೊಂಡು ಸ್ವಾಮಿಗೆ ನಮಸ್ಕರಿಸಿ ಸ್ವಾಮಿ ಪಾದಗಳ ಹತ್ತಿರ ಲಕ್ಷರೂಪಾಯಗಳನ್ನು ದಕ್ಷಿಣೆಯಾಗಿ ಇಟ್ಟು ನಂತರ ಬರುತ್ತೇನೆಂದು ಹೇಳಿ ಹೊರಟು ಹೋದನು.)

*********************************

(ತಪಸ್ವಿ ಬಾಬಾ ತನ್ನ ಮಂದಿರದಲ್ಲಿ ಇದ್ದು ಈಶ್ವರ್‌ಗೆ ಅಮಾವಾಸ್ಯೆ ದಿನದಂದು ಏನು ನಡೆದಿರುವುದು, ತನ್ನ ಹತ್ತಿರವಿರುವ ಶಕ್ತಿಗಳಿಂದ ತಿಳಿದುಕೊಂಡಿದ್ದಾನೆ. ಇನ್ನು ತಡ ಮಾಡಿದರೇ ಚೆನ್ನಾಗಿರುವುದಿಲ್ಲವೆಂದು, ಮೊದಲೆ ತನ್ನ ಕಾರ್ಯ

ಪ್ರಾರಂಭಿಸಬೇಕೆಂದುಕೊಂಡ ಬಾಬಾ ಕೂಡಲೇ, ಮುನೆಪ್ಪನನ್ನು ತನ್ನ ಹತ್ತಿರವಿರುವ ರೆಡಿಯೊ ಫ್ರೀಕ್ವೆನ್ಸೀನಿಂದ ಸಂಪರ್ಕಿಸಿ ನಡೆದಿರುವುದೆಲ್ಲಾ ಹೇಳಿ ನಾಗೋತುಲ ನಾಗಭೂಷಣನನ್ನೂ, ಮಂತ್ರಗಳ ಮಲ್ಲಯ್ಯನನ್ನೂ, ಇಬ್ಬರನ್ನೂ ಈಶ್ವರ್ ಇರುವ ಊರಿನಲ್ಲಿ ಮೊಕ್ಕಾಂ ಹಾಕಿ ಇರಲು ಹೇಳಿದ್ದಾನೆ. ಹಾಗೆ ಅಲ್ಲಿ ಇರುವುದೇ ಅಲ್ಲದೆ, ಹೇಗಾದರೂ ಈಶ್ವರ್‌ನನ್ನು ಆಕರ್ಷಿಸಿ ಅವರೊಂದಿಗೆ ಸ್ನೇಹದಿಂದ ಇರುವಂತೆ ಮಾಡಿಕೊಳ್ಳಬೇಕೆಂದಿದ್ದಾನೆ. ಹಾಗೆ ಸ್ನೇಹವನ್ನು ಏರ್ಪಡಿಸಿಕೊಂಡ ನಂತರ ಈಶ್ವರ್‌ನಿಂದ ಅವರ ಮನೆಯಲ್ಲಿರುವವರನ್ನು ಸಹ ಸ್ನೇಹ ಮಾಡಿಕೊಂಡು, ಆಗಾಗ ಈಶ್ವರ್ ಮನೆಗೆ ಹೋಗಿಬರುವಂತೆ ಅನುಕೂಲ ಮಾಡಿಕೊಳ್ಳಿ ಎಂದಿದ್ದಾನೆ. ಮನೆಯಲ್ಲಿರುವವರೊಂದಿಗೆ ಸ್ನೇಹ ಬೆಳೆದ ನಂತರ ಈಶ್ವರ್ ಮನೆಯಲ್ಲೇ ತಾವು ಇರುವಂತೆ ಮಾಡಿಕೊಳ್ಳಿ ಎಂದಿದ್ದಾನೆ. ಹಾಗೆ ಆಗದಿದ್ದರೂ ಈಶ್ವರ್ ಮನೆಗೆ ಹತ್ತಿರದಲ್ಲಿರುವಂತೆ ಆದರೂ ಅನುಕೂಲ ಮಾಡಿಕೊಳ್ಳಿ ಎಂದಿದ್ದಾನೆ. ತಪಸ್ವಿಬಾಬಾ ಹೇಳಿದ ಮಾತುಗಳೆಲ್ಲವೂ ಕೇಳಿದ ಮುನೆಪ್ಪ ಹಾಗೇ ಮಾಡಿಸುತ್ತೇನೆಂದು ಹೇಳಿದ್ದಾನೆ. ನಂತರ ತನ್ನ ಹತ್ತಿರವಿರುವ ಮಾಂತ್ರಿಕರಿಬ್ಬರಿಗೂ ಬಾಬಾರವರು ಹೇಳಿದ ಮಾತುಗಳೆಲ್ಲವೂ ವಿವರಿಸಿ ಹೇಳಿದ್ದಾನೆ. ಮಾಂತ್ರಿಕರು ಇಬ್ಬರೂ ಸರಿ ಎಂದು ಒಪ್ಪಿಕೊಂಡಾಗ ಮುನೆಪ್ಪ ಅವರ ಖರ್ಚಿಗೆ ಹಣಕೊಟ್ಟು ಕಳುಹಿಸಿದ್ದಾನೆ. ಈಶ್ವರ್ ಇರುವ ಚನ್ನಪಟ್ಟಣ ಬಹಳ ದೊಡ್ಡದು ಆದ್ದರಿಂದ ಮಾಂತ್ರಿಕರು ಇಬ್ಬರೂ ಒಂದು ಮನೆ ಬಾಡಿಗೆಗೆ ತೆಗೆದುಕೊಂಡು ಚನ್ನಪಟ್ಟಣದಲ್ಲಿ ಸೇರಿದ್ದಾರೆ. ಹಾಗೆ ಸೇರಿದವರು ಮೂಲಿಕಾವೈದ್ಯವನ್ನು ಮಾಡುತ್ತೇವೆಂದು ಬೋರ್ಡು ಇಟ್ಟುಕೊಂಡಿದ್ದಾರೆ. ಅಷ್ಟೇ ಅಲ್ಲದೆ ಚಿಕ್ಕ ಮಕ್ಕಳಿಗೆ ಬಾಲಗ್ರಹ ದೋಷ ನಿವಾರಣೆಗೆ ತಾಯತಗಳನ್ನು ಕಟ್ಟುವುದೂ, ದೆವ್ವಗಳಿರುವವರಿಗೆ ಮಂತ್ರಿಸಿ ನೀರು ಕೊಡುವುದು ಮೊದಲಾದ ಕೆಲಸ ಕಾರ್ಯಗಳನ್ನಿಟ್ಟುಕೊಂಡಿದ್ದಾರೆ. ಹಾಗೆ ಅವರು ಸ್ವಲ್ಪ ದಿನಗಳಲ್ಲೇ ಆ ಊರಿನಲ್ಲಿ ಹೆಸರುವಾಸಿಯಾಗಿ ವೈದ್ಯರಂತೆ ಬದಲಾಗಿದ್ದಾರೆ. ಕೆಲವರಿಗೆ ಜ್ಯೋತಿಷ್ಯವನ್ನು ಸಹ ಹೇಳುತ್ತಾ ಪ್ರಜೆಗಳ ದೃಷ್ಠಿಯನ್ನು ಆಕರ್ಷಿಸಿಕೊಂಡಿದ್ದಾರೆ. ಆ ವಿಧವಾಗಿ ಆ ಊರಿನಲ್ಲಿ ಅವರು ಹೆಸರು ಗಳಸಿಕೊಂಡು ಒಂದು ದಿನ ಜಮೀಂದಾರ್ ರಾವುಬಹುದೂರ್ ತನ್ನ ಮನೆಯ ಪರಿಸ್ಥಿತಿಯನ್ನು ಕುರಿತು ಅವರನ್ನು

ಕೇಳಬೇಕೆಂದುಕೊಂಡು, ಆ ಇಬ್ಬರು ಮಾಂತ್ರಿಕರ ಹತ್ತಿರಕ್ಕೆ ಬಂದಿದ್ದಾನೆ. ಮಲ್ಲಯ್ಯ ತಾತ ಅಲ್ಲಿ ಜ್ಯೋತಿಷ್ಯನಾಗಿ ಇರುವುದರಿಂದ ಮಲ್ಲಯ್ಯ ತಾತನೊಂದಿಗೆ ಹೀಗೆ ಮಾತನಾಡಿದ್ದಾನೆ.)

**ಜಮೀಂದಾರ್ :–** ತಾತ, ನಮ್ಮ ಮನೆಯಲ್ಲಿ ಈ ಮಧ್ಯದಲ್ಲಿ ಕೆಲವು ಸಮಸ್ಯೆಗಳಿಂದ ನನಗೆ ಮನಶ್ಶಾಂತಿ ಇಲ್ಲದಂತೆ ಹೋಗಿದೆ. ನಮಗೆ ಬಂದಿರುವ ಸಮಸ್ಯೆಗಳೆಲ್ಲವೂ ಇಲ್ಲದಂತೆ ಹೋಗಿ ನನಗೆ ಮನಶ್ಶಾಂತಿ ಉಂಟಾಗುತ್ತದಾ ಇಲ್ಲವಾ?

(ಜಮೀಂದಾರು ಹೇಳಿದ ಮಾತುಗಳನ್ನು ಕೇಳಿದ ಮಲ್ಲಯ್ಯ ತಾತನಿಗೆ ಜಮೀಂದಾರ್ ವಿಷಯವೂ, ಆತನ ಮಗ ಈಶ್ವರ್ ವಿಷಯವೂ, ಕಳೆದ ಅಮಾವಾಸ್ಯೆ ದಿನದಲ್ಲಿ ನಡೆದ ವಿಷಯವೂ ಎಲ್ಲಾ ಮುನೆಪ್ಪನಿಂದ ತಿಳಿದುಕೊಂಡು, ಅವರಿಗಾಗಿ ಆ ಊರಿಗೆ ಬಂದಿದ್ದಾರೆ. ಆದ್ದರಿಂದ ಜಮೀಂದಾರ್ ತಮ್ಮ ಹತ್ತಿರಕ್ಕೆ ಬರುವುದರಿಂದ ಮಲ್ಲಯ್ಯತಾತನಿಗೆ ಒಟ್ಟು ವಿಷಯವೆಲ್ಲಾ ಅರ್ಥವಾಯಿತು. ಆಗ ಜಮೀಂದಾರ್ ಹೀಗೆ ಹೇಳಿದ್ದಾನೆ.)

**ಮಲ್ಲಯ್ಯ :–** (ಒಂದು ನಿಮಿಷ ಕಣ್ಣು ಮುಚ್ಚಿಕೊಂಡು ತೆರೆದು) ನಿನ್ನ ಸಮಸ್ಯೆ ನನಗೆ ಅರ್ಥವಾಯಿತು. ಈ ದೇಶದಲ್ಲಾಗಲೀ, ಈ ರಾಷ್ಟ್ರದಲ್ಲಾಗಲೀ, ಈ ಚನ್ನ ಪಟ್ಟಣದಲ್ಲಾಗಲೀ ಯಾರಿಗೂ ಇಲ್ಲದ ಸಮಸ್ಯೆ ನಿನಗೆ ಇದೆ. ಕಳೆದ ಅಮಾವಾಸ್ಯೆ ನಿನ್ನ ಜೀವನವನ್ನು ಪೂರ್ತಿ ಕತ್ತಲು ಮಾಡಿದೆ. ನಿನಗೇ ಅಮಾವಾಸ್ಯೆ ಹಿಡಿದಂತಾಗಿದೆ. ಅಷ್ಟೇನಾ!

**ಜಮೀಂದಾರ್ :–** (ತನ್ನ ಮನಸ್ಸಿನಲ್ಲಿನ ಸಮಸ್ಯೆಯನ್ನು ಇರುವುದು ಇದ್ದಂತೆ ಹೇಳಿದ ತಾತ ಸಾಮಾನ್ಯನಲ್ಲವೆಂದುಕೊಂಡು) ತಾತನವರೇ! ನೀವು ಹೇಳಿರುವುದು ನೂರಕ್ಕೆ ನೂರು ಪಾಲು ಸತ್ಯ. ನನಗೆ ಆ ಚಿಂತೆ ಹೋಗಿ ಮನಶ್ಶಾಂತಿ ಬೇಕೆಂದರೇ ಅದಕ್ಕೆ ನೀವು ಉಪಾಯವನ್ನು ಹೇಳಬೇಕು.

**ಮಲ್ಲಯ್ಯ :–** ನೀನು ಈ ವಿಷಯವನ್ನೇ ಮೊದಲು ಒಬ್ಬ ಸ್ವಾಮೀಜಿ ಹತ್ತಿರಕ್ಕೆ ಹೋಗಿ ಕೇಳಿ ಬಂದಿದ್ದೀಯಾ ಇಲ್ಲಾ ಹೇಳು.

**ಜಮೀಂದಾರು :–** (ಆಶ್ಚರ್ಯಪಟ್ಟು) ಹೌದು ತಾತನವರೇ ಹೋಗಿ ಕೇಳಿ ಬಂದಿದ್ದೇನೆ.

**ಮಲ್ಲಯ್ಯ :–** ಆತನು ನಡೆದಿರುವುದು ಹೇಳಿದ್ದಾನೆ, ಮುಂದೆ ನಡೆಯುವುದೂ ಹೇಳಿದ್ದಾನೆ. ಆದರೆ ನಿನಗೆ ಮನಶ್ಶಾಂತಿ ಹೇಗೆ ಉಂಟಾಗುತ್ತದೆ ಎಂದು ಹೇಳಲಿಲ್ಲ. ಹೌದಾ, ಅಲ್ಲಾ!

**ಜಮೀಂದಾರ :–** ಹೌದು ತಾತ. ಆತನು ನನ್ನ ಮನಶ್ಶಾಂತಿಯನ್ನು ಕುರಿತು ಹೇಳಲಿಲ್ಲ.

**ಮಲ್ಲಯ್ಯ :–** ನಿನಗೆ ನಿಮ್ಮ ಈಶ್ವರ್‌ನ್ನು ಕುರಿತು ಹೇಳಿದ ಸ್ವಾಮಿ ಬಹಳ ದೊಡ್ಡವನು. ಆತನಿಗೆ ತಿಳಿಯದಿರುವುದು ಏನೂ ಇಲ್ಲ. ನಿನಗೆ ಮನಶ್ಶಾಂತಿ ಲಭಿಸಬೇಕೆಂದರೆ ಬಹಳ ಕಷ್ಟವೆಂದು ಆತನಿಗೆ ಚೆನ್ನಾಗಿ ತಿಳಿದಿತ್ತು. ಆದ್ದರಿಂದ ಹೇಳಲಿಲ್ಲ. ಅದು ಕಷ್ಟವೇ ಆದರೂ ಅದಕ್ಕೆ ಉಪಾಯವನ್ನು ನಾನು ಹೇಳುತ್ತೇನೆ. ಆದರೆ ಅದಕ್ಕೆ ನಮ್ಮ ಫೀಜು ಪ್ರತ್ಯೇಕವಾಗಿರುತ್ತದೆ.

**ಜಮೀಂದಾರ್ :–** ಆದರೂ ಪರವಾಗಿಲ್ಲ. ನೀವು ಕೇಳಿರುವುದು ಕೊಡುತ್ತೇನೆ. ನನಗೆ ಯಾವುದಾದರೂ ಪರಿಷ್ಕಾರವನ್ನು ತೋರಿಸಿ.

**ಮಲ್ಲಯ್ಯ :–** ಅವಕಾಶ ಬಂದಿದೆಯೆಂದು ಅನ್ಯಾಯವಾಗಿ ನಾನು ಕೇಳುವವನಲ್ಲ. ಏನು ಹೇಳಿದರೂ, ಏನು ಮಾಡಿದರೂ ನೀತಿ, ನಿಜಾಯಿತಿಯಿಂದ ಮಾಡುತ್ತೇವೆ. ನಿನ್ನ ಸಮಸ್ಯೆ ಪರಿಷ್ಕಾರವಾಗಬೇಕೆಂದರೆ ಮೊದಲು ಈಶ್ವರ್‌ನನ್ನು ನಮಗೆ ಪರಿಚಯ ಮಾಡು. ನಂತರ ನಾವು ಇಲ್ಲಿಂದ ನಿನ್ನ ಸಮಸ್ಯೆ ಪರಿಷ್ಕಾರಮಾಡಲಾರೆವು. ನಿನ್ನ ಸಮಸ್ಯೆ ದೊಡ್ಡದು ಆದ್ದರಿಂದ ನಾವು ನಿಮ್ಮ ಮನೆಯಲ್ಲೇ ಇದ್ದು ಸಮಸ್ಯೆಯನ್ನು ಪರಿಷ್ಕಾರ ಮಾಡಬೇಕಾಗಿರುತ್ತದೆ. ನಿಮ್ಮ ಮನೆಯಲ್ಲೇ ನಾವಿರುವುದರಿಂದ ಊಟ ನಿಮ್ಮ ಮನೆಯಲ್ಲೇ ತಿನ್ನಬೇಕಾಗಿರುತ್ತದೆ. ಆದ್ದರಿಂದ ಕೊನೆಯಲ್ಲಿ ನಮಗೆ ಒಂದು ಹಸುವನ್ನಾಲೀ, ಹಸುವಿಗೆ ಸರಿಹೋಗುವ ಹಣವನ್ನಾಲೀ ನೀವು ನಮಗೆ ಫೀಜು ಕೊಡಬೇಕಾಗಿರುತ್ತದೆ. ನಿಮ್ಮ ಸಮಸ್ಯೆಗಾಗಿ ಇಂದಿನಿಂದ ಐದು ಅಥವಾ ಆರು ತಿಂಗಳ ಕಾಲ ನಾವು ನಿಮ್ಮ ಮನೆಯಲ್ಲಿ ಇರಬೇಕಾಗಿರುತ್ತದೆ. ಇದಕ್ಕೆ ನೀವೇನನ್ನುತ್ತೀರ?

**ಜಮೀಂದಾರ್ :–** ನೀವು ಹೇಳಿರುವುದಕ್ಕೆ ಸಂತೋಷವಾಗಿ ಒಪ್ಪಿಕೊಳ್ಳುತ್ತೇನೆ. ನೀವೇ ನಮ್ಮ ಮನೆಗೆ ಬಂದರೆ ಅದಕ್ಕಿಂತ ಭಾಗ್ಯವೇನಿದೆ?

**ಮಲ್ಲಯ್ಯ :–** ನಾವು ನಿಮ್ಮ ಮನೆಗೆ ಹತ್ತು ದಿನಗಳವರೆಗು ಬರುವುದಿಲ್ಲ. ಅಷ್ಟರಲ್ಲಿ ನಿಮ್ಮ ಮಗ ಈಶ್ವರ್‌ನನ್ನು ನಮಗೆ ತೋರಿಸಿ ಪರಿಚಯ ಮಾಡು.

(ಸರಿ ಎಂದು ಹೇಳಿದ ಜಮೀಂದಾರ್ ಎರಡು ದಿನಗಳ ನಂತರ ಈಶ್ವರ್‌ನನ್ನು ಕರೆದುಕೊಂಡು ಬಂದು ಮಾಂತ್ರಿಕರಿಗೆ ತೋರಿಸಿ ಪರಿಚಯ ಮಾಡಿದ್ದಾನೆ. ಅಂದಿನಿಂದ ಈಶ್ವರ್ ಅವರಿಗೆ ಚೆನ್ನಾಗಿ ಪರಿಚಯವಾಗಿದ್ದಾನೆ. ಹತ್ತು ದಿನಗಳ ನಂತರ ಮುನೆಪ್ಪ ಹೇಳಿದಂತೆ ತಮ್ಮ ಬಿಡಾರವನ್ನು ಜಮೀಂದಾರ್ ಮನೆಗೆ ಬದಲಾಯಿಸಿದ್ದಾರೆ. ನಂತರ ಮುನೆಪ್ಪನಿಗೆ ಆ ವಿಷಯವನ್ನು ತಿಳಿಸಿದ್ದಾರೆ. ಬೇಗನೆ ತಮ್ಮ ಮನುಷ್ಯರು ಜಮೀಂದಾರ್ ಮನೆಯಲ್ಲಿ ಬಿಡಾರ ಹಾಕುವುದು ಮುನೆಪ್ಪನಿಗೆ ಸಂತೋಷವಾಯಿತು. ಆ ವಿಷಯವನ್ನು ತಪಸ್ವಿಬಾಬಾಗೆ ತಿಳಿಸಿದ್ದಾರೆ. ಆ ವಿಷಯವನ್ನು ತಿಳಿದುಕೊಂಡ ನಂತರ ತಪಸ್ವಿ ಬಾಬಾ ತನ್ನ ಪಿತೂರಿ ಸುಲಭವಾಗಿ ನೆರವೇರುತ್ತದೆಂದು ಸಂತೋಷಪಟ್ಟನು. ನಂತರ ಮುನೆಪ್ಪನಿಗೆ ಹೇಳಬೇಕಾಗಿರುವುದೆಲ್ಲಾ ಹೇಳಿ ಆ ವಿಷಯವನ್ನು ಮಾಂತ್ರಿಕರಿಗೆ ತಿಳಿಸೆಂದಿದ್ದಾನೆ. ಮುನೆಪ್ಪ, ತಪಸ್ವಿ ಬಾಬಾ ಹೇಳಿದ ಸಮಾಚಾರವನ್ನು ಇಬ್ಬರು ಮಾಂತ್ರಿಕರಿಗೂ ತಿಳಿಸಿದ್ದಾನೆ. ವಾರ್ತೆಗಳನ್ನು ತಿಳಿಸುವುದಕ್ಕೆ ಚನ್ನಪಟ್ಟಣದಲ್ಲೇ ತನ್ನ ಮನುಷ್ಯನನ್ನು ಇರುವಂತೆ ಮುನೆಪ್ಪ ಮಾಡಿದ್ದಾನೆ.

ಅಷ್ಟರಲ್ಲಿ ಎರಡನೆ ಅಮಾವಾಸ್ಯೆ ಬಂದಿತು. ಕಳೆದ ಅಮಾವಾಸ್ಯೆ ದಿನದಂದು ಇರುವಂತೆಯೇ ಎರಡನೆ ಅಮಾವಾಸ್ಯೆ ಸಹ ಈಶ್ವರ್‌ಗೆ ನಿದ್ರೆಮತ್ತು ಆವರಿಸಿ ಮಂಕಾಗಿ ಇತ್ತು. ಆ ದಿನ ಕೂಡಾ ಈಶ್ವರ್ ಕಾಲೇಜಿಗೆ ಹೋಗಲಿಲ್ಲ. ತನ್ನ ರೂಮಿನಲ್ಲೇ ಇದ್ದಾನೆ. ಕಣ್ಣು ತೆರೆದು ನೋಡುವುದಕ್ಕೆ ಇಷ್ಟವಿಲ್ಲದ ಕಾರಣ ಕಣ್ಣು ಮುಚ್ಚಿಕೊಂಡು ಕುಳಿತುಕೊಂಡಿದ್ದಾನೆ. ಆ ದಿನ ಅಮಾವಾಸ್ಯೆ ಎಂದು ಮಾಂತ್ರಿಕರಿಗೂ ಸಹ ತಿಳಿದಿತ್ತು. ತಪಸ್ವಿಬಾಬಾ ಮುನೆಪ್ಪನಿಂದ ತಿಳಿಸಿದ ವಿಷಯದಲ್ಲಿ ಆ ದಿನ ಈಶ್ವರ್ ಶರೀರದೊಳಗೆ ಒಂದು ಶಕ್ತಿ ಪ್ರವೇಶಿಸುತ್ತದೆಂದು ತಿಳಿದಿತ್ತು. ಆತನೊಳಗೆ

ಶಕ್ತಿ ಪ್ರವೇಶಿಸುವಾಗಾಗಲೀ, ಪ್ರವೇಶಿಸುವುದಕ್ಕೆ ಮೊದಲಾಗಲೀ, ಪ್ರವೇಶಿಸಿದ ನಂತರ ಗಂಟೆಯೊಳಗಾಗಲೀ ಈಶ್ವರ್ ಮುಖದ ಮೇಲೆ, ಬಾಬಾ ಕೊಟ್ಟು ಕಳುಹಿಸಿದ ವಿಭೂತಿಯ ಬೊಟ್ಟನ್ನು ಇಡಬೇಕು. ಹೀಗೆ ವಿಭೂತಿಯನ್ನು ಈಶ್ವರ್ ಮುಖದ ಮೇಲೆ ಇಡುವುದರಿಂದ ಆ ವಿಭೂತಿ ಯಾರದೋ, ಅವರ ಮಾತಿನ ಪ್ರಕಾರ ಈಶ್ವರ್‌ನೊಳಗೆ ಪ್ರವೇಶಿಸಿದ ಶಕ್ತಿ ನಡೆದುಕೊಳ್ಳುತ್ತದೆ. ವಿವರವಾಗಿ ಹೇಳಿದರೇ ವಿಭೂತಿ ಯಾರದೋ ಅವರಿಗೆ ಈಶ್ವರ್‌ನಲ್ಲಿನ ಶಕ್ತಿ ವಶವಾಗುತ್ತದೆ. ಆದ್ದರಿಂದ ಇಬ್ಬರು ಮಾಂತ್ರಿಕರು ಜಮೀಂದಾರನಿಗೆ ಧೈರ್ಯ ಹೇಳಿ, ನಾವು ಆತನಿಗೆ ಏನೂ ನಡೆಯದಂತೆ ನೋಡಿಕೊಳ್ಳುತ್ತೇವೆಂದು ಈಶ್ವರ್ ರೂಮಿನೊಳಗೆ ಬರುವುದನ್ನೇ ಕಾದುಕೊಂಡಿದ್ದಾರೆ. ನಾಗಭೂಷಣ ಕುಂಕುಮ, ಹರಿಷಿಣ ಬೆರೆಸಿದ ಅಕ್ಕಿಯನ್ನು (ಅಕ್ಷತೆಗಳನ್ನು) ಕೈಯ್ಯಲ್ಲಿ ಇಟ್ಟುಕೊಂಡಿರುವಾಗ ಮಲ್ಲಯ್ಯ ವಿಭೂತಿ ಪೊಟ್ಟಣವನ್ನು ತೆಗೆದುಕೊಂಡಿದ್ದನು. ಅವರ ಅಂದಾಜಿನ ಪ್ರಕಾರ ಹಗಲು 10 ಗಂಟೆಗಳ ಸಮಯದಲ್ಲಿ ಶಕ್ತಿ ಆತನಲ್ಲಿ ಸೇರುತ್ತದೆಂದು ಮೊದಲೇ ಬಾಬಾ ಹೇಳಿಕಳುಹಿಸಿದ್ದನು. ಸರಿಯಾಗಿ ಹತ್ತು ಗಂಟೆಯಿಂದ ಹದಿನೈದು ನಿಮಿಷಗಳ ಕಾಲ ಈಶ್ವರ್‌ನೊಳಗೆ ಶಕ್ತಿ ಸೇರುವುದಕ್ಕೆ ಸಮಯ ಬೇಕಾಗುತ್ತದೆಂದು ಅವರಿಗೆ ಮೊದಲೇ ತಿಳಿದಿರುವುದರಿಂದ ಇಬ್ಬರು ಮಾಂತ್ರಿಕರು ಹತ್ತು ಗಂಟೆ ಎರಡು ನಿಮಿಷಗಳಿಗೆ ಈಶ್ವರ್ ರೂಮಿನೊಳಗೆ ಪ್ರವೇಶಿಸಿದರು. ಈಶ್ವರ್ ಮೌನವಾಗಿ ಕುರ್ಚಿಯಲ್ಲಿ ಕುಳಿತುಕೊಂಡಿದ್ದಾನೆ. ಅಲ್ಲಿ ನೋಡುವುದಕ್ಕೆ ಎಲ್ಲಾ ಸರ್ವಸಾಧಾರಣವಾಗಿ ಇದೆ. ಈಶ್ವರ್ ಆಕಡೆ ತಿರುಗಿ ಕುಳಿತುಕೊಂಡಿರುವುದರಿಂದ ಆತನ ಮುಖ ಕಾಣಿಸಲಿಲ್ಲ. ಆ ಸಮಯದಲ್ಲಿ ಹದಿನೈದು ನಿಮಿಷಗಳ ಕಾಲ ಆತನೊಳಗೆ ಶಕ್ತಿ ಪ್ರವೇಶಿಸುತ್ತಿರುತ್ತದೆ. ಈ ಸಮಯದಲ್ಲೇ ಈಶ್ವರ್‌ಗೆ ವಿಭೂತಿ ಬೊಟ್ಟು ಇಡಬೇಕು. ರೂಮಿನೊಳಗೆ ಹೋದ ಮಾಂತ್ರಿಕರಿಗೆ ಅಲ್ಲಿ ಯಾವ ವ್ಯತ್ಯಾಸ ಕಾಣಿಸದೇ ಇರುವುದರಿಂದ ಧೈರ್ಯದಿಂದ ಮಲ್ಲಯ್ಯ ಮುಂದಕ್ಕೆ ಹೋಗಿದ್ದಾನೆ. ಏನಾದರೂ ತಾವು ಊಹಿಸದ ಸಂಘಟನೆ ನಡೆದರೇ, ಮಂತ್ರೋಚ್ಚಾಟನೆ ಮಾಡಿದ ಅಕ್ಷತೆಗಳನ್ನು ಚೆಲ್ಲಿ, ಯಾವ ಆಪತ್ತು ನಡೆಯದಂತೆ ಮಾಡುವುದಕ್ಕೆ ನಾಗಭೂಷಣನು ಸಿದ್ಧವಾಗಿ ನಿಂತಿರುವಾಗ, ಮಲ್ಲಯ್ಯತಾತ ಈಶ್ವರ್‌ಗೆ ಬೊಟ್ಟು ಇಡುವುದಕ್ಕೆ ಈಶ್ವರ್ ಮುಂದಕ್ಕೆ ಹೋಗಿದ್ದಾನೆ. ಮುಂದಕ್ಕೆ ಹೋಗಿ

ನೋಡಿದ ಮಲ್ಲಯ್ಯನಿಗೆ ಮತಿ ಹೋದಂತಾಯಿತು. ಒಂದು ಸಲ ಈಶ್ವರ್ ಮುಂದಿನಿಂದ ಪಕ್ಕಕ್ಕೆ ಸರೆದು ನಾಗಭೂಷಣನ ಹತ್ತಿರಕ್ಕೆ ಬಂದಿದ್ದಾನೆ. ಏನು ಎನ್ನುವಂತೆ ನಾಗಭೂಷಣ ಮಲ್ಲಯ್ಯನ ಕಡೆ ನೋಡಿದನು. ಹಿಂದಿನಿಂದ ಈಶ್ವರ್ ಕಡೆ ನೋಡುತ್ತಾ ಮಲ್ಲಯ್ಯ "ಆತನಿಗೆ ಅಲ್ಲಿ ತಲೆ ಕಾಣಿಸಲಿಲ್ಲ, ಬೊಟ್ಟು ಎಲ್ಲಿ ಇಡಬೇಕು?" ಎಂದನು. ಹಿಂಬದಿಯಿಂದ ನಾಗಭೂಷಣನಿಗು, ಮಲ್ಲಯ್ಯನಿಗು ಇಬ್ಬರಿಗೂ ಈಶ್ವರ್ ತಲೆ ಕಾಣಿಸುತ್ತಲೇ ಇದೆ. ನಾಗಭೂಷಣ ಈಶ್ವರ್‌ಕಡೆ ನೋಡುತ್ತಾ "ಇಲ್ಲಿಂದ ಕಾಣಿಸುತ್ತಿದೆಯಲ್ಲವೆ!" ಎಂದನು.

ಎರಡನೆ ಸಲ ನಾಗಭೂಷಣ, ಮಲ್ಲಯ್ಯ ಇಬ್ಬರೂ ಸೇರಿ ಈಶ್ವರ್ ಮುಂದಕ್ಕೆ ಹೋಗಿದ್ದಾರೆ. ಅಲ್ಲಿಗೆ ಹೋದ ಇಬ್ಬರಿಗೂ ಈಶ್ವರ್ ತಲೆ ಕಾಣಿಸಲಿಲ್ಲ. ಇಬ್ಬರೂ ಒಬ್ಬರ ಮುಖ ಒಬ್ಬರು ನೋಡಿಕೊಂಡು ಪಕ್ಕಕ್ಕೆ ಬಂದಿದ್ದಾರೆ. ಅವರು ತೆಗೆದುಕೊಂಡು ಹೋದ ಒಂದು ಚಿಕ್ಕ ಕೈ ಚೀಲವನ್ನು ಮೊದಲು ನಾಗಭೂಷಣನು ನಿಂತಿರುವ ಕಡೆ ಇಟ್ಟಿದ್ದರು. ಅದರಲ್ಲಿ ಕೆಲವು ಅವರಿಗೆ ಅಗತ್ಯವಿರುವ ಸಾಮಾಗ್ರಿಯನ್ನು ತೆಗೆದುಕೊಂಡು ಹೋಗಿದ್ದರು. ಆ ಚೀಲಕ್ಕಾಗಿ ಹಿಂಬದಿಯಿಂದ ಬಂದು ಚೀಲವನ್ನು ತೆಗೆದುಕೊಂಡು ಈಶ್ವರ್ ಕಡೆ ನೋಡಿದ್ದಾರೆ. ಈ ಸಲ ಇಬ್ಬರಿಗೂ ಹಿಂಬದಿಯಿಂದ ಕೋಡಾ ಆತನಿಗೆ ತಲೆ ಇಲ್ಲದಂತೇ ಇದೆ. ಕುರ್ಚಿಯಲ್ಲಿ ತಲೆಯಿಲ್ಲದ ಮುಂಡ ಮಾತ್ರ ಕುಳಿತುಕೊಂಡಂತೆ ಕಾಣಿಸುತ್ತಿದೆ. ಅವರು ಇಬ್ಬರೂ ಮಾಂತ್ರಿಕರೇ ಆದರೂ, ಆಗ ಯಾವ ಮಂತ್ರವನ್ನು ಪ್ರಯೋಗಿಸಬೇಕೋ ಅವರಿಗೆ ಅರ್ಥವಾಗಲಿಲ್ಲ. ಅಂತಹ ಸಮಯದಲ್ಲಿ ಸಹ ಅವರು ಧೈರ್ಯವಾಗಿಯೇ ಇದ್ದಾರೆ. ಚೀಲದೊಳಗಿನಿಂದ ಚಿಕ್ಕ ಕಾಡಿಗೆಯ ಡಬ್ಬಿಯನ್ನು ಹೊರಗೆ ತೆಗೆದಿದ್ದಾರೆ. ಮರ್ಮಾಂಜನವನ್ನು ಹೊರಗೆ ತೆಗೆದು ಅದನ್ನು ಇಬ್ಬರೂ ಕಣ್ಣಿಗೆ ಕಾಡಿಗೆಯಂತೆ ಧರಿಸಿದ್ದಾರೆ. ಆ ಕಾಡಿಗೆಯನ್ನು ಕಣ್ಣರೆಪ್ಪೆಗಳಿಗೆ ಹಚ್ಚಿಕೊಂಡರೇ ಅಲ್ಲಿಯವರೆಗು ಕಾಣಿಸದಂತೆ ಮರ್ಮವಾಗಿ ಇರುವವು ಯಾವಾದರೂ ಕಾಣಿಸುತ್ತವೆ. ಆದ್ದರಿಂದ ಆ ಕಾಡಿಗೆಯನ್ನು ಇಟ್ಟುಕೊಂಡಿದ್ದಾರೆ. ಹಾಗೆ ಇಟ್ಟುಕೊಂಡರೂ ಅವರಿಗೆ ಈಶ್ವರ್ ತಲೆ ಕಾಣಿಸಲಿಲ್ಲ. ಅಷ್ಟೇ ಹೊರತು ಅಲ್ಲಿ ಏನೂ ನಡೆಯಲಿಲ್ಲ. ಆಗ ಆ ರೂಮಿನಲ್ಲೆಲ್ಲಾ ತನ್ನ

ಕೈಯ್ಯಲ್ಲಿನ ಅಕ್ಷತೆಗಳನ್ನು ನಾಗಭೂಷಣನು ಚೆಲ್ಲಿದನು. ಈ ವಿಧವಾಗಿ ಒಳಗೆ ನಡೆಯುತ್ತಿರುವಾಗ ಹೊರಗೆ ಜಮೀಂದಾರ್, ಆತನ ಹೆಂಡತಿ ಇಬ್ಬರೂ ಒಳಗೆ ಏನು ನಡೆಯುತ್ತಿದೆಯೋ ಎನ್ನುವ ಗಾಬರಿಯಿಂದಿದ್ದಾರೆ. ಒಳಗೆ ಬಂದಿರುವ ಇಬ್ಬರು ಮಾಂತ್ರಿಕರಿಗೂ ತಲೆಯೇ ಇಲ್ಲದ ಮನುಷ್ಯನಿಗೆ ತಾವು ಬೊಟ್ಟು ಹೇಗೆ ಇಡಬೇಕೋ ಅರ್ಥವಾಗಲಿಲ್ಲ. ಈ ವಿಧವಾಗಿ ಒಳಗೆ ಹದಿನೈದು ನಿಮಿಷಗಳು ಕಳೆದುಹೋದವು. ಆ ಸಮಯಕ್ಕೆ ಆತನೊಳಗೆ ಬರಬೇಕಾದ ಶಕ್ತಿ ಪೂರ್ತಿಯಾಗಿ ಬಂದುಬಿಟ್ಟಿದೆ. ಇನ್ನೂ ಗಂಟೆ ಸಮಯದೊಳಗೆ ಆ ಮಾಂತ್ರಿಕರು ವಿಭೂತಿಯನ್ನು ಬೊಟ್ಟಾಗಿ ಈಶ್ವರ್‌ಗೆ ಇಡಬೇಕು. ಈ ಸಲ ಮಲ್ಲಯ್ಯನಿಗೆ ಒಂದು ಆಲೋಚನೆ ಬಂದಿದೆ. ಪಕ್ಕದಲ್ಲಿರುವ ಕನ್ನಡಿಯನ್ನು ತೆಗೆದುಕೊಂಡು ಈಶ್ವರ್ ಮುಂದೆ ಇಟ್ಟರೇ ಅದರಲ್ಲಿ ಅಲ್ಲಿಯವರೆಗು ಕಾಣಿಸದ ತಲೆ ಕನ್ನಡಿಯಲ್ಲಿ ಕಾಣಿಸುತ್ತದೆಂದೂ ಆಗ ಕನ್ನಡಿಯಲ್ಲಿ ನೋಡುತ್ತಾ ಕಾಣಿಸದ ಮುಖಕ್ಕೆ ಬೊಟ್ಟು ಇಡಬಹುದೆಂದು ಕೊಂಡಿದ್ದಾರೆ. ಮಲ್ಲಯ್ಯ ಆಗ ಆ ವಿಷಯವನ್ನು ನಾಗಭೂಷಣನಿಗೆ ಹೇಳಿ ನಾಗಭೂಷಣ ಕನ್ನಡಿಯನ್ನು ಹಿಡಿದುಕೊಳ್ಳುವಂತೆ ಮಾಡಿದ್ದಾನೆ. ಆಗ ಕನ್ನಡಿಯಲ್ಲಿ ನೋಡಿದಾಗ ಅದರಲ್ಲಿ ಪೂರ್ತಿ ಮನುಷ್ಯನೇ ಕಾಣಲಿಲ್ಲ. ಕನ್ನಡಿಯಲ್ಲಿ ಕಾಣಿಸದ ಮುಂಡ ಹೊರಗೆ ಕಾಣಿಸುತ್ತಿದೆ. ಅದು ಒಂದು ವಿಧವಾಗಿ ಮಾಂತ್ರಿಕರಿಗಾದರೂ ಭಯಾನಕ ಪರಿಸ್ಥಿತಿಯೇ ಆದರೂ ಅವರು ಧೈರ್ಯದಿಂದಲೇ ಆ ರೂಮಿನಲ್ಲಿ ಅಲ್ಲಿಯವರೆಗು ಇದ್ದಾರೆ. ಒಂದು ಕಡೆ ಮರ್ಮಾಂಜನವೂ ಕೆಲಸ ಮಾಡಲಿಲ್ಲ. ಎರಡನೆ ಕಡೆ ಕನ್ನಡಿಯೂ ಕೆಲಸ ಮಾಡಲಿಲ್ಲ. ಮೂರನೆ ವಿಧವಾಗಿ ಅವರು ಹಾಕಿದ ಅಕ್ಷತೆಗಳ ಪ್ರಭಾವವೂ ಇಲ್ಲದಂತೆ ಹೋಯಿತು. ಇನ್ನು ಅವರು ಏನು ಮಾಡಬೇಕೋ ಆಲೋಚಿಸತೊಡಗಿದರು. ಆಗಾಗಲೇ ಉಳಿದ ಗಂಟೆಯಲ್ಲಿ ಇಪ್ಪತ್ತು (20) ನಿಮಿಷಗಳು ಕಳೆದುಹೋಗಿವೆ. ಇನ್ನು ಅವರು ಏನು ಮಾಡಿದರೂ ನಲವತ್ತು (40) ನಿಮಿಷಗಳಲ್ಲೇ ಮಾಡಬೇಕು. ಆಗ ಅವರಿಗೆ ಒಂದು ಆಲೋಚನೆ ಬಂದಿತು. ಭೂಜರೀ ಮಂತ್ರವನ್ನು ಹತ್ತು ನಿಮಿಷಗಳು ಪಠಿಸಿ, ಆ ಮಂತ್ರವನ್ನು ಜಾಗೃತಿ ಮಾಡಿ ನೋಡಬೇಕೆಂದುಕೊಂಡಿದ್ದಾರೆ. ಆಗ ಮಲ್ಲಯ್ಯ ತಾತ ಭೂಜರೀ ಮಂತ್ರವನ್ನು ಜಪಿಸಲಾರಂಭಿಸಿದನು. ಹತ್ತು ನಿಮಿಷಗಳಲ್ಲಿ 108 ಸಲ ಆ ಮಂತ್ರವನ್ನು ಜಪಿಸಿ,

ಆ ಮಂತ್ರವನ್ನು ಜಾಗೃತೀ ಮಾಡಿ, ಆ ಮಂತ್ರದಿಂದ ನೀರನ್ನು ಮಂತ್ರಿಸಿ ಆ ರೂಮಿನಲ್ಲಿ ನಾಲ್ಕು ಮೂಲೆಗಳಲ್ಲಿ ಚೆಲ್ಲಿದ್ದಾರೆ. ಹಾಗೆ ಮಾಡುವುದರಿಂದ ಆ ರೂಮಿನಲ್ಲಿ ತಮಗೆ ತಿಳಿಯದಂತೆ ಇದ್ದು, ಈಶ್ವರ್ ತಲೆಯನ್ನು ಕಾಣಿಸದಂತೆ ಮಾಡುವ ಶಕ್ತಿ ಯಾವುದಾದರೂ ಇದ್ದರೇ ಆ ರೂಮಿನಿಂದ ಹೊರಗೆ ಹೋಗುತ್ತದೆಂದು ಆಗ ಈಶ್ವರ್ ತಲೆ ತಮಗೆ ಕಾಣಿಸುತ್ತದೆಂದು ಅವರ ಉದ್ದೇಶ. ಆ ವಿಧವಾಗಿ ನೀರನ್ನು ಚೆಲ್ಲಿದರೂ ಯಾವ ಪ್ರಯೋಜನೆ ಇಲ್ಲದಂತಾಯಿತು. ಇದೆಲ್ಲಾ ನಡೆಯುವುದರಲ್ಲಿ (20) ನಿಮಿಷಗಳು ಕಳೆದುಹೋದವು. ಇನ್ನು ಉಳಿದಿರುವುದು ಕೇವಲ ಇಪ್ಪತ್ತು ನಿಮಿಷಗಳು ಮಾತ್ರ. ಆಗ ಅವರು ತಮ್ಮ ಹತ್ತಿರವಿರುವ ವಿಭೂತಿಯನ್ನು ಮನೆಯೆಲ್ಲಾ ಹಾಕಿ ನೋಡಬೇಕೆಂದುಕೊಂಡಿದ್ದಾರೆ. ಹಾಗೇ ವಿಭೂತಿಯನ್ನು ಆ ರೂಮಿನಲ್ಲಿ ಎಲ್ಲಾ ಹಾಕಿ ನೋಡಿದರು. ಆಗಲೂ ಸಹ ಈಶ್ವರ್ ತಲೆ ಅವರಿಗೆ ಕಾಣಿಸಲಿಲ್ಲ. ಹಾಗೆ ಕಾಣಿಸದಂತೆ ಹೋಗಿ ಅವರಿಗೆ ಚರ್ಮವೆಲ್ಲಾ ನವೆ (ತುರಿಕೆ) ಸ್ವಲ್ಪ ಸ್ವಲ್ಪವಾಗಿ ಶುರುವಾಯಿತು. ಆಗ ಅವರು ಚರ್ಮವನ್ನು ಕೆರೆಯುತ್ತಾ ಇನ್ನು ಏನು ಮಾಡಬೇಕೆಂದು ಆಲೋಚಿಸುತ್ತಿರುವಾಗಲೇ ಅವರಿಗೆ ಮೈಯ್ಯೆಲ್ಲಾ ವಿಪರೀತವಾದ ತುರಿಕೆ ಬಂದವು. ಅಷ್ಟರಲ್ಲಿ ಸಮಯವೂ ಸಹ ಮುಗಿದುಹೋಯಿತು. ಇನ್ನು ಅಲ್ಲಿರಬಾರದೆಂದು ಇಬ್ಬರು ಮಾಂತ್ರಿಕರು ರೂಮಿನ ಹೊರಗೆ ಬಂದರು. ಹಾಗೆ ಹೊರಗೆ ಬಂದವರನ್ನು ಜಮೀಂದಾರ್ ಏನಾಯಿತೆಂದು ಪ್ರಶ್ನಿಸಿದನು. ಅದಕ್ಕೆ ಅವರು "ನಾವು ಏನು ಮಾಡಬೇಕೋ ಅದು ಮಾಡಿದ್ದೇವೆ. ನೀವು ಧೈರ್ಯದಿಂದ ಇರಿ ಎಂದು ಅವರ ರೂಮಿನೊಳಗೆ ಹೋಗಿ ಬಟ್ಟೆಗಳು ಬಿಚ್ಚಿ ಶರೀರವೆಲ್ಲಾ ಕೆರೆದುಕೊಂಡರು. ಹೊರಗೆ ಜಮೀಂದಾರ್ ಆ ಮಾಂತ್ರಿಕರು ಇಷ್ಟುಹೊತ್ತು ಒಳಗೆ ಇದ್ದಾರೆ ಆದ್ದರಿಂದ ಈಶ್ವರ್‌ಗೆ ಕಳೆದ ತಿಂಗಳು ನಡೆದಂತೆ ನಡೆಯದೆ ಮಾಡಿದ್ದಾರೆಂದು ಅಂದುಕೊಂಡಿದ್ದಾರೆ.

ಎರಡು ಗಂಟೆಗಳ ನಂತರ ಸ್ನಾನ ಮಾಡಿ ಅವರ ಕೊಠಡಿಯಿಂದ ಇಬ್ಬರು ಮಾಂತ್ರಿಕರು ಹೊರಗೆ ಬಂದು ಜಮೀಂದಾರ್‌ಗೆ ಹೇಳಿ ಬಜಾರಿಗೆ ಹೋಗಿದ್ದಾರೆ. ಬಜಾರಿನಲ್ಲಿ ಮುನೆಪ್ಪ ಮೊದಲೇ ಸಮಾಚಾರ ಶೇಖರಣೆಗಾಗಿ ಏರ್ಪಾಟು ಮಾಡಿದ್ದ ಮನುಷ್ಯನೊಂದಿಗೆ ನಡೆದ ವಿಷಯವೆಲ್ಲಾ ಹೇಳಿ ಕಳುಹಿಸಿದ್ದಾರೆ.

ನಡೆದ ವಿಷಯವನ್ನು ತಮ್ಮ ವಾರ್ತಾಹರನಿಂದ ತಿಳಿದುಕೊಂಡ ಮುನೆಪ್ಪ ಆ ಸಮಾಚಾರವನ್ನು ತಪಸ್ವಿಬಾಬಾಗೆ ಸೇರಿಸಿದ್ದಾನೆ. ತಾನು ಅಂದುಕೊಂಡ ಕಾರ್ಯ ನಡೆಯುದಂತೆ ಹೋಗುವುದಕ್ಕೆ ಕಾರಣ ಏನಿರುತ್ತದೆಂದು ಬಾಬಾ ಯೋಚಿಸಲಾರಂಭಿಸಿದನು.)

*********************************

(ರಾಜಯೋಗಾನಂದ ಸ್ವಾಮಿಗೆ ಜಮೀಂದಾರ್ ಮನೆಯಲ್ಲಿ ಮುನೆಪ್ಪ ಮನುಷ್ಯರಾದ ಇಬ್ಬರು ಮಾಂತ್ರಿಕರು ಸೇರಿದ್ದಾರೆಂದಾಗಲೀ, ಅವರು ಎರಡನೆ ಅಮಾವಾಸ್ಯೆ ದಿನದಂದು ಈಶ್ವರ್‌ಗೆ ವಿಭೂತಿಬೊಟ್ಟು ಇಡಬೇಕೆಂದು ವಿಶ್ವಪ್ರಯತ್ನ ಮಾಡಿ ವಿಫಲವಾಗಿದ್ದಾರೆಂದಾಗಲೀ ತಿಳಿಯದು. ತಪಸ್ವಿಬಾಬಾ ಮೊದಲೇ ತನ್ನ ಪಿತೂರಿಯನ್ನು ನೆರವೇರಿಸಿಕೊಳ್ಳುವುದಕ್ಕೆ ಮಾಂತ್ರಿಕರನ್ನು ಜಮೀಂದಾರ್ ಮನೆಯಲ್ಲೇ ಸೇರಿಸಿದ್ದಾನೆಂದೂ, ಹಾಗೆ ಮಾಡುತ್ತಾನೆಂದು ರಾಜಯೋಗಾನಂದ ಸ್ವಾಮಿ ಸ್ವಲ್ಪವಾದರೂ ಊಹಿಸಲಿಲ್ಲ. ಮುಂಬರುವ ಮೂರನೆ ಅಮಾವಾಸ್ಯೆ ಭಾನುವಾರ ಬರುತ್ತಿದೆ. ಆದ್ದರಿಂದ ಆದಿನ ಕಣ್ಣಿಗೆ ಕಾಣಿಸದ ಸೂಕ್ಷ್ಮಗಳಿಗೆ ಹೆಚ್ಚಿನ ಶಕ್ತಿ ಇರುತ್ತದೆ. ಆದ್ದರಿಂದ ಅ ದಿನ ಜಮೀಂದಾರ್ ಮನೆಯಲ್ಲಿ ಈಶ್ವರ್‌ನೊಳಗೆ ಒಂದು ಪ್ರತ್ಯೇಕವಾದ ಶಕ್ತಿ ಪ್ರವೇಶಿಸುತ್ತದೆಂದು ಸ್ವಾಮಿ ಅಂದುಕೊಂಡಿದ್ದಾನೆ. ಈಶ್ವರ್‌ಗೆ ನಡೆಯುವುದು ನಡೆಯದಂತಿರುವುದಿಲ್ಲವೆಂದು, ಅದನ್ನು ಕುರಿತು ಏನೂ ತಲೆಕೆಡಿಸಿಕೊಳ್ಳದಂತೆ ಇರು ಎಂದು ಮೊದಲೇ ಜಮೀಂದಾರನಿಗೆ ಹೇಳಿರುವುದರಿಂದ, ಆ ಮನೆಯವರಿಗೆ ಏನೂ ನಡೆಯುವುದಿಲ್ಲವೆಂದು ಸ್ವಾಮಿ ಅಂದುಕೊಂಡಿದ್ದಾನೆ. ಸ್ವಾಮಿ ಹೇಳಿದರೂ, ಸ್ವಾಮಿ ಮಾತುಗಳನ್ನು ಖಾತ್ರಿ ಮಾಡದಂತೆ, ಯಾರೋ ಮಾಂತ್ರಿಕರು ಹೇಳಿದ ಮಾತನ್ನು ಜಮೀಂದಾರು ಕೇಳಿದ್ದಾನೆಂದು, ಈಶ್ವರ್‌ಗೆ ಏನೋ ಒಳ್ಳೆಯದನ್ನು ಮಾಡಬೇಕೆನ್ನುವ ಉದ್ದೇಶದಿಂದ ಮಾಂತ್ರಿಕರನ್ನು ಮನೆಯಲ್ಲೇ ಇಟ್ಟುಕೊಂಡಿದ್ದಾನೆನ್ನುವ ವಿಷಯ ಸ್ವಾಮಿಗೆ ತಿಳಿದಿಲ್ಲ. ಆದ್ದರಿಂದ ಮುಂಬರುವ ಅಮಾವಾಸ್ಯೆ ಆದಿವಾರ ಬರುತ್ತಿದ್ದರೂ ಅದನ್ನು ಕುರಿತು ದೊಡ್ಡದಾಗಿ ಚಿಂತಿಸಬೇಕಾದ ಅಗತ್ಯವಿಲ್ಲ ಎಂದುಕೊಂಡಿದ್ದಾನೆ. ಅಷ್ಟೇ ಅಲ್ಲದೆ ಮುಂಬರುವ ನಾಲ್ಕನೆ, ಐದನೆ, ಆರನೇ

ಅಮಾವಾಸ್ಯೆಗಳು ಕೀಲಕವಾದ ದಿನಗಳು ಆದ್ದರಿಂದ ಆಗ ತಾವೂ ಸಹ ಆಶ್ರಮವನ್ನು ಬಿಟ್ಟು ಚೆನ್ನಪಟ್ಟಣದಲ್ಲೇ ಇರಬೇಕೆಂದು ಸ್ವಾಮಿ ನಿಶ್ಚಯಿಸಿಕೊಂಡಿದ್ದಾನೆ. ಅದೇ ವಿಷಯವನ್ನೇ ರಾಘವನೊಂದಿಗೆ ಹೇಳಿದ್ದಾನೆ.)

**ರಾಜಯೋಗಾನಂದ :–** ರಾಘವಾ! ಈಶ್ವರ್‌ಗೆ 16ನೇ ಸಂವತ್ಸರ ಎರಡು ಅಮಾವಾಸ್ಯೆಗಳು ಕಳೆದುಹೋಗಿವೆ. ಆತನೊಳಗೆ ಪ್ರಕೃತಿಯೊಳಗಿನ ಅತಿ ದೊಡ್ಡ ಶಕ್ತಿಗಳು ಎರಡು ಪ್ರವೇಶಿಸಿರುತ್ತವೆ. ಮೂರನೇ ಅಮಾವಾಸ್ಯೆ ಆದಿವಾರ ಬರುತ್ತಿದೆ. ಆ ದಿನ ಸ್ವಲ್ಪ ಪ್ರತ್ಯೇಕತೆ ಇದ್ದರೂ ಅದರಲ್ಲಿ ನಾವು ಮಾಡುವುದು ಏನೂ ಇಲ್ಲ. ನಂತರ ಮುಂಬರುವ ನಾಲ್ಕು, ಐದು, ಆರು ಅಮಾವಾಸ್ಯೆಗಳು ಬಹಳ ಕೀಲಕ ವಾದವು. ಆಗ ನಾವೂ ಸಹ ಈಶ್ವರ್ ಇರುವ ಚನ್ನಪಟ್ಟಣದಲ್ಲೆ ಇರಬೇಕಾಗುತ್ತದೆ.

**ರಾಘವ :–** ಸ್ವಾಮೀ, ಈಶ್ವರ್‌ನೊಳಗೆ ಸೇರುವವು ಬಹಳ ದೊಡ್ಡ ಶಕ್ತಿಗಳು ಎಂದಿದ್ದೀರಲ್ಲ! ಅವು ಯಾವ ಶಕ್ತಿಗಳು?

**ರಾಜಯೋಗಾನಂದ :–** ಪಂಚಭೂತಗಳು ಮಹಾಶಕ್ತಿಗಳು ಅಲ್ಲವೆ, ಆ ಮಹಾ ಭೂತಗಳು ಪ್ರಳಯದಲ್ಲಿ ಸೃಷ್ಟಿಯನ್ನೆಲ್ಲಾ ನಾಶ ಮಾಡುತ್ತವಲ್ಲವೆ! ಅವುಗಳ ನಂತರ ಇರುವ ಭೂತಗಳು ಸೃಷ್ಟಿಯನ್ನೆಲ್ಲಾ ನಾಶ ಮಾಡಲಾರವು. ಸೃಷ್ಟಿಯಲ್ಲಿ ಸ್ವಲ್ಪ ಭಾಗವನ್ನು ನಾಶ ಮಾಡುವ ಶಕ್ತಿಗಳು ಮಹಾ ಭೂತಗಳ ನಂತರ ಇರುವ ಸ್ವಲ್ಪ ಭೂತಗಳೆಂದು ಅರ್ಥ ಮಾಡಿಕೋ. ಇವುಗಳ ನಂತರ ದೊಡ್ಡವು ಮಹಾ ಭೂತಗಳು ಐದು ಮಾತ್ರ ಇವೆ. ಮಹಾಭೂತಗಳ ನಂತರ ಹತ್ತು ಅತಿ ದೊಡ್ಡ ಭೂತಗಳಿವೆ. ಅವುಗಳ ನಂತರದ ಸ್ಥಾನದವುಗಳು ಕೆಲವು ಇರುವಾಗ, ಅವುಗಳ ನಂತರ ಕೆಲವು ಇರುವಾಗ, ಅವುಗಳ ನಂತರ ಕೆಲವು ಹೀಗೆ ಅನೇಕ ಹಂತಗಳಲ್ಲಿ ಕೋಟ್ಯಾದಿ ಭೂತಗಳಿವೆ. ಐದು ಮಹಾಭೂತಗಳ ನಂತರ ಹಂತದ ಭೂತಗಳು ಹತ್ತು ಇವೆ ಎಂದಿದ್ದೇವಲ್ಲ! ಅವುಗಳಲ್ಲಿ ಒಟ್ಟು ಆರು ಒಂದೊಂದು ಅಮಾವಾಸ್ಯೆ ದಿನದಂದು ಒಂದೊಂದರ ಪ್ರಕಾರ ಆರು ಅಮಾವಾಸ್ಯೆಗಳಿಗೆ ಆರು ಈಶ್ವರ್‌ನಲ್ಲಿ ಸೇರುತ್ತವೆ. ಆದ್ದರಿಂದ ಪ್ರಕೃತಿ ನಂತರ ದೊಡ್ಡ ಶಕ್ತಿ ಇರುವ ಭೂತಗಳು ಎಂದು ಹೇಳಿದ್ದೇನೆ.

**ರಾಘವ :–** ಆ ಭೂತಗಳ ಶಕ್ತಿಗಳು ಈಶ್ವರ್‌ನಲ್ಲಿ ಸೇರಿ ಏನು ಮಾಡುತ್ತವೆ?

**ರಾಜಯೋಗಾನಂದ :–** ಏನು ಮಾಡುತ್ತವೋ ಖಚಿತವಾಗಿ ನಾವೂ ಸಹ ಹೇಳಲಾರೆವು. ಒಂದು ಮಾತ್ರ ಹೇಳಬಲ್ಲೆವು. ಆ ಶಕ್ತಿಗಳು ಪ್ರಪಂಚದಲ್ಲಿ ಸ್ವಲ್ಪದಮಟ್ಟಿಗೆ ಜೀವರಾಶಿಗಳನ್ನು ನಾಶ ಮಾಡುತ್ತವೆಂದು ಮಾತ್ರ ಹೇಳಬಲ್ಲೆವು. ಹಾಗೆ ನಡೆಯಬಾರದೆಂದೇ ನಾವು ಕೋರಿಕೊಳ್ಳುತ್ತಿದ್ದೇವೆ. ಆ ಶಕ್ತಿಗಳನ್ನು ವಶ ಮಾಡಿ ಕೊಂಡು ಅವುಗಳಿಂದ ವಿನಾಶನವನ್ನು ಸೃಷ್ಟಿಸಬೇಕೆಂದು ತಪಸ್ವಿಬಾಬಾ ಅಂದುಕೊಳ್ಳುತ್ತಿದ್ದಾನೆಂದೂ, ಅದನ್ನು ನಾವು ನಿರೋಧಿಸಬೇಕೆಂದೂ ಮೊದಲೇ ಹೇಳಿದ್ದೀನಲ್ಲವೆ!

**ರಾಘವ :–** ಆ ಶಕ್ತಿಗಳನ್ನು ನಿರೋಧಿಸುವುದಕ್ಕೆ ನಾವು ಏನು ಮಾಡಬೇಕು?

**ರಾಜಯೋಗಾನಂದ :–** ನಾವು ಶಕ್ತಿಗಳನ್ನು ನಿರೋಧಿಸಲಾರೆವು. ಅವುಗಳನ್ನು ನಿರೋಧಿಸಲು ನಮ್ಮಿಂದ ಆಗುವುದಿಲ್ಲ. ನಾವು ಮಾಡಬೇಕಾಗಿರುವುದು ಅವುಗಳನ್ನು ಪ್ರೇರೇಪಿಸಿ ಅವುಗಳ ಶಕ್ತಿಯನ್ನು ವಿನಿಯೋಗಿಸುವ ದುಷ್ಟರನ್ನು ನಿರೋಧಿಸಬೇಕು. ಆ ಶಕ್ತಿಗಳು ದೊಡ್ಡವೇ ಆದರೂ, ಅವುಗಳ ಶಕ್ತಿ ಬಹಳ ವಿನಾಶಕರವಾದದ್ದಾದರೂ, ಅವು ಏನೂ ಮಾಡುವುದಿಲ್ಲ. ಅವುಗಳನ್ನು ವಶ ಮಾಡಿಕೊಂಡು ಪ್ರಪಂಚದಲ್ಲಿ ಆಧಿಪತ್ಯವನ್ನು ಸಂಪಾದಿಸಿಕೊಳ್ಳಬೇಕೆಂದು ಕೊಳ್ಳುವವರನ್ನು ನಾವು ನಿರೋಧಿಸಬೇಕು. ಅದಕ್ಕಾಗಿ ನಾವು ಇಂದಿನಿಂದ ಪ್ರಯತ್ನ ಮಾಡಬೇಕು. ಆ ಶಕ್ತಿಗಳನ್ನು ದುರ್ಮಾರ್ಗರು ವಶ ಮಾಡಿಕೊಳ್ಳದಂತೆ ನೋಡಬೇಕು.

(ಆ ವಿಧವಾಗಿ ಹೇಳಿದ ರಾಜಯೋಗಾನಂದ ಸ್ವಾಮಿ, ತಪಸ್ವಿಬಾಬಾ ಏನು ಪ್ರಯತ್ನ ಮಾಡಿದ್ದಾನೋ ನೋಡಿ, ಅದಕ್ಕೆ ತಕ್ಕಂತೆ ಸ್ಪಂದಿಸಬೇಕೆಂದು ಅಂದುಕೊಂಡಿದ್ದಾನೆ.)

*********************************

(ಮುನೆಪ್ಪನಿಂದ ಚನ್ನಪಟ್ಟಣದಲ್ಲಿ ಜಮೀಂದಾರ್ ರಾವುಬಹುದೂರ್ ಮನೆಯಲ್ಲಿ ನಡೆದ ವಿಷಯವೆಲ್ಲಾ ತಿಳಿದುಕೊಂಡ ತಪಸ್ವಿಬಾಬಾ, ತಮ್ಮ ಮಾಂತ್ರಿಕರು

ಒಂದು ಗಂಟೆ ಸಮಯ ಪ್ರಯತ್ನಮಾಡಿ ಈಶ್ವರ್ ಮುಖದಲ್ಲಿ ಬೊಟ್ಟನ್ನು ಇಡಲಾರದೇ ಹೋಗಿದ್ದಾರೆಂದೂ, ಏಕೆ ಆ ಸಮಯದಲ್ಲಿ ಈಶ್ವರ್ ತಲೆ ಕಾಣಿಸದಂತೆ ಹೋಗಿದೆಯೋ ಎಂದು ಬಾಬಾ ಬಹಳ ಹೊತ್ತು ಆಲೋಚಿಸಿದನು. ಆ ವಿಷಯ ಬಾಬಾರವರಿಗೆ ಸ್ವಲ್ಪವಾದರೂ ಅರ್ಥವಾಗಲಿಲ್ಲ. ಮಾಂತ್ರಿಕರು ತಮ್ಮ ಲೋಪ ಏನೂ ಇಲ್ಲದಂತೆ ಪ್ರಯತ್ನಿಸಿದ್ದಾರೆಂದೂ, ಒಂದು ಗಂಟೆ ಸಮಯ ಧೈರ್ಯದಿಂದ ಈಶ್ವರ್ ರೂಮಲ್ಲಿದ್ದು, ಎಷ್ಟೋ ವಿಧಗಳಲ್ಲಿ ಪ್ರಯತ್ನಿಸಿದ ಅವರನ್ನು ಹೊಗಳಬೇಕಾದ್ದೇ ಆದರೇ ತಪ್ಪು ಹಿಡಿಯುವುದಕ್ಕೆ ಆಗುವುದಿಲ್ಲ ಎಂದುಕೊಂಡಿದ್ದಾನೆ. ಮುಂಬರುವ ಅಮಾವಾಸ್ಯೆ ದಿನದಂದು ಮಾಂತ್ರಿಕರಿಗೆ ತಮ್ಮ ಸಹಾಯವನ್ನು ಕೊಟ್ಟು ಈ ಸಲ ತಪ್ಪದಂತೆ ಬೊಟ್ಟು ಇಡುವಂತೆ ಮಾಡಬೇಕು. ಎಂದು ತಪಸ್ವಿಬಾಬಾರವರು ಅಂದುಕೊಳ್ಳುವುದು ನಡೆದಿದೆ. ಅವರಿಗೆ ತಾವು ಒಂದು ಶಕ್ತಿ ಪ್ರಭಾವದಿಂದ ಕೂಡಿದ ಕಾಡಿಗೆಯನ್ನು ತಯಾರು ಮಾಡಿ ಕೊಡಬೇಕೆಂದುಕೊಂಡಿದ್ದಾನೆ. ಹಾಗೆ ತಾವು ತಯಾರು ಮಾಡಿದ ಕಾಡಿಗೆಯನ್ನು ಹಣೆಯಮೇಲೆ ಕಪ್ಪನೆಯ ಬೊಟ್ಟಾಗಿ ಇಟ್ಟುಕೊಂಡರೇ ಯಾವುದಾದರೂ ಕಾಣಿಸದಂತೆ ಹೋಗುವ ಪ್ರಸ್ತಾಪವೆ ಇರುವುದಿಲ್ಲ. ಆದ್ದರಿಂದ ಆ ಕಾಡಿಗೆಯನ್ನು ತಯಾರು ಮಾಡಲು ತನ್ನ ಮನುಷ್ಯರಿಗೆ ಬಾಬಾ ಆದೇಶಿಸಿದ್ದಾನೆ. ಬಾಬಾ ಆದೇಶಾನುಸಾರ ಅಡವಿಯಲ್ಲಿ ಅಲೆಯುತ್ತಿರುವ ಹನ್ನೊಂದು ಜಾತಿಗಳೊಂದರ ಪಕ್ಷಿಗಳಿಂದ ಹನ್ನೊಂದು ಬಣ್ಣಗಳ ಪುಕ್ಕಗಳನ್ನು ಶೇಖರಿಸಿ, ಅವುಗಳನ್ನು ಸುಟ್ಟು ಮಸಿ ಮಾಡಿ ಆ ಮಸಿ ಎಳ್ಳೆಣ್ಣೆಯೊಂದಿಗೆ ಬೆರೆಸಿ ಕಾಡಿಗೆಯನ್ನು ತಯಾರು ಮಾಡಿದ್ದಾರೆ. ಹಾಗೆ ಮಾಡಿರುವ ಕಾಡಿಗೆ ಯಾವುದಕ್ಕೆ ಕೆಲಸಕ್ಕೆ ಬರುತ್ತದೋ ಮಾಂತ್ರಿಕರಿಗೆ ಹೇಳಿ ಕೊಟ್ಟು ಬರುವುದು ನಡೆದಿದೆ. ಆ ಕಾಡಿಗೆ ಅಧಿಪತಿಯಾದ ದೇವತೆಯೊಂದರ ಮಂತ್ರವನ್ನು ಹೇಳಿ, ಆ ಮಂತ್ರವನ್ನು ಹೇಗೆ ಸಿದ್ಧಿ ಮಾಡಿ ಕೊಳ್ಳಬೇಕೋ ಸಹ ಹೇಳಿದ್ದಾರೆ. ಅದರ ಪ್ರಕಾರವೇ ಮಾಂತ್ರಿಕರು ಕಾಡಿಗೆ ಕೆಲಸ ಮಾಡುವಂತೆ ಮಂತ್ರಸಿದ್ಧಿಯನ್ನು ಸಹ ಮಾಡಿಕೊಂಡಿದ್ದಾರೆ. ಆ ಕಾಡಿಗೆವೊಂದರ ಕೆಲಸವನ್ನು ಪರೀಕ್ಷಿಸುವುದಕ್ಕೆ ಮಾಂತ್ರಿಕನು ಮಲ್ಲಯ್ಯ ಅದನ್ನು ಹಣೆಗೆ ಬೊಟ್ಟಾಗಿ ಇಟ್ಟುಕೊಂಡು ಊರಿನೊಳಗೆ ಹೋಗಿದ್ದಾನೆ. ಆತನೊಂದಿಗೆ ನಾಗಭೂಷಣ ಸಹ ಹೋಗಿದ್ದಾನೆ. ಹಾಗೆ ಊರಲ್ಲಿ ಹೋಗುತ್ತಿರುವಾಗ ಒಂದು ಮನೆ ಮುಂದೆ ಬಾಗಿಲು

ಪಕ್ಕದಲ್ಲಿ ಒಬ್ಬ ವ್ಯಕ್ತಿ ಹರಿದ ಬಟ್ಟೆಗಳನ್ನು ಧರಿಸಿ ಅಳುತ್ತಾ ಕುಳಿತುಕೊಂಡಿದ್ದಾನೆ. ಆತನು ಬಾಗಿಲು ಪಕ್ಕದಲ್ಲೇ ಕುಳಿತುಕೊಂಡು ಅಳುತ್ತಿದ್ದರೂ ಆತನ ಪಕ್ಕದಲ್ಲೇ ಮನೆಯೊಳಗೆ ಹೋಗುವವರಾಗಲೀ, ಹೊರಗೆ ಬರುತ್ತಿರುವವರಾಗಲೀ, ಮನೆಯೊಳಗಿನವರಾಗಲೀ ಆತನನ್ನು ನೋಡದಂತೆ ಏನೂ ಗಮನಿಸುತ್ತಿರಲಿಲ್ಲ. ಆಗ ಮಲ್ಲಯ್ಯ ತಾತ ನಾಗಭೂಷಣನನ್ನು ನೋಡಿ "ಆತನು ಬಾಗಿಲು ಪಕ್ಕದಲ್ಲೇ ಕುಳಿತುಕೊಂಡು ಅಳುತ್ತಿದ್ದರೂ ಆತನನ್ನು ಯಾರೂ ನೋಡುತ್ತಿಲ್ಲ" ಎಂದನು. ಆ ಮಾತನ್ನು ಕೇಳಿದ ನಾಗಭೂಷಣ "ಆ ಬಾಗಿಲು ಪಕ್ಕದಲ್ಲಿ ಮನುಷ್ಯನೇ ಇಲ್ಲ ಅಲ್ಲವೆ! ಇಲ್ಲದ ಮನುಷ್ಯನನ್ನು ಯಾರು ನೋಡುತ್ತಾರೆ" ಎಂದನು. ಆಗ ಮಲ್ಲಯ್ಯ ತಾತನಿಗೆ ತಾನು ನೋಡಿರುವುದು ಮನುಷ್ಯನನ್ನು ಅಲ್ಲವೆಂದು, ತಾನು ನೋಡಿರುವುದು ಅಲ್ಲಿ ಯಾರಿಗೂ ಕಾಣಿಸದ ದೆವ್ವವನ್ನೆಂದೂ, ತಾನು ಕಾಡಿಗೆ ಬೊಟ್ಟು ಇಟ್ಟುಕೊಂಡಿರುವುದರಿಂದ ಅವರಿಗೆ ಕಾಣಿಸದ ದೆವ್ವ (ಸೂಕ್ಷ್ಮಶರೀರ) ತನಗೆ ಕಾಣಿಸಿದೆ ಎಂದು ತಿಳಿಯಿತು. ಆಗ ಆ ವಿಷಯವನ್ನು ನಾಗಭೂಷಣನಿಗೂ ಸಹ ಹೇಳಿದ್ದಾನೆ. ತಮ್ಮ ಹತ್ತಿರವಿರುವ ಕಾಡಿಗೆ ಪ್ರಭಾವದಿಂದಲೇ ಯಾರಿಗೂ ಕಾಣಿಸದಂತಿರುವುದು ತನಗೆ ಕಾಣಿಸಿದೆಯೆಂದು ಅಂದುಕೊಂಡಿದ್ದಾರೆ.

ಇನ್ನೂ ಸ್ವಲ್ಪ ದೂರ ಹೋದ ನಂತರ ಅವರು ಹೋಗುತ್ತಿರುವ ದಾರಿಯಲ್ಲಿ ಒಂದು ಬಲಿತಿರುವ ಕೋಣ ರಸ್ತೆ ಪಕ್ಕದಲ್ಲಿ ನಿಂತುಕೊಂಡಿತ್ತು. ಅದನ್ನು ನೋಡಿದ ಮಲ್ಲಯ್ಯ ಅದಕ್ಕೆ ಹತ್ತಿರದಲ್ಲಿ ಹೋಗದಂತೆ ರಸ್ತೆ ಮಧ್ಯದಲ್ಲಿ ಹೋಗಿ ಅದನ್ನು ದಾಟಿದ ನಂತರ ರಸ್ತೆ ಪಕ್ಕಕ್ಕೆ ಬಂದು ನಡೆದನು. ಹಿಂದೆ ಬರುತ್ತಿರುವ ನಾಗಭೂಷಣ ಮಲ್ಲಯ್ಯನನ್ನು ನೋಡಿ "ನಾವು ಹೋದಂತೆ ರಸ್ತೆ ಪಕ್ಕದಲ್ಲೇ ಹೋಗದಂತೆ ರಸ್ತೆ ಮಧ್ಯದಲ್ಲಿ ಹೋಗಿ ತಿರುಗಿ ಪಕ್ಕದಲ್ಲಿ ಏಕೆ ಬಂದಿದ್ದೀಯ" ಎಂದು ಕೇಳಿದನು. ಆಗ ಮಲ್ಲಯ್ಯತಾತ ನಾಗಭೂಷಣನನ್ನು ನೋಡಿ "ಅಲ್ಲಿ ರಸ್ತೆ ಪಕ್ಕದಲ್ಲಿ ಅಷ್ಟು ದೊಡ್ಡ ಕೋಣ ನಿಂತಿದೆಯಲ್ಲ! ಅದಕ್ಕೆ ಹತ್ತಿರದಲ್ಲಿ ಹೋಗದಂತೆ ರಸ್ತೆ ಮೇಲೆ ಬಂದು, ಅದನ್ನು ದಾಟಿದ ನಂತರ ರಸ್ತೆ ಪಕ್ಕಕ್ಕೆ ಬಂದಿದ್ದೇನೆ. ಅದನ್ನು ಏಕೆ ಕೇಳುತ್ತಿದ್ದೀಯ" ಎಂದನು. ಆಗ ನಾಗಭೂಷಣನು ಮಲ್ಲಯ್ಯನನ್ನು ನೋಡಿ ನಕ್ಕು "ನಿನಗೆ ದೃಷ್ಠಿ ಕಡಿಮೆಯಾಗಿದೆ. ಅಲ್ಲಿ ಕೋಣ ಇಲ್ಲ, ಇಲ್ಲದ ಕೋಣವನ್ನು

ಇದೆ ಎನ್ನುತ್ತಿದ್ದೀಯ" ಎಂದನು. ಆ ಮಾತುಕೇಳಿದ ಮಲ್ಲಯ್ಯ, ನಾಗಭೂಷಣನನ್ನು ನೋಡಿ "ಅರೇ ಹುಚ್ಚಾ! ನಿನಗೆ ಕಾಣಿಸದಿರುವುದು ನನಗೆ ಕಾಣಿಸಿದೆ ಎಂದರೆ ಅದು ಕೋಣದ ದೆವ್ವಕಣೋ. ನಾನು ಕಾಡಿಗೆ ಬೊಟ್ಟು ಹಚ್ಚಿಕೊಂಡಿದ್ದೇನೆ ಆದ್ದರಿಂದ ಅದು ನನಗೆ ಕಾಣಿಸಿದೆ, ನಿನಗೆ ಬೊಟ್ಟು ಇಲ್ಲ ಆದ್ದರಿಂದ ಅದು ಕಾಣಿಸಲಿಲ್ಲ" ಎಂದು ಹೇಳಿದ್ದಾನೆ. ಅದಕ್ಕೆ ನಾಗಭೂಷಣ ನಕ್ಕು "ಕೋಣದ ದೆವ್ವ ಸಹ ಇರುತ್ತದಾ" ಎಂದನು. ಆಗ ಮಲ್ಲಯ್ಯತಾತ "ಪೂರ್ತಿ ಸತ್ತುಹೋಗದ ಯಾವ ಜೀವರಾಶಿ ಯಾದರೂ, ಪೂರ್ತಿ ಸಾವು ಬರುವವರೆಗು ದೆವ್ವದಂತೆ ಇರಬೇಕಾದ್ದೇ. ಅದರ ಪ್ರಕಾರ ಮನುಷ್ಯರೇ ಅಲ್ಲ, ನಾಯಿಗಳು, ನರಿಗಳೂ, ಕತ್ತೆಗಳೂ, ಕುದುರೆಗಳು ಎಲ್ಲಾ ದೆವ್ವಗಳಾಗಿ ಇವೆ. ಹಾಗಿವೆಯಾದ್ದರಿಂದ ಇಲ್ಲಿ ಬಜಾರಿನಲ್ಲಿ ಕೋಣದ ದೆವ್ವ ನನಗೆ ಕಾಣಿಸಿದೆ ನಿನಗೆ ಕಾಣಿಸಲಿಲ್ಲ ಎಂದನು. ಆ ಮಾತು ಕೇಳಿದ ನಂತರ ಭೂಮಿಮೇಲೆ ಯಾವ ಜೀವರಾಶಿಗಳಾದರೂ ದೆವ್ವಗಳಾಗಿ ಇರಬಹುದೆಂದು ನಾಗಭೂಷಣನಿಗೆ ತಿಳಿಯಿತು. ಅಷ್ಟೇ ಅಲ್ಲದೆ ಮಲ್ಲಯ್ಯತಾತನಿಗು ಸಹ ತಾನು ಧರಿಸಿದ ಕಾಡಿಗೆ ಚೆನ್ನಾಗಿ ಕೆಲಸ ಮಾಡುತ್ತಿದೆಯೆಂದು ಸಹ ತಿಳಿಯಿತು. ಈ ವಿಧವಾಗಿ ಕಾಡಿಗೆಯನ್ನು ಪರೀಕ್ಷಿಸಿ ನೋಡಿ ಇಬ್ಬರು ಮಾಂತ್ರಿಕರೂ, ಮುನೆಪ್ಪನಿಗೆ ಕಾಡಿಗೆ ಚೆನ್ನಾಗಿ ಕೆಲಸಮಾಡುತ್ತಿದೆಯೆಂದು ಚನ್ನಪಟ್ಟಣದಲ್ಲಿಯೇ ಇರುವ ಮನುಷ್ಯನಿಂದ ತಿಳಿಸಿದ್ದಾರೆ.

ಮೂರನೆ ಅಮಾವಾಸ್ಯೆ ನಾಳೆ ಎಂದಾಗ ಮೊದಲನೆ ದಿನವೇ ತಪಸ್ವಿ ಬಾಬಾರವರು ಮುನೆಪ್ಪನಿಂದ ತಿಳಿಸಿದ ಸಮಾಚಾರ ಅವರಿಗೆ ತಿಳಿಯಿತು. ಈ ಅಮಾವಾಸ್ಯೆ ದಿನದಂದು ಹೇಗಾದರೂ ಆತನೊಳಗೆ ಶಕ್ತಿ ಪ್ರವೇಶಿಸುವಾಗಾಗಲೀ, ಪ್ರವೇಶಿಸಿದ ನಂತರ ಗಂಟೆಯೊಳಗಾದರೂ ವಿಭೂತಿಯನ್ನು ಯಾವ ವಿಧವಾಗಾದರೂ ಇಡಲೇಬೇಕೆನ್ನುವುದು ಬಾಬಾರವರು ಕಳುಹಿಸಿದ ಸಮಾಚಾರ ದಲ್ಲಿನ ಸಾರಾಂಶ. ಮಾಂತ್ರಿಕರು ಇಬ್ಬರೂ ಸಹ, ತಾವು ಕೇಳದಿದ್ದರೂ ಲಕ್ಷ್ಯಾಂತರ ರೂಪಾಯಿಗಳನ್ನು ತಮಗೆ ಕೊಟ್ಟು ಎಷ್ಟೋ ಒಳ್ಳೆಯದನ್ನು ಮಾಡಿದ ಬಾಬಾರವರಿಗೆ ಹೇಗಾದರೂ ಅವರು ಹೇಳಿದ ಕೆಲಸ ಮಾಡಿಕೊಡಬೇಕೆನ್ನುವ ದೃಢ ನಿಶ್ಚಯದಲ್ಲಿ ಇದ್ದಾರೆ. ಶನಿವಾರ ಕಳೆದು ಹೋಯಿತು, ಆದಿವಾರ ಬಂದಿತು. ಆ ದಿನ

ಆದಿವಾರದೊಂದಿಗೆ ಅಮಾವಾಸ್ಯೆಯೂ ಸಹ ಬಂದಿರುವುದರಿಂದ ಜಮೀಂದಾರ್ ರಾವುಬಹುದೂರ್ ತನ್ನ ಮಗನ ವಿಷಯದಲ್ಲಿ ಸ್ವಲ್ಪ ಚಿಂತಿಸಿದರೂ, ನಂತರ ಹೋದ ತಿಂಗಳ ಅಮಾವಾಸ್ಯೆ ದಿನದಂದು ಈಶ್ವರ್‌ಗೆ ಏನು ನಡೆದಿಲ್ಲವೆಂದು ಮಾಂತ್ರಿಕರು ತಿಳಿಸಿದ್ದಾರೆ. ಆದ್ದರಿಂದ ಈ ತಿಂಗಳು ಸಹ ಅವರು ಇಬ್ಬರೂ ಈಶ್ವರ್ ರೂಮಿನೊಳಗೆ ಕುಳಿತುಕೊಂಡು ಏನೂ ನಡೆಯದಂತೆ ನೋಡುತ್ತಾರೆನ್ನುವ ಧೈರ್ಯದಿಂದ ಇದ್ದಾನೆ. ಆದಿವಾರ ಅಮಾವಾಸ್ಯೆ ದಿನದಂದು, ಮೊದಲು ಎರಡು ತಿಂಗಳಲ್ಲಿ ಇದ್ದಂತೇ ಈಶ್ವರ್‌ಗೆ ಆ ದಿನವೂ ಸಹ ನಿದ್ರೆಮತ್ತಿನಿಂದ ಇದೆ. ಆ ದಿನ ಈಶ್ವರ್ ಹೊರಗೆ ಎಲ್ಲಿಗೂ ಹೋಗದಂತೆ ಮನೆಯಲ್ಲೇ ಉಳಿದಿದ್ದಾನೆ. ಆ ದಿನ ಆ ವಿಧವಾಗಿ ಇರುವುದು ಗತದಲ್ಲಿಯೂ ಸಹ ನೋಡಿರುವುದರಿಂದ ಜಮೀಂದಾರ್ ರಾವುಬಹುದೂರ್ ಈಶ್ವರ್ ಆರೋಗ್ಯವನ್ನು ಕುರಿತು ಚಿಂತಿಸಲಿಲ್ಲ. ಮಾಂತ್ರಿಕರು ಸಹ ಸರ್ವ ಸಿದ್ಧರಾಗಿ ಇದ್ದಾರೆ. ಬೆಳಗ್ಗೆ ಹತ್ತು ಗಂಟೆ ಆಗುತ್ತಿದೆ. ಈಶ್ವರ್ ತನ್ನ ರೂಮಿನೊಳಗೇ ಇದ್ದಾನೆ. ಸರಿಯಾಗಿ ಹತ್ತು ಗಂಟೆಗಳಿಗೆ ಖಗೋಳದಲ್ಲಿನ ಶಕ್ತಿ ಇಳಿದು ಬಂದು ಈಶ್ವರ್ ಶರೀರದೊಳಗೆ ಪ್ರವೇಶಿಸಲು ಆರಂಭಿಸಿತು. ಆಗಲೇ ಆ ರೂಮಿನೊಳಗೆ ಮಾಂತ್ರಿಕರು ಪ್ರವೇಶಿಸಿದ್ದಾರೆ. ಮಾಂತ್ರಿಕರು ಇಬ್ಬರೂ ಪಕ್ಷಿಗಳ ಪುಕ್ಕಗಳ ಕಾಡಿಗೆಯನ್ನು ಇಟ್ಟುಕೊಂಡು ಅದರ ಮಂತ್ರವನ್ನು ಜಪಿಸಿಕೊಂಡಿದ್ದಾರೆ. ರೂಮಿನೊಳಗೆ ಈಶ್ವರ್ ಹತ್ತಿರಕ್ಕೆ ಹೋಗಿ ಆತನ ಮುಖದ ಮೇಲೆ ವಿಭೂತಿ ಬೊಟ್ಟನ್ನು ಇಡಬೇಕೆಂದುಕೊಂಡಿದ್ದಾರೆ. ಈಶ್ವರ್ ಮುಂಬದಿಗೆ ನಾಗಭೂಷಣ, ಮಲ್ಲಯ್ಯ ಇಬ್ಬರೂ ಹೋಗಿದ್ದಾರೆ. ಮಲ್ಲಯ್ಯನಿಗೆ ಈಶ್ವರ್ ಕಾಣಿಸುತ್ತಿದ್ದಾನೆ. ಆತನು ಕಣ್ಣು ಮುಚ್ಚಿಕೊಂಡು ಕುಳಿತುಕೊಂಡಿದ್ದಾನೆ. ಆ ಕೋಣೆಯೆಲ್ಲಾ ನಿಶ್ಶಬ್ಧದಿಂದಿದೆ. ಮಲ್ಲಯ್ಯ ತನ್ನ ಹತ್ತಿರವಿರುವ ವಿಭೂತಿಯನ್ನು ತೆಗೆದು ಈಶ್ವರ್ ಮುಖದ ಮೇಲೆ ಇಡಲು ಹೋಗಿದ್ದಾನೆ. ಆದರೇ ಮಲ್ಲಯ್ಯ ಈಶ್ವರ್ ಮುಖದ ಮೇಲೆ ಬೊಟ್ಟು ಇಡುವುದಕ್ಕಿಂತ ಮೊದಲೇ ಕಣ್ಣು ತಿರುಗಿ ಕೆಳಗೆ ಬಿದ್ದಿದ್ದಾನೆ. ತಕ್ಷಣವೆ ನಾಗಭೂಷಣ ಆತನನ್ನು ಮೇಲಕ್ಕೆ ಎಬ್ಬಿಸಿ "ಏನಾಯಿತು" ಎಂದು ಕೇಳಿದ್ದಾನೆ. ಆಗ ಮಲ್ಲಯ್ಯ ಎದ್ದು ನಿಂತು "ಪಿತ್ತದಿಂದ ಕಣ್ಣು ತಿರುಗಿದ್ದಾವೆ" ಎಂದನು. "ನೀನು ಪಕ್ಕಕ್ಕೆ ಬಾ! ನಾನು ಇಡುತ್ತೇನೆ" ಎಂದು ನಾಗಭೂಷಣ

ಮಲ್ಲಯ್ಯನನ್ನು ಪಕ್ಕಕ್ಕೆ ಸರಿಸಿ, ಮಲ್ಲಯ್ಯ ಕೈಯ್ಯಲ್ಲಿನ ವಿಭೂತಿಯನ್ನು ತೆಗೆದುಕೊಂಡು ಈಶ್ವರ್‌ಗೆ ಇಡಲುಹೋಗಿದ್ದಾನೆ. ಆಗ ಆತನನ್ನು ಯಾರೋ ಎಳೆದು ಪಕ್ಕಕ್ಕೆ ತಳ್ಳಿದಂತಾಯಿತು. ನಾಗಭೂಷಣನು ಕೂಡಾ ಪಕ್ಕಕ್ಕೆ ಬಂದು ಕೆಳಗೆ ಬಿದ್ದಿದ್ದಾನೆ. ಅದನ್ನು ನೋಡಿದ ಮಲ್ಲಯ್ಯ ತಾತನಿಗೆ ತಮಗೆ ತಿಳಿಯದಂತೆ ಏನೋ ನಡೆಯುತ್ತಿದೆಯೆಂದು ಅನುಮಾನ ಬಂದಿತು.

ಇನ್ನು ಲಾಭವಿಲ್ಲವೆಂದುಕೊಂಡ ಮಲ್ಲಯ್ಯ ತನ್ನ ವಶದಲ್ಲಿರುವ ಕಾಟೇರಿಯನ್ನು ಕುರಿತು ಜಪಿಸಿದ್ದಾನೆ. ಕಾಟೇರಿ ಅಲ್ಲಿಗೆ ಬರಬೇಕೆಂದು ನೋಡಿತು. ಆದರೆ ಅದು ಬರಲಾರದೇ ಹೋಯಿತು. ಆ ರೂಮಿನಲ್ಲಿ ಒಂದು ಮೂಲೆಯಲ್ಲಿ ಕಟ್ಟಿರುವಂತೆ ನಿಂತುಹೋಯಿತು. ಮಲ್ಲಯ್ಯ ಕರ್ಣಪಿಶಾಚಿಯಿಂದ ಕಾಟೇರಿ ಕಟ್ಟಿಹಾಕಲ್ಪಟ್ಟಿದೆಯೆಂದು ತಿಳಿದುಕೊಂಡಿದ್ದಾನೆ. ನಂತರ ಭಗಳಾಮುಖಿ ದೇವತೆಯನ್ನು ಕರೆದಿದ್ದಾನೆ. ಅ ದೇವತೆ ಆ ಪರಿಸರ ಪ್ರಾಂತಕ್ಕೂ ಸಹ ಬಾರದಂತೆ ಹೋಯಿತು. ಹೆಸರು ಹೊಂದಿದ ಆ ದೇವತೆಗಳೇ ಅಲ್ಲಿ ಏನೂ ಮಾಡಲಾರದೇ ಹೋಗಿರುವುದರಿಂದ ಉಳಿದ ದೇವತೆಗಳಿಂದ ಸಹ ಏನೂ ಆಗುವುದಿಲ್ಲವೆಂದು ಕೊಂಡನು. ಅಷ್ಟರಲ್ಲಿ ಹದಿನೈದು ನಿಮಿಷಗಳು ಕಳೆದುಹೋಯಿತು. ಈಶ್ವರ್‌ನೊಳಗೆ ಪ್ರವೇಶಿಸಬೇಕಿದ್ದ ಶಕ್ತಿ ಪ್ರವೇಶಿಸಿತು. ನಂತರ ಗಂಟೆಕಾಲದಲ್ಲಿ ತಮ್ಮ ಕೆಲಸ ನೆರವೇರಬೇಕೆಂದು ತಿಳಿದ ಮಾಂತ್ರಿಕರು ಹೊಸ ಪ್ರಯೋಗ ಮಾಡಬೇಕೆಂದು ಕೊಂಡಿದ್ದಾರೆ. ಮೂತ್ರವನ್ನು ಒಂದು ಬಟ್ಟಲಲ್ಲಿ ಒಯ್ದು ಅದರಲ್ಲಿ ಮಂತ್ರಿಸಿದ ಹರಿಶಿಣ, ಕುಂಕುಮವನ್ನು ಬೆರೆಸಿ ಆ ರೂಮಿನಲ್ಲಿ ಚೆಲ್ಲಿದ್ದಾರೆ. ಅದರಿಂದ ತಮ್ಮ ಮೇಲೆ ಯಾವ ಶಕ್ತಿಗಳೂ ಕೆಲಸ ಮಾಡುವುದಿಲ್ಲವೆಂದು ಅವರ ಉದ್ದೇಶ. ಇನ್ನು ತಮಗೆ ಯಾರೂ ಅಡ್ಡ ಬರುವುದಿಲ್ಲವೆಂದುಕೊಂಡು ಮಲ್ಲಯ್ಯ ವಿಭೂತಿಯಿಂದ ಮುಂದಕ್ಕೆ ಹೋಗಿದ್ದಾನೆ. ನಾಗಭೂಷಣ ಮಲ್ಲಯ್ಯನ ಪಕ್ಕದಲ್ಲೇ ನಿಂತಿದ್ದಾನೆ. ಮಲ್ಲಯ್ಯ ತನ್ನ ಕೈಯಿಂದ ವಿಭೂತಿಯನ್ನು ತೆಗೆದುಕೊಂಡು ಈಶ್ವರ್ ತಲೆಗೆ ಎರಡು ಇಂಚುಗಳ ದೂರದವರೆಗು ತನ್ನ ಕೈಯ್ಯನ್ನು ಚಾಚಿದನು. ಇನ್ನು ಒಂದು ಕ್ಷಣದಲ್ಲಿ ಈಶ್ವರ್ ಹಣೆಯ ಮೇಲೆ ಮಲ್ಲಯ್ಯ ಬೊಟ್ಟು ಇಡಬಲ್ಲನು. ಆದರೆ ಆಗ ಒಂದೇಸಲ ಈಶ್ವರ್ ಕಣ್ಣು ತೆರೆದು ನೋಡಿದ್ದಾನೆ. ಢಾಮ್ ಎಂದು ದೊಡ್ಡ ಶಬ್ದ

ಏರ್ಪಟ್ಟಿತು. ಮಾಂತ್ರಿಕರಿಬ್ಬರು ಆರು ಅಡಿಗಳ ದೂರ ಹಾರಿಬಿದ್ದಿದ್ದಾರೆ. ಮಲ್ಲಯ್ಯನಿಗೆ ಬಲಗೈ ಕೆಲಸಮಾಡದಂತೆ ಹೋಯಿತು. ನಾಗಭೂಷಣನಿಗೆ ಬಲಗಾಲು ಕೆಲಸ ಮಾಡಲಿಲ್ಲ. ಅವರು ಏಳದ ಸ್ಥಿತಿಯಲ್ಲಿ ನಿಶ್ಶಕ್ತಿಯಿಂದ ಬಿದ್ದಿದ್ದಾರೆ. ರೂಮಿನಲ್ಲಿ ದೊಡ್ಡ ಬಾಂಬು ಸಿಡಿದಷ್ಟು ಶಬ್ದ ಏರ್ಪಟ್ಟರೂ ಈ ಶಬ್ದ ಹೊರಗೆ ಇರುವ ಜಮೀಂದಾರನಿಗಾಗಲೀ, ಆ ಮನೆಯಲ್ಲಿರುವವರಿಗಾಗಲೀ ಯಾರಿಗೂ ಕೇಳಿಸಲಿಲ್ಲ.

ನಂತರ ಗಂಟೆ ಸಮಯ ಕಳೆದು ಹೋಯಿತು. ಈಶ್ವರ್ ಎಚ್ಚರದೊಳಗೆ ಬಂದು ನೋಡಿದನು. ರೂಮ್ ಎಲ್ಲಾ ಬಣ್ಣದ ನೀರನ್ನು ಚೆಲ್ಲಿದಂತೆ ಕಾಣಿಸಿತು. ಅಷ್ಟೇ ಅಲ್ಲದೆ ತನ್ನ ಮುಂದೆ ಮಾಂತ್ರಿಕರಿಬ್ಬರೂ ನಿಸ್ಸಹಾಯಸ್ಥಿತಿಯಲ್ಲಿ ಏಳಲಾರದೆ ಬಿದ್ದಿದ್ದಾರೆ. ಈಶ್ವರ್‌ಗೆ ಏನೂ ಅರ್ಥವಾಗಲಿಲ್ಲ. ಕೂಡಲೇ ಹೊರಗೆ ಬಂದು ತಾನು ನೋಡಿದ್ದನ್ನು ಜಮೀಂದಾರನಿಗೆ ತಿಳಿಸಿದನು. ಆಗ ಜಮೀಂದಾರ ಮತ್ತು ತನ್ನ ಅನುಚರರು ಒಳಗೆ ಹೋಗಿ ನೋಡಿ ಮಾಂತ್ರಿಕರಿಬ್ಬರನ್ನು ಎಬ್ಬಿಸಿ ಹೊರಗೆ ತಂದಿದ್ದಾರೆ. ಅವರಲ್ಲಿ ಒಬ್ಬರಿಗೆ ಕಾಲು, ಒಬ್ಬರಿಗೆ ಕೈಯ್ಯಿ ಕೆಲಸಮಾಡುತ್ತಿಲ್ಲವೆಂದು ಜಮೀನುದಾರನಿಗು ಸಹ ಅರ್ಥವಾಯಿತು. ಅವರಿಗಾಗಿ ತಮ್ಮ ಫ್ಯಾಮಿಲೀ ಡಾಕ್ಟರನ್ನು ಕರೆಸಿ ತೋರಿಸಿದ್ದಾನೆ. ಮಲ್ಲಯ್ಯನಿಗೆ ಕೈಯಿ, ನಾಗಭೂಷಣನಿಗೆ ಕಾಲು ನರಗಳು ಕೆಲಸ ಮಾಡಲಿಲ್ಲವೆಂದು ಡಾಕ್ಟರ್ ಹೇಳಿ ಔಷಧಿಗಳನ್ನು ಕೊಟ್ಟು ಮೂರು ದಿನ ವಿಶ್ರಾಂತಿ ತೆಗೆದುಕೊಳ್ಳಿ ಎಂದು ಹೇಳಿ ಹೋದನು. ಇಬ್ಬರು ಮಾಂತ್ರಿಕರನ್ನೂ ಅವರ ರೂಮಿನೊಳಗೆ ಸೇರಿಸಿ ಯಾರೂ ಇಲ್ಲದ ಸಮಯದಲ್ಲಿ ಜಮೀಂದಾರು ಅವರನ್ನು ರೂಮಿನೊಳಗೆ ಏನು ನಡೆದಿದೆ ಎಂದು ಕೇಳಿದ್ದಾನೆ. ಅದಕ್ಕೆ ಅವರು ತಮ್ಮ ವಿಭೂತಿ ವಿಷಯವನ್ನು ಹೇಳದಂತೆ ನಾವು ರೂಮಿನೊಳಗೆ ಇರುವಾಗ ದೊಡ್ಡ ಶಬ್ದ ಕೇಳಿಸಿತು. ಕೂಡಲೇ ನಮಗೆ ಹೀಗಾಯಿತೆಂದು ಮುಚ್ಚಿಟ್ಟು ಹೇಳಿದರು. ಅವರ ಮಾತುಗಳನ್ನು ನಂಬಿದ ಜಮೀಂದಾರ್ ತಮಗೆ ಯಾವ ಶಬ್ದವೂ ಕೇಳಿಸಲಿಲ್ಲವೇ ಎನ್ನುವ ಅನುಮಾನ ಬಂದಿತು.

ಮಾಂತ್ರಿಕರ ಸಮಾಚಾರಕ್ಕಾಗಿ ಚನ್ನಪಟ್ಟಣದಲ್ಲಿಯೇ ಕಾದುಕೊಂಡಿರುವ ಮನುಷ್ಯನಿಗೆ ಸಾಯಂಕಾಲ ಮಾಂತ್ರಿಕರು ಬರುತ್ತಾರೆಂದು ಬಜಾರಿನಲ್ಲಿ ಕಾದುಕೊಂಡು

ನೋಡಿದ್ದಾನೆ. ಅವರು ರಾತ್ರಿ ಏಳು ಗಂಟೆಗಳವರೆಗು ಬರಲಿಲ್ಲವೆಂದು ತಾನೇ ಮಾಂತ್ರಿಕರ ಹತ್ತಿರಕ್ಕೆ ಬಂದು ವಿಭೂತಿ ವಿಷಯವನ್ನು ತಿಳಿದುಕೊಂಡು ಹೋಗಿ ಮುನೆಪ್ಪನಿಗೆ ತಿಳಿಸಬೇಕೆಂದುಕೊಂಡಿದ್ದಾನೆ. ವಾರ್ತಾಹರನೇ ಜಮೀಂದಾರ್ ಮನೆಗೆ ಬಂದು ನಾಗಭೂಷಣನ ಹತ್ತಿರಕ್ಕೆ ಚಿಕಿತ್ಸೆಗಾಗಿ ಬಂದಿದ್ದೇನೆಂದು, ಔಷಧ ತೆಗೆದುಕೊಂಡು ಹೋಗಬೇಕೆಂದಿದ್ದಾನೆ. ಆ ಮಾತು ಕೇಳಿದ ಜಮೀಂದಾರ್ ಆತನನ್ನು ಮಾಂತ್ರಿಕರ ರೂಮ್ ಹತ್ತಿರಕ್ಕೆ ಕಳುಹಿಸಿದ್ದಾನೆ. ಆಗ ವಾರ್ತಾಹರನು ಇಬ್ಬರು ಮಾಂತ್ರಿಕರ ಪರಿಸ್ಥಿತಿಯನ್ನು ಸ್ವತಃ ನೋಡಿದ್ದಾನೆ. ವಿಭೂತಿಯನ್ನು ಇಡಲಾರದೇ ಹೋದ ವಿಷಯವನ್ನು ಸಹ ತಿಳಿದುಕೊಂಡು ಅಲ್ಲಿಂದ ಹೋಗಿ, ಎರಡನೆ ದಿನ ಮುನೆಪ್ಪನಿಗೆ ಆ ವಿಷಯವೆಲ್ಲಾ ತಿಳಿಸಿದ್ದಾನೆ. ಕೊನೆಗೆ ಈಶ್ವರ್ ರೂಮ್‌ನಲ್ಲಿ ನಡೆದ ಸಮಾಚಾರವೆಲ್ಲಾ ತಪಸ್ವಿಬಾಬಾಗೆ ತಿಳಿದುಹೋಯಿತು. ಇದೇನು ವಿಚಿತ್ರ ಎಂದು ಬಾಬಾ ಚೆನ್ನಾಗಿ ಯೋಚಿಸಲಾರಂಭಿಸಿದನು. ಜಮೀಂದಾರ್ ಮನೆಯಲ್ಲಿ ಮಾಂತ್ರಿಕರ ಆರೋಗ್ಯ ಗಂಟೆಗಂಟೆಗೂ ಕ್ಷೀಣಿಸುತ್ತಿದೆ. ಕೊನೆಗೆ ಅನ್ಯಮಾರ್ಗವಿಲ್ಲದೇ ಮಾಂತ್ರಿಕರ ಬಂಧುಗಳಿಗೆ ಸಮಾಚಾರವನ್ನು ತಿಳಿಸಿದಾಗ ಅವರೆಲ್ಲರೂ ಅಲ್ಲಿಗೆ ಬಂದಿದ್ದಾರೆ. ಡಾಕ್ಟರ್ ಜಮೀಂದಾರ್ ಮನೆಯಲ್ಲೇ ಇದ್ದು ಅವರಿಗೆ ಚಿಕಿತ್ಸೆ ಮಾಡುತ್ತಿದ್ದಾನೆ. ಆದರೂ ಅವರು ಎರಡನೆ ದಿನ ವಿಚಿತ್ರವಾಗಿ ಇಬ್ಬರೂ ಒಂದೇ ನಿಮಿಷದಲ್ಲಿ ಸತ್ತುಹೋಗಿದ್ದಾರೆ. ಆ ಸಂಘಟನೆ ಜಮೀಂದಾರನಿಗೆ ಏನೂ ಅರ್ಥವಾಗದಂತೆ ಮಾಡಿತು. ಇನ್ನೂ ಏನು ನಡೆಯುತ್ತದೋ ಎಂದು ಆತನಲ್ಲಿ ಭಯ ಹುಟ್ಟಿತು. ಈಶ್ವರ್‌ಗೆ ಮಾತ್ರ ಏನೂ ಅರ್ಥವಾಗಲಿಲ್ಲ. ತನ್ನ ರೂಮಿನೊಳಗೆ ಮಾಂತ್ರಿಕರು ಏಕೆ ಬಂದಿದ್ದಾರೋ ಸಹ ತಿಳಿದಿಲ್ಲ. ಯಾರನ್ನು ಕೇಳಿದರೂ ನಮಗೆ ತಿಳಿಯದೆಂದು ಹೇಳುತ್ತಿದ್ದಾರೆ ಹೊರತು ಯಾರೂ ಏನೂ ಹೇಳಲಿಲ್ಲ. ಜಮೀಂದಾರ್ ರಾವುಬಹುದೂರ್‌ಗೆ ಮಾಂತ್ರಿಕರು ಇಬ್ಬರೂ ಒಂದೇ ನಿಮಿಷದಲ್ಲಿ ಸತ್ತುಹೋಗುವುದಕ್ಕೆ ಏನೋ ಬಲವಾದ ಕಾರಣವಿರುತ್ತದೆಂದು ಭಯಪಟ್ಟನು. ಆ ಭಯ ಹೋಗಬೇಕೆಂದರೆ ರಾಜಯೋಗಾನಂದ ಸ್ವಾಮಿ ಹತ್ತಿರಕ್ಕೆ ಹೋಗಿ ನಡೆದ ವಿಷಯವೆಲ್ಲಾ ಹೇಳಬೇಕೆಂದುಕೊಂಡಿದ್ದಾನೆ.)

*********************************

(ರಾಜಯೋಗಾನಂದ ಆಶ್ರಮದಲ್ಲಿ ರಾಘವ, ದುಂದುಭಿ, ರಾಧೇಶ್ವರಿ ಇನ್ನು ಕೆಲವು ಜನ ಕುಳಿತುಕೊಂಡಿರುವಾಗ ಸ್ವಾಮಿ ಜ್ಞಾನವನ್ನು ಅವರಿಗೆ ಹೇಳುತ್ತಿದ್ದನು. ಆಗ ರಾಘವ ಸ್ವಾಮಿಯನ್ನು ಈ ವಿಧವಾಗಿ ಕೇಳಿದನು.)

**ರಾಘವ :–** ಒಬ್ಬ ಮನುಷ್ಯನನ್ನು ದೈವಜ್ಞಾನಕ್ಕಿಂತ ವಿಷಯಜ್ಞಾನವೇ ಬೇಗ ಬದಲಾಯಿಸಬಲ್ಲದು ಎಂದಿದ್ದೀರ. ವಿಷಯಜ್ಞಾನಕ್ಕೆ ಇದ್ದಷ್ಟು ಶಕ್ತಿ ದೈವಜ್ಞಾನಕ್ಕೆ ಇಲ್ಲವಾ?

**ರಾಜಯೋಗಾನಂದ :–** ಇಲ್ಲಿ ವಿಷಯಜ್ಞಾನ, ದೈವಜ್ಞಾನ ಎರಡೂ ಶಕ್ತಿ ಇರುವವೇ ಆದರೂ ಅವುಗಳ ಶಕ್ತಿಗಳು ಬೇರೆಬೇರೆ ವರ್ಗಕ್ಕೆ ಸೇರಿರುವುದಾಗಿ ಇವೆ. ವಿಷಯ ಜ್ಞಾನದಲ್ಲಿನ ಶಕ್ತಿ ಮನುಷ್ಯನನ್ನು ಮಾಯೆ ಕಡೆ ಕಳುಹಿಸಬಲ್ಲದು. ಹಾಗೆಯೇ ದೈವ ಜ್ಞಾನದಲ್ಲಿನ ಶಕ್ತಿ ಮನುಷ್ಯನನ್ನು ದೇವರ ಕಡೆ ಕಳುಹಿಸಬಲ್ಲದು. ಈ ಎರಡೂ ಬೇರೆಬೇರೆ ಶಕ್ತಿಗಳು, ಅವುಗಳಿಂದ ಉಂಟಾಗುವ ಫಲಿತಾಂಶಗಳು ಸಹ ಬೇರೆಬೇರೆಯಾಗಿ ಇವೆ. ಪ್ರಪಂಚ ವಿಷಯಗಳಲ್ಲಿ ಆಸಕ್ತಿ ಇರುವವರಿಗೆ ವಿಷಯ ಜ್ಞಾನವೊಂದರ ಶಕ್ತಿ, ದೈವಜ್ಞಾನವೊಂದರ ಶಕ್ತಿಗಿಂತ ದೊಡ್ಡದೇ ಎಂದು ಹೇಳಬಹುದು. ಏಕೆಂದರೇ ಅವರಿಗಿರುವ ಆಸಕ್ತಿಯನ್ನನುಸರಿಸಿ ಅವರ ಕಡೆ ವಿಷಯ ಜ್ಞಾನ ತೋರಿಸಿದಷ್ಟು ಪ್ರಭಾವ ದೈವಜ್ಞಾನ ತೋರಿಸುವುದಿಲ್ಲ. ಆದ್ದರಿಂದ ಆ ಸಂದರ್ಭದಲ್ಲಿ ವಿಷಯ ಜ್ಞಾನಶಕ್ತಿಗಿಂತ ದೈವಜ್ಞಾನ ಶಕ್ತಿಯೇ ಚಿಕ್ಕದಾಗುತ್ತದೆ. ಹಾಗೆಯೇ ದೈವಜ್ಞಾನ ಆಸಕ್ತಿಯಿರುವವರ ಮೇಲೆ ದೈವಜ್ಞಾನ ತೋರಿಸಿದಷ್ಟು ಪ್ರಭಾವ ವಿಷಯ ಜ್ಞಾನ ತೋರಿಸುವುದಿಲ್ಲ. ಆದ್ದರಿಂದ ಆ ಸಂದರ್ಭದಲ್ಲಿ ವಿಷಯಜ್ಞಾನ ಶಕ್ತಿಗಿಂತ ದೈವಜ್ಞಾನ ಶಕ್ತಿಯೇ ದೊಡ್ಡದಾಗುತ್ತದೆ. ಮನುಷ್ಯರ ಆಸಕ್ತಿಯನ್ನನುಸರಿಸಿ ಒಂದು ಸಲ ದೈವಶಕ್ತಿ ದೊಡ್ಡದೆಂದು, ವಿಷಯ ಜ್ಞಾನ ಚಿಕ್ಕದೆಂದು ಹೇಳಿದರೂ, ಅದೇ ಮನುಷ್ಯರು ಮತ್ತೊಂದು ಸಂದರ್ಭದಲ್ಲಿ ಆಸಕ್ತಿಯನ್ನನುಸರಿಸಿ ದೈವಶಕ್ತಿ ಚಿಕ್ಕದು, ವಿಷಯ ಜ್ಞಾನಶಕ್ತಿ ದೊಡ್ಡದೆಂದು ಹೇಳಬಹುದು.

**ರಾಘವ :–** ಸ್ವಾಮೀ! ಕೆಲವರು ದೈವಜ್ಞಾನದ ಮೇಲೆ ಆಸಕ್ತಿಯಿಂದ ಸ್ವಲ್ಪ ಕಾಲ

ದೈವಜ್ಞಾನವನ್ನು ಚೆನ್ನಾಗಿ ತಿಳಿದುಕೊಂಡು ನಂತರ ಅವರು ಪ್ರಪಂಚ ವಿಷಯಗಳಿಗೇ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಡುತ್ತಾ ಅವುಗಳಲ್ಲೇ ಮುಳುಗಿ ಹೋಗುತ್ತಿರುವರು. ನಂತರ ದೈವಜ್ಞಾನವನ್ನು ತಿಳಿದುಕೊಳ್ಳುವುದಕ್ಕು ಸಹ ಆಸಕ್ತಿ ಇಲ್ಲದಂತಿರುತ್ತಾರೆ. ಅಂತಹವರಲ್ಲಿ ಮೊದಲಿದ್ದ ದೈವಜ್ಞಾನದ ಮೇಲಿನ ಆಸಕ್ತಿ ಎಲ್ಲಿಗೆ ಹೋಗಿರುತ್ತದೆ?

**ರಾಜಯೋಗಾನಂದ :–** ಅಂತಹವರಲ್ಲಿ ವಿಷಯಜ್ಞಾನದ ಮೇಲೆ ಆಸಕ್ತಿ ಇದ್ದು ದೈವಜ್ಞಾನದ ಮೇಲೆ ಆಸಕ್ತಿ ಕಡಿಮೆ ಇರುತ್ತದೆ. ಆದ್ದರಿಂದ ಅವರು ಸ್ವಲ್ಪ ಕಾಲ ದೈವಜ್ಞಾನದ ಮೇಲೆ ಶ್ರದ್ಧೆಯನ್ನು ತೋರಿಸಿದರೂ ಕೊನೆಗೆ ಅವರಿಗೆ ಯಾವುದು ಹೆಚ್ಚಿನ ಆಸಕ್ತಿ ಇದೆಯೋ ಅದರ ಕಡೆ ಹೋಗುತ್ತಿರುವರು. ಅಂತಹವರನ್ನು ನೋಡಿ ಮೊದಲು ಅವರನ್ನು ದೈವಜ್ಞಾನಿಗಳಾಗಿ ನಾವು ಲೆಕ್ಕಿಸಿದರೂ, ಕೊನೆಗೆ ಅವರ ಅಸಲಾದ ಆಸಕ್ತಿ ಹೊರಬಿದ್ದು, ಅಸಲು ಸ್ವಭಾವವನ್ನೇ ತೋರಿಸುತ್ತಾ, ದೈವ ವಿಷಯಗಳಿಗೆ ಪ್ರಾಧಾನ್ಯತೆ ಕೊಡದಂತೆ, ಪ್ರಪಂಚ ವಿಷಯಗಳಿಗೇ ಪ್ರಾಧಾನ್ಯತೆ ಕೊಡುತ್ತಿರುವರು. ಆದ್ದರಿಂದಲೇ ಭಗವಂತನು ಭಗವದ್ಗೀತೆಯಲ್ಲಿ **"ಶ್ರದ್ಧಾವಾನ್ ಲಭತೇ ಜ್ಞಾನಮ್"** ಎಂದಿದ್ದಾನೆ. ಈ ವಾಕ್ಯದ ಕೊನೆಯಲ್ಲಿ **"ಜ್ಞಾನಮ್"** ಎಂದಿದ್ದಾನಲ್ಲ! ಅದು ಯಾವ ಜ್ಞಾನವಾದರೂ ಆಗಬಹುದು. ಶ್ರದ್ಧೆಯಿಂದ ಪ್ರಪಂಚ ಜ್ಞಾನವೂ ಬರಬಹುದೂ, ಹಾಗೇ ಶ್ರದ್ಧೆಯಿಂದ ದೈವಜ್ಞಾನವೂ ಬರಬಹುದು. ಪ್ರಪಂಚ ಜ್ಞಾನದ ಮೇಲೆ ಶ್ರದ್ಧೆಯನ್ನು (ಆಸಕ್ತಿಯನ್ನು) ತೋರಿಸುವವರಿಗೆ ಅದೇ ದೊಡ್ಡದಾಗಿರುತ್ತದೆ, ದೈವಜ್ಞಾನ ಚಿಕ್ಕದಾಗಿರುತ್ತದೆ. ಹಾಗೆಯೇ ಪರಮಾತ್ಮಜ್ಞಾನದ ಮೇಲೆ ಶ್ರದ್ಧೆಯನ್ನು (ಆಸಕ್ತಿ) ತೋರಿಸುವವರಿಗೆ ಅದೇ ದೊಡ್ಡದಾಗಿರುತ್ತದೆ, ಪ್ರಪಂಚ ಜ್ಞಾನ ಚಿಕ್ಕದಾಗಿರುತ್ತದೆ. ಅವರವರ ಶ್ರದ್ಧೆಯನ್ನನುಸರಿಸಿ ಅವರಿಗಿರುವುದೇ ದೊಡ್ಡದಾಗುತ್ತದೆ. ಆದ್ದರಿಂದ ಇಂತಾದ್ದು ದೊಡ್ಡದೆಂದು ಹೇಳಲಾರೆವು. ಹೆಚ್ಚಾಗಿ ಶೇ.99 ರಷ್ಟು ಪ್ರಜೆಗಳಲ್ಲಿ ವಿಷಯಜ್ಞಾನವೇ ದೊಡ್ಡದಾಗಿ ಇದೆಯೆಂದು ಹೇಳಬಹುದು. ಶೇ.99 ರಷ್ಟು ವಿಷಯಜ್ಞಾನವನ್ನು ದೊಡ್ಡದಾಗಿ ಇಟ್ಟುಕೊಂಡವರ ಮಧ್ಯದಲ್ಲಿ ಒಬ್ಬನು ದೈವಜ್ಞಾನವನ್ನು ದೊಡ್ಡದಾಗಿ ಭಾವಿಸುವವನಿದ್ದರೇ ಅವನನ್ನು ಕಡಿಮೆಯವನಾಗಿ, ಬುದ್ಧಿ ಕಡಿಮೆಯವನಾಗಿ ಲೆಕ್ಕಿಸಿ, ನೀಚವಾಗಿ ನೋಡುತ್ತಾರೆ. ಈ ವಿಷಯ ಸಹಜವಾಗಿ ಇರುವಂತಾದ್ದು. ನಾವು ಪ್ರಪಂಚ ವಿಷಯಗಳಲ್ಲಿ

ಮುಳುಗಿರುವವರನ್ನು ಅಜ್ಞಾನಿಯಾಗಿ ವ್ಯರ್ಥಜೀವಿಯಾಗಿ ಭಾವಿಸುತ್ತೇವೆ. ಹಾಗೇ ಪ್ರಪಂಚ ವಿಷಯಗಳಲ್ಲಿ ಇರುವವರು ಜ್ಞಾನದ ಬೆಲೆಯನ್ನು ತಿಳಿಯದವರಾಗಿ ನಮ್ಮನ್ನು ಬುದ್ಧಿ ಕಡಿಮೆ ಇರುವವರಾಗಿ, ಹುಚ್ಚರಾಗಿ ಲೆಕ್ಕಿಸಿ ನೋಡುತ್ತಾರೆ.

(ಈ ವಿಧವಾಗಿ ಪ್ರಪಂಚ ವಿಷಯಗಳನ್ನು, ದೈವಜ್ಞಾನ ವಿಷಯಗಳನ್ನು ಚರ್ಚಿಸುತ್ತಾ ಇರುವಾಗ ಅಲ್ಲಿಗೆ ಜಮೀಂದಾರ್ ದೀನ ವದನದಿಂದ ಬಂದಿದ್ದಾನೆ. ಆತನ ಬರುವಿಕೆಯಿಂದ ತಮ್ಮ ಜ್ಞಾನ ಚರ್ಚೆಯನ್ನು ನಿಲ್ಲಿಸಿ ಜಮೀಂದಾರನು ಯಾವುದಕ್ಕಾಗಿ ಬಂದಿದ್ದಾನೋ  ಎಂದು ಆತನೊಂದಿಗೆ ಮಾತನಾಡಲು ಪ್ರಾರಂಭಿಸಿದರು.)

**ರಾಜಯೋಗಾನಂದ :–** ರಾವುಬಹುದೂರ್‌ರವರೇ! ಕ್ಷೇಮವೇನಾ? ಏನೋ ದಿಗಿಲು ಗೊಂಡವರಂತೆ ಕಾಣಿಸುತ್ತಿದ್ದೀರ?

**ಜಮೀಂದಾರ್ :–** ಸ್ವಾಮೀ. ನಾನು ಇಲ್ಲಿಂದ ಹೋದ ಬಳಿಕ ನಮ್ಮ ಊರಲ್ಲಿ ಹೆಸರು ಗಳಿಸಿದ ಇಬ್ಬರು ಮಾಂತ್ರಿಕರನ್ನು ಭೇಟಿಮಾಡಿದ್ದೇನೆ. ಅವರು ನನಗಿಂತ ಮೊದಲೇ ನನ್ನ ಮನೆ ಸಮಸ್ಯೆಯನ್ನು ಹೇಳಿದ್ದಾರೆ. ಈಶ್ವರ್‌ನಿಂದ ನಡೆಯುವ ನಿಮ್ಮ ಮನೆಯೊಳಗಿನ ಸಮಸ್ಯೆಯನ್ನು ಇಲ್ಲದಂತೆ ಮಾಡುತ್ತೇವೆಂದಿದ್ದಾರೆ. ಅವರು ಹಾಗೆ ಮಾಡಿದರೇ ನನಗೂ ಒಳ್ಳೆಯದೇ ಅಲ್ಲವೆ! ಎಂದು ಅಂದುಕೊಂಡಿದ್ದೇನೆ. ಅವರು ಈಶ್ವರ್ ಆರೋಗ್ಯವನ್ನು ಚೆನ್ನಾಗಿ ಮಾಡುತ್ತೇವೆಂದರು. ಎರಡನೆ ಅಮಾವಾಸ್ಯೆಗೆ ನಮ್ಮ ಮನೆಗೆ ಬಂದಿದ್ದಾರೆ. ಆ ದಿನ ಈಶ್ವರ್‌ನ ರೂಮಿನೊಳಗೇ ಇದ್ದು ಹೊರಗೆ ಬಂದಿದ್ದಾರೆ. ಅವರು ಆ ದಿನ ಈಶ್ವರ್‌ನ ರೂಮಿನೊಳಗೆ ಕಳೆಯುವುದರಿಂದ ಈಶ್ವರ್‌ನಲ್ಲಿ ಸೇರುವ ಶಕ್ತಿ ಬಾರದಂತೆ ಹೋಗಿದೆಯಂತೆ. ಆದ್ದರಿಂದ ಆ ದಿನ ಯಾವ ತೊಂದರೆ ನಡೆಯಲಿಲ್ಲ. ಅವರು ಈಶ್ವರ್‌ಗೆ ಏನೂ ನಡೆಯದಂತೆ ನೋಡುವುದು ನಮಗೂ ಸಹ ಸಂತೋಷವಾಯಿತು. ಮೂರನೆ ಅಮಾವಾಸ್ಯೆ ದಿನವೂ ಸಹ ಅವರು ಈಶ್ವರ್ ರೂಮಿನೊಳಗೇ ಕಳೆದಿದ್ದಾರೆ. ಆ ದಿನವೂ ಸಹ ನಾವು ಎಲ್ಲರೂ ರೂಮಿನ ಹೊರಗೇ ಇದ್ದೇವೆ. ಹನ್ನೊಂದುವರೆ ಸಮಯದ ನಂತರ ಈಶ್ವರ್ ಸಾಧಾರಣವಾಗಿ ಹೊರಗೆ ಬಂದು, ಮಾಂತ್ರಿಕರು

ತನ್ನ ರೂಮಿನಲ್ಲಿ ಏಕೆ ಬಿದ್ದಿದ್ದಾರೆಂದು ಕೇಳಿದ್ದಾನೆ. ಈಶ್ವರ್ ಹೇಳಿದ ಮಾತುಗಳನ್ನನುಸರಿಸಿ ಒಳಗೆ ಏನು ನಡೆದಿದೆಯೋ ಎಂದು ಹೋಗಿ ನೋಡಿದ್ದೇವೆ. ಅಲ್ಲಿ ಒಬ್ಬನಿಗೆ ಕಾಲು ಕೆಲಸಮಾಡಲಿಲ್ಲ, ಮತ್ತೊಬ್ಬನಿಗೆ ಕೈ ಕೆಲಸಮಾಡಲಿಲ್ಲ. ಅವರನ್ನು ಹೊರಗೆ ತಂದು ನಮ್ಮ ಮನೆಯಲ್ಲೇ ಇಟ್ಟುಕೊಂಡು ಚಿಕಿತ್ಸೆ ಮಾಡಿಸಿದ್ದೇನೆ. ಆದರೂ ಅವರು ಬದುಕಲಿಲ್ಲ. ಎರಡನೆ ದಿನ ಇಬ್ಬರೂ ಒಂದೇ ನಿಮಿಷದಲ್ಲಿ ಪ್ರಾಣವನ್ನು ಬಿಟ್ಟಿದ್ದಾರೆ. ಹಾಗೆ ಇಬ್ಬರೂ ಒಂದೇ ನಿಮಿಷದಲ್ಲಿ ಒಂದೇ ಸಲ ಸತ್ತು ಹೋಗುವುದು ನಮಗೆ ಏನೂ ಅರ್ಥವಾಗಲಿಲ್ಲ. ಆ ದಿನ ಭಾನುವಾರ ಅಮಾವಾಸ್ಯೆ ಆಗಿರುವುದರಿಂದ, ಇಬ್ಬರು ಮಾಂತ್ರಿಕರು ಆ ದಿನ ಕೈಯ್ಯನ್ನು, ಕಾಲನ್ನು ಕಳೆದುಕೊಂಡಿರುವುದರಿಂದ, ನಂತರ ಎರಡನೆ ದಿನ ಒಂದೇ ನಿಮಿಷದಲ್ಲಿ ಇಬ್ಬರೂ ಸತ್ತುಹೋಗಿರುವುದರಿಂದ, ನಮಗೂ ಸಹ ಯಾವುದಾದರೂ ಕೆಡಕು ಆಗುತ್ತದೇನೋ ಎಂದು ಭಯವಾಗುತ್ತಿದೆ. ಇದರ ವಿಷಯ ನೀವೇ ಹೇಳಬೇಕು.

**ರಾಜಯೋಗಾನಂದ :–** ನಾನು ಹೇಳುವುದೇನಿದೆಯೋ ಅದನ್ನೆಲ್ಲಾ ಮೊದಲೇ ಹೇಳಿದ್ದೇನೆ. ಈಶ್ವರ್ ವಿಷಯದಲ್ಲಿ ಏನು ನಡೆಯಬೇಕೋ ಅದು ನಡೆದೇ ನಡೆಯುತ್ತದೆ. ನೀನು ಅದನ್ನು ಕುರಿತು ಏನೂ ಮಾಡಲಾರೆ. ನೀನು ಸುಮ್ಮನೇ ತಟಸ್ಥವಾಗಿ ಇರು ಎಂದು ಮೊದಲೇ ಹೇಳಿದ್ದೇನೆ. ನೀನು ಇಲ್ಲಿ ಸರಿ ಎಂದು ಹೋಗಿದ್ದೀಯ. ಅಲ್ಲಿಗೆ ಹೋದ ನಂತರ ನನ್ನ ಸಲಹೆಯನ್ನು ಗಂಗೆಯಲ್ಲಿ ತುಳಿದು ನಿನ್ನ ಇಷ್ಟ ಬಂದಂತೆ ಮಾಡಿದ್ದೀಯ. ಈಶ್ವರ್ ವಿಷಯದಲ್ಲಿ ಯಾರೂ ಏನೂ ಮಾಡಲಾರರೆಂದು ಹೇಳಿದ್ದೇನಲ್ಲ! ನಾವು ಹೇಳಿರುವುದು ಅಲ್ಲಗಳೆದು ಯಾರೋ ಏನೋ ಮಾಡಬಲ್ಲರೆಂದು ಮಾಂತ್ರಿಕರನ್ನು ಕರೆದುಕೊಂಡು ಹೋಗಿ ಮನೆಯಲ್ಲಿ ಇಟ್ಟುಕೊಂಡಿದ್ದೀಯ. ನಿನ್ನ ಅಜ್ಞಾನದಿಂದ, ನಿನ್ನ ಅವಿಶ್ವಾಸದಿಂದ ಎರಡು ಪ್ರಾಣಗಳನ್ನು ಹೋಗುವಂತೆ ಮಾಡಿದ್ದೀಯ.

**ಜಮೀಂದಾರ್ :–** (ರಾಜಯೋಗಾನಂದ ಕಾಲು ಮೇಲೆ ಬಿದ್ದು) ನನ್ನದು ತಪ್ಪೇ ಸ್ವಾಮೀ, ನೀವು ಹೇಳಿದ ಮಾತನ್ನು ಕೇಳದಂತೆ ಹೋಗುವುದು ನನ್ನದು ಬಹಳ ದೊಡ್ಡ ತಪ್ಪು ಮಾಂತ್ರಿಕರು ಹೇಳಿದ ಮಾತುಗಳು ಕೇಳಿ ಹಾಗೆ ಮಾಡಿದ್ದೇನೆ.

ಇನ್ನು ಮೇಲೆ ನೀವು ಹೇಗೆ ಹೇಳಿದರೇ ಹಾಗೇ ಮಾಡುತ್ತೇನೆ. ನಡೆದ ವಿಷಯ ಹೇಳಬೇಕೆಂದು ಬಂದಿದ್ದೇನೆ.

**ರಾಜಯೋಗಾನಂದ :–** ನೀನು ಏನೋ ಒಳ್ಳೆಯದು ನಡೆಯುತ್ತದೆಂದು ಮಾಂತ್ರಿಕರನ್ನು ನಿನ್ನ ಮನೆಗೆ ಕರೆದುಕೊಂಡುಹೋಗಿದ್ದೀಯ. ಆ ವಿಷಯವನ್ನು ನಮಗೆ ತಿಳಿಸಿದ್ದರೇ, ಹಾಗೆ ಮಾಡುವುದು ಒಳ್ಳೆಯದಲ್ಲವೆಂದು ಆಗಲೇ ಹೇಳುತ್ತಿದ್ದೆವು. ನನ್ನ ಆಲೋಚನೆಯ ಪ್ರಕಾರ ನಿಮ್ಮ ಮನೆಗೆ ಬಂದಿರುವವರು ನಿಮಗೆ ಒಳ್ಳೆಯದು ಮಾಡಬೇಕೆಂದಲ್ಲ, ಸ್ವಾರ್ಥಕ್ಕಾಗಿ ನಿನ್ನ ಈಶ್ವರ್‌ನನ್ನು ಬಳಸಿಕೊಳ್ಳಬೇಕೆಂದು ಬಂದಿರುವವರು. ಅವರ ಹಿಂದೆ ದುರುದ್ದೇಶ ಇದೆ. ನೀನು ಹೇಳಿದ ಹೆಸರುಗಳಿರುವ ಮಾಂತ್ರಿಕರು ನನಗೆ ಮೊದಲೇ ಗೊತ್ತು. ಅವರು ತಪಸ್ವಿ ಬಾಬಾ ಸಮ್ಮುಖದಲ್ಲಿ, ಮುನೆಪ್ಪನ ಮಾರ್ಗದರ್ಶನದಲ್ಲಿ ಕೆಲಸ ಮಾಡುವವರು. ಬಾಬಾ ತನ್ನ ಸ್ವಾರ್ಥಕ್ಕಾಗಿ ಮಾಂತ್ರಿಕರನ್ನು ನಿಮ್ಮ ಮನೆಗೆ ಬರುವಂತೆ ಮಾಡಿದ್ದಾನೆ. ಅಮಾವಾಸ್ಯೆ ದಿನಕ್ಕಾಗಿ ಅವರು ಕಾದುಕೊಂಡು ಇರುತ್ತಿದ್ದರು. ಅಮಾವಾಸ್ಯೆ ದಿನದಂದು ನಿಮಗೆ ಯಾವುದೋ ನೆಪ ಹೇಳಿ ಅವರು ಈಶ್ವರ್ ರೂಮಿನಲ್ಲಿ ದೊಡ್ಡ ತಂತು ನಡೆಸಿರುತ್ತಾರೆ. ಆದರೂ ಅವರ ಪ್ರಯತ್ನ ಈಡೇರದೇ ಇರಬಹುದು. "ಮರಣಕ್ಕಿಂತ ಮೂಗಿಗೆ ಆಗಿರುವ ನೆಗಡಿ ದೊಡ್ಡದಲ್ಲ" ಎನ್ನುವಂತೆ ಈಶ್ವರ್‌ನೊಳಗೆ ಸೇರುವ ಶಕ್ತಿ ಮುಂದೆ ಮಂತ್ರಶಕ್ತಿ ದೊಡ್ಡದಲ್ಲ. ಅವರು ಮಾಡುವ ಪ್ರಯತ್ನಗಳಿಗೆ ಆ ಶಕ್ತಿಗಳು ಅವರನ್ನು ಸತ್ತುಹೋಗುವಂತೆ ಮಾಡಿವೆ. ರೂಮಿನೊಳಗೇ ಸತ್ತುಹೋಗದಂತೆ ಅಲ್ಲಿ ಅವರಲ್ಲಿ ಪ್ರವೇಶಿಸಿ ಎರಡನೆ ದಿನ ಅವರನ್ನು ಸಾಯಿಸಿವೆ. ಅಮಾವಾಸ್ಯೆ ದಿನ ಮಾಂತ್ರಿಕರ ಕಾಲು ಕೈ ಕೆಲಸ ಮಾಡದಂತೆ ಬಿದ್ದುಹೋದಾಗಲೇ, ಆ ವಿಷಯ ನಮಗೆ ತಿಳಿಸಿದ್ದರೇ ಅದಕ್ಕೆ ತಕ್ಕ ಉಪಾಯವನ್ನು ಹೇಳುತ್ತಿದ್ದೆವು. ಅವರನ್ನು ಈಶ್ವರ್ ರೂಮಿನೊಳಗೇ ಕೆಲವು ದಿನಗಳು ಇಟ್ಟಿದ್ದರೇ ಅವರು ಸತ್ತುಹೋಗುತ್ತಿರಲಿಲ್ಲ. ಅವರನ್ನು ಆ ರೂಮಿನಿಂದ ಹೊರಗೆ ತರುತ್ತಲೇ ಗಂಟೆ, ಗಂಟೆಗೂ ಅವರು ಸಾವಿನ ಕಡೆ ಹೋಗಿದ್ದಾರೆ. ಆದ್ದರಿಂದ ಎರಡನೇ ದಿನವೇ ಸತ್ತುಹೋಗಿದ್ದಾರೆ. ಅಮಾವಾಸ್ಯೆ ದಿನದಂದು ಒಬ್ಬೊಬ್ಬರಲ್ಲಿ ಒಂದೊಂದು ಶಕ್ತಿ ಪ್ರವೇಶಿಸಿದೆ. ಒಬ್ಬರಲ್ಲಿ ಕಾಲಿನಿಂದ ಪ್ರವೇಶಿಸಿ ಅದನ್ನು ಕೆಲಸ ಮಾಡದಂತೆ ಮಾಡಿದೆ. ಹಾಗೇ ಎರಡನೆ ಶಕ್ತಿ ಎರಡನೆ

ವ್ಯಕ್ತಿ ಕೈಯ್ಯಲ್ಲಿ ಪ್ರವೇಶಿಸಿ ಕೈಯ್ಯನ್ನು ಕೆಲಸ ಮಾಡದಂತೆ ಮಾಡಿದೆ. ಒಂದೇ ಸಲ ಇಬ್ಬರಲ್ಲಿ ಪ್ರವೇಶಿಸಿದ ಶಕ್ತಿಗಳು ಒಂದೇ ಸಲ ಹೊರಗೆ ಹೋಗಿವೆ. ಅವು ಹೊರಗೆ ಹೋಗುತ್ತಾ ಆ ಶರೀರದಲ್ಲಿನ ಜೀವಿಗಳನ್ನು ಸಹ ತೆಗೆದುಕೊಂಡು ಹೋಗಿರುವು ದರಿಂದ ಇಬ್ಬರೂ ಒಂದೇ ಸಲ ಸತ್ತುಹೋಗಿದ್ದಾರೆ. ನೀನು ಮಾಡಿದ ಅಜ್ಞಾನದ ಕೆಲಸಕ್ಕೆ ಎರಡು ಪ್ರಾಣಗಳು ಬಲಿಯಾಗಿವೆ. ನಾವು ಏನಾದರೆ ನಡೆಯಬಾರದೆಂದು ಕೊಂಡಿದ್ದೇವೋ ಅದೇ ನಡೆದಿದೆ.

ಈಶ್ವರ್‌ನಲ್ಲಿನ ಶಕ್ತಿಗಳನ್ನು ತಮ್ಮ ವಶ ಮಾಡಿಕೊಳ್ಳಬೇಕೆಂದು ಕೆಲವರು ಪ್ರಯತ್ನಿಸುತ್ತಿದ್ದಾರೆಂದೂ, ಅವರ ಪ್ರಯತ್ನಗಳನ್ನು ನಡೆಯದಂತೇ ಮಾಡಬೇಕೆಂದು ನಾನು ಬಹಳ ಸಲ ಬಹಳ ಜನರಿಗೆ ಹೇಳಿದ್ದೇನೆ. ಅಂತಹವರ ಪ್ರಯತ್ನವೇ ಆ ಮಾಂತ್ರಿಕರು ನಿಮ್ಮ ಮನೆಗೆ ಬಂದು ಅಲ್ಲೇ ಉಳಿದುಹೋಗಿರುವುದು. ಆ ಪ್ರಯತ್ನದಲ್ಲಿ ಭಾಗವಾಗಿಯೇ ಅಮಾವಾಸ್ಯೆ ದಿನಗಳಲ್ಲಿ ಈಶ್ವರ್ ರೂಮಿನೊಳಗೆ ಹೋಗಿದ್ದಾರೆ. ಕೊನೆಗೆ ಸತ್ತುಹೋಗಿದ್ದಾರೆ. ಅವರನ್ನು ಪ್ರೇರೇಪಿಸಿ ಕಳುಹಿಸಿದವರು ಹಾಯಾಗಿ ಇದ್ದಾರೆ. ಈಶ್ವರ್‌ಗೆ ಇನ್ನೂ ಮೂರು ತಿಂಗಳು, ಮೂರು ಅಮಾವಾಸ್ಯೆಗಳು ಕಳೆದುಹೋಗಬೇಕು. ಮುಂಬರುವ ಮೂರು ಅಮಾವಾಸ್ಯೆಗಳು, ಕಳೆದುಹೋದ ಅಮಾವಾಸ್ಯೆಗಳಿಗಿಂತ ಬಹಳ ಮುಖ್ಯವಾದವು. ಆಗ ನಾವು ಸ್ವತಃ ಅಲ್ಲಿಗೆ ಬಂದು ಕೆಲವು ಕೆಲಸಗಳು ನಡೆಯದಂತೆ ನೋಡಬೇಕೆಂದುಕೊಂಡಿದ್ದೇವೆ. ಈ ಮೂರು ಅಮಾವಾಸ್ಯೆಗಳು ಮುಖ್ಯವಾದವೆಂದು ತಪಸ್ವಿ ಬಾಬಾಗೂ ಸಹ ತಿಳಿದಿದೆ. ಆದ್ದರಿಂದ ಆತನ ಪ್ರಯತ್ನ ಆತನು ಮಾಡುತ್ತಾನೆ. ಲೋಕ ಸಂರಕ್ಷಣಾರ್ಥವಾಗಿ ನಮ್ಮ ಕೆಲಸ ನಾವು ಮಾಡುತ್ತೇವೆ. ಈ ಮೂರು ತಿಂಗಳ ಕಾಲದಲ್ಲಿ ನಿಮಗಾಗಲೀ, ನಿಮ್ಮ ಕುಟುಂಬದಲ್ಲಿನ ಯಾರಿಗೇ ಆಗಲೀ, ಯಾವ ಹಾನಿ ಉಂಟಾಗುವುದಿಲ್ಲ. ಆದರೆ ನೀನು ಮಾಡಿದ ಬುದ್ಧಿ ಇಲ್ಲದ ಕೆಲಸದಿಂದ ಇಂದಿಗೆ ಒಂಬತ್ತು ತಿಂಗಳ ನಂತರ ನಿಮ್ಮ ಕುಟುಂಬದಲ್ಲಿ ಒಂದು ಘೋರ ನಡೆದುಹೋಗುತ್ತದೆ.

**ಜಮೀಂದಾರ್ :–** ಏನು ನಡೆಯುತ್ತದೆ ಸ್ವಾಮೀ, ಅದಕ್ಕೆ ನಾವು ಸಹಿಸಿಕೊಳ್ಳುತ್ತೇವಾ, ಯಾರಿಗಾದರೂ ಪ್ರಮಾದ ನಡೆಯುತ್ತದಾ?

**ರಾಜಯೋಗಾನಂದ :–** ನೀನು ಭಯಪಡದೇ, ಗುಂಡಿಗೆಯನ್ನು ಕಲ್ಲು ಮಾಡಿಕೊಂಡು ಕೇಳುತ್ತೇನೆಂದರೇ ಹೇಳಬಲ್ಲೆನು. ಆದರೇ ಈ ಮಾತನ್ನು ಹೊರಗೆ ಯಾರಿಗೂ ತಿಳಿಸಬಾರದು.

**ಜಮೀಂದಾರ್ :–** ಸರಿ ಸ್ವಾಮೀ, ನೀವು ಹೇಳಿದಂತೆ ಯಾರಿಗೂ ಹೇಳುವುದಿಲ್ಲ. ಅಷ್ಟೇ ಅಲ್ಲದೆ ಅದು ಎಂತಹದ್ದಾದರೂ ನನ್ನಲ್ಲೇ ಬಚ್ಚಿಟ್ಟುಕೊಳ್ಳುತ್ತೇನೆ.

**ರಾಜಯೋಗಾನಂದ :–** ಮುಂಬರುವ ಮೂರು ತಿಂಗಳು ಕಳೆದುಹೋದ ನಂತರ ಆರು ತಿಂಗಳಿಗೆ ಈಶ್ವರ್‌ಗೆ ಪ್ರಾಣಗಂಡವಿದೆ. ನನಗೆ ತಿಳಿದಂತೆ ಆಗ ಆತನಿಗೆ ಮರಣ ತಪ್ಪುವುದಿಲ್ಲವೆಂದು ಅಂದುಕೊಳ್ಳುತ್ತಿದ್ದೇನೆ.

(ಜಮೀಂದಾರ್ ಆ ಮಾತು ಕೇಳಿದ ಕೂಡಲೇ, ಆಕಾಶವೇ ಕುಸಿದಂತಾಗಿ ಹೋಗಿದೆ, ದಿಗಿಲುಗೊಂಡು ಹೀಗೆ ಹೇಳುತ್ತಾನೆ.)

**ಜಮೀಂದಾರ್ :–** ಆ ಗಂಡಾಂತರದಿಂದ ತಪ್ಪಿಸಿಕೊಳ್ಳುವ ಉಪಾಯವೇ ಇಲ್ಲವಾ?

**ರಾಜಯೋಗಾನಂದ :–** ಅದು ಗಂಡಾಂತರವೆ ಆದರೆ ತಪ್ಪಿಸಿಕೊಳ್ಳುವ ಉಪಾಯವನ್ನು ಹುಡುಕಬಹುದು. ಆದರೆ ಅದು ಗಂಡಾಂತರ ಸಹ ಅಲ್ಲ. ನೀನೂ, ನಾನೂ ಏನೂ ಮಾಡಲಾರೆವು. ನೀನು ಮನೆಗೆ ಹೋಗಿ ಸರ್ವ ಸಾಧಾರಣವಾಗಿ ಏನೂ ತಿಳಿಯದಂತೆ ಇರು. ಏನು ನಡೆಯಬೇಕೆಂದು ನಿರ್ಣಯವಾಗಿದೆಯೋ ಅದು ನಡೆದೇ ನಡೆಯುತ್ತದೆನ್ನುವ ನಂಬಿಕೆಯಿಂದ ಇರು. ನಾನು ಇದಕ್ಕಿಂತ ಹೆಚ್ಚಾಗಿ ಹೇಳುವುದಿಲ್ಲ.

(ಆಗ ಜಮೀಂದಾರ್, ರಾಜಯೋಗಾನಂದಸ್ವಾಮಿ ಹತ್ತಿರ ಅಪ್ಪಣೆ ತೆಗೆದುಕೊಂಡು ನಮಸ್ಕರಿಸಿ ಅಲ್ಲಿಂದ ಹೊರಟು ಹೋಗುತ್ತಾನೆ. ಪಕ್ಕದಲ್ಲಿದ್ದು ಸ್ವಾಮಿಯವರು ಹೇಳಿದ ಎಲ್ಲ ಮಾತುಗಳನ್ನು ಗ್ರಹಿಸಿದ ರಾಘವ, ಸ್ವಾಮಿಯನ್ನು ನೋಡಿ ಹೀಗೆ ಹೇಳುತ್ತಾನೆ.)

**ರಾಘವ :–** ಸ್ವಾಮೀ! ಈಶ್ವರ್‌ಗೆ, ನಡೆಯುತ್ತಿರುವ ಪಿತೂರಿ ಏನೂ ತಿಳಿಯದೆಂದಿದ್ದೀರಲ್ಲ! ಹಾಗಿರುವಾಗ ಆತನದ್ದು ಯಾವ ತಪ್ಪು ಇಲ್ಲ! ಯಾವ ತಪ್ಪು ಮಾಡದಂತೇ ಆತನಿಗೆ ಮರಣ ಬರುವುದು ನ್ಯಾಯವಲ್ಲ!

**ರಾಜಯೋಗಾನಂದ ಸ್ವಾಮಿ :–** ನ್ಯಾಯ ಎನ್ನುವುದು ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿರುವುದು ಅಲ್ಲ. ನೀತಿ, ನ್ಯಾಯಗಳು ಲೋಕಸಂಬಂಧ, ಜ್ಞಾನ ಧರ್ಮ ದೈವಸಂಬಂಧವೆಂದು ನೆನಪಿಟ್ಟುಕೊಳ್ಳಿ. ಆತನು ಈ ಜನ್ಮದಲ್ಲಿ ಮಾಡಿದ ತಪ್ಪಿಗೆ ಶಿಕ್ಷೆ ಎಂದು ಹೇಳಲಿಲ್ಲ ಅಲ್ಲವೆ! ಗತಜನ್ಮದಲ್ಲಿ ಮಾಡಿಕೊಂಡಿದ್ದನ್ನನುಸರಿಸಿ ಈ ಜನ್ಮದಲ್ಲಿ ಅನುಭವಗಳಿರುತ್ತವೆ. ಹಾಗೆಯೇ ಮರಣವೂ ಸಹ ಗತಜನ್ಮ ಫಲವೇಯೆಂದು ನೆನಪಿಟ್ಟುಕೊಳ್ಳಿರಿ.

(ಅಷ್ಟಕ್ಕೆ ಅವರ ಸಂಭಾಷಣೆ ಮುಗಿದುಹೋಗುತ್ತದೆ. ಮುಂದೆ ನಡೆಯುವ ಕಾರ್ಯಗಳನ್ನು ಕುರಿತು ಈ ರಾತ್ರಿಗೆ ಯೋಚಿಸಬೇಕೆಂದು ಅಂದುಕೊಳ್ಳುತ್ತಿದ್ದಾರೆ.)

*********************************

(ಮುನೆಪ್ಪನಿಗೆ ನಾಗಭೂಷಣ, ಮಲ್ಲಯ್ಯ ಸತ್ತುಹೋದ ವಾರ್ತೆ ತಡವಾಗಿ ಕೆಲವು ದಿನಗಳ ನಂತರ ತಿಳಿಯಿತು. ಮುಖ್ಯವಾದ ಇಬ್ಬರು ಮಾಂತ್ರಿಕರು ಸತ್ತುಹೋಗುವುದು ಮುನೆಪ್ಪನಿಗೆ ಬಹಳ ನೋವನ್ನುಂಟುಮಾಡಿತು. ಮೊದಲೇ ತನ್ನ ಅನುಚರರು ಮುಖ್ಯವಾದವರು ಬ್ಯಾಂಕ್ ದರೋಡೆಯಲ್ಲಿ ಪೊಲೀಸರಿಗೆ ಸಿಕ್ಕಿ ಹೋಗಿರುವುದರಿಂದ ನಿಸ್ಸಹಾಯಕನಾದ ಮುನೆಪ್ಪನಿಗೆ, ಮಾಂತ್ರಿಕರ ಮರಣವಾರ್ತೆ ಗೊಡ್ಡಲಿ ಪೆಟ್ಟಿನಂತೆ ಆಯಿತು. ತನಗೆ ತಿಳಿದ ವಾರ್ತೆಯನ್ನು ತಪಸ್ವಿ ಬಾಬಾಗೆ ತಿಳಿಸಿದ್ದಾನೆ. ಆ ವಾರ್ತೆ ಕೇಳಿದ ಬಾಬಾ ಆಶ್ಚರ್ಯಪಟ್ಟನು. ಬಾಬಾಗೆ ಆ ವಾರ್ತೆ ಉರಿಯುತ್ತಿರುವ ಗಾಯದ ಮೇಲೆ ಕಾರವನ್ನು ಚೆಲ್ಲಿದಂತಾಯಿತು. ಮೊದಲೇ ಮುನೆಪ್ಪ ಮನುಷ್ಯರು ಕೆಲವರು ಪೊಲೀಸರ ಕೈಯ್ಯಲ್ಲಿ ಸಿಕ್ಕಿರುವುದರಿಂದ, ಇನ್ಮೇಲೆ ಹೊರಗೆ ಹೋಗಿ ಕೆಲಸ ಮಾಡುವವರು ತಮ್ಮ ಹತ್ತಿರ ಇಲ್ಲದಂತೆ ಹೋಗಿದ್ದಾರೆ. ಈಶ್ವರ್ ವಿಷಯದಲ್ಲಿ ಉಳಿದಿರುವವರು ಮೂರು ತಿಂಗಳು ಮಾತ್ರ. ಆ ಮೂರು ತಿಂಗಳಲ್ಲೇ ತಮ್ಮ ವಿಭೂತಿಯನ್ನು ಈಶ್ವರ್‌ಗೆ ಬೊಟ್ಟಿನಂತೆ ಇಡಬೇಕು. ಹಾಗೆ ಇಟ್ಟಾಗಲೇ ಬಾಬಾ ಅಂದುಕೊಂಡ ಕೆಲಸ ಈಡೇರುತ್ತದೆ. ಹಾಗೆ ಮಾಡುವುದಕ್ಕೆ ಸ್ವತಃ ಮುನೆಪ್ಪನಾಗಲೀ, ಬಾಬಾರವರಾಗಲೀ ಹೊರಗೆ ಬರಬೇಕಾಗಿದೆ. ಮುನೆಪ್ಪ ಮೇಲೆ ಬಹಳ ಕಾಲದಿಂದ

ಪೊಲೀಸರ ಕಣ್ಣು ಇದೆ. ಆದ್ದರಿಂದ ಮುನೆಪ್ಪ ಮಾರುವೇಷದಲ್ಲಿ ಹೊರಗೆ ಹೋಗಬೇಕು. ಹಾಗಾಗದಿದ್ದರೇ ಬಾಬಾರವರಾದರೂ ಹೊರಗೆ ಹೋಗಬೇಕು. ನಾಲ್ಕನೆ ಅಮಾವಾಸ್ಯೆಗೆ ಮೊದಲೇ ಯಾವುದೊ ಒಂದು ನಿರ್ಣಯ ಮಾಡಿಕೊಂಡು ಅದಕ್ಕೆ ತಕ್ಕ ಕಾರ್ಯಾಚರಣೆಯನ್ನು ರೂಪಿಸಿಕೊಳ್ಳಬೇಕು. ಹಾಗೆ ಎರಡು ದಿನ ತಪಸ್ವಿಬಾಬಾ ಯೋಚಿಸಿದ ನಂತರ ಮುನೆಪ್ಪನನ್ನು ಮಾರು ವೇಷದಲ್ಲಿ ಚನ್ನಪಟ್ಟಣಕ್ಕೆ ಕಳುಹಿಸಬೇಕೆಂದುಕೊಂಡಿದ್ದಾನೆ. ಮುನೆಪ್ಪ ಯಾವ ವೇಷದಲ್ಲಿ ಹೋಗಬೆಕು, ಹಾಗೆ ಹೋದವನು ಏನು ಮಾಡಬೇಕು, ಹೇಗೆ ತನ್ನ ವಿಭೂತಿಯನ್ನು ಈಶ್ವರ್ ಹಣೆಗೆ ಬೊಟ್ಟಾಗಿ ಇಡಬೇಕೆಂದು ಯೋಚಿಸಿ, ಅದಕ್ಕೆ ತಕ್ಕ ಯೋಜನೆಯನ್ನು ತಯಾರು ಮಾಡಿಕೊಂಡು, ತನ್ನ ಯೋಚನೆಗಳೆಲ್ಲವನ್ನೂ ಮುನೆಪ್ಪನಿಗೆ ತಿಳಿಸಿದನು. ಮುನೆಪ್ಪ ಬಾಬಾರವರು ಹೇಳಿದ ಮಾತುಗಳನ್ನು ಜಾಗ್ರತೆಯಿಂದ ಕೇಳಿ ಹಾಗೇ ಮಾಡುತ್ತೇನೆಂದು ಬಾಬಾರವರಿಗೆ ಮಾತುಕೊಟ್ಟಿದ್ದಾನೆ. ಅಷ್ಟರಲ್ಲಿ ನೋಡುತ್ತಿದ್ದಂತೇ ಅಮಾವಾಸ್ಯೆ ಬಂದಿತು. ಅದಕ್ಕಿಂತ ನಾಲ್ಕು ದಿನಗಳ ಮೊದಲೇ ಮುನೆಪ್ಪ ಹೊರಟು ಹೋಗಿ ಚನ್ನ ಪಟ್ಟಣ ಸೇರಿಕೊಂಡಿದ್ದಾನೆ.

ಊರಿನ ಹೊರಗೆ ಗುಡಿ ಹತ್ತಿರ ಮುನೆಪ್ಪ ಇಳಿದಿದ್ದಾನೆ, ಮುನೆಪ್ಪನೊಂದಿಗೆ ಅಡಿಗೆ ಮಾಡುವುದಕ್ಕೆ ಒಬ್ಬ ಹೆಣ್ಣುಮಗಳನ್ನು, ಇಬ್ಬರು ಗಂಡಸರನ್ನು ಕರೆದುಕೊಂಡು ಒಟ್ಟು ನಾಲ್ವರು ಹೊರಟು ಬಂದಿದ್ದಾರೆ. ನಾಲ್ವರು ದೊಡ್ಡಮ್ಮ ದೇವತೆಯನ್ನು ತಲೆಮೇಲೆ ಹೊತ್ತುಕೊಂಡು ಬೇಡಿಕೊಂಡು ತಿನ್ನುವವರ ವೇಷದಲ್ಲಿ ಇದ್ದಾರೆ. ಆ ಗುಂಪಿನಲ್ಲಿ ಮುನೆಪ್ಪ ಚಾಟಿ ತೆಗೆದುಕೊಂಡು ದೇವತೆಯನ್ನು ಕುರಿತು ಹೇಳುತ್ತಾ ಅಲ್ಲಿ, ಇಲ್ಲಿ ಅಲೆದು ಹಣ ಕೇಳಿಕೊಳ್ಳುತ್ತಿರುವಾಗ, ಒಬ್ಬ ಮನುಷ್ಯ ದೊಡ್ಡಮ್ಮ ಗೂಡನ್ನು ತಲೆಮೇಲೆ ಎತ್ತಿಕೊಂಡಿದ್ದಳು. ಮತ್ತೊಬ್ಬ ಮನುಷ್ಯ ಡೋಲು ಬಾರಿಸುತ್ತಿರುವನು. ಹೆಣ್ಣು ಮಗಳು ಸಹ ಕೆಲವರಿಗೆ ಅಮ್ಮನವರ ಬಂಡಾರವನ್ನು ಕೊಡುತ್ತಾ ಹಣ ಕೇಳುತ್ತಿದ್ದಳು. ಈ ವಿಧವಾಗಿ ಭಿಕ್ಷೆ ಬೇಡಿಕೊಳ್ಳುವವರ ಗುಂಪಿನಂತೆ ಅವರು ಹೊರಟು ಬಂದು, ಊರಿನ ಹೊರಗೆ ಗುಡಿ ಹತ್ತಿರ ಬಯಲಿನಲ್ಲಿ ಒಂದು ಗುಡಾರವನ್ನು ಹಾಕಿಕೊಂಡು ಇದ್ದಾರೆ. ಹಾಗೆ ಎಲ್ಲ ಮೊದಲೇ ಏರ್ಪಾಟುಗಳು ಮಾಡಿಕೊಂಡು ಚನ್ನಪಟ್ಟಣಕ್ಕೆ ಬಂದಿದ್ದಾರೆ. ಮೂರು ದಿನಗಳು ಯಾರಿಗು

ಅನುಮಾನ ಬಾರದಂತೆ ಊರಿನಲ್ಲಿ ಭಿಕ್ಷೆ ಬೇಡಿಕೊಂಡಿದ್ದಾರೆ. ನಾಲ್ಕನೆ ದಿನ ಅಮಾವಾಸ್ಯೆ ಆದ್ದರಿಂದ ಬೆಳಗ್ಗೆ ಜಮೀಂದಾರ್ ಮನೆ ಹತ್ತಿರ ದೊಡ್ಡಮ್ಮನನ್ನು ಹೊತ್ತುಕೊಂಡು ನಿಂತಿದ್ದಾರೆ. ಒಬ್ಬನು ಡೋಲು ಹೊಡೆಯುತ್ತಿರುವಾಗ ಮುನೆಪ್ಪ ಮೇಲೆ ಬಟ್ಟೆಗಳು ಇಲ್ಲದಂತೆ ಕೆಳಗೆ ಮಾತ್ರ ಲಂಗೋಟಿ ಕಟ್ಟಿ ಚಾಟಿ ತೆಗೆದುಕೊಂಡು ನೆಲಕ್ಕೆ ಹೊಡೆಯುತ್ತಾ ಅತ್ತ ಇತ್ತ ತಿರುಗುತ್ತಾ ಮಾತನಾಡುತ್ತಾ ಇದ್ದಕ್ಕಿದ್ದಂತೆ, ದೊಡ್ಡಮ್ಮ ದೇವತೆ ಮೈಮೇಲೆ ಬಂದಂತೆ ಮಾತನಾಡತೊಡಗಿದನು. ಆಗ ಮಾರುವೇಷದಲ್ಲಿರುವ ಮುನೆಪ್ಪ ಹೀಗೆ ಮಾತನಾಡಿದ್ದಾನೆ "ಎಲೈ ಜಮೀಂದಾರ! ನಾನು ನಿನ್ನ ಮನೆ ಮುಂದಕ್ಕೆ ಬಂದರೂ ನೀನು ಹೊರಗೆ ಬರಲಿಲ್ಲವೇ. ನಾನು ನಿನ್ನ ಮೇಲೆ ದಯೆಇಟ್ಟು ನಿನ್ನ ಮನೆಗೆ ಬಂದಿದ್ದೇನೆ" ಎಂದು ಅನ್ನುತ್ತಿರುವಾಗ ಒಳಗಿರುವ ಜಮೀಂದಾರ್ ತಾನು ಜಮೀಂದಾರ್ ಎಂದು, ತನ್ನ ಮೇಲೆ ದಯೆ ಇದ್ದು ಬರುವುದೇನೆಂದು ಹೊರಗೆ ಬಂದು ನೋಡಿದ್ದಾನೆ. ಆಗ ದೊಡ್ಡಮ್ಮ ಮೈಮೇಲೆ ಬಂದಿದೆಯೆಂದು ತಿಳಿಯಿತು. ಕೈಗಳು ಎತ್ತಿ ನಮಸ್ಕರಿಸುತ್ತಾ ನಿಂತಿದ್ದಾನೆ. ಆಗ ಜಮೀಂದಾರನು ಇಂತಹವನೇ ಎಂದು ಫೋಟೋ ನೋಡಿರುವುದರಿಂದ ಆತನನ್ನು ಸುಲಭವಾಗಿ ಮುನೆಪ್ಪ ಕಂಡುಕೊಂಡಿದ್ದಾನೆ. ದೊಡ್ಡಮ್ಮ ದೇವತೆಯಾಗಿ ನಟಿಸುವ ಮುನೆಪ್ಪ ಜಮೀಂದಾರನನ್ನು ನೋಡಿ "ಎಲೈ ಬಾಲಾ! ನೀನು ಬಹಳ ಇಕ್ಕಟ್ಟಿನಲ್ಲಿ ಸಿಲುಕಿಕೊಂಡಿದ್ದೀಯ! ನಿನ್ನ ಮನೆಯಲ್ಲಿ ಭೂತಗಳು ಸೇರಿವೆ, ದೆವ್ವಗಳು ಬಂದು ಹೋಗುತ್ತಿವೆ. ಎರಡು ಪ್ರಾಣಗಳು ಹೋಗಿವೆ ಅಲ್ಲೇನೋ ಬಾಲಾ? ನಿಮ್ಮ ಹಿರಿಯರು ನನ್ನನ್ನು ಪೂಜಿಸಿದ್ದಾರೆ. ಅದಕ್ಕೇ ನಾನು ಬಂದಿದ್ದೇನೆ, ಈ ಮನೆಯಲ್ಲಿ ಇನ್ನು ಎರಡು ಪ್ರಾಣಗಳು ಹೋಗುತ್ತವೆ. ನನಗೆ ಒಂದು ಹೋತವನ್ನು ಬಲಿ ಕೊಡು. ನಿನ್ನ ಮನೆಯಲ್ಲಿ ಏನೂ ನಡೆಯದಂತೆ ಮಾಡುತ್ತೇನೆ" ಎಂದನು. ಆಗ ಜಮೀಂದಾರ್ ಮುಂದಕ್ಕೆ ಬಂದು "ಅಮ್ಮ ತಾಯಿ ನಾನು ನಿನ್ನನ್ನೇ ಪೂಜಿಸುತ್ತೇನಮ್ಮಾ, ನಿನಗೆ ಚಿಕ್ಕ ಹೋತವನ್ನು ಬಲಿ ಕೊಡುತ್ತೇನೆ. ನನ್ನ ಮನೆಯಲ್ಲಿ ಏನೂ ನಡೆಯದಂತೆ ನೋಡು ತಾಯೀ" ಎಂದನು. ಆಗ ಮುನೆಪ್ಪ ಆಕಡೆ ಈಕಡೆ ತೂಗುತ್ತಾ ಬಾಲಾ! ನಿನ್ನ ಮನೆಗೆ ನಡುರಾತ್ರಿಯಲ್ಲಿ ಒಂದು ಪಿಶಾಚಿ ಬರುತ್ತಿದೆ. ಅದನ್ನು ಇಲ್ಲದಂತೆ ಮಾಡುತ್ತೇನೆ, ನಿನ್ನ ಮನೆಯಲ್ಲಿ ಪ್ರಾಣಗಳು

ಹೋಗದಂತೆ ಮಾಡುತ್ತೇನೆ. ನೀನು ನನ್ನನ್ನೇ ನಂಬಿಕೊಂಡು ನನ್ನ ಬಂಡಾರವನ್ನು ಬೊಟ್ಟಾಗಿ ಇಟ್ಟಿಕೋ, ಹಾಗೇ ನನ್ನ ಬಂಡಾರವನ್ನು ನಿನ್ನ ಮಗನಿಗೂ ಸಹ ಇಡು. ನನ್ನ ಬಂಡಾರವನ್ನು ಇಟ್ಟುಕೊಳ್ಳದೇ ಹೋದರೇ ನಿನ್ನ ಮನೆಯಿಂದ ನಿಮ್ಮ ಎರಡು ಪ್ರಾಣಗಳು ಹೋಗುತ್ತವೆ. ನನ್ನ ಬಂಡಾರವನ್ನು ಬೆಳಗ್ಗೆ, ಸಾಯಂಕಾಲ ನನ್ನನ್ನು ಕೈ ಮುಗಿದು ನನ್ನನ್ನು ನೆನೆದು ಇಟ್ಟುಕೊಳ್ಳಿ" ಎಂದು ಮುನೆಪ್ಪ, ದೊಡ್ಡಮ್ಮ ಹೊರಟುಹೋದಂತೆ ಒಂದು ಕಡೆ ಮಲಗಿಕೊಂಡು ಒಂದು ನಿಮಿಷದ ನಂತರ ಎದ್ದಿದ್ದಾನೆ. ದೊಡ್ಡಮ್ಮ ಹೇಳುತ್ತಿದ್ದೇನೆಂದು ಅದಕ್ಕು ಮೊದಲು ನಡೆದ ವಿಷಯಗಳನ್ನು ಹೇಳುವುದರಿಂದ ಜಮೀಂದಾರ್ ನಿಜವಾಗಿ ದೇವತೆಯೇ ಹೇಳಿದೆಯೆಂದು ಅಂದುಕೊಂಡಿದ್ದಾನೆ. ಮುನೆಪ್ಪನಿಗೆ ಮೊದಲೇ ಜಮೀಂದಾರ್ ಮನೆ ವಿಷಯವೆಲ್ಲಾ ತಿಳಿದಿತ್ತು ಆದ್ದರಿಂದ ಅದನ್ನು ದೇವತೆ ಆವರಿಸಿ ಹೇಳಿದಂತೆ ಹೇಳಿ ಜಮೀಂದಾರನನ್ನು ನಂಬಿಸಿದ್ದಾನೆ. ತಾನು ಹೇಳದೇನೆ ನಡೆದಿರುವವೆಲ್ಲಾ ಹೇಳಿರುವುದರಿಂದ ರಾಜಯೋಗಾನಂದ ಸ್ವಾಮಿಯನ್ನು ಜಮೀಂದಾರ್ ಮರೆತು ಹೋಗಿದ್ದಾನೆ. ಒಂದು ಸಲ ಸ್ವಾಮಿ ನೆನಪಿಗೆ ಬಂದರೂ ದೇವತೆಯೇ ಹೇಳುತ್ತಿದೆಯಲ್ಲವೆ ಎಂದುಕೊಂಡಿದ್ದಾನೆ. ಮುನೆಪ್ಪನೊಂದಿಗೆ ದೇವತೆಯನ್ನು ಎತ್ತಿಕೊಂಡ ಮನುಷ್ಯ ದೇವತೆ ಗೂಡಿನಲ್ಲಿಂದ ಬಂಡಾರವನ್ನು ತೆಗೆದುಕೊಟ್ಟಿದ್ದಾನೆ. ಆ ಬಂಡಾರವನ್ನು ತಪಸ್ವಿಬಾಬಾ ಕೊಟ್ಟು ಕಳುಹಿಸಿದ್ದಾನೆಂದಾಗಲೀ, ಬಂದಿರುವವರು ಮಾರುವೇಷದಲ್ಲಿ ತನಗಾಗಿಯೇ ಬಂದಿದ್ದಾರೆಂದಾಗಲೀ ಜಮೀಂದಾರನಿಗೆ ತಿಳಿದಿಲ್ಲ. ತನ್ನ ಅದೃಷ್ಟದಿಂದ ದೊಡ್ಡಮ್ಮ ಆವರಿಸಿ ತನ್ನ ಮನೆಯಲ್ಲಿ ನಡೆಯುತ್ತಿರುವವು, ನಡೆದುಹೋಗಿರುವವು, ಮುಂದೆ ನಡೆಯುವವು ಹೇಳಿದ್ದಾಳೆಂದುಕೊಂಡಿದ್ದಾನೆ. ಅವರು ಕೊಟ್ಟಿರುವ ಬಂಡಾರವನ್ನು ತೆಗೆದುಕೊಂಡಿದ್ದಾನೆ. ಚಿಕ್ಕ ಹೋತ ಎಂದರೆ ಏನೆಂದು ಅವರನ್ನು ಕೇಳಿದನು. ಅವರು ಟಗರು ಎಂದು ಹೇಳಿದಾಗ ಅವರಿಗೆ ಹಣವನ್ನು ಕೊಟ್ಟು ಕಳುಹಿಸಿದ್ದಾನೆ. ಆ ದಿನದಿಂದ ಅವರು ಕೊಟ್ಟಿರುವ ಬಂಡಾರವನ್ನು ಪ್ರತಿ ದಿನ ಈಶ್ವರ್‌ಗೆ ಬೊಟ್ಟು ಇಡುತ್ತಾ, ತಾನೂ ಸಹ ಇಟ್ಟುಕೊಳ್ಳುತ್ತಿದ್ದನು.

ಹಾಗೆ ಪ್ರತಿ ದಿನ ಇಟ್ಟುಕೊಂಡರೂ ಯಾವ ತೊಂದರೆ ಇಲ್ಲ. ಆದರೆ ಅಮಾವಾಸ್ಯೆ ದಿನದಂದು ಆ ಬಂಡಾರವನ್ನು ಈಶ್ವರ್ ಬೊಟ್ಟು ಇಟ್ಟುಕೊಳ್ಳಬಾರದು. ಏಕೆಂದರೆ! ಆ ಬಂಡಾರವನ್ನು ತಪಸ್ವಿಬಾಬಾ ಪ್ರತ್ಯೇಕವಾಗಿ ಈಶ್ವರ್‌ಗಾಗಿಯೇ ಕಳುಹಿಸಿದ್ದಾನೆ. ಅದನ್ನು ಸುಲಭವಾಗಿ ಜಮೀಂದಾರ್ ಮನೆಗೆ ಮುನೆಪ್ಪ ಮಾರುವೇಷದಲ್ಲಿ ಸೇರಿಸಿದ್ದಾನೆ. ಅಮಾವಾಸ್ಯೆ ದಿನದಂದು ಈಶ್ವರ್ ಬೆಳಗ್ಗೆ ಸ್ನಾನಮಾಡಿ ಬೊಟ್ಟು ಇಟ್ಟುಕೊಳ್ಳುವುದರಿಂದ, ಆ ದಿನ ಆತನೊಳಗೆ ಶಕ್ತಿ ಸೇರುವಾಗ ಬಂಡಾರದ ಬೊಟ್ಟು ಈಶ್ವರ್ ಹಣೆಯ ಮೇಲೆ ಇರುವುದರಿಂದ, ಆತನಲ್ಲಿ ಪ್ರವೇಶಿಸುವ ಶಕ್ತಿ ಬಾಬಾ ವಶವಾಗಿ ಹೋಗುತ್ತದೆ. ಅದು ಬಾಬಾವೊಂದರ ಅಸಲಾದ ಯೋಜನೆ. ಬಾಬಾ ಯೋಜನೆಯ ಪ್ರಕಾರ ಈಶ್ವರ್ ಪ್ರತಿ ದಿನವೂ ಬೊಟ್ಟು ಇಟ್ಟುಕೊಳ್ಳಬೇಕೆಂದು ಕೊಂಡಿದ್ದಾನೆ. ಆ ದಿನ ಅಮಾವಾಸ್ಯೆ ಆದ್ದರಿಂದ ಬೆಳಗ್ಗೆ ಸ್ನಾನಮಾಡಿ ದೊಡ್ಡಮ್ಮ ಕೊಟ್ಟಿರುವ ಬಂಡಾರವನ್ನು ಸ್ವತಃವಾಗಿ ಜಮೀಂದಾರನೇ ಈಶ್ವರ್ ಹಣೆಯಮೇಲೆ ಬೊಟ್ಟು ಇಟ್ಟಿದ್ದಾನೆ.

ರಾಜಯೋಗಾನಂದ ಸ್ವಾಮಿ ರಾಘವನೊಂದಿಗೆ ಮೊದಲೇ ನಾಲ್ಕನೇ, ಐದನೇ ಅಮಾವಾಸ್ಯೆಗಳಿಗೆ ಸ್ವತಃವಾಗಿ ಚನ್ನಪಟ್ಟಣಕ್ಕೆ ಬಂದು ಏನು ನಡೆಯುತ್ತದೋ ನೋಡಬೇಕೆಂದುಕೊಂಡಿದ್ದಾನೆ. ಅಮಾವಾಸ್ಯೆಗೆ ಮೂರು ದಿನಗಳು ಮೊದಲೇ ಬಂದು ಹೊಸ ಸೆಂಟು ಬಾಟಲ್‌ಗಳನ್ನು ಮಾರುವವರಾಗಿ ರಾಘವ ಮಾರುವೇಷದಲ್ಲಿ ಮನೆಮನೆ ತಿರುಗಿ ಮನೆಯಲ್ಲಿನವರೊಂದಿಗೆ ಭೇಟಿಮಾಡಿ ಇವು ವಿದೇಶದಿಂದ ತಂದಿರುವ ಸೆಂಟ್‌ಗಳೆಂದು ಹೇಳಿ, ಕಡಿಮೆ ರೇಟಿಗೆ ಕೊಡುತ್ತಿದ್ದನು. ಹಾಗೆ ಎರಡು ದಿನಗಳು ಚನ್ನಪಟ್ಟಣದಲ್ಲಿ ಅಲೆಯುತ್ತಾ ಜಮೀಂದಾರ್ ಮನೆಯನ್ನು ತಿಳಿದುಕೊಂಡು ಅಮಾವಾಸ್ಯೆ ದಿನದಂದು ಬೆಳಗ್ಗೆ ಒಂಬತ್ತು ಗಂಟೆಗಳಿಗೆ ಜಮೀಂದಾರ್ ಮನೆಗೆ ರಾಘವ ಬಂದಿದ್ದಾನೆ. ಆ ಮನೆಯಲ್ಲಿರುವವರೆಲ್ಲರಿಗೂ ತನ್ನ ಹತ್ತಿರವಿರುವ ಸೆಂಟ್ ಬಾಟಲ್ಸ್‌ನ್ನು ಕೆಳಗೆ ಇಟ್ಟು ತೋರಿಸುತ್ತಿದ್ದನು. ಅಷ್ಟರಲ್ಲಿ ಈಶ್ವರ್ ತನ್ನ ರೂಮಿನಿಂದ ಹೊರಗೆ ಬಂದು ತನಗಾಗಿ ಒಂದು ಸೆಂಟ್ ಬಾಟಲ್‌ನನ್ನು ತೆಗೆದುಕೊಂಡು ಹೋಗಿದ್ದಾನೆ. ಆಗ ರಾಘವ ಆತನ ಮುಖದ ಮೇಲೆ ಬಂಡಾರದ ಬೊಟ್ಟನ್ನು ಗ್ರಹಿಸಿದನು. ಅಲ್ಲಿಂದ ಬೇಗ ರಾಘವಹೋಗಿ ಆ ವಿಷಯವನ್ನು ರಾಜಯೋಗಾನಂದ

ಸ್ವಾಮಿಗೆ ತಿಳಿಸಿದ್ದಾನೆ. ರಾಜಯೋಗಾನಂದ ಸ್ವಾಮಿ ಸ್ವಲ್ಪ ಸಮಯ ಆಲೋಚಿಸಿ, ಇರುವ ಸ್ವಲ್ಪ ಸಮಯದಲ್ಲಿ ತಾವು ಏನೂ ಮಾಡಲಾರೆವೆಂದು ಅಂದುಕೊಂಡಿದ್ದಾನೆ. ಆ ಸಮಯಕ್ಕೆ ಹತ್ತು ಗಂಟೆಗಳಿಗೆ ಹತ್ತು ನಿಮಿಷಗಳು ಮಾತ್ರವೇ ಬಾಕಿ ಉಳಿದಿವೆ. ಈಶ್ವರ್‌ಗೆ ಸ್ವಲ್ಪ ತಲೆನೋವು ಸಹ ಇರುವುದರಿಂದ ತನ್ನ ರೂಮಿನಲ್ಲೇ ಇದ್ದಾನೆ. ಆ ದಿನ ಅಮಾವಾಸ್ಯೆ ಎಂದು ತಿಳಿದಿರುವುದರಿಂದ ಜಮೀಂದಾರ್ ಸಹ ಮನೆಯಲ್ಲೇ ಇದ್ದಾನೆ. ಆಗ ಇದ್ದಕ್ಕಿದ್ದಂತೆ ಕರೆಂಟ್ ಹೋಯಿತು. ಈಶ್ವರ್ ರೂಮಿನಲ್ಲಿ ಫ್ಯಾನ್ ನಿಂತುಹೋಯಿತು. ಫ್ಯಾನ್ ನಿಂತುಹೋಗುವುದರಿಂದ ಗಾಳಿ ಇಲ್ಲದಂತೆ ಹೋಯಿತು. ಅದರಿಂದ ಈಶ್ವರ್‌ಗೆ ಬೆವರು ಬರಲು ಪ್ರಾರಂಭವಾಯಿತು. ಮುಖದ ಮೇಲೆ ಬೆವರು ಬಂದಿರುವುದರಿಂದ ಪಕ್ಕದಲ್ಲೇ ಇರುವ ಕೈ ರುಮಾಲನ್ನು ತೆಗೆದುಕೊಂಡು ಮುಖವನ್ನು ಹೊರಸಿಕೊಂಡಿದ್ದಾನೆ. ಆಗ ಮುಖಕ್ಕೆ ಇರುವ ಬಂಡಾರದ ಬೊಟ್ಟು ಇಲ್ಲದಂತೆ ಹೋಯಿತು. ಆ ಸಮಯಕ್ಕೆ ಹತ್ತು ಗಂಟೆಗಳಿಗೆ ಎರಡು ನಿಮಿಷಗಳೇ ಉಳಿದಿದೆ. ಸರಿಯಾಗಿ ಹತ್ತು ಗಂಟೆಗಳಿಗೆ ಈಶ್ವರ್‌ಗೆ ಏನೂ ತಿಳಿಯದಂತೆ ಹೋಯಿತು. ಆಗ ಈಶ್ವರ್ ಶರೀರದೊಳಗೆ ಶಕ್ತಿ ಪ್ರವೇಶಿಸಲು ಪ್ರಾರಂಭವಾಯಿತು. ಆ ದಿನ ತನ್ನ ಯೋಜನೆಯ ಪ್ರಕಾರ ನಡೆಯುತ್ತದೆಂದುಕೊಂಡ ಬಾಬಾಗೆ ನಿರಾಶೆಯೇ ಉಳಿಯಿತು. ನಾಲ್ಕನೆ ಅಮಾವಾಸ್ಯೆ ದಿನದಂದು ಸಹ ತನಗೆ ಶಕ್ತಿ ದಕ್ಕಲಿಲ್ಲ. ಈಶ್ವರ್ ರೂಮಿನಲ್ಲಿ ಏನು ನಡೆಯುತ್ತಿರುವುದು ತಿಳಿಯುವಂತೆ ತನ್ನ ಮಂದಿರದಲ್ಲಿ ಏರ್ಪಾಟು ಮಾಡಿ ಇಟ್ಟುಕೊಂಡಿದ್ದಾನೆ. ಆದ್ದರಿಂದ ಶಕ್ತಿ ಪ್ರವೇಶಿಸುವುದಕ್ಕೆ ಎರಡು ನಿಮಿಷಗಳ ಮೊದಲು ತನ್ನ ಉಪಾಯ ವೃಥಾ ಆದಂತೆ ತಿಳಿದುಕೊಂಡಿದ್ದಾನೆ. ನಿಜಕ್ಕೆ ಆ ದಿನ ಜಮೀಂದಾರ್ ಮನೆಯಲ್ಲಿ ಕರೆಂಟ್ ಹೋಗಲಿಲ್ಲ. ಆದರೂ ಈಶ್ವರ್ ರೂಮಿನಲ್ಲಿ ಮಾತ್ರ ಹೋಗಿದೆ. ಅದು ಏಕೆ ನಡೆದಿದೆಯೋ ಹೇಗೆ ನಡೆದಿದೆಯೋ ತಪಸ್ವಿಬಾಬಾಗೆ ಅರ್ಥವಾಗಲಿಲ್ಲ.

ಈಶ್ವರ್‌ಗೆ ಹದಿನಾರನೆ ಸಂವತ್ಸರ ಶುರುವಾದಾಗಿನಿಂದ ಆರು ಅಮಾವಾಸ್ಯೆಗಳಲ್ಲಿ, ಒಂದೊಂದು ಅಮಾವಾಸ್ಯೆಗು ಒಂದೊಂದು ಶಕ್ತಿ ಆತನಲ್ಲಿ ಸೇರುತ್ತದೆಂದು ತಿಳಿದುಕೊಂಡಿದ್ದೇವೆ. ಇಂದಿಗೆ ನಾಲ್ಕು ಅಮಾವಾಸ್ಯೆಗಳು ಕಳೆದುಹೋದಾಗ, ಮೊದಲ ಅಮಾವಾಸ್ಯೆಯನ್ನು ಬಿಟ್ಟು ಎರಡು, ಮೂರು,

ನಾಲ್ಕನೆ ಅಮಾವಾಸ್ಯೆ ದಿನಗಳಲ್ಲಿ ತಪಸ್ವಿಬಾಬಾ ಪ್ರಯತ್ನಿಸಿದರೂ ಆ ಶಕ್ತಿಗಳು ಸಹ ವಶವಾಗಲಿಲ್ಲ. ಇನ್ನು ಐದು, ಆರು ತಿಂಗಳ ಶಕ್ತಿಗಳನ್ನು ಮಾತ್ರ ಬಿಡದಂತೆ ಬಾಬಾ ತನ್ನ ವಶ ಮಾಡಿಕೊಳ್ಳಬೇಕೆಂದುಕೊಂಡಿದ್ದಾನೆ. ರಾಜಯೋಗಾನಂದ ಸ್ವಾಮಿ ನಾಲ್ಕು, ಐದು, ಆರು ಈ ಮೂರು ತಿಂಗಳವು ಕೀಲಕವಾದ ಶಕ್ತಿಗಳೆಂದು ಅವುಗಳನ್ನು ಹೇಗಾದರೂ ತಪಸ್ವಿಬಾಬಾ ವಶವಾಗದಂತೆ ನೋಡಬೇಕೆಂದು ಕೊಂಡಿದ್ದಾನೆ. ಆದರೂ ನಾಲ್ಕನೆ ಅಮಾವಾಸ್ಯೆ ದಿನದಂದು ಒಂಬತ್ತು ಗಂಟೆಗಳ ನಂತರ ಸಹ ಈಶ್ವರ್ ಮುಖದಲ್ಲಿ ಬೊಟ್ಟು ಇದೆಯೆಂದು ರಾಘವನಿಂದ ತಿಳಿದುಕೊಂಡ ಸ್ವಾಮಿ ಆಗ ತಾವು ಏನೂ ಮಾಡಲಾರೆವೆಂದು ಅಂದುಕೊಂಡಿದ್ದಾರೆ. ನಾಲ್ಕನೆ ಅಮಾವಾಸ್ಯೆ ದಿನದಂದು ಈಶ್ವರ್ ಹಣೆಯ ಮೇಲಿರುವುದು ಬಾಬಾರವರ ಬೊಟ್ಟಾದರೇ, ಆ ದಿನ ಈಶ್ವರ್‌ನೊಳಗೆ ಬಂದಿರುವ ಶಕ್ತಿ ಬಾಬಾರವರಿಗೆ ವಶವಾಗಿ ಹೋಗಿರುತ್ತದೆಂದುಕೊಂಡಿದ್ದಾನೆ. ಅದು ಬಾಬಾರವರ ಬೊಟ್ಟಾ ಅಲ್ಲವಾ ಎಂದು ತಿಳಿದುಕೊಳ್ಳುವುದಕ್ಕೆ ಎರಡು ದಿನಗಳ ನಂತರ ಜಮೀಂದಾರ್ ರಾವುಬಹುದೂರ್‌ನ್ನು ತನ್ನ ಆಶ್ರಮಕ್ಕೆ ಬರಲು ಹೇಳಿ ಕಳುಹಿಸಿದ್ದಾನೆ. ರಾಜಯೋಗಾನಂದ ಸ್ವಾಮಿ ಹತ್ತಿರದಿಂದ ಕರೆ ಬರುವುದರಿಂದ ರಾವುಬಹುದೂರ್ ಕೂಡಲೇ ಹೊರಟು ಹೋಗಿದ್ದಾನೆ. ಪ್ರಬೋಧಾಶ್ರಮಕ್ಕೆ ಹೋದ ನಂತರ ಸ್ವಾಮಿಯವರ ದರ್ಶನಕ್ಕೆ ಸ್ವಲ್ಪ ಸಮಯ ಕಾದುಕೊಂಡು, ಸ್ವಾಮಿ ಬಂದ ಕೂಡಲೇ ಜಮೀಂದಾರ್ ರಾವುಬಹುದೂರ್ ನಮಸ್ಕರಿಸಿದನು. ಆಗ ರಾಜಯೋಗಾನಂದ ಸ್ವಾಮಿ ಜಮೀಂದಾರನೊಂದಿಗೆ ಹೀಗೆ ಹೇಳಿದ್ದಾನೆ.)

**ರಾಜಯೋಗಾನಂದ :–** ರಾವುಬಹುದೂರ್‌ರವರೆ! ಈಗ ನಾನು ಕೇಳಿದ ಪ್ರಶ್ನೆಗಳಿಗೆ ನೇರವಾಗಿ ಉತ್ತರವನ್ನು ಹೇಳಬೇಕು.

**ಜಮೀಂದಾರ್ :–** ತಪ್ಪದೆ ಹೇಳುತ್ತೇನೆ ಸ್ವಾಮಿ.

**ರಾಜಯೋಗಾನಂದ :–** ಕಳೆದುಹೋದ ಅಮಾವಾಸ್ಯೆ ದಿನದಂದು ಈಶ್ವರ್ ಮುಖದ ಮೇಲೆ ಬಂಡಾರದ ಬೊಟ್ಟು ಇದೆ. ಆ ಬೊಟ್ಟನ್ನು ಯಾರು ಇಟ್ಟಿದ್ದಾರೆ?

**ಜಮೀಂದಾರ್ :–** ಆ ಬೊಟ್ಟನ್ನು ನಾನೇ ಇಟ್ಟಿದ್ದೇನೆ. ಆ ದಿನವೇ ಅಲ್ಲ ಪ್ರತಿ

ದಿನವೂ ಇಡುತ್ತಿದ್ದೇನೆ. ಅದು ದೊಡ್ಡಮ್ಮ ಬಂಡಾರ, ಆದ್ದರಿಂದ ಈಶ್ವರ್‌ಗೆ ಇಡುವುದೇ ಅಲ್ಲದೆ, ನಾನೂ ಸಹ ಇಟ್ಟುಕೊಳ್ಳುತ್ತಿದ್ದೇನೆ.

**ರಾಜಯೋಗಾನಂದ :–** ಆ ಬಂಡಾರವನ್ನು ನಿನಗೆ ಯಾರು ಕೊಟ್ಟಿದ್ದಾರೆ?

**ಜಮೀಂದಾರ್ :–** ದೊಡ್ಡಮ್ಮನ ಪುಟ್ಟಿಯನ್ನು ಹೊತ್ತುಕೊಂಡು ಬಂದು ಚಾಟಿ ಹಿಡಿದುಕೊಂಡು ಬೇಡಿಕೊಳ್ಳುವ ದೊಡ್ಡಮ್ಮನ ಪೂಜಾರಿಗಳು ಕೊಟ್ಟಿದ್ದಾರೆ.

**ರಾಜಯೋಗಾನಂದ :–** ಅವರು ಏನೆಂದು ಹೇಳಿ ಕೊಟ್ಟಿದ್ದಾರೆ. ಏಕೆ ಕೊಟ್ಟಿದ್ದಾರೆ? ಇರುವುದು ಇದ್ದಂತೆ ಹೇಳು.

**ಜಮೀಂದಾರ್ :–** ಅಮಾವಾಸ್ಯೆ ದಿನ ಬೆಳಗ್ಗೆ ಆರು ಅಥವಾ ಆರುವರೆ ಗಂಟೆಗಳಿಗೆ ಮನೆ ಹತ್ತಿರಕ್ಕೆ ದೊಡ್ಡಮ್ಮನನ್ನು ಹೊತ್ತುಕೊಂಡು ಪೂಜಾರಿಗಳು ಬಂದಿದ್ದಾರೆ. ಒಟ್ಟು ನಾಲ್ವರು ಬಂದಿದ್ದಾರೆ. ಒಬ್ಬರು ದೇವತೆಯನ್ನು ತಲೆಮೇಲೆ ಹೊತ್ತುಕೊಂಡಿರುವಾಗ, ಒಬ್ಬರು ಡೋಲನ್ನು ಹೊಡೆಯುತ್ತಿರುವಾಗ, ಒಬ್ಬರು ಚಾಟಿಯನ್ನು ತೆಗೆದುಕೊಂಡು ನೆಲಕ್ಕೆ ಬಡಿಯುತ್ತಿದ್ದನು. ಒಬ್ಬ ಹೆಣ್ಣುಮಗಳು ಅಮ್ಮನವರ ಬಂಡಾರವನ್ನು ಕೆಲವರು ಹೆಂಗಸರಿಗೆ ಬೊಟ್ಟು ಇಡುತ್ತಿದ್ದಳು. ಬಂಡಾರವನ್ನು ಹಚ್ಚಿಕೊಂಡು, ಚಾಟಿಯನ್ನು ಕೈಯ್ಯಲ್ಲಿಟ್ಟುಕೊಂಡು, ಕಾಲಿಗೆ ಗೆಜ್ಜೆ ಕಟ್ಟಿಕೊಂಡ ವ್ಯಕ್ತಿಗೆ ಅಮ್ಮನವರು ಮೈಮೇಲೆ ಆವರಿಸಿ ಬಂದು ಮಾತನಾಡುತ್ತಾ, ನಾನು ನಿನ್ನ ಮನೆ ಮುಂದಕ್ಕೆ ಬಂದರೂ ನೀನು ಹೊರಗೆ ಬರಲಿಲ್ಲ ಬಾಲಕಾ, ನಿನಗೆ ನಾನು ಕಾಣಿಸಲಿಲ್ಲವಾ ಎಂದು ಅನ್ನುವುದನ್ನು ನಾನು ಕೇಳಿಸಿಕೊಂಡ ಕೂಡಲೇ ಹೊರಗೆ ಬಂದು ನಿಂತಿದ್ದೇನೆ. ಆಗ ಆವರಿಸಿದ ದೊಡ್ಡಮ್ಮ "ನಿನ್ನ ಮನೆಯಲ್ಲಿ ನಡೆಯಬಾರದು ನಡೆಯುತ್ತಿದೆಯೆಂದು ಬಹಳ, ರಾತ್ರಿ ಹೊತ್ತು ನಿನ್ನ ಮನೆಗೆ ಭೂತಗಳು, ಪಿಶಾಚಿಗಳು ಬಂದು ಹೋಗುತ್ತಿವೆ. ಈ ಮಧ್ಯದಲ್ಲಿ ಎರಡು ಪ್ರಾಣಗಳು ಹೋಗಿವೆ. ನೀನು ನನ್ನನ್ನು ನಂಬಿ ಪೂಜೆ ಮಾಡದೇ ಹೋದರೆ ಇನ್ನು ಎರಡು ಪ್ರಾಣಗಳು ಹೋಗುತ್ತವೆ" ಎಂದು ಹೇಳಿರುವಾಗ ನಾನು "ನಿನ್ನ ಪೂಜೆ ಹೇಗೆ ಮಾಡಬೇಕು"? ಎಂದು ಕೇಳಿದ್ದೇನೆ. ಆಗ ದೊಡ್ಡಮ್ಮ "ನಿಮ್ಮ ಹಿರಿಯರು ನನ್ನನ್ನು ಪೂಜಿಸುತ್ತಿದ್ದರು ನೀನು ನನ್ನ ಪೂಜೆ ಬಿಟ್ಟಿದ್ದೀಯ. ಅದಕ್ಕೇ ನಿನಗೆ ಕಷ್ಟ ಕಾರ್ಪಣ್ಯಗಳು ಬಂದಿವೆ.

ಅವು ಹೋಗಬೇಕೆಂದರೆ ನನಗೆ ಚಿಕ್ಕ ಹೋತನ್ನು ಬಲಿಕೊಟ್ಟು ಪೂಜೆ ಮಾಡು. ಪ್ರತಿ ದಿನ ನಾನು ಕೊಡುವ ಬಂಡಾರವನ್ನು ಬೊಟ್ಟಿನಂತೆ ಇಟ್ಟುಕೋ, ಮನೆಯಲ್ಲಿನ ಗಂಡಸರೆಲ್ಲರೂ ಇಟ್ಟುಕೊಳ್ಳಬೇಕು. ನಿನ್ನ ಮಗನಿಗೂ ಸಹ ಇಡು. ಆತನಿಗಿರುವ ಗಂಡಾಂತರಗಳು ಹೋಗುತ್ತವೆ" ಎಂದು ಹೇಳಿತು. ಆದ್ದರಿಂದ ಅಮ್ಮನವರು ಕೊಟ್ಟಿರುವ ಬಂಡಾರವನ್ನು ನಾವು ಇಬ್ಬರೂ ಇಟ್ಟುಕೊಳ್ಳುತ್ತಿದ್ದೇವೆ.

**ರಾಜಯೋಗಾನಂದ :–** ಆ ಬಂಡಾರವನ್ನು ಎಲ್ಲರಿಗೂ ಕೊಡುವ ಬಂಡಾರದಲ್ಲಿಂದ ಕೊಟ್ಟಿದ್ದಾರಾ ಅಥವಾ ಪ್ರತ್ಯೇಕವಾಗಿ ಕೊಟ್ಟಿದ್ದಾರಾ?

**ಜಮೀಂದಾರ್ :–** ಪ್ರತ್ಯೇಕವಾಗಿ ದೊಡ್ಡಮ್ಮ ಪುಟ್ಟಿಯಲ್ಲಿರುವುದನ್ನು ಕೊಟ್ಟಿದ್ದಾರೆ.

**ರಾಜಯೋಗಾನಂದ :–** ಇಲ್ಲಿಗೆ ನೀನು ಎರಡು ಸಲ ತಪ್ಪು ಮಾಡಿದ್ದೀಯ. ಈಶ್ವರ್ ವಿಷಯದಲ್ಲಿ ಏನು ಮಾಡಿದರೂ ನನಗೆ ಹೇಳಿ ಮಾಡೆಂದಿದ್ದೇನೆ. ನೀನು ಏನೂ ಮಾಡಬೇಡವೆಂದು ಸಹ ಹೇಳಿದ್ದೇನೆ. ನಾನು ಹೇಳಿದ ನಂತರವೂ ಸಹ ದೊಡ್ಡಮ್ಮ ಬಂಡಾರವನ್ನು ಬೊಟ್ಟಾಗಿ ಏಕೆ ಇಟ್ಟಿದ್ದೀಯ?

**ಜಮೀಂದಾರ್ :–** ದೇವತೆ ಕೊಟ್ಟಿರುವುದಲ್ಲವೆ! ಎಂದು ನಂತರ ಮನೆಯಲ್ಲಿ ಎರಡು ಪ್ರಾಣಗಳು ಹೋಗಿವೆ, ಇನ್ನೂ ಎರಡು ಪ್ರಾಣಗಳು ಹೋಗುತ್ತವೆ ಎಂದು ಹೇಳುವುದರಿಂದ ದೇವತೆ ನಾವು ಹೇಳದ ಮುನ್ನವೇ ಆ ವಿಷಯವನ್ನು ಹೇಳುವುದರಿಂದ, ಆ ದೇವತೆ ಕೆಟ್ಟದಾಗಿ ಏನೂ ಹೇಳಲಿಲ್ಲ ಅಲ್ಲವೆ! ಒಂದು ಸಲ ಹೋತನ್ನು ಬಲಿ ಕೊಟ್ಟು ತನ್ನ ಬಂಡಾರವನ್ನು ಪ್ರತಿ ದಿನವೂ ಹಚ್ಚಿಕೊಳ್ಳಿ ಎಂದು ಹೇಳಿದೆಅಲ್ಲವೆ ಎಂದು ಇಟ್ಟುಕೊಂಡಿದ್ದೇವೆ. ಇದರಲ್ಲಿ ನನಗೆ ಏನೂ ಕೆಟ್ಟದಾಗಿ ಕಾಣಿಸಲಿಲ್ಲ. ಆದ್ದರಿಂದ ಹಾಗೆ ಮಾಡಿದ್ದೇನೆ.

**ರಾಜಯೋಗಾನಂದ :–** ನಿನ್ನ ಮನೆಯಲ್ಲಿ ನಡೆಯುವುದೇನೋ ನನಗೆ ಗೊತ್ತು, ನಿನಗೆ ಗೊತ್ತು, ಆ ತಪಸ್ವಿ ಬಾಬಾಗೂ ಗೊತ್ತು. ನಮ್ಮ ಮುವ್ವರಿಗೂ ಬಿಟ್ಟು ಮಧ್ಯದಲ್ಲಿ ಯಾರಿಗೂ ತಿಳಿದಿಲ್ಲ. ಈಗ ಬಂದು ಹೇಳುವುದಕ್ಕೆ ದೊಡ್ಡಮ್ಮನಿಗೆ ತಿಳಿಯುವ ಸಾಮಾನ್ಯ ವಿಷಯವಲ್ಲ ಅದು. ಅಲ್ಲಿಗೆ ಬಂದವರು ಬಾಬಾ ಮನುಷ್ಯರು

ಅಲ್ಲವೆಂದು ನಿನಗೆ ತಿಳಿದಿದೆಯಾ? ತಪಸ್ವಿಬಾಬಾ ಎಷ್ಟೋ ಬುದ್ಧಿವಂತನು. ಎರಡು ಸಲ ಮಾಂತ್ರಿಕರಿಂದ ಅಮಾವಾಸ್ಯೆ ದಿನದಂದು ತನ್ನ ವಿಭೂತಿಯನ್ನು ಬೊಟ್ಟಾಗಿ ಈಶ್ವರ್‌ಗೆ ಇಡಬೇಕೆಂದು ನೋಡಿದ್ದಾನೆ. ಎರಡು ಸಲ ವಿಫಲವಾಯಿತು. ಈಗ ಬುದ್ಧಿವಂತಿಕೆಯಿಂದ ಬಂಡಾರವನ್ನು ಕಳುಹಿಸಿ ನಿನ್ನಿಂದಲೇ ಅಮಾವಾಸ್ಯೆ ದಿನದಂದು ಈಶ್ವರ್‌ಗೆ ಇಡಿಸಿದ್ದಾನೆ. ಅಮಾವಾಸ್ಯೆ ದಿನದಂದು ಒಂಬತ್ತು ಗಂಟೆಗಳ ಸಮಯದಲ್ಲಿ ಈಶ್ವರ್ ಹಣೆಯಲ್ಲಿರುವ ಬೊಟ್ಟನ್ನು ನೋಡಿದವರು ನನ್ನೊಂದಿಗೆ ಹೇಳಿದಾಗ, ಅದು ನಿಜವಾ ಅಸತ್ಯವಾ ಎಂದು ತಿಳಿದುಕೊಳ್ಳುವುದಕ್ಕೆ ನಿನ್ನನ್ನು ಕರೆದು ಕೇಳಿದ್ದೇವೆ. ಈಗ ನೀನು ಸ್ವತಃ ಮಾಡಿದ ತಪ್ಪಿನಿಂದ ಒಂದು ಭಯಂಕರವಾದ ಶಕ್ತಿ ಬಾಬಾವಶವಾಗಿ ಹೋಗಿದೆ. ನೀನು ಬಹಳ ಬುದ್ಧಿ ಕಡಿಮೆ ಕೆಲಸ ಮಾಡಿದ್ದೀಯ.

**ಜಮೀಂದಾರ್ :–** ಇಷ್ಟು ದೊಡ್ಡ ಮೋಸಗಳಿರುತ್ತವೆಂದು ನಾನು ಕನಸಿನಲ್ಲೂ ಸಹ ಅಂದುಕೊಂಡಿಲ್ಲ. ಭಕ್ತಿಯಿಂದ ದೇವತೆ ಕೊಡುತ್ತಿದೆಯೆಂದುಕೊಂಡು ತಪ್ಪಾಗಿ ತಿಳಿದಿದ್ದೇನೆ ಕ್ಷಮಿಸಿ. ಇಂದಿನಿಂದ ನೀವು ಹೇಗೆ ಹೇಳಿದರೇ ಹಾಗೇ ಮಾಡುತ್ತೇನೆ.

**ರಾಜಯೋಗಾನಂದ :–** ಇಲ್ಲಿಗೆ ಎರಡು ಸಲ ಈ ಮಾತನ್ನು ಹೇಳಿದ್ದೀಯ. ಕೊನೆಗೆ ನಾವು ಹೇಳಿದಂತೆ ಕೇಳದೇ ನಿನ್ನ ಇಷ್ಟಬಂದಂತೆ ಮಾಡಿದ್ದೀಯ. ಇನ್ನು ಎರಡು ಅಮಾವಾಸ್ಯೆಗಳು ಈಶ್ವರ್ ಜೀವನದಲ್ಲಿ ಕಠಿನವಾದವು. ಇಂದಿಗಾದರೂ ನಾವು ಹೇಳಿದಂತೆ ಕೇಳು. ಈಶ್ವರ್‌ಗೆ ಸಂಬಂಧಿಸಿದ ಯಾವ ಚಿಕ್ಕ ವಿಷಯವನ್ನಾದರೂ ನನ್ನೊಂದಿಗೆ ಹೇಳದೇ ಮಾಡಬೇಡ. ಅಷ್ಟೇ ಅಲ್ಲದೆ ಈಗ ನಿನ್ನ ಹತ್ತಿರವಿರುವ ಬಂಡಾರವನ್ನು ಬೊಟ್ಟಾಗಿ ಇಡುತ್ತಾ ಇರು. ಅದನ್ನು ತಪಸ್ವಿಬಾಬಾರವರು ಗಮನಿಸಿ ತಾವು ಹೇಳಿದಂತೆ ಮಾಡುತ್ತಿದ್ದೀಯೆಂದು ನಂಬಿರುತ್ತಾರೆ. ಹಾಗೆ ಪ್ರತಿ ದಿನ ಮಾಡಿದರೂ ಅದರಿಂದ ಯಾವ ತೊಂದರೆ ಇರುವುದಿಲ್ಲ. ಆದರೆ ಒಂದು ಅಮಾವಾಸ್ಯೆ ದಿನ ಮಾತ್ರ ಈಶ್ವರ್‌ಗೆ ಬೊಟ್ಟನ್ನು ಇಡಬೇಡ. ಆ ದಿನವೂ ಸಹ ಬೊಟ್ಟು ಇಟ್ಟಿದ್ದೀಯೆಂದು ಬಾಬಾರವರು ಅಂದುಕೊಳ್ಳುತ್ತಾರೆ. ಇದಕ್ಕಿಂತ ನೀವು ಮಾಡಬೇಕಾದ ಕೆಲಸ ಏನೂ ಇಲ್ಲ. ಮುಂಬರುವ ಅಮಾವಾಸ್ಯೆ ದಿನದಂದು ನಾವೂ ಸಹ ಚನ್ನಪಟ್ಟಣದಲ್ಲೇ ಇರುತ್ತೇವೆ. ಅಗತ್ಯವಿದ್ದರೇ ನಿನಗೆ ಸಂಪರ್ಕದಲ್ಲೇ ಇರುತ್ತೇವೆ.

(ರಾಜಯೋಗಾನಂದ ಸ್ವಾಮಿ ಹೇಳಿರುವುದೆಲ್ಲಾ ಕೇಳಿ, ಈ ಸಲ ಯಾವ ತಪ್ಪು ಮಾಡದಂತೆ ಸ್ವಾಮಿ ಹೇಳಿದಂತೆ ನಡೆದುಕೊಳ್ಳಬೇಕೆಂದುಕೊಂಡು, ಅಲ್ಲಿಂದ ಜಮೀಂದಾರ್ ಹೊರಟು ಬಂದಿದ್ದಾನೆ. ಮನೆಗೆ ಬಂದ ನಂತರ ಪ್ರತಿ ದಿನ ಸ್ವಾಮಿ ಹೇಳಿದಂತೆ ಈಶ್ವರ್‌ಗೆ ಬಂಡಾರದ ಬೊಟ್ಟನ್ನು ಇಡುತ್ತಾ, ತಾನು ಸಹ ಇಟ್ಟಿಕೊಳ್ಳುತ್ತಿದ್ದನು. ನಂತರ ಬರುವ ಅಮಾವಾಸ್ಯೆವರೆಗು ಆಗಾಗ ಮುನೆಪ್ಪ ಮನುಷ್ಯರು ಈಶ್ವರ್ ಬಂಡಾರದ ಬೊಟ್ಟು ಇಟ್ಟುಕೊಳ್ಳುತ್ತಿದ್ದಾನಾ ಇಲ್ಲವಾ ಎಂದು ಗಮನಿಸಿ ನೋಡಿದ್ದಾರೆ. ಅವರಿಗೆ ಪ್ರತಿ ದಿನವೂ ಈಶ್ವರ್ ಹಣೆಯಮೇಲೆ ಬಂಡಾರದ ಬೊಟ್ಟು  ಕಾಣಿಸುವುದರಿಂದ ತಪಸ್ವಿಬಾಬಾ ಬರುವ ಅಮಾವಾಸ್ಯೆ ದಿನವು ಸಹ ಈಶ್ವರ್ ಬೊಟ್ಟು ಇಟ್ಟುಕೊಳ್ಳುತ್ತಾನೆನ್ನುವ ನಂಬಿಕೆಯಿಂದ ಇದ್ದನು. ಆದರೆ ತಮ್ಮ ಬೊಟ್ಟು ವಿಷಯವನ್ನು ರಾಜಯೋಗಾನಂದ ಸ್ವಾಮಿ ಗ್ರಹಿಸಿದ್ದಾನೆಂದು, ತಮ್ಮನ್ನು ಮೋಸ ಮಾಡುವುದಕ್ಕೆ ಪ್ರತಿ ದಿನ ಬೊಟ್ಟನ್ನು ಇಟ್ಟುಕೊಳ್ಳುತ್ತಿದ್ದಾರೆಂದು, ತಮ್ಮ ಸೇರಿಗೆ ಸ್ವಾಮಿ ಸವಾಸೇರಾಗಿದ್ದಾನೆಂದು ಬಾಬಾಗೆ ತಿಳಿದಿಲ್ಲ. ಅಷ್ಟರಲ್ಲೇ ಐದನೆ ಅಮಾವಾಸ್ಯೆ ಬಂದಿತು. ಆ ದಿನ ತಮ್ಮ ಯೋಜನೆ ಸುಲಭವಾಗಿ ನೆರವೇರುತ್ತದೆಂದು ಬಾಬಾ ಅಂದುಕೊಂಡಿದ್ದಾನೆ. ಅದೇ ಉದ್ದೇಶದಿಂದಲೇ ಮುನೆಪ್ಪ ಸಹ ಇದ್ದಾನೆ. ಆ ದಿನ ಅಮಾವಾಸ್ಯೆ ಆಗಿರುವುದರಿಂದ ರಾಜಯೋಗಾನಂದಸ್ವಾಮಿ ಹೇಳಿದಂತೆ ಜಮೀಂದಾರ್ ರಾವುಬಹುದೂರ್ ತನ್ನ ಮಗ ಈಶ್ವರ್‌ಗೆ ಬೊಟ್ಟು ಇಡಲಿಲ್ಲ. ಎಲ್ಲ ಅಮಾವಾಸ್ಯೆ ದಿನಗಳಲ್ಲಿ ನಡೆದಂತೆ ಈಶ್ವರ್‌ಗೆ ಮತ್ತಿನಿಂದ ಮಂಕಾಗಿ ಇರುವುದರಿಂದ ಈಶ್ವರ್ ಹೊರಗೆ ಹೋಗದಂತೆ ತನ್ನ ರೂಮಿನಲ್ಲೇ ಇದ್ದಾನೆ. ತಪಸ್ವಿಬಾಬಾ ತನ್ನ ಮಂದಿರದಿಂದಲೇ ಚನ್ನ ಪಟ್ಟಣದಲ್ಲಿನ ಈಶ್ವರ್‌ನನ್ನು ಗಮನಿಸುತ್ತಿದ್ದಾನೆ. ಪ್ರತಿ ದಿನ ತಪ್ಪದಂತೆ ಬೊಟ್ಟು ಇಟ್ಟುಕೊಳ್ಳುವ ಈಶ್ವರ್, ಆ ದಿನ ತನ್ನ ಬಂಡಾರವನ್ನು ಬೊಟ್ಟಾಗಿ ಇಟ್ಟುಕೊಳ್ಳಲಿಲ್ಲವೆಂದು ಬಾಬಾ ತನ್ನ ಮಂದಿರದಿಂದಲೇ ಗ್ರಹಿಸಿದ್ದಾನೆ. ಆಗಿಂದಾಗ್ಗೆ ಏನು ಮಾಡುವುದಕ್ಕೂ ಅವಕಾಶ ವಿಲ್ಲವಾದ್ದರಿಂದ ಈ ತಿಂಗಳು ಸಹ ತನ್ನ ಪ್ರಯತ್ನ ವ್ಯರ್ಥವಾದಂತೇ ಎಂದುಕೊಂಡಿದ್ದಾನೆ. ಆ ದಿನ ನೋಡುತ್ತಿದ್ದಂತೇ ಕಾಲ ಕಳೆದುಹೋಯಿತು. ಅಮಾವಾಸ್ಯೆ ದಿನದಂದು ರಾಘವ ಬೆಳಗ್ಗೆ ಎಂಟು ಗಂಟೆಗಳಿಗೇ ಜಮೀಂದಾರ್

ರಾವುಬಹುದೂರ್ ಮನೆಗೆ ಬಂದು ರಾವುಬಹುದೂರ್‌ನೊಂದಿಗೆ ಯಾವುದೋ ವ್ಯಾಪಾರ ವಿಷಯಗಳನ್ನು ಮಾತನಾಡುತ್ತಾ ಕಾಲವನ್ನು ಕಳೆದಿದ್ದಾನೆ. ಅ ದಿನ ಈಶ್ವರ್‌ನನ್ನು ತಪಸ್ವಿಬಾಬಾ ಏನೂ ಮಾಡಲಿಲ್ಲವೆಂದು ನಿಶ್ಚಯಿಸಿಕೊಂಡು ಪುನಃ ಸ್ವಾಮಿ ಹತ್ತಿರಕ್ಕೆ ಹೋಗಿ ಆ ವಿಷಯವನ್ನು ಸ್ವಾಮಿಗೆ ತಿಳಿಸಿದನು. ಐದನೆ ತಿಂಗಳಲ್ಲಿ ಬಾಬಾ ಯೋಜನೆ ವಿಫಲವಾಗಿದ್ದಕ್ಕೆ ರಾಜಯೋಗಾನಂದಸ್ವಾಮಿ ಸಂತೋಷಪಟ್ಟನು. ಇನ್ನು ಉಳಿದಿರುವುದು ಆರನೆ ಅಮಾವಾಸ್ಯೆ ಮಾತ್ರ! ಅದನ್ನು ಬಿಡಬಾರದೆಂದು ತಪಸ್ವಿಬಾಬಾ ಪ್ರಯತ್ನ ಮಾಡುತ್ತಾನೆಂದು, ಅದನ್ನು ಸಹ ನೆರವೇರದಂತೆ ಮಾಡಬೇಕೆಂದು, ರಾಜಯೋಗಾನಂದ ಸ್ವಾಮಿ ಅಂದುಕೊಂಡಿದ್ದಾನೆ.

ಮುಂಬರುವ ಅಮಾವಾಸ್ಯೆ ಒಂದೇ ತಮ್ಮ ಕೆಲಸಕ್ಕೆ ಕೊನೆಯ ಆಸೆಯಂತೆ ಉಳಿಯಿತು. ಎಷ್ಟು ಪ್ರಯತ್ನ ಮಾಡಿದರೂ ನಾಲ್ಕು ಅಮಾವಾಸ್ಯೆಗಳು ವಿಫಲವಾಗಿಹೋಗಿವೆ. ಇನ್ನು ಎಂತಹ ಪರಿಸ್ಥಿತಿಯಲ್ಲೂ ಆರನೆ ಅಮಾವಾಸ್ಯೆಯನ್ನು ಬಿಡಬಾರದೆಂದು ತಪಸ್ವಿಬಾಬಾ ಅಂದುಕೊಂಡಿದ್ದಾನೆ. ಆ ದಿನ ಸ್ವತಃವಾಗಿ ತಪಸ್ವಿಬಾಬಾನೇ ಮಾರುವೇಷದಲ್ಲಿ ಚನ್ನಪಟ್ಟಣ ಬರಬೇಕೆಂದುಕೊಂಡಿದ್ದಾನೆ. ಆ ವಿಷಯವನ್ನು ಮುನೆಪ್ಪನಿಗೂ ಸಹ ತಿಳಿಸಿ, ಆ ದಿನ ತಾವು ಮಾಡಬೇಕಾದ ಕಾರ್ಯಗಳನ್ನು ಕುರಿತು ಮೊದಲೇ ಮಾತನಾಡಿಕೊಂಡು, ಅದಕ್ಕೆ ಬೇಕಾದ ಏರ್ಪಾಟುಗಳೆಲ್ಲಾ ಮಾಡಿಕೊಳ್ಳುವುದಕ್ಕೆ ಪ್ರಾರಂಭಿಸಿದರು. ಅವರು ಆ ವಿಧವಾಗಿ ಅವರ ಕಾರ್ಯಾಚರಣೆಯಲ್ಲಿ ಮುಳುಗಿಹೋದಾಗ, ರಾಜಯೋಗಾನಂದ ಸ್ವಾಮಿ ಆಶ್ರಮದಲ್ಲಿ ರಾಘವ, ರಾಜಯೋಗಾನಂದ ಸ್ವಾಮಿ ಇಬ್ಬರೂ ಸೇರಿ ಆ ದಿನ ತಮ್ಮ ಕಾರ್ಯಗಳನ್ನು ಕುರಿತು ಮಾತನಾಡಿಕೊಂಡಿದ್ದಾರೆ. ಈ ಸಲ ಸ್ವತಃವಾಗಿ ರಾಜಯೋಗಾನಂದ ಸ್ವಾಮಿ ಕೂಡಾ ಚನ್ನಪಟ್ಟಣಕ್ಕೆ ಬರಬೇಕೆಂದುಕೊಂಡಿದ್ದಾನೆ. ತಮ್ಮ ಕೆಲಸಕ್ಕೆ ರಾಜಯೋಗಾನಂದಸ್ವಾಮಿ ಅಡ್ಡ ಬರುತ್ತಿದ್ದಾನೆಂದು ತಪಸ್ವಿಬಾಬಾಗೆ ತಿಳಿದಿಲ್ಲ. ಹಾಗೇ ಇಲ್ಲಿಯವರೆಗು ಒಂದು ಅಮಾವಾಸ್ಯೆಗು ಸಹ ಬಾಬಾ ಕೆಲಸ ನೆರವೇರಲಿಲ್ಲವೆಂದು ಸ್ವಾಮಿಗೂ ತಿಳಿಯದು. ನಾಲ್ಕನೆ ಅಮಾವಾಸ್ಯೆ ದಿನದಂದು ಈಶ್ವರ್‌ನಲ್ಲಿ ಸೇರಿದ ಶಕ್ತಿಯನ್ನು ಬಾಬಾ ತನ್ನ ವಶ ಮಾಡಿಕೊಂಡಿದ್ದಾನೆಂದು

ಅಂದುಕೊಂಡಿದ್ದಾನೆ. ಹಾಗೆ ನಡೆಯಲಿಲ್ಲವೆಂದು, ಬಾಬಾಗೆ ಎಂತಹ ಶಕ್ತಿ ಈಶ್ವರ್‌ನಿಂದ ವಶವಾಗಲಿಲ್ಲವೆಂದೂ ರಾಜಯೋಗಾನಂದ ಸ್ವಾಮಿಗೂ ತಿಳಿಯದು. ನಾಲ್ಕನೆ ಅಮಾವಾಸ್ಯೆ ದಿನದಂದು ಈಶ್ವರ್ ಹಣೆಯ ಮೇಲೆ ಬೊಟ್ಟು ಇದೆಯೆಂದು ಸ್ವಾಮಿ ಅಂದುಕೊಂಡಿದ್ದಾನೆ. ಆದರೆ ಆ ದಿನ ಈಶ್ವರ್ ರೂಮಿನಲ್ಲಿ ಕರೆಂಟ್ ಹೋದ ವಿಷಯವಾಗಲೀ, ಮುಖದಲ್ಲಿ ಬೆವರು ಬಂದಿರುವುದರಿಂದ ಹತ್ತು ಗಂಟೆಗೆ ಎರಡು ನಿಮಿಷಗಳ ಮುಂಚೆ ಈಶ್ವರ್ ಬೊಟ್ಟನ್ನು ಬಟ್ಟೆಯಿಂದ, ಬೆವರಿನೊಂದಿಗೆ ಬೊಟ್ಟನ್ನು ಸಹ ಹೊರಿಸಿದ್ದಾನೆಂದು ಸ್ವಾಮಿಗೆ ತಿಳಿದಿಲ್ಲ.

ಆರನೆ ಅಮಾವಾಸ್ಯೆ ಬಂದಿತು. ರಾಜಯೋಗಾನಂದ ಸ್ವಾಮಿ ರಾಘವ ಇಬ್ಬರೂ ಜಮೀಂದಾರ್ ರಾವುಬಹದೂರ್ ಮನೆಯಲ್ಲೇ ಇದ್ದಾರೆ. ಆ ದಿನ ಸಹ ಈಶ್ವರ್ ಹೊರಗೆ ಹೋಗದಂತೆ ಮನೆಯಲ್ಲೇ ತನ್ನ ರೂಮಿನಲ್ಲೇ ಇದ್ದಾನೆ. ಬೆಳಗ್ಗೆ ಎಂಟು ಗಂಟೆ ಮುವ್ವತ್ತು ನಿಮಿಷಗಳಿಗೆ ಎಲ್ಲರೂ ಟಿಫಿನ್ ಮಾಡಿ ಕುಳಿತು ಕೊಂಡಿದ್ದಾರೆ. ಈಶ್ವರ್ ಸಹ ಎರಡು ಇಡ್ಲಿಗಳನ್ನು ತಿಂದು ತನ್ನ ರೂಮಿನೊಳಗೆ ಹೋಗಿದ್ದಾನೆ. ಆ ದಿನ ಶುಕ್ರವಾರ. ಪ್ರತಿ ಶುಕ್ರವಾರ ಒಬ್ಬ ಮುಸ್ಲಿಮ್ ಬಂದು ಮನೆಯಲ್ಲಿ ಸಾಂಬ್ರಾಣಿ ಹೊಗೆಹಾಕಿ, ನವಿಲುಗರಿಗಳಿಂದ ತಲೆಮೇಲೆ ಇಟ್ಟು ಆಶೀರ್ವದಿಸಿ ಹೋಗುತ್ತಿರುವುದು ಕೆಲವು ವರ್ಷಗಳಿಂದ ನಡೆಯುತ್ತಿತ್ತು. ಆ ದಿನ ಸಹ ಕೆಲವು ವರ್ಷಗಳಿಂದ ಬರುವ ಮುಸ್ಲಿಮ್ ವೃದ್ಧನು ಒಂಬತ್ತು ಗಂಟೆ ನಲವತ್ತು ನಿಮಿಷಗಳಿಗೆ ಮನೆಯೊಳಗೆ ಬಂದು ಮನೆಯೆಲ್ಲಾ ಸಾಂಬ್ರಾಣಿ ಹೊಗೆಹಾಕಿ ನವಿಲುಗರಿಗಳಿಂದ ಆಶೀರ್ವದಿಸಿ ಹೋದನು. ಆ ಮುಸ್ಲಿಮ್ ವೃದ್ಧನು ಈಶ್ವರ್ ರೂಮನ್ನು ಬಿಟ್ಟು ಹಾಲ್‌ನಲ್ಲಿ ಹೊಗೆಹಾಕಿ ಹೋದಾಗ ಎಲ್ಲರೂ ಅದನ್ನು ಆಸ್ವಾದಿಸಿ ಹತ್ತು ನಿಮಿಷಗಳ ನಂತರ ಎಲ್ಲರೂ ನಿದ್ರೆಯೊಳಗೆ ಹೋಗಿದ್ದಾರೆ. ಆ ವಿಧವಾಗಿ ಮನೆಯಲ್ಲಿರುವವರೆಲ್ಲರೂ ನಿದ್ರೆಯೊಳಗೆ ಹೋದಾಗ, ಅಲ್ಲಿಯವರೆಗು ಸಮಯಕ್ಕಾಗಿ ಕಾದುಕೊಂಡಿದ್ದ ಮುನೆಪ್ಪ ಮತ್ತು ಬಾಬಾ ಇಬ್ಬರೂ ದೊಡ್ಡಮ್ಮ ಪೂಜಾರಿ ವೇಷದಲ್ಲಿ ಜಮೀಂದಾರ್ ಮನೆಯೊಳಗೆ ಪ್ರವೇಶಿಸಿದ್ದಾರೆ. ಆಗ ಒಂಬತ್ತು ಗಂಟೆ ಐವತ್ತೈದು ನಿಮಿಷಗಳಾಗಿದೆ. ಮುನೆಪ್ಪ ನೇರವಾಗಿ ಈಶ್ವರ್ ರೂಮಿನೊಳಗೆ ಪ್ರವೇಶಿಸಿ ಕಣ್ಣು ಮುಚ್ಚಿಕೊಂಡು ಕುಳಿತುಕೊಂಡಿರುವ ಈಶ್ವರ್‌ನನ್ನು ಗಮನಿಸಿದ್ದಾನೆ. ಸ್ವಲ್ಪ ಸಮಯ

ಈಶ್ವರ್ ರೂಮಿನಲ್ಲೇ ಇರುವ ತಪಸ್ವಿಬಾಬಾ ಸರಿಯಾಗಿ ಹತ್ತುಗಂಟೆ ಐದು ನಿಮಿಷಗಳಿಗೆ ಈಶ್ವರ್ ಹಣೆಯಮೇಲೆ ತಾನು ತಂದಿರುವ ವಿಭೂತಿಯನ್ನು ಬೊಟ್ಟಾಗಿ ಇಟ್ಟು ಕೂಡಲೇ ಇಬ್ಬರೂ ಹೊರಗೆ ಬಂದಿದ್ದಾರೆ. ಹತ್ತು ಗಂಟೆಗಳಿಂದ ಈಶ್ವರ್‌ನೊಳಗೆ ಶಕ್ತಿ ಬರುವ ಸಮಯ ಆದ್ದರಿಂದ ಹತ್ತು ಗಂಟೆ ಐದು ನಿಮಿಷಗಳಿಗೆ ತಮ್ಮ ಕೆಲಸ ನೆರವೇರಿಸಿಕೊಂಡು ಬಾಬಾ ಮತ್ತು ಮುನೆಪ್ಪ ಹೊರಗೆ ಹೋಗಿದ್ದಾರೆ. ಮನೆಯಲ್ಲಿನ ವರೆಲ್ಲರಿಗೂ ಸುಮಾರು ಹನ್ನೊಂದು ಗಂಟೆ ಸಮಯದಲ್ಲಿ ಎಚ್ಚರ ಬಂದಿತು. ಸಾಂಬ್ರಾಣಿ ಹೊಗೆ ಆಸ್ವಾದಿಸಿದ ರಾಘವ, ರಾಜಯೋಗಾನಂದ ಸ್ವಾಮಿ ಕೂಡ ಮತ್ತಿನ ಪ್ರಭಾವಕ್ಕೆ ನಿದ್ರೆಯೊಳಗೆ ಹೋಗಿದ್ದಾರೆ. ನಂತರ ಎದ್ದ ರಾಜಯೋಗಾನಂದ ಸ್ವಾಮಿಗೆ ಅನುಮಾನ ಬಂದಿತು. ನಡೆಯಬಾರದ್ದು ಏನೋ ನಡೆದಿದೆಯೆಂದು ಕೊಂಡಿದ್ದಾನೆ. ಅಷ್ಟರಲ್ಲೇ ಸಮಯ ಹನ್ನೊಂದುವರೆ ಆಗುವುದೂ, ಈಶ್ವರ್ ಹೊರಗೆ ಬರುವುದೂ ನಡೆಯಿತು. ಆಗ ಈಶ್ವರ್ ಹಣೆಯಮೇಲೆ ವಿಭೂತಿ ಬೊಟ್ಟು ಇರುವುದನ್ನು ಸ್ವಾಮಿ ನೋಡಿ ಜಮೀಂದಾರನನ್ನು ಕೇಳಿದ್ದಾನೆ. ತನಗೇನೂ ತಿಳಿಯದೆಂದು ಜಮೀಂದಾರ್ ಹೇಳಿದ್ದಾನೆ. ರಾಘವ ದೃಷ್ಠಿ ಸಾಂಬ್ರಾಣಿ ಹೊಗೆ ಹಾಕಿದ ಮುಸ್ಲಿಮ್ ವೃದ್ಧನಮೇಲೆ ಹೋಯಿತು. ಕೂಡಲೇ ಮುಸ್ಲಿಮ್ ವೃದ್ಧನನ್ನು ಕುರಿತು ಕೇಳಿದ್ದಾನೆ.

**ರಾಘವ :–** ಮುಸ್ಲಿಮ್ ಬಂದು ಹೊಗೆ ಹಾಕಿ ಹೋದ ನಂತರ ಎಲ್ಲರಿಗು ಮತ್ತು ಬಂದು ನಿದ್ರೆಯೊಳಗೆ ಹೋಗಿದ್ದೇವೆ. ಇದಕ್ಕೆ ಕಾರಣ ಆ ಮುಸ್ಲಿಮ್ ವೃದ್ಧನೇ! ಆತನು ಯಾರು?

**ಜಮೀಂದಾರ್ :–** ಆ ಮುಸ್ಲಿಮ್ ವೃದ್ಧನು ನನಗೆ ಹತ್ತು ವರ್ಷಗಳಿಂದ ಗೊತ್ತು. ಆತನು ಬಹಳ ಒಳ್ಳೆಯವನು. ಆತನಲ್ಲಿ ಯಾವ ದುರುದ್ದೇಶ ಇರುವುದಿಲ್ಲ. ಆತನು ಈ ಬೀದಿಯಲ್ಲೇ ಕೊನೆ ಮನೆಯಲ್ಲಿ ಇರುತ್ತಾನೆ. ಬೇಕಾದರೆ ಕರೆದು ಕೇಳುತ್ತೇವೆ.

**ರಾಜಯೋಗಾನಂದ :–** ಆತನು ನಿನಗೆ ತಿಳಿದವನೇ, ಬೀದಿ ಕೊನೆಯಲ್ಲಿ ಇರುವವನೆ, ಒಳ್ಳೆಯವನೇ ಆಗಿರಬಹುದು. ಆದರೆ ಆತನು ಹಾಕಿದ ಸಾಂಬ್ರಾಣಿಯಿಂದಲೇ

ಎಲ್ಲರೂ ನಿದ್ರೆಯೊಳಗೆ ಹೋಗುವುದು ನಡೆದಿದೆ. ಆತನು ಒಳ್ಳೆಯವನೇ ಆದರೂ ಆತನು ಹಾಕಿರುವ ಸಾಂಬ್ರಾಣಿ ಒಳ್ಳೆಯದಲ್ಲ. ಆತನಿಗೆ ಆ ಸಾಂಬ್ರಾಣಿ ಎಲ್ಲಿಯದೋ ವಿಚಾರಿಸಿರಿ.

(ಆ ಮುಸ್ಲಿಮ್ ವೃದ್ಧನಿಗಾಗಿ ಜಮೀಂದಾರ್ ತನ್ನ ಮನುಷ್ಯರು ಇಬ್ಬರನ್ನು ಕಳುಹಿಸಿ ಎಲ್ಲಿದ್ದರೂ ಆತನನ್ನು ಕರೆದುಕೊಂಡು ಬರಲು ಹೇಳಿದ್ದಾನೆ. ಹಾಗೆ ಹೋದ ಮನುಷ್ಯರು ಹತ್ತು ನಿಮಿಷಕ್ಕೇ ಆತನನ್ನು ಕರೆದುಕೊಂಡು ಬಂದಿದ್ದಾರೆ. ಆ ದಿನ ಸಾಯಂಕಾಲದವರೆಗು ಹೊಗೆ ಹಾಕಿಕೊಳ್ಳುತ್ತಾ ತಿರುಗುವ ವೃದ್ಧನು ಅಷ್ಟು ಬೇಗ ಹೇಗೆ ಸಿಕ್ಕಿದ್ದಾನೆಂದು ಜಮೀಂದಾರ್ ಅಂದುಕೊಂಡು ಹೀಗೆ ಕೇಳಿದ್ದಾನೆ.)

**ಜಮೀಂದಾರ್ :–** ಈತನು ಹತ್ತು ನಿಮಿಷಗಳಲ್ಲೇ ಹೇಗೆ ಸಿಕ್ಕಿದ್ದಾನೆ. ಸಂಜೆವರೆಗು ಸಿಗುವುದಿಲ್ಲ ಎಂದುಕೊಂಡಿದ್ದೆ.

**ಕೆಲಸದವನು :–** ನಾವೂ ಹಾಗೇ ಅಂದುಕೊಂಡು ಊರೆಲ್ಲಾ ಹುಡುಕಬೇಕೆಂದು ಕೊಂಡಿದ್ದೆವು. ಆದರೆ ಈತನು ತನ್ನ ಕೆಲಸವನ್ನು ಎಗರಿಸಿ ಈ ಬೀದಿಯಲ್ಲೇ ಗೋಡೆ ಕೆಳಗೆ ನೆರಳಲ್ಲಿ ಮಲಗಿಕೊಂಡು ನಿದ್ರೆ ಮಾಡುತ್ತಿದ್ದಾನೆ. ಎಬ್ಬಿಸಿ ಕರೆದುಕೊಂಡು ಬಂದಿದ್ದೇವೆ.

**ಜಮೀಂದಾರ್ :–** ವಹೀದ್‌ರವರೆ! ನೀವು ನಮಗೆ ಹೊಗೆ ಹಾಕಿ ಹೋಗಿದ್ದೀರ. ಆ ಹೊಗೆ ವಾಸನೆ ತಾಕಿದವರೆಲ್ಲಾ ಮತ್ತಿನಲ್ಲಿ ಮುಳುಗಿ ನಿದ್ರೆಹೋಗಿದ್ದಾರೆ. ನೀನು ಎಷ್ಟೋ ವರ್ಷಗಳಿಂದ ನಂಬಿಕೆಯಿಂದ ನಮ್ಮ ಹತ್ತಿರ ಬರುತ್ತಿದ್ದೀಯಲ್ಲ! ನಮಗೆ ನಿದ್ರೆ ಬರುವ ಸಾಂಬ್ರಾಣಿ ಹೊಗೆಯನ್ನು ಏಕೆ ಹಾಕಿದ್ದೀಯ?

**ವಹೀದ್ :–** ಅಲ್ಲಾ ಸಾಕ್ಷಿಯಾಗಿ ನನಗೆ ಏನೂ ತಿಳಿಯದು. ನಿಮ್ಮ ಪಕ್ಕದ ಮನೆಯಲ್ಲೂ, ಇಲ್ಲಿ, ನಂತರ ಎರಡು ಮನೆಗಳಲ್ಲಿ ಅಲ್ಲಾ ದುವಾಗಾಗಿ ಹೊಗೆ ಹಾಕಿದ್ದೇನೆ. ನಾಲ್ಕು ಮನೆ ಬಿಟ್ಟು ಐದನೇ ಮನೆಗೆ ಹೋಗುವುದರಲ್ಲೇ ನನಗೆ ನಿದ್ರೆ ಬಂದು ಗೋಡೆ ಪಕ್ಕದಲ್ಲಿ ಮಲಗಿಕೊಂಡು ನಿದ್ರೆ ಹೋಗಿದ್ದೇನೆ. ಇವರು ಬಂದು ಎಬ್ಬಿಸಿದರೆ ಎದ್ದಿದ್ದೇನೆ.

**ರಾಘವ :–** ನಿನ್ನ ತಪ್ಪು ಏನೂ ಇಲ್ಲ. ತಪ್ಪೆಲ್ಲಾ ಸಾಂಬ್ರಾಣಿದು. ಅದು ಎಲ್ಲಿಯದು?

**ವಹೀದ್ :–** ನೀವು ಹೇಳಿದಂತೆ ನಿಜವೇ ಆಗಿರುತ್ತದೆ. ಆ ಸಾಂಬ್ರಾಣಿ ನನದಲ್ಲ. ನಾನು ಪಕ್ಕದಲ್ಲೇ ಇರುವ ದರ್ಗಾಗೆ ಕೈಮುಗಿದು ಪಕ್ಕದ ಮನೆಯಿಂದ ಪ್ರಾರಂಭಿಸಿ ಮೊದಲ ಬೀದಿ ಮುಗಿದ ನಂತರ ಉಳಿದ ಕಡೆಗೆ ಹೋಗುತ್ತೇನೆ ಅಲ್ಲವೆ! ಈ ದಿನ ನಾನು ದರ್ಗಾ ಹತ್ತಿರ ದರ್ಗಾಗೆ ತಿರುಗುವಾಗ ಒಬ್ಬ ಮನುಷ್ಯ ಬಂದು ಅಲ್ಲೇ ನಿಂತಿದ್ದಾನೆ. ನಾನು ದರ್ಗಾ ಸುತ್ತಲೂ ತಿರುಗುವುದು ಮುಗಿದ ನಂತರ ಅಲ್ಲಿಂದ ಬರುವಾಗ ಆ ಮನುಷ್ಯ ನನ್ನನ್ನು ಕರೆದು "ನಾನು ಸಾಂಬ್ರಾಣಿ ಕೊಡುತ್ತೇನೆ ತೆಗೆದುಕೊಂಡು ಹೋಗು" ಎಂದನು. "ನನಗೇಕೆ ಕೊಡುತ್ತಿದ್ದೀಯ" ಎಂದನು. ಅದಕ್ಕೆ ಆತನು "ಪ್ರತಿ ಶುಕ್ರವಾರ ನಿಮ್ಮಂತಹ ಬಡವರಿಗಾಗಲೀ, ದರ್ಗಾಗಾಗಲೀ ನೂರು ರೂಪಾಯಿಗಳು ಖರ್ಚು ಮಾಡುತ್ತಿರುತ್ತೇವೆ. ಈ ದಿನ ನೂರು ರೂಪಾಯಿಗಳ ಸಾಂಬ್ರಾಣಿ ತಂದಿದ್ದೇನೆ. ನೀನು ತೆಗೆದುಕೊಂಡು ಹೋಗು" ಎಂದನು. ಕೊಡುತ್ತಿರುವುದನ್ನು ಏಕೆ ಬೇಡ ಎನ್ನಬೇಕೆಂದು ತೆಗೆದುಕೊಂಡಿದ್ದೇನೆ. ಅಲ್ಲಿಂದ ಬಂದು ಪಕ್ಕದ ಮನೆಯಲ್ಲಿ ಹಾಕಿದ್ದೇನೆ. ಆ ಮನೆಯಲ್ಲಿ ಹಾಕಿದ ನಂತರ ಈ ಮನೆಯಲ್ಲಿ ಹಾಕಿದ್ದೇನೆ, ನಂತರ ಎರಡು ಮನೆಗಳಲ್ಲಿ ಹಾಕಿದ್ದೇನೆ ನನಗೆ ನಿದ್ರೆ ಬಂದು ಮಲಗಿದ್ದೇನೆ.

**ರಾಜಯೋಗಾನಂದ :–** ಸರಿ ಇದರಲ್ಲಿ ನಿನ್ನ ತಪ್ಪು ಏನೂ ಇಲ್ಲ ನೀನು ಹೋಗು.

(ವಹೀದ್ ಹೊರಟು ಹೋಗಿದ್ದಾನೆ. ಜಮೀಂದಾರ್ ಮನೆಗಿಂತ ಮೊದಲ ಮನೆಯಲ್ಲೂ, ಜಮೀಂದಾರ್ ಮನೆ ನಂತರ ಎರಡು ಮನೆಗಳಲ್ಲಿ ವಿಚಾರಿಸಿದಾಗ ಅವರು ಸಹ ನಿದ್ರೆಹೋದಂತೆ ತಿಳಿಯಿತು. ಅದರಿಂದ ಇದೆಲ್ಲಾ ತಪಸ್ವಿಬಾಬಾ ಕೆಲಸವೇ ಎಂದುಕೊಂಡಿದ್ದಾರೆ. ಸ್ವಾಮಿ ಎಷ್ಟು ಜಾಗ್ರತೆಯಿಂದ ಇದ್ದರೂ ತಪಸ್ವಿಬಾಬಾ ಈ ಸಲ ಸುಲಭವಾಗಿ ತನ್ನ ಛಲವನ್ನು ಸಾಧಿಸಿಕೊಂಡಿದ್ದಾನೆ. ಕನಿಷ್ಟ ನಾಲ್ಕು ಐದು ಅಮಾವಾಸ್ಯೆಗಳ ದಿನಗಳಲ್ಲಾದರೂ ಈಶ್ವರ್‌ನಿಂದ ಶಕ್ತಿಗಳನ್ನು ಪಡೆದು, ಕೆಲವು ದೇಶಗಳನ್ನು ತನ್ನ ಕೈಯೊಳಗೆ ತಂದುಕೊಳ್ಳಬೇಕೆಂದುಕೊಂಡ ತಪಸ್ವಿಬಾಬಾಗೆ, ಕೊನೆಗೆ ಆರನೆ ಅಮಾವಾಸ್ಯೆ ದಿನದಂದು ಒಂದು ಶಕ್ತಿ ಲಭಿಸಿತು. ಆ ಒಂದು

ಶಕ್ತಿಯಿಂದ ಅರ್ಧ ಭಾರತದೇಶವನ್ನು ನಾಶ ಮಾಡುವ ಸಾಮರ್ಥ್ಯ ಬಾಬಾಗೆ ಬಂದಿತು. ರಾಜಯೋಗಾನಂದ ಸ್ವಾಮಿ ಇನ್ನು ಮಾಡುವುದೇನಿಲ್ಲದೆ ತನ್ನ ಆಶ್ರಮಕ್ಕೆ ಹೋದನು. ತಪಸ್ವಿಬಾಬಾ ಈಶ್ವರ್‌ನಿಂದ ಬಂದಿರುವ ಶಕ್ತಿಯನ್ನು ವಿನಿಯೋಗಿಸಿಕೊಳ್ಳುವುದಕ್ಕೆ ಮೂರು ತಿಂಗಳು ಅವಧಿ ಮಾತ್ರ ಇದೆ. ಮೂರು ತಿಂಗಳೊಳಗೆ ಏನು ಮಾಡಬೇಕು, ಹೇಗೆ ಮಾಡಬೆಕು ಎನ್ನುವ ಯೋಚನೆಯಲ್ಲಿ ಬಾಬಾ ಇದ್ದಾನೆ. ಕೊನೆಗೆ ಸರಿಯಾಗಿ ಒಂದುವರೆ ತಿಂಗಳಿಗೆ ಹುಣ್ಣಿಮೆ ದಿನದಂದು ಆ ಶಕ್ತಿಯನ್ನು ವಿನಿಯೋಗಿಸಿಕೊಳ್ಳಬೇಕೆಂದುಕೊಂಡಿದ್ದಾನೆ. ಆ ಶಕ್ತಿ ವಿನಿಯೋಗಿಸಿದ ಆರು ತಿಂಗಳಿಗೆ ಈಶ್ವರ್ ಮರಣಿಸುವುದು ನಡೆಯುತ್ತದೆ. ಒಂದು ವೇಳೆ ಈಶ್ವರ್‌ನಲ್ಲಿ ಸೇರಿದ ಶಕ್ತಿಗಳು ಒಂದೂ ಸಹ ಹೊರಗಿನ ಕಾರ್ಯಗಳಿಗೆ ವಿನಿಯೋಗಿಸದಂತೆ ಇದ್ದರೆ ಈಶ್ವರ್‌ಗೆ ಮರಣ ತಪ್ಪಿಹೋಗುತ್ತದೆ. ನಂತರ ಆತನ ಜೀವನ ವಿಶೇಷವಾದ ದಶೆಗಳಿಂದ ತುಂಬಿಹೋಗುತ್ತದೆ. ಆತನ ಶಕ್ತಿಗಳು ಯಾರ ವಶ ಆಗಬಾರದೆಂದು, ಅವು ಯಾರ ವಶವಾದರೂ ಅವುಗಳನ್ನು ಪ್ರಪಂಚ ಕೆಲಸಗಳಿಗೆ ವಿನಿಯೋಗಿಸಿ, ಅವರು ದೊಡ್ಡ ವ್ಯಕ್ತಿಗಳಾಗುತ್ತಾರೆಂದು, ಅದರಿಂದ ಈಶ್ವರ್ ಮರಣಿಸುವನೆಂದೂ ರಾಜಯೋಗಾನಂದ ಸ್ವಾಮಿಗೆ ತಿಳಿದಿತ್ತು. ಆದ್ದರಿಂದ ತಪಸ್ವಿಬಾಬಾ ಪ್ರಯತ್ನವನ್ನು ಅನೇಕ ಸಲ ಭಂಗ ಮಾಡಿದ್ದಾನೆ. ಕೊನೆಯಲ್ಲಿ ಬಾಬಾ ಮೋಸ ಮಾಡಿ ಈಶ್ವರನ ಶಕ್ತಿಯನ್ನು ವಶ ಮಾಡಿಕೊಂಡಿದ್ದಾನೆ.

ತಪಸ್ವಿಬಾಬಾ ವಶ ಮಾಡಿಕೊಂಡ ಆರನೆ ಅಮಾವಾಸ್ಯೆ ಶಕ್ತಿ ಬಹಳ ದೊಡ್ಡದು. ಅದು ಆಕಾಶದಲ್ಲಿ ಸುಳಿಮೇಘಗಳಂತಹ ಮೇಘಗಳನ್ನು ಸೃಷ್ಠಿಸುತ್ತದೆ. ಒಂದು ಎರಡು ಅಲ್ಲದೆ ನೂರು ಮೇಘಗಳನ್ನು ಸೃಷ್ಠಿಸುವ ಸಾಮರ್ಥ್ಯ ಆರನೆ ಅಮಾವಾಸ್ಯೆ ದಿನದಂದು ಏರ್ಪಟ್ಟಿರುವ ಶಕ್ತಿಗೆ ಇದೆ. ಅದರಿಂದ ತಪಸ್ವಿಬಾಬಾ ಎರಡನೆ ಹುಣ್ಣಿಮೆ ದಿನದಂದು ಮಹಾರಾಷ್ಟ್ರ, ಒರಿಸ್ಸಾ, ಕರ್ನಾಟಕ, ಆಂಧ್ರ, ತಮಿಳನಾಡು, ಕೇರಳ ಒಟ್ಟು ಆರು ರಾಜ್ಯಗಳಲ್ಲಿ ಸುಳಿ ಮೇಘಗಳನ್ನು ಸೃಷ್ಠಿಸಿ ಅವುಗಳಿಂದ ಜನ ಜೀವನವನ್ನು ನಾಶ ಮಾಡಿ, ಯಾವೊಬ್ಬರೂ ಉಳಿಯದಂತೆ ಮಾಡಬೇಕೆನ್ನುವುದು ತಪಸ್ವಿಬಾಬಾ ಉದ್ದೇಶ. ಹಾಗೆ ಮಾಡುವುದರಿಂದ ಎಲ್ಲರೂ ಮರಣಿಸಿದಾಗ ಉಳಿದ ಆಸ್ತಿಗಳೆಲ್ಲವನ್ನೂ ತಾನೇ ದೋಚಿಕೊಳ್ಳಬೇಕೆಂದು

ಕೊಂಡಿದ್ದಾನೆ. ಸ್ವಲ್ಪ ಮಾತ್ರ ತೆರಿಗೆಯನ್ನು ಕಟ್ಟಿ ಇರುವ ಭೂಮಿಎಲ್ಲವನ್ನೂ ತಾನೇ ಆಕ್ರಮಿಸಿಕೊಳ್ಳಬೇಕೆಂದುಕೊಂಡಿದ್ದಾನೆ. ಎಲ್ಲರೂ ಮರಣಿಸಿದಾಗ ಅವರ ಹಣ, ಬಂಗಾರವನ್ನು ತಾನೇ ತೆಗೆದುಕೊಳ್ಳಬೇಕೆಂದು ಕೊಂಡಿದ್ದಾನೆ. ಬರುವ ಎರಡನೆ ಹುಣ್ಣಿಮೆಗೆ ದಕ್ಷಿಣ ದೇಶವೆಲ್ಲವನ್ನೂ ನಾಶ ಮಾಡುವುದಕ್ಕೆ ಅದಕ್ಕೆ ಸಂಬಂಧಿಸಿದ ಕಾರ್ಯಗಳನ್ನು ಪ್ರಾರಂಭಿಸಿದ್ದಾನೆ.

ತನ್ನ ಮಂದಿರದಲ್ಲೇ ರಾಜಯೋಗಾನಂದ ಸ್ವಾಮಿ ಮನುಷ್ಯ ಇದ್ದಾನೆಂದೂ, ಇಲ್ಲಿನ ವಿಷಯಗಳು ಯಾವಾದರೂ ಆತನಿಂದ ರಾಜಯೋಗಾನಂದಸ್ವಾಮಿಗೆ ತಿಳಿಯುತ್ತವೆಂದು ತಪಸ್ವಿಬಾಬಾಗೆ ತಿಳಿಯದು. ಬಾಬಾ ಮುನೆಪ್ಪನನ್ನು ತನ್ನ ಮಂದಿರಕ್ಕೆ ಕರೆಸಿಕೊಂಡು ಸುಳಿಮೇಘಗಳನ್ನು ಕುರಿತು ರಹಸ್ಯವಾಗಿ ಚರ್ಚಿಸಿದ ವಿಷಯವೆಲ್ಲವೂ ರಾಜಯೋಗಾನಂದ ಸ್ವಾಮಿಗೆ ತಿಳಿದುಹೋಯಿತು. ರಾಜಯೋಗಾನಂದ ಸ್ವಾಮಿ ಇಲ್ಲಿಯವರೆಗು ತಪಸ್ವಿಬಾಬಾಗೆ ಈಶ್ವರ್ ಹತ್ತಿರದಿಂದ ನಾಲ್ಕನೆ ಅಮಾವಾಸ್ಯೆಯ ಶಕ್ತಿ, ಆರನೆ ಅಮಾವಾಸ್ಯೆಯ ಶಕ್ತಿ ವಶವಾಗಿವೆ ಎಂದು ಅಂದುಕೊಳ್ಳುತ್ತಿದ್ದನು. ಆದರೆ ತಪಸ್ವಿಬಾಬಾ ಹತ್ತಿರವಿರುವ ತನ್ನ ಅನುಚರನಿಂದ ಬಾಬಾಗೆ ನಾಲ್ಕನೆ ಅಮಾವಾಸ್ಯೆಯ ಶಕ್ತಿ ಬರಲಿಲ್ಲವೆಂದು, ಆತನಿಗೆ ಲಭ್ಯವಾಗಿರುವುದು ಆರನೆ ಅಮಾವಾಸ್ಯೆಯಶಕ್ತಿ ಒಂದೆ ಎಂದು ಈಗ ತಿಳಿದುಹೋಯಿತು. ಅಷ್ಟೇ ಅಲ್ಲ ಬರುವ ಎರಡನೆ ಹುಣ್ಣಿಮೆ ದಿನದಂದು ದಕ್ಷಿಣ ದೇಶವೆಲ್ಲಾ ತನಗಿರುವ ಶಕ್ತಿಯಿಂದ ಒಂದು ನೂರು ಸುಳಿಮೇಘಗಳನ್ನು ಸೃಷ್ಠಿಸಿ ಅವುಗಳಿಂದ ಪ್ರತಿ ಊರನ್ನೂ ನಾಶ ಮಾಡಿಕೊಳ್ಳಬೇ ಕೆಂದುಕೊಂಡಿದ್ದಾನೆಂದು ಸ್ವಾಮಿಗೆ ತಿಳಿದುಹೋಯಿತು. ಆ ವಿಷಯವನ್ನು ರಾಘವನಿಗೆ ಸ್ವಾಮಿ ತಿಳಿಸಬೇಕೆಂದು ಹೀಗೆ ಹೇಳಿದ್ದಾನೆ.)

**ರಾಜಯೋಗಾನಂದ :–** ರಾಘವಾ! ನಾವಂದುಕೊಂಡಂತೆ ತಪಸ್ವಿಬಾಬಾಗೆ ಎರಡು ಅಮಾವಾಸ್ಯೆಗಳ ಶಕ್ತಿಗಳು ಲಭ್ಯವಾಗಲಿಲ್ಲ. ಆರನೇ ಅಮಾವಾಸ್ಯೆ ದಿನದಂದು ಬಂದಿರುವ ಶಕ್ತಿಯನ್ನು ಮಾತ್ರವೇ ಆತನು ಸಾಧಿಸಿದ್ದಾನೆ. ನಾಲ್ಕನೆ ಅಮಾವಾಸ್ಯೆ ದಿನದಂದು ವಿಚಿತ್ರವಾಗಿ ಎರಡು ನಿಮಿಷಗಳ ಹಿಂದೆ ಈಶ್ವರ್ ತನ್ನ ಬೊಟ್ಟನ್ನು ಹೊರಸಿದ್ದಾನೆಂದು ತಿಳಿಯಿತು. ಆದ್ದರಿಂದಲೇ ನಾವು ಅಂದುಕೊಂಡಂತೆ ನಾಲ್ಕನೆ ಅಮಾವಾಸ್ಯೆ ದಿನದಂದು ಆತನಿಗೆ ಶಕ್ತಿ ಲಭಿಸಲಿಲ್ಲವೆಂದು ನಿರ್ಧಾರವಾಯಿತು.

**ರಾಘವ :–** ಹಾಗಾದರೆ ಬಾಬಾರವರಿಗೆ ಲಭಿಸಿದರುವುದು ಆರನೆ ಅಮಾವಾಸ್ಯೆ ದಿನದಂದು ಬಂದಿರುವ ಶಕ್ತಿ ಮಾತ್ರವೇ. ಆ ಒಂದು ಶಕ್ತಿಯಿಂದ ಆತನು ಏನು ಮಾಡಬಲ್ಲನು.?

**ರಾಜಯೋಗಾನಂದ :–** ಒಂದು ಶಕ್ತಿ ಆದರೂ ಎಷ್ಟೋ ಶಕ್ತಿ ಇರುವಂಥದ್ದು. ಅದರಿಂದ ಪ್ರಳಯವನ್ನು ಸೃಷ್ಟಿಸಿದಂತೆ ಮಾರಣ ಹೋಮವನ್ನು ಮಾಡಬಲ್ಲನು. ಬಾಬಾರವರು ಮುಂಬರುವ ಎರಡನೆ ಹುಣ್ಣಿಮೆ ದಿನದಂದು ಕನಿಷ್ಟ ನೂರು ಸುಳಿ ಮೇಘಗಳನ್ನು ಸೃಷ್ಟಿಸಿ ದಕ್ಷಿಣ ದೇಶದಲ್ಲಿನ ಜೀವಕೋಟಿ ಎಲ್ಲವನ್ನೂ ನಾಶ ಮಾಡಬೇಕೆಂದುಕೊಂಡಿದ್ದಾನೆಂದು ತಿಳಿದಿದೆ.

**ರಾಘವ :–** ಸುಳಿ ಮೇಘಗಳೆಂದರೇ ಏನು? ಅವು ಜೀವಕೋಟಿಯನ್ನು ಹೇಗೆ ನಾಶ ಮಾಡುತ್ತವೆ?

**ರಾಜಯೋಗಾನಂದ :–** ಸುಳಿ ಮೆಘಗಳನ್ನು ಕುರಿತು **"ದೆವ್ವಗಳ ಹಾಗೂ ಭೂತಗಳ ಯಥಾರ್ಥ ಸಂಘಟನೆಗಳು"** ಎನ್ನುವ ಗ್ರಂಥದಲ್ಲಿ ಪೂರ್ತಿಯಾಗಿ ಬರೆಯಲಾಗಿದೆ. ಆಕಾಶದಿಂದ ಭೂಮಿ ಹತ್ತಿರಕ್ಕೆ ಸುಳಿ ತಿರುಗುತ್ತಾ ಬರುವ ಮೇಘವನ್ನು ಸುಳಿ ಮೇಘ ಎನ್ನುತ್ತೇವೆ. ಸುಳಿ ಮೇಘಗಳನ್ನು **"ಟೋರ್ನಡೋಲು"** ಎಂದು ಇಂಗ್ಲೀಷ್ ಭಾಷೆಯಲ್ಲಿ ಕರೆಯುತ್ತಾರೆ. **"ಟೋರ್ನಡೋಲು"** ಎನ್ನುವ ಸುಳಿ ಮೇಘಗಳು ಸಹಜ ಸಿದ್ಧವಾಗಿ ಮೇಘಗಳಿಂದ ಹುಟ್ಟುತ್ತಿರುತ್ತವೆ. ಆದರೆ ಇಲ್ಲಿ ಆರನೆ ಅಮಾವಾಸ್ಯೆ ದಿನದಂದು ಈಶ್ವರ್ ಶರೀರದಿಂದ ಬಂದಿರುವ ಶಕ್ತಿ ಸಹಜವಾಗಿ ಪ್ರಕೃತಿಯಲ್ಲಿ ಹುಟ್ಟುವ ಸುಳಿಮೇಘ (ಟೋರ್ನಡೋಲು) ಕ್ಕಿಂತ ನೂರು ಪಟ್ಟು ದೊಡ್ಡದಾಗಿ ಮತ್ತು ನೂರು ಪಟ್ಟು ಬಲವಿರುವುದಾಗಿ ಇರುತ್ತದೆ. ಆರನೆ ಅಮಾವಾಸ್ಯೆ ದಿನದಂದು ಹುಟ್ಟಿದ ಶಕ್ತಿ ಸುಳಿ ಮೇಘವಾಗಿ ಮಾತ್ರ ಬದಲಾಗುತ್ತದೆ. ಈ ಸುಳಿಮೇಘ, ಸಹಜವಾಗಿ ಹುಟ್ಟಿದ ಸುಳಿಮೇಘ ಹೊಲಗಳಲ್ಲಿ ಸಹ ಪ್ರಯಾಣಿಸಿದಂತೆ ಪ್ರಯಾಣಿಸದೆ, ಬಾಬಾರವರ ಮನೋ ಸಂಕಲ್ಪದ ಪ್ರಕಾರ ಜನವಾಸವಾದ ಹಳ್ಳಿಗಳ ಮೇಲೆಯೂ, ಪಟ್ಟಣಗಳ ಮೇಲೆಯೂ ಪ್ರಯಾಣಿಸುತ್ತದೆ. ಸಾಧಾರಣ ಸುಳಿಮೇಘಗಳಿಗಿಂತ ನೂರು ಪಟ್ಟು ದೊಡ್ಡದಾದ ಸುಳಿ ಮೇಘ ಪ್ರಳಯಕ್ಕೆ

ಮತ್ತೊಂದು ರೂಪವಾಗಿ ಕಾಣಿಸುತ್ತಿರುತ್ತದೆ. ಅದು ಜನನಿವಾಸಗಳಾದ ಹಳ್ಳಿಗಳ ಮೇಲೆ ಬಂದಾಗ ಹಳ್ಳಿಯನ್ನು ಒಟ್ಟಾರೆ ಒಂದೇಬಾರಿಗೆ ಕದಲಿಸುತ್ತದೆ. ಸುಳಿಮೇಘ ವೊಂದರ ಬಲಕ್ಕೆ ಮನುಷ್ಯರೂ, ಪ್ರಾಣಿಗಳೂ ಕಾರು ಬಸ್ಸುಗಳು ಸುಳಿಯಲ್ಲಿ ಸಿಲುಕಿಕೊಂಡು ನೂರರಿಂದ ಎರಡು ನೂರು ಅಡಿಗಳ ಎತ್ತರದಲ್ಲಿ ಎಗರಿ, ನೂರು ಕಿಲೋಮೀಟರ್‌ಗಳ ಸ್ಪೀಡಿನಿಂದ ಸುಳಿ ತಿರುಗುತ್ತಿರುತ್ತದೆ. ಹಾಗೆ ತಿರುಗುವುದರಲ್ಲೇ ಅರ್ಧ ಜೀವರಾಶಿಗಳು ತಮ್ಮ ಪ್ರಾಣಗಳು ಕಳೆದುಕೊಳ್ಳುತ್ತವೆ. ಹಾಗೆ ಹತ್ತು ನಿಮಿಷಗಳು ತಿರುಗಿಸಿ ಸುಳಿಯಿಂದ ಹೊರಕ್ಕೆ ಬಿಸಾಡುತ್ತದೆ. ಹಾಗೆ ಬಿಸಾಡಿರುವ ಮನುಷ್ಯರಾಗಲೀ, ಪ್ರಾಣಿಗಳಾಗಲೀ ಕೆಳಗೆ ಬಿದ್ದು ಮರಣಿಸುವುದು ನಡೆಯುತ್ತದೆ. ಹಾಗೇ ವಾಹನಗಳನ್ನು ಸಹ ತಿರುಗಿಸಿ ಬಿಸಾಡುವುದು ನಡೆಯುತ್ತಿರುತ್ತದೆ. ಸುಳಿ ಮೇಘ ಯಾವ ಮನೆಯನ್ನು ಬಿಡದೆ ಎಲ್ಲವನ್ನೂ ನೆಲ ಮಟ್ಟ ಮಾಡುತ್ತವೆ. ಕೆಲವು ಮೇಲ್ಛಾವಣಿಗಳನ್ನು ತಿರುಗಿಸಿ ಬಿಸಾಡುತ್ತವೆ. ಅದು ಒಂದು ಊರಿನೊಳಗೆ ಬಂದು ಹೋದರೇ ಎಲ್ಲಿ ಯಾರ ಮನೆ ಇತ್ತೋ ಅದರ ಗುರುತುಗಳು ಸಹ ತಿಳಿಯದಂತೆ ಹೋಗುತ್ತವೆ. ಒಂದು ಮನೆಯ ಗೋಡೆ ಸಹ ಉಳಿಯದಂತೆ ಕೆಳಗೆ ಬಿದ್ದು ಪುಡಿಪುಡಿ ಯಾಗುತ್ತವೆ. ಒಟ್ಟಿನಲ್ಲಿ ಒಂದು ಪ್ರಳಯದಂತೆ ಇರುತ್ತದೆ. ಆರನೆ ಅಮಾವಾಸ್ಯೆ ಶಕ್ತಿಗೆ ಅಷ್ಟು ಬಲವಿದೆಯೆಂದು ತಿಳಿದ ತಪಸ್ವಿಬಾಬಾ, ಆ ಶಕ್ತಿಯಿಂದ ಸುಳಿ ಮೇಘಗಳನ್ನು ಸೃಷ್ಠಿಸಿ ಆರು ರಾಜ್ಯಗಳಲ್ಲಿ ಯಾರನ್ನೂ ಉಳಿಯದಂತೆ ಮಾಡಬೇಕೆಂದುಕೊಂಡಿದ್ದಾನೆ. ಆಗ ನಾವೂ ಸಹ ಆ ಶಕ್ತಿ ಮುಂದೆ ಏನೂ ಮಾಡಲಾರೆವು. ಅದು ಅಷ್ಟಗ್ರಹ ಪ್ರಭಾವಗಳಿಂದ ಏರ್ಪಟ್ಟಿರುವ ಶಕ್ತಿ. ಆದ್ದರಿಂದ ಅದು ನಮ್ಮನ್ನು ಸಹ ಲೆಕ್ಕ ಮಾಡದೇ ಬಿಸಾಡುತ್ತದೆ. ಆ ಸಮಯಕ್ಕೆ ಆರು ರಾಷ್ಟ್ರಗಳು ದಾಟಿಹೋದರೇನೆ ನಾವು ಬದುಕುತ್ತೇವೆ. ಇಲ್ಲದೇ ಹೋದರೆ ಅದರ ಒತ್ತಡಕ್ಕೆ ನಾವೂ ಸಹ ಮರಣಿಸುವುದು ತಪ್ಪುವುದಿಲ್ಲ.

**ರಾಘವ :–** ಆರನೆ ಅಮಾವಾಸ್ಯೆ ದಿನದಂದು ಈಶ್ವರ್‌ನಲ್ಲಿ ಪ್ರವೇಶಿಸುವ ಒಂದು ಶಕ್ತಿಯೇ ಇಷ್ಟು ನಾಶನವನ್ನು ಸೃಷ್ಠಿಸುವುದಾದರೇ, ಉಳಿದ ಐದು ಅಮಾವಾಸ್ಯೆಗಳ ಶಕ್ತಿಗಳೆಲ್ಲವನ್ನು ಬಾಬಾ ವಶ ಮಾಡಿಕೊಂಡಿದ್ದರೇ ಏನಾಗುತ್ತಿತ್ತೋ?

**ರಾಜಯೋಗಾನಂದ :–** ಪ್ರಪಂಚವೆಲ್ಲವನ್ನೂ ಮಾರಣಹೋಮ ಮಾಡುವ ಅನೇಕ ಶಕ್ತಿಗಳು ಏರ್ಪಡುತ್ತಿದ್ದವು. ಆದ್ದರಿಂದಲೇ ಆತನ ಪ್ರಯತ್ನವನ್ನು ಭಂಗ ಮಾಡಬೇಕೆಂದು ನಾವು ಎಷ್ಟೋ ಪ್ರಯತ್ನ ಮಾಡಿದ್ದೇವೆ. ಆದರೆ ಆ ಪ್ರಯತ್ನದಲ್ಲಿ ನಾಲ್ಕು ಸಲ ಬಾಬಾ ಸೋತುಹೋದರೂ ಕೊನೆಗೆ ಒಂದು ಸಲ ಗೆದ್ದಿದ್ದಾನೆ. ಆ ಒಂದುಬಾರಿ ಕೂಡಾ ಗೆಲ್ಲದಂತೆ ಮಾಡಿದ್ದರೇ ಚೆನ್ನಾಗಿರುತ್ತಿತ್ತು. ಆದರೆ ಆತನ ಕುತಂತ್ರಗಳನ್ನು ಗಮನಿಸಲಾರದೇ ಹೋಗಿದ್ದೇವೆ. ಹೊಗೆ ಇಟ್ಟು ನಿದ್ರೆಯೊಳಗೆ ಕಳುಹಿಸಿ ತನ್ನ ಕೆಲಸವನ್ನು ಈಡೇರಿಸಿಕೊಂಡಿದ್ದಾನೆ. ಈಗ ಎರಡನೆ ಹುಣ್ಣಿಮೆಗೆ ನಾವು ಯಾವುದೋ ಒಂದು ದಾರಿ ನೋಡಿಕೊಂಡು ಇಲ್ಲಿಂದ ಹೋಗಬೇಕಾಗಿದೆ.

(ಈ ವಿಧವಾಗಿ ರಾಜಯೋಗಾನಂದ ಸ್ವಾಮಿ ಹೇಳುವುದು ರಾಘವನಿಗೆ ವಿಚಿತ್ರವಾಗಿ ತೋಚಿತು. ಅಷ್ಟು ಇಲ್ಲದ್ದು ಸ್ವಾಮಿ ಹೇಳುವುದಿಲ್ಲವೆಂದು ಅಂದುಕೊಂಡಿದ್ದಾನೆ. ಅಷ್ಟರಲ್ಲಿ ಮೊದಲ ಹುಣ್ಣಿಮೆ ಬಂದಿತು. ಹುಣ್ಣಿಮೆ ಕಳೆದುಹೋದ ನಾಲ್ಕನೆ ದಿನ ರಾಜಯೋಗಾನಂದ ಸ್ವಾಮಿಗೆ, ತಪಸ್ವಿ ಬಾಬಾ ಆಶ್ರಮದಿಂದ ಸ್ವಾಮಿ ಅನುಚರನ ಮೂಲಕ ಒಂದು ವಿಚಿತ್ರವಾದ ವಾರ್ತೆ ತಿಳಿಯಿತು. ಹುಣ್ಣಿಮೆ ದಿನ ರಾತ್ರಿ ಒಂದು ದೊಡ್ಡ ಹಾವು ಬಾಬಾ ಆಶ್ರಮದಲ್ಲಿ ಕಾಣಿಸಿದೆಯಂತೆ. ಅದನ್ನು ಸಾಯಿಸಬೇಕೆಂದು ಪ್ರಯತ್ನಿಸಿದಾಗ ಅದು ಕಾಣಿಸಲಿಲ್ಲವಂತೆ, ಸಾಯಿಸಬೇಕೆಂದು ಪ್ರಯತ್ನಿಸಿದ ಹತ್ತು ಜನರಿಗೆ ಎರಡನೆ ದಿನ ದೃಷ್ಠಿ ಇಲ್ಲದಂತೆ ಹೋಗಿದೆಯಂತೆ. ಮೂರನೆ ದಿನ ರಾತ್ರಿ ಪುನಃ ಕಾಣಿಸಿದ ಹಾವು ಕೊನೆಗೆ ಮುನೆಪ್ಪನನ್ನು ಕಚ್ಚಿದಾಗ ಆತನು ವಿಚಿತ್ರವಾಗಿ ಒಂದೇ ನಿಮಿಷದಲ್ಲಿ ಪ್ರಾಣ ಬಿಟ್ಟಿದ್ದಾನಂತೆ. ಮುನೆಪ್ಪ ಸತ್ತುಹೋಗಿರುವುದರಿಂದ ತಪಸ್ವಿಬಾಬಾ ಬಹಳ ಬಾಧೆಪಟ್ಟಿದ್ದಾನೆಂದು ಸ್ವಾಮಿಗೆ ತಿಳಿಯಿತು. ಹಾಗೆ ನಡೆಯುವುದು ಸ್ವಾಮಿಗೆ ಆಶ್ಚರ್ಯವೆನಿಸಿತು. ಮುನೆಪ್ಪ ಅಂತ್ಯಕ್ರಿಯೆಗಳು ಮುಗಿದ ನಂತರ ಬಾಬಾ ತನ್ನ ಉದ್ದೇಶವನ್ನು ಬದಲಾಯಿಸಿ ಕೊಂಡಿದ್ದಾನೆ. ಮೊದಲು ಎರಡನೆ ಹುಣ್ಣಿಮೆಗೆ ವಿನಾಶವನ್ನು ಸೃಷ್ಠಿಸಬೇಕೆಂದುಕೊಂಡ ಬಾಬಾರವರು ಅಲ್ಲಿಯವರೆಗು ಇಲ್ಲದಂತೆ ಹತ್ತು ದಿನಗಳಲ್ಲಿ ಬರುವ ಅಮಾವಾಸ್ಯೆ ದಿನವೇ ತನ್ನ ಕೆಲಸವನ್ನು ಮಾಡಬೇಕೆಂದು ಕೊಂಡಿದ್ದಾನೆ. ಹಾಗೆ ಬಾಬಾ ತನ್ನ ಉದ್ದೇಶವನ್ನು ಬದಲಾಯಿಸಿಕೊಂಡು, ಬರುವ

ಅಮಾವಾಸ್ಯೆ ದಿನವೇ ವಿನಾಶನವನ್ನು ಪ್ರಾರಂಭಿಸಬೇಕೆಂದು ಅಂದುಕೊಂಡ ವಿಷಯ ಬಾಬಾ ಮಂದಿರದಲ್ಲಿರುವ ಸ್ವಾಮಿ ಅನುಚರನಿಗೂ ಸಹ ತಿಳಿದಿಲ್ಲ. ಆದ್ದರಿಂದ ಆ ವಿಷಯ ರಾಜಯೋಗಾನಂದ ಸ್ವಾಮಿಗೆ ಸಹ ತಿಳಿಯದಂತೆ ಹೋಯಿತು.

ಇದ್ದಕ್ಕಿದ್ದಂತೆ ಎಷ್ಟೋ ಭದ್ರತೆ ಇರುವ ಬಾಬಾ ಮಂದಿರದೊಳಗೆ ಹಾವು ಹೇಗೆ ಹೋಗಿದೆಯೆಂದು ಸ್ವಾಮಿ ಆಲೋಚಿಸಿದನು. ಅಲ್ಲಿಗೆ ಚಿಕ್ಕ ಇರುವೆ ಸಹ ಹೋಗಲಾರದು. ಎಷ್ಟೋ ಶುಭ್ರವಾಗಿರುವ ಬಾಬಾ ಮಂದಿರದೊಳಗೆ ಹಾವು ಹೋಗುವುದಕ್ಕೆ ಅವಕಾಶವೇ ಇಲ್ಲ. ಆದರೂ ಅಲ್ಲಿಗೆ ಹಾವು ಹೋಗುವುದೇನು, ಅದನ್ನು ಸಾಯಿಸುವುದಕ್ಕೆ ಹೋದ ಹತ್ತು ಜನರಿಗೆ ಕಣ್ಣು ಕಾಣಿಸದಂತೆ ಹೋಗುವುದೇನೆಂದು, ಅದು ಕಚ್ಚಿದ ನಿಮಿಷಕ್ಕೇ ಮುನೆಪ್ಪ ಮರಣಿಸುವುದೇನು, ಎಂದು ಎಷ್ಟು ಆಲೋಚಿಸಿದರೂ ಸ್ವಾಮಿಗೆ ಸ್ವಲ್ಪವೂ ಅರ್ಥವಾಗಲಿಲ್ಲ. ಕೊನೆಗೆ ಇದು ದೈವ ನಿರ್ಣಯ ಪ್ರಕಾರವೇ ನಡೆದಿದೆಯೆಂದು ಅಂದುಕೊಂಡಿದ್ದಾನೆ.

ಅಷ್ಟರಲ್ಲಿ ಅಮಾವಾಸ್ಯೆ ಬಂದಿತು. ನಾಳೆಯೇ ಅಮಾವಾಸ್ಯೆ ಎಂದಾಗ ಬಾಬಾ ತನ್ನ ನಿರ್ಣಯ ಬದಲಾಯಿಸಿಕೊಂಡಿದ್ದಾನೆಂದು ಅಮಾವಾಸ್ಯೆ ದಿನದಂದು ನಾಳೆಯೇ ತನ್ನ ವಿನಾಶ ಕಾರ್ಯವನ್ನು ಪ್ರಾರಂಭಿಸುತ್ತಿದ್ದಾನೆಂದು, ಬಾಬಾ ಮಂದಿರದಿಂದ ಸ್ವಾಮಿಗೆ ವಾರ್ತೆ ಬಂದಿತು. ಅದೂ ಸಂಜೆ ಆರುಗಂಟೆಗಳ ಸಮಯದಲ್ಲಿ ಆ ವಾರ್ತೆ ತಿಳಿಯುವುದರಿಂದ ಆ ಸಮಯದಲ್ಲಿ ತಾವು ಎಲ್ಲಿಗೂ ಹೋಗಲಾರೆವೆಂದು ತಾವೂ ಸಹ ಸುಳಿಮೇಘವೊಂದರ ಬಲೆಯಲ್ಲಿ ಸಿಲುಕಿಕೊಳ್ಳಬೇಕಾದ್ದೆ ಎಂದು ಸ್ವಾಮಿ ಅಂದುಕೊಂಡಿದ್ದಾನೆ. ಅದೇ ವಿಷಯವನ್ನು ರಾಘವನಿಗೂ ಸಹ ಹೇಳಿ, ಇಲ್ಲಿಯೂ ಸಹ ಬಾಬಾ ತನ್ನ ಉದ್ದೇಶವನ್ನು ಬದಲಾಯಿಸಿಕೊಂಡು ನಮ್ಮನ್ನು ಸಹ ಅಪಾಯದಲ್ಲಿ ಸಿಲುಕಿಸಿದ್ದಾನೆಂದು ಅಂದುಕೊಂಡಿದ್ದಾರೆ. ತಾವು ಈಗ ಎಲ್ಲೂ ಹೋಗಲಾರೆವೆಂದು, ತಮ್ಮನ್ನು ದೇವರೇ ಕಾಪಾಡಬೇಕೆಂದು, ದೇವರ ಮೇಲೆ ಭಾರ ಹಾಕಿ ಆಶ್ರಮದಲ್ಲೇ ಇದ್ದಾರೆ. ಬೆಳಗಾದ ಕೂಡಲೇ ಸ್ವಾಮಿಗೆ ಮತ್ತೊಂದು ವಾರ್ತೆ ತಿಳಿಯಿತು. ಅದೇನೆಂದರೆ! ಆ ದಿನ ಬೆಳಗಿನಜಾವ ಬಾಬಾ ಎದ್ದು ನಿತ್ಯ ಕ್ರಮಗಳನ್ನು ನೆರವೇರಿಸಿಕೊಂಡು ತನ್ನ ರೂಮಿನಲ್ಲಿ

ಕುಳಿತುಕೊಂಡು ಈಶ್ವರ್‌ನಿಂದ ಬಂದಿರುವ ಶಕ್ತಿಯನ್ನು ಹೊರಗೆ ಆಹ್ವಾನಿಸಿ ತನ್ನ ಉದ್ದೇಶವನ್ನು ಆ ಶಕ್ತಿಗೆ ಹೇಳಿ ಕಳುಹಿಸಬೇಕೆಂದುಕೊಂಡಿದ್ದಾನೆ. ಆ ಶಕ್ತಿಯನ್ನು ಕರೆದ ಕೂಡಲೇ ಎದುರುಗಡೆ ಮೂಗು ಮೂತಿ ಇಲ್ಲದ ಒಂದು ಆಕಾರ ಬಂದು ನಿಂತಿತು. ಆಗ ಆರು ರಾಷ್ಟ್ರಗಳ ಕುರಿತು ಬಾಬಾ ಹೇಳಿ ಅವುಗಳೆಲ್ಲವನ್ನೂ ಒಂದು ಗಂಟೆ ಅವಧಿಯಲ್ಲಿ ನಾಶನ ಮಾಡಲು ಹೇಳಿದ್ದಾನೆ. ಸರಿ ಎಂದು ಆ ಆಕಾರ ಹೇಳಿತು. ಅಷ್ಟರಲ್ಲಿ ಒಂದು ನಾಗರಹಾವು ಅಲ್ಲಿ ಪ್ರತ್ಯಕ್ಷವಾಯಿತು. ಅದರ ಪಕ್ಕದಲ್ಲೇ ಒಬ್ಬ ಉದ್ದ ಗಡ್ಡವಿರುವ ಮಹರ್ಷಿ ಪ್ರತ್ಯಕ್ಷವಾಗಿದ್ದಾನೆ. ಆಗ ರೂಪವಿಲ್ಲದ ಆಕಾರದ ಕಡೆ ಆ ಮಹರ್ಷಿ ನೋಡಿ "ಇವನು ನಿನ್ನನ್ನು ವಶಪಡಿಸಿಕೊಂಡು ದಕ್ಷಿಣ ದೇಶವನ್ನು ತಾಯಿ ಮಗು ಎನ್ನದಂತೆ ಎಲ್ಲರನ್ನೂ ನಾಶಮಾಡೆಂದಿದ್ದಾನೆ. ಇವನು ಹೇಳಿದಂತೆ ನೀನು ಕೇಳಬೇಕಾಗಿದ್ದೆ. ನೀನು ಇವನು ಹೇಳಿದಂತೆ ಮಾಡು. ಆದರೆ ನೀನು ನಾಶ ಮಾಡಬೇಕಾಗಿರುವುದು ದಕ್ಷಿಣ ದೇಶವನ್ನು ಅಲ್ಲವೆ! ಆ ದಕ್ಷಿಣ ದೇಶ ನನ್ನ ದಕ್ಷಿಣ ಹಸ್ತದಲ್ಲೇ ಇದೆ. ನನ್ನ ದಕ್ಷಿಣ ಹಸ್ತದಲ್ಲಿ ಏಳು ರಾಜ್ಯಗಳು ಇವೆ. ಅದರಲ್ಲಿ ಆರನ್ನು ನೀನು ನಾಶ ಮಾಡಿ, ಏಳನೆಯದರಲ್ಲಿ ಅಡಗಿ ಹೋಗು" ಎಂದು ಹೇಳಿದ ಕೂಡಲೇ ಸರಿ ನಿಮ್ಮ ಆಜ್ಞೆ ಪ್ರಕಾರವೇ ಮಾಡುತ್ತೇನೆ. ಎಂದು ಆ ಆಕಾರ ಬಹು ಚಿಕ್ಕದಾಗಿ ನೊಣ ಪರಿಮಾಣವಾಗಿ ಬದಲಾಗಿ, ಮಹರ್ಷಿ ಹಸ್ತದ ಮೇಲೆ ಮೊದಲ ಹೆಬ್ಬೆರಳಿನ ಮೊದಲ ಗಣ್ಣಿನ ಮೇಲಕ್ಕೆ ಬಂದು ಅಲ್ಲಿಂದ ಎರಡನೆಯ ಗಣ್ಣಿನ ಮೇಲಕ್ಕೆ ಬಂದಿತು. ಅಲ್ಲಿಂದ ಮೂರನೆ ಗಣ್ಣಿನ ಮೇಲಕ್ಕೆ ಬಂದಿತು. ಅಲ್ಲಿಂದ ಹೆಬ್ಬೆರಳಿನ ಕೆಳಗಿರುವ ವಿಶಾಲ ಭಾಗದೊಳಗೆ ಬಂದಿತು. ಆಗ ನಾಲ್ಕು ರಾಜ್ಯಗಳು ಮುಗಿದುಹೋದವು ಎಂದು ಜೋರಾಗಿ ಹೇಳಿತು. ಅದರ ನಂತರ ಎರಡು ರೇಖೆಗಳ ಮಧ್ಯದಲ್ಲಿರುವ ಒಂದನೆ ಭಾಗದೊಳಗೆ ಬಂದಿತು, ಆಗ ಐದು ರಾಜ್ಯಗಳು ಮುಗಿದುಹೋಗಿವೆ ಎಂದು ಜೋರಾಗಿ ಹೇಳಿತು. ಅಲ್ಲಿಂದ ಅದರ ಪಕ್ಕದಲ್ಲಿ ಮೇಲಿರುವ ಎರಡು ರೇಖೆಗಳ ಮಧ್ಯದಲ್ಲಿರುವ ಎರಡನೆ ಭಾಗದೊಳಗೆ ಬಂದಿತು. ಈಗ ಆರು ರಾಜ್ಯಗಳು ದಕ್ಷಿಣ ದೇಶವೆಲ್ಲಾ ಮುಗಿದುಹೋಯಿತೆಂದು ಜೋರಾಗಿ ಹೇಳಿತು. ನಂತರ ಏಳನೆ ಭಾಗವಾದ ಉತ್ತರ ದೇಶದಲ್ಲಿ ಅಡಗಿಹೋಗುತ್ತಿದ್ದೇನೆ ಎಂದು ಹೇಳಿ ಒಂದು

ರೇಖೆಗೆ ಮೇಲಿನ ಬೆರಳುಗಳಿಗೆ ಕೆಳಗಿರುವ ಭಾಗದಲ್ಲಿ ಅಡಗಿ ಕಾಣಿಸದಂತೆ ಹೋಗಿದೆ. ತನ್ನ ಮುಂದೆನೇ ನಡೆಯುತ್ತಿರುವ ಆ ದೃಶ್ಯವನ್ನು ತಪಸ್ವಿಬಾಬಾ ಆಶ್ಚರ್ಯದಿಂದ ನೋಡುತ್ತಾ ನಿಂತುಹೋಗಿದ್ದಾನೆ. ಅದು ಎಲ್ಲಾ ಮುಗಿದ ನಂತರ ಅಲ್ಲಿರುವುದು ಯಾರೆಂದು ಆತನ ಕಡೆ ಬಾಬಾ ನೋಡಿದ ಕೂಡಲೇ ಪಕ್ಕದಲ್ಲೇ ಇರುವ ಹಾವು ಮೇಲೆ ಎದ್ದು ತಪಸ್ವಿಬಾಬಾ ಕೊರಳಿಗೆ ಸುತ್ತಿಕೊಂಡು ತಲೆಮೇಲೆ ಕಚ್ಚಿತು. ಆಗ ಬಾಬಾರವರು ಒಂದು ನಿಮಿಷದಲ್ಲೇ ಪ್ರಾಣವನ್ನು ಬಿಟ್ಟು ಮರಣಿಸಿದ್ದಾನೆ. ಆಗ ಮಹರ್ಷಿ ಅಲ್ಲಿಂದ ಹೊರಟು ಹೋದಾಗ ಹಾವೂ ಸಹ ಹೋಯಿತು. ಇದು ಮಂದಿರದಲ್ಲಿ ನಡೆದ ಸಮಾಚಾರ. ಬಾಬಾ ಮಂದಿರದಲ್ಲಿ ಈ ಸಂಘಟನೆಯನ್ನು ಪ್ರತ್ಯಕ್ಷವಾಗಿ ನೋಡಿದ ರಾಜಯೋಗಾನಂದ ಸ್ವಾಮಿ ಏರ್ಪಡಿಸಿದ ಮನುಷ್ಯ ಹೇಳಿದಾಗ, ರಾಜಯೋಗಾನಂದ ಸ್ವಾಮಿ ರಾಘವನಿಗೆ ತಾನು ಬಾಬಾ ಮಂದಿರದಿಂದ ತಿಳಿದುಕೊಂಡಿರುವುದೆಲ್ಲಾ ತಿಳಿಸಿದನು. ಅದೆಲ್ಲಾ ಕೇಳಿದ ರಾಘವನಿಗೆ ಪ್ರಮಾದ ತಪ್ಪಿ ಹೋಯಿತೆಂದು ನಗಬೇಕೆಂದೆನಿಸಿದರೂ, ಗುಹೆಯಲ್ಲಿರುವ ಮಹರ್ಷಿ ಅವಶ್ಯವಿರುವಾಗ ನಾನೇ ಬರುತ್ತೇನೆಂದು ಹೇಳಿದ ಮಾತು ನೆನಪಿಗೆ ಬಂದು ಆತನ ದರ್ಶನ ಭಾಗ್ಯ ಲಭಿಸಲಿಲ್ಲವೆಂದು ಅಳಬೇಕೆನಿಸಿತು. ವಿಷಯವೆಲ್ಲಾ ಸ್ವಾಮಿ ಯಿಂದ ಕೇಳಿಸಿಕೊಂಡ ರಾಘವ ಏನೂ ಮಾತನಾಡದೆ ನಿಂತಿರುವುದನ್ನು ನೋಡಿದ ರಾಧೇಶ್ವರಿ ಹೀಗೆ ಹೇಳಿದಳು.)

**ರಾಧೇಶ್ವರಿ :–** ಏನ್ರೀ! ಸ್ವಾಮಿ ಹೇಳಿದ ಮಾತಿಗೆ ಏನೂ ಮಾತನಾಡದಂತೆ ಸುಮ್ಮನಿದ್ದೀರ?

**ರಾಘವ :–** ಏನೂ ಇಲ್ಲ. ನಾನು ಆಲೋಚನೆಯಲ್ಲಿ ಬಿದ್ದಿದ್ದೇನೆ. ಈಗ ಮುಂಬರುವ ಪ್ರಮಾದದಿಂದ ನಾವು ಹೊರಗೆ ಬಂದಿರುವುದಕ್ಕೆ ಸಂತೋಷ. ಆದರೂ ಪ್ರಮಾದದಿಂದ ರಕ್ಷಿಸಿರುವುದು ಗುಹೆಯಲ್ಲಿನ ಮಹರ್ಷಿ ಎಂದು, ತಪಸ್ವಿ ಬಾಬಾನನ್ನು ಕಚ್ಚಿ ನಿಮಿಷದಲ್ಲೇ ಸಾಯಿಸಿರುವುದು ಗುಹೆಯಲ್ಲಿನ ಹಾವೇ ಎಂದು ನನಗೆ ಅರ್ಥವಾಯಿತು. ನಂತರ ನನಗೆ ಮಹರ್ಷಿ "ನೀನು ಇಲ್ಲಿಗೆ ಬರಬೇಡ ಸಮಯ ಬಂದಾಗ ನಾನೇ ಬರುತ್ತೇನೆ" ಎಂದು ನುಡಿದಿದ್ದ ಮಾತುಗಳು ನೆನಪಿಗೆ ಬಂದವು.

ಆ ದಿನ ಆತನ ದರ್ಶನಕ್ಕಾಗಿ ಪುನಃ ಬರುತ್ತೇನೆಂದು ನಾನು ಕೇಳಿದಾಗ ಆತನು ಹಾಗೆ ಹೇಳಿದ್ದನು. ಅಷ್ಟೇ ಅಲ್ಲದೆ ಈ ಹಾವು ಮಾಡಬೇಕಾದ ಪಾತ್ರ ಬಹಳ ಇದೆಯೆಂದು ಸಹ ಹೇಳಿದ್ದನು. ಆತನ ಮಾತಿನ ಪ್ರಕಾರ ಮುನೆಪ್ಪನಿಗೆ ಕಚ್ಚಿ ಸಾಯಿಸಿದ ಹಾವು, ತಪಸ್ವಿಬಾಬಾನನ್ನು ಕಚ್ಚಿದ ಹಾವೂ ಅದೇಯೆಂದು, ಆ ಹಾವು ಕಚ್ಚುವುದರಿಂದಲೇ ಒಂದೇ ನಿಮಿಷಕ್ಕೇ ಇಬ್ಬರೂ ಸತ್ತುಹೋಗಿರುವುದು ನಡೆದಿದೆಯೆಂದು ಅರ್ಥವಾಯಿತು. ಇವೆಲ್ಲಾ ಮೊದಲೇ ನಡೆಯುತ್ತವೆಂದು ತಿಳಿದ ಆ ಮಹಾತ್ಮನು ಸಮಯಬಂದಾಗ ಎಂದು ಮಾತ್ರ ಹೇಳಿದ್ದಾನೆ. ಆ ದಿನ ನಾನು ಆ ಮಹಾನುಭಾವನ ದರ್ಶನಕ್ಕಾಗಿ ಕೇಳಿದಾಗ, ನಾನು ಬರುತ್ತೇನೆ ನೀನು ಬರಬೇಡ ಎಂದಿದ್ದಾನೆ. ಆದರೆ ಆತನು ಬಂದಿದ್ದಾನೆ ಎಷ್ಟೋ ದೊಡ್ಡ ಮಾರಣ ಶಕ್ತಿಯನ್ನು ತನ್ನ ಕೈಯಲ್ಲೇ ಅಡಗಿಹೋಗುವಂತೆ ಮಾಡಿದ್ದಾನೆ. ಆತನು ಕೆಲಸವನ್ನು ಮುಗಿಸಿಕೊಂಡು ಹೋಗಿದ್ದಾನೆ. ಆದರೆ ಆತನು ಬಂದರೂ ಆತನ ದರ್ಶನ ಸಿಗಲಿಲ್ಲವಲ್ಲವೇ ಎಂದು ನೋವು ಉಂಟಾಗುತ್ತಿದೆ. ಆದ್ದರಿಂದ ಮಾತುಗಳು ಬಾರದಂತಾದವು.

**ರಾಜಯೋಗಾನಂದ :–** ರಾಘವಾ! ನೀನು ಹಾಗಂದುಕೊಳ್ಳುವುದು ತಪ್ಪೆಂದು ನಾನು ಹೇಳಬಲ್ಲೆನು. ಏಕೆಂದರೆ! ನೀನು ಕೇಳಿರುವುದು ಆತನ ದರ್ಶನವನ್ನು ಅಲ್ಲವೆ! ಆಗ ಆತನು ಹೇಳಿರುವುದು, ನೀನು ನನ್ನ ದರ್ಶನಕ್ಕೆ ಬರಬೇಡ. ಸಮಯ ಬಂದಾಗ ನಾನೇ ಬರುತ್ತೇನೆಂದು ಹೇಳಿದ್ದಾನೆ. ಆ ಮಾತಲ್ಲಿ ನಾನೇ ಬಂದು ದರ್ಶನಕೊಡುತ್ತೇನೆಂದು ಹೇಳಿದಂತೆ ಅರ್ಥವಾಗುತ್ತಿದೆ. ನಾನು ಬಂದಾಗ ನೀನು ನನ್ನ ದರ್ಶನಕ್ಕಾಗಿ ಬಾ ಎಂದು ಹೇಳಲಿಲ್ಲ ಅಲ್ಲವೆ! ಆದ್ದರಿಂದ ಆತನೇ ಬಂದು ದರ್ಶನಕೊಡುತ್ತೇನೆಂದು ಚೆನ್ನಾಗಿ ತಿಳಿಯುತ್ತಿದೆ. ಆದ್ದರಿಂದ ನೀನು ಚಿಂತಿಸಬೇಕಾದ ಕೆಲಸವಿಲ್ಲ.

(ಅಷ್ಟರಲ್ಲೇ ಜಮೀಂದಾರ್ ಕಾರು ಬಂದು ಆಶ್ರಮದ ಮುಂದೆ ನಿಂತಿತು. ಅದರಲ್ಲಿಂದ ಅಪಸ್ಮಾರಕ ಸ್ಥಿತಿಯಲ್ಲಿರುವ ಈಶ್ವರ್‌ನನ್ನು ಜಮೀಂದಾರ್ ರಾವುಬಹುದೂರ್ ರವರು ಕರೆದುಕೊಂಡು ಬಂದಿದ್ದಾನೆ. ಜಮೀಂದಾರ್, ಜಮೀಂದಾರನ ಹೆಂಡತಿ ಇಬ್ಬರೂ ಬಂದು ಸ್ವಾಮಿ ಹತ್ತಿರ ಬಾಧೆಪಡುತ್ತಾ ಹೀಗೆ ಹೇಳಿದ್ದಾರೆ.)

**ಜಮೀಂದಾರ್ :–** ಸ್ವಾಮಿ! ಈಶ್ವರ್ ಮುಂಜಾನೆ ನಾಲ್ಕು ಗಂಟೆ ಮುವ್ವತ್ತು ನಿಮಿಷಗಳಲ್ಲಿ ಜೋರಾಗಿ ಕಿರುಚಿ ಅಪಸ್ಮಾರಕ ಸ್ಥಿತಿಯೊಳಗೆ ಹೋಗಿದ್ದಾನೆ. ಇಂದಿನ ಪರಿಸ್ಥಿತಿಯಲ್ಲಿ ಹೊರಗೆ ಯಾರೊಂದಿಗೂ (ಯಾವ ಡಾಕ್ಟರೊಂದಿಗೂ) ತೋರಿಸಿ ಕೊಳ್ಳುವುದು ಒಳ್ಳೆಯದಲ್ಲವೆಂದೆನಿಸಿತು. ಕೂಡಲೇ ನಿಮ್ಮ ಹತ್ತಿರಕ್ಕೆ ಕರೆದುಕೊಂಡು ಬಂದಿದ್ದೇವೆ.

**ರಾಜಯೋಗಾನಂದ :–** ಈಶ್ವರ್‌ನನ್ನು ಕುರಿತು ನೀವು ಗಾಬರಿಯಾಗಬೇಕಾದ ಕೆಲಸವಿಲ್ಲ. ಆರನೆ ಅಮಾವಾಸ್ಯೆದಿನ ಆತನ ಶರೀರದಲ್ಲಿ ಪ್ರವೇಶಿಸಿದ ಶಕ್ತಿ ಈ ಮುಂಜಾನೆ ಮಾಲ್ಕುವರೆ ಗಂಟೆಗೆ ದೇವರೊಳಗೆ ಐಕ್ಯವಾಗಿಹೋಗಿದೆ. ಆ ಶಕ್ತಿಗೆ ಈಶ್ವರ್ ಶರೀರಕ್ಕೆ ಸ್ವಲ್ಪ ಅನುಬಂಧವಿರುವುದರಿಂದ, ಅದು ಇಲ್ಲದಂತೆ ಹೋದ ಸಂದರ್ಭದಲ್ಲಿ ಈಶ್ವರ್‌ಗೆ ಹಾಗೆ ನಡೆದಿರಬಹುದು. ಎಲ್ಲರನ್ನೂ ರಕ್ಷಿಸುವ ಶಕ್ತಿ ಒಂದಿದೆ. ಆ ಶಕ್ತಿಯಿಂದಲೇ ಈಶ್ವರ್‌ಗೆ ಏನು ನಡೆದರೂ ನಡೆಯಬೇಕು. ಆ ಶಕ್ತಿಯೇ ಬಂದು ಕಾಪಾಡುತ್ತದೆನ್ನುವ ನಂಬಿಕೆಯಿಂದ ಇರಿ.

(ಜಮೀಂದಾರ್, ಆತನ ಹೆಂಡತಿ, ಈಶ್ವರ್‌ನನ್ನು ಕರೆದುಕೊಂಡು ಬಂದ ನಂತರ ಜಮೀಂದಾರ್ ಈಶ್ವರ್‌ನನ್ನು ಕುರಿತು ಹೇಳುವಾಗ ಎಲ್ಲರ ದೃಷ್ಠಿ ಜಮೀಂದಾರ್ ಹೇಳುವ ವಿಷಯದ ಮೇಲೆನೇ ಇತ್ತು. ಆಗ ಅವರ ಪಕ್ಕದಲ್ಲಿ ಮತ್ತೊಬ್ಬ ಮನುಷ್ಯ ನಿಂತಿದ್ದರೂ, ಆತನು ಯಾರು ಎಂದು ಯಾರೂ ಆತನ ಕಡೆ ನೋಡಲಿಲ್ಲ. ರಾಜಯೋಗಾನಂದ ಸ್ವಾಮಿ ಮಾತನಾಡುವಾಗ ಸಹ ಎಲ್ಲರ ದೃಷ್ಠಿ ಸ್ವಾಮಿ ಮೇಲೆಯೇ ಇತ್ತು. ಎಲ್ಲರ ಗಮನ ಹಾಗೆ ಇರುವುದರಿಂದ ಯಾರೋ ತಮ್ಮೊಂದಿಗೆ ಇದ್ದಾನೆಂದು ಅಂದುಕೊಂಡಿದ್ದಾರೆ. ಆದರೆ ಆತನು ಯಾರು ಎಂದು ಗಮನಹರಿಸದೆ ಆತನ ಕಡೆ ಯಾರೂ ನೋಡಲಿಲ್ಲ. ರಾಘವ ಅಕಸ್ಮಾತ್ತಾಗಿ ರಾಜಯೋಗಾನಂದಸ್ವಾಮಿ ಮಾತುಗಳು ಕೇಳಿದ ನಂತರ ಪಕ್ಕದಲ್ಲಿರುವ ಮನುಷ್ಯನನ್ನು ನೋಡಿದ್ದಾನೆ. ಹಾಗೆ ನೋಡಿದ ರಾಘವ ಒಮ್ಮೆ ಆಶ್ಚರ್ಯಪಟ್ಟನು. ತನ್ನ ಕಣ್ಣನ್ನು ತಾನೇ ನಂಬಲಾರದೇ ಹೋದನು. ಅಲ್ಲಿ ರಾಘವನಿಗೆ ಕಾಣಿಸಿರುವುದು, ಅಲ್ಲಿಯವರೆಗು ತಮ್ಮೊಂದಿಗೆ ಅಲ್ಲೇ ನಿಂತಿರುವುದೂ, ಸಾಕ್ಷಾತ್ತು ಗುಹೆಯಲ್ಲಿನ ಮಹರ್ಷಿ. ರಾಘವ ಕಣ್ಣಿನಿಂದ ಆನಂದ ಭಾಷ್ಪಗಳು ಬಂದು, ಕೂಡಲೇ ಅಲ್ಲಿರುವ

ಮಹರ್ಷಿ ಪಾದಗಳ ಮೇಲೆ ಬಿದ್ದನು. ರಾಘವ ಇದ್ದಕ್ಕಿದ್ದಂತೆ ಹಾಗೆ ಕಾಲಿನ ಮೇಲೆ ಬಿದ್ದಾಗ ಯಾರ ಕಾಲಿನ ಮೇಲೆ ಬಿದ್ದಿದ್ದಾನೆಂದು ಆಗ ಆ ಮಹರ್ಷಿಯನ್ನು ಎಲ್ಲರೂ ನೋಡಿದರು. ಆತನು ಅಲ್ಲಿರುವವರಿಗೆಲ್ಲಾ ಹೊಸ ವ್ಯಕ್ತಿ. ಆದ್ದರಿಂದ ಆತನು ಇಂತಹವರೆಂದು ಗುರುತಿಸಲಾರದೆ ಹೋಗಿದ್ದಾರೆ. ಮಹರ್ಷಿ ಪಾದಗಳಿಗೆ ನಮಸ್ಕರಿಸಿ ಎದ್ದು ನಿಂತಿರುವ ರಾಘವನೊಂದಿಗೆ ಮಹರ್ಷಿ ಹೀಗೆ ಹೇಳಿದ್ದಾನೆ.)

**ಮಹರ್ಷಿ :–** ನಿನ್ನ ಕೋರಿಕೆ ಈಡೇರಿತಾ?

**ರಾಘವ :–** ಈಡೇರಿತು. ಇದಕ್ಕು ಮೊದಲೆ ರಾಜಯೋಗಾನಂದ ಸ್ವಾಮಿ ನೀವೇ ಬಂದು ನನಗೆ ದರ್ಶನಕೊಡುತ್ತೀರೆಂದು ಹೇಳಿದ್ದಾನೆ. ಆದರೆ ನೀವು ಬಂದರೂ ಇಲ್ಲೇ ಇದ್ದರೂ ನಿಮ್ಮನ್ನು ನಾವು ನೋಡಲಿಲ್ಲ. ಬೇರೆ ವಿಷಯದಲ್ಲಿ ಮುಳಿಗಿದ್ದೇವೆ.

(ಆಗ ರಾಘವ ಮಾತುಗಳನ್ನನುಸರಿಸಿ ಅಲ್ಲಿರುವವರಿಗೆ ಆತನೇ ಭೂಗರ್ಭದಿಂದ ಬಂದಿರುವ ಮಹರ್ಷಿ ಎಂದು ಅರ್ಥವಾಯಿತು. ಜಮೀಂದಾರನಿಗೆ ಏನೂ ಅರ್ಥವಾಗಲಿಲ್ಲ. ಆಗ ರಾಜಯೋಗಾನಂದ ಸ್ವಾಮಿ ಜಮೀಂದಾರನೊಂದಿಗೆ ಹೀಗೆ ಹೇಳಿದನು.)

**ರಾಜಯೋಗಾನಂದ :–** ರಾವು ಬಹುದೂರ್‌ನವರೆ! ನಾನು ಒಂದು ನಿಮಿಷಕ್ಕಿಂತ ಮೊದಲು ನಿನ್ನೊಂದಿಗೆ ಏನು ಹೇಳಿದ್ದೆನೋ ಜ್ಞಾಪಕವಿದೆಯಾ! ಎಲ್ಲರನ್ನೂ ರಕ್ಷಿಸುವ ಶಕ್ತಿ ಒಂದಿದೆಯೆಂದು ಹೇಳಿದ್ದೇನಲ್ಲವೆ! ಆ ಶಕ್ತಿಯೇ ಈ ಮಹರ್ಷಿ ರೂಪದಲ್ಲಿ ಬಂದಿದೆ. ಆತನಿಂದಲೇ ಈಶ್ವರ್‌ಗೆ ಏನು ನಡೆದರೂ ನಡೆಯುತ್ತದೆ. ಆತನೆ ಬಂದು ಕಾಪಾಡುತ್ತಾನೆಂದು ಹೇಳಿದ್ದೇನೆ. ಈ ವೇಳೆಗಾಗಲೇ ನಾವೆಲ್ಲರೂ ಸುಳಿಮೇಘದಿಂದ ಸತ್ತುಹೋಗುತ್ತಿದ್ದೆವು. ನಾವೇ ಅಲ್ಲ ದಕ್ಷಿಣ ದೇಶವೆಲ್ಲಾ ಸರ್ವನಾಶವಾಗಿ ಹೋಗುತ್ತಿತ್ತು. ನನ್ನನ್ನು ನಿನ್ನನ್ನು ಮಾತ್ರ ಅಲ್ಲದೆ ದಕ್ಷಿಣ ದೇಶ ಪ್ರಜೆಗಳೆಲ್ಲರನ್ನೂ ಆಪತ್ತಿನಿಂದ ಕಾಪಾಡಿದ ದೇವರು ಈತನೆ!

(ಎಂದು ರಾಜಯೋಗಾನಂದ ಸ್ವಾಮಿ ಹೇಳಿದಕೂಡಲೇ ಅಲ್ಲಿರುವ ವರೆಲ್ಲರೂ ಆ ಮಹರ್ಷಿ ಪಾದಗಳ ಮೇಲೆ ಬಿದ್ದರು. ಎಲ್ಲರನ್ನೂ ಎಬ್ಬಿಸಿದ ರಾಜಯೋಗಾನಂದ ಪುನಃ ಹೀಗೆ ಹೇಳಿದನು.)

**ರಾಜಯೋಗಾನಂದ :–** ರಾಘವನಿಗೆ ಇದಕ್ಕೂ ಮೊದಲೇ, ನೀನು ಬಾಧೆಪಡಬೇಡ ಆತನೇ ಬಂದು ದರ್ಶನಕೊಡುತ್ತಾನೆಂದು ಹೇಳಿದ್ದೇನೆ. ಹಾಗೆಯೇ ರಾಘವನಿಗೇ ಅಲ್ಲದೆ ನಮ್ಮೆಲ್ಲರಿಗೂ ಆತನ ದರ್ಶನ ಸಿಕ್ಕಿತು. ನಿಮಿಷಕ್ಕಿಂತ ಮುಂಚೆ ಹೇಳಿದ್ದೇನೆ. ಆತನೇ ಬಂದು ಈಶ್ವರ್‌ನನ್ನು ಕಾಪಾಡುತ್ತಾನೆಂದು, ಅದೇ ರೀತಿಯಲ್ಲಿ ಆತನು ಬಂದಿದ್ದಾರೆ. ಆತನು ಏನು ಮಾಡಬೇಕೋ ಅದೇ ಮಾಡುತ್ತಾನೆ. ಆದರೆ ನಾವು ಆತನನ್ನು ಕೋರಬೇಕಾಗಿರುವುದು ಆತ್ಮ ಜ್ಞಾನವನ್ನು.

(ರಾಜಯೋಗಾನಂದ ಸ್ವಾಮಿ ಹಾಗೆ ಹೇಳುತ್ತಿರುವಾಗ ಅಲ್ಲಿರುವ ಮಹರ್ಷಿ ಮುಗುಲ್ನಗುತ್ತಾ ಮೌನವಾಗಿ ನೋಡುತ್ತಿದ್ದನು. ಆಗ ರಾಘವನಿಗೆ ತಪಸ್ವಿಬಾಬಾರವರ ಮಂದಿರದಲ್ಲಿ ಸುಳಿಮೇಘಕ್ಕೆ ಮಹರ್ಷಿ ಹೇಳಿದ ವಿಷಯ ನೆನಪಿಗೆ ಬಂದು ಹೀಗೆ ಕೇಳಿದನು.)

**ರಾಘವ :–** ಮಹಾತ್ಮಾ! ತಾವು ಸುಳಿಮೇಘಗಳನ್ನು ಸೃಷ್ಟಿಸುವ ಅಮಾವಾಸ್ಯೆ ಶಕ್ತಿಯನ್ನು ನಿಮ್ಮ ದಕ್ಷಿಣ ಹಸ್ತ (ಬಲಗೈಯ್ಯಲ್ಲಿ)ದಲ್ಲಿ ಅಡಗಿಹೋಗೆಂದಿದ್ದೀರ. ಆಗ ದಕ್ಷಿಣದಲ್ಲಿರುವ ಆರು ರಾಜ್ಯಗಳನ್ನು ಸಂಚರಿಸಿ ಅಲ್ಲಿ ವಿನಾಶನ ಮಾಡಿ ಕೊನೆಗೆ ಏಳನೆ ಭಾಗವಾದ ಉತ್ತರದೇಶದಲ್ಲಿ ಅಡಗಿಹೋಗೆಂದು ಆ ಶಕ್ತಿಗೆ ಆಜ್ಞೆ ಮಾಡಿದ್ದೀರ. ಆ ಶಕ್ತಿ ನೀವು ಹೇಳಿದಂತೇ ಚಿಕ್ಕ ನೊಣದ ಪರಿಮಾಣಕ್ಕೆ ಬದಲಾಗಿ, ನಿಮ್ಮ ಹಸ್ತದಲ್ಲಿನ ಆರು ಭಾಗಗಳಲ್ಲಿ ತಿರುಗಿ ಏಳನೆ ಭಾಗದಲ್ಲಿ ಅಡಗಿಹೋಗಿ ಕಾಣಿಸದಂತೆ ಹೋಗಿದೆಯೆಂದು ಕೇಳಿದ್ದೇನೆ. ಹಸ್ತದಲ್ಲಿನ ಏಳು ಭಾಗಗಳು ಯಾವುವೋ, ಅದರಲ್ಲಿ ಆರು ದಕ್ಷಿಣ ದೇಶವಾದಾಗ, ಒಂದು ಮಾತ್ರ ಉತ್ತರದೇಶ ವೆನ್ನುವ ಹೋಲಿಕೆ ಏನೋ ನನಗೆ ಅರ್ಥವಾಗಲಿಲ್ಲ. ರಾಜಯೋಗಾನಂದ ಸ್ವಾಮಿ ನಿಮ್ಮನ್ನು ಪ್ರಪಂಚ ಕೋರಿಕೆಗಳು ಕೇಳದಂತೆ ನಿಮ್ಮ ಜ್ಞಾನವನ್ನೇ ಕೇಳೆಂದಿದ್ದಾನೆ. ಆದ್ದರಿಂದ ನೀವು ಆ ಶಕ್ತಿಗೆ ಹೇಳಿದ ಭಾವವೇನೋ, ನೀವು ಹೇಳುವ ಜ್ಞಾನದಿಂದಲೇ ನಾವು ತಿಳಿದುಕೊಳ್ಳುತ್ತೇವೆ.

**ಮಹರ್ಷಿ :–** ರಾಘವಾ! ಎಲ್ಲ ವಿಷಯಗಳು ತಿಳಿದ ವ್ಯಕ್ತಿ, ಎಲ್ಲ ಜ್ಞಾನಗಳು ತಿಳಿದ

ವ್ಯಕ್ತಿಯಾದ ರಾಜಯೋಗಾನಂದ ಸ್ವಾಮಿ ಇರುವಾಗ ನನ್ನನ್ನು ಕೇಳುವುದೇಕೆ? ಆತನಿಗೆ ತಿಳಿಯದ ಜ್ಞಾನ ನನಗೆ ತಿಳಿಯುತ್ತದಾ? ನೀವು ಆತನನ್ನೇ ಕೇಳಿ.

(ಸ್ವತಃ ಮಹರ್ಷಿಯೇ ಆ ಮಾತನ್ನು ರಾಜಯೋಗಾನಂದ ಸ್ವಾಮಿ ಮುಂದೆ ಹೇಳಿದಾಗ ಆಶ್ಚರ್ಯದಿಂದ ಸ್ವಾಮಿ ಕಡೆ ರಾಘವ ನೋಡಿದ್ದಾನೆ. ಆಗ ಇನ್ನೂ ಆಶ್ಚರ್ಯವಾದ ದೃಶ್ಯ ರಾಘವನಿಗೆ ಕಾಣಿಸಿತು. ಯಾವ ಹಾವಾದರೇ ಮುನೆಪ್ಪನನ್ನೂ, ತಪಸ್ವಿಬಾಬಾನನ್ನು ಒಂದು ನಿಮಿಷದಲ್ಲಿ ಅಂತ್ಯ ಮಾಡಿದೆಯೋ, ಯಾವ ಹಾವಾದರೆ ಗುಹೆಯಲ್ಲಿ ಮಹಾತ್ಮನ ಪಕ್ಕದಲ್ಲಿ ಕಾಣಿಸಿದೆಯೋ ಅದೆ ಹಾವೇ ರಾಜಯೋಗಾ ನಂದಸ್ವಾಮಿ ಪಕ್ಕದಲ್ಲಿದೆ. ಅಷ್ಟೇ ಅಲ್ಲದೆ ಅಲ್ಲಿರುವವರೆಲ್ಲರೂ ಅಲ್ಲಿ ಕಾಣಿಸಿದ ಮಹರ್ಷಿಗೆ ನಮಸ್ಕರಿಸಿ ಪಾದಗಳ ಮೇಲೆ ಬಿದ್ದರೂ ಸ್ವಾಮಿ ಮಾತ್ರ ಕನಿಷ್ಟ ನಮಸ್ಕಾರವೆಂದು ಸಹ ಆತನಿಗೆ ಹೇಳಲಿಲ್ಲ. ಸ್ವಾಮಿಯೇನೋ ಮಹರ್ಷಿಯನ್ನು ದೇವರೊಂದಿಗೆ ಸಮಾನವಾಗಿ ಹೇಳಿರುವಾಗ, ಮಹರ್ಷಿಯೇನೋ ಸ್ವಾಮಿಯನ್ನು ಆತನಿಗೆ ತಿಳಿಯದ ಜ್ಞಾನ ನನಗೆ ತಿಳಿದಿರುತ್ತದಾ! ಎನ್ನುತ್ತಾನೆ. ರಾಜಯೋಗಾ ನಂದರೇನೋ ರಾತ್ರಿ ಸಹ ನಮಗೆ ಸಾವು ತಪ್ಪುವುದಿಲ್ಲವೆಂದು ಭಯಪಟ್ಟಿದ್ದಾನೆ. ಬೆಳಗ್ಗೆ ಮಹರ್ಷಿಯೇ ನಮ್ಮೆಲ್ಲರನ್ನೂ ಕಾಪಾಡಿದ ದೇವರೆಂದಿದ್ದಾನೆ. ಈಗ ಮಹರ್ಷಿ ಸ್ವಾಮಿಯನ್ನು ದೊಡ್ಡದಾಗಿ ಹೇಳುವುದೇ ಅಲ್ಲದೆ ಯಾವಾಗಲೂ ಮಹರ್ಷಿ ಹತ್ತಿರ ನೋಡಿದ ಹಾವು ರಾಜಯೋಗಾನಂದ ಸ್ವಾಮಿ ಹತ್ತಿರ ಇದೆ. ಇದೆಲ್ಲಾ ಗಮನಿಸಿದರೇ ಇವರಿಬ್ಬರಲ್ಲಿ ಯಾರು ಹೆಚ್ಚೋ, ಯಾರು ಕಡಿಮೆಯೋ ಎಂದು ರಾಘವನಿಗೆ ಏನೂ ಅರ್ಥವಾಗಲಿಲ್ಲ. ರಾಘವ ಹೀಗೆ ಯೋಚಿಸುತ್ತಿರುವಾಗಲೇ ರಾಜಯೋಗಾನಂದ ಸ್ವಾಮಿ ಹಸ್ತವನ್ನು ಕುರಿತು ಹೇಳಲು ಆರಂಭಿಸಿದನು.)

**ರಾಜಯೋಗಾನಂದ :–** ನಮ್ಮ ಶರೀರದಲ್ಲಿ ಎರಡು ಬಲ, ಎಡ ಭಾಗಗಳಿವೆ. ಬಲ ಭಾಗವನ್ನು ದಕ್ಷಿಣ ಭಾಗವೆಂದು, ಎಡ ಭಾಗವನ್ನು ಉತ್ತರ ಭಾಗ ಎಂದು ಹೇಳಬಹುದು. ಹಾಗೆ ಉತ್ತರ, ದಕ್ಷಿಣ ಭಾಗಗಳೆನ್ನುವುದಕ್ಕೆ ಕಾರಣ ಇದೆ. ಅದು ಏನೆಂದರೆ! ಬೆಳಗ್ಗೆ ಸೂರ್ಯ ಹುಟ್ಟುತ್ತಿರುವಾಗ ಸೂರ್ಯನಿಗೆ ಎದುರಾಗಿ ನಿಂತರೇ ಆಗ ಸೂರ್ಯನಿಗೆ ಎದುರಾಗಿರುವ ಮುಖವನ್ನು ಪೂರ್ವ ಭಾಗವೆಂದು, ಬೆನ್ನನ್ನು

ಪಶ್ಚಿಮ ಭಾಗವೆಂದೂ, ದಕ್ಷಿಣ ದಿಕ್ಕಿಗೆ ಇರುವ ಬಲಭಾಗವನ್ನು ದಕ್ಷಿಣ ಭಾಗವೆಂದು, ಹಾಗೆ ಎಡ ಭಾಗ ಉತ್ತರ ದಿಕ್ಕಿಗೆ ಇರುವುದರಿಂದ ಎಡ ಭಾಗವನ್ನು ಉತ್ತರ ಭಾಗವೆಂದು ಕರೆಯುತ್ತೇವೆ. ಇವು ನಮ್ಮ ಶರೀರದ ನಾಲ್ಕು ಕಡೆಗೂ ಇಟ್ಟಿರುವ ಹೆಸರುಗಳಾದಾಗ ಸ್ಥೂಲಶರೀರದಲ್ಲಿ ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳೆಂದು ಎರಡು ವಿಧಗಳ ಹೊರಗಿನ ಅವಯವಗಳು ಇವೆ. ಅವುಗಳಲ್ಲಿ ಜ್ಞಾನೇಂದ್ರಿಯಗಳಲ್ಲಿ ಕಣ್ಣು ಪ್ರಧಾನವಾದದ್ದು, ಹಾಗೇ ಕರ್ಮೇಂದ್ರಿಯಗಳಲ್ಲಿ ಕೈ ಪ್ರಧಾನವಾದದ್ದು. ಜ್ಞಾನೇಂದ್ರಿಯವಾದ ಕಣ್ಣು ಸೂರ್ಯನಿಗೆ ಎದುರಾಗಿ ಪೂರ್ವ ದಿಕ್ಕಿನಲ್ಲಿದೆ. ಆದ್ದರಿಂದ ಕಣ್ಣನ್ನು ಪೂರ್ವ ಕಣ್ಣು ಎಂದು ಕರೆಯಬಹುದು. ಕೈಗಳು ಉತ್ತರದಲ್ಲಿ ಒಂದು, ದಕ್ಷಿಣದಲ್ಲಿ ಒಂದು ಇವೆ. ಆದ್ದರಿಂದ ಬಲಗೈಯ್ಯನ್ನು ದಕ್ಷಿಣ ಹಸ್ತವೆಂದು, ಎಡಗೈಯ್ಯನ್ನು ಉತ್ತರ ಹಸ್ತವೆಂದು ಕರೆಯುವುದು ನಡೆಯುತ್ತಿದೆ.

ಜ್ಞಾನೇಂದ್ರಿಯವಾದ ಕಣ್ಣು, ಕರ್ಮೇಂದ್ರಿಯಗಳಾದ ಹಸ್ತದಲ್ಲಿ ಎಷ್ಟೋ ವಿಶೇಷವಾದ ದೈವಜ್ಞಾನ ಒಳಗೊಂಡಿದೆಯೆಂದು ಮೊದಲೇ ತಿಳಿದುಕೊಂಡಿದ್ದೇವೆ. ನೇತ್ರದಲ್ಲಿ ತ್ರಿ ಆತ್ಮಗಳ (ಜೀವಾತ್ಮ, ಆತ್ಮ, ಪರಮಾತ್ಮಗಳ) ಸೂಚನೆ ಇದೆಯೆಂದು ಹೇಳಿಕೊಂಡಿದ್ದೇವೆ. ಹಸ್ತದಲ್ಲಿ ಮೂರು ಆತ್ಮಗಳ ಗುರುತುಗಳೇ ಅಲ್ಲದೆ, ಪ್ರಕೃತಿ ಜನಿತವಾದ ಗುಣಗಳ ಗುರುತುಗಳು ಸಹ ಇವೆಯೆಂದು ತಿಳಿದುಕೊಂಡಿದ್ದೇವೆ. ಈಗ ಮಹರ್ಷಿ ಸುಳಿ ಮೇಘವೆನ್ನುವ ಶಕ್ತಿಗೆ, ಹಸ್ತದಲ್ಲಿನ ದಕ್ಷಿಣ ದೇಶದಲ್ಲಿನ ಆರು ರಾಜ್ಯಗಳು (ಆರು ಭಾಗಗಳು) ದಾಟಿ ಉತ್ತರದೇಶದಲ್ಲಿನ ಒಂದು ಭಾಗದಲ್ಲಿ ಅಡಗಿಹೋಗೆಂದು ಹೇಳಿದ್ದಾನೆ. ಆತನು ಹೇಳಿದ ಮಾತಿನಲ್ಲಿನ ಜ್ಞಾನವನ್ನು ವಿವರಿಸಿ ಹೇಳಿಕೊಂಡರೇ **ಜೀವಿಯು ಅಜ್ಞಾನದಿಂದ ಜ್ಞಾನದ ಕಡೆ ಹೋಗಿ, ಅದನ್ನು ಸಹ ದಾಟಿ ಕೊನೆಗೆ ಮೋಕ್ಷಕ್ಕೆ ಸೇರೆಂದು ಹೇಳುವುದು ನಡೆದಿದೆ**. ಒಬ್ಬ ಮನುಷ್ಯ ಮಾಯೆಯನ್ನು ದಾಟಿ ದೈವಜ್ಞಾನದ ಕಡೆ ಹೋಗಿ, ಅದನ್ನು ಸಹ ಬಿಟ್ಟು ಯೋಗದಲ್ಲಿ ಇಲ್ಲದಂತೆ ಹೋಗಬೇಕೆಂದು ಅರ್ಥ. ಒಬ್ಬ ಮನುಷ್ಯ ಆರು ಭಾಗಗಳನ್ನು ದಾಟಿದಾಗ ಪ್ರಕೃತಿ ಮಾಯೆಯನ್ನೂ, ದೇವರ ಜ್ಞಾನವನ್ನೂ ದಾಟಿ ಯೋಗವೆನ್ನುವ ಏಳನೆ ಭಾಗವನ್ನು ಸೇರಿ ಅದರಲ್ಲೇ ಇಲ್ಲದಂತೇ ಹೋಗುವುದು ಹೇಗೋ, ಮನುಷ್ಯನ




ಪ್ರಕೃತಿ ಸಂಬಂಧ ಭಾಗಗಳು
1. ತಾಮಸ ರಾಜ್ಯ
2. ರಾಜಸ ರಾಜ್ಯ
3. ಸಾತ್ತ್ವಿಕ ರಾಜ್ಯ
4. ಪ್ರಕೃತಿ ರಾಜ್ಯ

ಆತ್ಮ ಸಂಬಂಧ ಭಾಗಗಳು
5. ಜೀವಿಯ ರಾಜ್ಯ
6. ಆತ್ಮ ರಾಜ್ಯ
7. ಪರಮಾತ್ಮ ದೇಶ (ಸಾಮ್ರಾಜ್ಯ)} ಉತ್ತರ ದೇಶ

(1–6) — ದಕ್ಷಿಣ ದೇಶ

ಹಸ್ತದಲ್ಲೇ ತೋರಿಸಲಾಗಿದೆ. ಅದು ಹೇಗೆಂದು ಅರ್ಥವಾಗಬೇಕೆಂದರೇ ಮನುಷ್ಯನ ಹಸ್ತವನ್ನು ಒಂದು ಬಾರಿ ನಂತರ ಇರುವ ಚಿತ್ರ ಪಟದಲ್ಲಿ ನೋಡಿ. ಹಸ್ತದಲ್ಲಿ ಏಳು ಭಾಗಗಳು ಗುರುತಿಸಲಾಗಿವೆ. ಅದರಲ್ಲಿ ನಾಲ್ಕು ಪ್ರಕೃತಿ ಸಂಬಂಧವಾದವು. ಮೂರು ಪರಮಾತ್ಮ ಸಂಬಂಧವಾದವೆಂದು ಹೇಳಬಹುದು. ಹಾಗೇ ಆರು ಇಹ ಲೋಕದೊಳಗಿನವೆಂದು, ಏಳನೆಯದು ಪರಲೋಕ ಸಂಬಂಧ ವಾದದ್ದೆಂದು ಹೇಳಬಹುದು. ಅವುಗಳನ್ನೇ ಇಹಕ್ಕೆ ಸಂಬಂಧಿಸಿದ ಆರು ಭಾಗಗಳನ್ನು ಆರು ರಾಷ್ಟ್ರಗಳೆಂದು ಪರಕ್ಕೆ ಸಂಬಂಧಿಸಿದ ಒಂದು ಭಾಗವನ್ನು (ಏಳನೆ ಭಾಗವನ್ನು) ಉತ್ತರ ದೇಶವೆಂದು ಹೇಳುತ್ತಿದ್ದೇವೆ. ಆರು ರಾಜ್ಯಗಳನ್ನು ಜಯಿಸಿ ಅಥವಾ ನಾಶ ಮಾಡಿ ಏಳನೆ ಭಾಗವನ್ನು ಸೇರುವುದನ್ನೇ ಮೋಕ್ಷವನ್ನು ಹೊಂದುವುದೆಂದು ಅರ್ಥ ಮಾಡಿಕೊಳ್ಳಬೇಕು.

ಹಸ್ತವನ್ನು ವಿವರಿಸಿ ಹೇಳಿಕೊಂಡಂತಾದರೆ ಪ್ರಕೃತಿಯಿಂದ ಹುಟ್ಟಿರುವುದು ಮಾಯೆ. ಪ್ರಕೃತಿ ಜನಿತವಾದದ್ದು ಮಾಯೆ. ಮಾಯೆ ಮೂರು ಭಾಗಗಳಾಗಿ ಇದೆ. ಉದಾಹರಣೆಯಾಗಿ ಹೇಳುವುದಕ್ಕೆ ಒಂದು ಹೆಣ್ಣು ಕೋಳಿಯನ್ನು ತೆಗೆದುಕೊಂಡು ನೋಡೋಣ. ಒಂದು ಕೋಳಿಗೆ ಮೂರು ಮರಿಗಳಿವೆ. ಮೂರು ಕೋಳಿಮರಿಗಳು, ಕೋಳಿ ರೆಕ್ಕೆಗಳ ಕೆಳಗೆ ಇರುತ್ತವೆ. ಒಂದು ಮರಿಗಳಿರುವ ಕೋಳಿಯನ್ನು ಪ್ರಕೃತಿಯಾಗಿ ಲೆಕ್ಕಿಸಿ ನೋಡಿದರೇ ಅದಕ್ಕೆ ಹುಟ್ಟಿರುವ ಮರಿಗಳೆನ್ನುವ ಮಾಯೆ ಮೂರು ಭಾಗಗಳಾಗಿ ಇದೆ. ಆ ಮೂರು ಭಾಗಗಳಲ್ಲಿ ಒಂದು ತಾಮಸ ಗುಣಭಾಗವಾದಾಗ, ಎರಡನೆಯದು ರಾಜಸ ಗುಣಭಾಗ, ಮೂರನೆಯದು ಸಾತ್ವಿಕ ಗುಣಭಾಗ. ನಾಲ್ಕನೆಯದು ಈ ಮೂರು ಭಾಗಗಳಿಗು ತಾಯಿಯಾದ ಪ್ರಕೃತಿ. ಐದನೆ ಭಾಗ, ಆರನೆ ಭಾಗ, ಏಳನೇ ಭಾಗ ಮೂರು ಆತ್ಮ ಸಂಬಂಧ ಭಾಗಗಳು. ಅದರಲ್ಲಿ ಜೀವಾತ್ಮನಿಗೆ ಸಂಬಂಧಿಸಿರುವುದು ಐದನೆ ಭಾಗ. ಆತ್ಮಕ್ಕೆ ಗುರುತಾಗಿ ಹೇಳಿಕೊಳ್ಳುವುದು ಆರನೆ ಭಾಗ. ಕೊನೆಯ ಏಳನೇ ಭಾಗ ಪರಮಾತ್ಮನಿಗೆ ಗುರುತಾಗಿ, ಮೋಕ್ಷಕ್ಕೆ ಚಿಹ್ನೆಯಾಗಿ ಹೇಳಲಾಗುತ್ತಿದೆ. ಇದರಲ್ಲಿ ಆರು ಭಾಗಗಳನ್ನು ದಾಟಿ ಏಳನೇ ಭಾಗದಲ್ಲಿ ಸೇರಿ ಹೋದರೇ, ಅಲ್ಲಿ ಸೇರಿದವನು ನಂತರ ಇಲ್ಲದಂತೆ ದೇವರಲ್ಲಿ ಐಕ್ಯವಾಗಿ ಹೋಗುತ್ತಾನೆ.

ಈಶ್ವರ್ 16ನೇ ವರ್ಷದಲ್ಲಿ ಆರನೇ ಅಮಾವಾಸ್ಯೆ ದಿನದಂದು ಹುಟ್ಟಿದ ಶಕ್ತಿಯನ್ನು ಇಲ್ಲದಂತೆ ಮಾಡುವುದಕ್ಕೆ, ಆಧ್ಯಾತ್ಮಿಕ ಅರ್ಥದಿಂದ ಏಳನೆಯ ಭಾಗವಾದ ಉತ್ತರ ದೇಶವನ್ನು ಸೇರಿ ಅಡಗಿ ಹೋಗೆಂದು ಹೇಳುವುದು ನಡೆದಿದೆ. ಒಂದು ಸಲ ಮೋಕ್ಷ ಹೊಂದಿದವನು ಪುನಃ ಹುಟ್ಟುವುದಿಲ್ಲ. ಅವನು ಎಲ್ಲೂ ಇರುವುದಿಲ್ಲ. ಆದ್ದರಿಂದ ಅಮಾವಾಸ್ಯೆ ಶಕ್ತಿಯನ್ನು ಎಲ್ಲೂ ಇಲ್ಲದಂತೆ ಮಾಡುವುದಕ್ಕೆ ಏಳನೆ ಭಾಗದಲ್ಲಿ ಅಡಗಿ ಹೋಗೆಂದು ಹೇಳುವುದು ನಡೆದಿದೆ. ಈ ಜ್ಞಾನ ಅರ್ಥ ವಾಗಬೇಕೆಂದರೇ ಹಸ್ತದಲ್ಲಿನ ಮೂರು ರೇಖೆಗಳನ್ನು ಕುರಿತು, ಬೆರಳಿನಲ್ಲಿ ಮೂರು ಭಾಗಗಳನ್ನು ಕುರಿತು ತಿಳಿದಿರಬೇಕು. ಮೂರು ರೇಖೆಗಳು ಮೂರು ಆತ್ಮಗಳೆಂದು, ಬೆರಳಿನ ಮೂರು ಗಣ್ಣುಗಳು ಮೂರು ಗುಣಗಳೆಂದು ತಿಳಿದಿರಬೇಕು. ಹಾಗೆ ತಿಳಿದವರಿಗೆ ಆರು ರಾಜ್ಯಗಳ ವಿಷಯ ಚೆನ್ನಾಗಿ ಅರ್ಥವಾಗುತ್ತದೆ.

(ರಾಜಯೋಗಾನಂದ ಸ್ವಾಮಿ, ಮಹರ್ಷಿ ಹೇಳಿದ ಆರು ರಾಜ್ಯಗಳ ವಿಷಯವನ್ನು ಆಧ್ಯಾತ್ಮಿಕ ವಿಧಾನದಲ್ಲಿ ವಿವರಿಸಿ ಹೇಳುವುದು ಅಲ್ಲಿರುವವರಿಗೆಲ್ಲಾ ಆಶ್ಚರ್ಯವಾಯಿತು. ಇದಕ್ಕೂ ಮೊದಲೇ ಹಸ್ತದಲ್ಲಿನ ರಹಸ್ಯವನ್ನೆಲ್ಲಾ ಹೇಳಿದ ರಾಜಯೋಗಾನಂದ ಸ್ವಾಮಿ ಹಸ್ತದಲ್ಲಿನ ಉದ್ದೇಶವನ್ನು, ಹಸ್ತದಲ್ಲಿ ಏಳು ಭಾಗಗಳಿರುವ ವಿಷಯವನ್ನು ಇಲ್ಲಿಯವರೆಗೂ ಹೇಳಲಿಲ್ಲವೇ ಎಂದುಕೊಂಡ ರಾಘವ ಈ ವಿಧವಾಗಿ ಕೇಳಿದ್ದಾನೆ.)

**ರಾಘವ :–** ಸ್ವಾಮೀ! ಇದಕ್ಕೂ ಮೊದಲು ಹಸ್ತದಲ್ಲಿ ಮೂರು ಆತ್ಮಗಳ ವಿವರವನ್ನು ಸಂಪೂರ್ಣವಾಗಿ ಹೇಳಿದ ನೀವು ಮೋಕ್ಷವನ್ನು ಸೇರಿ ಪುನಃ ಹುಟ್ಟದ ವಿಧಾನ ಹಸ್ತದಲ್ಲಿ ಸೂಚಿಸಲಾಗಿದೆಯೆಂದು, ಆದ್ದರಿಂದಲೇ ರೇಖೆಗಳ ಮಧ್ಯದಲ್ಲಿ ಏಳು ಭಾಗಗಳಾಗಿ ಹಸ್ತದಲ್ಲಿ ಕಾಣಿಸುತ್ತಿವೆಯೆಂದು, ಹಸ್ತವನ್ನು ನೋಡಿಕೊಂಡವನಿಗೆ ಈ ಭಾಗಗಳನ್ನು ದಾಟಿ ಹೋಗು! ಎನ್ನುವ ಸಂದೇಶ ತಿಳಿಯುತ್ತಿದೆಯೆಂದು ಎಂದೂ ಹೇಳಲಿಲ್ಲ.

**ರಾಜಯೋಗಾನಂದ :–** ಆಗ ಈ ವಿಷಯ ನನಗೆ ತಿಳಿದಿದ್ದರೇ ನಾನೇಕೆ

ಹೇಳುವುದಿಲ್ಲ? ಈಗ ತಿಳಿಯಿತು ಆದ್ದರಿಂದ ಈಗಲೇ ಹೇಳಿದ್ದೇನೆ. ನನ್ನ ಮಾತು ನಿನಗೆ ಅರ್ಥವಾಗಲಿಲ್ಲವಲ್ಲ! ಆದರೇ ಚೆನ್ನಾಗಿ ಅರ್ಥವಾಗುವಂತೆ ಕೇಳಿರಿ. ಹೇಳಿದಂತೆ ಕಾಣಿಸುವುದು ನಾನು. ಹೇಳಿದಂತೆ ಯಾರಿಗೂ ತಿಳಿಯದಂತೆ ಇರುವವನು ಮತ್ತೊಬ್ಬನು. ನನಗೆ ತಿಳಿದಿರುವುದನ್ನು ನಾನು ನಿಮಗೆ ಹೇಳಿದ್ದೇನೆ, ತಿಳಿಯದಿರುವುದನ್ನು ನನಗೆ ಆತನು ಹೇಳಿದ್ದಾನೆ. ಕೇಳಿಸಿಕೊಂಡವರು ನೀವು, ಹೇಳಿದವನು ನಾನು. ನನಗೆ ಹೇಳಿದವನು ನಿಮಗೆ ತಿಳಿಯದಂತಿದ್ದಾನೆ. ನನಗೆ ತಿಳಿದ ನಂತರ ನಿಮಗೆ ಹೇಳಿದ ನಾನು ದೊಡ್ಡವನಾ? ತಿಳಿಯುವುದಕ್ಕಿಂತ ಮೊದಲು ನನಗೆ ಹೇಳಿದ ಆತನು ದೊಡ್ಡವನಾ ನೀವೇ ಹೇಳಿರಿ. ಭೂಮಿ ಮೇಲೆ ಯಾರಿಗೂ ತಿಳಿಯದ ಮುನ್ನ ಹೇಳಿದವನು ದೊಡ್ಡವನೇ ಹೊರತು, ತಿಳಿದ ನಂತರ ಹೇಳುವವನು ದೊಡ್ಡವನಲ್ಲ. ಪ್ರಪಂಚದಲ್ಲಿ ಯಾರಿಗೂ ತಿಳಿಯುವುದಕ್ಕಿಂತ ಮೊದಲು ಹೇಳಿದವನೇ ಗುರುವು. ತಿಳಿದ ನಂತರ ಹೇಳುವ ನನ್ನಂತಹವನು ಗುರುವು ಅಲ್ಲ ಕೇವಲ ಬೋಧಕನು ಮಾತ್ರ ಆಗುತ್ತಾನೆ. ಆದ್ದರಿಂದಲೇ ಕಾಲಜ್ಞಾನವನ್ನು ಹೇಳಿದ ಬ್ರಹ್ಮಯ್ಯನವರು ನಮಗೆ ದೊಡ್ಡದಾಗಿ ಕಾಣಿಸಿದರೂ ಆತನು ಮಾತ್ರ ತನ್ನ ಕಾಲಜ್ಞಾನದಲ್ಲಿ ನನಗೂ ನಿಮಗೂ ಗುರುವು ಒಬ್ಬನಿದ್ದಾನೆಂದು ಹೇಳಿದ್ದಾನೆ.

**ರಾಘವ :–** ಜಗತ್ತಿನಲ್ಲಿ ಗುರುವು ಹೇಳಿದ ಜ್ಞಾನವನ್ನೇ ಬೊಧಕರು ಹೇಳಿದಾಗ, ಆ ಬೋಧಕರು ಹೇಳಿದ ಜ್ಞಾನವನ್ನು ಮತ್ತೊಬ್ಬ ಬೋಧಕರು ಹೇಳಿದಾಗ, ಭೂಮಿ ಮೇಲೆ ಬೋಧಕರ ಪರಂಪರೆ ಸಾಗುತ್ತಿದೆಯೆಂದು ಆರ್ಥವಾಗುತ್ತಿದೆ. ಹಾಗಿರುವಾಗ ಭೂಮಿ ಮೇಲೆ ಇರುವುದು ಬೋಧಕರ ಪರಂಪರೆಯೇ ಹೊರತು, ಗುರುಪರಂಪರೆ ಇಲ್ಲದಂತೆ ಅಲ್ಲವೆ!

**ರಾಜಯೋಗಾನಂದ :–** ಇಲ್ಲವೆಂದೇ ತಾನೆ ನಾನು ಹೇಳುತ್ತಿರುವುದು. ಗತದಲ್ಲಿ ನನಗೆ ಹಸ್ತದಲ್ಲಿನ ಭಾಗಗಳ ಜ್ಞಾನವೆ ತಿಳಿದಿಲ್ಲ. ಈಗ ತಿಳಿಯಿತು. ಆದ್ದರಿಂದ ಹೇಳಿದ್ದೇನೆ. ನನಗೆ ತಿಳಿದಿರುವುದನ್ನು ಹೇಳುವ ಬೋಧಕನು ಮಾತ್ರವೇ, ನಾನು ಗುರುವು ಅಲ್ಲ. ಯಾರಿಗೂ ಇಲ್ಲಿಯವರೆಗು ತಿಳಿಯದ ಜ್ಞಾನವನ್ನು ತಿಳಿಸಿದವನೇ ನಿಜವಾದ ಗುರುವು.

**ರಾಘವ :–** ಅಂತಹ ನಿಜ ಗುರುವನ್ನು ನಾವು ನೋಡಬಹುದಾ, ನೋಡಲಾರೆವಾ?

**ರಾಜಯೋಗಾನಂದ :–** ಆತನನ್ನು ನೋಡಬಹುದು. ಆತನು ಭೂಮಿ ಮೇಲೆ ಬಂದಾಗ ಕಾಣಿಸುತ್ತಲೇ ಜ್ಞಾನವನ್ನು ತಿಳಿಸುತ್ತಾನಲ್ಲ! ಭೂಮಿ ಮೇಲೆ ಇಲ್ಲದಿರುವಾಗ ಯಾರೂ ನೋಡಲಾರರು. ಆತನು ಕಾಣಿಸಿ ಹೇಳಬಲ್ಲನು, ಕಾಣಿಸದಂತೆ ಸಹ ಹೇಳಬಲ್ಲನು.

**ರಾಘವ :–** ನೀವು ಗುರುವನ್ನು ನೋಡಿದ್ದೀರಾ?

**ರಾಜಯೋಗಾನಂದ :–** ನೋಡಿದ್ದೇನೆ. ನಾನು ನೋಡಿದಂತೆ ಹೇಳಿದರೂ ನೀವು ನಂಬುವುದಿಲ್ಲ.

**ರಾಘವ :–** ನೀವು ಗುರುವನ್ನು ನೋಡಿದಾಗ ಯಾವಾಗಾದರೂ ನಮಸ್ಕರಿಸಿದ್ದೀರಾ?

**ರಾಜಯೋಗಾನಂದ :–** ರಾಘವಾ ನೀನು ಸತ್ಯಾನ್ವೇಷಿ ಎನ್ನುವ ಹೆಸರನ್ನು ಉಳಿಸಿಕೊಳ್ಳುವುದಕ್ಕಾಗಿ ಕ್ರೈಮ್ ಪ್ರಶ್ನೆಗಳನ್ನು ಕೇಳಿದಂತೆ ಕೇಳುತ್ತಿದ್ದೀಯ. ನಾನೂ ಸಹ ಅಪರಾಧಿ ಹೇಳಿದಂತೆ ಹೇಳುತ್ತೇನೆ. ಈ ವಿಧವಾಗಿ ಕೇಳಿರುವುದಕ್ಕೆ ನನಗೆ ಸಂತೋಷ. ಆದರೇ ಹೇಳುತ್ತೇನೆ ಕೇಳು. ಗುರುವನ್ನು ನಾನು ನೋಡಿದಾಗ ಎಂದೂ ನಮಸ್ಕರಿಸಲಿಲ್ಲ.

**ರಾಘವ :–** ಗುರುವನ್ನು ನೋಡಿದಾಗ ಯಾರಾದರೂ ನಮಸ್ಕರಿಸುತ್ತಾರೆ ಅಲ್ಲವೆ! ನೀವೇಕೆ ನಮಸ್ಕರಿಸಲಿಲ್ಲ?

**ರಾಜಯೋಗಾನಂದ:–** ನಾನು ಆತನಿಗೆ ಶಿಷ್ಯನಲ್ಲವಲ್ಲವೆ!

**ರಾಘವ :–** ನೀವು ಆತನಿಂದ ಜ್ಞಾನವನ್ನು ತಿಳಿದುಕೊಂಡು ಆತನನ್ನು ಗುರು ಎಂದಾಗ ನೀವು ಆತನಿಗೆ ಶಿಷ್ಯರೇ ಅಲ್ಲವೆ!

**ರಾಜಯೋಗಾನಂದ :–** (ಒಂದು ಸಲ ನಕ್ಕು) ಭೂಮಿ ಮೇಲೆ ಮನುಷ್ಯರಿಗೆ ಗುರುವು ಇರಬಹುದು. ಆದರೆ ಗುರುವಿಗೆ ಶಿಷ್ಯರಿರುವುದಿಲ್ಲ. ಏಕೆಂದರೆ ಈತನು ಗುರುವು ಎಂದು ಯಾರೂ ನಿರೂಪಿಸಲಾರರು.

**ರಾಘವ :–** ನಾನು ಹೀಗೆ ಕೇಳುತ್ತಿರುವುದಕ್ಕೆ ಕ್ಷಮಿಸಿ ಸ್ವಾಮಿ!. ನಾನು ವಿನಯದಿಂದ ಕೇಳುವ ಪ್ರಶ್ನೆ ಏನೆಂದರೆ! ನೀವು ಇದಕ್ಕೂ ಮೊದಲೇ ಒಂದು ಮಾತನ್ನು ಹೇಳಿದ್ದೀರ. ನನಗೆ ಇಲ್ಲಿಯವರೆಗು ತಿಳಿಯದ ಜ್ಞಾನ ಈಗ ತಿಳಿದಿದೆ. ಆದ್ದರಿಂದ ನಿಮಗೆ ಹೇಳುತ್ತಿದ್ದೇನೆಂದು ಹೇಳಿದ್ದೀರ. ನಿಮ್ಮ ಗುರುವು ನಿಮಗೆ ಕಾಣಿಸಿ ಹೇಳಿದ್ದಾನಾ? ಕಾಣಿಸದಂತೆ ಹೇಳಿದ್ದಾನಾ?

**ರಾಜಯೊಗಾನಂದ :–** ಕಾಣಿಸಿ ಹೇಳಿದ್ದರೇ ಆತನನ್ನು ನಿಮಗೂ ಸಹ ತೋರಿಸುತ್ತಿದ್ದೆನು, ಕಾಣಿಸದಂತೆ ಹೇಳಿದ್ದಾನಾದ್ದರಿಂದ ನಿಮಗೆ ಈತನೇ ಗುರುವೆಂದು ಹೇಳಲಾರೆನು.

**ರಾಘವ :–** ಗುರುವು ಪ್ರಸ್ತುತ ಕಾಲದಲ್ಲಿ ಭೂಮಿ ಮೇಲೆ ಇದ್ದಾನಾ? ಭೂಮಿ ಮೇಲೆ ಇಲ್ಲವಾ?

**ರಾಜಯೋಗಾನಂದ :–** ಗುರುವು ಸ್ವಲ್ಪ ಕಾಲ ಭೂಮಿ ಮೇಲೆ ಇರುತ್ತಾನೆ, ಸ್ವಲ್ಪ ಕಾಲ ಭೂಮಿ ಮೇಲೆ ಇರುವುದಿಲ್ಲವೆನ್ನುವ ಮಾತು ವಾಸ್ತವವೇ. ಆದರೂ ಪ್ರಸ್ತುತ ಭೂಮಿಮೇಲೆಯೇ ಇದ್ದಾನೆ.

**ರಾಘವ :–** ಮತ್ತೊಂದು ಮಾತನ್ನು ಕೇಳಬಹುದಾ? ಬೇಡವಾ?

**ರಾಜಯೋಗಾನಂದ :–** ಒಂದು ಮಾತಲ್ಲ ಸಾವಿರ ಮಾತುಗಳನ್ನು ಕೇಳಿದರೂ ಸಮಾಧಾನ ಹೇಳುತ್ತೇನೆ. ಭಯವಿಲ್ಲದೆ, ಸಂಶಯಪಡದೇ ಕೇಳುವವನೇ ಬೇಗನೇ ಜ್ಞಾನಿ ಆಗುತ್ತಾನೆ. ಪ್ರಶ್ನಿಸದವನು ಜ್ಞಾನಿ ಆಗುವುದಕ್ಕೆ ಬಹಳ ಕಾಲ ಬೇಕಾಗುತ್ತದೆ. ಆದ್ದರಿಂದ ನೀನು ಕೇಳು.

**ರಾಘವ :–** ಪ್ರಸ್ತುತ ಭೂಮಿ ಮೇಲೆ ಕಾಣಿಸುತ್ತಾ ಇಲ್ಲೇ ಇರುವ ಈ ಮಹರ್ಷಿ ರವರನ್ನೇ ನಿಮ್ಮ ಗುರುವಾಗಿ ನಾವು ಗುರುತಿಸುತ್ತಿದ್ದೇವೆ. ನೀವು ಅಲ್ಲಗಳೆಯುತ್ತೀರಾ?

(ಅಲ್ಲೇ ಇರುವ ಮಹರ್ಷಿ ಆ ಮಾತಿಗೆ ನಗಾಡಿದನು.)

**ರಾಜಯೋಗಾನಂದ :–** ನಾನು ಸ್ವಲ್ಪ ಸಮಯದ ಮೊದಲೇ ಹೇಳಿದ್ದೇನೆ. ನನಗೆ ಈಗಲೆ ಜ್ಞಾನ ತಿಳಿದಿದೆ ಎಂದಿದ್ದೇನೆ. ಕೂಡಲೇ ನಿಮಗೆ ಹೇಳುತ್ತಿದ್ದೇನೆ ಎಂದು

ಸಹ ಹೇಳಿದ್ದೇನೆ. ನನ್ನ ಗುರುವು ನನ್ನ ಶರೀರದೊಳಗೆ ತಿಳಿಸಿದ ಜ್ಞಾನವನ್ನೇ ಹೇಳಿದ್ದೇನೆ. ಹೊರಗೆ ಕೇಳಿ ಹೇಳಲಿಲ್ಲವಲ್ಲವೆ! ನನಗೆ ಈಗಲೇ ತಿಳಿದ ಜ್ಞಾನ ಇಲ್ಲಿರುವ ಈತನು ನನಗೆ ಸ್ವಲ್ಪವೂ ಹೇಳಲಿಲ್ಲವಲ್ಲ! ಹಾಗೆ ಹೇಳಿದ್ದರೇ ಕೂಡಲೇ ಈತನು ಯಾರಿಗೂ ತಿಳಿಯದ ವಿಷಯವನ್ನು ಹೇಳಿದ್ದಾನೆ ಆದ್ದರಿಂದ ಈತನೇ ನನ್ನ ಗುರುವೆಂದು ನಿಮಗೆ ಆಗಲೇ ಹೇಳುತ್ತಿದ್ದೇನಲ್ಲ!

(ರಾಘವ ಎಷ್ಟು ಬುದ್ಧಿವಂತಿಕೆಯಿಂದ ಸತ್ಯಶೋಧನೆ ಮಾಡಬೇಕೆಂದು ಕೊಂಡರೂ ರಾಜಯೋಗಾನಂದ ಸ್ವಾಮಿ ಉತ್ತರಗಳು ಸತ್ಯಶೋಧನೆಗೆ ಸಿಗದಂತೆ ಸತ್ಯ ತಿಳಿಯದಂತೆ ಮಾಡುತ್ತಿವೆ. ಕೊನೆಗೆ ರಾಘವ ಹತ್ತಿರ ಪ್ರಶ್ನೆಗಳು ಇಲ್ಲದಂತೆ ಹೋಗಿವೆ. ಕೊನೆಯದಾಗಿ ಒಂದೇ ಒಂದು ಪ್ರಶ್ನೆಯನ್ನು ಕೇಳಿದ್ದಾನೆ.)

**ರಾಘವ :–** ಸ್ವಾಮಿ ನಾವು ಗುರುವನ್ನು ಹೇಗೆ ತಿಳಿಯುತ್ತೇವೆ.

**ರಾಜಯೋಗಾನಂದ :–** ಹಾಗೆ ಕೇಳಿದ್ದೀಯ ಒಳ್ಳೆಯದು. ಸಂಪೂರ್ಣ ಜ್ಞಾನ ತಿಳಿದು ಕರ್ಮವನ್ನು ಇಲ್ಲದಂತೆ ಮಾಡಿಕೊಂಡವನು ಗುರುವನ್ನು ಗುರುತಿಸಬಲ್ಲನು. ಅಲ್ಲಿಯವರೆಗು ದೇವರೆಂದರೆ ಹುಡುಕಬೇಕಾದವನೇ ಎನ್ನುವಂತೆ, ಗುರುವು ಎಂದರೆ ಗುರುತಿಸಲಾಗದವನು ಎಂದು ಹೇಳಬಹುದು.

(ಅಲ್ಲಿಗೆ ರಾಘವ ತನ್ನ ಪ್ರಶ್ನೆಗಳನ್ನು ನಿಲ್ಲಿಸಿದ್ದಾನೆ. ಪಕ್ಕದಲ್ಲೇ ಈಶ್ವರ್ ಆರೋಗ್ಯ ಚೆನ್ನಾಗಿಲ್ಲದಿರುವುದನ್ನು ನೋಡಿದ ರಾಜಯೋಗಾನಂದ ಸ್ವಾಮಿ ಜಮೀಂದಾರ್ ಕಡೆ ನೋಡಿ ಮಹರ್ಷಿಗೆ ತನ್ನ ನೋವನ್ನು ಹೇಳಿಕೊಳ್ಳುವಂತೆ ಸನ್ನೆ ಮಾಡಿದ್ದಾನೆ. ಆಗ ಜಮೀಂದಾರ್ ರಾವುಬಹುದೂರ್ ಅಲ್ಲೇ ಇರುವ ಮಹರ್ಷಿ ಪಾದಗಳ ಮೇಲೆ ಬಿದ್ದು ತನ್ನ ಕುಮಾರನನ್ನು ಕುರಿತು ಹೇಳುವುದಕ್ಕೆ ಆರಂಭಿಸಿದನು.)

**ಜಮೀಂದಾರ್ :–** ಸ್ವಾಮೀ! ಈತನು ನನಗೆ ಹೆತ್ತ ಮಗ ಅಲ್ಲದಿದ್ದರೂ, ಸಾಕಿಕೊಂಡ ಮಗನಾದರೂ ನಾವು ಈತನ ಪರಿಸ್ಥಿತಿ ನೋಡಿ ಸಹಿಸಿಕೊಳ್ಳಲಾರದೆ ಹೋಗುತ್ತಿದ್ದೇವೆ. ಈ ಮುಂಜಾನೆಯಿಂದ ಅಪಸ್ಮಾರಕ ಸ್ಥಿತಿಯಲ್ಲಿ ಉಳಿದಿದ್ದಾನೆ. ಇದಕ್ಕೂ ಮೊದಲು

ನಮ್ಮನ್ನು ಎಷ್ಟೋ ಜನ ಮೋಸಮಾಡಿದ್ದಾರೆ. ಎಲ್ಲ ಸಮಯಗಳಲ್ಲಿ ರಾಜಯೋಗಾನಂದ ಸ್ವಾಮಿಯೇ ನಮ್ಮನ್ನು ಕಾಪಾಡಿದ್ದಾನೆ. ಈ ಹುಡುಗ ಈಶ್ವರ್ ಅಷ್ಟಗ್ರಹಕೂಟಮಿ ದಿನದಂದು ಹುಟ್ಟಿರುವುದರಿಂದ ಈತನಿಂದ ಏನನ್ನೋ ಸಾಧಿಸಬೇಕೆಂದು ಬಹಳ ಜನ ಪ್ರಯತ್ನಗಳನ್ನು ಮಾಡಿದರೂ ನಮಗೆ ಕಷ್ಟ ಬಾರದಂತೆ ರಾಜಯೋಗಾನಂದ ಸ್ವಾಮಿ ಮಾಡಿದ್ದಾನೆ. ಇಲ್ಲಿಯವರೆಗು ಹೀಗೆ ಅನಾರೋಗ್ಯದಿಂದ ಎಂದೂ ಬಿದ್ದಿರಲಿಲ್ಲ. ಹೀಗೆ ಇರುವುದರಿಂದ ನನಗೆ ಬಹಳ ಭಯವಾಗುತ್ತಿದೆ. ರಾಜಯೋಗನಂದ ಸ್ವಾಮಿ, ಈಶ್ವರ್ ವಿಷಯದಲ್ಲಿ ಏನು ಮಾಡಲಾರೆನು ಈತನಿಗೆ ಮರಣ ಸಹ ಸಂಭವಿಸಬಹುದು ಎಂದು ತಿಳಿಸಿದ್ದಾನೆ. ಈಗ ನಮಗೆ ನೀವೇ ದಿಕ್ಕು.

**ಮಹರ್ಷಿ :–** ನಿಮಗೆ ರಾಜಯೋಗಾನಂದ ಸ್ವಾಮಿ ಹೇಳಿರುವುದು ವಾಸ್ತವವೇ. ಈತನಿಗೆ ಹದಿನಾರನೇ ಸಂವತ್ಸರ ಪೂರ್ತಿ ಆಗುವುದರೊಳಗೆ ಮರಣಿಸುವ ಪ್ರಮಾದವಿದೆ. ಅದನ್ನು ಯಾರೂ ತಪ್ಪಿಸಲಾರರು.

**ಜಮೀಂದಾರ್ :–** ನಿವು ಸಮಸ್ತವೂ ತಿಳಿದವರು ನೀವು ಈತನನ್ನು ಕಾಪಾಡಿ ನಮ್ಮನ್ನು ಉದ್ಧರಿಸಬೇಕೆಂದು ಕೋರುತ್ತಿದ್ದೇವೆ.

**ಮಹರ್ಷಿ :–** ನಿಮ್ಮ ಈಶ್ವರ್‌ನನ್ನು ಕಾಪಾಡುವುದಕ್ಕೆ ರಾಜಯೋಗಾನಂದ ಸ್ವಾಮಿಯೇ ಸಮರ್ಥನು. ಆತನನ್ನೇ ಕೇಳಿ.

**ರಾಜಯೋಗಾನಂದ :–** ಮಹಾತ್ಮಾ ನಿಜ ಹೇಳಬೇಕೆಂದರೆ ನಿಮ್ಮ ಮುಂದೆ ನಾವು ಸೂರ್ಯನ ಪ್ರಕಾಶದ ಮುಂದೆ ಮಿಂಚು ಹುಳದಂತಹವರು. ಆತನ ಕರ್ಮವನ್ನು ಬದಲಾಯಿಸುವವರು ಭೂಮಿ ಮೇಲೆ ನೀವು ಹೊರತು ಯಾರೂ ಇಲ್ಲ. ಆತನ ಮರಣ ಜಾತಕದಲ್ಲೇ ನಿರ್ಣಯಿಸಲ್ಪಟ್ಟಿದೆ. ನಿರ್ಣಯಿಸಲ್ಪಟ್ಟಿರುವ ಕರ್ಮವನ್ನು ಬದಲಾಯಿಸುವುದಕ್ಕೆ ನನ್ನಂತಹವರು ಸಾವಿರ ಜನ ಗುಂಪುಕೂಡಿದರೂ ಆಗದ ಕೆಲಸವೇ. ಈತನ ಹಣೆ ಬರಹವನ್ನು ಅಳಿಸಿ ಮರು ಬರಹವನ್ನು ಬರೆಯುವ ಶಕ್ತಿ ನಿಮಗೆ ಒಬ್ಬರಿಗೇ ಇದೆ. ಏನು ಮಾಡಿದರೂ ನೀವೇ ಮಾಡಬೇಕು.

(ಆ ಮಾತುಗಳನ್ನು ಕೇಳಿದ ರಾಘವನಿಗೆ ಆ ಮಹರ್ಷಿಯೇ ಗುರುವಾಗಿ ರಬಹುದೇನೋ ಎನ್ನುವ ಅನುಮಾನ ಬಂದಿತು. ಏಕೆಂದರೆ ಹಣೆಯ ಬರಹವನ್ನು ಹೊರಸಿ ಹೊಸ ಬರಹವನ್ನು ಬರೆಯುವ ಸಾಮರ್ಥ್ಯ ಒಬ್ಬ ಗುರುವಿಗೇ ಇರುತ್ತದೆಂದು ಸ್ವತಃ ರಾಜಯೋಗಾನಂದ ಸ್ವಾಮಿಯೇ ಒಂದು ಸಲ ಹೇಳಿದಾಗ ಕೇಳಿದ್ದಾನೆ. ಆದ್ದರಿಂದ ಆ ಮಹರ್ಷಿಯನ್ನು ಗುರುವು ಎಂದು ಅಂದುಕೊಳ್ಳುವುದಕ್ಕೆ ಆಧಾರ ಸಿಕ್ಕಿದಂತಾಯಿತು. ಆಗ ಮಹರ್ಷಿ ಹೀಗೆ ಹೇಳಿದ್ದಾನೆ.)

**ಮಹರ್ಷಿ :–** ಜಮೀಂದಾರ್‌ರವರೆ! ರಾಜಯೋಗಾನಂದ ಸ್ವಾಮಿ ನನ್ನ ಮೇಲೆ ಗೌರವ ಭಾವನೆಯಿಂದ ಹಾಗೆ ಹೇಳುತ್ತಿದ್ದಾನೆ. ಆತನಿಗಿಂತ ಎಲ್ಲಾ ರಂಗಗಳಲ್ಲಿ ಎಷ್ಟೋ ಪಟ್ಟು ಚಿಕ್ಕವನು, ಆತನಿಂದ ಆಗದ ಕೆಲಸ ನನ್ನಿಂದ ಆಗುತ್ತದೆನ್ನುವುದು ಹಾಸ್ಯಾಸ್ಪದವಾಗುತ್ತದೆ. ನನಗೆ ತಿಳಿದ ಉಪಾಯವನ್ನು ಒಂದನ್ನು ಹೇಳುತ್ತೇನೆ. ಅದರ ಪ್ರಕಾರ ಪ್ರಯತ್ನ ಮಾಡಿ ನೋಡಿರಿ.

**ರಾಜಯೋಗಾನಂದ :–** ಎಲ್ಲಾ ರಂಗಗಳಲ್ಲಿ ಎನ್ನಬಾರದು ಆದರೆ ಕೆಲವು ರಂಗಗಳಲ್ಲಿ ಆತನಿಗಿಂತ ನಾನು ದೊಡ್ಡವನೇ ಅದರೇ ಏನು ಪ್ರಯೋಜನ? ಆತನು ಯಾವುದರಲ್ಲಿ ದೊಡ್ಡವನೋ ಅದರಲ್ಲಿ ನಾನು ಬಹಳ ಚಿಕ್ಕವನು. ಆದ್ದರಿಂದ ಆತನು ಹೇಳುವ ಉಪಾಯವನ್ನೇ ಶ್ರದ್ಧೆಯಿಂದ ಕೇಳಿ ಅನುಸರಿಸು.

**ಜಮೀಂದಾರ್ :–** ನೀವು ಹೇಗೆ ಹೇಳಿದರೆ ಹಾಗೆ ನಾನು ಮಾಡುತ್ತೇನೆ. ನಾನು ಏನು ಮಾಡಬೇಕೋ ಹೇಳಿ ಸ್ವಾಮಿ.

**ಮಹರ್ಷಿ :–** ನೀನು ಈ ಹುಡುಗನನ್ನು ಮನೆಗೆ ಕರೆದುಕೊಂಡು ಹೋಗು. ನಂತರ ಆಲೋಚಿಸುತ್ತೇನೆ.

(ಆ ಮಾತು ಕೇಳಿದ ಜಮೀಂದಾರನಿಗೆ ಮಹರ್ಷಿಯ ಮಾತು ಸಂದಿಗ್ಧದಲ್ಲಿ ಬೀಳಿಸಿತು. ಈಶ್ವರ್ ಸಾವು ಬದುಕುಗಳ ಮಧ್ಯೆ ಇದ್ದಾನೆ. ಅಂತಹವನಿಗೆ ತಿಳಿದ ಚಿಕಿತ್ಸೆಯನ್ನು ಮಾಡಿ ಅಪಸ್ಮಾರಕ ಸ್ಥಿತಿಯಿಂದ ಹೊರಬೀಳುವ ಹಾಗೆ ಮಾಡದಂತೆ ಮನೆಗೆ ಕರೆದುಕೊಂಡು ಹೋಗೆನ್ನುವುದು ಇಷ್ಟವಾಗಲಿಲ್ಲ. ಏನೂ ಮಾಡಲಾಗದ

ಈಶ್ವರ್ ಮೇಲೆ ಅಲ್ಲಿರುವವರು ಶ್ರದ್ಧೆಯನ್ನು ತೋರಿಸುತ್ತಿಲ್ಲವೆಂದುಕೊಂಡ ಜಮೀಂದಾರ್ ಈಶ್ವರ್‌ನನ್ನು ಮನೆಗೆ ಕರೆದುಕೊಂಡುಹೋಗುವ ಪ್ರಯತ್ನದಲ್ಲಿ ಇದ್ದನು. ಅಷ್ಟರಲ್ಲಿ ದುರದೃಷ್ಟವಶಾತ್ತು ಈಶ್ವರ್ ಶರೀರದಲ್ಲಿ ಶ್ವಾಸವು ನಿಂತುಹೋಯಿತು. ಆತನ ಶರೀರದಲ್ಲಿ ಕದಲಿಕೆ ಶಕ್ತಿ ನಿಂತುಹೋಯಿತು. ಅದನ್ನು ಗಮನಿಸಿದ ಜಮೀಂದಾರ್ ರಾವುಬಹದೂರ್ ಜೋರಾಗಿ ಅತ್ತನು. ಈಶ್ವರ್ ಇನ್ನು ಇಲ್ಲವೆಂದು, ಯಾರ ಸಹಾಯವೂ ಇಲ್ಲದಂತೆ ಹೋಗಿದ್ದಾನೆಂದು, ಎಷ್ಟು ಅಂಗಲಾಚಿದರೂ ಸ್ವಲ್ಪವಾದರೂ ಗಮನ ಹರಿಸದೆ ತಮ್ಮ ವಿಷಯಗಳು ಮಾತನಾಡಿಕೊಳ್ಳುತ್ತಾ ಕಾಲವನ್ನು ವೃಥಾ ಮಾಡಿ ಮನೆಗೆ ಕರೆದುಕೊಂಡುಹೋಗು, ನಂತರ ಆಲೋಚಿಸುತ್ತೇವೆನ್ನುವುದು ತನಗೆ ಇಷ್ಟವಾಗಲಿಲ್ಲವೆಂದು, ಈಗ ಮರಣಿಸಿದ ನಂತರ ಏನು ಮಾಡುತ್ತೀರೆಂದು ಜಮೀಂದಾರ್ ಪ್ರಶ್ನಿಸಿದನು. ಆಗ ರಾಜಯೋಗಾ ನಂದ ಸ್ವಾಮಿ ಜಮೀಂದಾರ ನೊಂದಿಗೆ ಹೀಗೆ ಹೇಳಿದನು.)

**ರಾಜಯೋಗಾನಂದ :–** ರಾವುಬಹದೂರ್‌ರವರೆ, ನಾನು ಕೆಲವು ನಿಮಿಷಗಳ ಹಿಂದೆಯೇ ಹೇಳಿದ್ದೇನೆ. ಈತನ ಜಾತಕದಲ್ಲಿ ಕರ್ಮನಿರ್ಣಯದ ಪ್ರಕಾರ ಮರಣ ತಪ್ಪುವುದಿಲ್ಲವೆಂದು ಹೇಳುವುದು ನೀವು ಕೇಳಲಿಲ್ಲವೆ! ಆ ಕರ್ಮವನ್ನು ಬದಲಾಯಿಸುವುದಕ್ಕೆ ನನ್ನಂತಹವರು ಸಾವಿರ ಜನ ಪ್ರಯತ್ನಿಸಿದರೂ ನಡೆಯದ ಕೆಲಸ ಎಂದು ಸಹ ಹೇಳಿದ್ದೇನೆ. ಈ ಮಹರ್ಷಿಯೇ ಏನು ಮಾಡಿದರೂ ಮಾಡಬಲ್ಲನೆಂದು, ಆತನು ಹೇಳಿದಂತೆ ಕೇಳೆಂದು ಹೇಳಿದ್ದೇನೆ. ನೀನು ನೀವು ಹೇಗೆ ಹೇಳಿದರೇ ಹಾಗೇ ಮಾಡುತ್ತೇನೆಂದು ಹೇಳಿದ್ದೀಯ. ಮಹರ್ಷಿ ನಿನಗೆ ಈಶ್ವರ್‌ನನ್ನು ಮನೆಗೆ ಕರೆದುಕೊಂಡು ಹೋಗು. ನಂತರ ಆಲೋಚಿಸುತ್ತೇನೆಂದಿದ್ದಾನೆ. ಆ ಮಾತು ಕೇಳಿದ ಕೂಡಲೇ ಅಲ್ಲಿಯವರೆಗು ನಿನಗೆ ನಮ್ಮ ಮೇಲೆ ನಿನಗಿರುವ ವಿಶ್ವಾಸ ಇಲ್ಲದಂತೆ ಹೋಗಿದೆ. ನಾವು ನಿನ್ನ ವಿಷಯದಲ್ಲಿ ಶ್ರದ್ಧೆ ತೆಗೆದುಕೊಂಡಿಲ್ಲ ವೆಂದು, ಅಶ್ರದ್ಧೆಯಿಂದ ಮಾತನಾಡುತ್ತಿದ್ದೇವೆಂದು ತಿಳಿದುಕೊಂಡಿದ್ದೀಯ. ನೀನು ನಮ್ಮ ಮೇಲೆ ವಿಶ್ವಾಸ ಇಲ್ಲದಂತೆ ಮನಸ್ಸಿನಲ್ಲಿ ಹಾಗೆ ಅಂದುಕೊಳ್ಳುವುದರಿಂದಲೇ ಈಗ ಹೀಗೆ ನಿನ್ನ ಮಗ ಈಶ್ವರ್ ಮರಣಿಸುವುದು ನಡೆದಿದೆ. ಈಗಲಾದರೂ ನಿನ್ನ ತಪ್ಪನ್ನು ನೀನು ತಿಳಿದುಕೊಳ್ಳದೆ ಮರಣಿಸಿದ ನಂತರ ಏನು ಮಾಡುತ್ತೀರೆಂದು

ಗೌರವವಿಲ್ಲದಂತೆ ಪ್ರಶ್ನಿಸುತ್ತಿದ್ದೀಯ. ನಿಮ್ಮಂತಹ ಅಜ್ಞಾನಿಗಳಿಗೆ ಒಳ್ಳೆಯದನ್ನು ಮಾಡಬೇಕೆಂದುಕೊಳ್ಳುವುದೇ ತಪ್ಪೆಂದು ನಾವು ಅಂದುಕೊಳ್ಳುವಂತೆ ಮಾಡಿದ್ದೀಯ. ನಾನು ನಿನ್ನನ್ನು ಒಂದು ಪ್ರಶ್ನೆಯನ್ನು ಕೇಳುತ್ತೇನೆ ಉತ್ತರ ಹೇಳುತ್ತೀಯ? ಈಶ್ವರ್ ಮೇಲೆ ನಮಗಿರುವ ಶ್ರದ್ಧೆ ನಿನಗೆ ಇದೆಯಾ? ಈಶ್ವರ್ ವಿಷಯದಲ್ಲಿ ನೀನು ಮಾಡದ ಕೆಲಸಗಳನ್ನು ಎಷ್ಟೋ ಮಾಡಿದ್ದೇವೆ. ನಮ್ಮ ಜೋಕ್ಯ ಇಲ್ಲದೇ ಹೋಗಿದ್ದರೇ ನಿನ್ನ ಮಗ ಎಂದೋ ಮರಣಿಸುತ್ತಿದ್ದನು. ಆ ದಿನ ಮಾಂತ್ರಿಕರು ಈಶ್ವರ್‌ಗೆ ನಿನ್ನಿಂದಲೇ ಬೊಟ್ಟನ್ನು ಇಡಿಸಿದಾಗ, ನಾನೂ ಸಹ ಏನೂ ಮಾಡಲಾಗದ ಪರಿಸ್ಥಿತಿಯಲ್ಲಿ ಇರುವಾಗ ಊರೆಲ್ಲಾ ಕರೆಂಟ್ ಹೋಗದಿದ್ದರೂ, ಕೊನೆಗೆ ನಿಮ್ಮ ಮನೆಯಲ್ಲಿ ಕರೆಂಟ್ ಇದ್ದರೂ ಒಬ್ಬ ಈಶ್ವರ್ ರೂಮ್‌ನಲ್ಲಿಯೇ ಮಾತ್ರ ಕರೆಂಟ್ ಇಲ್ಲದಂತೆ ಹೋಗಿರುವುದಕ್ಕೆ ಕಾರಣ ಯಾರೋ ನಿನಗೆ ತಿಳಿದಿದೆಯಾ? ಈಗ ಇಲ್ಲಿರುವ ಈ ಮಹರ್ಷಿಯೇ ಕಾರಣ. ನಿನ್ನನ್ನು ನಿನ್ನ ಕುಟುಂಬವನ್ನು ಹಿಂಬಾಲಿಸುತ್ತಿರುವ ತಪಸ್ವಿಬಾಬಾನನ್ನು, ಮುನೆಪ್ಪನನ್ನು ಭೂಮಿ ಮೇಲೆ ಇಲ್ಲದಂತೆ ಮಾಡಿರುವುದು ಯಾರೋ ತಿಳಿದಿದೆಯಾ? ಅದಕ್ಕೆ ಕಾರಣ ಈತನೇ. ಹೀಗೆ ನಿನಗೆ ತಿಳಿಯದ ಎಷ್ಟೋ ನಡೆದಿರುವುದಕ್ಕೆ, ಕೊನೆಗೆ ಈ ದಕ್ಷಿಣ ದೇಶದಲ್ಲಿ ಇರುವ ಮನುಷ್ಯರೆಲ್ಲರೂ ಈ ದಿನ ನಡೆಯುವ ವೈಪರೀತ್ಯಕ್ಕೆ ಮರಣಿಸದಂತೆ ಉಳಿದಿರುವುದಕ್ಕೆ ಈತನೇ ಕಾರಣ. ಈ ದಿನ ನಮಗು ಸಹ ಮರಣ ತಪ್ಪುವುದಿಲ್ಲವೆಂದು ಎಷ್ಟೋ ಭಯಪಟ್ಟಿದ್ದೇವೆ. ಕೊನೆಗೆ ನಮ್ಮನ್ನು ಪ್ರಾಣದಿಂದ ಉಳಿಸಿದ ವ್ಯಕ್ತಿ ಈತ. ನಮ್ಮೆಲ್ಲರ ಶ್ರೇಯಸ್ಸಿಗಾಗಿ ಭೂಮಿ ಮೇಲೆ ಇಲ್ಲದ ವ್ಯಕ್ತಿ ಭೂಮಿ ಮೇಲೆ ಬಂದಿದ್ದಾನೆ. ಭೂಮಿ ಮೇಲೆ ಕಾಣಿಸದವನು ನಮ್ಮ ಎದುರಿಗೆ ಕಾಣಿಸಿದರೇ, ಆತನನ್ನು ಅವಹೇಳನ ಭಾವನೆಯಿಂದ ಮಾತನಾಡುವುದು ನಿನ್ನ ಬುದ್ಧಿ ಕಡಿಮೆ ಕೆಲಸ ಮತ್ತು ನಿನ್ನ ಅಜ್ಞಾನ. ಇಂದಿಗಾದರೂ ಮೀರಿ ಹೋಗಿರುವುದು ಏನೂ ಇಲ್ಲ. ಆತನಿಗೆ ನಮಸ್ಕರಿಸಿ ಕ್ಷಮಾಪಣೆ ಹೇಳಿಕೋ!

**ಜಮೀಂದಾರ್ :–** ಸ್ವಾಮಿ ನಾನು ಪೂರ್ತಿ ಅಜ್ಞಾನಿಯೇ. ತಿಳಿಯದ ಆವೇಶದಲ್ಲಿ ಮಗ ಮರಣಿಸಿದ್ದಾನೆನ್ನುವ ನೋವಿನಿಂದ ಹಾಗೆ ಮಾತನಾಡಿದ್ದೇನೆ. ನನ್ನ ಪರಿಸ್ಥಿತಿ

ಅರ್ಥ ಮಾಡಿಕೊಂಡು ನನ್ನನ್ನು ನೀವು ಕ್ಷಮಿಸಿ. ನನ್ನನ್ನು ನಿಮ್ಮ ಕೋಪಕ್ಕೆ ಗುರಿಯಾಗದಂತೆ ನೋಡಿ.

**ಮಹರ್ಷಿ :–** ನೀನು ಮಾತನಾಡಿರುವುದಕ್ಕೆ ನಮಗೆ ಏನೂ ಕೋಪವಿಲ್ಲ. ಏಕೆಂದರೆ ನಿನ್ನ ಸ್ಥಾನದಲ್ಲಿ ಯಾರಿದ್ದರೂ ಹಾಗೇ ಮಾತನಾಡುತ್ತಾರೆ. ನೀವು ಹೇಗೆ ಹೇಳಿದರೇ ಹಾಗೇ ಮಾಡುತ್ತೇನೆಂದವನು. ನಾನು ಹೇಳಿದಂತೆ ಮಾಡದಂತೆ ನೀನು ಮಾತನಾಡುವುದು ನಿಜವಾಗಿ ನಿನ್ನ ತಪ್ಪೇ ಅಲ್ಲವೆ! ಅಷ್ಟಕ್ಕೂ ನಾನು ಹೇಳಿದಂತೆ ಕೇಳುತ್ತೇನೆಂದು ಎಷ್ಟೋ ಭಕ್ತಿಯಿಂದ ಹೇಳಿದ್ದೀಯಲ್ಲ! ನಂತರ ನಾನು ಹೇಳಿದಂತೆ ಏಕೆ ಮಾಡಲಿಲ್ಲ?

**ಜಮೀಂದಾರ್ :–** ಸ್ವಾಮೀ! ನೀವು ಹೇಗೆ ಹೇಳಿದರೇ ಹಾಗೇ ಮಾಡುತ್ತೇನೆ. ಈಗ ನಾನು ಏನು ಮಾಡಬೇಕು?

**ಮಹರ್ಷಿ :–** ಆದರೆ ನೀನು ಕೂಡಲೇ ಈಶ್ವರ್‌ನನ್ನು ತೆಗೆದುಕೊಂಡು ಹೋಗಿ, ಈತನ ಮರಣವಾರ್ತೆಯನ್ನು ಎಲ್ಲರಿಗೂ ತಿಳಿಸಿ, ನಂತರ ನೀನು ಮಾಡಬೇಕಾದ ಕಾರ್ಯಗಳು ಮಾಡಿಕೋ. ಈಗ ಸುಮಾರು ಎಂಟು ಗಂಟೆಯಾಗುತ್ತಿದೆ. ಇಲ್ಲಿಂದ ನೀನು ಮನೆಗೆ ಹೋಗುವುದಕ್ಕೆ ಅರ್ಧ ಗಂಟೆಗಿಂತ ಹೆಚ್ಚಿನ ಸಮಯವಾಗುತ್ತದೆ. ಹೇಗೂ ಮನೆಗೆ ಒಂಬತ್ತು ಗಂಟೆಗೆ ಹೋಗುತ್ತೀಯ. ಈ ದಿನ ಸಂಧ್ಯಾಸಮಯ ಬರುವುದಕ್ಕಿಂತ ಮೊದಲೇ ಸಂಜೆ ಐದು ಗಂಟೆಗೆ ಈತನನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗಿರಿ...

(ಜಮೀಂದಾರ್ ಮೇಲ್ನೋಟಕ್ಕೆ ಭಕ್ತಿಯಿಂದ ಮಾತನಾಡಿದರೂ, ಒಳಗೆ ಮಾತ್ರ ನೀವು ಹೇಳಿದರೂ ಹೇಳದಿದ್ದರೂ ನಾವು ಮಾಡುವುದು ಆ ಕೆಲಸವೇ ಎಂದುಕೊಂಡು, ಅಲ್ಲಿಂದ ಈಶ್ವರ್‌ನನ್ನು ತನ್ನ ಕಾರಿನಲ್ಲಿ ತೆಗೆದುಕೊಂಡು ಹೋದನು. ಇದೆಲ್ಲಾ ಪಕ್ಕದಲ್ಲಿದ್ದು ಗಮನಿಸುತ್ತಿರುವ ರಾಘವನಿಗೆ ಏನೂ ಅರ್ಥವಾಗಲಿಲ್ಲ. ಕೆಲವು ರಂಗಗಳಲ್ಲಿ ಮಹರ್ಷಿಗಿಂತ ತಾನೇ ದೊಡ್ಡವನೆಂದು ಹೇಳುತ್ತಿರುವ ರಾಜಯೋಗಾನಂದಸ್ವಾಮಿ, ಕೊನೆಗೆ ತಮ್ಮನ್ನು ಮರಣಿಸದಂತೆ ರಕ್ಷಿಸಿದವನು

ಈತನೇ ಎಂದು ಮಹರ್ಷಿಯನ್ನು ಕುರಿತು ಜಮೀಂದಾರನಿಗೆ ಬಹಳ ದೊಡ್ಡದಾಗಿ ಹೇಳಿದ್ದಾನೆ. ಅಷ್ಟೇ ಅಲ್ಲ ಜಮೀಂದಾರ್ ಮನೆಯಲ್ಲಿ ಈಶ್ವರ್ ರೂಮಿನಲ್ಲಿ ಕರೆಂಟ್ ಹೋದ ವಿಷಯವನ್ನು ಹೇಳುತ್ತಾ, ಅದಕ್ಕೆ ಕಾರಣ ಮಹರ್ಷಿಯೇ ಎಂದು ದೊಡ್ಡದಾಗಿ ಹೇಳಿದ್ದಾನೆ. ಕೊನೆಗೆ ಜಮೀಂದಾರನನ್ನು ಆಳುವಂತೆ ಮಾಡಿ, ನಾವು ಹೇಳಿದಂತೆ ಕೇಳದಿರುವುದು ನಿನ್ನದೆ ತಪ್ಪು ಎಂದು ಹೇಳಿ ಕಳುಹಿಸಿದ್ದಾರೆ. ಈಶ್ವರ್ ಮರಣಿಸಿದರೂ ಏನೂ ಹೇಳದಂತೆ ನಮ್ಮ ಮಾತು ಕೇಳುವುದೇ ನಿನ್ನ ಕರ್ತವ್ಯ. ಸಂಜೆ ಐದು ಗಂಟೆಗಳೊಳಗೆ ಸ್ಮಶಾನಕ್ಕೆ ತೆಗೆದುಕೊಂಡು ಹೋಗಲು ಹೇಳಿದ್ದಾನೆ. ಇದರಲ್ಲಿ ಇವರ ಮಾತು ಕೇಳುವುದೇನಿದೆ? ಆತನು ಮಾಡುವುದು ಅದೇ ಅಲ್ಲವೆ! ರಾಜಯೋಗಾನಂದ ಸ್ವಾಮಿ ಜ್ಞಾನದಲ್ಲಿ ಎಷ್ಟೋ ಉನ್ನತವಾದವರು, ಗುಹೆಯಲ್ಲಿನ ಮಹರ್ಷಿ ಸರ್ವವೂ ತಿಳಿದ ಮಹಾತ್ಮನು. ಇಷ್ಟು ದೊಡ್ಡವರು ಜಮೀಂದಾರನನ್ನು ಹಾಗೆ ಕಳುಹಿಸುವುದು ನೋಡುವುದಕ್ಕೆ ಸ್ವಲ್ಪ ವಿಡ್ಡೂರ ಎನ್ನುವಂತೆ ಕಾಣಿಸಿದರೂ, ಇದರಲ್ಲಿ ನನಗೆ ಅರ್ಥವಾಗದ ಪಿತೂರಿ ಏನೋ ಇರುತ್ತದೆ. **ಮೇಲ್ನೋಟಕ್ಕೆ ಕಾಣಿಸುವುದು ಮನುಷ್ಯನನ್ನು ವಕ್ರಮಾರ್ಗ ಹಿಡಿಸುತ್ತದೆಂದು ರಾಜಯೋಗಾನಂದ ಸ್ವಾಮಿ ಹೇಳಿದಾಗ ಕೇಳಿದ್ದೇನೆ. ಆದ್ದರಿಂದ ಕಾಣಿಸುವುದನ್ನು ಬಿಟ್ಟು ಕಾಣಿಸದಿರುವುದು ಯಾವುದಾದರೂ ಇದೆಯೇನೋ ಕಾದು ನೋಡೋಣವೆಂದು ರಾಘವ ಅಂದುಕೊಂಡಿದ್ದಾನೆ.**

ಜಮೀಂದಾರ್ ರಾವುಬಹದೂರ್ ಈಶ್ವರ್ ಶರೀರವನ್ನು ಚನ್ನಪಟ್ಟಣಕ್ಕೆ ಕರೆದುಕೊಂಡುಬಂದು, ಈಶ್ವರ್ ಮರಣಿಸಿದ ವಾರ್ತೆಯನ್ನು ತನ್ನ ಬಂಧುಗಳಿಗೂ, ಮಿತ್ರರಿಗೂ ತಿಳಿಸಿದ್ದಾನೆ. ಈಶ್ವರ್‌ನ ಮರಣವಾರ್ತೆ ಚನ್ನಪಟ್ಟಣದ ಜನರೆಲ್ಲರಿಗೂ ತಿಳಿಯಿತು. ಆ ಊರಿನ ಪ್ರಜೆಗಳಲ್ಲಿ ಉನ್ನತವಾದ ಗೌರವವನ್ನು, ಅಪಾರವಾದ ಪ್ರೇಮವನ್ನು ಸಂಪಾದಿಸಿಕೊಂಡ ಈಶ್ವರ್ ಮರಣಿಸಿದ್ದಾನೆನ್ನುವ ವಾರ್ತೆಯನ್ನು ಚನ್ನಪಟ್ಟಣವೊಂದರ ಜನರು ನಂಬಲಾರದೆ ಹೋದರು. ರಾವುಬಹುದೂರ್ ಮನೆ ಹತ್ತಿರಕ್ಕೆ ಸಾವಿರಾರು ಜನರು ಬಂದರು. ಈಶ್ವರ್ ವಿಷಯವನ್ನು ಕೇಳಿದ ಕೂಡಲೇ ಯಾರಿಗೂ ಸಹ ಹಸಿವಾಗದೆ ಹೋಗಿದೆ. ಕೆಲವು ಸಾವಿರ ಜನರು ಜಮೀಂದಾರ್ ಮನೆ ಹತ್ತಿರಕ್ಕೆ ಬರುವುದರಿಂದ ಅಲ್ಲಿ ತುಳಿದಾಟ ನಡೆಯದಂತೆ

ಪೊಲೀಸು ಬಂದೋಬಸ್ತು ಸಹ ಮಾಡಲಾಯಿತು. ಅಲ್ಲಿಗೆ ಬಂದವರು ಯುವಕನಾದ ಈಶ್ವರ್ ಮರಣಿಸುವುದರಿಂದ ಬಾಧೆಯಿಂದ ಅವರು ಅವರ ಮನೆಗೆ ಹೋಗದಂತೆ ಎಲ್ಲರೂ ಜಮೀಂದಾರ್ ಮನೆ ಹತ್ತಿರವೇ ಇದ್ದಾರೆ. ಈಶ್ವರ್‌ನನ್ನು ಕುರಿತು ಆತನ ಸ್ವಭಾವವನ್ನು ಕುರಿತು ಮಾತನಾಡದವರಿಲ್ಲ. ಅಂತಹ ಯುವಕನಾದ ಈಶ್ವರ್ ಮರಣಿಸಿರುವುದಕ್ಕೆ ದೇವರ ಹತ್ತಿರ ನ್ಯಾಯವಿಲ್ಲವೆಂದು, ಒಳ್ಳೆಯವರನ್ನು ಬೇಗನೇ ತೆಗೆದುಕೊಂಡು ಹೋಗುತ್ತಾನೆಂದೂ, ದೇವರನ್ನು ನಿಂದಿಸುವುದು ಪ್ರಾರಂಭಿಸಿದರು. ಅಷ್ಟರಲ್ಲಿ ಸಂಜೆ ನಾಲ್ಕು ಗಂಟೆ ಆಯಿತು. ಈಶ್ವರ್‌ನನ್ನು ಭಾರೀ ಮೆರವಣಿಗೆಯಿಂದ ಸ್ಮಶಾನಕ್ಕೆ ತೆಗೆದುಕೊಂಡು ಹೋಗುವುದಕ್ಕೆ ಮಂಗಳವಾದ್ಯಗಳು ಸಹ ಬಂದವು.

ಸಂಜೆ ನಾಲ್ಕುವರೆ ಗಂಟೆಗಳ ಸಮಯಕ್ಕೆ ರಾಜಯೋಗಾನಂದಸ್ವಾಮಿ, ಭೂಗರ್ಭದಿಂದ ಹೊರಗೆ ಬಂದ ಮಹರ್ಷಿ, ರಾಘವ, ರಾಘವನ ಹೆಂಡತಿಯರು ಉಳಿದ ಆಶ್ರಮವಾಸರು ಎಲ್ಲರೂ ಜಮೀಂದಾರ್ ಮನೆ ಹತ್ತಿರಕ್ಕೆ ಬಂದರು. ಸ್ವಾಮಿ, ಮಹರ್ಷಿ ತಮ್ಮ ಮನೆ ಹತ್ತಿರಕ್ಕೆ ಬರುವುದು ಜಮೀಂದಾರನಿಗೆ ಊಹಿಸದ ವಿಷಯವಾಯಿತು. ಹಾಗೆ ಅವರು ಬರುವುದರಿಂದ ಅಲ್ಲಿಯವರೆಗು ದುಖಃದಲ್ಲಿರುವ ರಾವುಬಹುದೂರ್‌ಗೆ ತಿಳಿಯದ ಸಂತೋಷವಾಯಿತು. ಸ್ವಾಮಿಯನ್ನು, ಮಹರ್ಷಿಯನ್ನು ಆಹ್ವಾನಿಸಿ ಅವರು ಕುಳಿತುಕೊಳ್ಳುವುದಕ್ಕೆ ಸ್ವಲ್ಪ ಎತ್ತರವಾದ ಪ್ರಾಂತದಲ್ಲಿ ಏರ್ಪಾಟನ್ನು ಮಾಡಿದರು. ಆಗ ಅಲ್ಲಿರುವ ಜನರನ್ನು ನೋಡಿ ರಾಜಯೋಗಾನಂದ ಸ್ವಾಮಿ ಏನೋ ಹೇಳುವುದಕ್ಕೆ ಪ್ರಯತ್ನಿಸುತ್ತಿರುವಾಗ, ಕೂಡಲೇ ಆತನು ಮಾತನಾಡುವುದಕ್ಕೆ ಮೈಕನ್ನು ಏರ್ಪಾಟು ಮಾಡಿದರು. ಆಗ ಮೈಕಿನಲ್ಲಿ ರಾಜಯೋಗಾನಂದ ಸ್ವಾಮಿ ಹೀಗೆ ಹೇಳಿದ್ದಾನೆ. ಆಗ ಅಲ್ಲಿ ಗುಂಪುಕೂಡಿದ ಕೆಲವು ಸಾವಿರಾರುಜನರು ಸ್ವಾಮಿ ಏನು ಹೇಳುತ್ತಾರೋ ಅದನ್ನು ಶ್ರದ್ಧೆಯಿಂದ ಕೇಳಬೇಕೆಂದು ತಮಗೆ ತಾವು ನಿಶ್ಶಬ್ದದಿಂದ ನಿಂತಿದ್ದರು.)

**ರಾಜಯೋಗಾನಂದ :–** ಈಶ್ವರ್‌ಗೆ ನಡೆದ ಘಟನೆ ಬಹಳ ಮುಖ್ಯವಾದದ್ದು. ಆದ್ದರಿಂದ ಆತನನ್ನು ಕುರಿತು ಹೇಳುವ ವಿಷಯ ಇನ್ನೂ ಮುಖ್ಯವಾದದ್ದು. ಆದ್ದರಿಂದ ನೀವೆಲ್ಲರೂ ನಮ್ಮ ಮಾತುಗಳನ್ನು ಜಾಗ್ರತೆಯಿಂದ ಕೇಳಬೇಕೆಂದು

ಕೋರುತ್ತಿದ್ದೇನೆ. ಇಲ್ಲಿಗೆ ಎಷ್ಟೋ ಸಾವಿರ ಜನರು ಈಶ್ವರ್ ಮರಣವಾರ್ತೆಯನ್ನು ಕೇಳಿ ಬಂದಿದ್ದೀರ. ಇಷ್ಟು ಜನರನ್ನು ನೋಡಿದ ನಂತರ ಜನರ ಹೃದಯಗಳಲ್ಲಿ ಈಶ್ವರ್ ಎಷ್ಟು ಮನೆಮಾಡಿಕೊಂಡಿದ್ದಾನೋ ನಮಗೆ ಚೆನ್ನಾಗಿ ಅರ್ಥವಾಗುತ್ತಿದೆ. ಇಷ್ಟೋಂದು ಈಶ್ವರ್‌ನನ್ನು ಪ್ರೇಮಿಸುವ ನಿಮಗೆ ಈಶ್ವರ್‌ವೊಂದರ ಪೂರ್ತಿ ಚರಿತ್ರೆ ತಿಳಿಯದಿರಬಹುದು. ಅಂತಹ ನಿಮ್ಮೆಲ್ಲರಿಗೂ ಹೇಳುವುದೇನೆಂದರೆ! ಈಶ್ವರ್ ಹುಟ್ಟುವಿಕೆ ಬಹಳ ಪ್ರತ್ಯೇಕವಾದದ್ದು. ಆತನು ಇಲ್ಲಿಗೆ ಹದಿನಾರು ವರ್ಷಗಳ ಕೆಳಗೆ ನಡೆದ ಅಷ್ಟಗ್ರಹ ಕೂಟಮಿ ಸಮಯದಲ್ಲಿ ಹುಟ್ಟಿದ ಮೊಟ್ಟಮೊದಲ ಮಗು. ಹಾಗೆ ಆ ಸಮಯದಲ್ಲಿ ಮೊದಲು ಹುಟ್ಟಿರುವುದರಿಂದ ಆತನಲ್ಲಿ ಕೆಲವು ಪ್ರತ್ಯೇಕತೆಗಳು ಏರ್ಪಟ್ಟಿವೆ. ಆತನಿಗಿರುವ ಪ್ರತ್ಯೇಕ ಶಕ್ತಿಗಳಿಂದ ಕೆಲವರು ರೋಗಗಳಿಂದ ಹೊರಬಿದ್ದಿದ್ದಾರೆಂದು, ಕೆಲವರಲ್ಲಿ ದೆವ್ವಗಳು ಓಡಿಹೋಗಿವೆಯೆಂದು, ಕೆಲವರಿಗೆ ಕೆಲವು ಆಪತ್ತುಗಳು ತೊಲಗಿ ಹೋಗಿವೆಯೆಂದು ಕೇಳಿದ್ದೇವೆ. ಎಲ್ಲದಕ್ಕಿಂತ ಮುಖ್ಯ ಆತನ ಜೀವನದಲ್ಲಿ ಹದಿನಾರನೆ ಸಂವತ್ಸರ. ಹದಿನಾರನೇ ಸಂವತ್ಸರ ಆರಂಭ ವಾದಾಗಿನಿಂದ ಈಶ್ವರ್‌ಗೆ ಕೆಲವು ಕಷ್ಟಗಳು ಎದುರಾದವು. ಆತನಿಗೆ ಹದಿನಾರನೇ ಸಂವತ್ಸರದಲ್ಲಿ ಪ್ರತಿ ಅಮಾವಾಸ್ಯೆಗೂ ಒಂದು ಭಯಂಕರವಾದ ಲೋಕ ವಿನಾಶಕರ ಶಕ್ತಿ ಆತನಲ್ಲಿ ಸೇರಿಹೋಗುತ್ತಿತ್ತು. ಆ ವಿಧವಾಗಿ ಆರು ತಿಂಗಳುಗಳಲ್ಲಿ ಆರು ಅಮಾವಾಸ್ಯೆ ದಿನಗಳಲ್ಲಿ ಭಯಂಕರವಾದ ಶಕ್ತಿಗಳು ಆರು ಸೇರಿಹೋಗಿವೆ. ಆ ವಿಧವಾಗಿ ಆತನಲ್ಲಿ ಸೇರಿಹೋಗುತ್ತವೆಂದು ಈಶ್ವರ್ ಜಾತಕದಲ್ಲೇ ಇದೆಯೆಂದು, ಆತನ ಹುಟ್ಟುವಿಕೆಯೇ ಅಂತಹದ್ದೆಂದು, ಈ ಲೋಕದಲ್ಲಿ ಮೂವರು ವ್ಯಕ್ತಿಗಳಿಗೇ ತಿಳಿದಿತ್ತು. ಆ ಮೂವರಲ್ಲಿ ನಾನೊಬ್ಬನು, ಎರಡನೆಯವನು ನನ್ನ ಪಕ್ಕದಲ್ಲಿರುವ ಮಹರ್ಷಿ, ಮೂರನೆ ವ್ಯಕ್ತಿ ತಪಸ್ವಿಬಾಬಾರವರು.

ತಪಸ್ವಿಬಾಬಾರವರು ಎಷ್ಟೋ ಧನಿಕನು, ಕೆಲವು ಸಾವಿರ ಕೋಟಿ ಹಣ ಆತನ ಹತ್ತಿರ ಇದೆ. ಆದರೂ ಆತನಲ್ಲಿನ ಆಸೆ ಎನ್ನುವ ಗುಣದಿಂದ ಇನ್ನೂ ಏನೋ ಬೇಕೆಂದು, ದೇಶಕ್ಕೇ ಅಧಿಪತಿ ಆಗಬೇಕೆಂದುಕೊಂಡಿದ್ದಾನೆ. ಹಾಗೆ ದೇಶಕ್ಕೆ ಅಧಿಪತಿ ಆಗುವುದಕ್ಕೆ, ದೇಶದಲ್ಲಿನ ಆಸ್ತಿ, ಹಣ, ಬಂಗಾರ ಎಲ್ಲಾ ತನಗೆ ಬೇಕೆಂದುಕೊಂಡಿದ್ದಾನೆ. ಹಾಗೆ ಎಲ್ಲಾ ಆತನಿಗೆ ಬೇಕೆಂದರೆ ದೇಶದಲ್ಲಿ

ಮನುಷ್ಯರೆಲ್ಲರೂ ಇಲ್ಲದಂತೆ ಹೋಗಬೇಕು. ದೇಶದಲ್ಲಿ ಎಲ್ಲರೂ ಒಂದೇ ಸಲ ಮರಣಿಸಿದರೆ ಎಲ್ಲರ ಆಸ್ತಿಗಳು ಆತನಿಗೇ ಬರುತ್ತವೆಂದು ಆತನ ಊಹೆ. ಹೀಗೆ ಎಲ್ಲರನ್ನೂ ಸಾಯಿಸುವುದಕ್ಕೆ ಈಶ್ವರ್‌ನಲ್ಲಿನ ಶಕ್ತಿಗಳ ಕೈಲಾಗುತ್ತದೆಂದು ಬಾಬಾರವರಿಗೆ ತಿಳಿದಿತ್ತು. ಆದ್ದರಿಂದ ಅಮಾವಾಸ್ಯೆ ದಿನಗಳಲ್ಲಿ ಸೇರುವ ಶಕ್ತಿಗಳನ್ನು ತನ್ನ ವಶ ಮಾಡಿಕೊಳ್ಳಬೇಕೆಂದು ಅಂದುಕೊಂಡಿದ್ದಾನೆ. ಅದಕ್ಕಾಗಿ ಪ್ರತಿ ಅಮಾವಾಸ್ಯೆ ದಿನ ಈಶ್ವರ್‌ನನ್ನು ಅನಾರೋಗ್ಯ ಪಾಲು ಮಾಡಿ ಶಕ್ತಿಗಳನ್ನು ತನ್ನ ವಶ ಮಾಡಿಕೊಳ್ಳಬೇಕೆಂದು ತೀವ್ರವಾಗಿ ಪ್ರಯತ್ನ ಮಾಡಿದ್ದಾನೆ. ನನಗೆ ಆತನ ಪ್ರಯತ್ನಗಳೆಲ್ಲವೂ ಆಗಿಂದಾಗ್ಗೆ ತಿಳಿದುಹೋಗುತ್ತಿದ್ದವು. ಆದ್ದರಿಂದ ಆತನ ಪ್ರಯತ್ನವನ್ನು ಪ್ರತಿ ತಿಂಗಳು ನೆರವೇರದಂತೆ ಮಾಡುತ್ತಿದ್ದೆನು. ಆತನ ಪ್ರತಿ ಕೆಲಸ ತಿಳಿದು ಅಡ್ಡಿಯಾಗುತ್ತಿದ್ದೇನೆಂದು ಅತನಿಗೆ ತಿಳಿದಿಲ್ಲ. ಕೊನೆಯ ಆರನೆ ಅಮಾವಾಸ್ಯೆ ದಿನದಂದು ತಪಸ್ವಿಬಾಬಾ ಬಹಳ ಬುದ್ಧಿವಂತಿಕೆ ಉಪಯೋಗಿಸಿ ನಮ್ಮನ್ನೂ, ಜಮೀಂದಾರ್ ರಾವುಬಹದೂರ್ ನನ್ನೂ ಮೋಸಮಾಡಿ, ನಮ್ಮ ಮೇಲೆ ಮತ್ತಿನ ಔಷಧವನ್ನು ಸಾಂಬ್ರಾಣಿಹೊಗೆಯಂತೆ ವಹೀದ್‌ನಿಂದ ಪ್ರಯೋಗಿಸಿ ನಮ್ಮನ್ನು ನಿದ್ರೆಮತ್ತಿನೊಳಗೆ ಕಳುಹಿಸಿ, ಆರನೆ ಅಮಾವಾಸ್ಯೆ ದಿನದಂದು ಈಶ್ವರ್‌ನೊಳಗೆ ಬಂದಿರುವ ಶಕ್ತಿಯನ್ನು ವಶಮಾಡಿಕೊಂಡು ಹೋಗಿದ್ದಾನೆ. ಆ ಒಂದು ಶಕ್ತಿಯನ್ನು ಈ ದಿನ ಹುಣ್ಣಿಮೆ ದಿನ ಉಪಯೋಗಿಸಿ ದಕ್ಷಿಣದೇಶದಲ್ಲಿನ ಆರು ರಾಜ್ಯಗಳನ್ನು ಅಲ್ಲೋಲಕಲ್ಲೋಲ ಮಾಡಿ ಜೀವರಾಶಿಗಳೆಲ್ಲವನ್ನೂ ಮರಣಿಸುವಂತೆ ಮಾಡಬೇಕೆಂದುಕೊಂಡಿದ್ದಾನೆ. ನೂರು ಸುಳಿಮೇಘಗಳನ್ನು ಸೃಷ್ಟಿಸಿ ಅವುಗಳಿಂದ ದಕ್ಷಿಣ ದೇಶದಲ್ಲಿ ಪ್ರಳಯವನ್ನು ಸೃಷ್ಟಿಸಬೇಕೆಂದುಕೊಂಡಿದ್ದಾನೆ. ಅಷ್ಟು ದೊಡ್ಡ ಮಾರಣಹೋಮ ನಡೆಯುತ್ತದೆಂದು ನಿನ್ನೆಯದಿನ ಸಂಜೆ ವರೆಗು ನಮಗೂ ಸಹ ತಿಳಿದಿಲ್ಲ. ಬರುವ ಅಮಾವಾಸ್ಯೆಗೆ ತಾನು ವಶವಮಾಡಿಕೊಂಡಿರುವ ಶಕ್ತಿಯನ್ನು ಉಪಯೋಗಿಸುತ್ತಾನೆಂದು ಅಂದುಕೊಂಡಿದ್ದೇವೆ. ಆದರೆ ಮುಂಚಿತವಾಗಿ ಹುಣ್ಣಿಮೆ ದಿನವೇ ಹಾಗೆ ಮಾಡುತ್ತಾನೆಂದು ನಾವೂ ಸಹ ಊಹಿಸಲಿಲ್ಲ. ಅಮಾವಾಸ್ಯೆಗಾದರೆ ಸ್ವಲ್ಪ ಅವಧಿ ಇರುವುದರಿಂದ ಆ ಮಾರಣ ಹೋಮವನ್ನು ಕುರಿತು ಕೆಲವರಿಗಾದರೂ ತಿಳಿಸಿ, ನಾವು ನಮ್ಮ ಪ್ರಾಣಗಳನ್ನು ರಕ್ಷಿಸಿಕೊಳ್ಳುವುದಕ್ಕೆ ಉತ್ತರ ದೇಶಕ್ಕೆ ಹೋಗಬೇಕೆಂದು

ಅಂದುಕೊಂಡಿದ್ದೆವು. ಆದರೆ ಇದ್ದಕ್ಕಿದ್ದಂತೆ ಬೆಳಗಾದರೆ ಪೌರ್ಣಮಿ ಎಂದು, ಪೌರ್ಣಮಿಗೆ ಆ ಶಕ್ತಿಯನ್ನು ಪ್ರಯೋಗಿಸುತ್ತಿದ್ದಾನೆಂದು ತಿಳಿದು ನಾವು ಆಗ ಎಲ್ಲಿಗೂ ಹೋಗಲಾರೆವೆಂದು ತಿಳಿದುಕೊಂಡಿದ್ದೆವು. ಬರುವ ಆಪತ್ತು ತಿಳಿಯದ ನೀವೂ, ಬರುವ ಆಪತ್ತು ತಿಳಿದರೂ ಎಲ್ಲೂ ಹೋಗಲಾರದ ನಾವೂ, ಈ ದಿನ ತಪ್ಪದೆ ಮರಣಿಸುತ್ತೇವೆಂದು ಭಯಪಟ್ಟಿದ್ದೆವು. ನಮ್ಮ ಪ್ರಾಣಗಳನ್ನು ರಕ್ಷಿಸಿಕೊಳ್ಳುವ ಉಪಾಯವೇ ನಮಗೆ ತಿಳಿಯದಂತೆ ಹೋಗಿದೆ. ಕೊನೆಗೆ ದೇವರೇ ದಿಕ್ಕೆಂದು ಅಂದುಕೊಂಡೆವು. ಆಗ ನಾವು ಊಹಿಸದ ಪರಿಣಾಮ ನಡೆಯಿತು. ದೇವರು ನಮ್ಮ ಪ್ರಾರ್ಥನೆ ಆಲಿಸಿದ್ದಾನೆ ಎನ್ನುವಂತೆ ಈ ದಿನ ಬೆಳಗ್ಗೆ ಐದು ಗಂಟೆಗಳಿಗೆ ತಪಸ್ವಿಬಾಬಾ ಮರಣಿಸಿದಂತೆ ವಾರ್ತೆ ತಿಳಿದು ಸಂತೋಷಪಟ್ಟಿದ್ದೇವೆ. ಬಾಬಾ ಈ ದಿನ ಬೆಳಗ್ಗೆ ಮರಣಿಸದಂತೆ ಇದ್ದಿದ್ದರೆ, ಇಷ್ಟೊತ್ತಿಗೆ ನಾವೆಲ್ಲರೂ ಸತ್ತುಹೋಗುತ್ತಿದ್ದೆವು. ಇಷ್ಟೊತ್ತಿಗೆ ಮನೆ ಬಾಗಿಲು ಎಲ್ಲರವು ನೆಲಸಮವಾಗುತ್ತಿದ್ದವು. ಎಷ್ಟೋ ದೊಡ್ಡ ಪ್ರಳಯ ಸಂಭವಿಸುತ್ತಿತ್ತು. ಅದೆಲ್ಲಾ ನಡೆಯದಂತೆ ಹೋಗುವುದಕ್ಕೆ ಕಾರಣ ಒಬ್ಬನೇ ಒಬ್ಬ ವ್ಯಕ್ತಿ ಇದ್ದಾನೆ. ನಮ್ಮನ್ನು, ನಿಮ್ಮನ್ನು ರಕ್ಷಿಸಿದ ಆತನಿಗೆ ಕೈಜೋಡಿಸಿ ನಮಸ್ಕರಿಸುತ್ತಿದ್ದೇನೆ. ತಪಸ್ವಿಬಾಬಾ ಬೆಳಗ್ಗೆ ಐದು ಗಂಟೆಗಳ ಸಮಯದಲ್ಲಿ ಹಾವು ಕಡಿತದಿಂದ ಮರಣಿಸಿದ್ದಾನೆ. ಆ ಹಾವೂ ಸಹ ಇಲ್ಲೇ ನಮ್ಮ ಹತ್ತಿರವೇ ಇದೆ. ತಪಸ್ವಿಬಾಬಾ ಪ್ರೇರೇಪಿಸಿದ ಶಕ್ತಿಯನ್ನು ಸಮಯಕ್ಕೆ ಬಂದು ನಿಲ್ಲಿಸಿ, ಅದನ್ನು ಇಲ್ಲದಂತೆ ಮಾಡಿ ಬಾಬಾನನ್ನು ಮರಣಿಸುವಂತೆ ಮಾಡಿದ ವ್ಯಕ್ತಿ ಯಾರೋ ಅಲ್ಲ, ಇಲ್ಲಿ ನಮ್ಮ ಪಕ್ಕದಲ್ಲೇ ಸರ್ವಸಾಧಾರಣವಾಗಿ ಕಾಣಿಸುತ್ತಿರುವ ಈ ಮಹರ್ಷಿಯೇ! ಈ ದಿನ ಈತನೇ ನಮ್ಮೆಲ್ಲರಿಗೂ ಪ್ರಾಣಧಾತ!

ಮುಖ್ಯವಾದ ವಿಷಯವೇನೆಂದರೇ! ಈಶ್ವರ್ ಶರೀರದಲ್ಲಿ ಆರನೆ ಅಮಾವಾಸ್ಯೆ ದಿನದಂದು ಪ್ರವೇಶಿಸಿದ ಶಕ್ತಿಯನ್ನು ಬಾಬಾ ವಶ ಮಾಡಿಕೊಂಡು ಹೋದಾಗ, ಆ ಶಕ್ತಿಯನ್ನು, ತಪಸ್ವಿಬಾಬಾನನ್ನು ಒಂದೇ ಸಲ ಇಲ್ಲದಂತೆ ಮಾಡುವುದರಿಂದ ಅದರ ಪ್ರಭಾವ ಈಶ್ವರ್ ಮೇಲೆ ಬಿದ್ದಿತು. ತನ್ನಲ್ಲಿನ ಶಕ್ತಿ ಮತ್ತು ಬಾಬಾ ಮರಣಿಸಿದ ಕೂಡಲೇ ಈಶ್ವರ್ ಅಪಸ್ಮಾರಕ ಸ್ಥಿತಿಯೊಳಗೆ

ಹೋಗಿದ್ದಾನೆ. ಈಶ್ವರ್ ಹುಟ್ಟುವಿಕೆ ವಿಷಯ ತಿಳಿದ ನಾವು, ಆತನ ಮರಣ ವಿಷಯವನ್ನು ಸಹ ಮೊದಲೇ ತಿಳಿದು ಈಶ್ವರ್ ಹದಿನಾರನೇ ಸಂವತ್ಸರವೇ ಮರಣಿಸುತ್ತಾನೆಂದು ಮೊದಲೇ ತಿಳಿದಿದ್ದೆವು. ಅದೇ ವಿಷಯವೇ ಕೆಲವು ತಿಂಗಳ ಹಿಂದೆ ಜಮೀಂದಾರ್ ರಾವುಬಹದೂರ್ ರವರಿಗೂ ಸಹ ಹೇಳಲಾಗಿತ್ತು. ನಾವು ಅಂದುಕೊಂಡಂತೇ ಈ ದಿನ ಬೆಳಗ್ಗೆ ಈಶ್ವರ್ ಮರಣಿಸುವುದು ನಡೆದಿದೆ. ಈಶ್ವರ್ ಮರಣಿಸುವುದು ನನಗೆ ಬಹಳ ನೋವನ್ನುಂಟುಮಾಡಿದೆ. ನನಗೇ ಅಲ್ಲ ನಿಮಗೂ ಸಹ ಬಾಧೆ ಉಂಟಾಗಿದೆಯೆಂದು ತಿಳಿಯುತ್ತಿದೆ. ಒಂದು ಮುಖ್ಯವಾದ ವಿಷಯವೇನೆಂದರೇ! ಈ ದಿನ ಎಲ್ಲರೂ ಮರಣಿಸಬೇಕಾದವರೇ. ಆದರೂ ಆ ಗಂಡಾಂತರವನ್ನು ತಪ್ಪಿಸಿ ಈ ಮಹಾತ್ಮನು ನಮ್ಮನ್ನು ಕಾಪಾಡಿದ್ದಾನೆ. ಅಷ್ಟು ದೊಡ್ಡ ವ್ಯಕ್ತಿ, ಎಂದಿಗೂ ಭೂಮಿ ಮೇಲೆ ಕಾಣಿಸದ ವ್ಯಕ್ತಿ, ಈಶ್ವರ್ ಮರಣಿಸಿದಾಗ ಅಲ್ಲೇ ಇರುವಾಗ ನಾನೇ ಸ್ವತಃವಾಗಿ ಜಮೀಂದಾರನಿಗೆ ಹೇಳಿ ಈಶ್ವರ್‌ನನ್ನು ಕಾಪಾಡೆಂದು ಮಹರ್ಷಿಯನ್ನು ಬೇಡಿಕೊ ಎಂದಿದ್ದೇನೆ. ನನ್ನ ಮಾತಿನ ಪ್ರಕಾರ ಜಮೀಂದಾರ್ ಈ ಮಹರ್ಷಿಯನ್ನು, ಈಶ್ವರ್‌ನನ್ನು ಕಾಪಾಡೆಂದು ಈಶ್ವರ್‌ಗೆ ಪ್ರಾಣ ಹೋಗುವುದಕ್ಕಿಂತ ಮೊದಲೇ ಕೇಳಿದ್ದಾನೆ. ಆಗ ಮಹರ್ಷಿಯವರು "ನಾನು ಹೇಳಿದಂತೆ ಕೇಳು" ಎಂದನು. "ಹಾಗೇ ಕೇಳುತ್ತೇನೆ" ಎಂದು ಜಮೀಂದಾರ್ ಹೇಳಿದ್ದಾನೆ. ಆ ನಿಮಿಷವೇ ಈಶ್ವರ್ ಪ್ರಾಣ ಹೋಗಿದೆ. ಅದನ್ನು ನೋಡಿದ ರಾವುಬಹುದೂರ್ ಬಹಳ ಬಾಧೆಪಟ್ಟಿದ್ದಾನೆ. ಪುನಃ ನಾನು ಹೇಳುವುದರಿಂದ ಮಹರ್ಷಿಯನ್ನು ನಾನೇನು ಮಾಡಬೇಕೆಂದು ಕೇಳಿದ್ದಾನೆ. ಆಗ ಈ ಮಹರ್ಷಿಯವರು ಈಶ್ವರ್‌ನನ್ನು ಮನೆಗೆ ತೆಗೆದುಕೊಂಡುಹೋಗಿ ನಿನ್ನ ಏರ್ಪಾಟನ್ನು ನೀನು ಮಾಡಿಕೊಂಡು ಐದು ಗಂಟೆಗಳಿಗೆ ಸ್ಮಶಾನಕ್ಕೆ ತೆಗೆದುಕೊಂಡು ಹೋಗೆಂದಿದ್ದಾನೆ. ಆ ಮಾತಿನಿಂದ ಅಲ್ಲಿರುವ ನಮ್ಮೆಲ್ಲರಿಗೂ ಹೇಳಿಕೊಳ್ಳಲಾರದಷ್ಟು ಬಾಧೆ ಉಂಟಾಗಿದೆ. ಜಮೀಂದಾರ್ ಈಶ್ವರ್‌ನನ್ನು ಇಲ್ಲಿಗೆ ತಂದಿದ್ದಾನೆ. ಈಶ್ವರ್ ಮರಣವಾರ್ತೆ ನಿಮ್ಮೆಲ್ಲರಿಗೂ ತಿಳಿದು ನೀವೆಲ್ಲರೂ ಸಹ ಬಾಧೆಪಟ್ಟಿದ್ದೀರ.

ಜಮೀಂದಾರ್ ರಾವುಬಹುದೂರ್ ವೇದನೆಯಿಂದ ಈಶ್ವರ್‌ನನ್ನು ತನ್ನ ಕಾರಿನಲ್ಲಿ ತಂದುಕೊಂಡ ನಂತರ ಈ ಮಹರ್ಷಿರವರನ್ನು ಎಷ್ಟೋ ಪ್ರಾರ್ಥಿಸಿದ್ದೇನೆ.

ದಕ್ಷಿಣ ದೇಶವನ್ನು ಒಟ್ಟಾರೆ ಪ್ರಾಣಹಾನಿಯಿಂದ ತಪ್ಪಿಸಿದ ನೀವು, ಈಶ್ವರ್ ಬದುಕಿರುವಾಗ ಆತನನ್ನು ಏಕೆ ಕಾಪಾಡಲಿಲ್ಲವೆಂದು ಕೇಳಿದ್ದೇನೆ. ಈಶ್ವರ್‌ಗೆ ಪ್ರಾಣವಿರುವಾಗಲೇ ಜಮೀಂದಾರ ನಿಮ್ಮನ್ನು ಪ್ರಾರ್ಥಿಸಿ ಈಶ್ವರ್‌ನನ್ನು ಕಾಪಾಡೆಂದು ಕೇಳಿದಾಗ, ಹಾಗಾದರೇ ನಾನು ಹೇಳಿದಂತೆ ಕೇಳೆಂದಿದ್ದೀರ. ಹಾಗೆಯೇ ಆತನು ಕೇಳುತ್ತೇನೆಂದಿದ್ದಾನೆ. ನೀವು ಹೇಳಿದಂತೆ ಕೇಳುತ್ತೇನೆಂದ ನಂತರ ಸಹ ಈಶ್ವರ್ ಪ್ರಾಣಗಳು ಹೋಗಿವೆ ಏಕೆ ಎಂದು ಕೇಳಿದ್ದೇನೆ. ಆಗ ಮಹರ್ಷಿ ನನ್ನೊಂದಿಗೆ ಹೀಗೆ ಹೇಳಿದ್ದಾನೆ. “ನನ್ನ ಮಾತು ಕೇಳೆಂದಿದ್ದೇನೆ ಆದರೆ ಈಶ್ವರ್ ಪ್ರಾಣಗಳನ್ನು ಕುರಿತು ನನ್ನನ್ನು ಕೇಳೆಂದು ಹೇಳಲಿಲ್ಲ. ಈಶ್ವರ್ ಮರಣಿಸಿದ್ದಾನೆಂದು ನನ್ನ ಮೇಲೆ ನಿಮಗೆ ವಿಶ್ವಾಸ ಇಲ್ಲದಂತೆ ಹೋಗಿದೆ. ನನ್ನ ಮಾತಿನ ಮೇಲೆ ವಿಶ್ವಾಸ ಇಲ್ಲದಂತೆ ಹೋಗಿದೆಯೆಂದು ಅದಕ್ಕೆ ಶಿಕ್ಷೆಯಾಗಿ ನೀವು ಬಾಧೆಪಡುವುದೇ ಒಳ್ಳೆಯದೆಂದುಕೊಂಡಿದ್ದೇನೆ. ನಂತರ ಈಗೇನು ಮಾಡಬೇಕೆಂದು ನಿನ್ನ ಪ್ರೋತ್ಸಾಹ ಬಲದಿಂದ ಜಮೀಂದಾರ್ ನನ್ನನ್ನು ಕೇಳಿದ್ದಾನೆ. ಆಗ ನೀವು ಮನೆಗೆ ತೆಗೆದುಕೊಂಡು ಹೋಗಿ ನಿಮ್ಮ ಕೆಲಸ ನೀವು ಮಾಡಿಕೊಳ್ಳಿ ಎಂದು ಹೇಳಿದ್ದೇನೆ. ಅದರಿಂದ ಸಂಜೆ ಐದು ಗಂಟೆಗಳವರೆಗು ನೀವು ಬಾಧೆಪಡುತ್ತೀರೆಂದು, ಹಾಗೆ ಬಾಧೆಪಡಬೇಕೆಂದು, ಆ ಬಾಧೆ ನನ್ನ ಮಾತನ್ನು ನಂಬದಿರುವುದರಿಂದ ಬಿದ್ದ ಶಿಕ್ಷೆ ಎಂದೂ, ಅದನ್ನು ಹಾಗೆ ಅನುಭವಿಸುವುದರಿಂದ ನನ್ನ ಮಾತನ್ನು ವಿಶ್ವಾಸಿಸದ ಫಲಿತ ಅಷ್ಟಕ್ಕೆ ಮುಗಿದುಹೋಗುತ್ತದೆಂದುಕೊಂಡಿದ್ದೇನೆ. ನನ್ನ ಮಾತು ಒಂದೇ ಬಾರಿ ಬರುತ್ತದೆ. ಬಂದಿರುವ ಮಾತು ಭೂಮಿ, ಆಕಾಶ, ಒಂದಾದರೂ, ಸೂರ್ಯಚಂದ್ರರು ತಲೆ ಕೆಳಗಾದರೂ ಬದಲಾಗುವುದಿಲ್ಲ. ನೀವು ಈಶ್ವರ್ ಪ್ರಾಣ ಹೋಗುವುದಕ್ಕಿಂತ ಮೊದಲೇ ನನ್ನನ್ನು ಈಶ್ವರ್‌ನನ್ನು ಕಾಪಾಡೆಂದು ಕೇಳಿದ್ದೀರ. ನಾನು ಏನು ಮಾಡುವುದೂ, ಹೇಗೆ ಮಾಡುವುದೂ ಯಾರಿಗೂ ತಿಳಿದಿಲ್ಲ. ಆದ್ದರಿಂದ ನಿಮ್ಮ ದೃಷ್ಠಿಯಲ್ಲಿ ಮರಣಿಸಿದ ಈಶ್ವರ್‌ನನ್ನು ನೋಡಿ ನನ್ನನ್ನು ಶಂಕಿಸಿದ್ದೀರ. ನನ್ನ ದೃಷ್ಠಿಯಲ್ಲಿ ಈಶ್ವರ್ ಮರಣಿಸಲಿಲ್ಲ. ನನಗೆ ಜೀವಾತ್ಮ ವಿಷಯ, ಆತ್ಮ ವಿಷಯ, ಪರಮಾತ್ಮ ವಿಷಯ ತಿಳಿದಿವೆ. ಮೂರು ಆತ್ಮಗಳ ವಿಷಯ ನಿಮಗೆ ತಿಳಿದಿಲ್ಲ. ನಿಮ್ಮ ದೃಷ್ಠಿಯಲ್ಲಿ ಈಶ್ವರ್ ಮರಣಿಸಿದರೂ ಆತನನ್ನು ಪುನಃ ಎಬ್ಬಿಸುತ್ತೇನೆ”

ಎಂದನು. ಆ ಮಾತು ಕೇಳಿದ ನನಗೆ ಸಂತೋಷವಾಯಿತು. ಎಲ್ಲರ ಪ್ರಾಣಧಾತ ಆದ ಈ ಮಹರ್ಷಿಯನ್ನು ನಾನು ಇಲ್ಲಿಗೆ ಕರೆತಂದಿದ್ದೇನೆ. ನಮ್ಮ ಮುಂದೆಯೇ ಈ ಮಹಾತ್ಮನು ಈಶ್ವರ್‌ಗೆ ಪುನರ್ಜನ್ಮ ಕೊಡುತ್ತಾನೆಂದು ಆಶಿಸುತ್ತಿದ್ದೇವೆ.

(ಅಷ್ಟರಲ್ಲಿ ಅಲ್ಲಿ ಎಲ್ಲರ ಮುಖದಲ್ಲಿ ಬದಲಾವಣೆ ಬಂದಿತು. ಮರಣಿಸಿದ ಮನುಷ್ಯನನ್ನು ಹೇಗೆ ಬದುಕಿಸುತ್ತಾನೆಂದು ಒಬ್ಬರ ಮುಖವನ್ನು ಒಬ್ಬರು ನೋಡಿಕೊಂಡಿದ್ದಾರೆ. ಅಷ್ಟರಲ್ಲಿ ಮಹರ್ಷಿ ಅಲ್ಲಿರುವ ಪ್ರಜೆಗಳೆಲ್ಲರನ್ನು ಉದ್ದೇಶಿಸಿ ಹೀಗೆ ಮಾತನಾಡಿದ್ದಾನೆ.)

**ಮಹರ್ಷಿ :–** ನಿಮಗೆ ನಿಮ್ಮ ಶರೀರದಲ್ಲಿನ ಜ್ಞಾನ ತಿಳಿದಿಲ್ಲ. ನಿಮಗೆ ನಿಮ್ಮ ಶರೀರಗಳ ಹೊರಗಿನ ಜ್ಞಾನವೇ ತಿಳಿದಿದೆ. ಆದ್ದರಿಂದ ಶರೀರದ ಒಳಗೆ ನಡೆಯುವ ಮರಣ ವಿಷಯ ನಿಮಗೆ ತಿಳಿದಿಲ್ಲ. ಮರಣಗಳು ಮೂರು ವಿಧಗಳಿವೆ. ಮೂರು ವಿಧಗಳಲ್ಲಿ ಈಗ ಈಶ್ವರ್ ಮರಣವೂ ಸಹ ಒಂದು ವಿಧ. ಮನುಷ್ಯನ ಶರೀರದಲ್ಲಿ ಶ್ವಾಸ ಇಲ್ಲದಂತೆ ನಿಂತುಹೋದರೇ ನೀವು ಮನುಷ್ಯನನ್ನು ಮರಣಿಸಿದ್ದಾನೆಂದು ಅಂದುಕೊಳ್ಳುತ್ತೀರ. ಆದರೆ ಶ್ವಾಸ ಇಲ್ಲದಂತೆ ಹೊರಗೆ ಹೋಗಿದೆಯಾ, ಒಳಗೆ ಹೋಗಿದೆಯಾ ಎಂದು ಯಾರೂ ಯೋಚಿಸುತ್ತಿಲ್ಲ. ಆ ಗಮನ ಯಾರ ಬುದ್ಧಿಗೂ ಬರುವುದಿಲ್ಲ. ಅದನ್ನು ಕುರಿತು ವಿವರವಾಗಿ ಹೇಳಿದರೇ, ಬದುಕಿರುವ ಮನುಷ್ಯನ ಶರೀರದಲ್ಲಿ ಇರುವ ಶ್ವಾಸವನ್ನು "ಪ್ರಾಣ" ಎನ್ನುತ್ತಿದ್ದೇವೆ. ಶಿಶು ಶರೀರದೊಳಗೆ ಶ್ವಾಸ ಬಂದಾಗ ಪ್ರಾಣ ಬಂದಿದೆ ಎಂದೂ, ಶರೀರದಿಂದ ಶ್ವಾಸ ಹೋದಾಗ ಪ್ರಾಣ ಹೋಗಿದೆಯೆಂದು ಹೇಳುತ್ತೇವೆ. ಪ್ರಾಣ ಎಂದರೆ ಗಾಳಿ. ಶರೀರದಲ್ಲಿ ಪಂಚ ಪ್ರಾಣಗಳು ಇವೆ. ಅವು 1) ವ್ಯಾನ 2) ಸಮಾನ 3) ಉದಾನ 4) ಪ್ರಾಣ 5) ಅಪಾನ ಎನ್ನುವವು. ಈ ಪಂಚ ವಾಯುಗಳಿಗೂ ನಾಗ, ಕೂರ್ಮ, ಕೃಕುರ, ದೇವದತ್ತ, ಧನಂಜಯ ಎನ್ನುವ ಐದು ಉಪ ವಾಯುಗಳು ಇವೆ. ಈ ಹತ್ತು ವಾಯುಗಳು ಶರೀರದೊಳಗೆ ನಿಂತು ಹೋದರೂ, ಶರೀರದ ಹೊರಗೆ ಹೋದರೂ ಹೊರಗೆ ನೋಡುವವರಿಗೆ ಅದು ಮರಣವೇ ಆದರೂ, **ನಮ್ಮ ದೃಷ್ಟಿಯಲ್ಲಿ ವಾಯುಗಳು ಹೊರಗೆ ಹೋದರೆ ಮರಣ. ಒಳಗೇ ಇದ್ದರೆ ತಾತ್ಕಾಲಿಕ ಮರಣ**

**ಎನ್ನುತ್ತೇವೆ.** ಈಗ ಈಶ್ವರ್ ತಾತ್ಕಾಲಿಕ ಮರಣವನ್ನು ಹೊಂದಿದ್ದಾನೆ. ಆದ್ದರಿಂದ ಆತನ ಶರೀರದಲ್ಲಿ ಕೀಲುಗಳೆಲ್ಲವೂ ಸುಲಭವಾಗಿ ಕದಲುತ್ತಿವೆ. ಇದರಿಂದ ಈಶ್ವರ್ ಶರೀರದಲ್ಲಿರುವ ದಶ ವಾಯುಗಳನ್ನು ಪುನಃ ಅವು ಅವುಗಳ ಕೆಲಸ ಮಾಡುವುದಕ್ಕೆ ಎಷ್ಟೋ ವಿಧಾನಗಳಿವೆ. ಅದರಲ್ಲಿ ಒಂದು ವಿಧಾನವನ್ನು ಉಪಯೋಗಿಸಿ ನಾನು ಈಶ್ವರ್‌ನನ್ನು ಪುನಃ ಬದುಕಿಸುತ್ತೇನೆ. ಈಗ ಇದು ನಿಮಗೆ ವಿಚಿತ್ರವಾಗಿ ಕಾಣಿಸಿದರೂ, ನನ್ನ ಲೆಕ್ಕದಲ್ಲಿ ಕೇವಲ ಚಿಕಿತ್ಸೆ ಮಾತ್ರವೇ.

ಈಶ್ವರ್ ಶರೀರದಲ್ಲಿನ ಹತ್ತು ವಾಯುಗಳನ್ನು ಪುನಃ ಕೆಲಸ ಮಾಡಿಸುವುದಕ್ಕೆ ಹತ್ತು ವಜ್ರಗಳು ತೊಳೆದ ನೀರನ್ನು ಆತನ ಮುಖದ ಮೇಲೆ, ತಲೆ ಮೇಲೆ ಜೋರಾಗಿ ಚೆಲ್ಲಿದರೆ ವಜ್ರ ಸ್ಪರ್ಶದಿಂದಿರುವ ನೀರಿನಿಂದ ವಾಯುಗಳು ಪುನಃ ಕೆಲಸ ಮಾಡುತ್ತವೆ. ಭುವನೇಶ್ವರಿ ದೇವಾಲಯದಲ್ಲಿ ಬಹಳ ವರ್ಷಗಳ ಕೆಳಗೆ ದರೋಡೆ ಮಾಡಲಾಗಿರುವ ಹತ್ತು ವಜ್ರಗಳು ನನ್ನ ಹತ್ತಿರ ಇವೆ. ಅವುಗಳನ್ನು ಕಳ್ಳರ ಹತ್ತಿರದಿಂದ ರಕ್ಷಿಸಿ ಸ್ವಲ್ಪ ಕಾಲದಿಂದ ಇವುಗಳನ್ನು ನನ್ನ ಹತ್ತಿರವೇ ಇಟ್ಟುಕೊಂಡಿದ್ದೇನೆ. ಈ ಹತ್ತು ವಜ್ರಗಳಿಂದ ಕೆಲಸ ಮುಗಿದ ನಂತರ, ಈ ಹತ್ತು ವಜ್ರಗಳಿಂದ ಒಬ್ಬ ಜೀವಿಯನ್ನು ಬದುಕಿಸಿದ ನಂತರ ಇವುಗಳನ್ನು ಪುನಃ ಭುವನೇಶ್ವರಿ ದೇವಾಲಯದಲ್ಲಿ ಅರ್ಪಿಸಬೇಕೆಂದುಕೊಂಡು ನನ್ನ ಹತ್ತಿರವೇ ಇಟ್ಟುಕೊಂಡಿರುವುದು ನಡೆದಿದೆ. ಈಗ ಆ ಕೆಲಸ ಈ ವಜ್ರಗಳಿಂದ ಈಡೇರುತ್ತಿದೆ.

(ಎಂದು ಮಹರ್ಷಿ ತನ್ನ ಹತ್ತಿರವಿರುವ ಹತ್ತು ವಜ್ರಗಳನ್ನು ಹೊರಗೆ ತೆಗೆದು ಎಲ್ಲರಿಗೂ ತೋರಿಸಿ ಅವುಗಳನ್ನು ಒಂದು ಚೆಂಬಿನೊಳಗೆ ಹಾಕಿ ಅದರಲ್ಲಿ ನೀರು ಹಾಕಿ ಚೆನ್ನಾಗಿ ಕುಲುಕಿ ಆ ನೀರನ್ನು ಎಲ್ಲರೂ ನೋಡುತ್ತಿದ್ದಂತೆ ಮರಣಿಸಿದ ಈಶ್ವರ್ ಮುಖದ ಮೇಲೆ, ತಲೆ ಮೇಲೆ ಹಾಕಿ "ಈಶ್ವರ್! ಇನ್ನು ನಿದ್ರೆಯಿಂದ ಎದ್ದು ಕುಳಿತುಕೊ! ನೀನು ಮಲಗಿಕೊಂಡು ಬಹಳ ಸಮಯವಾಗಿದೆ" ಎಂದು ಕೈಯಿಂದ ತಟ್ಟಿ ಜೋರಾಗಿ ಕರೆದಾಗ ಈಶ್ವರ್, ನಿದ್ರೆ ಮಾಡುವವನು ಎಚ್ಚರಗೊಂಡಂತೆ ಎದ್ದು ಕುಳಿತುಕೊಂಡಿದ್ದಾನೆ. ಅದು ನೋಡಿದ ಎಲ್ಲರೂ ಆಶ್ಚರ್ಯಪಡುವುದಲ್ಲದೇ ಈಶ್ವರ್ ಕಡೆ ನೋಡಿದ್ದಾರೆ. ಈಶ್ವರ್ ಎಲ್ಲರ ಕಡೆ ನೋಡಿ ನಡೆದ ವಿಷಯ ರಾಘವನಿಂದ ತಿಳಿದುಕೊಂಡು ತನ್ನನ್ನು ಪುನಃ ಬದುಕಿಸಿದ ಮಹರ್ಷಿವೊಂದರ

ಪಾದಗಳ ಮೇಲೆ ಬಿದ್ದು ನಮಸ್ಕರಿಸಿದಾಗ, ರಾಘವ ಎಲ್ಲರಕಡೆ ನೋಡಿ ಈ ಮಹರ್ಷಿ ಎಲ್ಲರಂತೆ ಸಾಮಾನ್ಯವಾದ ಮನುಷ್ಯನಲ್ಲವೆಂದು, ದೇವರೊಂದಿಗೆ ಸಮಾನನಾದ ಭಗವಂತನೆಂದು ಹೇಳಿ, ಸಂತೋಷದಿಂದ ಭಗವಾನ್ ಮಹರ್ಷಿಗೆ ಜೈ ಎಂದನು. ಅಲ್ಲಿರುವವರೆಲ್ಲಾ ಭಗವಾನ್ ಮಹರ್ಷಿಗೆ ಜೈಜೈ ಎಂದರು.

## ಮುಕ್ತಾಯ

**(ಇದರಲ್ಲಿರುವ ಪಾತ್ರಗಳೂ, ಸಂಘಟನೆಗಳೂ ಕೇವಲ ಕಲ್ಪಿತ, ಯಾರನ್ನು ಉದ್ದೇಶಿಸಿ ಬರೆದಿರುವವಲ್ಲ. ಆದರೆ ಇದರಲ್ಲಿನ ಜ್ಞಾನವೂ, ಚಿಕಿತ್ಸೆಯೂ, ಮಂತ್ರಗಳೂ, ಮಹಿಮೆಗಳೂ ಎಲ್ಲಾ ವಾಸ್ತವವೇ.)**

**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ.**
**ಸತ್ಯವನ್ನು ಸಾವಿರ ಜನ ಅಲ್ಲವೆಂದರೂ ಅದು ಅಸತ್ಯವಲ್ಲ.**



## ನನ್ನ ಕೊನೆಯ ಮಾತು

ಕೊನೆಯವರೆಗೂ ಈ ಕಥೆ ಎಷ್ಟೋ ತಿರುವುಗಳು ತಿರುಗುತ್ತಾ ಬಂದಿದೆ. ಇದರಲ್ಲಿ ಮುಖ್ಯವಾಗಿ ರಾಜಯೋಗಾನಂದ ಸ್ವಾಮೀ, ಭೂಗರ್ಭದಲ್ಲಿನ ಮಹರ್ಷಿ ದೊಡ್ಡ ವ್ಯಕ್ತಿಗಳಾಗಿ ಚಿತ್ರೀಕರಿಸಲ್ಪಟ್ಟಿದ್ದಾರೆ. ಆದರೇ ಅದರಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೇ! ಕೆಲವು ಕಡೆ ರಾಜಯೋಗಾನಂದ ಸ್ವಾಮಿಗಿಂತ ಭೂಗರ್ಭದಿಂದ ಹೊರಗೆ ಬಂದ ಮಹರ್ಷಿ ದೊಡ್ಡದಾಗಿ ಕಾಣಿಸುತ್ತಿದ್ದಾನೆ. ಮತ್ತೆ ಕೆಲವು ಕಡೆ ಮಹರ್ಷಿಗಿಂತ ರಾಜಯೋಗಾನಂದ ಸ್ವಾಮಿ ದೊಡ್ಡದಾಗಿ ಕಾಣಿಸುತ್ತಿದ್ದಾನೆ. ಕೆಲವು ಕಡೆ ಇಬ್ಬರೂ ಸಮಾನವೇ ಎನ್ನುವಂತೆ ಕಾಣಿಸುತ್ತಿದೆ. ಕೆಲವು ಕಡೆ ನಡೆದ ಸಂಘಟನೆಗಳನ್ನನುಸರಿಸಿ 'ಯಾರು ದೊಡ್ಡವರು?'

ಎನ್ನುವ ಪ್ರಶ್ನೆ ಬರುತ್ತದೆ. ಆದರೇ ಗ್ರಂಥದಲ್ಲಿ ಯಾರು ದೊಡ್ಡವರು, ಯಾರು ಚಿಕ್ಕವರು ಎನ್ನುವ ವಿಷಯವನ್ನು ಕೊನೆಯವರೆಗೂ ತೀರ್ಮಾನಿಸಿ ಹೇಳಲಿಲ್ಲ. ಹಾಗೆ ಏಕೆ ಹೇಳಲಿಲ್ಲ? ಎಂದರೆ, ಈ ಗ್ರಂಥದಲ್ಲಿ ಎಷ್ಟೋ ವಿಷಯಗಳನ್ನು ಪ್ರಸ್ತಾಪಿಸಿದರೂ, ಎಲ್ಲದಕ್ಕಿಂತ ಮುಖ್ಯವಾಗಿ ದೈವಜ್ಞಾನವನ್ನು ದೃಷ್ಠಿಯಲ್ಲಿಟ್ಟುಕೊಂಡು, ಬ್ರಹ್ಮವಿದ್ಯಾ ಶಾಸ್ತ್ರವನ್ನನುಸರಿಸಿ ಬರೆಯುವುದು ನಡೆದಿದೆ. ಆದ್ದರಿಂದ ರಾಜಯೋಗಾನಂದ ಸ್ವಾಮಿಯನ್ನಾಗಲೀ, ಮಹರ್ಷಿಯನ್ನಾಗಲೀ ದೊಡ್ಡದಾಗಿ ತೀರ್ಮಾನಿಸಿ ಹೇಳಲಿಲ್ಲ. ಹಾಗೆ ಹೇಳದಂತಿರುವುದಕ್ಕೆ ಒಂದು ಕಾರಣವಿದೆ. ಅದು ಏನೆಂದರೇ! ಮಹರ್ಷಿಯನ್ನು ದೊಡ್ಡದಾಗಿ ಹೇಳಿದರೇ ರಾಜಯೋಗಾನಂದಸ್ವಾಮಿ ಚಿಕ್ಕದಾಗಿ ಕಾಣಿಸುವನು. ಆಗ ರಾಜಯೋಗಾನಂದಸ್ವಾಮಿಯನ್ನು ಶಿಷ್ಯನಾಗಿ, ಮಹರ್ಷಿಯನ್ನು ಗುರುವಾಗಿ ಹೇಳಬೇಕಾಗಿಬರುತ್ತದೆ. ಇಂಥವನು ಗುರುವೆಂದಾ ಗಲೀ, ಇಂಥವನು ಶಿಷ್ಯನೆಂದಾಗಲೀ ದೈವಜ್ಞಾನದ ಪ್ರಕಾರ ಹೇಳುವುದಕ್ಕೆ ಅವಕಾಶವಿಲ್ಲ. ಒಂದು ವೇಳೆ ಈತನು ಗುರುವು ಎಂದಾಗಲೀ, ಈತನು ಶಿಷ್ಯನೆಂದಾಗಲೀ ಹೇಳಿದರೇ ಆ ಮಾತು ದೈವಜ್ಞಾನದಲ್ಲಿ ಪ್ರಶ್ನಾರ್ಥಕವಾಗುತ್ತದೆ.

ದೈವಜ್ಞಾನವೆಲ್ಲವೂ ಬ್ರಹ್ಮವಿದ್ಯಾಶಾಸ್ತ್ರವನ್ನನುಸರಿಸಿ ಇರುತ್ತದೆ. ಬ್ರಹ್ಮವಿದ್ಯಾ ಶಾಸ್ತ್ರವನ್ನನುಸರಿಸಿ ಗತದಲ್ಲಿ ನಾವು **"ಗುರುವು"** ಎನ್ನುವ ಚಿಕ್ಕ ಗ್ರಂಥವನ್ನು ಬರೆದಿರುವುದು ನಡೆದಿದೆ. ಅದರಲ್ಲಿ ಗುರುವು ಗುರುತಿಸಲ್ಪಡದವನು ಎಂದು ಹೇಳಿದ್ದೇವೆ. ಅಷ್ಟೇ ಅಲ್ಲದೇ ಗುರುವಿಗೆ ಶಿಷ್ಯರಿರುತ್ತಾರಾ? ಎಂದೂ ಸಹ ಬರೆದಿದ್ದೇವೆ. ಗುರುವು ಯಾರಿಗೂ ತಿಳಿಯದಂತಿರುವಾಗ ಆತನಿಗೆ ಶಿಷ್ಯರೆನ್ನುವವರು ಇರುವುದಿಲ್ಲ ವೆಂದು ಹೇಳಿದ್ದೇವೆ. ಅಲ್ಲಿ ಹೇಳಿರುವುದು ಶಾಸ್ತ್ರಬದ್ಧವಾದ ವಿಷಯ. ಅದೇ ವಿಧಾನವನ್ನನುಸರಿಸಿ **"ಸತ್ಯಾನ್ವೇಷಿ ಕಥೆ"** ಎನ್ನುವ ಈ ಗ್ರಂಥದಲ್ಲಿ ಇಂಥವನು ಗುರುವೆಂದಾಗಲೀ, ಇಂಥವನು ಶಿಷ್ಯನೆಂದಾಗಲೀ ತೀರ್ಮಾನಿಸಿ ಹೇಳಲಿಲ್ಲ. ಈತನು ಶಿಷ್ಯನೆಂದು ಹೇಳಿದರೆ ಅವನಿಗೆ ಗುರುವು ಈತನೇ ಎಂದು ಹೇಳಬೇಕಾಗುತ್ತದೆ. ಆಗ ಗುರುವನ್ನು ಗುರುತಿಸಿದಂತಾಗುತ್ತದೆ. ಆಗ ಅದು ಶಾಸ್ತ್ರವಿರುದ್ಧವಾಗುತ್ತದೆ. ಬ್ರಹ್ಮವಿದ್ಯಾಶಾಸ್ತ್ರವನ್ನನುಸರಿಸಿ ಈತನೇ ಗುರುವೆಂದೂ ತೀರ್ಮಾನಿಸಿ ಹೇಳುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ಈ ಗ್ರಂಥದಲ್ಲಿ 'ಯಾರು ಗುರುವು' ಎನ್ನುವುದು ಅರ್ಥವಾಗದಂತೆ ಬರೆಯಬೇಕಾಗಿ ಬಂದಿದೆ.

ಭೂಮಿಯಮೇಲೆ ಎಲ್ಲಾದರೂ 'ಗುರುವು' ಮತ್ತು 'ಶಿಷ್ಯರು' ಎನ್ನುವ ಪದಗಳು ಕೇಳಿಸುತ್ತಲೇ ಇರುತ್ತವೆ. ಚಿಕ್ಕ ವಯಸ್ಸಿನಲ್ಲಿ ಪ್ರಾಥಮಿಕ ಪಾಠಶಾಲೆಗಳಿಗೆ ಹೋದಾಗ ಅಲ್ಲಿ ಅಕ್ಷರಗಳನ್ನು ಕಲಿಸುವ ವ್ಯಕ್ತಿಯನ್ನು ಗುರುವು ಎಂದು ಹೇಳುತ್ತಿದ್ದರು. ಯಾವ ವಿದ್ಯೆಯಾಗಲೀ ಗುರುವಿನಿಂದಲೇ ಬರುತ್ತದೆಂದು, ಗುರುವು ಇಲ್ಲದ್ದು ಯಾವ ವಿದ್ಯೆ ಬರುವುದಿಲ್ಲವೆಂದು ಹೇಳುತ್ತಿದ್ದರು. ಅದರಿಂದ ಒಂದು ಭಾಷೆಯಲ್ಲಿ ಅಕ್ಷರಗಳನ್ನು ಕಲಿಸುವ ಶಿಕ್ಷಕನನ್ನು (ಬೋಧಕನನ್ನು) ಗುರುವು ಎಂದು ಹಿರಿಯರು ಹೇಳಿದಾಗ, ಶಾಲೆಯಲ್ಲಿನ ಶಿಕ್ಷಕನನ್ನೇ ಗುರುವು ಎಂದು ಮೊದಲು ನಾವು ನಂಬಿರುವುದು ನಡೆದಿದೆ. ಚಿಕ್ಕ ವಯಸ್ಸಿನಲ್ಲಿ ಶಾಲೆಯಲ್ಲಿನ ಶಿಕ್ಷಕನನ್ನೇ ನಾನು ಗುರುವಾಗಿ ಲೆಕ್ಕಿಸಿ ನಮಸ್ಕರಿಸುತ್ತಿದ್ದೆನು. ವರ್ಷಕ್ಕೊಮ್ಮೆ ಬರುವ ಗುರು ಪೂಜೆ ದಿನದಂದು ಒಣಗಿದ ಕೊಬ್ಬರಿಬಟ್ಟಲುಗಳನ್ನು ಕೊಟ್ಟು ನಮಸ್ಕಾರವನ್ನು ಮಾಡಿ ಬರುತ್ತಿದ್ದೆವು. ನಾವು ಓದಿದ ಅರವತ್ತು ವರ್ಷಗಳ ಕೆಳಗೆ ಆ ರೀತಿ ಇರುತ್ತಿತ್ತು. ಈಗ ಆ ಸಾಂಪ್ರದಾಯ ಬಹುಶಃ ಇಲ್ಲವೆಂದುಕೊಳ್ಳುತ್ತೇನೆ. ಆದರೂ ವಿದ್ಯೆ ಹೇಳುವವನನ್ನು ಗುರುವು ಎನ್ನುವುದು ಅಲ್ಲಲ್ಲಿ ಇಂದಿಗೂ ಉಳಿದಿದೆ. ಆ ವಿಧದಲ್ಲಿ ಚಿಕ್ಕ ವಯಸ್ಸಿನಲ್ಲಿ ಶುರುವಾದ ಗುರು ಎನ್ನುವ ಮಾತು ನಾನು ವಯಸ್ಸಿಗೆ ಬರುವುದರಲ್ಲಿ ಎಷ್ಟೋ ಪ್ರಶ್ನೆಗಳು ಉದ್ಭವಿಸಿದವು.

ಚಿಕ್ಕ ವಯಸ್ಸಿನಿಂದ ಪ್ರತಿ ವಿಷಯವನ್ನು ಪ್ರಶ್ನಿಸಿ ತಿಳಿದುಕೊಳ್ಳುವ ಹವ್ಯಾಸ ನನಗೆ ಬಹಳ ಇದೆ. ಒಂದು ಹೀಗೆ ಇದೆ ಎಂದರೆ, ಅದು ಹಾಗೆ ಏಕೆ ಇದೆ? ಎಂದು ಕೇಳಿ ಅದರ ವಿವರ ತಿಳಿದುಕೊಳ್ಳಬೇಕೆನ್ನುವ ಅಭಿಲಾಷೆ ಹೆಚ್ಚಾಗಿ ಇರುತ್ತಿತ್ತು. ಆ ವಿಧಾನವನ್ನು ಹೇತುವಾದ ಎನ್ನುತ್ತಾರೆಂದು ನಾನು ದೊಡ್ಡವನಾದ ನಂತರ ನನಗೆ ತಿಳಿದಿದೆ. ಅದಕ್ಕೆ ಯಾವ ವಾದವೆಂದು ಹೆಸರಿಟ್ಟರೂ ಮೊದಲಿನಿಂದ ನನ್ನಲ್ಲಿ ಇರುವುದು ಅದೇ. ಚಿಕ್ಕ ವಯಸ್ಸಿನಲ್ಲಿ ಗುರುವನ್ನು ಪೂಜ್ಯನಾಗಿ ಭಾವಿಸಿದ ನನಗೆ ಸ್ವಲ್ಪ ಯುಕ್ತ ವಯಸ್ಸು ಬರುವುದರೊಳಗೆ ಗುರುವು ಎನ್ನುವ ವ್ಯಕ್ತಿಯ ಮೇಲೆ ಪ್ರಶ್ನೆಗಳು ಬರುವುದಕ್ಕೆ ಆರಂಭಿಸಿದವು. ಅದರಲ್ಲಿ ಮೊದಲು ಬಂದಿರುವ ಪ್ರಶ್ನೆ ಹೀಗೆ ಇದೆ. ಪ್ರಾಥಮಿಕ ಶಾಲೆಯಲ್ಲಾಗಲೀ, ಉನ್ನತ ವಿದ್ಯಾ ಶಾಲೆಯಲ್ಲಾಗಲೀ (ಹೈಸ್ಕೂಲ್‌ನಲ್ಲಾಗಲೀ) ಬೋಧಿಸುವ ಶಿಕ್ಷಕನನ್ನು ಉಪಾಧ್ಯಾಯ ಎನ್ನುವುದು

ನಡೆಯುತ್ತಿದೆ. ಉಪಾಧ್ಯಾಯನನ್ನು ಬಿಡಿಸಿ ನೋಡಿದರೆ ಉಪ+ಅಧ್ಯಾಯ= ಉಪಾಧ್ಯಾಯನು ಎಂದು ಇದೆ. 'ಉಪ' ಎಂದಾಗ ಕಡಿಮೆಯವನೆಂದೇ ಅಲ್ಲವೇ ಅರ್ಥ. ನದಿ ದೊಡ್ಡದಾದರೇ ಅದಕ್ಕೆ ಇರುವ ಉಪನದಿ ಚಿಕ್ಕದೇ ಆಗುತ್ತದೆ. ಹಾಗೆಯೇ ಅಧ್ಯಾಯನು ದೊಡ್ಡವನಾದರೇ ಉಪಾಧ್ಯಾಯನು ಚಿಕ್ಕವನೇ ಆಗುತ್ತಾನೆ. ಹಾಗಿರುವಾಗ ಚಿಕ್ಕವನನ್ನು ಗುರುವು ಎನ್ನುವುದಕ್ಕೆ ಅವಕಾಶವಿಲ್ಲ. ಏಕೆಂದರೇ ಗುರು ಎಂದರೆ ಎಲ್ಲದಕ್ಕಿಂತ, ಎಲ್ಲರಿಗಿಂತ ಮೀರಿದವನೆಂದು, ಎಲ್ಲಾ ತಿಳಿದವನೆಂದು ಅರ್ಥ. ಹಾಗಿರುವಾಗ ಚಿಕ್ಕವನು ಎನ್ನುವಂತೆ 'ಉಪ' ಎನ್ನುವ ಪದವನ್ನು ಏಕೆ ಉಪಯೋಗಿಸಿದ್ದಾರೆ? ಎನ್ನುವುದೇ ಪ್ರಶ್ನೆಯಾಗಿದೆ. ಮುಖ್ಯಮಂತ್ರಿಗಿಂತ ಅಧಿಕಾರದಲ್ಲಿ ಚಿಕ್ಕವನು ಉಪಮುಖ್ಯಮಂತ್ರಿ ಆದಾಗ, ರಾಷ್ಟ್ರಪತಿಗಿಂತ ಅಧಿಕಾರದಲ್ಲಿ ಕಡಿಮೆಯವನು ಉಪರಾಷ್ಟ್ರಪತಿ ಆದಾಗ, ಗುರುವು (ಅಧ್ಯಾಯನಿ) ಗಿಂತ ಉಪಾಧ್ಯಾಯನು ಕಡಿಮೆಯೇ ಎಂದು ತಿಳಿಯುವುದರಿಂದ ಉಪಾಧ್ಯಾಯನು ಗುರುವು ಅಲ್ಲ ಎಂದು ಸ್ಪಷ್ಟವಾಗಿ ತಿಳಿಯುತ್ತಿದೆ. ಇದನ್ನನುಸರಿಸಿ ಶಾಲೆಯಲ್ಲಿರುವ ಶಿಕ್ಷಕರು, ಕಾಲೇಜ್‌ಗಳಲ್ಲಿ ಇರುವ ಉಪನ್ಯಾಸಕರು, ಯೂನಿವರ್‌ಸಿಟೀಯಲ್ಲಿರುವ ಪ್ರೊಫೆಸರ್‌ಗಳು (ಪ್ರಾಚಾರ್ಯರು) ಗುರುವಿನೊಂದಿಗೆ ಸಮಾನವಲ್ಲವೆಂದು ಅರ್ಥವಾಗಿದೆ.

ಇಲ್ಲಿ ಒಂದು ಪ್ರಶ್ನೆ ಬರಬಲ್ಲದು, ಅದೇನೆಂದರೇ! 'ವಿದ್ಯೆ ಕಲಿಸುವವನು ಗುರುವು' ಎನ್ನುವ ನಾಣ್ನುಡಿ ವಾಕ್ಯದ ಪ್ರಕಾರ ನಮಗೆ ತಿಳಿಯದ ಪಾಠಗಳು ಹೇಳಿ, ತಿಳಿಯದ ವಿಷಯಗಳೆಲ್ಲವೂ ತಿಳಿಸುವ ಶಿಕ್ಷಕರಿಂದ ಮೊದಲುಗೊಂಡು ಪ್ರೊಫೆಸರ್‌ಗಳ ವರೆಗು, ಎಲ್ಲರೂ ಗುರುಗಳೇ ಅಲ್ಲವೇ! ಎನ್ನು ಪ್ರಶ್ನೆ ಬರಬಹುದು. ಆ ಪ್ರಶ್ನೆಗೆ ನಾವು ಈ ವಿಧವಾಗಿ ಸಮಾಧಾನ ಹೇಳುತ್ತಿದ್ದೇವೆ. **ಒಂದು ಸಲ ಕಲಿತ ವಿದ್ಯೆಯನ್ನು ನಂತರ ಎಷ್ಟು ಸಲ ಕಲಿತರೂ ಕಲಿಸಿದವನು ಗುರುವಲ್ಲ. ಕಲಿತವನು ಶಿಷ್ಯನೂ ಅಲ್ಲ** ಎನ್ನುವ ಸೂತ್ರದ ಪ್ರಕಾರ ಯಾರೂ ಗುರುಗಳು ಅಲ್ಲ, ಯಾರೂ ಶಿಷ್ಯರು ಅಲ್ಲ. ಇಲ್ಲಿ ಮತ್ತೊಂದು ಪ್ರಶ್ನೆ ಬರಬಲ್ಲದು. ಚಿಕ್ಕ ವಯಸ್ಸಿನಲ್ಲಿ ಯಾವ ವಿದ್ಯೆ ಬಾರದ ಸಮಯದಿಂದ ಕಲಿಯುವ ವಿದ್ಯೆಗಳೆಲ್ಲವೂ ಹೊಸ ವಿದ್ಯೆಗಳೇ ಅಲ್ಲವೇ! ಇದಕ್ಕೂ ಮೊದಲು ಅವು ತಿಳಿಯದ ವಿದ್ಯಗಳೇ ಅಲ್ಲವೆ! ಹಾಗಿರುವಾಗ

ಹೊಸದಾಗಿ ಕಲಿಯುವವನು ಶಿಷ್ಯನು, ಹೊಸದಾಗಿ ಕಲಿಸುವವನು ಗುರುವಾಗುತ್ತಾನಲ್ಲವೇ ಎಂದು ಯಾರಾದರೂ ಪ್ರಶ್ನಿಸಬಹುದು. ಅದಕ್ಕೆ ಸಮಾಧಾನ ಈ ರೀತಿ ಇದೆ. ಹೊಸದಾಗಿ ಕಲಿಯುವವನು ಶಿಷ್ಯನು, ಹೊಸದಾಗಿ ಕಲಿಸುವವನು ಗುರುವು ಎನ್ನುವ ಮಾತು ವಾಸ್ತವವೇ ಆದರೂ ಯಾವ ವ್ಯಕ್ತಿ ಹೊಸದಾಗಿ ಯಾವ ವಿದ್ಯೆಯನ್ನೂ ಕಲಿಯಲಿಲ್ಲ. ಹಾಗೆಯೇ ಯಾವ ವ್ಯಕ್ತಿ ಯಾವ ವಿದ್ಯೆಯನ್ನು ಇತರರಿಗೆ ಕಲಿಸಲಿಲ್ಲ. ಈ ನಮ್ಮ ಮಾತು ಎಲ್ಲರಿಗೂ ಹೊಸದಾಗಿ ಮತ್ತು ವಿಚಿತ್ರವಾಗಿ ಕಾಣಿಸಿದರೂ ಇದು ಸತ್ಯ. ಈ ವಿಷಯ ಅರ್ಥವಾಗಬೇಕೆಂದರೇ ಉದಾಹರಣೆಗೆ ಒಂದು ಸಮಾಚಾರವನ್ನು ನೋಡಿ ಅದರಲ್ಲಿನ ಸತ್ಯಾಸತ್ಯಗಳನ್ನು ತಿಳಿದುಕೊಳ್ಳೋಣ.

ಮೊಟ್ಟಮೊದಲ ಭಾರತೀಯ ಅಂತರಿಕ್ಷ ಯಾತ್ರಿಕಳು ಕಲ್ಪನಾಚಾವ್ಲಾ ಹೆಸರನ್ನು ಕೇಳದವರಿರುವುದಿಲ್ಲ. ಭಾರತೀಯ ಮಹಿಳಾ ಸಾಹಸಕ್ಕೂ, ಮೇಧಸ್ಸಿಗೂ ಚಿಹ್ನೆಯಾಗಿ ನಿಂತುಹೋದ ಪಂಜಾಬ್ ರಾಜ್ಯಕ್ಕೆ ಸೇರಿದ ಕಲ್ಪನಾಚಾವ್ಲಾ, ಅಮೆರಿಕಾ ದೇಶಕ್ಕೆ ಸೇರಿದ ಅಂತರಿಕ್ಷ ಪರಿಶೋಧನಾ ಸಂಸ್ಥೆ NASA (ನಾಸಾ) ದಲ್ಲಿ ಕೆಲಸ ಮಾಡುತ್ತಿದ್ದಳು. ಅಂತರಿಕ್ಷದೊಳಗೆ ಪ್ರಯೋಗಿಸಿದ ಕೊಲಂಬಿಯಾ ಸ್ಪೇಸ್‌ಷಿಪ್‌ನಲ್ಲಿ ಇತರ ಪ್ರಾಶ್ಚಾತ್ಯ ಅಂತರಿಕ್ಷ ಯಾತ್ರಿಕರೊಂದಿಗೆ ಅಂತರಿಕ್ಷ ಯಾತ್ರೆಯಲ್ಲಿ ಪರಿಶೋಧಕಳಾಗಿ ಪಾಲ್ಗೊಂಡು ಅಂತರಿಕ್ಷದೊಳಗೆ ಪ್ರಯಾಣಿಸಿದಳು. ಆಕಾಶದಲ್ಲೇ ಸ್ವಲ್ಪ ಕಾಲ ಕಳೆದು ಪರಿಶೋಧನೆ ಸಾಗಿಸಿದ ನಂತರ ಕೊಲಂಬಿಯಾ ಸ್ಪೇಸ್‌ಷಿಪ್ ಭೂಮಿಗೆ ತಿರುಗು ಪ್ರಯಾಣ ಪ್ರಾರಂಭಿಸಿದೆ. 2003ನೇ ವರ್ಷ ಫೆಬ್ರವರಿ 1ನೇ ತಾರೀಖು ಇನ್ನೊಂದು ಹದಿನಾರು (16) ನಿಮಿಷಗಳಲ್ಲಿ ಭೂಮಿ ಮೇಲೆ ಇಳಿಯಬೇಕಾದ ಕೊಲಂಬಿಯಾ ಸ್ಪೇಸ್‌ಷಿಪ್ ದುರದೃಷ್ಟವಶಾತ್ ಊಹಿಸದ ಪರಿಣಾಮಗಳಿಂದ ಆಕಾಶದಲ್ಲಿಯೇ ಭೂಮಿ ವಾತಾವರಣದೊಳಗೆ ಪ್ರವೇಶಿಸುತ್ತಲೇ ಸ್ಫೋಟಗೊಂಡಿತು. ಅದರೊಂದಿಗೆ ಅದರಲ್ಲಿ ಪ್ರಯಾಣಿಸುತ್ತಿರುವ ಅಂತರಿಕ್ಷ ಯಾತ್ರಿಕರೆಲ್ಲರೂ ಚಿಕ್ಕಚಿಕ್ಕ ತುಣುಕುಗಳಾಗಿ ಮರಣಿಸಿದ್ದಾರೆ. ಭಾರತೀಯ ವ್ಯೋಮಗಾಮಿ ಕಲ್ಪನಾಚಾವ್ಲಾ ಕೂಡಾ ಆ ಘೋರ ಪ್ರಮಾದದಲ್ಲಿ ಪ್ರಾಣಗಳು ಕಳೆದುಕೊಳ್ಳುವುದು ನಡೆದಿದೆ. ಆದರೇ ಆಕೆ ಕೆಲವು ದಿನಗಳಿಗೇ ಪುನಃ ಭೂಮಿಯ ಮೇಲೆ ಹುಟ್ಟುವುದು ನಡೆದಿದೆ.

ಕಲ್ಪನಾಚಾವ್ಲಾ ಪುನಃ ಹುಟ್ಟಿದ ಸಮಾಚಾರವನ್ನು (ಎಸ್.ಬಿ.ಎನ್ 7) ಛಾನಲ್ ಮತ್ತು ಇಂಡಿಯಾಟುಡೇ ಪತ್ರಿಕೆ, ಕಲ್ಪನಾಚಾವ್ಲಾ ಪುನಃ ಜನ್ಮಿಸಿದ ಕಥನವನ್ನು ಪ್ರಸಾರ ಮಾಡಿ ಪ್ರಪಂಚಕ್ಕೆ ತಿಳಿಸುವುದು ನಡೆದಿದೆ. ಆ ವಿವರಗಳನ್ನು ನೋಡಿದರೇ, ಉತ್ತರ ಭಾರತದೇಶದಲ್ಲಿ ಉತ್ತರಪ್ರದೇಶದ ರಾಷ್ಟ್ರದಲ್ಲಿರುವ ಬುಲಂದ್ ಷಹರ್ ಎನ್ನುವ ಗ್ರಾಮದಲ್ಲಿ ರಾಜೀಕುಮಾರ್ ಎನ್ನುವ ಸಾಧಾರಣ ವ್ಯವಸಾಯ ಕೂಲಿಯಾಗಿ ಕೆಲಸ ಮಾಡುತ್ತಿರುವ ವ್ಯಕ್ತಿ ಕುಟುಂಬದಲ್ಲಿ ಆತನಿಗೆ ಕಲ್ಪನಾಚಾವ್ಲಾ ಮಗಳಾಗಿ ಜನ್ಮಿಸಿದ್ದಾಳೆ. 2003 ನೇ ವರ್ಷ ಮಾರ್ಚ್ 23ನೇ ತಾರೀಖಿನಂದು ಉಪಾಸನ ಎನ್ನುವ ಹೆಸರಿಂದ ಆ ಕುಟುಂಬದಲ್ಲಿ ಕಲ್ಪನಾಚಾವ್ಲಾ ಜನ್ಮಿಸುವುದು ನಡೆದಿದೆ. ಉಪಾಸನ (ಕಲ್ಪನಾಚಾವ್ಲಾ) ಗೆ 4 ವರ್ಷಗಳ ವಯಸ್ಸಿನಲ್ಲಿ ಮಾತುಗಳು ಬಂದಿವೆ. ಮಾತನಾಡುವುದನ್ನು ಪ್ರಾರಂಭಿಸಿದ ಉಪಾಸನ, ತಾನು ಗತ ಜನ್ಮದಲ್ಲಿ ಕಲ್ಪನಾಚಾವ್ಲಾ ಎನ್ನುವ ಹೆಸರಿರುವ ಅಂತರಿಕ್ಷ ಪರಿಶೋಧಕಳೆಂದೂ, ತನ್ನ ತಂದೆಯ ಹೆಸರು ಬನಾರ್ಸೀದಾಸ್‌ಯೆಂದೂ, ನಾಲ್ಕು ವರ್ಷಗಳ ಕೆಳಗೆ ತಾನು ತನ್ನೊಂದಿಗೆ ಅಂತರಿಕ್ಷ ಪರಿಶೋಧಕರೊಂದಿಗೆ ಸೇರಿ ಒಂದು ವಿಮಾನದಲ್ಲಿ ಆಕಾಶದಿಂದ ಇಳಿದು ಬರುತ್ತಿರುವಾಗ, ತಮ್ಮ ವಿಮಾನಕ್ಕೆ ಪ್ರಮಾದ ನಡೆದು ತಾವೆಲ್ಲರೂ ಸತ್ತುಹೋಗಿದ್ದೇವೆಂದು ಹೇಳುವುದು ನಡೆದಿದೆ.

ಗತ ಜನ್ಮದ ಎಲ್ಲಾ ವಿವರಗಳನ್ನು ಮಣಿಪೋಣಿಸಿದಂತೆ ಹೇಳುತ್ತಿರುವ ಉಪಾಸನ (ಕಲ್ಪನಾಚಾವ್ಲಾ) ವೊಂದರ ಹೆಸರು ಉತ್ತರಪ್ರದೇಶ್ ರಾಷ್ಟ್ರವೆಲ್ಲಾ ಕ್ರಮವಾಗಿ ತಿಳಿದುಹೋಯಿತು. ಪ್ರಸ್ತುತ ಉತ್ತರಪ್ರದೇಶ್‌ನಲ್ಲಿನ ಎತ್ವಾ ಜಿಲ್ಲೆಯಲ್ಲಿನ "ಪತಾ" ಎನ್ನುವ ಗ್ರಾಮದಲ್ಲಿ ಕೂಲಿ ಕೆಲಸ ಮಾಡಿಕೊಳ್ಳುತ್ತಿರುವ ತಂದೆ ರಾಜ್‌ಕುಮಾರ್‌ನೊಂದಿಗೆ ಜೀವಿಸುತ್ತಿರುವ ಉಪಾಸನ ತನ್ನನ್ನು ಸಂದರ್ಶನ ಮಾಡುವುದಕ್ಕೆ ಬಂದಿರುವ ಪ್ರಪಂಚ ಸ್ಥಾಯಿ ಮೀಡಿಯಾ ಪ್ರತಿನಿಧಿಗಳೊಂದಿಗೆ ಮಾತನಾಡುತ್ತಾ ನಾವು ಭೂಮಿಮೇಲೆಗೆ ಮರಳಿ ಬರುತ್ತಿರುವ ಅಂತರಿಕ್ಷನೌಕೆಗೆ ಆಕಾಶದಲ್ಲಿ ಸಂಚರಿಸುತ್ತಿರುವ ಒಂದು ದೊಡ್ಡ ಮಂಜಿನ ಗೋಳ ಗುದ್ದಿಕೊಂಡಿದೆ ಯೆಂದು, ಅದರಿಂದ ತಮ್ಮ ಅಂತರಿಕ್ಷನೌಕೆ ಸ್ಫೋಟಗೊಂಡು ಅದರಲ್ಲಿನ ತಾವೆಲ್ಲರೂ ಮರಣಿಸಿದ್ದೇವೆಂದು ಹೇಳಿದ್ದಾಳೆ. 2003ನೇ ವರ್ಷ ಫೆಬ್ರವರೀ 1ನೇ ತಾರೀಖಿನಂದು

ನಾಸಾ ಕೇಂದ್ರದವರು ಅಂತರಿಕ್ಷನೌಕೆಗೆ ಹೊರಗಡೆ ಸುತ್ತಲೂ ಜೋಡಿಸಿದ ಪ್ಲೇಟ್ ಬಿಚ್ಚಿ ಹೋಗಿರುವುದರಿಂದ ಆ ನೌಕೆ ಭೂಮಿ ವಾತಾವರಣ ದೊಳಗೆ ಬರುತ್ತಲೇ ವಾತಾವರಣ ಒತ್ತಡದ ಬಿಸಿಗೆ ಸ್ಫೋಟಗೊಂಡಿದೆ ಎಂದು ಹೇಳಿದ್ದಾರೆ. ನಾಸಾ ದವರೆಂದುಕೊಂಡಂತೆ ಅಲ್ಲಿ ನಡೆದಿಲ್ಲವೆಂದು, ಆಕಾಶದಲ್ಲಿ ಭೂಮಿಗೆ 70 ಕಿಲೋಮೀಟರ್‌ಗಳ ದೂರದಲ್ಲೇ ಮಂಜಿನಗೋಳಕ್ಕೆ ಅಂತರಿಕ್ಷನೌಕೆ ಗುದ್ದಿಕೊಳ್ಳುವು ದರಿಂದ ಪ್ರಮಾದ ನಡೆದಿದೆಯೆಂದು ಪ್ರತ್ಯಕ್ಷ ಸಾಕ್ಷಿಯಾದ ಕಲ್ಪನಾಚಾವ್ಲಾ ಹೇಳಿರುವುದರಿಂದ ತಿಳಿದುಹೋಯಿತು.

ಇಲ್ಲಿ ಪುನರ್ಜನ್ಮಗಳ ವಿಷಯದಲ್ಲಿ ಅಂತರಿಕ್ಷ ಪರಿಶೋಧಕಳು ಕಲ್ಪನಾಚಾವ್ಲಾ ಸತ್ತುಹೋಗಿ ಪುನಃ ಹುಟ್ಟಿರುವ ವಿಷಯ ತಿಳಿದಿದೆ. ತಿಳಿದ ಸಮಾಚಾರದ ಪ್ರಕಾರ ಆಕೆ ಮರಣಿಸಿರುವುದು ಫೆಬ್ರವರೀ ತಿಂಗಳು ಒಂದನೇ ತಾರೀಖು 2003ನೇ ವರ್ಷ. ಆಕೆ ಪುನಃ ಹುಟ್ಟಿರುವುದು ಮಾರ್ಚ್ 23, 2003. ಇದರ ಪ್ರಕಾರ ಕಲ್ಪನಾಚಾವ್ಲಾ ಮರಣಿಸಿದ ನಂತರ 52 ದಿನಗಳಿಗೆ ಪುನಃ ಹುಟ್ಟಿದ್ದಾಳೆಂದು ತಿಳಿದುಹೋಗಿದೆ. ಆಕೆ ಹುಟ್ಟಿದ ನಂತರ ಚಿಕ್ಕ ವಯಸ್ಸಿನಿಂದ ಪುನಃ ಓದಿಕೊಂಡು ಎಲ್ಲಾ ವಿದ್ಯೆಗಳನ್ನು ಕಲಿಯಬೇಕಾಗಿದೆ. ಈಗ ಅಸಲು ವಿಷಯಕ್ಕೆ ಬಂದು ನೋಡಿದರೆ ಈ ಜನ್ಮದಲ್ಲಿ ಕಲಿಯಬೇಕಾದ ವಿದ್ಯೆಗಳೆಲ್ಲವೂ ಕಲ್ಪನಾಚಾವ್ಲಾ ಹಿಂದಿನ ಜನ್ಮದಲ್ಲೇ ತಿಳಿದುಕೊಂಡಿದ್ದಾಳೆ. ಕಲ್ಪನಾಚಾವ್ಲಾ ಎನ್ನುವ ಜೀವಾತ್ಮನಿಗೆ ಹಿಂದಿನ ಜನ್ಮದಲ್ಲೇ ಎಲ್ಲ ವಿದ್ಯೆಗಳು ತಿಳಿದಿದ್ದರೂ ಈ ಜನ್ಮದಲ್ಲಿ ಆ ವಿದ್ಯೆಗಳನ್ನು ಜ್ಞಾಪಕ ಮಾಡುವ ಮನಸ್ಸು ಇಲ್ಲದಿರುವುದರಿಂದ ತನಗೆ ತಿಳಿದಿರುವ ವಿಷಯಗಳೆಲ್ಲವೂ ತಿಳಿಯವೆಂಬ ಭ್ರಮೆಯಲ್ಲಿ ಜೀವಿಯು ಇದ್ದು ಹೊಸದಾಗಿ ಕಲಿಯಬೇಕೆಂದು ಅಂದುಕೊಳ್ಳುತ್ತಿದ್ದಾನೆ. ವಾಸ್ತವಕ್ಕೆ ಈಗ ಕಲಿಯಬೇಕೆಂದು ಅಂದುಕೊಳ್ಳುವ ವಿದ್ಯೆಗಳೆಲ್ಲವೂ ಗತದಲ್ಲೇ ಪ್ರತಿ ಜೀವಿಯು ಕಲಿತಿದ್ದಾನೆ. ಆದ್ದರಿಂದ **"ಕಲಿತಿರುವ ವಿದ್ಯೆಯನ್ನು ಕಲಿಯುವವನು ಶಿಷ್ಯನಲ್ಲ, ಕಲಿಸುವವನು ಗುರುವು ಅಲ್ಲ"** ಎಂದು ಹೇಳಿದ್ದೇವೆ. ಪ್ರತಿ ಜೀವಿಯು ತನಗೆ ಎಲ್ಲ ವಿದ್ಯೆಗಳು ತಿಳಿದಿದ್ದರೂ ತಿಳಿಯದೆಂಬ ಭ್ರಮೆಯಲ್ಲಿದ್ದಾನೆ. ತಾನು ಗತ ಜನ್ಮದಲ್ಲಿ ಇಂತಹ ಹೆಸರಿಂದ ಇದ್ದರೂ, ಇಂತಹ ಊರಲ್ಲಿದ್ದರೂ ತಾನು ಗತದಲ್ಲಿ ಇಲ್ಲವೆಂದು ಈಗ

ಹುಟ್ಟಿದಾಗಿನಿಂದಲೇ ಇದ್ದೇನೆಂದು ಅಂದುಕೊಳ್ಳುತ್ತಿದ್ದಾನೆ. ಗತದಲ್ಲಿ ತಾನು ಈಗ ಹುಟ್ಟಿದ ಊರಿನಲ್ಲೇ ನಿವಾಸಿಸಿದರೂ, ಪುನಃ ಅದೇ ಊರಲ್ಲಿ ಹುಟ್ಟಿದರೂ ತಾನು ಗತದಲ್ಲಿ ಅಲ್ಲಿ ಇಲ್ಲವೆನ್ನುವ ಭ್ರಮೆಯಲ್ಲಿದ್ದಾನೆ. ಕಳೆದ ಗತಕಾಲದಲ್ಲಿ ನೂರು ವರ್ಷಗಳ ಕೆಳಗೆ ಇದೇ ಭೂಮಿಯ ಮೇಲೆ ತಾನು ನಿವಾಸಿಸಿದರೂ, ನಾನು ಆಗ ಇದ್ದೆ ಎನ್ನುವ ನೆನಪು ಯಾರಿಗೂ ಇಲ್ಲ. ಪ್ರತಿ ಮನುಷ್ಯ ಗತದಲ್ಲಿ ದ್ವಾಪರಯುಗದಲ್ಲಿ ತಾನು ಇದ್ದರೂ ಹೇಗಾದರೇ ನಂಬಲಾರದ ಸ್ಥಿತಿಯಲ್ಲಿದ್ದಾನೋ, ಹಾಗೆಯೇ ಗತದಲ್ಲಿ ತಾನು ಎಲ್ಲಾ ವಿದ್ಯೆಗಳೂ ಕಲಿತಿದ್ದರೂ, ತಾನು ಈಗ ಹೊಸದಾಗಿ ವಿದ್ಯೆಗಳು ಕಲಿಯಬೇಕೆನ್ನುವ ಭ್ರಮೆಯಲ್ಲಿ ಇದ್ದಾನೆ. ಗತದಲ್ಲಿ ಕಲಿತಿರುವ ವಿದ್ಯೆಯನ್ನೇ ಈಗ ಪುನಃ ಕಲಿತರೂ ಅವನು ಶಿಷ್ಯನಲ್ಲ, ಕಲಿಸುವವನು ಗುರುವೂ ಅಲ್ಲ ಎನ್ನುವ ನಾಣ್ನುಡಿ ವಾಕ್ಯದ ಪ್ರಕಾರ ಈದಿನ ವಿದ್ಯೆಗಳನ್ನು ಕಲಿಯುವ ಯಾರೂ ಶಿಷ್ಯನಲ್ಲ, ಹಾಗೆಯೇ ಕಲಿಸುವವನು ಯಾರೂ ಗುರುವಲ್ಲವೆಂದು ಹೇಳಬಹುದು.

ಆದರೆ ಇಲ್ಲಿ ಮತ್ತೊಂದು ಪ್ರಶ್ನೆ ಬರಬಹುದು. ಅದೇನೆಂದರೇ! ಈ ಜನ್ಮದಲ್ಲಿ ಕಲಿಯಬೇಕಾದ ವಿದ್ಯೆ ಹೋದ ಜನ್ಮದಲ್ಲಿಯೇ ತಿಳಿದಿರುವಂತಾದರೇ, ಅದೂ ಸಹ ಆಗ ಕಲಿತಿರುವುದಲ್ಲ ಅಲ್ಲವೆ! ಕಳೆದ ಜನ್ಮದಲ್ಲಿನದು ಅದಕ್ಕೂ ಮೊದಲೇ ಕಳೆದು ಹೋದ ಜನ್ಮದಲ್ಲಿ ತಿಳಿದಿರುತ್ತದಲ್ಲವೆ! ಕಳೆದ ಯಾವುದೋ ಒಂದು ಜನ್ಮದಲ್ಲಾದರೂ ಜೀವಿಯು ವಿದ್ಯೆಯನ್ನು ಕಲಿತಿರುತ್ತಾನಲ್ಲವೇ! ಆಗಾದರೂ ಒಬ್ಬನಿಗೆ ಹೇಳುವವನು ಮತ್ತೊಬ್ಬನು ಇರುತ್ತಾನಲ್ಲವೆ! ಆಗ ಕಲಿತವನು ಶಿಷ್ಯನು, ಕಲಿಸಿದವನು ಗುರುವು ಆಗುತ್ತಾರಲ್ಲವೆ! ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಈ ರೀತಿ ಇದೆ. ಇಲ್ಲಿ ಚೆನ್ನಾಗಿ ಆಲೋಚಿಸಿ ನೋಡಿದಂತಾದರೇ ಮನುಷ್ಯ ಅಥವಾ ಜೀವಿಯು ತಿಳಿಯಬೇಕಾದ ಜ್ಞಾನ ಅಥವಾ ವಿದ್ಯೆಗಳು ಎರಡು ವಿಧಗಳು ಇವೆ. ಒಂದು ಪ್ರಪಂಚ ಸಂಬಂಧವಾದ ಜ್ಞಾನವಾದಾಗ, ಎರಡನೆಯದು ಪರಮಾತ್ಮ ಸಂಬಂಧ ಜ್ಞಾನ. ಮನುಷ್ಯನಿಗೆ ಬೇಕಾದ ದ್ವಿವಿಧ ಜ್ಞಾನಗಳನ್ನು ದ್ವಿವಿಧ ವಿದ್ಯೆಗಳಾಗಿ ಹೇಳಬಹುದು. ಯಾವ ಜ್ಞಾನವಾದರೂ ಕಲಿಯಬೇಕಾಗಿ ಬಂದಾಗ ಅದನ್ನು ವಿದ್ಯೆ ಎನ್ನಲಾಗುತ್ತದೆ. **ವಿದ್ಯೆ ಎಂದರೆ ತಿಳಿಯುವುದೆಂದು, ಜ್ಞಾನವೆಂದರೇ ತಿಳಿಯಬೇಕಾಗಿರುವುದು ಎಂದು ಹೇಳಬಹುದು**. ಹೇಗೆ ನೋಡಿದರೂ

ವಿದ್ಯೆ ಎನ್ನುವುದು, ಜ್ಞಾನ ಎನ್ನುವುದು ಎರಡೂ ಒಂದೇ ಅರ್ಥವನ್ನು ಕೊಡುತ್ತಿವೆ. ಪ್ರಪಂಚ ವಿದ್ಯೆಗಳಾಗಲೀ ಅಥವಾ ಪ್ರಪಂಚ ಜ್ಞಾನವಾಗಲೀ ಹಾಗೇ ಪರಮಾತ್ಮ ವಿದ್ಯೆಯಾಗಲೀ ಅಥವಾ ದೈವ ಜ್ಞಾನವಾಗಲೀ ಎರಡೂ ಒಬ್ಬ ಮನುಷ್ಯನಿಗೆ ಇತರರಿಂದಲೇ ತಿಳಿಯಬೇಕಾಗಿದೆ. ಇಲ್ಲಿ ಜ್ಞಾನವನ್ನು ತಿಳಿದುಕೊಳ್ಳುವವನು ಶಿಷ್ಯನು, ತಿಳಿಸುವವನು ಗುರುವು ಎಂದು ಹೇಳಿದರೂ, ಈ ಗುರು ಶಿಷ್ಯರ ಸಂಬಂಧದಲ್ಲಿ ಎಲ್ಲರಿಗೂ ತಿಳಿಯದ ರಹಸ್ಯ ಒಂದು ಇದೆ. ಅದು ಏನೆಂದರೇ!

ಪ್ರಪಂಚ ವಿದ್ಯೆಗಳನ್ನು ಕಲಿಸುವವನು ಇದ್ದರೂ ಆತನು ಪ್ರತ್ಯಕ್ಷವಾಗಿ ಮತ್ತೊಬ್ಬ ವ್ಯಕ್ತಿಯಾಗಿ ಇರುವುದಿಲ್ಲ. ಒಬ್ಬ ಮನುಷ್ಯನಿಗೆ ಪ್ರಪಂಚ ಜ್ಞಾನವನ್ನು ಕಲಿಸುವವನು ಪ್ರತ್ಯಕ್ಷವಾಗಿ ಇರುವುದಿಲ್ಲ, ಆದ್ದರಿಂದ ಪ್ರಪಂಚ ವಿದ್ಯೆಯನ್ನು ಕಲಿಸಿದವನು ಇಂತಹವನೆಂದು ಹೇಳಲಾರದೇ ಹೋಗುತ್ತಿದ್ದೇವೆ. ಈತನೇ ನನಗೆ ಪ್ರಪಂಚ ಜ್ಞಾನವನ್ನು ಕಲಿಸಿರುವವನೆಂದು ಯಾರಿಗೂ ತೋರಿಸಲಾಗದೇ ಹೋಗುತ್ತಿದ್ದೇವೆ. ಇನ್ನೊಂದು ವಿಷಯವೇನೆಂದರೇ **ಪರಮಾತ್ಮ ಜ್ಞಾನವನ್ನು ತಿಳಿಸುವವನು ಪ್ರತ್ಯಕ್ಷ ಮನುಷ್ಯನಾಗಿ ಇರುತ್ತಾನೆ.** ಆದರೆ ನನಗೆ ಪರಮಾತ್ಮ ಜ್ಞಾನವನ್ನು ಈತನೇ ಹೇಳಿದ್ದಾನೆಂದು ಮನುಷ್ಯ ಒಪ್ಪಿಕೊಳ್ಳುವುದಿಲ್ಲ. ಆದ್ದರಿಂದ ಈತನೇ ನನಗೆ ದೈವಜ್ಞಾನವನ್ನು ಬೋಧಿಸಿದ ಗುರುವೆಂದು ಇತರರಿಗೆ ತೋರಿಸಲಾರನು. ಪ್ರಪಂಚ ಜ್ಞಾನವನ್ನು ಬೋಧಿಸಿದವನು ಕಾಣಿಸುವುದಿಲ್ಲ, ಆದ್ದರಿಂದ ಇತರರಿಗೆ ತೋರಿಸಲಾಗದೇ ಹೋಗುವುದು ಒಂದು ಕಾರಣವಾದರೇ, ಪರಮಾತ್ಮ ಜ್ಞಾನವನ್ನು ಬೋಧಿಸಿದವನನ್ನು ಶಿಷ್ಯನೇ ನಂಬುವುದಿಲ್ಲ ಆದ್ದರಿಂದ ಇತರರಿಗೆ ತೋರಿಸಲಾಗದೇ ಹೋಗುತ್ತಿದ್ದಾನೆ. ಪ್ರಪಂಚ ಜ್ಞಾನವನ್ನು ಬೋಧಿಸಿದವನು ಗುರುವೇ ಆದರೂ ಆತನು ಶಿಷ್ಯನಿಗೇ ತಿಳಿಯಲಿಲ್ಲ. ಆದ್ದರಿಂದ ಅಲ್ಲಿ ಪ್ರಪಂಚ ವಿದ್ಯೆಯನ್ನು ಕಲಿಸಿದ ಗುರುವು ಇಲ್ಲ, ಆದ್ದರಿಂದ ಆತನಿಗೆ ಶಿಷ್ಯನೂ ಸಹ ಇಲ್ಲವೆಂದೇ ಹೇಳಬಹುದು. ಹಾಗೆಯೇ ಪರಮಾತ್ಮ ವಿದ್ಯೆಯನ್ನು ಕಲಿಸಿದವನು ಗುರುವೇ ಆದರೂ ಅಲ್ಲಿ ಗುರುವು ಕಾಣಿಸಿದರೂ ಶಿಷ್ಯನೇ ಗುರುವನ್ನು ಒಪ್ಪಿಕೊಳ್ಳುತ್ತಿಲ್ಲ. ಆದ್ದರಿಂದ ಇಲ್ಲಿಯೂ ಸಹ ಇಂತಹವನು ಗುರುವೆಂದು ಹೇಳಲಾರದೇ ಹೋಗುತ್ತಿದ್ದಾನೆ. ಗುರುವೇ ಇಲ್ಲದೇ ಹೋದಾಗ ಶಿಷ್ಯನು ಸಹ ಇಲ್ಲವೆಂದೇ ಹೇಳಬಹುದು. ಒಂದು ವಿಧವಾಗಿ

ಎರಡು ವಿದ್ಯೆಗಳನ್ನು ಕಲಿತ ಶಿಷ್ಯರು ಪ್ರತ್ಯಕ್ಷವಾಗಿ ಇದ್ದರೂ ಅವರಿಗೆ ಗುರುಗಳು ಯಾರೆಂದು ನಿರ್ಣಯಿಸಲಾಗದೇ ಹೋಗುವುದರಿಂದ ಇಂಥವನು ಗುರುವು ಎಂದಾಗಲೀ, ಈ ಗುರುವಿಗೆ ಇಂಥವನು ಶಿಷ್ಯನೆಂದಾಗಲೀ ತೀರ್ಮಾನಿಸಿ ಹೇಳಲಾರದೇ ಹೋಗುತ್ತಿದ್ದೇವೆ. ಆದ್ದರಿಂದ **"ಗುರುವು"** ಎನ್ನುವ ಗ್ರಂಥದಲ್ಲಿ ಗುರುವನ್ನು ಗುರುತಿಸಲಾರೆವು ಎಂದು ಬರೆದಿದ್ದೇವೆ. ಅಷ್ಟೇ ಅಲ್ಲದೇ ಗುರುವಿಗೆ ಶಿಷ್ಯರಿರುತ್ತಾರಾ? ಎಂದು ಸಹ ಬರೆದಿದ್ದೇವೆ.

ಈ ದಿನ ಭೂಮಿಯ ಮೇಲೆ ಗುರು ಶಿಷ್ಯ ಸಾಂಪ್ರದಾಯಗಳಿದ್ದರೂ, ವಾಸ್ತವಕ್ಕೆ ಅವು ಹೆಸರಿಗೆ ಮಾತ್ರ ಸಾಂಪ್ರದಾಯಗಳೆ ಹೊರತು, ಅವರಲ್ಲಿ ಶಿಷ್ಯನು ಗುರುವು ಎನ್ನುವ ಇಬ್ಬರು ವ್ಯಕ್ತಿಗಳಿದ್ದರೂ, ಅವರು ಹೆಸರಿಗಾಗಿ ಮಾತ್ರ ಇರುತ್ತಾರೆ ವಿನಃ, ವಾಸ್ತವಕ್ಕೆ ಶಾಸ್ತ್ರಬದ್ಧವಾಗಿ ಗುರುವು ಇಲ್ಲ, ಶಿಷ್ಯನೂ ಇಲ್ಲ. ಎಲ್ಲಿ ಯಾವ ಗುರುಗಳಿದ್ದರೂ ಅವರು ಕಲಿಸಿದ ವಿದ್ಯೆಯನ್ನು ಕಲಿಸುವವರೇ ಹೊರತು ಹೊಸ ವಿದ್ಯೆಯನ್ನು ಕಲಿಸುವವರಲ್ಲ. ಹಾಗೆಯೇ ಎಲ್ಲಿ ಶಿಷ್ಯರಿದ್ದರೂ ಅವರು ಕಲಿತ ವಿದ್ಯೆಯನ್ನು ಕಲಿಯುವವರೇ ಹೊರತು ಹೊಸ ವಿದ್ಯೆಯನ್ನು ಕಲಿಯುವವರಲ್ಲ. ಆದ್ದರಿಂದ ಶಾಸ್ತ್ರಬದ್ಧವಾಗಿ ಎಲ್ಲರನ್ನೂ ಶಿಷ್ಯರೆಂದು ಕರೆಯಲಾರೆವು. ಹಾಗೆಯೇ ಎಲ್ಲರನ್ನೂ ಗುರುಗಳೆಂದು ಸಹ ಕರೆಯಲಾರೆವು. ಪ್ರಪಂಚ ವಿದ್ಯೆಯನ್ನು ಕಲಿಸುವವನು ಗುರುವೇ, ಹಾಗೆಯೇ ಪರಮಾತ್ಮ ವಿದ್ಯೆಯನ್ನು ಕಲಿಸುವವನೂ ಗುರುವೇ ಆದರೂ ಆ ಗುರುಗಳಲ್ಲಿ ಪ್ರಪಂಚ ವಿದ್ಯೆಯನ್ನು ಕಲಿಸುವವನು ಕಾಣಿಸದ ಗುರುವೆಂದು, ದೈವ ಜ್ಞಾನವನ್ನು (ಪರಮಾತ್ಮ ವಿದ್ಯೆಯನ್ನು) ಕಲಿಸುವವರು ಕಾಣಿಸುವ ಗುರುವೆಂದು ಸಹ ಹೇಳಿದ್ದೇವೆ. ಕಾಣಿಸದ ಗುರುವನ್ನು ಇಂಥಹವನೆಂದು ತೋರಿಸಲಾಗದೇ ಹೋದರೂ ಅಥವಾ ಹೇಳಲಾರದೇ ಹೋದರೂ ಕಾಣಿಸುವ ಗುರುವನ್ನು ಇಂಥವನೆಂದು ತೋರಿಸಬಹುದಲ್ಲವೇ! ಅಥವಾ ಹೇಳಬಹುದಲ್ಲವೇ! ಆದರೇ ಶಿಷ್ಯನಾದವನು ಎರಡು ವಿಧಗಳ ಇಬ್ಬರು ಗುರುಗಳನ್ನು ಏಕೆ ಗುರುತಿಸಲಾಗದೇ ಹೋಗುತ್ತಿದ್ದಾನೆಂದು ಕೆಲವರಾಗಲೀ, ಎಲ್ಲರಾಗಲೀ ಪ್ರಶ್ನಿಸಬಹುದು. ಈ ಪ್ರಶ್ನೆಗೆ ನಮ್ಮ ಸಮಾಧಾನ ಈ ರೀತಿ ಇದೆ ನೋಡಿರಿ. **ಗುರುವು ಶಿಷ್ಯರು ಎನ್ನುವುದು ದೊಡ್ಡ ರಹಸ್ಯವಾದ ಜ್ಞಾನ.** ಅಷ್ಟು ದೊಡ್ಡ ರಹಸ್ಯವನ್ನು ಹೇಳಬೇಕೆಂದರೇ ದೊಡ್ಡ

ಸಾಹಸದಿಂದ ಕೂಡಿಕೊಂಡ ಕೆಲಸವಾಗುತ್ತದೆ. ಆದ್ದರಿಂದ ನಾನು ಮೊದಲೇ ಹೇಳುವುದೇನೆಂದರೇ! ಇಲ್ಲಿ ನನಗೆ ತಿಳಿದಿರುವುದು ನಾನು ಬರೆಯುತ್ತಿದ್ದೇನೆ. ನಾನೂ ಸಹ ಇದೇ ನಿಜವೆಂದು ತೀರ್ಮಾನಿಸಿ ಹೇಳುವುದಿಲ್ಲ. ಒಂದು ವೇಳೆ ನಾನು ಹೇಳಿರುವುದು ಸತ್ಯವೆಂದು ಅರ್ಥವಾದರೇ ನನ್ನ ಮಾತನ್ನು ನಂಬಿರಿ, ಅರ್ಥವಾಗದಿದ್ದರೇ ಬಿಟ್ಟುಹಾಕಿ. ಅಷ್ಟೇ ಹೊರತು ನಾನು ಹೇಳಿರುವುದು ಎಲ್ಲಾ ಸತ್ಯವೆಂದು ಇಲ್ಲಿ ನಾನೂ ಸಹ ಹೇಳಲಿಲ್ಲ.

ಸೃಷ್ಟಿ ಆದಿಯಲ್ಲಿ ಮನುಷ್ಯ ಹುಟ್ಟಿದ ನಂತರ ಮೊದಲು ಪರಮಾತ್ಮ ಜ್ಞಾನವೇ ಸಂಪೂರ್ಣವಾಗಿ ಹೇಳಲಾಗಿದೆ. ನಂತರ ಪ್ರಪಂಚ ಜ್ಞಾನ ಹಂತಹಂತವಾಗಿ ಹೇಳಲಾಗಿದೆ. ಮನುಷ್ಯ ಅವಶ್ಯಕವನ್ನನುಸರಿಸಿ ಯಾವಾಗ ಏನು ಎಷ್ಟು ಹೇಳಬೇಕೋ ಅಷ್ಟೇ ಪ್ರಪಂಚ ಜ್ಞಾನವನ್ನು ಹೇಳುವುದು ನಡೆದಿದೆ. ಆರೀತಿ ಪ್ರಪಂಚ ಹುಟ್ಟಿದಾಗಿನಿಂದ ಪ್ರಪಂಚ ಜ್ಞಾನವನ್ನು ಮನುಷ್ಯರಿಗೆ ಕಲಿಸಲಾಗುತ್ತಿದೆ. ಮನುಷ್ಯ ಪ್ರಪಂಚ ಜ್ಞಾನವನ್ನು ಹಂತ ಹಂತವಾಗಿ ಕಲಿಯುತ್ತಾ ಬರುತ್ತಿದ್ದಾನೆ. ಒಂದು ಸಲ ಕಲಿತ ನಂತರ ಪುನಃ ಒಬ್ಬರಿಗೊಬ್ಬರು ಹೇಳಿಕೊಳ್ಳುವುದು ನಡೆಯುತ್ತಿದೆ. ಹಾಗೆ ತಿಳಿದುಕೊಂಡ ಪ್ರಪಂಚ ಜ್ಞಾನವನ್ನೇ ಜನ್ಮ ಜನ್ಮಕ್ಕೂ ಮರಣದಲ್ಲಿ ಮರೆತುಹೋ ಗುತ್ತಾ ಜೀವನದಲ್ಲಿ ಕಲಿಯುವುದು ನಡೆಯುತ್ತಿದೆ. ಪ್ರಪಂಚ ಹುಟ್ಟಿದಾಗಿನಿಂದ ಮನುಷ್ಯನಿಗೆ ಪ್ರಪಂಚ ಜ್ಞಾನ ಕಲಿಸಲಾಗಿದೆಯೆಂದು ಹೇಳಿದರೂ, ಅವಶ್ಯಕವನ್ನನು ಸರಿಸಿ ಕಲಿಸಿದವನು ಗುರುವೇ ಆದರೂ, ಕಲಿತಿರುವ ಮನುಷ್ಯ ಪ್ರತ್ಯಕ್ಷವಾಗಿ ಕಾಣಿಸುತ್ತಿದ್ದರೂ ಕಲಿಸಿದ ಗುರುವು ಮಾತ್ರ ಪ್ರತ್ಯಕ್ಷವಾಗಿ ಅಲ್ಲದೇ ಪರೋಕ್ಷವಾಗಿದ್ದೂ ಹೇಳುತ್ತಿದ್ದಾನೆ. ಪ್ರಪಂಚದಲ್ಲಿ ಯಾವ ಮನುಷ್ಯನಿಗೆ ಎಷ್ಟು ಕರ್ಮವಿದೆಯೋ ಆ ಕರ್ಮವನ್ನನುಸರಿಸಿ ಎಷ್ಟು ತಿಳಿಯಬೇಕೋ ಅಷ್ಟೇ ಜ್ಞಾನವನ್ನು, ಅವನ ಶರೀರದಲ್ಲಿರುವ ಆತ್ಮವೇ ಊಹೆಗಳು ಅಥವಾ ಯೋಚನೆಗಳ ರೂಪದಲ್ಲಿ ಅವನ ಮೆದುಳಿಗೆ ತಿಳಿಸುತ್ತಿದೆ. ಉದಾಹರಣೆಗೆ ರೇಡಿಯೋವನ್ನು ಮಾರ್ಕೋನೀ ಎನ್ನುವ ಇಟಲೀ ದೇಶಸ್ಥನ ಮೆದುಳಿನಲ್ಲಿ ಆತ್ಮ ತಿಳಿಸಿದ ವಿವರವನ್ನು ಊಹೆಯ ರೂಪದಲ್ಲಿ ಬಂದು ರೇಡಿಯೋ ವಿವರ ತಿಳಿದಿದೆ. ಅಲ್ಲಿಯವರೆಗೂ ಯಾವ ಮನುಷ್ಯನಿಗೂ ತಿಳಿಯದ ವಿದ್ಯುತ್ ಅಯಸ್ಕಾಂತ ತರಂಗಗಳಿಂದ ಶಬ್ದ ತರಂಗಗಳನ್ನು ಆಕಾಶದೊಳಕ್ಕೆ

ಪ್ರಸಾರ ಮಾಡಬಹುದೆಂಬ ವಿಷಯ ತಿಳಿದಿದೆ. ಆಗ ಆ ವಿಷಯವನ್ನು ಮೊದಲು ತಿಳಿದುಕೊಂಡು ನಂತರ ಪ್ರಯೋಗದ ಮೂಲಕ ನಿರೂಪಿಸಿಕೊಂಡು ಅದನ್ನು ಸ್ವತಃವಾಗಿ ತಾನೇ ಕಂಡುಕೊಂಡಿದ್ದೇನೆಂದು ಮನುಷ್ಯ ಅಂದುಕೊಳ್ಳುವುದು ನಡೆದಿದೆ. ವಾಸ್ತವಕ್ಕೆ ಅಲ್ಲಿಯವರೆಗು ಪ್ರಪಂಚದಲ್ಲಿ ಯಾರಿಗೂ ತಿಳಿಯದ ವಿಷಯವನ್ನು ಆತ್ಮ ಮಾರ್ಕೋನೀ ಎನ್ನುವ ಜೀವಿಗೆ ತಿಳಿಸಿದರೇ ಆ ಜೀವಿಯು ಆತ್ಮ ತಿಳಿಸಿದೆ ಯೆಂದು, ಆತ್ಮವೇ ತನಗೆ ಈ ವಿಷಯದಲ್ಲಿ ಗುರುವೆಂದು ಅಂದುಕೊಳ್ಳದೇ ತಾನೇ ಸ್ವತಃವಾಗಿ ಆ ವಿಷಯವನ್ನು (ರೇಡಿಯೋವನ್ನು) ಕಂಡುಹಿಡಿದಹಾಗೆ ಪ್ರಕಟಿಸಿಕೊಂಡಿದ್ದಾನೆ. ಅದರಿಂದ ಎಲ್ಲರೂ ರೇಡಿಯೋವೊಂದರ ವಿಷಯವನ್ನು ಮಾರ್ಕೋನಿಯೇ ಹೇಳಿದ್ದಾನೆಂದು ತಿಳಿದುಕೊಂಡರೆ ಹೊರತು ಆತನಲ್ಲಿನ ಆತ್ಮ ಆತನಿಗೆ ಗುರುವಾಗಿ ಬೋಧಿಸಿದೆಯೆಂದು ತಿಳಿದುಕೊಂಡಿಲ್ಲ. ಈ ರೀತಿ ಸೃಷ್ಟಿ ಆದಿಯಿಂದ ಇಲ್ಲಿಯವರೆಗು ಅವಶ್ಯಕವನ್ನನುಸರಿಸಿ ಮನುಷ್ಯನ ಕರ್ಮವನ್ನನುಸರಿಸಿ ಯಾವಾಗ ಏನು ತಿಳಿಸಬೇಕೋ ಆಗ ಅದನ್ನು ಕುರಿತು ಆತ್ಮ ಗುರುವಾಗಿ ಇದ್ದು ತಿಳಿಸುತ್ತಿದೆ.

ಮನುಷ್ಯನ ಶರೀರದಲ್ಲಿನ ಆತ್ಮ ಪ್ರತ್ಯಕ್ಷವಾಗಿ ಅಲ್ಲದೇ ಪರೋಕ್ಷವಾಗಿ ಇಲ್ಲಿಯವರೆಗೂ ಕಂಪ್ಯೂಟರ್‌ಗಳು, ಸೆಲ್‌ಫೋನ್‌ಗಳನ್ನು ತಯಾರಿಸುವ ವಿದ್ಯೆಗಳನ್ನು ಸಹ ಕಲಿಸಿದೆ. ಆದರೂ ಮನುಷ್ಯ ಸೆಲ್‌ಫೋನ್‌ಗಳನ್ನು, ಕಂಪ್ಯೂಟರ್‌ಗಳನ್ನೂ ಕಂಡುಹಿಡಿದಿರುವುದು ನಾನೇ ಎಂದು ಹೇಳುತ್ತಿದ್ದಾನೆ. ವಾಸ್ತವವಾಗಿ ಎಲ್ಲದಕ್ಕೂ ಗುರುವು ಆತ್ಮವೇ ಎಂದು ಎಲ್ಲಿಯೂ ಹೇಳಲಿಲ್ಲ. ತನಗೆ ತಿಳಿಯದ ವಿಷಯವು ಹೇಗೆ ತಿಳಿದಿದೆ? ಎಂದು ಯಾವ ಕಾರಣಕ್ಕೂ ಆಲೋಚಿಸುತ್ತಿಲ್ಲ. ಪ್ರಪಂಚದಲ್ಲಿ ಕಳೆದ 50 ವರ್ಷಗಳಿಂದ ಆತ್ಮ ಅನೇಕವಾದ ಹೊಸ ವಿಷಯಗಳನ್ನು ಕಲಿಸಿದೆ. ಆತ್ಮ ಕಲಿಸಿದ ವಿಷಯಗಳನ್ನು ಮನುಷ್ಯ ಪ್ರತ್ಯಕ್ಷವಾಗಿ ಅನುಭವಿಸಿ ಆನಂದಿಸುತ್ತಿದ್ದಾನೆ. ಶರೀರದಿಂದ ಹೊರಗೆ ನೋಡುವ ಮನುಷ್ಯ ತನ್ನ ಶರೀರದಲ್ಲಿರುವ ಆತ್ಮ ಎನ್ನುವ ಗುರುವನ್ನು ನೋಡಲಾರದಂತಿದ್ದಾನೆ. ಶರೀರದಲ್ಲಿ ಆತ್ಮನಾಗಿದ್ದ ಪರೋಕ್ಷ ಗುರುವು ಮನುಷ್ಯ ಕೇಳದಿದ್ದರೂ ಮನುಷ್ಯನಿಗೆ ಬೇಕಾದ ದೂರಶ್ರವಣವನ್ನು, ದೂರ ದೃಷ್ಟಿಯನ್ನು, ದೂರ ಸಂಭಾಷಣೆಯನ್ನು ಸಹ ಕಲ್ಪಿಸಿದ್ದಾನೆ. ಕೇವಲ 50

ವರ್ಷಗಳಿಂದ ಮಾತ್ರವೇ ಬಳಕೆಗೆ ಬಂದ ಯಂತ್ರ ಸಾಮಾಗ್ರಿ ಸೃಷ್ಟಿ ಆದಿಯಿಂದ ಸಹ ಇಲ್ಲ. ಸೃಷ್ಟಿ ಆದಿಯಿಂದ ತಿಳಿಯದ ಎಷ್ಟೋ ಪ್ರಪಂಚ ವಿದ್ಯೆಗಳು ಈ ಮಧ್ಯ ಕಾಲದಲ್ಲಿ ಆತ್ಮ ಕಲಿಸಿದೆ. ಪ್ರಪಂಚದಲ್ಲಿ ಗಣಿತ, ಖಗೋಳ, ರಸಾಯನ, ಭೌತ ಶಾಸ್ತ್ರಗಳೆಲ್ಲವನ್ನೂ ಆತ್ಮವೇ ಕಲಿಸಿದೆ. ಮನುಷ್ಯನಿಗೆ ಉಪಯೋಗಪಡುವ ಚಿಕ್ಕ ದೊಡ್ಡ ಪರಿಶೋಧನೆಗಳೆಲ್ಲವನ್ನೂ ಆತ್ಮೇ ಹೇಳಿ ಮಾಡಿಸಿದೆ. ಮನುಷ್ಯನಿಗೆ ತಿಳಿಯದ ಎಲ್ಲ ವಿಷಯಗಳನ್ನೂ ಆತ್ಮ ಇಂದಿನವರೆಗೂ ಕಲಿಸಿದೆ. ಭವಿಷ್ಯತ್ತಿನಲ್ಲಿ ಇನ್ನೂ ಎಷ್ಟೋ ಕಲಿಯಬೇಕಾದ ವಿಷಯಗಳನ್ನು ಆತ್ಮವೇ ಕಲಿಸಬೇಕಾಗಿದೆ. ಮನುಷ್ಯನಿಗೆ ಕಾಣಿಸದಂತೆ ಆತ್ಮ ಎಲ್ಲಾ ವಿಷಯಗಳನ್ನು ಹೇಳುತ್ತಿದ್ದರೂ, ಮನುಷ್ಯ ಆತ್ಮವನ್ನು ಗುರುವಾಗಿ ಗುರುತಿಸಲಾರದೆ ತನ್ನನ್ನೇ ಗುರುವಾಗಿ ಹೇಳಿಕೊಳ್ಳುತ್ತಿದ್ದಾನೆ. ಇದೆಲ್ಲವೂ ಪ್ರಪಂಚ ಜ್ಞಾನದ ಕಡೆ ಇರುವ ಜ್ಞಾನವಾದರೇ, ಇನ್ನು ಪರಮಾತ್ಮ ಜ್ಞಾನ ವಿಷಯದಲ್ಲಿ ಹೇಗಿದೆಯೋ ನೋಡೋಣ.

ಪರಮಾತ್ಮ ಜ್ಞಾನ ಪ್ರಪಂಚ ಜ್ಞಾನದ ಹಾಗೆ ಹಂತಹಂತಗಳಾಗಿ ಹೇಳಲ್ಪಡಲಿಲ್ಲ. ಪರಮಾತ್ಮ ಜ್ಞಾನವನ್ನು ಸೃಷ್ಟಿ ಆದಿಯಲ್ಲಿ ಒಂದೇ ಸಲ ಹೇಳಲಾಗಿದೆ. ಆದರೆ ಮೊದಲು ಹೇಳಿದ ದೈವಜ್ಞಾನವನ್ನು ಮನುಷ್ಯರು ಅರ್ಥ ಮಾಡಿಕೊಳ್ಳದೇ ಹೋಗುವುದರಿಂದ ದೇವರು ಪ್ರತ್ಯಕ್ಷ ಗುರುವಾಗಿ ಬಂದು ಪುನಃ ಹೇಳಬೇಕಾಗಿ ಬಂದಿದೆ. ಹೇಳಿದ ಜ್ಞಾನವು ಸ್ವಲ್ಪ ಕಾಲಕ್ಕೆ ಮರೆಯಲ್ಲಿ ಬಿದ್ದು ಹೋಗಿ, ಧರ್ಮಗಳು ತಿಳಿಯದಂತಿರುವಾಗ, ಅಧರ್ಮಗಳು ಹೆಚ್ಚಾದಾಗ ದೇವರು ಮನುಷ್ಯನಂತೆ ಬಂದು, ತನ್ನ ಜ್ಞಾನವನ್ನು ಮನುಷ್ಯರಿಗೆ ಬೋಧಿಸಬೇಕಾಗಿದೆ. ಆದರೇ ಪ್ರತ್ಯಕ್ಷವಾಗಿ ಬೋಧಿಸುವವನು ತನ್ನಹಾಗೆ ಮನುಷ್ಯನಾಗಿರುವುದರಿಂದ, ಬೋಧಿಸುವವನ ಬೋಧನೆಯನ್ನು ನೋಡದೆ ಕೇವಲ ಬೋಧಿಸುವವನನ್ನೇ ನೋಡುತ್ತಿದ್ದಾರೆ. ಆಗ ನನ್ನಂತಹ ಮನುಷ್ಯ ಹೇಳುವ ಜ್ಞಾನ ಸರಿಯಾಗಿರುವುದು ಅಲ್ಲವೆನ್ನುವ ನಿಶ್ಚಯದೊಳಗೆ ಬರುತ್ತಿದ್ದಾರೆ. ಅಷ್ಟೇ ಅಲ್ಲದೇ ಬೋಧಿಸುವವನು ಮನುಷ್ಯನ ರೂಪದಲ್ಲಿರುವ ದೇವರಾದರೂ, ಮನುಷ್ಯನಾಗಿರುವ ಅವನ ಬೋಧನೆಗಳನ್ನು ನೋಡದೇ ಆತನಲ್ಲಿನ ನಿತ್ಯಕೃತ್ಯಗಳನ್ನು ನೋಡುತ್ತಿದ್ದಾರೆ. ಆಗ ಭಾವನೆಯಲ್ಲಿ ಕಡಿಮೆ ಭಾವನೆ ಎದುರಿಗೆ ಬೋಧಿಸುವವನ ಮೇಲೆ ಏರ್ಪಡುವುದರಿಂದ ಆತನ

ಬೋಧೆಗಳನ್ನು ದೊಡ್ಡದಾಗಿ ತಿಳಿಯದೇ, ಆತನನ್ನು ಗುರುವಾಗಿ ಭಾವಿಸದೇ, ಸಾಧಾರಣ ಮನುಷ್ಯನಾಗಿ ನೋಡುವುದು ನಡೆಯುತ್ತಿದೆ. "ಮನುಷ್ಯ ತಾನು ದೇವರೆಂದು ಹೇಳಿಕೊಂಡರೇ ಮನುಷ್ಯರು ನಂಬುತ್ತಿದ್ದಾರೆ." ದೇವರು ಮನುಷ್ಯನಾಗಿ ಬಂದು ಬೋಧಿಸಿದರೇ ಆತನನ್ನು ಮನುಷ್ಯನಾಗಿ ಲೆಕ್ಕಿಸುತ್ತಿದ್ದಾರೆ. ದೇವರು ಮನುಷ್ಯನಾಗಿ ಬರಬಹುದು ಆದರೆ, ಮನುಷ್ಯ ದೇವರು ಆಗಲಾರನೆಂದು ಬಹಳ ಜನರಿಗೆ ತಿಳಿದಿಲ್ಲ. **"ಅಧರ್ಮಗಳನ್ನು ಬೋಧಿಸುವ ಮನುಷ್ಯನನ್ನು ಗುರುವಾಗಿ ನಂಬುತ್ತಿದ್ದಾರೆ ಆದರೆ, ಧರ್ಮಗಳನ್ನು ಬೋಧಿಸುವ ದೇವರನ್ನು ಗುರುವಾಗಿ ಮನುಷ್ಯರು ಗುರುತಿಸುತ್ತಿಲ್ಲ."** ಗತದಲ್ಲಿ ದೇವರು ಮನುಷ್ಯನಾಗಿ ಬಂದು ತನ್ನ ಧರ್ಮಗಳನ್ನು ಬಿಡಿಸಿ ಹೇಳಿದರೂ ಆತನನ್ನು ಮನುಷ್ಯನಿಗಿಂತ ಹೀನವಾಗಿ ನೋಡಿದ್ದಾರೆ. ಆದ್ದರಿಂದ ಪ್ರಪಂಚ ಜ್ಞಾನವನ್ನು ಪರೋಕ್ಷವಾಗಿರುವ ಗುರುವು ಬೋಧಿಸಿದರೂ ಪ್ರಜೆಗಳು ಗುರುತಿಸುವುದಕ್ಕೆ ಅವಕಾಶವಿಲ್ಲ. ಹಾಗೆಯೇ ಪ್ರತ್ಯಕ್ಷವಾಗಿ ಬಂದು ಹೇಳಿದರೂ ಗುರುವು ಯಾರಿಂದಲೂ ಗುರುತಿಸಲ್ಪಡುವುದಿಲ್ಲ. ಆದ್ದರಿಂದ ನಾವು **"ಸತ್ಯಾನ್ವೇಷಿ ಕಥೆ"** ಯಲ್ಲಿ ಯಾರು ಗುರುವು, ಯಾರು ಶಿಷ್ಯನು ಎಂದು ತೀರ್ಮಾನಿಸಿ ಹೇಳಲಿಲ್ಲ. ಮಹರ್ಷಿ, ರಾಜಯೋಗಾನಂದ ಎನ್ನುವ ಎರಡು ಪಾತ್ರಗಳಲ್ಲಿ ಯಾರು ದೊಡ್ಡವ? ಎಂದು ತೀರ್ಮಾನಿಸಿ ಹೇಳದೆ ಬಿಟ್ಟುಹಾಕಿದ್ದೇವೆ. **ಗುರು, ಶಿಷ್ಯರ ವಿಷಯ ಯಾರಿಗೆ ಅವರು ಸ್ವತಃವಾಗಿ ತಿಳಿದುಕೊಳ್ಳುವ ವಿಷಯ. ಒಬ್ಬರು ಹೇಳಿದರೆ ಮಾತ್ರ ನಂಬುವ ವಿಷಯವಲ್ಲ.** ಪ್ರಪಂಚ ವಿಷಯಕ್ಕಾಗಲೀ, ಪರಮಾತ್ಮ ವಿಷಯಕ್ಕಾಗಲೀ ಪ್ರತಿ ವಿಷಯಕ್ಕೂ ಗುರುವು ಇದ್ದಾನೆ. ಆ ಗುರುವು ಬಂದು "ನಾನೇ ನಿಮಗೆ ಗುರುವು" ಎಂದು ಹೇಳಿದರೂ ಮನುಷ್ಯ ಕೇಳುವ ಪರಿಸ್ಥಿತಿಯಲ್ಲಿ ಇಲ್ಲ. ಮನುಷ್ಯ ಮತವನ್ನು ಬಿಟ್ಟು ಪಥವನ್ನು ಆಶ್ರಯಿಸಿದಾಗಲೇ ಗುರುವು ಯಾರೋ ತಿಳಿಯುವುದಕ್ಕೆ ಆಸ್ಕಾರವಿದೆ.

ಇಂತಿ

**ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

****************  ****************

# ಹಿಂದೂ ರಕ್ಷಣಾ! ಹಿಂದೂ ಭಕ್ಷಣಾ!!
# ಭಗವದ್ಗೀತೆಯನ್ನೇ ಓದದವನು ಹಿಂದೂ ರಕ್ಷಕನಾ?
# ಹಿಂದೂ ಧರ್ಮವೇ ತಿಳಿಯದವರು ಹಿಂದೂ ರಕ್ಷಕರಾ?

ಹಿಂದೂಗಳು ಈದಿನ ಕುಲಗಳಾಗಿ ಸೀಳಲ್ಪಟ್ಟು, ಅದರಲ್ಲಿ ಹೆಚ್ಚುಕಡಿಮೆ ಕುಲಗಳಾಗಿ ವರ್ಣಿಸಲ್ಪಟ್ಟಿದ್ದಾರೆನ್ನುವುದು ಎಲ್ಲರಿಗೂ ತಿಳಿದ ಸತ್ಯವೆ. ದೇವರು ಮನುಷ್ಯರೆಲ್ಲರನ್ನು ಸಮಾನವಾಗಿ ಹುಟ್ಟಿಸಿದರೆ ಕೆಲವರು ಮನುಷ್ಯರು ತಮ್ಮ ಸ್ವಾರ್ಥ ಬುದ್ಧಿಯಿಂದ ಹಿಂದೂ (ಇಂದೂ) ಸಮಾಜವನ್ನು ಭಾಗ-ವಿಭಾಗಗಳಾಗಿ ಸೀಳಿಸಿ ಬಲಹೀನಪಡಿಸಿ ಹಿಂದೂ ಸಮಾಜಕ್ಕೆಲ್ಲಾ ತಾವೇ ಹಿರಿಯರೆಂದು, ತಾವು ಹೇಳಿದಂತೆ ಎಲ್ಲರೂ ಕೇಳಿ ಎಲ್ಲಾಕಾರ್ಯಗಳು ಮಾಡಿಕೊಳ್ಳಬೇಕೆಂದು ಪ್ರಚಾರ ಮಾಡಿ ಕೊಂಡಿದ್ದಾರೆ. ಎಷ್ಟೋ ಕುಲಗಳಾಗಿರುವ ಹಿಂದೂ ಸಮಾಜದಲ್ಲಿ ತಮ್ಮ ಕುಲವೇ ಅಗ್ರಕುಲವೆಂದು ಹೇಳಿಕೊಳ್ಳುವುದೆ ಅಲ್ಲದೆ, ಇತರ ಕುಲದವರೆಲ್ಲರಿಗೂ ತಾವೇ ಮಾರ್ಗದರ್ಶಕರೆಂದು, ಗುರುಗಳೆಂದು ಪ್ರಕಟಿಸಿಕೊಂಡಿದ್ದಾರೆ. ಭವಿಷ್ಯತ್ತಿನಲ್ಲಿ ತಮಗೆ ಯಾರು ಅಡ್ಡಬಾರದಂತೆ, ಎಲ್ಲಾ ಕುಲಗಳನ್ನು ಅಂಟಬಾರದ ಕುಲಗಳನ್ನಾಗಿ ಮಾಡಿ, ಹಿಂದೂ ಸಮಾಜಕ್ಕೆ ತೀರದ ಅನ್ಯಾಯ ಮಾಡಿದ್ದಾರೆ. ಅಲ್ಲಿಗೆ ಸುಮ್ಮನಾಗದೆ ಇಂದಿಗೂ ಹಿಂದೂ ಸಮಾಜ ರಕ್ಷಕರಾಗಿ ಹೇಳಿಕೊಳ್ಳುತ್ತಾ, ಹಿಂದೂ ಸಮಾಜವನ್ನು ಸರ್ವನಾಶ ಮಾಡುತ್ತಾ, ಹಿಂದೂ ಸಮಾಜ ಇತರ ಮತಗಳಾಗಿ ಬದಲಾಗಿಹೋಗುವು ದಕ್ಕೆ ಮೊದಲ ಕಾರಕರಾಗುತ್ತಿದ್ದಾರೆ. ಅಂತಹವರು ಹಿಂದೂ ಸಮಾಜಕ್ಕೆ ಜೇಡು ಹುಳಗಳಾಗಿದ್ದರೂ, ಉಳಿದ ಕುಲದವರೆಲ್ಲರೂ ಅವರ ನಿಜ ಸ್ವರೂಪವನ್ನು ತಿಳಿಯದೆ ಅವರು ಹೇಳಿದಹಾಗೇ ಕೇಳುವುದರಿಂದ, ಹಿಂದೂ ಸಮಾಜವನ್ನು ಪೂರ್ತಿಯಾಗಿ ಅಜ್ಞಾನ ದಿಕ್ಕಿನಕಡೆಗೆ, ಅಧರ್ಮ ಮಾರ್ಗದಕಡೆಗೆ ಮರಳಿಸಿ, ಪ್ರಜೆಗಳಿಗೆ ಸ್ವಲ್ಪವೂ ದೈವಜ್ಞಾನವನ್ನು ತಿಳಿಯದಹಾಗೆ ಮಾಡಿ, ತಾವು ಹೇಳುವುದೇ ದೈವಬೋಧನೆ ಎಂದು ನಂಬಿಸಿದ್ದಾರೆ.

ಅಂತಹ ಸ್ಥಿತಿಯಲ್ಲಿ ಈದಿನ ತ್ರೈತ ಸಿದ್ಧಾಂತಕರ್ತರಾಗಿ ಆಚಾರ್ಯ ಪ್ರಬೋಧಾನಂದ ಯೋಗಿಶ್ವರರು ಅಜ್ಞಾನದ ದಿಕ್ಕಿಗೆ ನಿಂತು ಹೋಗಿರುವ ಹಿಂದೂಸಮಾಜವನ್ನು ಸರಿಯಾದ ದಾರಿಯಲ್ಲಿ ಇಡುವುದಕ್ಕೆ, ಭಗವದ್ಗೀತೆಯಲ್ಲಿ

ಪುರುಷೋತ್ತಮಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ ಬೋಧಿಸಲ್ಪಟ್ಟಿರುವ **ಕ್ಷರ, ಅಕ್ಷರ, ಪುರುಷೋತ್ತಮ** ಎನ್ನುವ ಮೂವರ ಪುರುಷರ ವಿಷಯವನ್ನು **"ತ್ರೈತ ಸಿದ್ಧಾಂತ"** ಎನ್ನುವ ಹೆಸರಿನಿಂದ ಪ್ರತಿಪಾದಿಸಿ ದೈವಜ್ಞಾನವನ್ನು ಎಲ್ಲರಿಗೂ ಅರ್ಥವಾಗುವಂತೆ ಗ್ರಂಥರೂಪದಲ್ಲಿ ಬರೆಯುವುದು, ಬೋಧಿಸುವುದು ನಡೆಯುತ್ತಿದೆ. ಅದರಿಂದ ಈದಿನ ಪ್ರಜೆಗಳು ನಿಜವಾದ ಜ್ಞಾನ ತಿಳಿಯುತ್ತಿದೆ ಎಂದು ಸಂತೋಷಪಡುತ್ತಿದ್ದಾರೆ. ಅಗ್ರಕುಲವಾಗಿರುವವರಲ್ಲಿ ಸಹ ಎಷ್ಟೋಜನ ತಮ್ಮ ಅಜ್ಞಾನ ಕತ್ತಲನ್ನು ಬಿಟ್ಟು, ಇಲ್ಲಿಯವರೆಗೂ ತಮಗೆ ತಿಳಿಯದ ಜ್ಞಾನ ಯೋಗೀಶ್ವರರ ಮೂಲಕ ಈಗ ತಿಳಿಯುತ್ತಿದೆಯೆಂದು ಸಂತೋಷಪಟ್ಟು ಶಿಷ್ಯರಾಗಿ ಸೇರಿಹೋಗುತ್ತಿದ್ದಾರೆ. ಆದರೆ ಅಗ್ರಕುಲದಲ್ಲಿ ಕೆಲವರು ಮಾತ್ರ ಯೋಗಿಶ್ವರರು ತಿಳಿಸುವ ಜ್ಞಾನ ವಿಷಯಗಳನ್ನು ನೋಡಿ ಈ ಜ್ಞಾನದಿಂದ ಪ್ರಜೆಗಳು ಜ್ಞಾನದಲ್ಲಿ ಚೈತನ್ಯರಾಗಿ, ಜ್ಞಾನ ತಿಳಿಯದ ತಮ್ಮನ್ನು ಗೌರವಿಸುವುದಿಲ್ಲವೆಂದು ಭಾವಿಸಿ, ಅದರಿಂದ ಸಮಾಜದ ಮೇಲೆ ತಮ್ಮ ಅಧಿಪತ್ಯ ಇಲ್ಲದಂತಾಗುತ್ತದೆಂದು ತಿಳಿದು, ಯೋಗಿಶ್ವರರು ತಿಳಿಸುತ್ತಿರುವ ತ್ರೈತ ಸಿದ್ಧಾಂತವಾಗಲಿ, ತ್ರೈತ ಸಿದ್ಧಾಂತ ಭಗವದ್ಗೀತೆಯಾಗಲಿ ಹಿಂದೂಗಳ ಜ್ಞಾನವೇ ಅಲ್ಲವೆಂದು, ಅದು ಕ್ರೈಸ್ತವ ಮತಕ್ಕೆ ಸಂಬಂಧಿಸಿರುವುದೆಂದು, ಅದನ್ನು ಯಾರೂ ಓದಬಾರದೆಂದು ಪ್ರಚಾರ ಮಾಡಲು ಪ್ರಾರಂಭಿಸಿದ್ದಾರೆ. ಅಷ್ಟೇ ಅಲ್ಲದೆ ತಾವು ಹಿಂದೂಧರ್ಮರಕ್ಷಕರೆಂದು, ಸ್ವಲ್ಪ ರಾಜಕೀಯಬಣ್ಣವನ್ನು ಬಳಿದುಕೊಂಡು, ನಮ್ಮ ಜ್ಞಾನ ಪ್ರಚಾರಕ್ಕೆ ಅಲ್ಲಲ್ಲಿ ಆತಂಕಪಡಿಸುವುದು ನಡೆಯುತ್ತಿದೆ. ತಮ್ಮ ಮಾತು ಕೇಳುವ ಇತರೆ ಕುಲದವರಿಗೂ ಸಹ ಪ್ರಬೋಧಾನಂದಯೋಗಿಶ್ವರರು ಹೇಳುವ ಜ್ಞಾನ ಹಿಂದೂ ಜ್ಞಾನ ಅಲ್ಲ, ಕ್ರೈಸ್ತವರ ಜ್ಞಾನವೆಂದು ಹಿಂದೂಗಳ ಮುಸುಗಿನಲ್ಲಿ ಕ್ರೈಸ್ತವ ಮತ ಪ್ರಚಾರ ಮಾಡುತ್ತಿದ್ದಾರೆಂದು ಹೇಳುವುದಲ್ಲದೆ, ಅಂತಹವರನ್ನು ಪ್ರೇರೆಪಿಸಿ ನಮ್ಮ ಪ್ರಚಾರಕ್ಕೆ ಅಡ್ಡಗಟ್ಟುತ್ತಿದ್ದಾರೆ.

ಯೋಗೀಶ್ವರರು ನೆಲೆಗೊಳಿಸಿದ **"ಹಿಂದೂ (ಇಂದೂ) ಜ್ಞಾನ ವೇದಿಕೆ"** ಇಂತಹ ಸಮಸ್ಯೆಗಳನ್ನು ಸ್ವಲ್ಪಕಾಲದಿಂದ ಸಹನೆಯಿಂದ ನೋಡಲಾಗಿದೆ. ನಮ್ಮಲ್ಲಿ ಸಹನೆ ನಶಿಸಿ, ನಮ್ಮನ್ನು ಅನ್ಯಮತ ಪ್ರಚಾರಕರಾಗಿ ವರ್ಣಿಸಿ ಹೇಳುವ

ಅಗ್ರಕುಲದವರನ್ನು, ಅವರ ಅನುಚರರನ್ನು ನಾವು ಎದುರುತಿರುಗಿ ಪ್ರಶ್ನಿಸುವುದು ನಡೆದಿದೆ. ನಾವು ಪ್ರಶ್ನಿಸಿದ ಒಂದು ಪ್ರಶ್ನೆಗೂ ಸಹ ಅವರು ಸರಿಯಾದ ಸಮಾಧಾನ ಕೊಡಲಿಲ್ಲ. ಆ ಉತ್ತರಗಳು ಹೇಗೆ ಇವೆಯೋ ಓದುಗರಾಗಿ ನೀವು ನೋಡಿರಿ.

**ನಮ್ಮ ಪ್ರಶ್ನೆ :–** ಇಲ್ಲಿಯವರೆಗೂ ಯಾವ ಹಿಂದೂವು ಮಾಡದ ವಿಧದಲ್ಲಿ ಊರೂರು ಸುತ್ತಿ, ಊರಿನಲ್ಲಿ ಮನೆಮನೆ ಅಲೆದು ಹಿಂದೂ ಧರ್ಮಗಳನ್ನು ಪ್ರಚಾರ ಮಾಡುತ್ತಿದ್ದೇವೆ ಅಲ್ಲವೆ! ಅಂತಹ ನಮ್ಮನ್ನು ನೀವು ಅನ್ಯಮತ ಪ್ರಚಾರಕರೆಂದು ಏಕೆ ಹೇಳುತ್ತಿದ್ದೀರಾ?

**ಅವರ ಉತ್ತರ :–** ಹಿಂದೂಮತದಲ್ಲಿ ಎಷ್ಟೋ ಜನ ಸ್ವಾಮೀಜಿಗಳು ಇದ್ದಾರೆ. ಅವರು ಯಾರೂ ಮನೆಮನೆ ತಿರುಗಿ ಪ್ರಚಾರ ಮಾಡಲಿಲ್ಲ. ಹಿಂದೂಗಳು ಹಾಗೆ ಯಾರೂ ಪ್ರಚಾರ ಮಾಡುವುದಿಲ್ಲ. ಕ್ರೈಸ್ತವರಾದರೇ ಬೀದಿ ಬೀದಿ, ಮನೆಮನೆ ತಿರುಗಿ ಪ್ರಚಾರ ಮಾಡುತ್ತಾರೆ. ನೀವು ಹಿಂದೂಗಳ ಮುಸುಗಿನಲ್ಲಿ ಮನೆಮನೆ ತಿರುಗಿ ಕ್ರೈಸ್ತವವನ್ನು ಪ್ರಚಾರ ಮಾಡುತ್ತಿದ್ದೀರ.

**ನಮ್ಮ ಪ್ರಶ್ನೆ :–** ನಾವು ಕ್ರೈಸ್ತವರಾದರೆ ಭಗವದ್ಗೀತೆಯನ್ನು ಏಕೆ ಪ್ರಚಾರ ಮಾಡುತ್ತೇವೆ?

**ಅವರ ಉತ್ತರ :–** ನೀವು ಪ್ರಚಾರ ಮಾಡುವುದು ತ್ರೈತ ಸಿದ್ಧಾಂತ ಭಗವದ್ಗೀತೆ. ಅದು ಕ್ರೈಸ್ತವರದ್ದು. ಬೈಬಲ್‌ಗೇ ನೀವು ಹಾಗೆ ಹೆಸರು ಇಟ್ಟಿದ್ದೀರಾ.

**ನಮ್ಮ ಪ್ರಶ್ನೆ :–** ಕ್ರೈಸ್ತರು ತಮ್ಮನ್ನು ಕ್ರೈಸ್ತವರಾಗಿಯೇ ಹೇಳಿಕೊಳ್ಳುತ್ತಾರೆ. ಹಾಗೆಯೇ ಬೈಬಲನ್ನು ಬೈಬಲಾಗಿಯೇ ಹೇಳಿಕೊಳ್ಳುತ್ತಾರೆ. ಅವರ ಪ್ರಚಾರ ಕ್ರೈಸ್ತವ, ಬೈಬಲ್ ಆದಾಗ ಅದೇ ಹೆಸರಿನ ಮೇಲೆ ಪ್ರಚಾರ ಮಾಡುತ್ತಾರೆ ಹೊರತು ಹಿಂದೂಗಳಾಗಿ ಭಗವದ್ಗೀತೆ ಹೆಸರಿನಿಂದ ಏಕೆ ಪ್ರಚಾರ ಮಾಡುತ್ತಾರೆ? ಇಲ್ಲಿಯವರೆಗೂ ಈ ರೀತಿಯಾಗಿ ಎಲ್ಲಿಯೂ ನಡೆಯಲಿಲ್ಲ. ಯಾವ ಮತದವರು ಆ ಮತದ ಹೆಸರು ಹೇಳಿಕೊಳ್ಳುತ್ತಾರೆ ಹೊರತು ಇತರ ಮತದ ಹೆಸರು ಹೇಳುವುದಿಲ್ಲ. ಅಷ್ಟೇಕೆ ನೀವು ನಮ್ಮ ಭಗವದ್ಗೀತೆಯನ್ನು ತೆರೆದು ನೋಡಿದ್ದೀರಾ? ಅದರಲ್ಲಿ ಭಗವದ್ಗೀತೆ ಶ್ಲೋಕಗಳಿವೆಯಾ? ಬೈಬಲ್ ವಾಕ್ಯಗಳಿವೆಯಾ?

**ಅವರ ಉತ್ತರ :–** ತ್ರೈತ ಸಿದ್ಧಾಂತವೆಂದು ಇದೆ ಅಲ್ಲವೆ! ತ್ರೈತ ಎಂದರೆ ತ್ರಿತ್ವ ಎಂದು ತ್ರಿನಿಟಿ ಎಂದು ನಮಗೆ ಚೆನ್ನಾಗಿ ತಿಳಿದಿದೆ.

**ನಮ್ಮ ಪ್ರಶ್ನೆ :–** ಹಿಂದೂ ಧರ್ಮಗಳಲ್ಲಿ ಅದ್ವೈತ ಸಿದ್ಧಾಂತವನ್ನು ಆದಿಶಂಕರಾ ಚಾರ್ಯರು ಪ್ರತಿಪಾದಿಸಿದ್ದಾನೆ. ವಿಶಿಷ್ಟಾದ್ವೈತವನ್ನು ರಾಮಾನುಚಾರ್ಯರು ಪ್ರತಿಪಾದಿಸಿದ್ದಾನೆ, ದ್ವೈತವನ್ನು ಮಧ್ವಾಚಾರ್ಯರು ಪ್ರಕಟಿಸಿದ್ದಾನೆ. ಈಗ **ಆಚಾರ್ಯ ಪ್ರಬೋಧಾನಂದ ಯೋಗಿಶ್ವರರು ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾರೆ**. ಸಿದ್ಧಾಂತ ಕರ್ತರು, ಸಿದ್ಧಾಂತಗಳು ಬೇರೆಯಾದರೂ ಎಲ್ಲರೂ ಹಿಂದೂಗಳೆಂದು ನೀವು ಏಕೆ ಅಂದುಕೊಳ್ಳಲಿಲ್ಲ?

**ಅವರ ಉತ್ತರ :–** ನಿಮ್ಮ ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿ ಯಜ್ಞಗಳನ್ನು ಮಾಡಬಾರ ದೆಂದು ಬರೆದಿದ್ದೀರಲ್ಲ! ನಿಜವಾಗಲು ಭಗವದ್ಗೀತೆಯಲ್ಲಿ ಹಾಗೆ ಇಲ್ಲ ಅಲ್ಲವೆ!

**ನಮ್ಮ ಪ್ರಶ್ನೆ :–** ನೀವು ಹಿಂದೂಗಳಲ್ಲಿ ಮುಖ್ಯರಾಗಿದ್ದು ಅಷ್ಟು ಮೂರ್ಖವಾಗಿ ಮಾತನಾಡಿದರೆ ಹೇಗೆ? ಪ್ರಪಂಚಕ್ಕೆಲ್ಲಾ ಒಂದೇ ಭಗವದ್ಗೀತೆ ಇರುತ್ತದೆ ಆದರೆ, ನಿಮ್ಮ ಭಗವದ್ಗೀತೆ, ನಮ್ಮ ಭಗವದ್ಗೀತೆ ಎಂದು ಬೇರೆ ಬೇರೆ ಇರುವುದಿಲ್ಲ. ಭಗವದ್ಗೀತೆಗೆ ವಿವರ ಒಬ್ಬೊಬ್ಬರು ಒಂದೊಂದು ವಿಧವಾಗಿ ಅವರಿಗೆ ಅರ್ಥವಾದಂತೆ ಹೇಳಿರಬಹುದು ಆದರೆ, ಎಲ್ಲರಿಗೂ ಭಗವದ್ಗೀತೆ ಮೂಲ ಗ್ರಂಥ ಒಂದೇಯೆಂದು ನೆನಪಿಟ್ಟುಕೊಳ್ಳಿ. ತ್ರೈತ ಸಿದ್ಧಾಂತ ಭಗವದ್ಗೀತೆ ಎಲ್ಲದಕ್ಕಿಂತ ಸರಿಯಾದ ಭಾವನೆಯಿಂದ ಇದೆಯೆಂದು ಓದಿದ ಜ್ಞಾನಿಗಳೆಲ್ಲರೂ ಹೊಗಳುತ್ತಿದ್ದರೆ, ನಿಮ್ಮ ಕುಲದಲ್ಲಿ ಎಷ್ಟೋ ಜನ ಪ್ರಶಂಸಿಸುತ್ತಾ ಇದ್ದರೆ, ನಿಮಗೆ ಕೆಲವರಿಗೆ ಮಾತ್ರ ವಿರುದ್ಧವಾಗಿ ಕಾಣಿಸಿದೆ ಯೆಂದರೆ ಅಸೂಯೆಯಿಂದಲೇ ಎಂದು ನಮಗೆ ಅರ್ಥವಾಗುತ್ತಿದೆ. ಯಜ್ಞಗಳು ಮಾಡಬಾರಂದು ನಾವು ಎಲ್ಲಿಯೂ ಹೇಳಲಿಲ್ಲ. ಯಜ್ಞಗಳಿಂದ ಪುಣ್ಯ ಬರುತ್ತದೆ, ಸ್ವರ್ಗ ಬರುತ್ತದೆ ಎಂದು ಹೇಳಿದ್ದೇವೆ. ಯಜ್ಞಗಳಿಂದ ಮೋಕ್ಷ ಬರುವುದಿಲ್ಲ, ದೇವರು ತಿಳಿಯುವುದಿಲ್ಲವೆಂದು ಹೇಳಿದ್ದೇವೆ. ಅಷ್ಟೇಕೆ ನಾವು ಎಲ್ಲಾ ಕುಲಗಳಿಗಿಂತ ಸ್ವಚ್ಛವಾದ ಹಿಂದೂಗಳೆಂದು ಹೇಳಿಕೊಳ್ಳುತ್ತಿದ್ದೀರಲ್ಲ! ಭಗವದ್ಗೀತೆಯಲ್ಲಿ ಹೇಳಿದ ಒಂದು ಹಿಂದೂ ಧರ್ಮವನ್ನು ಹೇಳಿರಿ.

**ಅವರ ಉತ್ತರ :–** ಅವೆಲ್ಲಾ ಮಾತುಗಳು ಬೇಡ... ನೀವು ಹಿಂದೂಗಳು ಅಲ್ಲ.

**ನಮ್ಮ ಪ್ರಶ್ನೆ :–** ಮೊಂಡರಂತೆ ಮಾತನಾಡಬೇಡಿ ನೀವು ಅಗ್ರಕುಲದವರೆಂದು ಇಷ್ಟಬಂದಂತೆ ಮಾತನಾಡಬೇಡಿ. ನಾವು ಹಿಂದೂಗಳು ಅಲ್ಲವೆನ್ನುವುದಕ್ಕೆ ಆಧಾರ ಏನಾದರೂ ತೋರಿಸುತ್ತೀರಾ? ನಮ್ಮ ಕಥೆ ಪಕ್ಕಕ್ಕಿಟ್ಟು ನೀವು ಸರಿಯಾದ ಹಿಂದೂಗಳೇ ಆದರೆ **ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನಯೋಗವೆಂಬ ಅಧ್ಯಾಯದಲ್ಲಿ 48ನೆ ಶ್ಲೋಕದಲ್ಲಿಯೂ, 53ನೆ ಶ್ಲೋಕದಲ್ಲಿಯೂ ಭಗವಂತನು ಏನು ಹೇಳಿದ್ದಾನೋ ನೀವೇ ಹೇಳಿರಿ.**

**ಅವರ ಉತ್ತರ :–** ನಾವು ಇಲ್ಲಿಯವರೆಗೂ ಭಗವದ್ಗೀತೆ ಓದಲಿಲ್ಲ. ನಿಮಗೆ ಬೇಕಾದರೆ ಸಂಪೂರ್ಣನಂದಸ್ವಾಮಿಯಿಂದ ಹೇಳಿಸುತ್ತೇವೆ.

**ನಮ್ಮ ಪ್ರಶ್ನೆ :–** ಕನಿಷ್ಟ ಭಗವದ್ಗೀತೆಯನ್ನು ಸಹ ಓದದ ನೀವು ಯೋಗಿಶ್ವರರಾದ ಪ್ರಬೋಧಾನಂದಸ್ವಾಮಿಯನ್ನು ದೂಷಿಸುವುದು ಒಳ್ಳೆಯದಾ? ಒಂದು ಹಿಂದೂ ಧರ್ಮವನ್ನು ಸಹ ತಿಳಿಯದ ನೀವು ಹಿಂದೂ ಧರ್ಮ ರಕ್ಷಕರೆಂದು ಹೇಳುವುದು ಒಳ್ಳೆಯದಾ? ಯೋಗಿಶ್ವರರು ಬರೆದ ಒಂದು ಗ್ರಂಥವನ್ನು ಸಹ ಓದದೆ ನಮ್ಮನ್ನು ಹೊರತುಪಡಿಸಿ ಪೂಜ್ಯರಾಗಿ, ಗುರುಗಳಾಗಿ ಯಾರೂ ಇರಬಾರದೆಂಬ ಅಸೂಯೆ ಯಿಂದ ಹೀಗೆ ಮಾತನಾಡಿದರೆ ದೇವರು ಸಹಿಸಿಕೊಳ್ಳುವುದಿಲ್ಲವೆಂದು ಹೇಳುತ್ತಿದ್ದೇವೆ.

**ಅವರ ಉತ್ತರ :–** ಹಿಂದೂ ಮತದಲ್ಲಿ ಎಷ್ಟೋ ಜನ ದೇವರುಗಳಿದ್ದಾರೆ. ಶಿವನು ದೇವರೆ, ಶಿವನ ಮಗ ಗಣಪತಿ ದೇವರೇ, ರಾಮನು ದೇವರೆ, ರಾಮನ ಸೇವಕನು ಆಂಜನೇಯನು ದೇವರೆ. ಅಂತಹ ಹಿಂದೂ ಮತದಲ್ಲಿ ದೇವರು ಒಬ್ಬನೇ ಎಂದು ಹೇಳುವುದು ನಿಮ್ಮದು ತಪ್ಪು ಅಲ್ಲವೆ?

**ನಮ್ಮ ಮಾತು :–** ನಾವು ಮತವನ್ನು ಕುರಿತು ಹೇಳಲಿಲ್ಲ. ಹಿಂದೂ ಮತದಲ್ಲಿ ಎಷ್ಟೋ ಮಂದಿ ದೇವತೆಗಳಿರುವುದು ನಿಜವೆ, ಆದರೆ ಹಿಂದೂ ಜ್ಞಾನದಲ್ಲಿ, ಹಿಂದೂ ಧರ್ಮದ ಪ್ರಕಾರ ವಿಶ್ವಕ್ಕೆಲ್ಲಾ ಒಬ್ಬನೇ ದೇವರೆಂದು ಹೇಳಿದ್ದೇವೆ. ಭಗವದ್ಗೀತೆಯಲ್ಲಿ ದೇವರು ಹೇಳಿರುವುದೇ ಹೇಳಿದ್ದೇವೆ ಹೊರತು ನಾವು

ದೇವತೆಗಳನ್ನು ಕುರಿತು ಇಲ್ಲವೆಂದು ಹೇಳಲಿಲ್ಲ! ದೇವತೆಗಳೆಲ್ಲರಿಗೂ ಅಧಿಪತಿಯಾದ ದೇವರು ಒಬ್ಬನಿದ್ದಾನೆಂದು, ಆತನೇ ದೇವಾದಿದೇವನೆಂದು, ಆತನನ್ನು ಆರಾಧಿಸಿರೆಂದು ಹೇಳಿದ್ದೇವೆ.

**ಅವರ ಉತ್ತರ :–** ನೀವು ರಾಮನ ಹೆಸರು ಹೇಳುವುದಿಲ್ಲ, ಶಿವನ ಹೆಸರು ಹೇಳುವುದಿಲ್ಲ, ವಿನಾಯಕನ ಹೆಸರು ಹೇಳುವುದಿಲ್ಲ. ಯಾರ ಹೆಸರೂ ಹೇಳದಂತೆ ದೇವರು ಎಂದು, ಸೃಷ್ಠಿಕರ್ತ ಎಂದು ಅನೇಕ ಸಲ ಹೇಳುತ್ತಿದ್ದೀರಾ. ದೇವರು ಎಂಬ ಪದವನ್ನಾಗಲಿ, ಸೃಷ್ಠಿಕರ್ತ ಎಂಬ ಪದವನ್ನಾಗಲಿ ಕ್ರೈಸ್ತರೆ ಬಳಸುತ್ತಾರೆ. ಹಿಂದೂಗಳು ಬಳಸುವುದಿಲ್ಲ. ಆದ್ದರಿಂದ ನಿಮ್ಮನ್ನು ಹಿಂದೂಗಳು ಅಲ್ಲ ಕ್ರೈಸ್ತವರು ಎನ್ನುತ್ತಿದ್ದೇವೆ.

**ನಮ್ಮ ಪ್ರಶ್ನೆ :–** ಕ್ರೈಸ್ತ ಮತ ಹುಟ್ಟಿ ಎರಡು ಸಾವಿರ ವರ್ಷಗಳಾಗಿದೆ. ಸೃಷ್ಠಿಹುಟ್ಟಿ ಎಷ್ಟು ಕೋಟಿ ವರ್ಷಗಳಾಗಿದೆಯೋ ಯಾರೂ ಹೇಳಲಾರರು. ಸೃಷ್ಠಿ ಆದಿಯಿಂದ "ಸೃಷ್ಠಿಕರ್ತ" ಎನ್ನುವ ಪದವನ್ನು ದೇವರು ಎನ್ನುವ ಪದವನ್ನು ಹಿಂದೂ ಸಮಾಜ ಬಳಸುತ್ತಲೇ ಇದೆ. ಮೊದಲಿನಿಂದ ಹಿಂದೂಸಮಾಜದಲ್ಲಿ ಇರುವ "ದೇವರು, ಸೃಷ್ಠಿಕರ್ತ" ಎನ್ನುವ ಹೆಸರುಗಳ ಹಿಂದೂಗಳು ಕ್ರೈಸ್ತವರಿಗೇನಾದರೂ ಲೀಜಿಗೆ ಕೊಟ್ಟಿದ್ದಾರಾ? ಅಥವಾ ಪೂರ್ತಿಯಾಗಿ ಅವರಿಗೇ ಮಾರಿದ್ದಾರಾ? ಎಂದು ಕೇಳುತ್ತಿದ್ದೇವೆ. ಸೃಷ್ಠಿಕರ್ತ ಎಂದಾಗಲಿ, ದೇವರು ಎಂದಾಗಲಿ ಹಿಂದೂಗಳಾದವರು ಕರೆಯಬಾರದೆಂದು ಎಲ್ಲಿಯಾದರೂ ಇದೆಯಾ ಎಂದು ಕೇಳುತ್ತಿದ್ದೇವೆ?

**ಅವರ ಉತ್ತರ :–** ನೀವು ಹಿಂದೂಮತವನ್ನು ಅಲ್ಲದೇ ಅನ್ಯಮತವನ್ನು ಬೋಧಿಸುತ್ತಿದ್ದಾರೆನ್ನುವುದಕ್ಕೆ, ನಿಮ್ಮನ್ನು ನೀವು ಹಿಂದೂಗಳಾಗಿ ಹೇಳಿಕೊಳ್ಳಲಿಲ್ಲ. ಹಿಂದೂಗಳಾಗಿ ಅಲ್ಲದೆ ಇಂದೂಗಳಾಗಿ ಹೇಳಿಕೊಳ್ಳುತ್ತಿದ್ದೀರ. ಅಂತಹದರಲ್ಲಿ ನೀವು ಹಿಂದೂಮತವನ್ನು ಸೀಳಿಸಿದಂತೆ ಅಲ್ಲವೆ! ಪ್ರತ್ಯೇಕಿಸಿ ಇಂದೂ ಮತ ಎನ್ನುವುದನ್ನು ಪ್ರಚಾರ ಮಾಡಿದಂತೆ ಅಲ್ಲವೆ! ನೀವು ಹಿಂದೂಗಳೇ ಆದಾಗ ನಿಮ್ಮ ಗ್ರಂಥಗಳಲ್ಲಾಗಲಿ, ನಿಮ್ಮ ಬೋಧನೆಗಳಲ್ಲಾಗಲಿ ಪ್ರತ್ಯೇಕಿಸಿ ಇಂದೂಗಳು ಎಂದು ಏಕೆ ಹೇಳುತ್ತಿದ್ದೀರ?

**ನಮ್ಮ ಮಾತು :–** ನಾವು ನೇರವಾಗಿ ಒಂದು ಪ್ರಶ್ನೆಯನ್ನು ಕೇಳುತ್ತೇವೆ ಉತ್ತರ ಹೇಳಿರಿ. ಹಿಂದೂ, ಇಂದೂ ಎನ್ನುವ ಪದದಲ್ಲಿ ಸ್ವಲ್ಪಮಟ್ಟಿನ ಶಬ್ದ ಹೊರತುಪಡಿಸಿ ಏನು ವ್ಯತ್ಯಾಸ ಇದೆಯೋ ನೀವೆ ಹೇಳಿರಿ. ತೆಲುಗು ಭಾಷೆಯನ್ನು ಬರೆಯುವ ವರೆಲ್ಲರೂ ಹಿರಣ್ಯಕಶ್ಯಪನನ್ನು ಸಾಯಿಸಿರುವುದು ನರಶಿಂಹಸ್ವಾಮಿ ಎಂದು ಹೇಳುತ್ತಿರುತ್ತಾರೆ. ಹಾಗೆಯೇ ಬರೆಯುತ್ತಿರುತ್ತಾರೆ. ಪ್ರಸ್ತುತಕಾಲದಲ್ಲಿ ನರಶಿಂಹ ಎಂದು ಹೆಸರಿರುವವನು ಸಹ ಅವನ ಹೆಸರನ್ನು ನರಶಿಂಹ ಎಂದು ಬರೆಯುವುದು ಎಲ್ಲರಿಗೂ ತಿಳಿದಿದೆ. ಆದರೆ ಆ ಮಾತು ತಪ್ಪು ಹಾಗೆ ಬರೆಯಬಾರದು ಅದನ್ನು **ನರಸಿಂಹ** ಎಂದು ಬರೆಯಬೇಕು ಎಂದು ಹೇಳುತ್ತಿದ್ದೇವೆ. ಕಾಡಿನಲ್ಲಿ ಮೃಗರಾಜನನ್ನು **ಸಿಂಹ** ಎಂದು ಎನ್ನುತ್ತೇವೆ ಹೊರತು **ಶಿಂಹ** ಎಂದು ಕರೆಯುವುದಿಲ್ಲ ಎಂದು ಹೇಳುತ್ತಿದ್ದೇವೆ. 'ಸಿಂಹ" ಎಂದರೆ ಅರ್ಥವಿದೆ ಆದರೆ, 'ಶಿಂಹ' ಎಂದರೆ ಅರ್ಥವಿಲ್ಲ ಎಂದು ಸಹ ಹೇಳಿದ್ದೇವೆ. ಹಾಗೆ ಇರುವುದು ಇದ್ದಂತೆ ಹೇಳಿದರೆ 'ಇಂದೂ' ಎನ್ನುವುದಕ್ಕೆ ಅರ್ಥವಿದೆ ಆದರೆ ಹಿಂದೂ ಎನ್ನುವುದಕ್ಕೆ ಅರ್ಥವಿಲ್ಲವೆಂದು ಹೇಳಿದ್ದೇವೆ. ಸೃಷ್ಠಿ ಆದಿಯಲ್ಲಿ ಹುಟ್ಟಿರುವುದು ಇಂದೂ ಸಮಾಜವೆಂದು, ಅದು ಮಧ್ಯದಲ್ಲಿ ಹೆಸರು ಬದಲಾಗಿ ದೃಷ್ಠಿ ಜಿಷ್ಠಿ ಆದಂತೆ ಇಂದೂ ಎಂಬ ಶಬ್ದ ಹಿಂದೂ ಎಂದು ಹೇಳಲ್ಪಡುತ್ತಿದೆಯೆಂದು ಹೇಳಿದ್ದೇವೆ. ಇಂದೂ ಪದ ಏಕೆ ಬಳಸಬೇಕು ಹಿಂದೂ ಪದವನ್ನು ಏಕೆ ಬಳಸಬಾರದೆಂದು ಸಹ ವಿವರವಾಗಿ ನಮ್ಮ ಗ್ರಂಥಗಳಲ್ಲಿ ಇದೆ. ಇರುವ ಸತ್ಯ ನಿಮಗೆ ತಿಳಿದರೂ ನೀವು ನಮಗಿಂತ ದೊಡ್ಡವರು ಯಾರೂ ಇರಬಾರದೆಂಬ ಅಸೂಯೆಯಿಂದ ಮಾತನಾಡುತ್ತಿದ್ದೀರಾ.

ಅಗ್ರಕುಲದಲ್ಲಿ ಎಷ್ಟೋ ಜನ ಹಿರಿಯರು ನಮ್ಮ ಜ್ಞಾನವನ್ನು ತಿಳಿದು ಸಂತೋಷಿಸುತ್ತಿರುವಾಗ, ಕೆಲವರು ಮಾತ್ರ ಬೀದಿ ರೌಡಿಗಳಂತೆ ಹೊಡೆಯುತ್ತೇವೆ, ಕೊಲ್ಲುತ್ತೇವೆ, ಸುಡುತ್ತೇವೆ ನೀವು ಪ್ರಚಾರ ಮಾಡಬಾರದೆಂದು ಹೇಳುವುದು ಒಳ್ಳೆಯದಲ್ಲ. ನಮ್ಮ ಗ್ರಂಥಗಳನ್ನು ಯಾವುದೂ ಓದದೆ ಮಾತನಾಡುವುದು, ನಾವು ಹೇಳಿದ ಮಾತುಗಳನ್ನು ಕೇಳದಂತೆ ಇವೆಲ್ಲಾ ಡ್ರಾಮಾಗಳು, ನಾಟಕಗಳು ಎನ್ನುವುದು ಒಳ್ಳೆಯದಲ್ಲ. ನೀವು ಯಾರಾದರೂ ನಮ್ಮ ಗ್ರಂಥಗಳಲ್ಲಿ ಇತರೆ ಮತಗಳನ್ನು ಪ್ರಚಾರ ಮಾಡಿದಂತಾಗಲಿ, ಇಂತಹ ಮತದೊಳಗೆ ಸೇರಿರೆಂದು

ಹೇಳಿದಂತಾಗಲಿ ಇದ್ದರೆ ನಿರೂಪಣೆ ಮಾಡಿರಿ, ಹಾಗೆ ನಿರೂಪಿಸಿದವರಿಗೆ ಇಂದೂ ಜ್ಞಾನವೇದಿಕೆ ಕಡೆಯಿಂದ ಹತ್ತು ಲಕ್ಷ ರೂಪಾಯಿಗಳು ಕೊಡುತ್ತೇವೆ. ನಿರೂಪಿಸದೆ ಹೋದರೆ ನೀವು ಲಕ್ಷ ರೂಪಾಯಿಗಳು ಯಾವುದೇ ಊರಿನಲ್ಲಿನ ಕೃಷ್ಣನ ದೇವಸ್ಥಾನಕ್ಕೆ ಕೊಡಬೇಕು. ಈ ಷರತ್ತಿಗೆ ಯಾರಾದರೂ ಮುಂದಕ್ಕೆ ಬರುತ್ತೀರಾ? ಎಂದು ಕೇಳುತ್ತಿದ್ದೇವೆ.

ಇಂತಿ

**ಇಂದೂ ಜ್ಞಾನವೇದಿಕೆ**



## ಚರಿತ್ರೆಯಲ್ಲಿ ನಡೆದ ಅನ್ಯಾಯ

## ಹಿಂದೂಗಳಲ್ಲಿ ನಡೆಯುತ್ತಿರುವ ಯಥಾರ್ಥ

ನಾಲ್ಕುನೂರು ವರ್ಷಗಳ ಕೆಳಗೆ ಆಧ್ಯಾತ್ಮಿಕ ರಂಗದಲ್ಲಿ ಹೊಳೆದ ವಜ್ರ **ವೇಮನಯೋಗಿ**. ಆಧ್ಯಾತ್ಮಿಕವೆನ್ನುವ ಹಾಲನ್ನು ಕಡಿದು ದೈವಜ್ಞಾನ ಎನ್ನುವ ಬೆಣ್ಣೆಯನ್ನು ತೆಗೆದು ಕೊಟ್ಟವನು ವೇಮನ. ವೇಮನ ತನ್ನ ಪದ್ಯಗಳಲ್ಲಿ ಹೇಳಿದ ಒಂದೊಂದು ಜ್ಞಾನವಿಷಯ ವಿವರವಾಗಿ ಬರೆದುಕೊಂಡರೆ ಒಂದೊಂದು ಗ್ರಂಥ ಆಗುತ್ತದೆ. ವೇಮನ ಸ್ವಚ್ಛವಾದ ತೆಲುಗು ಭಾಷೆಯಲ್ಲಿ ಪದ್ಯಗಳನ್ನು ಬರೆದು ಹೇಳಿದ್ದಾನೆ.  ಸಂಸ್ಕೃತದ ಸಹವಾಸಕ್ಕೆ ಹೋಗಲಿಲ್ಲ. ಒಂದು ಕಡೆ ಪದ್ಯಗಳು ಬರೆದು ಕವಿಯಾಗಿ ಕಾಣಿಸಿದರೂ, ಒಂದು ಕಡೆ ಅಂತ್ಯ ತಿಳಿಯದ ಆಧ್ಯಾತ್ಮಿಕತಜ್ಞ ವೇಮನಯೋಗಿ. ಆದರೆ ಆತನು ಹುಟ್ಟಿರುವುದು ರೆಡ್ಡಿ ಕುಲದಲ್ಲಿ. ಚರಿತ್ರೆಯಲ್ಲಿ ನಮಗಿಂತ ಯಾರೂ ದೊಡ್ಡದಾಗಿ ಪ್ರಶಂಸಿಸಲ್ಪಡಬಾರದೆಂದು ಗರ್ವದಲ್ಲಿರುವ ಅಗ್ರಕುಲದಲ್ಲಿನ ಕೆಲವರು ಅದೇ ಕೆಲಸವಾಗಿ ವೇಮನ ಯೋಗಿಯನ್ನು ಹುಚ್ಚನಿಗೆ ಹೋಲಿಸಿ, ಆತನು ಹೇಳಿರುವುದು ಜ್ಞಾನವೇ ಅಲ್ಲವೆಂದು ಪ್ರಜೆಗಳಲ್ಲಿ ಪ್ರಚಾರ

ಮಾಡಿದ್ದಾರೆ. ಹುಚ್ಚನ ಮಾತುಗಳು ಹುಚ್ಚರೆ ಕೇಳುತ್ತಾರೆ ಎಂದು ಅವಹೇಳನವಾಗಿ ಮಾತನಾಡುವುದು ನಡೆದಿದೆ. ಅನೇಕ ಕುಲಗಳಾಗಿರುವ ಹಿಂದೂಗಳಿಗೆ ಜ್ಞಾನ ವಿಷಯದಲ್ಲಿ ಪರಿಚಯ ಇಲ್ಲದಿರುವುದರಿಂದ, ಅಗ್ರಕುಲದವರು ವೇಮನ ಹೇಳಿರುವುದು ಜ್ಞಾನವೇ ಅಲ್ಲವೆನ್ನುವುದರಿಂದ, ವೇಮನ ತನ್ನ ಜ್ಞಾನಕ್ಕೆ ತಕ್ಕಂತೆ ಪ್ರಕಾಶಿಸದೆ ಹೋಗಿದ್ದಾನೆ. ತಾವು ಅಗ್ರಕುಲದವರೆಂದು, ಉಳಿದವರೆಲ್ಲರೂ ಕಡಿಮೆ ಕುಲದವರೆಂದು ವಿಭಜಿಸಿ, ತಾವು ಹೇಳಿದಂತೆ ಕೇಳಬೇಕೆಂದು, ಹಾಗೆ ಕೇಳಿದರೇನೆ ಉಳಿದ ಕುಲದವರೆಲ್ಲರೂ ಸುಖವಾಗಿ ಬದುಕುತ್ತಾರೆಂದು, ಅಗ್ರ ಕುಲದವರು ಪ್ರಚಾರ ಮಾಡಿಕೊಂಡಿದ್ದಾರೆ. ಹಾಗೆ ತಮ್ಮನ್ನು ತಾವು ದೊಡ್ಡದಾಗಿ ಪ್ರಕಟಿಸಿಕೊಳ್ಳುವುದಲ್ಲದೆ ಹಿಂದೂಗಳ ಮನೆಗಳಲ್ಲಿ ನಡೆಯುವ ಪ್ರತಿ ಒಳ್ಳೆಯ ಕೆಲಸಕ್ಕು, ಕೆಟ್ಟ ಕೆಲಸಕ್ಕು, ಸಾವಿಗೂ, ಹುಟ್ಟಿಗೂ, ಮದುವೆಗೂ ಆರತಿಗೂ ಪ್ರತಿ ಕಾರ್ಯಕ್ಕೂ ತಾವು ಹೇಳಿದಂತೆ ಮಾಡಬೇಕೆಂದು, ತಾವು ನಿರ್ಣಯಿಸುವ ಕಾಲದಲ್ಲಿಯೇ ಮಾಡಬೇಕೆಂದು, ಹಾಗೆ ಮಾಡದೆಹೋದರೆ ನಷ್ಟ, ಕಷ್ಟ ಬರುತ್ತದೆಂದು ಭಯ ಪಡಿಸುವುದರಿಂದ, ಭಯದಿಂದ ಜ್ಞಾನ ತಿಳಿಯದ ಉಳಿದ ಕುಲದವರೆಲ್ಲರೂ ಅವರು ಹೇಳಿರುವುದನ್ನು ನಂಬುವುದು ನಡೆದಿದೆ. ಈ ವಿಧವಾಗಿ ಹಿಂದೂಮತದಲ್ಲಿ ಅಗ್ರಕುಲದವರು ಭಯ ಎನ್ನುವ ಬ್ಲಾಕ್‌ಮೇಲ್ ಮಾಡಿ, ಕೆಳ ಕುಲದವರೆಲ್ಲರನ್ನು ತಮ್ಮಮಾತು ಕೇಳುವಂತೆ ಮಾಡಿಕೊಂಡಿದ್ದಾರೆ. ಆ ದಿನದಿಂದ ಹಿಂದೂ ಸಮಾಜವನ್ನು ಮೋಸ ಮಾಡುತ್ತಾ ಯಾರಿಗೂ ಹಿಂದೂ ಜ್ಞಾನವನ್ನು ತಿಳಿಯದಂತೆ ಮಾಡಿ, ತಾವು ಹಿಂದೂ ಸಮಾಜವನ್ನು ಅನೇಕ ಹೆಸರುಗಳಿಂದ ದೋಚಿಕೊಳ್ಳುತ್ತಾ ಬದುಕುವುದೇ ಅಲ್ಲದೆ, ಉಳಿದ ಕುಲಗಳಲ್ಲಿ ಯಾರು ಜ್ಞಾನಿಗಳಾಗಿ ಹುಟ್ಟಿದರೂ, ಅವರನ್ನು ಅವಹೇಳನ ಮಾಡುವುದು, ಅಜ್ಞಾನಿಯಾಗಿ ವರ್ಣಿಸುವುದು ನಡೆದಿದೆ.

ಚರಿತ್ರೆಯಲ್ಲಿ ನಾಲ್ಕುನೂರು ವರ್ಷಗಳ ಕೆಳಗೆ ಬಂದಿರುವ ವೇಮನನ್ನು ಹುಚ್ಚನಾಗಿ ವರ್ಣಿಸಿ, ಶಾಸ್ತ್ರ ತಿಳಿಯದವನೆಂದು ವರ್ಣಿಸಿದ್ದಾರೆ. ನಂತರ ಇಲ್ಲಿಗೆ ಮುನ್ನೂರೈವತ್ತು ವರ್ಷಗಳ ಕೆಳಗೆ ಬಂದಿರುವ ಪೊತುಲೂರಿ ವೀರಬ್ರಹ್ಮಯ್ಯನವರು ದೊಡ್ಡ ಜ್ಞಾನಿಯಾಗಿ ತಯಾರಾಗಿ, ಭವಿಷ್ಯತ್ತ್ ಕಾಲದಲ್ಲಿ ನಡೆಯುವ ಸಂಘಟನೆಗಳನ್ನು ಮೊದಲೇ ತಿಳಿಸಿ ದೊಡ್ಡ ಕಾಲಜ್ಞಾನವನ್ನೇ ಬರೆದಿದ್ದಾನೆ. ಆತನು ಬರೆದ ಭವಿಷ್ಯತ್

ಕಾಲಕ್ರಮವಾಗಿ ಇಂದಿಗೂ ನಡೆಯುತ್ತಲೇ ಇವೆ. ಅಂತಹ ದೊಡ್ಡ ಜ್ಞಾನಿಯಾದ ವೀರಬ್ರಹ್ಮಯ್ಯನವರು ಅಗ್ರಕುಲದವನು ಅಲ್ಲದಿರುವುದರಿಂದ, ವಿಶ್ವಕರ್ಮ (ಆಚಾರಿ) ಕುಲದಲ್ಲಿ ಹುಟ್ಟುವುದರಿಂದ, ಅಗ್ರಕುಲದವರು ಬ್ರಹ್ಮಯ್ಯನವರು ಬದುಕಿರುವ ಕಾಲದಲ್ಲಿಯೇ, ತಮ್ಮ ಊರಿನೊಳಗೆ ಬಾರದಂತೆ, ಆತನ ಜ್ಞಾನವನ್ನು ಪ್ರಚಾರ ಮಾಡದಂತೆ ತಡೆಗಟ್ಟಿದ್ದಾರೆ. ಆ ದಿನ ಇತರರು ಜ್ಞಾನಿಗಳು ಆಗಬಾರದೆಂಬ 'ಅಸೂಯೆ' ಎನ್ನುವ ಗುಣದಿಂದಲೂ, ನಾವೇ ತಿಳಿದವರೆನ್ನುವ ಗರ್ವದಿಂದಲೂ ಆ ಕೆಲಸ ಮಾಡಿದ್ದಾರೆ. ಹಿಂದೂ ಸಮಾಜದಲ್ಲಿ ಇಂತಹವರು ಇರುವುದರಿಂದ ಬೇಸರಗೊಂಡ ಹಿಂದೂಗಳು ಹಿಂದೂ ಮತವನ್ನು ಬಿಟ್ಟು ಇತರೆ ಮತದೊಳಗೆ ಹೋಗುತ್ತಿದ್ದಾರೆ. ಇಂದೂಮತದಲ್ಲಿ ದೇವರಿಗೂ ಗುಡಿಗೂ ಅಂಟಬಾರದವರಾಗಿ ಇರಲಾರದವರೆಲ್ಲರೂ ಕೆಲವರು ಜ್ಞಾನಕ್ಕೋಸ್ಕರ, ಕೆಲವರು ಕುಲವಿಪಕ್ಷ ಇಲ್ಲದ ಸ್ವತಂತ್ರಕ್ಕೋಸ್ಕರ ಮತಾಂತರಿಸಬೇಕೆಂದಿದ್ದಾರೆ. ಈ ವಿಧವಾಗಿ ಹಿಂದೂಮತದಲ್ಲಿನ ವರು ಇತರ ಮತದೊಳಗೆ ಹೋಗುವುದಕ್ಕೆ ಮೊದಲ ಕಾರಕರು ಹಿಂದೂಮತದಲ್ಲಿನ ಅಗ್ರಕುಲದವರೇ ಎಂದು ಅನುಮಾನ ಇಲ್ಲದಂತೆ ಹೇಳಬಹುದು.

ತಮ್ಮಿಂದಲೇ ಹಿಂದೂಗಳು ಇತರ ಮತದೊಳಗೆ ಹೋಗುತ್ತಿದ್ದಾರೆಂದು ಅಗ್ರಕುಲದವರಿಗೆ ಸಹ ತಿಳಿದಿದೆ. ಆದರೆ ತಮ್ಮ ತಪ್ಪನ್ನು ಯಾರೂ ಗುರುತಿಸದಂತೆ ತಾವು ಹಿಂದೂಮತವನ್ನು ಉದ್ಧರಿಸುವವರಂತೆ, ಹಿಂದೂಧರ್ಮ ರಕ್ಷಕರಾಗಿ ವರ್ಣಿಸಿಕೊಂಡು ಹಿಂದೂ ಧರ್ಮ ಭಕ್ಷಕರಾಗಿ ಇಂದಿಗೂ ಸಮಾಜದಲ್ಲಿ ಮುಂದುವರೆಯುತ್ತಿದ್ದಾರೆ. ಅವರನ್ನು ಇಂದೂ ಧರ್ಮ ಭಕ್ಷಕರು, ಹಿಂದೂ ಧರ್ಮ ನಾಶಕರು ಎಂದು ಹೇಳುವುದಕ್ಕೆ ಅನೇಕ ಆಧಾರಗಳು ಇವೆ. ಅಂತಹುಗಳನ್ನು ಪರಿಶೀಲಿಸಿದರೆ, ಹಿಂದೂಗಳಲ್ಲಿನ ಉಳಿದ ಕುಲದವರ ಹತ್ತಿರ ಭಗವದ್ಗೀತೆಯನ್ನು ಬೋಧಿಸುವ ಕೃಷ್ಣನು ಅರ್ಜುನನು ಇರುವ ಫೋಟೋ ಇದ್ದರೆ ಅದನ್ನು ಮನೆಯಲ್ಲಿ ಇಟ್ಟುಕೊಳ್ಳಬಾರದೆಂದು, ಆ ಫೋಟೋ ಮನೆಯಲ್ಲಿದ್ದರೆ ಮನೆಯಲ್ಲಿಯೂ ಸಹ ಯುದ್ಧಗಳು ಬರುತ್ತವೆಂದು, ಅನೇಕ ಕಷ್ಟಗಳು ಬಂದು ಪಾಂಡವರು ಅರಣ್ಯವಾಸ ಹೋದಂತೆ ದುಃಖಪಡಬೇಕಾಗಿ ಬರುತ್ತದೆಂದು ಅಗ್ರ ಕುಲದವರು ಇಂದಿಗೂ ಹೇಳುತ್ತಲೇ ಇದ್ದಾರೆ. ಅಂತಹ ಭಗವದ್ಗೀತೆ ಫೋಟೋಗಳನ್ನು ಗುಡಿಗಳಲ್ಲಿ

ಇಡಬೇಕೆಂದು ಇಲ್ಲದಿದ್ದರೆ ನದಿ ಪ್ರವಾಹದಲ್ಲಿ ಬಿಸಾಡಬೇಕೆಂದು ಹೇಳುವುದು, ಮಾಡಿಸುವುದು ಸಹ ನಡೆದಿದೆ. ಅಷ್ಟೇ ಅಲ್ಲದೆ ಭಗವದ್ಗೀತೆಯನ್ನು ಮನೆಯಲ್ಲಿ ಇಟ್ಟುಕೊಳ್ಳಬಾರದೆಂದು ಭಗವದ್ಗೀತೆಯನ್ನು ಯಾರೂ ಓದಬಾರದೆಂದು, ಓದಿದರೆ ಕಷ್ಟಗಳು ಬರುತ್ತವೆಂದು, ಭಗವದ್ಗೀತೆಯನ್ನು ಯಾರ ಮನೆಯಲ್ಲಿಯೂ ಇಲ್ಲದಹಾಗೆ ಮಾಡುತ್ತಿದ್ದಾರೆ. ಭಗವದ್ಗೀತೆ ಅರ್ಜುನನಿಗೆ ಯುದ್ಧರಂಗದಲ್ಲಿ ಯುದ್ಧ ಮಾಡುವುದಕ್ಕೆ ಹೇಳಿರುವುದು, ಆದ್ದರಿಂದ ಓದಬಾರದು, ಓದಿದರೆ ಓದಿದವರು ಸಹ ಅನೇಕ ತಗಾದೆಗಳಲ್ಲಿಯೂ, ಕೋರ್ಟು ವ್ಯವಹಾರಗಳಲ್ಲಿಯೂ ಸಿಲುಕಿಕೊಳ್ಳಬೇಕಾಗಿ ಬರುತ್ತದೆಂದು ಹೇಳುವುದು ನಡೆಯುತ್ತಿದೆ. ಇನ್ನೂ ಹಿಂದುಗಳಿಗೆ ವೇದಗಳು ಮುಖ್ಯವಾದವೆಂದು ಅವುಗಳನ್ನು ಎಲ್ಲಾ ಕುಲದವರು ಓದಬಾರದೆಂದು, ವೇದಗಳನ್ನು ತಾವೇ ಓದಬೇಕೆಂದು ಹೇಳುವುದು ಸಹ ನಡೆಯುತ್ತಿದೆ. ಈ ವಿಧವಾಗಿ ಭಗವದ್ಗೀತೆಗೆ ವಿರುದ್ಧವಾಗಿ ಮಾತನಾಡುವುದು. ಹಿಂದೂ ಸಮಾಜಕ್ಕೆ ಜೀಡಿಹುಳಗಳಲ್ಲದೆ ಏನಾಗುತ್ತಾರೊ ನೀವೇ ಆಲೋಚಿಸಿರಿ.

ಇದೆಲ್ಲವೂ ಗತಕಾಲದಲ್ಲಿ ನಡೆದ ವಿಷಯಗಳು, ಅವು ಸಾಲದೆ ಪ್ರಸ್ತುತ ಕಾಲದಲ್ಲಿ ಇವರ ಸಹಿಸಲಾರದತನ, ನಾವೇ ದೊಡ್ಡವರು ಎನ್ನುವ ಗರ್ವ ಹೇಗಿದೆಯೋ ನೋಡಿರಿ. ವೇಮನಯೋಗಿಯನ್ನು, ಪೋತುಲೂರಿ ವೀರಬ್ರಹ್ಮಯ್ಯ ರವರನ್ನು ಅಗ್ರ ಕುಲದವರು ಎಷ್ಟು ಅವಹೇಳನೆ ಮಾಡಿದರೂ ವೇಮನ ಯೋಗಿಯನ್ನು ರೆಡ್ಡಿ ಕುಲಸ್ಥರು ವೇಮಾರೆಡ್ಡಿಗಳಂತೆ ಕುದುರೆಗಳನ್ನೇರಿ ಪ್ರಚಾರ ಮಾಡುವುದರಿಂದ, ವೀರಬ್ರಹ್ಮಯ್ಯರವರನ್ನು ವಿಶ್ವಕರ್ಮ (ಆಚಾರಿ) ಕುಲದವರು ಕಾಲಜ್ಞಾನವನ್ನು ಪ್ರಚಾರ ಮಾಡುವುದರಿಂದ, ವೇಮನ ಸಂಘಗಳು, ವಿಶ್ವಕರ್ಮ ಸಂಘಗಳು ತಯಾರಾಗಿ ವೇಮನನ್ನು, ಬ್ರಹ್ಮಯ್ಯನವರನ್ನು ಪ್ರಚಾರ ಮಾಡುವುದರಿಂದ, ಸ್ವಲ್ಪ ಜನ ಪ್ರಜೆಗಳಿಗೆ ವೇಮನಯೋಗಿ ಪದ್ಯಗಳು, ವೀರಬ್ರಹ್ಮಯ್ಯನವರ ಕಾಲಜ್ಞಾನ ಸ್ವಲ್ಪಮಟ್ಟಿಗೆ ತಿಳಿಯುತ್ತದೆ. ವೇಮನಯೋಗಿ ಆ ಕಾಲದಲ್ಲಿಯೇ ತನ್ನ ಪದ್ಯಗಳಲ್ಲಿ, ಅಗ್ರಕುಲದವರು ಮಾಡುವ ತಪ್ಪುಗಳನ್ನು ಬಯಲಿಗೆಳೆದಿದ್ದಾನೆ. ವೀರಬ್ರಹ್ಮಯ್ಯನವರ ಚರಿತ್ರೆಯಲ್ಲಿ ಸಹ ಬ್ರಹ್ಮಯ್ಯನವರಿಗೆ ಅಗ್ರಕುಲದವರು ಮಾಡಿದ ಆತಂಕಗಳನ್ನು ಬರೆಯುವುದು ನಡೆದಿದೆ.

ವೀರಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ **"ಪ್ರಬೊಧಾಶ್ರಮ ಉನ್ನತವಾದ ಜ್ಞಾನ ಇರುವುದು"** ಎಂದು ಮೂನ್ನೂರೈವತ್ತು ವರ್ಷಗಳ ಸಮಯದಲ್ಲಿ ಬರೆದಿಟ್ಟಿದ್ದಾರೆ. ಕಾಲಜ್ಞಾನದಲ್ಲಿ ಪ್ರಬೋಧಾಶ್ರಮ ಒಂದರ ಹೆಸರಿರುವುದು ಇತ್ತೀಚೆಗೆ ಐದು ವರ್ಷಗಳ ಕೆಳಗೆ ನಮಗೆ ತಿಳಿದಿದೆ. ನಂತರ ಬ್ರಹ್ಮಯ್ಯನವರು ಬರೆದ ಕಾಲಜ್ಞಾನದಲ್ಲಿ ಪ್ರಬೋಧಾಶ್ರಮಕ್ಕೆ, ಪ್ರಬೋಧಾನಂದ ಯೋಗೀಶ್ವರರಿಗೆ ಸಂಬಂಧಿಸಿದ ಬಹಳ ವಿಷಯಗಳು ಬರೆದಂತೆ ತಿಳಿದಿದೆ. ಎಷ್ಟೋ ದೊಡ್ಡ ಜ್ಞಾನಿ, ಕಾಲಜ್ಞಾನಿಯಾದ ಪೋತುಲೂರಿ ವೀರಬ್ರಹ್ಮಯ್ಯನವರು ಪ್ರಬೋಧಾಶ್ರಮಾಧಿಪತಿಯಾದ ಪ್ರಬೋಧಾನಂದಯೋಗಿಶ್ವರರನ್ನು ಉನ್ನತವಾಗಿ ಹೇಳುತ್ತಾ **"ಪ್ರಬೋಧಾಶ್ರಮದವರು ಶಯನಾಧಿಪತಿ ಗುಣಗಳು ಹೊಂದಿದ್ದಾರೆ. ಶಯನಾಧಿಪತಿಯೇ ಆನಂದಗುರುವು. ಆನಂದ ಗುರುವೇ ನನಗೂ ಗುರು, ನಿಮಗೂ ಗುರು"** ಎಂದು ಬರೆಯಲಾಗಿದೆ. ಪ್ರಬೋಧಾನಂದಯೋಗೀಶ್ವರರ ಜ್ಞಾನವೇನೊ ಎಷ್ಟು ಶಕ್ತಿವಂತವಾದುದೋ ಜ್ಞಾನ ಜಿಜ್ಞಾಸಿಗಳಿಗೂ ಸಹ ತಿಳಿಯುತ್ತಿದೆ. ಎಷ್ಟೋ ಮಂದಿ ಜ್ಞಾನಿಗಳಾದವರು ಯೋಗೀಶ್ವರರು ಹೇಳುತ್ತಿರುವ ಜ್ಞಾನ ಎಷ್ಟೋ ದೊಡ್ಡದೆಂದು ಪ್ರಶಂಸಿಸುತ್ತಿದ್ದಾರೆ. ಬ್ರಹ್ಮಯ್ಯನವರೆ ಸ್ವತಃ ತನ್ನ ಗುರುವಾಗಿ ಹೇಳಿಕೊಂಡ ವ್ಯಕ್ತಿ ಎಂತಹವನಾಗಿರುತ್ತಾನೋ ನಾವು ಸಹ ಆಲೋಚಿಸಬೇಕಾಗಿರುತ್ತದೆ. ಆದರೂ ಪ್ರಬೋಧಾನಂದಯೋಗೀಶ್ವರರು ಒಂದು ದೈವಜ್ಞಾನದಲ್ಲಿ ಹೊರತು ಉಳಿದೆಲ್ಲವುಗಳಲ್ಲಿ ಸಾಧಾರಣ ವ್ಯಕ್ತಿಯಾಗಿಯೇ ಕಾಣಿಸುತ್ತಾನೆ. ಎದುರುಗಡೆ ನೋಡಿದರೆ ಇತನಿಗೆ ಜ್ಞಾನ ತಿಳಿದಿದೆಯಾ! ಎನ್ನುವಂತೆ ಕಾಣಿಸಿದರೂ, ಹೌದು ಆತನು ಯಾರಿಗೂ ತಿಳಿಯದ ದೊಡ್ಡವನೆನ್ನುವಂತೆ ಆತನು ಬರೆದ ಗ್ರಂಥಗಳೇ ದೊಡ್ಡ ಶಕ್ತಿಗಳಾಗಿ ನಿರೂಪಿಸಿಕೊಂಡಿವೆ. ಒಂದು ಗ್ರಂಥದ ಹತ್ತಿರಕ್ಕೆ ಬರುತ್ತಲೆ ಕೆಲವರಲ್ಲಿ ಬದಲಾವಣೆ ಕಾಣಿಸುವುದು, ಕೆಲವರು ಗ್ರಂಥವನ್ನು ಓದಿದ ತಕ್ಷಣ ಅಲ್ಲಿಯವರೆಗೂ ಗುಣವಾಗದ ರೋಗಗಳು ಸಹ ಹೋಗುವುದು ನಡೆಯುತ್ತಿದೆ.

ಮೇಲ್ನೋಟಕ್ಕೆ ಕಾಣಿಸದ ಶಕ್ತಿ ಯೋಗೀಶ್ವರರಲ್ಲಿ ನಿಕ್ಷಿಪ್ತವಾಗಿರುವುದು ಹೊರಗೆ ಕಾಣಿಸದೆ ಹೋದರೂ ಆತನ ಹತ್ತಿರಕ್ಕೆ ಹೋದವರಿಗೆ ದೇಹದಲ್ಲಿ ಗುಣವಾಗದ, ಔಷಧಿಗಳಿಲ್ಲದ ಏಡ್ಸ್, ಕ್ಯಾನ್ಸರ್, ಡೆಂಗೀ ಜ್ವರಗಳು ಸಹಿತವು

ಶಾಂತಿಸಿ ಹೋಗುವುದು ನಡೆಯುತ್ತಿರುವುದರಿಂದ ಯೋಗೀಶ್ವರರು ಎಂತಹವರೊ ಯಾರಿಗಾದರೂ ಸುಲಭವಾಗಿ ಅರ್ಥವಾಗುತ್ತದೆ.

ವೀರಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ಆನಂದ ಯೋಗಿಯನ್ನು ದೂಷಿಸಿದವರು ಬಹಳ ತೊಂದರೆ ಪಾಲಾಗುತ್ತಾರೆಂದು ಬರೆಯುವುದು ನಡೆದಿದೆ. ಹಾಗೆಯೇ ಆತನನ್ನಾಗಲಿ, ಆತನ ಗ್ರಂಥಗಳನ್ನಾಗಲಿ ದೂಷಿಸಿದವರು ಇಲ್ಲಿಯವರೆಗು ಯಾರೂ ಸುರಕ್ಷಿತವಾಗಿ ಇಲ್ಲ. ತಿಳಿಯದ ರೋಗಗಳಿಂದ, ಅರ್ಥವಾಗದ ಬಾಧೆಗಳಿಂದ ಕೆಲವರಿರುವಾಗ, ಕೆಲವರು ಚಿತ್ರಹಿಂಸೆಗಳ ಪಾಲಾಗಿ ಮರಣಿಸುವುದು ನಡೆದಿದೆ. ಹಾಗೆ ಏಕೆ ನಡೆಯುತ್ತಿದೆಯೊ ತಿಳಿಯದವರು, ಪಾಪವನ್ನು ಮೂಟೆಕಟ್ಟಿಕೊಳ್ಳುವುದಕ್ಕೆ ಯೋಗೀಶ್ವರರ ಜ್ಞಾನಕ್ಕೆ ಅಲ್ಲಲ್ಲಿ ಆತಂಕಗಳನ್ನು ಉಂಟುಮಾಡುತ್ತಿದ್ದಾರೆ. ಹಿಂದೂಮತದಲ್ಲಿ ಆದಿಶಂಕರಾಚಾರ್ಯರು ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾನೆ. ನಂತರ ಸ್ವಲ್ಪಕಾಲಕ್ಕೆ ವಿಶಿಷ್ಟಾದ್ವೈತ ಸಿದ್ಧಾಂತವನ್ನು ರಾಮಾನುಜಾಚಾರ್ಯರು ಪ್ರತಿಪಾದಿಸಿದ್ದಾನೆ. ಮತ್ತೆ ಸ್ವಲ್ಪ ಕಾಲಕ್ಕೆ ದ್ವೈತ ಸಿದ್ಧಾಂತವನ್ನು ಮಧ್ವಾಚಾರ್ಯರು ಪ್ರಕಟಿಸಿದ್ದಾನೆ. ಇವರು ಮೂವರು ಅಗ್ರಕುಲದವರಾಗಿರುವುದು ವಿಶೇಷ. ಕಳೆದ ಮೂವತ್ತೆಂಟು ವರ್ಷಗಳಿಂದ ತ್ರೈತ ಸಿದ್ಧಾಂತವನ್ನು ಆಚಾರ್ಯ ಪ್ರಬೋಧಾನಂದ ಯೋಗಿಶ್ವರರು, ಪ್ರಕಟಿಸಿ ಆ ಸಿದ್ಧಾಂತವನ್ನೇ ಪ್ರಚಾರ ಮಾಡುತ್ತಾ, ತ್ರೈತ ಸಿದ್ಧಾಂತದ ಪ್ರಕಾರ ಭಗವದ್ಗೀತೆಯನ್ನು ವಿವರಿಸಿ ಬರೆದಿರುವುದು ನಡೆದಿದೆ. ಹಿಂದೂಮತದಲ್ಲಿನ ಸಿದ್ಧಾಂತಗಳ ವಿವರ ತಿಳಿಯದ ಪ್ರಜೆಗಳಿಗೆ, ಅಗ್ರಕುಲದವರು **"ತ್ರೈತ ಎಂದರೆ ಕ್ರೈಸ್ತರಿಗೆ ಸಂಬಂಧಿಸಿರುವುದೆಂದು, ತ್ರೈತ ಸಿದ್ಧಾಂತ ಭಗವದ್ಗೀತೆಯೆಂದು ಮೇಲ್ನೋಟಕ್ಕೆ ಹೇಳುತ್ತಾ ಒಳೊಳಗೆ ಕ್ರೈಸ್ತ ಮತವನ್ನು ಬೋಧಿಸುತ್ತಿದ್ದಾರೆಂದು"** ಯೋಗೀಶ್ವರರಿಗೆ, ಯೋಗೀಶ್ವರರ ಜ್ಞಾನಕ್ಕೆ ವಿರುದ್ಧವಾಗಿ ಹೇಳುವುದು ನಡೆದಿದೆ. ಹಿಂದೂತ್ವವನ್ನು ಒಂದು ಕಡೆ ಸರ್ವನಾಶ ಮಾಡುತ್ತಿರುವ ಅಗ್ರಕುಲದವರು ಹಿಂದೂಮತವನ್ನು ಕಾಪಾಡುವವರಂತೆ ನಟಿಸುತ್ತಾ ಯೋಗೀಶ್ವರರ ಜ್ಞಾನಕ್ಕೆ ಕೆಲವು ಕಡೆ ಆತಂಕವನ್ನುಂಟುಮಾಡುವುದು ನಡೆದಿದೆ. ಮೂರುಕಡೆ ಅನ್ಯಮತಪ್ರಚಾರವೆಂದು ಭಗವದ್ಗೀತೆಯನ್ನು ಪ್ರಚಾರ ಮಾಡುವ ಯೋಗೀಶ್ವರರ ಶಿಷ್ಯರ ಮೇಲೆ ಕೇಸುಗಳು ಇಡುವುದು ಸಹ ನಡೆದಿದೆ. ಕೆಲವು

ಕಡೆ ಪ್ರತ್ಯಕ್ಷ ದಾಳಿಗಳು ಮಾಡುವುದು ನಡೆದಿದೆ. ಆದರೂ ಪ್ರಬೋಧಾನಂದ ಶಿಷ್ಯರು ಎಲ್ಲದಕ್ಕೂ ಸಹನೆ ವಹಿಸಿ ಜ್ಞಾನಪ್ರಚಾರ ಮಾಡುತ್ತಿದ್ದಾರೆ. ಈ ಮಧ್ಯಕಾಲದಲ್ಲಿ ನಲ್ಗೊಂಡ ಜಿಲ್ಲೆ ಭುವನಗಿರಿಯಲ್ಲಿ ದೇವೇಂದ್ರ ಎನ್ನುವ ನಮ್ಮ ಸಂಘ ಸದಸ್ಯನ ಮೇಲೆ ಅನ್ಯಮತ ಪ್ರಚಾರ ಮಾಡುತ್ತಿದ್ದಾನೆಂದು ಆರೋಪಿಸಿ ಕೇಸು ಇಟ್ಟಿರುವುದು ನಡೆದಿದೆ. ಅಷ್ಟೇ ಅಲ್ಲದೆ ನಮ್ಮ ಪ್ರಚಾರ ವಾಹನ ಭುವನಗಿರಿಗೆ ಹೋದಾಗ ನಮ್ಮ ಊರಿನಲ್ಲಿ ಪ್ರಚಾರ ಮಾಡಬೇಡವೆಂದು ತಡೆಗಟ್ಟಿ ಹಿಂದಕ್ಕೆ ಕಳುಹಿಸಿರುವುದು ನಡೆದಿದೆ. ಕರಿಂನಗರದಲ್ಲಿ ಗೋಡೆಮೇಲೆ ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಓದಿರೆಂದು ಬರೆದರೆ, ಅಗ್ರಕುಲದವರು ಬಂದು ಇದು ಕ್ರೈಸ್ತ ಮತಪ್ರಚಾರ ಅದನ್ನು ಅಳಿಸಿಹಾಕಿರೆಂದು ಹೇಳುವುದು ನಡೆದಿದೆ. ಎರಡು ದಿನಗಳ ಕೆಳಗೆ ಆರ್ಲಗಡ್ಡ ಎನ್ನುವ ಊರಲ್ಲಿ ಪ್ರಚಾರ ವಾಹನ ಇರುವಾಗ ಅಲ್ಲಿಗೆ ಒಬ್ಬ ಅಗ್ರಕುಲಸ್ಥನು ಬಂದು ಇದು ಕ್ರೈಸ್ತವ ಪ್ರಚಾರ, ಈ ಪ್ರಚಾರವನ್ನು ನಿಲ್ಲಿಸಿಹಾಕಿರೆಂದು ಘರ್ಷಣೆಗೆ ಬಂದಾಗ ಆ ಸಮಯಕ್ಕೆ ನಮ್ಮ ಗ್ರಂಥಗಳನ್ನು ಓದಿದವರು ಅಲ್ಲಿರುವುದರಿಂದ ಅವರೇ ಅಗ್ರಕುಲದವರಿಗೆ ಬುದ್ಧಿಹೇಳಿ ಕಳಿಸುವುದು ನಡೆದಿದೆ. ಅಲ್ಲಿರುವ ಪ್ರಜೆಗಳು ಹೇಳಿರುವ ಮಾತುಗಳು "ಇದು ಎಷ್ಟೋ ಶ್ರೇಷ್ಟವಾದ ಜ್ಞಾನ ಇಷ್ಟು ಕಾಲಕ್ಕೆ ಶ್ರೇಷ್ಟವಾದ ಜ್ಞಾನ ದೊರೆತಿದೆಯೆಂದು ನಾವು ಸಂತೋಷಪಡುತ್ತಿದ್ದರೆ, ಸಮಾಜವನ್ನು ಸರ್ವನಾಶ ಮಾಡಿದ ನೀವು ಇದನ್ನು ಜ್ಞಾನ ಅಲ್ಲವೆನ್ನುತ್ತೀರಾ? ಹೀಗೆ ಮಾತನಾಡಿದರೆ ಊರಿನಲ್ಲಿ ಇಲ್ಲದಹಾಗೆ ನಿಮ್ಮನ್ನು ನಾವೇ ಕಳಿಸುತ್ತೇವೆ" ಎಂದು ಹೇಳುವುದು ನಡೆದಿದೆ. ಈ ವಿಧವಾಗಿ ಪ್ರಜೆಗಳೆ ತಿರುಗಿಬಿದ್ದು ಬುದ್ಧಿಹೇಳುವ ಸಮಯ ಎಲ್ಲಾಕಡೆ ಬರುತ್ತದೆ.

ಗೌತಮಬುದ್ಧನು ಜ್ಞಾನ ಹೇಳಿದರೆ ಆತನು ಅಗ್ರಕುಲದವನು ಅಲ್ಲವೆಂದು ಆತನದ್ದು ಬೇರೆ ಮತವೆಂದು ಪ್ರಚಾರ ಮಾಡಿದ್ದಾರೆ. ಆ ದಿನ ಗೌತಮನು ಹಿಂದೂವೆ ಅಲ್ಲವೆ! ತಮ್ಮ ಅಧಿಕಾರಕ್ಕೋಸ್ಕರ ಹಿಂದೂಮತದಿಂದ ಬುದ್ಧನನ್ನು ಸೀಳಿಸಿ (ಬೇರೆಮಾಡಿ) ಆತನದ್ದು ಭೌದ್ದಮತವೆಂದು ಹೇಳಿ ಹಿಂದೂಮತದಿಂದ ಹೊರಹಾಕಿದ್ದಾರೆ. ಈ ದಿನ ಬೌದ್ಧಮತ ವಿದೇಶಗಳಲ್ಲಿ ವ್ಯಾಪಿಸಿದ್ದರೂ ಸ್ವದೇಶದಲ್ಲಿ ಇಲ್ಲದ ಹಾಗೆ ಮಾಡಿರುವುದು ಅಗ್ರಕುಲದವರು ಅಲ್ಲವೆ! ಈ ದಿನ ಬುದ್ಧನು

ನಮ್ಮವನೆ ಬೌದ್ಧವು ಹಿಂದೂಮತವೇ ಎಂದು ಹೇಳಿಕೊಳ್ಳಲಾರದ ಪರಿಸ್ಥಿತಿ ನಮಗೆ ಏರ್ಪಟ್ಟಿದೆ. ಹಾಗೆಯೇ ಪ್ರಬೋಧಾನಂದ ಯೋಗೀಶ್ವರರು ಹೇಳುವ ತ್ರೈತ ಸಿದ್ಧಾಂತವನ್ನು ಹಿಂದೂ ಮತದಲ್ಲಿನ ಭಾಗ ಅಲ್ಲವೆನ್ನುವುದು, ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಭಗವದ್ಗೀತೆಯೇ ಅಲ್ಲವೆನ್ನುವುದು ಒಂದುಕಡೆ ಪ್ರಜೆಗಳು ಗಮನಿಸುತ್ತಿದ್ದಾರೆ. ಪ್ರಬೋಧಾನಂದ ಯೋಗೀಶ್ವರರು ಕಳೆದ ಸುಮಾರು 38 ವರ್ಷಗಳಿಂದ ಬೋಧಿಸುತ್ತಿರುವ ಬೋಧನೆ ಹಿಂದೂತ್ವದಲ್ಲಿಯೇ ಎಷ್ಟೋ ದೊಡ್ಡದೆಂದು ಎಲ್ಲಾ ಮತದವರು ಒಪ್ಪಿಕೊಳ್ಳುತ್ತಿರುವಾಗ, ಕಡಿಮೆಕುಲದವರೆಂದು ಅಗ್ರಕುಲದಿಂದ ಹೇಳಲ್ಪಡುವವರೆಲ್ಲರೂ ಹಿಂದೂ (ಇಂದೂ) ಜ್ಞಾನವನ್ನು ತಿಳಿದುಕೊಂಡು ಚೈತನ್ಯವಂತರಾಗಿ ಅಗ್ರಕುಲದವರಿಗೆ ತಿರುಗಿಬಿದ್ದು ಜ್ಞಾನ ಹೇಳುವ ಸ್ಥಿತಿಗೆ ಬೆಳೆದಿದ್ದಾರೆ. ಕಡಿಮೆ ಕುಲದವರಮೇಲೆ ಆಧಾರಪಟ್ಟು ಬದುಕುತ್ತಿರುವ ಅಗ್ರಕುಲದವರನ್ನು ಕಡಿಮೆ ಕುಲದವರೆಲ್ಲರೂ ಒಂದು ಸಲ ಹೊರಹಾಕಿದರೆ, ನಿಮ್ಮೊಂದಿಗೆ ನಮಗೆ ಸಂಬಂಧ ಬೇಡ ಎಂದರೆ ಏನಾಗುತ್ತದೋ ಹೇಳಬೇಕಾದ ಅವಶ್ಯಕತೆ ಇಲ್ಲ. ಅಂತಹ ಸ್ಥಿತಿ ಬಾರದಂತಿರುವುದಕ್ಕೆ ನಮ್ಮ ಜ್ಞಾನಕ್ಕೆ ಅಡ್ಡಬರಬೇಡವೆಂದು ಅಗ್ರಕುಲದವರಿಗೆ ಪದೇಪದೇ ಹೇಳುತ್ತಿದ್ದೇವೆ.

ಇಂತಿ

# ಪ್ರಬೋಧ ಸೇವಾಸಮಿತಿ



**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ.**
**ಸತ್ಯವನ್ನು ಸಾವಿರ ಜನ ಅಲ್ಲಗಳೆದರೂ ಅದು ಅಸತ್ಯವಲ್ಲ.**



# ಸತ್ಯಾನ್ವೇಷಿ ಕಥೆ

ಈ ಗ್ರಂಥದಲ್ಲಿ ನಾವು ಬರೆದ ಸಮಾಚಾರ ಪೂರ್ತಿ ಸತ್ಯವಾದದ್ದು. ನಿಜ ನಿಷ್ಠೂರವೆನ್ನುವಂತೆ ನಾವು ಹೇಳಿದ ವಿಷಯಗಳು ಕೆಲವರಿಗೆ ನುಂಗಲು ಆಗದೇ ಇರಬಹುದು. ಅಂತಹವರು ಧರ್ಮಗಳಿಗೆ ದೂರ ವಾಗಿ ಹೋಗುವ ಅವಕಾಶವಿದೆ. ಹೇಳುವವನು ದೊಡ್ಡವನೆಂದು ತಿಳಿದಾಗ ಆತನು ಹೇಳಿದ ವಿಷಯ ಗಳಿಗೂ ಸಹ ಬೆಲೆ ಇರುತ್ತದೆ. ನನ್ನನ್ನು ಕುರಿತು ದೊಡ್ಡದಾಗಿ ಹೇಳಿಕೊಳ್ಳುವುದು ನನಗೆ ಇಷ್ಟವಿಲ್ಲ ದಿದ್ದರೂ, ಜ್ಞಾನ ವಿಷಯಗಳ ಹತ್ತಿರ ಮಾತ್ರ ಧರ್ಮಗಳಿಗೆ ಬೆಲೆಯನ್ನು ಉಂಟುಮಾಡುವುದಕ್ಕೆ ನನ್ನನ್ನು ಕುರಿತು ಹೇಳಬೇಕಾಯಿತು. ನನ್ನ ಬೆಲೆ ದೊಡ್ಡದೆಂದು ತಿಳಿದಾಗ, ನಾನು ಹೇಳಿದ ಜ್ಞಾನವೂ ಸಹ ದೊಡ್ಡದೆಂದು ತಿಳಿಯಬಲ್ಲದು. "ಶ್ರೀ ಪೋತುಲೂರಿ ವೀರ ಬ್ರಹ್ಮಯ್ಯರವರು" ತನ್ನ ಕಾಲಜ್ಞಾನದಲ್ಲಿ ಪ್ರಬೋಧಾನಂದ ಯೋಗೀಶ್ವರರನ್ನು ಕುರಿತು ಬರೆದ ವಾಕ್ಯಗಳನ್ನು ನೋಡಿರಿ.



1) ಪ್ರಬೋಧಾಶ್ರಮವು ಉನ್ನತವಾದ ಜ್ಞಾನ ಇರುವಂಥದ್ದು.
2) ಪ್ರಬೋಧಾಶ್ರಮದವರ ಆದಿ ಗುಣವೆಲ್ಲ ಶಯನಾಧಿಪತಿಗೆ ಇರುವುದು.
3) ಕಲಿಯುಗವು 5110 ವರ್ಷಗಳಿಗೆ (ಕ್ರಿ.ಶ॥2010) ಆಧ್ಯಾತ್ಮಿಕ ಪುರುಷನು ಪ್ರಕಾಶವಾಗುತ್ತಾನೆ.
4) ಮಹಾ ದೇವತೆಗಳೆಲ್ಲರೂ ಆನಂದಾಶ್ರಮದ ಹತ್ತಿರವೇ ಇದ್ದಾರೆ.
5) ಶಯನಾಧಿಪತಿಗೆ ಸರ್ವದಾ ಆನಂದ, ಬ್ರಹ್ಮಾದಿ ದೇವತೆಗಳೆಲ್ಲ ಆಶೀರ್ವದಿಸುವರು. ಜಾರು ವಾಕ್ಯಗಳನ್ನು ನುಡಿದವರೆಲ್ಲ ನಾಶವಾಗಿ ಹೋಗುವರು. ಕಿಚ್ಚೆಣಿಸುವವರೆಲ್ಲ ಧೂಳಿಯಾಗಿ ಹೋಗುವರು.
6) ಶಯನಾಧಿಪತಿಯೇ ಆನಂದ ಗುರುವು. ಆನಂದ ಗುರುವು ನಿಮಗೂ ಗುರುವೇ. ನನಗೂ ಗುರುವೇ.
7) ಸಿದ್ಧಾಂತ ಶಿರೋಮಣಿ ಗುರುಸ್ವಾಮಿ, ಗುರುಸ್ವಾಮಿ ಸಿದ್ಧಾಂತವು ನಿತ್ಯವೂ ಸತ್ಯವಾಗುವುದಯ್ಯಾ.
8) ಸೋಮ ಸಿದ್ಧಾಂತವು ಸೊಂಪಾಗಿ ನಡೆಯುವುದು, ಶುಭಶುಭಗಳು ಆಗುವುದಯ್ಯಾ.
9) ಸಾಂದ್ರ ಸಿಂಧು ವೇದಕ್ಕೆ ಆನಂದಾಶ್ರಮದ ಕರ್ತ ಬರಬೇಕು.
10) ಮಧ್ಯಾತ್ಮ ಯೋಗ ಪುರುಷನ ಮಹತ್ತು ಮಹಾ ಪ್ರಕಾಶವಾಗುವುದು.
11) ಆನಂದಾಶ್ರಮದವರ ವಾಕ್ಯವು ಸಪ್ತಮಿ ನಿಶ್ಚಯವು, ಸರ್ವದಾ ಸಪ್ತಮಿಯಾಗುತ್ತದೆ.

--- ಶ್ರೀ ಪೋತುಲೂರಿ ವೀರಬ್ರಹ್ಮಯ್ಯನವರು